# ವೈ ಕೆ ರಾಮಯ್ಯ

ಕರ್ನಾಟಕದ ರಾಜಕಾರಣದಲ್ಲಿ ವೈ ಕೆ ರಾಮಯ್ಯ (1939) ಒಂದು ಅಪರೂಪದ ಹೆಸರು. ಜನಸಮುದಾಯದ ಏಳ್ಗೆಗಾಗಿ ನಿರಂತರವಾಗಿ ಮುನ್ನುಗ್ಗಿ ದುಡಿಯುವ ಅತ್ಯಂತ ವಿಶಿಷ್ಟ ಕಾಳಜಿಗಳುಳ್ಳ ಇವರು ಕ್ರಿಯಾಶೀಲ ವ್ಯಕ್ತಿಯಾಗಿದ್ದಾರೆ. ಹಳ್ಳಿಗಾಡಿನ ಬದುಕು ಸಂಪೂರ್ಣವಾಗಿ ಹಸನಾಗಬೇಕೆಂಬ ನಿರಂತರ ಆಶಯವನ್ನು ಇಟ್ಟುಕೊಂಡು ಅಂತರಂಗ ಶುದ್ಧಿಯಿಂದ, ಕಳೆದ ಮೂರು ದಶಕಗಳಿಂದಲೂ ತಮ್ಮ ತತ್ವನಿಷ್ಠೆ, ನಿಷ್ಠುರ ನಡೆ-ನುಡಿ ಹಾಗೂ ನಿರ್ಭೀತಿಯ ರಾಜಕಾರಣಕ್ಕೆ ಮತ್ತೊಂದು ಹೆಸರೇ ಆಗಿರುವ ಎಲೆಕಡಕಲು ಕಂಬೇಗೌಡ ರಾಮಯ್ಯನವರು ಕಡು ಬಡವರ, ಶ್ರಮಜೀವಿಗಳ, ರೈತರ ಹಾಗೂ ಅವಕಾಶವಿಹೀನರೆಲ್ಲರ ನೇರ ಪ್ರತಿನಿಧಿಯಾಗಿದ್ದಾರೆ.

ಜನಪರವಾದ ಯೋಜನೆಗಳನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಅಡ್ಡಿ-ಆತಂಕ ಎಡರು-ತೊಡರು ಬಂದರೂ ಜ್ವಾಲಾಮುಖಿಯಾಗಿ ಸ್ಫೋಟಿಸುವ ಇವರ ಪ್ರಖರ ವ್ಯಕ್ತಿತ್ವವು ಒಳ್ಳೆಯತನಕ್ಕೆ ಅಷ್ಟೇ ಮೃದುವಾಗಿ ಹೂವಿನಂತೆ ಸ್ಪಂದಿಸುತ್ತದೆ. ಮಂತ್ರಿಯಾಗಿ, ಶಾಸಕರಾಗಿ ಅನೇಕ ಜನಪರ ಹೋರಾಟಗಳ ನೇತಾರರಾಗಿ ಸಾರ್ವಜನಿಕ ಜೀವನದಲ್ಲಿ ಅಕ್ಷರಶಃ ಮಾದರಿಯಾಗಬಲ್ಲ ಒಂದು ಹೊಸ ಶೈಲಿಯನ್ನೇ ರಾಮಯ್ಯನವರು ಹುಟ್ಟುಹಾಕಿದ್ದಾರೆ.

ಇವರ ಅಹಿಂಸಾರೂಪದ ಶಿಸ್ತುಬದ್ಧ ಚಳವಳಿಗಳು, ಪರಿಸರವನ್ನು ಕಾಪಾಡುವ, ಸಾಲುಮರಗಳನ್ನು ನೆಡುವ ಹಾಗೂ ವೈಚಾರಿಕ ಪ್ರಜ್ಞೆಯನ್ನು ಜನತೆಯ ನಡುವೆ ಬಿತ್ತುವ ಆಂದೋಲನಗಳು ಅನನ್ಯವಾದವು. ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಹರಿದುಬರಲು ಇವರು ಪ್ರಮುಖ ಕಾರಣಕರ್ತರಾಗಿದ್ದಾರೆ. ರೇಷ್ಮೆ ಬೆಳೆಗಾರರ ಪರವಾಗಿ ಇವರು ಕೈಗೊಂಡ ಚಾರಿತ್ರಿಕ ನಿರ್ಧಾರಗಳು, ರೈತರಲ್ಲಿ ಚೈತನ್ಯ ತುಂಬಿವೆ. ಇಂದಿನ ಸಾಮಾಜಿಕ ಸ್ಥಿತ್ಯಂತರದ ಪರಿಸ್ಥಿತಿಯಲ್ಲಿ ವೈ.ಕೆ. ರಾಮಯ್ಯನವರ ಈ ಬಗೆಯ ಚಟುವಟಿಕೆಗಳು ಭರವಸೆಯ ಬೆಳಕಾಗಿವೆ.

ಗಾಂಧೀಜಿ, ಕುವೆಂಪು, ಜೆ ಪಿ, ರಾಮಮನೋಹರ ಲೋಹಿಯಾ, ಶಾಂತವೇರಿ ಗೋಪಾಲಗೌಡ ಇಂತಹ ಉದಾತ್ತ ವ್ಯಕ್ತಿಗಳ ಮತ್ತು ಗ್ರಾಮೀಣ ಅನುಭವಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವ ವ್ಯಕ್ತಿತ್ವ ರಾಮಯ್ಯನವರದು. ಈ ಹೆಂಗರುಳಿನ ನಿರ್ಭೀತಿಯ ರಾಜಕಾರಣಿಗೆ ಇದೀಗ ಅರವತ್ತು ವಸಂತಗಳು ತುಂಬಿವೆ. ಈ ಸಂದರ್ಭದಲ್ಲಿ ವೈ ಕೆ ರಾಮಯ್ಯನವರ ಬಹುಮುಖ ವ್ಯಕ್ತಿತ್ವ ಮತ್ತು ವಿವಿಧ ಕ್ಷೇತ್ರಗಳ ಸಾಧನೆಗಳನ್ನು ಒಳಗೊಂಡಿರುವ **ಜೀವನದಿ, ಹೊನ್ನಚಂದ್ರಿಕೆ, ಹೇಮಾವತಿ,** ಮತ್ತು **ಕ್ರಿಯಾಶೀಲ ಸಂಗಾತಿ** ಈ ನಾಲ್ಕು ಅಭಿನಂದನಾ ಸಂಪುಟಗಳನ್ನು ಹೊರತರಲಾಗಿದೆ. ನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಬದುಕನ್ನು ಕುರಿತು ಅಧ್ಯಯನ ಮಾಡುವ ಸಂಶೋಧಕರಿಗೆ, ಯುವಜನರಿಗೆ ಮತ್ತು ಜನಸಾಮನ್ಯರಿಗೆ ಈ ಕೃತಿಗಳು ಸ್ಫೂರ್ತಿದಾಯಕವಾದ ಆಕರ ಗ್ರಂಥಗಳಾಗಿವೆ.




ವೈ ಕೆ ರಾಮಯ್ಯ ಅಭಿನಂದನಾ ಸಂಪುಟ : ಒಂದು

# ಜೀವನದಿ

ಸಂಪಾದಕ

**ಜಿ ವಿ ಆನಂದಮೂರ್ತಿ**



ಪ್ರಕಾಶಕರು

**ವೈ ಕೆ ರಾಮಯ್ಯ ಟ್ರಸ್ಟ್**

973, ಚೇತನಾ, ಬಿ.ಎಂ. ರಸ್ತೆ, ಕುವೆಂಪು ನಗರ

ಕುಣಿಗಲ್ - 572 130, ತುಮಕೂರು ಜಿಲ್ಲೆ





**JEEVA NADI** (River of Life)
FELICITATION VOLUME
Presented to Sri Y K Ramaiah

EDITED BY
PROF. G V ANANDAMURTHY
Lecturer, Empress Girls Govt P U College
Ashoka Road, Tumkur - 572 101

PUBLISHED BY
Y K RAMAIAH TRUST
973, Chethana, B.M. Road
Kuvempu Nagara, Kunigal - 572 130
Tumkur Dist



First Impression : 2002. Pages : 468+xxvi

Rs. **150.00**

ಸಂಪಾದಕರು : ಪ್ರೊ. ಜಿ ವಿ ಆನಂದಮೂರ್ತಿ

ಮುಖಪುಟ : ಯು ಟಿ ಸುರೇಶ್

ರೇಖಾಚಿತ್ರ : ವಿ ರಾಠೋಡ್, ಜಿ ಕೆ ಶಿವಣ್ಣ

ಅಕ್ಷರ ಜೋಡಣೆ ಮತ್ತು ಮುದ್ರಣ
ಈಸ್ಟರ್ನ್ ಪ್ರೆಸ್ (ಬೆಂಗಳೂರು) ಪ್ರೈ. ಲಿ.
110-ಬಿ, ಬೊಮ್ಮಸಂದ್ರ ಇಂಡಸ್ಟ್ರಿಯಲ್ ಏರಿಯಾ
ಹೊಸೂರು ರಸ್ತೆ, ಬೆಂಗಳೂರು - 562 158

ಪ್ರಸ್ತಾವನೆ

# ಜನತೆಯ ಏಳಿಗೆಯ ಧ್ಯಾನ

**ಪ್ರೊ. ಜಿ ವಿ ಆನಂದಮೂರ್ತಿ**

ಕಳೆದ ಮೂರೂವರೆ ದಶಕಗಳಿಂದಲೂ ಸಾರ್ವಜನಿಕ ಜೀವನದಲ್ಲಿರುವ ಶ್ರೀ ವೈ.ಕೆ. ರಾಮಯ್ಯನವರು ತಮ್ಮ ತತ್ವನಿಷ್ಠೆ, ನಿರ್ಭೀತಿಯ ರಾಜಕಾರಣ ಹಾಗೂ ತಮ್ಮದೇ ಆದ ವಿಶಿಷ್ಟವಾದ ರೀತಿಯ ಹೋರಾಟದ ಜನಪರ ಕಾರ್ಯಶೈಲಿಗಳಿಂದಾಗಿ ಕರ್ನಾಟಕದ ರಾಜಕಾರಣದಲ್ಲಿ ಹೆಸರಾಗಿದ್ದಾರೆ.

ಜನತೆಗೆ ಅನುಕೂಲವಾಗುವಂತಹ ಯಾವುದೇ ಬಗೆಯ ಕಾರ್ಯಯೋಜನೆಗಳನ್ನು ಅನುಷ್ಠಾನಗೊಳಿಸಲು; ಯಾವ ಅಂಜಿಕೆಯೂ ಇಲ್ಲದೆ, ಕೊನೆಗೆ ವ್ಯಕ್ತಿಸಂಬಂಧಗಳನ್ನೂ ನಿರ್ಲಕ್ಷಿಸಿ, ಎಡರು-ತೊಡರುಗಳನ್ನು ದಾಟಿಕೊಂಡು ಸದಾ ಹರಿಯುವ ನೀರಿನಂತೆ ತಣ್ಣಗೆ ಮುನ್ನುಗ್ಗುವ ಗುಣ ವೈ.ಕೆ. ರಾಮಯ್ಯನವರ ತುಂಬುಹೃದಯದ ವ್ಯಕ್ತಿತ್ವದಲ್ಲಿದೆ. ರಾಜಕಾರಣಕ್ಕಾಗಲಿ ಅಥವಾ ಸಾರ್ವಜನಿಕ ಜೀವನಕ್ಕಾಗಲಿ ಸಾಮಾನ್ಯವಾಗಿ ಎರಡು ಹಾದಿಗಳಿರುತ್ತವೆ. ಒಂದು: ಅಪ್ರಾಮಾಣಿಕತೆಯ ಮೂಲಕ ರಾಜಿ ಮಾಡಿಕೊಳ್ಳುವ ಮನೋಭಾವ ಹಾಗೂ ಪ್ರಶ್ನಿಸುವ, ಸ್ಫೋಟಿಸುವ ಗುಣವಿಲ್ಲದ ಮಾರ್ಗ. ಎರಡನೆಯದು: ತತ್ವನಿಷ್ಠೆ, ಆದರ್ಶ-ಕನಸುಗಳನ್ನು ನನಸಾಗಿಸಲು ನಡೆಸುವ ಹೋರಾಟದ ಕಾಡುಹಾದಿಯನ್ನು ಹಿಡಿಯುವುದು. ಅಂದರೆ ವ್ಯವಸ್ಥೆ ಎಂಬ ಪ್ರವಾಹದಲ್ಲಿ ಎದುರಾಗಿ ಈಜುವ ಮನೋಬಲದ, ತೀವ್ರವಾದ ಆತ್ಮಾಭಿಮಾನದ ಸಕಲರ ಏಳಿಗೆಯಲ್ಲಿಯೇ ಇನ್ನಿಲ್ಲದ ಸಂತೋಷವನ್ನು ಕಾಣುವ ಹೆಮ್ಮೆಯ ದಾರಿಯನ್ನು ಆಯ್ಕೆ ಮಾಡಿಕೊಳ್ಳುವುದು.

ಸಾಮಾನ್ಯವಾಗಿ ನಮ್ಮ ಕಣ್ಣೆದುರಿನ ಬಹುಪಾಲು ರಾಜಕಾರಣಿಗಳು ತಮ್ಮ ಸ್ವಾಭಿಮಾನ, ಆದರ್ಶಗಳನ್ನು ಕೊಂದುಕೊಂಡು, ಅಧಿಕಾರ ರಾಜಕಾರಣದ ಆಕರ್ಷಣೆಗೆ ಒಳಗಾಗಿ, ಅಪ್ರಾಮಾಣಿಕ ಹೊಂದಾಣಿಕೆಯ ರಾಜಕಾರಣವನ್ನು ತಮ್ಮ ಜೀವನ ಸಿದ್ಧಾಂತವನ್ನಾಗಿ ಮಾಡಿಕೊಂಡಿರುತ್ತಾರೆ. ಭಾರತದ ರಾಜಕಾರಣದಲ್ಲಿ ಈ ಬಗೆಯ ರಾಜಕಾರಣಿಗಳೇ ಹೇರಳವಾಗಿ ನಮ್ಮ ಕಣ್ಣೆದುರಿಗಿದ್ದಾರೆ. ಆದರೆ ತಾವು ನಂಬಿದ ಮೌಲ್ಯಗಳಿಗಾಗಿ, ಆದರ್ಶಗಳಿಗಾಗಿ, ಅಧಿಕಾರ ಕೇಂದ್ರಗಳನ್ನು ನಿರಾಕರಿಸುವ ರಾಜಕಾರಣಿಗಳ ಪರಂಪರೆಯೂ ನಮ್ಮ

ಮುಂದಿದೆ. ಈಚಿನ ದಿನಗಳಲ್ಲಿ ಈ ಪರಂಪರೆಯ ಮುಂದುವರಿಕೆಯಾಗಿ ಕಂಡುಬರುತ್ತಿರುವವರು ಕರ್ನಾಟಕ ವಿಧಾನಸಭೆಯ ಅತ್ಯಂತ ಕ್ರಿಯಾಶಾಲಿ ಸದಸ್ಯರಾಗಿರುವ ವೈ.ಕೆ. ರಾಮಯ್ಯನವರು. ಸಾರ್ವಜನಿಕ ಜೀವನದಲ್ಲಿನ ತಮ್ಮ ಕಡುನಿಷ್ಠುರತೆಯ ಗುಣದಿಂದಾಗಿಯೇ ಅಪಾರವಾದ ಅಭಿಮಾನಿಗಳನ್ನು, ಗೆಳೆಯರನ್ನು, ಹಿತೈಷಿಗಳನ್ನು ಗಳಿಸಿಕೊಂಡಿರುವಂತೆಯೇ ಅಷ್ಟೇ ಸಂಖ್ಯೆಯ ಶತ್ರುಗಳನ್ನೂ ಸೃಷ್ಟಿಸಿಕೊಂಡಿರುವ ದಿಟ್ಟತನದ ಪ್ರತೀಕವಾಗಿರುವ ಜನಪ್ರತಿನಿಧಿಯಾಗಿದ್ದಾರೆ ರಾಮಯ್ಯನವರು. ಎಂಬತ್ತರ ದಶಕದಿಂದೀಚಿನ ಬದಲಾದ ಭಾರತದ ರಾಜಕಾರಣ ನಮ್ಮೆಲ್ಲ ಪ್ರಗತಿಪರ ವಿಚಾರಧಾರೆಯ ರಾಜಕಾರಣಿಗಳನ್ನು ಹಣ್ಣು ಮಾಡಿದೆ. ಈ ಬದಲಾದ ಸನ್ನಿವೇಶದಲ್ಲಿ ವೈ.ಕೆ.ಆರ್ ಅವರೂ ಕೂಡ ಕೊಂಚ ಮಾಗಿದ್ದಾರೆ. ''ಜನತೆಗೆ ನ್ಯಾಯಬದ್ಧವಾಗಿ ಸಿಗಬೇಕಾದ ಸೌಲಭ್ಯ ಮತ್ತು ಸವಲತ್ತುಗಳನ್ನು ದೊರಕಿಸಿಕೊಡಲು ಸಂಘರ್ಷದ ಜೊತೆಗೆ ತಾಳ್ಮೆ, ಸಂದರ್ಭಾನುಸಾರ ಹೊಂದಾಣಿಕೆಯ ಆತ್ಮೀಯತೆಯೂ ಸಹ ಮುಖ್ಯ ಎಂದು ತಿಳಿದಿರುವವನು ನಾನು'' ಎನ್ನುವ ವೈ.ಕೆ.ಆರ್ ಸಮುದಾಯದ ಹಿತಕ್ಕಾಗಿ ಯಾವುದೇ ಬಗೆಯ ತ್ಯಾಗಕ್ಕೂ ತಾನು ಸಿದ್ಧ ಎಂದು ಹೇಳುತ್ತಾರೆ. ತುಮಕೂರು ಜಿಲ್ಲೆಗೆ ಹೇಮಾವತಿ ನೀರನ್ನು ಹರಿಸುವ ತಮ್ಮ ಸುದೀರ್ಘವಾದ ಹೋರಾಟದ ದಿನಗಳಲ್ಲಿ ''ನನ್ನ ರಾಜಕೀಯ ಜೀವನದ ಮಹಾಕನಸು ಜಿಲ್ಲೆಗೆ ಹೇಮಾವತಿ ನೀರು ಹರಿಸುವುದು. ಇದಕ್ಕಾಗಿ ನಾನು ಯಾರ ಕೈಕಾಲನ್ನಾದರೂ ಹಿಡಿಯುತ್ತೇನೆ. ಹೇಮಾವತಿ ನೀರಿಗಾಗಿ ನನ್ನ ಮಂತ್ರಿಪದವಿಯನ್ನೇ ಅಡವಿಟ್ಟಿದ್ದೇನೆ'' ಎಂದು ಹೇಳುತ್ತಿದ್ದರು. ಹಾಗೆಯೇ ''ಜನತೆಯ ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಬರುವ ಯಾರನ್ನೇ ಆಗಲಿ, ಯಾವುದನ್ನೇ ಆಗಲಿ ನಾನು ಲೆಕ್ಕಿಸುವುದಿಲ್ಲ!'' ಎನ್ನುವ ಖಚಿತವಾದ ನಿಲುವನ್ನು ಹೊಂದಿದ್ದಾರೆ.

ವೈ.ಕೆ.ಆರ್ ಅವರ ಒಂದು ಕಾಲದ ರಾಜಕೀಯ ಜೀವನದ ಮಾರ್ಗದರ್ಶಿ ಎಚ್.ಡಿ. ದೇವೇಗೌಡ ಅವರೊಂದಿಗಿನ ಭಿನ್ನಾಭಿಪ್ರಾಯಕ್ಕೆ ಈ ಬಗೆಯ ತಾತ್ವಿಕ ನಿಲುವೇ ಕಾರಣವಾಗಿದೆ. ನೀರಾವರಿಗಾಗಿ ಹೆಚ್ಚು ಹಣ ಬಿಡುಗಡೆ ಮಾಡದ ಕಾರಣಕ್ಕಾಗಿಯೇ ರಾಮಕೃಷ್ಣ ಹೆಗಡೆ ಮಂತ್ರಿಮಂಡಲಕ್ಕೆ ದೇವೇಗೌಡರು ರಾಜೀನಾಮೆ ನೀಡಿದ್ದರು. ಮುಂದೆ ದೇವೇಗೌಡರೇ ಮುಖ್ಯಮಂತ್ರಿಯಾದ ಮೇಲೆ, ತುಮಕೂರು ಜಿಲ್ಲೆಗೆ ಹರಿದುಬರುವ ಹೇಮಾವತಿ ಯೋಜನೆಗೆ ಕಡಿಮೆ ಹಣ ಬಿಡುಗಡೆ ಮಾಡಿ, ಅಡ್ಡಿಬಂದರು ಎನ್ನುವ ಕಾರಣದಿಂದಾಗಿಯೇ ವೈ.ಕೆ.ಆರ್ ಅವರು ನೀರಾವರಿಯ ಸಂಬಂಧದಲ್ಲಿ ಮುಂದುವರೆಯುತ್ತಿರುವ ಅನ್ಯಾಯದ ಬಗ್ಗೆ ಇನ್ನಷ್ಟು ತೀವ್ರವಾಗಿ ಹೋರಾಟ ಮುಂದುವರಿಸಿದರು.

ಎಂಬತ್ತರ ದಶಕದ ಆ ದಿನಗಳು ಇನ್ನೂ ಹಚ್ಚಹಸುರಾಗಿವೆ. ನಮ್ಮೆಲ್ಲರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದ್ಧತೆಯನ್ನು ರೂಪಿಸುತ್ತಿದ್ದ ''ಲಂಕೇಶ್ ಪತ್ರಿಕೆ''ಯಲ್ಲಿ ಆಗಾಗ್ಗೆ ಲಂಕೇಶರ ಮೆಚ್ಚುಗೆಯ ಪ್ರೀತಿಗೆ ಒಳಗಾಗುತ್ತಿದ್ದ ಕೆಲವೇ ರಾಜಕಾರಣಿಗಳಿದ್ದರು. ಅವರಲ್ಲಿ ಕೆ.ಆರ್. ಪೇಟೆಯ ಕೃಷ್ಣ, ನಜೀರ್‌ಸಾಬ್ ಮತ್ತು ವೈ.ಕೆ. ರಾಮಯ್ಯನವರನ್ನು ಕುರಿತು ಲಂಕೇಶ್‌ರು ಆಗಾಗ್ಗ

ಬರೆಯುತ್ತಿದ್ದ ಟಿಪ್ಪಣಿಗಳು ನನ್ನನ್ನು ಆಕರ್ಷಿಸಿದ್ದವು. ಹೀಗೆ ವೈ.ಕೆ. ರಾಮಯ್ಯನವರನ್ನು ನಾನು ಕಂಡಿದ್ದು, ಅವರೆಡೆಗೆ ಆಕರ್ಷಿತನಾದದ್ದು ''ಲಂಕೇಶ್ ಪತ್ರಿಕೆ''ಯ ಮೂಲಕವಾಗಿ, ಇಷ್ಟಾದರೂ ನಾನು ಅವರನ್ನು ಎಂದೂ ಭೇಟಿ ಮಾಡಿರಲಿಲ್ಲ.

ಈ ನಡುವೆ ವೈ.ಕೆ.ಆರ್ ಒಂದು ಸಲ ತುಮಕೂರು ಲೋಕಸಭಾ ಕ್ಷೇತ್ರಕ್ಕೆ ಜನತಾ ಪಕ್ಷದ ವತಿಯಿಂದ ಸ್ಪರ್ಧಿಸಿದ್ದರು. ಅಂದಿನ ಪ್ರಚಾರದ ದಿನಗಳಲ್ಲಿ, ಒಂದು ದಿನ ನೂರಾರು ಜನ ನೇಗಿಲುಹೊತ್ತ ರೈತರು ಮೆರವಣಿಗೆಯಲ್ಲಿ ವೈ.ಕೆ. ರಾಮಯ್ಯನವರ ಪರವಾಗಿ ಘೋಷಣೆಗಳನ್ನು ಕೂಗುತ್ತಾ ಬರುತ್ತಿದ್ದರು. ನೇಗಿಲು ಹೊತ್ತ ರೈತರ ಮುಂದೆ, ಬಿಳಿಪಂಚೆ, ಬಿಳಿಜುಬ್ಬ, ಹೆಗಲ ಮೇಲೊಂದು ವಲ್ಲಿ ಹಾಗು ಗಡ್ಡಬಿಟ್ಟಿದ್ದ ವೈ.ಕೆ.ಆರ್ ತಮ್ಮ ನೀಳ ತೋಳುಗಳನ್ನು ಬೀಸುತ್ತಾ ದಾಪುಗಾಲು ಹೆಜ್ಜೆ ಇಟ್ಟುಕೊಂಡು ಬರುತ್ತಿದ್ದರು. ಅಂದೇ ನಾನು ಮೊದಲ ಬಾರಿಗೆ ವೈ.ಕೆ.ಆರ್ ಅವರನ್ನು ನೋಡಿದ್ದು. ಅಲ್ಲೇ ರಸ್ತೆ ಬದಿಯಲ್ಲಿ ನಿಂತಿದ್ದ ನಾನೂ ಕೂಡ ಆ ಮೆರಣಿಗೆಯಲ್ಲಿ ಸೇರಿಕೊಂಡೆ. ಕರಪತ್ರಗಳನ್ನು ಹಂಚುತ್ತಾ, ಘೋಷಣೆ ಕೂಗುತ್ತಾ ನಡೆದೆ.

ಆ ವೇಳೆಗಾಗಲೇ ವೈ.ಕೆ.ಆರ್ ತುಮಕೂರಿನಲ್ಲಿ, ತಮ್ಮ ಅರ್ಥಪೂರ್ಣ ಹೋರಾಟ ಹಾಗೂ ಭ್ರಷ್ಟತೆಯೊಂದಿಗೆ ರಾಜಿಯಾಗದ ವಿಶಿಷ್ಟ ಗುಣಗಳಿಂದಾಗಿ ಮನೆಮಾತಾಗಿದ್ದರು. ನಾನು ತಿಳಿದಂತೆ ತುಮಕೂರು ಜಿಲ್ಲೆಯ ಬಹುಪಾಲು ರಾಜಕಾರಣಿಗಳು ತಮ್ಮ ಕ್ಷೇತ್ರಗಳಲ್ಲಷ್ಟೇ 'ಜನಪ್ರಿಯ'ರಾಗಿರುತ್ತಿದ್ದರು. ಅದರಲ್ಲಿ ಬಹುಪಾಲು ಜನಪ್ರತಿನಿಧಿಗಳು ತಮ್ಮ ಮತ ಕ್ಷೇತ್ರದಿಂದಾಚೆಗೆ ಕಾಲಿಡುತ್ತಿರಲಿಲ್ಲ (ಕೆಲವು ಅಪವಾದಗಳನ್ನು ಮಾತ್ರ ಬಿಟ್ಟು) ಆದರೆ ವೈ.ಕೆ.ಆರ್ ಮಾತ್ರ ಜಿಲ್ಲೆಯ ಎಲ್ಲ ಭಾಗಗಳಲ್ಲೂ ಅಭಿಮಾನಿಗಳನ್ನು, ಹಿತೈಷಿಗಳನ್ನು ಅಪಾರ ಸಂಖ್ಯೆಯಲ್ಲಿ ಹೊಂದಿರುವುದನ್ನು ನಾನು ಚೆನ್ನಾಗಿ ಬಲ್ಲೆ. ಹೇಮಾವತಿ ನೀರಿನ ಹೋರಾಟ ಸಂದರ್ಭದಲ್ಲಿ ಇಡೀ ಜಿಲ್ಲೆಯ ಜನತೆಯು ಪಕ್ಷಾತೀತವಾಗಿ, ಜಾತ್ಯತೀತವಾಗಿ ವೈ.ಕೆ.ಆರ್ ಅವರ ನೀರಿನ ಹೋರಾಟವನ್ನು ನೈತಿಕವಾಗಿ ಬೆಂಬಲಿಸಿತು. ಈ ಹಿನ್ನೆಲೆಯಲ್ಲಿಯೇ ಲೋಕಸಭಾ ಚುನಾವಣೆಯಲ್ಲಿ ಗೆಲುವಿನ ಅಂಚಿನವರೆಗೂ ಬಂದು ಅಲ್ಪಮತಗಳಿಂದ ಸೋತರು. ವಾಸ್ತವವಾಗಿ ಇದು ಸೋಲೇ ಅಲ್ಲ. ವೈ.ಕೆ.ಆರ್ ಅವರ ಹೋರಾಟದ ರಾಜಕಾರಣಕ್ಕೆ ಜನತೆ ತೋರಿದ ಗೌರವ ಇದು.

ವೈ.ಕೆ.ಆರ್ ಅವರ ಚುನಾವಣೆಯ ಪ್ರಚಾರ ಶೈಲಿಯೂ ಕೂಡ ಇತರರಿಗಿಂತ ವಿಭಿನ್ನವಾದದ್ದು. ಇತರರಂತೆ ಗೋಳಾಡಿ, ಅತ್ತೂತ್ತರೆದು, ಕೈಮುಗಿದು, ಗಿಲೀಟಿನ ತಂತ್ರಗಳ ಮೂಲಕ ಇವರು ಎಂದೂ ಮತ ಯಾಚಿಸಿದವರಲ್ಲ. 'ಹೆಂಡ ಸಾರಾಯಿ ನಾನು ಕೊಡಿಸೋನಲ್ಲ! ನಿಮ್ಮ ಊರಿಗೆ ಏನಾದ್ರೂ ಆಗಬೇಕಾದ್ರೆ ನನಗೆ ಓಟು ಕೊಡಿ. ಇಲ್ದೆ ಇದ್ರೆ ಬಿಡಿ. ನಾನು ನಿಮ್ಮನ್ನು

ಇದರಾಚೆಗೆ ಬೇಡಿಕೊಳ್ಳುವುದಿಲ್ಲ' ಎಂದು ಕಡ್ಡಿ ಮುರಿದ ಹಾಗೆ ಮಾತನಾಡಿ ಮುಂದಿನ ಊರಿಗೆ ಹೋಗುತ್ತಿದ್ದರು. ಕರ್ನಾಟಕ ಹೆಮ್ಮೆಪಡಬಹುದಾದ ಸಮಾಜವಾದಿ ರಾಜಕಾರಣಿ ಶಾಂತವೇರಿ ಗೋಪಾಲಗೌಡರ ಚುನಾವಣಾ ಶೈಲಿಯನ್ನು ಮಾತ್ರ ನೆನಪಿಗೆ ತರುವಂಥ ವಿವರಗಳಿವು.

ಸಮಾಜವಾದಿ ಪರಂಪರೆಯಿಂದ ಪ್ರಭಾವಿತರಾಗಿರುವ ವೈ.ಕೆ.ಆರ್ ಅವರ ವ್ಯಕ್ತಿತ್ವವನ್ನು ರೂಪಿಸಿರುವುದು, ಜೆ.ಪಿ, ರಾಮಮನೋಹರ ಲೋಹಿಯಾ, ಕುವೆಂಪು ಅವರ ಚಿಂತನೆಗಳು. ಅದರಲ್ಲೂ ಕುವೆಂಪು ಅವರ ವೈಚಾರಿಕ ಪ್ರಜ್ಞೆ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧವಾಗಿರುವ ಕವಿತೆ, ನಾಟಕ ಹಾಗೂ ವೈಚಾರಿಕ ಬರಹಗಳು ವೈ.ಕೆ.ಆರ್ ಅವರ ಪ್ರಜ್ಞೆಯನ್ನು ತೀವ್ರವಾಗಿ ಆವರಿಸಿಕೊಂಡಿವೆ. ಆದರೂ ಇವರ ವ್ಯಕ್ತಿತ್ವದ ಶೈಲಿ ಸಿದ್ಧಾಂತಿಯ ಲಕ್ಷಣಗಳನ್ನು ಮೀರಿದ್ದು. ತಮ್ಮ ಅಪಾರವಾದ ಅನುಭವದ ಹಿನ್ನೆಲೆಯಲ್ಲಿ ಜನತೆಯ ಹಿತಕ್ಕಾಗಿ ರೂಪಿಸುವ ಇವರ ಯೋಜನೆಗಳು, ಹಾಗೆಯೇ ಅವುಗಳನ್ನು ಅನುಷ್ಠಾನಗೊಳಿಸುವ ಇವರ ಶೈಲಿ ಅನೇಕ ಸಲ ಸಿದ್ಧಾಂತಿಗಳಿಗೂ ಆಶ್ಚರ್ಯ ಹುಟ್ಟಿಸುವಂತಿರುತ್ತದೆ. ರೇಷ್ಮೆ ಬೆಳೆಗಾರರಿಗೆ 'ಬೋನಸ್' ನೀಡುವ ಯೋಜನೆ, ವೈ.ಕೆ.ಆರ್ ಅವರ ಗ್ರಾಮೀಣ ಅನುಭವದ ಹಿನ್ನೆಲೆಯಲ್ಲಿ ಮೈತಳೆದಿದ್ದು. ಆದ್ದರಿಂದಲೇ ಶಾಂತವೇರಿ ಗೋಪಾಲಗೌಡ, ಜೆ.ಎಚ್. ಪಟೇಲ್ ಮುಂತಾದವರು ಚಿಂತನಶೀಲ ರಾಜಕಾರಣಿಗಳೆನಿಸಿದರೆ, ದೇವರಾಜ ಅರಸ್, ನಜೀರ್‌ಸಾಬ್, ದೇವೇಗೌಡ, ವೈ.ಕೆ. ರಾಮಯ್ಯನವರಂಥ ರಾಜಕಾರಣಿಗಳು, ತಮ್ಮ ಅಪಾರವಾದ ಅನುಭವದ ಅರಿವಿನಲ್ಲಿ ರೂಪಗೊಂಡ ಜನತೆಯ ಲೋಕದ ಕ್ರಿಯಾಶೀಲ ರಾಜಕಾರಣಿಗಳು. ಇಂದಿನ ನಮ್ಮ ಸಮಾಜಕ್ಕೆ ಈ ಬಗೆಯ ಕ್ರಿಯಾಶೀಲ ರಾಜಕಾರಣಿಗಳ ಅವಶ್ಯಕತೆ ಹೆಚ್ಚಾಗಿದೆ.

ಅಪ್ಪಟ ಹಳ್ಳಿಗಾಡಿನ ಒರಟು ವ್ಯಕ್ತಿಯಂತೆ ಕಾಣುವ ವೈ.ಕೆ.ಆರ್ ಆಳದಲ್ಲಿ ತುಂಬಾ ಚಡಪಡಿಕೆಯ ಅಕ್ಕರೆ ತುಂಬಿದ ಮನುಷ್ಯರಾಗಿದ್ದಾರೆ. ನೈತಿಕ ಮೌಲ್ಯಗಳನ್ನು ಮರೆಯುತ್ತಿರುವ ಜನ, ಭ್ರಷ್ಟಾಚಾರಣ, ಜನತೆಯ ಅಭಿವೃದ್ಧಿಗೆ ಬೆನ್ನುಹಾಕಿ ಕುಳಿತ ಅಧಿಕಾರಶಾಹಿ, ಕೃಷಿ ಸಂಸ್ಕೃತಿಯ ಕುಸಿತ ಇವೆಲ್ಲವನ್ನೂ ಕಂಡು ಕುದಿಯುವ ವ್ಯಕ್ತಿತ್ವ ಇವರದು. ಆದ್ದರಿಂದಲೇ ಇವರಿಗಿರುವ ಸಿಟ್ಟು-ಸಿಡುಕುಗಳು ನೈತಿಕ ತೀವ್ರತೆಯಿಂದ ಕೂಡಿದವುಗಳಾಗಿವೆ. ಅಸಮಾನತೆ, ಭ್ರಷ್ಟತೆಗಳೆದುರು ಜ್ವಾಲಾಮುಖಿಯಂತೆ ಸ್ಫೋಟಿಸುವ ಇವರ ವ್ಯಕ್ತಿತ್ವವು, ಒಳ್ಳೆಯತನಕ್ಕೆ ಅಷ್ಟೇ ಮೃದುವಾಗಿ ಹೂವಿನಂತೆ ಸ್ಪಂದಿಸುತ್ತದೆ. ಶಾಂತವೇರಿ ಗೋಪಾಲಗೌಡರ ವ್ಯಕ್ತಿತ್ವವೂ ಇದೇ ಬಗೆಯದ್ದಾಗಿತ್ತು. ಸತ್ಯದ ಪರವಾಗಿ, ಜನತೆಯ ಪರವಾಗಿ ತಮ್ಮ ಅಗಾಧ ಜನಪ್ರಿಯತೆಯನ್ನೇ ಒತ್ತೆ ಇಟ್ಟು ಕಾರ್ಯಪ್ರವೃತ್ತರಾಗುವ ವಿರಳ ರಾಜಕಾರಣಿಗಳ ಪೈಕಿ ವೈ.ಕೆ.ಆರ್ ಪ್ರಮುಖರಾಗಿದ್ದಾರೆ. ಕರ್ನಾಟಕ ವಿಧಾನಸಭೆಯ ಮಾಜಿ ಅಧ್ಯಕ್ಷರಾದ ಶ್ರೀ ರಮೇಶ್‌ಕುಮಾರ್ ಒಂದೆಡೆ ''ಜನಸಮುದಾಯದ ಸಮಸ್ಯೆಗಳನ್ನು ನಿವಾರಿಸಿ ಆರೋಗ್ಯಕರ ಸ್ಥಿತಿಯನ್ನು ನಿರ್ಮಾಣ ಮಾಡಬೇಕೆನ್ನುವ ತೀವ್ರವಾದ ಹಠದ ಕರ್ನಾಟಕ ಕಂಡ ಹುಚ್ಚು ರಾಜಕಾರಣಿಗಳ ಪೈಕಿ ವೈ.ಕೆ.

ರಾಮಯ್ಯ ಕೂಡ ಒಬ್ಬರು'' ಎಂದು ಪ್ರೀತಿಪೂರ್ವಕವಾಗಿ ಹೇಳಿದ್ದು ವೈ.ಕೆ.ಆರ್ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ರಾಜಕಾರಣಿಗಳು ಮಾಡುವ ಪ್ರತಿಯೊಂದು ಅಭಿವೃದ್ಧಿ ಕಾರ್ಯವೂ ಜನತೆಯ ಪರೀಕ್ಷೆಗೆ ಒಳಪಡಬೇಕು. ಹೀಗೆ ಜನತೆಯ ಪರೀಕ್ಷೆಗೆ ಒಳಪಟ್ಟ ರಾಜಕಾರಣಿ ಇನ್ನಷ್ಟು ಪಕ್ವಗೊಳ್ಳುತ್ತಾನೆ; ಜನಪರವಾಗುತ್ತಾನೆ. ಸಮಾಜದ ಅಭಿವೃದ್ಧಿಗಾಗಿ ಕೈಗೊಳ್ಳುವ ಯೋಜನೆಗಳು ಎಷ್ಟು ಮುಖ್ಯವೋ, ಹಾಗೆಯೇ ತನ್ನ ಕ್ಷೇತ್ರದ ಜನತೆಯನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯುವುದು ಹಾಗೂ ಜನತೆಯಲ್ಲಿ ನೈತಿಕ ಮೌಲ್ಯಗಳನ್ನು ಜಾಗೃತಗೊಳಿಸುವ ಹೊಣೆಗಾರಿಕೆಯನ್ನೂ ಜನಪ್ರತಿನಿಧಿಗಳು ನೈತಿಕವಾಗಿ ಹೊರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ರಾಮಯ್ಯನವರು ತಮ್ಮ ಕ್ಷೇತ್ರದಲ್ಲಿ ಕೈಗೊಂಡಿರುವ ಕೆರೆ-ಕಟ್ಟೆಗಳ ಪುನರುತ್ಥಾನ, ವ್ಯಾಪಕವಾಗಿ ಗಿಡ-ಮರಗಳನ್ನು ನೆಡುವ ಕಾರ್ಯಕ್ರಮ, ಜನಸಂಖ್ಯಾ ನಿಯಂತ್ರಣ ಹಾಗು ಈ ಸಂದರ್ಭದಲ್ಲಿ ಕೈಗೊಂಡ ಪಾದಯಾತ್ರೆಗಳು ಹಸಿರು ಸಂತೆ, ಸಾಂಸ್ಕೃತಿಕ ಕಾರ್ಯಕ್ರಮಗಳು, ವೈಚಾರಿಕವಾದ ಸಂವಾದಗೋಷ್ಠಿಗಳು, ಶಾಲೆಗಳ ಉಸ್ತುವಾರಿಯ ಫಲವಾಗಿ ಹೆಚ್ಚಾದ ಫಲಿತಾಂಶ-ಮುಂತಾದ ಸಮುದಾಯ ಕೇಂದ್ರಿತವಾದ ಚಟುವಟಿಕೆಗಳೆಲ್ಲ ಸಾಮಾಜಿಕ ಕಳಕಳಿಯುಳ್ಳ ಜನಪ್ರತಿನಿಧಿ ಯೊಬ್ಬನು ಹಮ್ಮಿಕೊಳ್ಳಬಹುದಾದ ಹೊಣೆಗಾರಿಕೆಯ ಕಾರ್ಯದ ವ್ಯಾಪ್ತಿಯನ್ನು ತಂತಾವೇ ವಿವರಿಸುತ್ತವೆ.

ಅಭಿವೃದ್ಧಿ ಕಾರ್ಯಗಳು ಮತ್ತು ರಾಜಕಾರಣವನ್ನು ಕುರಿತು ವೈ.ಕೆ.ಆರ್ ಅವರ ನಿಲುವು ಸ್ಪಷ್ಟವಾಗಿದೆ: ''ಇವೊತ್ತಿನ ದಿನಗಳಲ್ಲಿ ರಾಜಕಾರಣವೆನ್ನುವುದು; ಹಿಂಬಾಲಕರ, ಹಿತೈಷಿಗಳ ಬಂಧು-ಬಳಗದವರ ಹಿತಚಿಂತನೆ, ವರ್ಗಾವಣೆ, ಜಾತಿವಾದ, ಜನಪ್ರಿಯ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಂಡಿರುವುದಕ್ಕೆ ಸೀಮಿತಗೊಂಡಿದೆ. ಇದು ನಿಜವಾದ ರಾಜಕೀಯ ಅಲ್ಲ ! ಇದರ ಬದಲು ಸಮಾಜದ ಸರ್ವತೋಮುಖ ಅಭಿವೃದ್ಧಿಯೇ ನಿಜವಾದ ರಾಜಕಾರಣ. ಒಬ್ಬ ರಾಜಕಾರಣಿಯ ನಿಜವಾದ ಕಾರ್ಯ ಅಭಿವೃದ್ಧಿ ಪರ ಚಟುವಟಿಕೆಗಳೇ ಆಗಬೇಕಾಗಿದೆ. ಈ ಎರಡೂ ಬಗೆಯ ರಾಜಕಾರಣಿಗಳಲ್ಲಿ ಯಾರಿಂದ ಜನತೆಗೆ ನಿಜಕ್ಕೂ ದೀರ್ಘಕಾಲಿಕವಾಗಿ ಉಪಯೋಗವಾಗುತ್ತದೆ ಎನ್ನುವುದರಲ್ಲಿ ರಾಜಕಾರಣದ ಅರ್ಥ ನಿಂತಿದೆ.

ಆದ್ದರಿಂದ ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಜನಪ್ರತಿನಿಧಿಯು ಈಗಿನ ಅರ್ಥದ ಮಾಮೂಲಿ ರಾಜಕಾರಣವನ್ನು ಮಾಡಬಾರದು. ನನ್ನ ತಿಳುವಳಿಕೆಯಲ್ಲಿ ''ಅಭಿವೃದ್ಧಿಯೇ ಬೇರೆ, ರಾಜಕಾರಣವೇ ಬೇರೆ'' ಈ ತಮ್ಮ ಸ್ಪಷ್ಟವಾದ ವಿಚಾರಧಾರೆಯ ಮೂಲಕ ವೈ.ಕೆ.ಆರ್ ತಮ್ಮದೇ ಆದ ಚರ್ಚೆಯನ್ನು ಹುಟ್ಟುಹಾಕಿದ್ದಾರೆ. ರಾಜಕೀಯವನ್ನು ಕುರಿತಾದ ಚಿಂತನೆಯು ನಿಂತ ನೀರಲ್ಲ. ಅದೊಂದು ನಿರಂತರ ಹರಿಯುವ ಹೊಳೆಯ ಹಾಗೆ. ಈ ಹಿನ್ನೆಲೆಯಲ್ಲಿ ಇನ್ನಷ್ಟು ಅರ್ಥಪೂರ್ಣವಾಗಿ ಅಭಿವೃದ್ಧಿ ಮತ್ತು ರಾಜಕಾರಣವನ್ನು ಕುರಿತ ಚರ್ಚೆ

ಮತ್ತು ಕಾರ್ಯ ಚಟುವಟಿಕೆಗಳು ಸಾಡಿಸಾದ್ಯಂತ ಮುಂದುವರಿಯುವಂತಾಗಲಿ ಎನ್ನುವುದು ರಾಮಯ್ಯನವರ ಹೆಬ್ಬಯಕೆಯಾಗಿದೆ.

ಬಹುಜನರ ಹಿತಕ್ಕಾಗಿ ಶಾಶ್ವತವಾದ ಕಾರ್ಯಕ್ರಮಗಳಿಗಿಂತ, ಓಟನ್ನು ತಂದುಕೊಡುವ 'ಜನಪ್ರಿಯ' ಕಾರ್ಯಕ್ರಮಗಳೇ ಹೆಚ್ಚಾಗಿರುವುದು ಇಂದಿನ ನಮ್ಮ ರಾಜಕಾರಣದ ವೈಫಲ್ಯಗಳಿಗೆ ಮೂಲ ಕಾರಣ ಎನ್ನುವ ವೈ.ಕೆ.ಆರ್ ನಿಲುವು ಸರಿಯಾದದ್ದೇ. ''ಕಠಿಣವಾದ ನಿರ್ಧಾರಗಳಿಂದ ಜನಸಮುದಾಯಕ್ಕೆ ಶಾಶ್ವತವಾದ ಅಭಿವೃದ್ಧಿ ಕಾರ್ಯಗಳನ್ನು ಮಾಡಲು ಸಾಧ್ಯ. ಇದರಿಂದಾಗಿ ಜನ ಮೆಚ್ಚುಗೆಗಿಂತ, ಶತ್ರುಗಳ ಸಂಖ್ಯೆಯೇ ಹೆಚ್ಚಾಗಬಹುದು. ಆದರೂ ಅಭಿವೃದ್ಧಿ ಕಾರ್ಯಗಳ ನಿರಂತರತೆಯಿಂದ ಪ್ರಗತಿಯ ವೇಗ ಹೆಚ್ಚಾಗುತ್ತದೆ. ಇದು ನನ್ನ ಶೈಲಿಯ ರಾಜಕಾರಣ. ಇದರಿಂದ ನನಗೆ ತೃಪ್ತಿ ದೊರಕಿದೆ'' ಎನ್ನುವುದು ವೈ.ಕೆ.ಆರ್ ಅವರ ಖಚಿತ ನಿಲುವು. ಆದ್ದರಿಂದಲೇ ವೈ.ಕೆ.ಆರ್ ಅವರ ಈ ಬಗೆಯ ಕಾರ್ಯಶೈಲಿಯನ್ನು ಕಂಡು, ಅವರ ಬಗ್ಗೆ ಅಸೂಯೆ ಪಡುವವರೂ ಕೂಡ ತಲೆದೂಗುತ್ತಾರೆ.

ಸಧ್ಯದ ಭಾರತದ ರಾಜಕಾರಣದ ಸ್ಥಿತಿಯನ್ನು ಗಮನಿಸಿದರೆ, ಅಭಿವೃದ್ಧಿ ರಾಜಕಾರಣಕ್ಕೂ, ಚುನಾವಣಾ ಫಲಿತಾಂಶಕ್ಕೂ ಸಂಬಂಧವಿಲ್ಲ ಎನ್ನುವುದು ನಿಚ್ಚಳವಾಗಿದೆ. ಏಕೆಂದರೆ ಭಾರತದ ಸಂದರ್ಭದಲ್ಲಿ ಚುನಾವಣಾ ಫಲಿತಾಂಶಗಳನ್ನು ನಿರ್ಧರಿಸುವ ಮಾನದಂಡಗಳೇ ಬೇರೆ. ಜಾತಿ, ಒಳಜಾತಿ, ಹಣ, ಹೆಂಡ, ಧರ್ಮ ಹಾಗೂ ಭಾವೋದ್ವೇಗದ ಸಂಗತಿಗಳು ಇವೇ ಮೊದಲಾದವು ಚುನಾವಣೆಗಳ ಫಲಿತಾಂಶವನ್ನು ನಿರ್ಧರಿಸುತ್ತವೆ. ಆದ್ದರಿಂದ ಅಭಿವೃದ್ಧಿ ರಾಜಕಾರಣದಲ್ಲಿ ಯಶಸ್ವಿಯಾದ ರಾಜಕಾರಣಿ ಚುನಾವಣೆಯಲ್ಲಿ ಸೋಲಲೂಬಹುದು. ಈ ಬಗೆಯ ಉದಾಹರಣೆಗಳು ಸಮಕಾಲೀನ ರಾಜಕಾರಣದ ಚರಿತ್ರೆಯಲ್ಲಿ ಬೇಕಾದಷ್ಟಿವೆ. ವೈ.ಕೆ.ಆರ್. ಅವರಿಗೂ ಈ ಕಟು ವಾಸ್ತವದ ಅರಿವು ಇದೆ.

ವೈ.ಕೆ. ರಾಮಯ್ಯ ಕಳೆದ ಮೂರುವರೆ ದಶಕಗಳಿಂದಲೂ ಕರ್ನಾಟಕದ ಸಕ್ರಿಯ ರಾಜಕಾರಣದಲ್ಲಿ, ಸಾರ್ವಜನಿಕ ಹೋರಾಟಗಳಲ್ಲಿ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿದ್ದಾರೆ. ಇದೀಗ ವೈ.ಕೆ.ಆರ್ ಅವರಿಗೆ ಅರವತ್ತು ವಸಂತಗಳು ತುಂಬಿವೆ. ಅರವತ್ತರ ಪ್ರಾಯ ಒಬ್ಬ ವ್ಯಕ್ತಿ ತನ್ನ ಜೀವಿತದಲ್ಲಿ ಅನುಭವಗಳಿಂದ ಮಾಗುವ ಕಾಲ; ಚಿಂತನೆಗಳಿಂದ ಪಕ್ವಗೊಳ್ಳುವ ಕಾಲ: ಹತ್ತಾರು ಮಳೆಗಾಲ, ಬೇಸಿಗೆ, ಸಾವಿರಾರು ಬೆಳುದಿಂಗಳನ್ನು ಕಂಡಿರುವ ವೈ.ಕೆ.ಆರ್ ಅವರ ವ್ಯಕ್ತಿತ್ವ ಮತ್ತು ರಾಜಕಾರಣದ ಜೀವನ ಈಗ ಹದವಾಗಿ ಮಾಗುತ್ತಿದೆ.

ಈ ಸಂದರ್ಭದಲ್ಲಿ ಸುದೀರ್ಘ ಬದುಕಿನ ಪಯಣದಿಂದ ಹುರಿಗಟ್ಟಿದ ಅವರ ವ್ಯಕ್ತಿತ್ವದ ಹಲವು ಮುಖಗಳನ್ನು, ಅವರ ರಾಜಕಾರಣದ ಧ್ಯಾನವನ್ನು ಒಳಗೊಂಡು ಮೈತಳೆದಿರುವ ಮಹತ್ವಪೂರ್ಣವಾದ ಹೊತ್ತಗೆ 'ಜೀವನದಿ'.

ತಾಂತ್ರಿಕವಾಗಿ ಇದೊಂದು ಅಭಿನಂದನಾ ಗ್ರಂಥ. ಆದರೆ, ವ್ಯಕ್ತಿ ಕೇಂದ್ರಿತವಾದ ಅಭಿನಂದನಾ ಗ್ರಂಥಗಳ ಚೌಕಟ್ಟನ್ನು ಮೀರಿ, ವಿಷಯ ಕೇಂದ್ರಿತವಾದ, ಸಮಕಾಲೀನ ರಾಜಕಾರಣದ ಚರ್ಚೆಗೆ ಪೂರಕವಾಗಿ ಹಾಗೂ ಕರ್ನಾಟಕ ರಾಜಕಾರಣದ ಅಭಿವೃದ್ಧಿಯ ಚರಿತ್ರೆಯಂತೆ ರೂಪಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

- 2 -

ಸಂವೇದನಾಶೀಲ ಜನಪ್ರತಿನಿಧಿಯೊಬ್ಬನ ನೈತಿಕ ಹೊಣೆಗಾರಿಕೆಯು ಎಷ್ಟೆಲ್ಲ ರೀತಿಗಳಿಂದ ವಿಶಾಲವಾದುದು ಎಂಬುದನ್ನು ಜೀವನದಿ ಗ್ರಂಥದಲ್ಲಿ ಹಾಸುಹೊಕ್ಕಾಗಿರುವ ವೈ.ಕೆ.ಆರ್ ಅವರ ಸಾರ್ವಜನಿಕ ಬದುಕಿನ ವಿವರಗಳನ್ನು ಅಧ್ಯಯನ ಮಾಡಿದಾಗ ಖಚಿತವಾಗಿ ತಿಳಿದುಬರುತ್ತದೆ. ರಾಮಕೃಷ್ಣ ಹೆಗಡೆಯವರ ಮಂತ್ರಿಮಂಡಲಕ್ಕೆ ರಾಜೀನಾಮೆ ಕೊಟ್ಟ ಸಂದರ್ಭದಲ್ಲಿ 'ನನಗೆ ಮಂತ್ರಿಗಿರಿ ಕೊಡಬೇಡಿ' ಎಂದು ಮುಖ್ಯಮಂತ್ರಿಯವರಿಗೆ ಪತ್ರ ಬರೆದದ್ದು, ವೇಷ ಮರೆಸಿಕೊಂಡು ರಾಮನಗರದಲ್ಲಿ ಮುಗ್ಧರೂ, ಕಡುಬಡವರೂ ಆದ ರೇಷ್ಮೆ ಬೆಳೆಗಾರರ ಕಷ್ಟಗಳನ್ನು ಕಣ್ಣಾರೆ ಕಂಡಿದ್ದು, ಹೇಮಾವತಿ ನೀರಿಗಾಗಿ ಜೈಲುವಾಸ, ದೇವೇಗೌಡರೊಂದಿಗಿನ ತಾತ್ವಿಕ ಭಿನ್ನಾಭಿಪ್ರಾಯ, ಚುನಾವಣೆಗಳ ಸೋಲು-ಗೆಲುವು, ಗಿಡ-ಮರಗಳನ್ನು ನೆಡುವ ಪಾದಯಾತ್ರೆ.... ಇವೆಲ್ಲವೂ ರಾಮಯ್ಯನವರ ತುಂಬು ವ್ಯಕ್ತಿತ್ವದ ವಿಭಿನ್ನವೂ, ವರ್ಣರಂಜಿತವೂ ಆದ ಅಧ್ಯಾಯಗಳಾಗಿವೆ. ಸಮಾಜದ ಪ್ರಗತಿಗಾಗಿ, ಜನತೆಯ ಸಂಕಷ್ಟಗಳಿಗೆ, ಸಮಸ್ಯೆಗಳಿಗೆ ಮಿಡಿಯುವ ಸೂಕ್ಷ್ಮ ಮನಸ್ಸಿನ ಪ್ರಾಮಾಣಿಕ ಜನಪ್ರತಿನಿಧಿಯೊಬ್ಬ ಹೇಗಿರಬಲ್ಲ ಎನ್ನುವುದನ್ನು ಈ ವಿವರಗಳು ಸ್ಪಷ್ಟಪಡಿಸುತ್ತವೆ. ತತ್ವಬದ್ಧ ನಡವಳಿಕೆ ಮತ್ತು ಸತ್ಯಸಂಧತೆಯ ಸಾಕ್ಷಾತ್ ಪ್ರತೀಕವಾಗಿ ಬದುಕಿದ ಕರ್ನಾಟಕದ ಹೆಮ್ಮೆಯ ರಾಜಕಾರಣಿ ಶಾಂತವೇರಿ ಗೋಪಾಲಗೌಡರ ನಂತರ, ಕನ್ನಡ ಜನತೆ ಮತ್ತು ನಮ್ಮ ಎಲ್ಲ ಸುದ್ದಿ ಮಾಧ್ಯಮಗಳು ನಿರಂತರವಾಗಿ ಮೆಚ್ಚುಗೆ, ಅಭಿಮಾನಗಳನ್ನು ಪ್ರಕಟಿಸಿರುವುದು ಬಹುಶಃ ವೈ.ಕೆ. ರಾಮಯ್ಯ ಅವರೊಬ್ಬರ ಬಗ್ಗೆ ಮಾತ್ರ ಎಂಬುದನ್ನು ನಾವು ಮನಗಾಣಬಹುದಾಗಿದೆ. ಇಂತಹ ಚೈತನ್ಯವಂತರು ಮಾತ್ರ ಅಧಿಕಾರದಲ್ಲಿರಲಿ, ಇಲ್ಲದಿರಲಿ, ಆದರ್ಶಗಳಿಗೆ ಅಂಟಿಕೊಂಡು, ಯಾವುದೇ ಕೊಳಕಿನ ಜೊತೆಗೆ ಎಂದೂ ರಾಜಿ ಮಾಡಿಕೊಳ್ಳದೆ ಬದುಕಬಲ್ಲರು, ಹೀಗೆ ಸದಾಕಾಲ ನಿಷ್ಠುರವಾಗಿ ಬದುಕುವ ಜನಪ್ರತಿನಿಧಿಗಳನ್ನು ನಾಡಿನ ಸದಭಿರುಚಿಯ ಮನಸ್ಸು ನಿರಂತರವಾಗಿ ಗೌರವಿಸುತ್ತಲೇ ಬಂದಿದೆ.

ಬಯಲುಸೀಮೆಯ ಹಳ್ಳಿಗಾಡಿನಲ್ಲಿ ರೇಷ್ಮೆ ಕೃಷಿಯನ್ನೇ ಅವಲಂಬಿಸಿದ್ದ ಕೂಡು ಕುಟುಂಬವೊಂದರಿಂದ ಬಂದ ವೈ.ಕೆ. ರಾಮಯ್ಯನವರ ಆಸಕ್ತಿಯು ರೇಷ್ಮೆ ಬೆಳೆಗಾರರನ್ನು ಕುರಿತು ಇದ್ದದ್ದು ಆಶ್ಚರ್ಯವಲ್ಲ ! ರೇಷ್ಮೆಬೆಳೆಗಾರನ ಬವಣೆಗಳನ್ನೆಲ್ಲಾ ಸ್ವತಃ ಅನುಭವಿಸಿದ್ದ ಇವರು

ಕರ್ನಾಟಕ ಸರ್ಕಾರದಲ್ಲಿ ರೇಷ್ಮೆ ಮಂತ್ರಿಯಾದ ನಂತರ ಕೈಗೊಂಡ ನಿರ್ಧಾರಗಳು ಚಾರಿತ್ರಿಕವಾದವು. ಬೆಳೆಗಾರರಿಗೆ ಬೋನಸ್ ನೀಡಿಕೆ, ಗೂಡು ಮಾರಾಟ ಕೇಂದ್ರಗಳ ಸ್ಥಾಪನೆ, ಚಾಕಿ ಸಾಕಾಣಿಕೆ ಕೇಂದ್ರಗಳ ನಿರ್ಮಾಣ, ರೇಷ್ಮೆ ಆಮದು ನೀತಿ ವಿರುದ್ಧ ತರ್ಕಬದ್ಧವಾಗಿ ಹೋರಾಡಿದ್ದು ಇವೆಲ್ಲವೂ ರೈತರಲ್ಲಿ ಹೊಸ ಚೈತನ್ಯ ತಂದವು. ಆದ್ದರಿಂದಲೇ ''ನೊಂದವರ ನೋವ ನೋಯದವರೆತ್ತ ಬಲ್ಲರು?'' ಎನ್ನುವ ವಚನದಂತೆ ರೇಷ್ಮೆ ಬೆಳೆಗಾರನ ಸಂಕಷ್ಟಗಳನ್ನು ಪರಿಹರಿಸಲು ರೇಷ್ಮೆ ಬೆಳೆಗಾರನ ಮಗನೆ ಮಂತ್ರಿಯಾಗಿ ಬರಬೇಕಾಯಿತು. ಈ ಹಿನ್ನೆಲೆಯಲ್ಲಿಯೇ ಬಿಳಿಕಾಲರಿನ ಅಧಿಕಾರಶಾಹಿಯ ಬಗೆಗೆ ರಾಮಯ್ಯನವರು ತೋರುವ ಆಕ್ರೋಶ ನೈತಿಕವಾಗಿ ಸರಿಯಾದದ್ದೇ ಆಗಿದೆ. ಹಾಗೆ ನೋಡಿದರೆ, ಇವತ್ತಿಗೂ ಕೂಡ ರೇಷ್ಮೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಅಧಿಕಾರಯುತವಾಗಿ ಮಾತಾಡಬಲ್ಲ ಜನಪ್ರತಿನಿಧಿಯೆಂದರೆ ರಾಮಯ್ಯ ಒಬ್ಬರೇ ಎನ್ನುವುದು ನಿರ್ವಿವಾದವಾದ ಸಂಗತಿಯಾಗಿದೆ. ಶಾಸನ ಸಭೆಯಲ್ಲಿ ರೇಷ್ಮೆ ಬೆಳೆಗಾರರ ಕಷ್ಟ-ಸುಖಗಳನ್ನು ಕುರಿತು ಮಾತನಾಡಿದ ಇವರ ಭಾಷಣಗಳಲ್ಲಿ ಕಂಡುಬರುವ ವಿದ್ವತ್ತು ಮತ್ತು ರೈತಸಮೂಹದ ಭವಿಷ್ಯದ ಬಗೆಗಿನ ಇವರ ಮುನ್ನೋಟಗಳು ಶ್ರಮಜೀವಿಗಳ ಬದುಕನ್ನು ಕುರಿತ ಅಕ್ಕರೆಯ ಪ್ರತೀಕವಾಗಿವೆ.

ರಾಮಯ್ಯನವರ ರಾಜಕೀಯ ಜೀವನದ ಎರಡನೆಯ ಘಟ್ಟವು ಸಂಪೂರ್ಣವಾಗಿ ನೀರಾವರಿಗೆ ಸಂಬಂಧಿಸಿದ್ದು. ದಶಕಗಳ ಕಾಲ ತಮಗೆ ಅತ್ಯಂತ ಆತ್ಮೀಯರಾದ ಹಿರಿಯ ಒಡನಾಡಿಯೂ, ಹಿತೈಷಿಯೂ ಆಗಿದ್ದ ಹರದನಹಳ್ಳಿ ದೇವೇಗೌಡರ ನಿಕಟ ಸಂಪರ್ಕದಿಂದಾಗಿ ಇವರ ಆಸಕ್ತಿಯು ರೇಷ್ಮೆಯಿಂದ ನೀರಾವರಿ ಕ್ಷೇತ್ರಕ್ಕೆ ಪಲ್ಲಟವಾಯಿತು. ಇದರಿಂದಾಗಿ ತುಮಕೂರು ಜಿಲ್ಲೆಯ ಬಹುಭಾಗ ಮತ್ತು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಜನತೆಯ ಬಹುದಿನದ ಕನಸು ಈಡೇರಿದಂತಾಯಿತು. 1972ರಲ್ಲೇ ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಹರಿಸಬೇಕೆಂಬ ಹಂಬಲ ಹೊಂದಿದ್ದ ವೈ.ಕೆ.ಆರ್ ಅವರ ಕನಸು ಇದೀಗ ನನಸಾಗಿದೆ. **ಜನತೆಗಾಗಿ ಒಳ್ಳೆಯದನ್ನು ಮಾಡಬೇಕೆನ್ನುವ ಇಚ್ಛಾಶಕ್ತಿಯುಳ್ಳ ಜನಪ್ರತಿನಿಧಿಯೊಬ್ಬ ಮನಸ್ಸು ಮಾಡಿದರೆ ಏನನ್ನಾದರೂ ಸಾಧಿಸಬಲ್ಲ ಎನ್ನುವುದಕ್ಕೆ ಹೇಮಾವತಿಯು ತುಮಕೂರಿಗೆ ಹರಿದು ಬಂದ ಯಶೋಗಾಥೆಯು ನಮ್ಮ ಕಣ್ಣೆದುರಿಗಿದೆ.** ಹಾಗೆ ನೋಡಿದರೆ **''ಹೇಮಾವತಿ''** ರಾಮಯ್ಯನವರ ಅಂತರಂಗದಲ್ಲಿ ಇನ್ನಿಲ್ಲದಂತೆ ವ್ಯಾಪಿಸಿದ ಕನಸಿನ ಮಹಾಕಾವ್ಯ. ಇದಕ್ಕಾಗಿ ಇವರು ಧರಣಿ ಸತ್ಯಾಗ್ರಹ, ಸೆರೆಮನೆವಾಸವೇ ಮುಂತಾದ ಹಲವಾರು ಬಗೆಯ ಪ್ರಮಾಣಗಳ ಹೋರಾಟಗಳ ಸರಣಿಯನ್ನೇ ಕೈಗೊಂಡಿದ್ದರು. ರಾಮಯ್ಯನವರ ಈ ನಿರಂತರ ಹೋರಾಟಕ್ಕೆ ತುಮಕೂರು ಜಿಲ್ಲೆಯ ಜನಸಮೂಹ ಮತ್ತು ಸಂವೇದನಾಶೀಲ ಪತ್ರಕರ್ತರ ತಂಡ ಇವರಿಗೆ ನೈತಿಕ ಬೆಂಬಲವನ್ನು ನೀಡಿದವು. ದೇವೇಗೌಡರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ, ನೀರಿಗಾಗಿ ಸತ್ಯಾಗ್ರಹ ಮಾಡುತ್ತಿದ್ದ ರಾಮಯ್ಯ ಮತ್ತು ಅವರ ಬೆಂಬಲಿಗರನ್ನು ಸರ್ಕಾರ ಜೈಲಿಗೆ

ನೂಕಿತು. ಅಂದು ಜೈಲಿನಲ್ಲೇ ಯುಗಾದಿ ಹಬ್ಬ ಆಚರಿಸಿದ ರಾಮಯ್ಯನವರನ್ನು ಬಿಡುಗಡೆ ಮಾಡಬೇಕೆಂದು ವಿರೋಧಪಕ್ಷಗಳ ನಾಯಕರು ಮತ್ತು ಪತ್ರಿಕೆಗಳು ಒಕ್ಕೊರಲಿನಿಂದ ದನಿಯೇರಿಸಿದ್ದು ಮರೆಯಲಾರದ ಸಂಗತಿ.

ರಾಮಯ್ಯನವರು ತೋಟಗಾರಿಕಾ ಮಂತ್ರಿಯಾಗಿದ್ದಾಗ, ತಮ್ಮ ಕಾರಿನಲ್ಲಿ ಹತ್ತಾರು ಜಾತಿಯ ಹಣ್ಣಿನ ಗಿಡಗಳ ಜೊತೆಗೆ ಹಾರೆ, ಪಿಕಾಸಿ ಮತ್ತು ಗುದ್ದಲಿಗಳನ್ನು ಕೊಂಡೊಯ್ಯುತ್ತಿದ್ದರು. ತಾವೇ ಸ್ವತಃ ಅಗೆದು, ಪಾತಿ ಕಟ್ಟಿ ಗಿಡ ನೆಡುವುದನ್ನು ಸಹ ನೌಕರರಿಗೆ ಹೇಳಿಕೊಡುತ್ತಿರು. ತಾವು ಹೋದಲ್ಲೆಲ್ಲಾ ಸ್ನೇಹಿತರಿಗೆ ಹಣ್ಣಿನ ಗಿಡಗಳನ್ನು ಹಂಚುತ್ತಿದ್ದರು. ಆ ದಿನಗಳಲ್ಲಿ ಇವರನ್ನು ಜನರೆಲ್ಲಾ ಪ್ರೀತಿಯಿಂದ 'ಹಾರೆ ಗುದ್ದಲಿ ಮಂತ್ರಿ' ಎಂದು ಕರೆಯುತ್ತಿದ್ದರಂತೆ. ಇದನ್ನೆಲ್ಲಾ ನಾನು ತೋಟಗಾರಿಕೆ ಇಲಾಖೆಯಲ್ಲಿ ಅನೇಕ ವರ್ಷಗಳ ಕಾಲ ಅಧಿಕಾರಿಯಾಗಿದ್ದ ಕಂಬಯ್ಯನವರಿಂದ ಕೇಳಿ ತಿಳಿದೆ. ಇದರಲ್ಲಿ ಆಶ್ಚರ್ಯವಂತೂ ಇಲ್ಲವೇ ಇಲ್ಲ. ಏಕೆಂದರೆ ರಾಮಯ್ಯನವರು ಈ ನೆಲದ ರೈತರ ಕೈತುತ್ತು ತಿಂದು ಬೆಳೆದ ವ್ಯಕ್ತಿ. ಆದ್ದರಿಂದಲೇ ಈ ಬಗೆಯ ಕಾಳಜಿಗಳು ಅವರ ನಡೆ-ನುಡಿಯಲ್ಲಿ ಒಂದಾಗಿ ಬೆರೆತಿವೆ.

ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಬರುವ ಕೊನೆಯ ಘಟ್ಟದಲ್ಲಿ ರಾಮಯ್ಯನವರ ವ್ಯಕ್ತಿತ್ವದಲ್ಲಿ ಆದ ಸಣ್ಣ ಬದಲಾವಣೆ ಕಂಡೂ ಕಾಣದಂತಿದೆ. ಮೂಲತಃ ಸಂಘರ್ಷದ ಹಾದಿಯಲ್ಲಿ ಪಳಗಿರುವ ರಾಮಯ್ಯನವರು ''ಸೌಲಭ್ಯ ಮತ್ತು ಸವಲತ್ತುಗಳನ್ನು ಪಡೆದುಕೊಳ್ಳಲು ಸಂಘರ್ಷವಷ್ಟೇ ಮುಖ್ಯವಲ್ಲ! ಈ ವ್ಯವಸ್ಥೆಯಲ್ಲಿ ಸ್ವಾಭಿಮಾನವನ್ನು, ಜನಪರ ಕಾಳಜಿಗಳನ್ನೂ ಬಿಡದೆ ಎಲ್ಲರ ಸಹಕಾರದಿಂದಲೂ ಜನಪರವಾದ ಕಾರ್ಯಗಳನ್ನು ಮಾಡಿಸ ಬೇಕಾಗುತ್ತದೆ'' ಎಂಬ ನಿಲುವಿಗೆ ಬಂದರು. ''ಹೇಮಾವತಿಯ ನೀರು ತುಮಕೂರು ಜಿಲ್ಲೆಗೆ ಹರಿಯಬೇಕಾದರೆ ನಾನು ಯಾರ ಕಾಲನ್ನಾದರೂ ಹಿಡಿಯುತ್ತೇನೆ, ಎಂಥವರನ್ನಾದರೂ ಸಹಿಸಿಕೊಳ್ಳುತ್ತೇನೆ. ಆದರೆ ನನಗೆ ಈ ಮಹತ್ ಕಾರ್ಯ ನೆರವೇರುವುದು ಎಲ್ಲಕ್ಕಿಂತ ಬಹಳ ಮುಖ್ಯ'' ಎಂದು ಪತ್ರಕರ್ತರ ಮುಂದೆ ಹೇಳಿದ್ದನ್ನು ನಾನು ಕೇಳಿದ್ದೇನೆ. ಆದ್ದರಿಂದಲೇ ರಾಮಯ್ಯನವರನ್ನು ಕುರಿತು ಯಾರೇ ಬರೆಯಲಿ, ಅವರು ಮೊದಲು ವೈ.ಕೆ.ಆರ್ ಅವರ ನಿರ್ದಾಕ್ಷಿಣ್ಯ ಪ್ರವೃತ್ತಿಯನ್ನು ಕುರಿತು ಮೊದಲು ತಿಳಿಸಿಯೇ ಮುಂದಿನದನ್ನು ಆರಂಭಿಸುತ್ತಾರೆ. ಈ ಕೃತಿಯ ಉದ್ದಕ್ಕೂ ವೈ.ಕೆ.ಆರ್ ಅವರ ವ್ಯಕ್ತಿತ್ವದಲ್ಲಿರುವ ಈ ಬಗೆಯ ಆರೋಗ್ಯದಾಯಕ ಗುಣದ ನಾನಾ ಮುಖಗಳನ್ನು ಕಾಣಬಹುದಾಗಿದೆ.

ನೌಕರಶಾಹಿಯ ಮಿತಿಮೀರಿದ ಭ್ರಷ್ಟಾಚಾರ ಹಾಗೂ ವಿಳಂಬ ನೀತಿಯ ವಿರುದ್ಧ ಪ್ರಖರವಾಗಿ ಸಿಡಿದೇಳುವ ರಾಮಯ್ಯನವರು ಕೊಳೆತಮನಸ್ಸಿನ ಕೋಮುವಾದಿಗಳ ವಿರುದ್ಧವೂ ಕೆಂಡಾಮಂಡಲವಾಗುತ್ತಾರೆ. ಬಾಬರೀ ಮಸೀದಿಯನ್ನು ಕೋಮುವಾದಿಗಳು ಧ್ವಂಸಮಾಡಿದ

ಸಂದರ್ಭದಲ್ಲಿ ರಾಮಯ್ಯನವರು ಶಾಸನಸಭೆಯಲ್ಲಿ ಮಾಡಿದ ಭಾಷಣ ಅರ್ಥಪೂರ್ಣವಾದದ್ದು. ಕುವೆಂಪು ಅವರ ಕವಿತೆಗಳ ಮೂಲಕವೇ ತಮ್ಮ ವಾದವನ್ನು ವಿಸ್ತರಿಸುವ ರಾಮಯ್ಯನವರ ವಿಚಾರಧಾರೆಯು ಬೆರಗು ಹುಟ್ಟಿಸುತ್ತದೆ. ಸಮಕಾಲೀನ ರಾಜಕಾರಣಿಗಳಲ್ಲಿ ವಿರಳವಾಗುತ್ತಿರುವ, ಪೂರ್ವ ಸಿದ್ಧತೆ ಹಾಗೂ ಸಾಹಿತ್ಯ, ಸಂಸ್ಕೃತಿ, ಇತಿಹಾಸದ ಬಗೆಗಿನ ಅರಿವು ಇವರಲ್ಲಿ ಎದ್ದುಕಾಣುತ್ತದೆ. ಇಂತಹ ನಿರಾಶಾದಾಯಕವಾದ ವಾತಾವರಣದ ನಡುವೆಯೂ ಕೂಡ ರಾಮಯ್ಯನವರಂತಹ ಅಧ್ಯಯನಶೀಲ ಜನಪ್ರತಿನಿಧಿಗಳಿರುವುದು ಹೆಮ್ಮೆ ಪಡುವಂತಹ ವಿಚಾರವಾಗಿದೆ. ರಾಮಯ್ಯನವರ ಶಾಸನಸಭೆಯ ಭಾಷಣಗಳ ಕಟ್ಟನ್ನು ಗ್ರಹಿಸಿದರೆ ಈ ಮಾತು ನಿಚ್ಚಳವಾಗುತ್ತದೆ. ಸಾರ್ವಜನಿಕ ಹಿತಾಸಕ್ತಿಯ ಕಾರಣಗಳಿಗಾಗಿ ಇವರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಪತ್ರಗಳೂ ಕೂಡ ರಾಮಯ್ಯನವರಲ್ಲಿರುವ ಜನತೆಯ ಪರವಾದ ಕಾಳಜಿಗಳ ತೀವ್ರತೆಯನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತವೆ.

ಹಾಗೆಯೇ ವಿವಿಧ ಕಾಲಘಟ್ಟಗಳಲ್ಲಿ ಪ್ರಕಟವಾದ ಸಂದರ್ಶನಗಳು, ರಾಮಯ್ಯನವರ ಎಲ್ಲ ರೀತಿಯ ಹೋರಾಟಗಳು, ಸತ್ಯಾಗ್ರಹ, ಪಾದಯಾತ್ರೆ ಹಾಗೂ ಜನತೆಯ ಒಡನಾಡಿಯಾಗಿ ಸ್ಪಂದಿಸಿದ ವಿವಿಧ ಪ್ರಕರಣಗಳ ಸೂಕ್ಷ್ಮಗಳನ್ನು ಕರಪತ್ರಗಳಲ್ಲಿ ಕಾಣಬಹುದಾಗಿದೆ. ಒಂದು ಕಾಲಘಟ್ಟದ ಒಟ್ಟು ಸಾಂಸ್ಕೃತಿಕ ಇತಿಹಾಸದ ಸಂವೇದನಾಶೀಲವಾದ ಸಂಪೂರ್ಣ ಗ್ರಹಿಕೆಗೆ ನೆರವಾಗುವ ಅಪರೂಪದ ದಾಖಲೆಗಳನ್ನು ಈ ಹೊತ್ತಗೆಯಲ್ಲಿ ಅಡಕಗೊಳಿಸಲಾಗಿದೆ. ವೈ.ಕೆ. ರಾಮಯ್ಯನವರ ವ್ಯಕ್ತಿತ್ವ ಮತ್ತು ಸಾಧನೆಯ ನಾನಾ ಮುಖಗಳನ್ನು ಕುರಿತು ವಿವಿಧ ರಂಗಗಳ ಗಣ್ಯರು, ಪತ್ರಕರ್ತರು, ಮತದಾರ ಪ್ರಭುಗಳು ಮತ್ತು ಸಂವೇದನಾಶೀಲ ಬರಹಗಾರರ ಲೇಖನಗಳು ಹಾಗೂ ಅನ್ನಿಸಿಕೆಗಳು **ಜೀವನದಿ ಅಭಿನಂದನಾ ಸಂಪುಟ**ದ ಪ್ರಮುಖ ಭಾಗವಾಗಿವೆ. ನಮ್ಮ ಹಳ್ಳಿಗಾಡಿನ ಅತ್ಯಂತ ಶ್ರಮಜೀವಿ ಕುಟುಂಬದ ವಿವೇಕಶೀಲ ತರುಣನಾಗಿ ಮೂಡಿಬಂದ ವೈ.ಕೆ.ರಾಮಯ್ಯನವರ ಚಿಂತನೆಯ ಆಳ-ಅಗಲಗಳು ಮತ್ತು ಈ ಸಂಬಂಧದ ಅವರ ಶ್ರದ್ಧೆ, ಪ್ರಾಮಾಣಿಕತೆಯ ನಾನಾ ಮಗ್ಗುಲುಗಳನ್ನು ಅರ್ಥಮಾಡಿಕೊಳ್ಳಲು ಈ ಗ್ರಂಥವು ಇನ್ನಿಲ್ಲದಂತೆ ನೆರವಾಗುತ್ತದೆ.

ಅಂತಿಮವಾಗಿ ಈ ಸಂಪುಟದ ಉದ್ದಗಲಕ್ಕೂ ರಾಮಯ್ಯನವರಲ್ಲಿ ಸದಾ ಕಂಡುಬರುವ ಜನತೆಯ ಸಂಬಂಧದ ಹಚ್ಚಹಸುರಿನಂಥ ಕಾಳಜಿಗಳು, ಪಾರದರ್ಶಕತೆಯ ನಡೆ-ನುಡಿ, ಸಾರ್ವಜನಿಕ ಜೀವನದಲ್ಲಿನ ಪ್ರಾಮಾಣಿಕತೆ, ಸತ್ಯದ ದಾರಿಯಲ್ಲಷ್ಟೆ ನಡೆಯುವ ಹೆಬ್ಬಯಕೆ, ವೈಚಾರಿಕತೆಯ ಸ್ಪಷ್ಟ ನಿಲುವುಗಳು ಮುಂತಾದ ಗುಣಗಳು ಅಂತರ್ಜಲದಂತೆ ಹರಿದಿರುವುದು ಅರಿವಿಗೆ ಬರುತ್ತದೆ. ಆದ್ದರಿಂದ ರಾಮಯ್ಯನವರ ವ್ಯಕ್ತಿತ್ವಕ್ಕೆ ಒಂದು ಬಗೆಯ ಜಲದ ಗುಣವಿದೆ. ಅಂದರೆ ತಾನು ಹರಿದ ಜಾಗವನ್ನೆಲ್ಲಾ ಫಲವತ್ತಾಗಿಸುವ, ತಾನು ತಂಗಿದ ಜಾಗದಲ್ಲಿ ಸಕಲ ಜೀವಿಗಳಿಗೂ ತಂಪನೆರೆಯುವ ಹರಿವ ನೀರಿನ ಗುಣ.

ಅದ್ಯಾವ ಕಾರಣವೂ ಗೊತ್ತಿಲ್ಲ ! ಜನತೆಯ ಏಳಿಗೆಯ ಸಂಬಂಧದಲ್ಲಿ, ವಿವಿಧ ಪ್ರಮಾಣದಲ್ಲಿ ತಮ್ಮನ್ನು ತೆತ್ತುಕೊಂಡ ಜನಪ್ರತಿನಿಧಿಗಳ ಚಿಂತನೆ, ಕಾರ್ಯಶೈಲಿ, ಬದುಕು ಮತ್ತು ಬರಹ ಹೀಗೆ ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ದಾಖಲಿಸುವ ಪ್ರಯತ್ನಗಳು ನಮ್ಮಲ್ಲಿ ನಡೆದಿರುವುದು ತುಂಬಾ ವಿರಳ. ಈ ಹಿನ್ನೆಲೆಯಲ್ಲಿ ಈಗಾಗಲೇ ಪ್ರಕಟವಾಗಿರುವ **'ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ'**, ಪ್ರೊ. ಕಾಳೇಗೌಡ ನಾಗವಾರ ಅವರ ಸತತ ಶ್ರಮ ಮತ್ತು ತೀವ್ರವಾದ ಆಸಕ್ತಿಯಿಂದಾಗಿ ಬೆಳಕುಕಂಡಿರುವ **'ರಾಮಮನೋಹರ ಲೋಹಿಯಾ ಅವರ ಸಮಗ್ರ ಬರಹಗಳ ಸಂಪುಟಗಳು'** ಈ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ತುಂಬುವ ಪ್ರಯತ್ನಗಳಾಗಿವೆ. ವೈಚಾರಿಕತೆಯ ಸ್ಪರ್ಶಮಣಿಯಂತಿರುವ ಈ ಬಗೆಯ ದಾಖಲೆಗಳು, ಸಾರ್ವಜನಿಕ ಜೀವನಕ್ಕೆ ಪ್ರವೇಶಿಸುವ ಹೊಸಜನಾಂಗದ ಪ್ರಜ್ಞೆಯನ್ನು ವಿವೇಕದ ದಾರಿಯಲ್ಲಿ ಕೊಂಡೊಯ್ಯಲು ಸಹಕಾರಿಯಾಗುತ್ತವೆ. ಹಾಗೂ ಒಂದು ಕಾಲಘಟ್ಟದ ಸಾಮಾಜಿಕ ಚರಿತ್ರೆಯ ನಿರ್ವಚನಕ್ಕೆ ವಿಚಿತ್ರವಾದ ಒಳನೋಟಗಳನ್ನು, ಸೂಕ್ಷ್ಮಗಳನ್ನು ಕಟ್ಟಿಕೊಡಬಲ್ಲವಾಗಿರುತ್ತವೆ. ಕೋಮುವಾದಿಗಳ ವಿಕಟ ಅಟ್ಟಹಾಸದಿಂದ ನಲುಗುತ್ತಿರುವ ನಮ್ಮ ಈ ಸಮಾಜಕ್ಕೆ, ಜಾತ್ಯತೀತವಾಗಿ ಬಾಳಿ-ಬದುಕಿದ, ತಮ್ಮ ಇತಿ-ಮಿತಿಗಳ ನಡುವೆಯೂ ಸಾಮಾಜಿಕ ಜೀವನವನ್ನು ಚಲನಶೀಲಗೊಳಿಸಿದ ಕಡು ಆದರ್ಶವಾದಿಗಳನ್ನು ಕುರಿತು ಹೊರತರುವ ಸಾಂಸ್ಕೃತಿಕ ಕಥನಗಳಿಂದ ಇಡೀ ನಾಡಿನಲ್ಲಿ ಹೊಸ ಚೈತನ್ಯವನ್ನು ತುಂಬಬಹುದಾಗಿದೆ. ವಾಸ್ತವವಾಗಿ **ಜೀವನದಿ** ಈ ಬಗೆಯ ತಾತ್ವಿಕ ಆಶಯಗಳನ್ನಿಟ್ಟುಕೊಂಡು ರೂಪುತಳೆದಿರುವ ಸಂಪುಟವಾಗಿದೆ.

**- 3 -**

ಹಾಗೆ ನೋಡಿದರೆ **ಜೀವನದಿ** ಗ್ರಂಥವು ಮೈತಳದದ್ದೇ ಒಂದು ಆನಂದದಾಯಕ ಕಥನವಾಗಿದೆ. ಪ್ರೊ. ಕಾಳೇಗೌಡ ನಾಗವಾರ ಅವರು ಮತ್ತು ನಾನು ಒಂದು ತುಂಬು ಬೆಳುದಿಂಗಳ ಹಾಸಿನ ನಡುವೆ ಮಾತನಾಡುತ್ತಾ ಕುಳಿತಿದ್ದೆವು. ಹಾಲುಬೆಳುದಿಂಗಳು ದಟ್ಟವಾಗುತ್ತಿದ್ದಂತೆಲ್ಲಾ ನಮ್ಮ ಮಾತುಕತೆಯು ಇನ್ನಷ್ಟು ವ್ಯಾಪಕವಾಗುತ್ತಾ ಸಿಕ್ಕಿದ್ದನ್ನೆಲ್ಲಾ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಿತ್ತು. ಈ ನಡುವೆ ವೈ.ಕೆ.ಆರ್ ಅವರ ಪ್ರಸ್ತಾಪವೂ ಸುಳಿದು ಹೋಯಿತು. ಆಗ ನಾಗವಾರರು ''ನೋಡಿ, ನಮ್ಮ ಸಾಂಸ್ಕೃತಿಕ ವಲಯ ಇಂದು ತುಂಬಾ ಜಡವಾಗಿದೆ ಹಾಗೂ ಏಕಮುಖವಾಗಿದೆ. ಇಡೀ ಸಮಾಜಕ್ಕಾಗಿ ತನ್ನನ್ನು ತೆತ್ತುಕೊಂಡು, ಆದರ್ಶಗಳ ಬೆನ್ನುಹತ್ತಿ ಉದ್ದಕ್ಕೂ ಪ್ರಾಮಾಣಿಕವಾಗಿ ಬದುಕಿಬಂದ ಅನೇಕ ಜನಪ್ರತಿನಿಧಿಗಳು ನಮ್ಮ ಕಣ್ಣುಮುಂದೆಯೇ ಬಂದು ಹೋಗಿದ್ದಾರೆ. ಅವರ ಬಗ್ಗೆ ಉಪಯುಕ್ತವಾದ ಹೆಚ್ಚಿನ ದಾಖಲೆಗಳು, ನೆನಪುಗಳು ನಮ್ಮಲ್ಲಿ ಉಳಿದಿಲ್ಲದಿರುವುದು ನೋವಿನ ಸಂಗತಿ. ಕೆಂಗಲ್ ಹನುಮಂತಯ್ಯನವರು ನಮ್ಮ ಶ್ರೇಷ್ಠ ಆಡಳಿತಗಾರರಲ್ಲಿ ಒಬ್ಬರಾಗಿದ್ದರು. ನಮ್ಮೆಲ್ಲರ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ಅರಿತವರಾಗಿದ್ದರು. ಆ ಸಂಬಂಧದಲ್ಲಿ ಹೆಚ್ಚಿನ ವಿವರಗಳು ನಮ್ಮಲ್ಲಿ ಇಲ್ಲ. ನಮ್ಮ ವಿಚಾರವಾದಿಗಳಲ್ಲಿ

ಅಗ್ರಪಂಕ್ತಿಗೆ ಸೇರಬಲ್ಲವರಾಗಿದ್ದ, ಜನಪ್ರಿಯತೆಯ ಹಂಗನ್ನು ತೊರೆದು ಸತ್ಯ ಹೇಳಿ, ಸದಾ ಮೌಢ್ಯ ವಿರೋಧಿ ಚಟುವಟಿಕೆಗಳಲ್ಲಿ ನಿರತರಾಗಿರುತ್ತಿದ್ದ ಬಿ. ಬಸವಲಿಂಗಪ್ಪನವರ ಸಾಧನೆಯ ಬೇರೆ ಬೇರೆ ಮುಖಗಳ ಅರಿವು ಅನೇಕರಿಗಿಲ್ಲ. ಹಾಗೆಯೇ ಇತಿಹಾಸದ ಪ್ರಮುಖ ಘಟ್ಟದಲ್ಲಿ ಅಪರೂಪದ ಸಾಮಾಜಿಕ ಕಳಕಳಿಯನ್ನು ಹೊಂದಿದ್ದ ದೇವರಾಜ ಅರಸರ ವ್ಯಕ್ತಿತ್ವವನ್ನು ಅರಿತುಕೊಳ್ಳುವ ದಿಕ್ಕಿನಲ್ಲಿ ನಡೆದಿರುವ ಪ್ರಯತ್ನಗಳು ಏನೇನೂ ಸಾಲದಾಗಿವೆ. ಅಲ್ಲದೆ ಅತ್ಯುತ್ತಮ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಹೊಂದಿದ್ದ ಡಾ. ಬೆಸರಗರಹಳ್ಳಿ ರಾಮಣ್ಣ ಅವರ ಜೀವನ ವಿಧಾನ ಕುರಿತಂತೆ ಹೆಚ್ಚಿನ ಬರಹಗಳಿಲ್ಲ. ಬದುಕಿರುವಾಗಲೇ ಎಲ್ಲ ಬಡಬಗ್ಗರು ಮತ್ತು ಸಾಹಿತ್ಯವಲಯದ ಗೆಳೆಯರನ್ನು, ವಿದ್ಯಾರ್ಥಿಗಳನ್ನು, ಪ್ರೀತಿಯಿಂದ ಕಾಣುತ್ತಲೇ ಅವರನ್ನು ಹುರಿದುಂಬಿಸುತ್ತಾ ಜೇಬನ್ನು ಬರಿದುಮಾಡಿಕೊಳ್ಳುವ ಕಿ.ರಂ. ನಾಗರಾಜರ ಬಗ್ಗೆ; ಡಾ. ಎಲ್. ಬಸವರಾಜು ಅವರ ಬದುಕಿನ ಕಡುನಿಷ್ಠೆಯ ಬಗ್ಗೆ ನಾವೆಲ್ಲ ಬರೆದು ವಿಶ್ಲೇಷಿಸಬೇಕಾಗಿದೆ. ಹಾಗೆಯೇ ಎಸ್.ಕೆ. ಕರೀಂಖಾನ್, ಎಚ್.ಡಿ. ದೇವೇಗೌಡ, ಆರ್.ಎಂ. ಹಡಪದ್, ಗಂಗೂಬಾಯಿ ಹಾನಗಲ್, ಪಿ. ಕಾಳಿಂಗರಾವ್ - ಮುಂತಾದ ಬೇರೆ ಬೇರೆ ಹಿನ್ನೆಲೆಗಳು ಮತ್ತು ಕ್ಷೇತ್ರಗಳ ಪ್ರತಿಭಾವಂತರ ವೈಶಿಷ್ಟ್ಯಪೂರ್ಣ ಅನುಭವಲೋಕದ ಸೂಕ್ಷ್ಮ ವಿವರಗಳು ಅತ್ಯವಶ್ಯವಾಗಿ ದಾಖಲಾಗಬೇಕಾಗಿದೆ. ಇಂತಹ ಚಟುವಟಿಕೆಗಳು ಮಾತ್ರ ನಮ್ಮನ್ನೆಲ್ಲ ಅರ್ಥಪೂರ್ಣವಾದುದರ ಕಡೆಗೆ ಕರೆದೊಯ್ಯಬಲ್ಲ ವೆಂಬುದನ್ನು ನಾವೆಲ್ಲ ಅರಿಯಬೇಕಾಗಿದೆ. ಹಾಗೆಯೇ ವೈ.ಕೆ. ರಾಮಯ್ಯ ಕೂಡ ನಾನು ಬಲ್ಲಂತೆ ಇದೇ ಬಗೆಯ ಜನೋಪಯೋಗಿ ಹಾದಿಯಲ್ಲಿ ನಡೆಯುತ್ತಿರುವ ಜನಪ್ರತಿನಿಧಿಯಾಗಿದ್ದಾರೆ. ಇವರ ಒಟ್ಟು ವ್ಯಕ್ತಿತ್ವವನ್ನು ಕುರಿತು ಚರ್ಚಿಸುವ ಬರಹಗಳು ಹೊರಬರಬೇಕು'' ಎಂದು ತೀರಾ ಕಳಕಳಿಯಿಂದ ಹೇಳುತ್ತಿದ್ದರು. ಅಂದೇ ಆ ಬೀಜ ನನ್ನೊಳಗೆ ಬಿದ್ದು ಮೊಳೆಯಲಾರಂಭಿಸಿತು.

ಹೀಗೆ ಬಿದ್ದಂಥ ಬೀಜವನ್ನು ನಾನೇ ನನ್ನೊಳಗೆ ಜೋಪಾನ ಮಾಡಿಕೊಂಡು ಬರುತ್ತಿದ್ದೆ. ಇದಕ್ಕೆ ಕಾರಣವೂ ಇತ್ತು! ವೈ.ಕೆ.ಆರ್ ನನ್ನ ಜಿಲ್ಲೆಯವರು ಎಂಬ ಸಣ್ಣ ವ್ಯಾಮೋಹ ಕೂಡ ಕಾರಣವಾಗಿತ್ತು. ಅದಮ್ಯ ಇಚ್ಛಾಶಕ್ತಿಯುಳ್ಳ ರಾಜಕೀಯ ನಾಯಕತ್ವದ ಕೊರತೆಯಿಂದ ನಮ್ಮ ಜಿಲ್ಲೆಯು ಬಳಲುತ್ತಿದ್ದನ್ನು ನಾನು ಮತ್ತು ನನ್ನಂತಹ ಅನೇಕ ಜನ ಪ್ರಗತಿಪರ ಯುವಕರು ಕಣ್ಣಾರೆ ಕಂಡಿದ್ದೆವು. ಆಗ ಜೀವಂತವಾಗಿದ್ದು ನಮ್ಮೊಳಗೆ ಚೈತನ್ಯ ತುಂಬುತ್ತಿದ್ದ ದಲಿತ ಚಳವಳಿ, ರೈತ ಚಳವಳಿ ಮತ್ತು ಸಮಾಜವಾದಿ ಅಧ್ಯಯನ ಕೇಂದ್ರ, ಸಾಹಿತ್ಯ-ರಂಗಭೂಮಿಯ ಒಡನಾಟ ಇವೆಲ್ಲ ನಮ್ಮನ್ನು ಆದರ್ಶದ ಉನ್ಮತ್ತ ಸ್ಥಿತಿಗೇರಿಸಿದ್ದವು. ಈ ಪ್ರಗತಿಪರ ಚಳವಳಿಗಳ ನಡುವಿನಿಂದಲೇ, ನಮ್ಮ ಜಿಲ್ಲೆಗೆ ರಾಜಕೀಯ ನಾಯಕತ್ವ ದೊರೆಯಬಹುದೆಂದು ನಾವೆಲ್ಲ ಆಸೆಗಣ್ಣಿನಿಂದ ನೋಡುತ್ತಿದ್ದೆವು. ಆಗ ಇದು ಸಾಧ್ಯವೂ ಇತ್ತು. ಆ ಬಗೆಯ ಗುಣಗಳಿದ್ದ ನನ್ನ ಕೆಲವು ಸ್ನೇಹಿತರೂ ಚಳವಳಿಗಳಲ್ಲಿದ್ದರು. ಆದರೆ ಮುಂದೆ ಕಾಲನ ಹೊಡೆತಕ್ಕೆ ಸಿಕ್ಕಿ, ನಿಲ್ಲಲಾಗದೆ ತತ್ತರಿಸುತ್ತಾ ಆ ನನ್ನ ಗೆಳೆಯರು ತಾವೇ ರೂಪಾಂತರ ಹೊಂದಿದರು. ಆದರೂ ನಮ್ಮ ಆಸೆಯ ದೀಪ ನಂದಿರಲಿಲ್ಲ.

ಆಗಿನ ನಮ್ಮ ತವಕದ ದಿನಗಳಲ್ಲಿ, ಪಕ್ಕದ ಕುಣಿಗಲ್‌ನಲ್ಲಿ ವೈ.ಕೆ. ರಾಮಯ್ಯನವರ ಹೋರಾಟಗಳು, ಸತ್ಯಾಗ್ರಹಗಳು, ಸಾಲುಮರ ನೆಡುವ ಪಾದಯಾತ್ರೆ, ಅವರ ಸಾರ್ವಜನಿಕ ಹಿತಾಸಕ್ತಿ, ಹೇಮಾವತಿಗಾಗಿ ನಿಲ್ಲದ ಹೋರಾಟ, ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನಗಳು ಇವೆಲ್ಲವನ್ನೂ ಗಮನಿಸುತ್ತಿದ್ದೆ. ಇದರಿಂದಾಗಿ ಸಹಜವಾಗಿಯೇ ಅವರಿಂದ ನಾನು ಆಕರ್ಷಿತನಾಗಿದ್ದೆ. ವಾಸ್ತವವಾಗಿ ಇವೆಲ್ಲವುಗಳ ನಡುವೆ ನಾನು ಎಂದೂ ರಾಮಯ್ಯನವರನ್ನು ಭೇಟಿ ಮಾಡಿರಲಿಲ್ಲ ! ಈ ಹಿನ್ನೆಲೆಯಲ್ಲಿ ನಾನು ಮತ್ತೊಮ್ಮೆ ಪ್ರೊ. ನಾಗವಾರ ಅವರೊಂದಿಗೆ ಎರಡು-ಮೂರು ಸಲ ಸುದೀರ್ಘವಾಗಿ ಚರ್ಚಿಸಿ, ನಾವೆಲ್ಲ ಹೆಮ್ಮೆ ಪಡಬಹುದಾದ ನಮ್ಮ ಜಿಲ್ಲೆಯ ಜನಪ್ರತಿನಿಧಿ ರಾಮಯ್ಯನವರ ಕಾರ್ಯವಿಧಾನ, ಅವರ ಪ್ರಮುಖ ಕಾಳಜಿಗಳನ್ನು ಕುರಿತು ದಾಖಲೆಗಳನ್ನು ಸಂಗ್ರಹಿಸುವ ಪ್ರಯತ್ನಕ್ಕೆ ಕೈ ಹಾಕಿದೆವು. ಅದರ ಫಲವಾಗಿಯೇ **ಜೀವನದಿ** ಸಂಪುಟ ರೂಪುಗೊಂಡು ಈಗ ನಿಮ್ಮ ಮುಂದಿದೆ.

ಈ ದಾಖಲೆ ಮತ್ತು ಮಾಹಿತಿಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ನನಗೆ ಎಡಬಿಡದೆ ನೆರವಾದವರು; ಕೆ.ಎಸ್. ಕುಮಾರಸ್ವಾಮಿ, ಟಿ. ವೆಂಕಟರಮಣ, ಎಚ್.ಎಂ. ಸಿದ್ಧಲಿಂಗಯ್ಯ, ಸಂಜೀವಪ್ಪನವರು. ಬಾ.ಹ. ರಮಾಕುಮಾರಿಯವರು ತಮ್ಮ ಬಿಡುವಿನ ಮತ್ತು ರಜೆಯ ದಿನಗಳ ನೆರವನ್ನು, ಈ ಸಂಪುಟ ರೂಪಿಸುವುದಕ್ಕಾಗಿ ಪರಿಶುದ್ಧವಾದ ಮನಸ್ಸಿನಿಂದ ನೀಡಿದ್ದಾರೆ. ನನ್ನ ಕ್ಷೇತ್ರಕಾರ್ಯದಲ್ಲಿ ಹೆಗಲೆಣೆಯಾಗಿ ಸಹಕರಿಸಿದವರು ಅಪ್ಪಾಜಿ ಮತ್ತು ವೈ.ಎಚ್. ಹುಚ್ಚಯ್ಯನವರು. ಕಲಾವಿದರಾದ ವಿ. ರಾಠೋಡ್, ಕೋಟೆಕುಮಾರ್ ಮತ್ತು ಜಿ.ಕೆ. ಶಿವಣ್ಣನವರಿಂದ ಸಾಂದರ್ಭಿಕ ನೆರವನ್ನು ಪಡೆದಿದ್ದೇನೆ. ಪುಸ್ತಕ ಮುದ್ರಣಗೊಳ್ಳುವ ಹೊತ್ತಿನಲ್ಲಿ ಅಪಾರ ಶ್ರದ್ಧೆಯಿಂದ ಜವಾಬ್ದಾರಿ ಹೊತ್ತವರು ಕೆ.ಎಲ್. ರಾಜಶೇಖರ್ ಅವರು. ಅರ್ಥಪೂರ್ಣವಾದ ಮುಖಪುಟಗಳನ್ನು ರಚಿಸಿಕೊಟ್ಟವರು ಕಲಾವಿದ ಯು.ಟಿ. ಸುರೇಶ್ ಅವರು. ಈ ಸಂಪುಟ ಸಿದ್ಧವಾಗುವ ಹೊತ್ತಿನಲ್ಲಿ ನನ್ನ ಕಾರ್ಯದ ಒತ್ತಡವನ್ನು ಹಂಚಿಕೊಂಡವರು ತುಂಬಾಡಿ ರಾಮಯ್ಯನವರು. ಪುಸ್ತಕಕ್ಕೆ ಅಚ್ಚುಕಟ್ಟುತನ ತಂದುಕೊಟ್ಟವರು ಈಸ್ಟರ್ನ್ ಪ್ರೆಸ್‌ನ ಎನ್. ಶಿವಾನಂದ್‌ರವರು. ಈ ಸಂಪುಟ ಸಿದ್ಧಗೊಳ್ಳುವ ಎಲ್ಲ ಹಂತಗಳಲ್ಲೂ ನನ್ನೊಂದಿಗಿದ್ದು ಸಲಹೆ, ಸೂಚನೆ, ಮಾರ್ಗದರ್ಶನಗಳ ಮೂಲಕ ನೆರವಾದವರು ಪ್ರೊ. ಕಾಳೇಗೌಡ ನಾಗವಾರ ಅವರು. ವೈ.ಕೆ. ರಾಮಯ್ಯ ಟ್ರಸ್ಟ್‌ನ ಎಲ್ಲ ಬಂಧುಗಳೂ ಬೇರೆ ಬೇರೆ ಪ್ರಮಾಣದಲ್ಲಿ ನನಗೆ ನೆರವಾಗಿದ್ದಾರೆ.

ಈ ಎಲ್ಲರನ್ನೂ ಪ್ರೀತಿಯಿಂದ ನೆನೆಯುತ್ತೇನೆ.

ತುಮಕೂರು
ಜುಲೈ 15, 2002



# ಪರಿವಿಡಿ



## ಹೃದಯಸಂಪನ್ನನ ನಡೆನುಡಿ



## ಮತದಾರ ಪ್ರಭುವಿನ ಕಣ್ಣಲ್ಲಿ







**ಸಂದರ್ಶನಗಳು**

## ಅನುಬಂಧ





## ಜನಸೇವಾನಿರತ

**ಆ ನಂ ಯಲ್ಲಪ್ಪರೆಡ್ಡಿ**

ಪ್ರಜಾಪ್ರಭುತ್ವದಲ್ಲಿ ಪ್ರಜೆಯೇ ಸಾರ್ವಭೌಮ. ಅವನ ಸರ್ವಾಂಗೀಣ ಪ್ರಗತಿಗಾಗಿಯೇ ಪ್ರಜಾಪ್ರತಿನಿಧಿಗಳು, ಸರ್ಕಾರ ಕೆಲಸ ಮಾಡಬೇಕು. ಸ್ವಾತಂತ್ರ್ಯ ಬಂದು ಸುಮಾರು ಐವತ್ತೈದು ವರ್ಷಗಳು ಸಂದಿವೆ. ಇವರೆಲ್ಲರೂ ಇದನ್ನರಿತು ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದರೆ ಇಂದು ಋಣಭಾರದಿಂದ ರೈತರು ದಿಕ್ಕುಗಾಣದೆ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಒದಗುತ್ತಿರಲಿಲ್ಲ; ಯುವಕರು ನಿರುದ್ಯೋಗಿಗಳಾಗಿ ದಿಕ್ಕೆಟ್ಟು ಅಲೆಯಬೇಕಾಗಿರಲಿಲ್ಲ. ಗ್ರಾಮೀಣರು ತಲೆಯ ಮೇಲೆ ಸೂರಿಲ್ಲದೆ ಮೈಮುಚ್ಚಲು ಸಾಕಷ್ಟು ಬಟ್ಟೆಯಿಲ್ಲದೆ, ಹೊಟ್ಟೆಗೆ ತುತ್ತು ಅನ್ನವಿಲ್ಲದೆ ತತ್ತರಿಸಬೇಕಾಗಿರಲಿಲ್ಲ. ವಿದೇಶಗಳಿಂದ ತಂದ ಸಾಲದ ಹಣ ಸಾರ್ಥಕವಾಗಿ ಬಳಕೆಯಾಗದೆ ರಾಷ್ಟ್ರ ಸಾಲದ ಹೊರೆಯಿಂದ ಜರ್ಝರಿತವಾಗಬೇಕಾಗಿರಲಿಲ್ಲ. ಒಟ್ಟಿನಲ್ಲಿ ಪ್ರಜಾಪ್ರತಿನಿಧಿಗಳು ತಮ್ಮ ಹೊಣೆಯರಿತು ಸಮರ್ಥವಾಗಿ ಕಾರ್ಯನಿರ್ವಹಿಸಿದ್ದರೆ, ಜನಹಿತಕ್ಕಾಗಿಯೇ ಕೆಲಸ ಮಾಡಬೇಕಾಗಿರುವ ಸರ್ಕಾರಿ ಸಿಬ್ಬಂದಿಯನ್ನು ಕರ್ತವ್ಯೋನ್ಮುಖ ರಾಗಿಸಿದ್ದರೆ - ಈ ಯಾವ ತೊಂದರೆಗಳೂ ಒದಗುತ್ತಿರಲಿಲ್ಲ. ಆದರೂ ಕೆಲ ಜನಪ್ರತಿನಿಧಿಗಳು, ಸಚಿವರು ತಮ್ಮ ಹೊಣೆಯರಿತು ಕೆಲಸ ಮಾಡುವವರಿದ್ದಾರೆ. ಅಂತಹವರಲ್ಲಿ ತುಮಕೂರು ಜಿಲ್ಲೆಯ ಕುಣಿಗಲ್ಲಿನ ವೈ.ಕೆ. ರಾಮಯ್ಯನವರು ಅಗ್ರಗಣ್ಯರಾಗಿದ್ದಾರೆ. ತಾವೂ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದಲ್ಲದೆ ಅಧಿಕಾರಿಗಳಿಂದಲೂ ಹಾಗೆಯೇ ಕೆಲಸ ಮಾಡಿಸಬಲ್ಲ ಅಪರೂಪದ ರಾಜಕಾರಣಿ ಇವರು.

ನಾನು ಅರಣ್ಯ ಇಲಾಖೆಯಲ್ಲಿ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾಗ ಮಾನ್ಯ ಶ್ರೀ ವೈ.ಕೆ. ರಾಮಯ್ಯನವರ ಹೆಸರು ಕೇಳಿದ್ದೆ ಅಷ್ಟೆ. ಇವರು ರಾಜ್ಯದ ಒಬ್ಬ ಪ್ರಾಮಾಣಿಕ, ತತ್ವನಿಷ್ಠ, ನಿರ್ಭೀತ ರಾಜಕಾರಣಿ ಹಾಗೂ ರಾಜ್ಯದ ಬಗ್ಗೆ ಸ್ಪಷ್ಟ ನಿರ್ದೇಶನ ನೀಡಬಲ್ಲ ಎಂಟೆರ್ದೆಯ ಏಕೈಕ ಜನಪ್ರತಿನಿಧಿ. ಮೊಟ್ಟ ಮೊದಲಿಗೆ ಇವರನ್ನು ನೋಡಿದ್ದು ತುಮಕೂರಿನ ಪ್ರವಾಸಿ ಮಂದಿರದಲ್ಲಿ. ಆಗ ನಾನೇ ನನ್ನನ್ನು ಅವರಿಗೆ ಪರಿಚಯಿಸಿಕೊಂಡೆ. ಅವರು ಅಂದೇ ನಮ್ಮ ರಾಜ್ಯದ ಅರಣ್ಯ ಇಲಾಖೆಯ ರೀತಿ-ರಿವಾಜುಗಳು, ಸರ್ಕಾರದ ನೀತಿ-ನಿಯಮಗಳು - ಇವುಗಳನ್ನು ಕುರಿತು ಸುಮಾರು ಇಪ್ಪತ್ತು ನಿಮಿಷಗಳ ಕಾಲ ನನ್ನೊಡನೆ ಚರ್ಚಿಸಿದರು. ಅವರ ಮಾತಿನ ಧಾಟಿ, ವಿಷಯಗಳ ಸಮಗ್ರ ತಿಳಿವಳಿಕೆ, ಜನಸೇವಾಪರತೆ - ಇವುಗಳನ್ನು ಕಂಡು ನಮ್ಮ ರಾಜ್ಯದಲ್ಲಿ ಇಂತಹ ರಾಜಕಾರಣಗಳೂ ಇದ್ದಾರೆಂದು ಹೆಮ್ಮೆ ಎನಿಸಿತು.

ಇವರು ತೋಟಗಾರಿಕೆ ಇಲಾಖಾ ಸಚಿವರಾಗಿದ್ದಾಗ ನಡೆದ ಒಂದು ಘಟನೆಯನ್ನು ಅದೇ ಇಲಾಖೆಯಲ್ಲಿದ್ದ ನನ್ನ ಸ್ನೇಹಿತರಿಂದ ಕೇಳಿ ಅವರ ಬಗೆಗಿನ ಅಭಿಮಾನ ಇಮ್ಮಡಿಯಾಯಿತು. ಆಗಿನ ತೋಟಗಾರಿಕೆ ಇಲಾಖೆಯ ನಿರ್ದೇಶಕರು ಒಬ್ಬ ಹಿರಿಯ ಐ.ಎ.ಎಸ್. ಅಧಿಕಾರಿಗಳು. ಅವರ ಸರ್ಕಾರಿ ವಾಸದ ಮನೆ ಲಾಲ್‌ಬಾಗಿನಲ್ಲಿಯೇ ಇತ್ತು. ಇದೊಂದು ದೊಡ್ಡ ಬಂಗಲೆ. ಇದು 1904ರಲ್ಲಿ ನಿರ್ಮಿತವಾಗಿ ತೋಟಗಾರಿಕೆ ಇಲಾಖೆ ನಿರ್ದೇಶಕರಾಗಿದ್ದ ಜಾನ್ ಕ್ಯಾಮರಾನ್ ಎಂಬುವವರು ವಾಸಮಾಡುತ್ತಿದ್ದ ನಿವಾಸ ಸ್ಥಳ. ಇವರು ಮತ್ತು ಕೃಂಬಿಗಲ್‌ರವರು ತೋಟಗಾರಿಕೆ ಇಲಾಖೆಗೂ ತನ್ಮೂಲಕ ಆಗಿನ ಮೈಸೂರು ರಾಜ್ಯಕ್ಕೂ ಸಲ್ಲಿಸಿರುವ ಸೇವೆ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹದು. ಈ ಬಂಗಲೆಯಲ್ಲಿ ನಂತರ ಬಂದ ನಿರ್ದೇಶಕರುಗಳು ಪಾರಂಪರಿಕವಾಗಿ ವಾಸಮಾಡುತ್ತಿದ್ದರು. ಇದು ಉತ್ತಮ ವಾಸ್ತುಶಿಲ್ಪ ಕೌಶಲ್ಯದಿಂದ ಕೂಡಿದ್ದು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು. ಇದರಿಂದಾಗಿ ಇಲ್ಲಿ ವಾಸಿಸುತ್ತಿದ್ದ ಯಾವ ನಿರ್ದೇಶಕರೂ ಕಟ್ಟಡದಲ್ಲಿ ಯಾವುದೇ ಬದಲಾವಣೆ ಮಾಡದೆ ಅದರ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದ್ದರು. ನಿರ್ದೇಶಕರ ಕಾರ್ಯಾಲಯದ ಆವರಣದಲ್ಲಿ ಅಮೂಲ್ಯವಾದ ಒಂದು ದೊಡ್ಡ ಪುಸ್ತಕ ಭಂಡಾರವಿದ್ದಿತು. ಇದು ರಾಷ್ಟ್ರದ ಯಾವ ಕಡೆಯೂ ದೊರೆಯದ ತೋಟಗಾರಿಕೆಗೆ ಸಂಬಂಧಿಸಿದ ಅಪರೂಪದ ಗ್ರಂಥಗಳನ್ನು ಒಳಗೊಂಡಿತ್ತು. ಇಲಾಖೆಯಲ್ಲಿ ಕೆಲಸ ಮಾಡಿದ ಎಲ್ಲಾ ನಿರ್ದೇಶಕರೂ ತೋಟಗಾರಿಕೆ ಹಾಗೂ ವೃಕ್ಷ ವಿಜ್ಞಾನಕ್ಕೆ ಸಂಬಂಧಿಸಿದ ಈ ಗ್ರಂಥಾಲಯವನ್ನು ತಮ್ಮ ಇಲಾಖೆಯ ಪ್ರಮುಖ ಅಂಗವೆಂದು ಪರಿಗಣಿಸಿ ಸಂರಕ್ಷಿಸುತ್ತಿದ್ದರು. ಪ್ರತಿವರ್ಷವೂ ಅತ್ಯುತ್ತಮ ಗ್ರಂಥಗಳನ್ನು, ಅಂತರಾಷ್ಟ್ರೀಯ ಮಟ್ಟದ ಸಂಶೋಧನಾ ಲೇಖನಗಳನ್ನು ಸಂಗ್ರಹಿಸಿ ಗ್ರಂಥಾಲಯವನ್ನು ಅಭಿವೃದ್ಧಿ ಪಡಿಸುತ್ತಿದ್ದರು; ಅಲ್ಲದೆ ಇದರ ಪೂರ್ಣಲಾಭವನ್ನು ಪಡೆದು ತಮ್ಮ ಜ್ಞಾನಭಂಡಾರವನ್ನು ಹೆಚ್ಚಿಸಿಕೊಳ್ಳುತ್ತಿದ್ದರು.

ರಾಜ್ಯದಲ್ಲಿ ತೋಟಗಾರಿಕೆಗೆ ವಿಶೇಷ ಒತ್ತುಕೊಟ್ಟು ಅದನ್ನು ಸಮಗ್ರವಾಗಿ, ಉಪಯುಕ್ತವಾಗಿ ಅಭಿವೃದ್ಧಿಪಡಿಸಿದ ಕೀರ್ತಿ ನಿರ್ದೇಶಕರಾಗಿದ್ದ ಮಾನ್ಯ ಡಾ. ಎಂ.ಎಚ್. ಮರೀಗೌಡರಿಗೆ ಸಲ್ಲುತ್ತದೆ. ಇವರು ತಮ್ಮ ಅಧಿಕಾರಾವಧಿಯಲ್ಲಿ ಈ ಗ್ರಂಥ ಭಂಡಾರವನ್ನು ಹೆಚ್ಚು ಅಭಿವೃದ್ಧಿ ಪಡಿಸಿದರು. ನಮ್ಮ ರಾಷ್ಟ್ರಕವಿ ಕುವೆಂಪು ಅವರೂ ಇದರ ಲಾಭವನ್ನು ಪಡೆಯುತ್ತಿದ್ದರು. ಇವರು ಬೆಂಗಳೂರಿಗೆ ಬಂದಾಗಲೆಲ್ಲಾ ಈ ಗ್ರಂಥಭಂಡಾರಕ್ಕೆ ಭೇಟಿ ಕೊಡುತ್ತಿದ್ದರು. ಇದನ್ನು ತಿಳಿದ ಡಾ. ಮರೀಗೌಡರು ಅವರಿಗಾಗಿಯೇ ಒಂದು ಪ್ರತ್ಯೇಕವಾದ ಕೊಠಡಿಯನ್ನೇ ಮುಡುಪಾಗಿಟ್ಟರು. ಇಂಥ ಒಂದು ದೊಡ್ಡ ಪ್ರಾಮುಖ್ಯ ಈ ಗ್ರಂಥಾಲಯಕ್ಕಿದೆ.

ಸರ್ಕಾರ ಕೆಲಕಾಲಾನಂತರ ಐ.ಎ.ಎಸ್. ಅಧಿಕಾರಿಗಳನ್ನು ತೋಟಗಾರಿಕಾ ಇಲಾಖೆಯ ನಿರ್ದೇಶಕರನ್ನಾಗಿ ನೇಮಕ ಮಾಡತೊಡಗಿತು. ಒಬ್ಬ ಹಿರಿಯ ಐ.ಎ.ಎಸ್. ಅಧಿಕಾರಿ ಇಲಾಖಾ ನಿರ್ದೇಶಕರಾಗಿ ನೇಮಕಗೊಂಡರು. ಸರ್ಕಾರಿ ಬಂಗಲೆ ಪಕ್ಕದ ಕಟ್ಟಡದಲ್ಲಿದ್ದ

ಗ್ರಂಥಾಲಯವನ್ನು ಸಿದ್ಧಾಪುರದ ಗೇಟ್ ಬಳಿಯಿದ್ದ ಆಗಿನ ಕ್ಯಾಂಟೀನ್ ಕಟ್ಟಡಕ್ಕೆ ಸ್ಥಳಾಂತರಿಸಲು ತೀರ್ಮಾನಿಸಿದರು. ಈ ವಿಷಯ ತಿಳಿದ ನಿವೃತ್ತ ನಿರ್ದೇಶಕರಾದ ಡಾ. ಮರೀಗೌಡರು ಖುದ್ದಾಗಿ ನಿರ್ದೇಶಕರಾಗಿದ್ದ ಐ.ಎ.ಎಸ್. ಅಧಿಕಾರಿಯನ್ನು ಭೇಟಿ ಮಾಡಿ ಈ ಗ್ರಂಥಾಲಯಕ್ಕೆ ತನ್ನದೇ ಆದ ಹಿರಿಮೆ, ಅಸ್ತಿತ್ವವಿದೆ. ಯಾವುದೇ ಕಾರಣಕ್ಕೂ ಇದನ್ನು ಬೇರೆಡೆ ಸ್ಥಳಾಂತರಿಸಬೇಡಿರೆಂದು ಕೋರಿಕೊಂಡರು. ಇದರಿಂದ ಕುಪಿತರಾದ ಆ ಅಧಿಕಾರಿ, ಈ ಗ್ರಂಥಭಂಡಾರವನ್ನು ಹೇಗೆ ಅಭಿವೃದ್ಧಿಪಡಿಸಬೇಕು, ರಕ್ಷಿಸಬೇಕು ಎಂಬ ಅರಿವು ನನಗೂ ಇದೆ ಎಂದು ಸ್ವಲ್ಪ ಒರಟಾಗಿಯೇ ಉತ್ತರಿಸಿದರು. ಈ ಮಾತುಗಳಿಂದ ಬೇಸರಗೊಂಡ ತೋಟಗಾರಿಕಾ ಇಲಾಖಾಭಿವೃದ್ಧಿಗೆ ಸಲಹೆಗಾರರಾಗಿದ್ದ ಡಾ. ಮರೀಗೌಡರು ಆ ಹುದ್ದೆಗೆ ರಾಜೀನಾಮೆ ನೀಡಿದರು. ತದನಂತರವೂ ಈ ಅಧಿಕಾರಿಯು ತಮ್ಮ ನಿರ್ಧಾರವನ್ನು ಬದಲಾಯಿಸದೆ ಗ್ರಂಥಭಂಡಾರದ ಸ್ಥಳಾಂತರಕ್ಕೆ ಪ್ರಾರಂಭಿಸಿದರು. ಅಷ್ಟರಲ್ಲಿಯೇ ಈ ವಿಷಯ ತಿಳಿದ ತೋಟಗಾರಿಕಾ ಇಲಾಖಾ ಕಾರ್ಯದರ್ಶಿಗಳು ಗ್ರಂಥಾಲಯದ ಸ್ಥಳ ಬದಲಾವಣೆ ಬೇಡವೆಂದು ಸೂಚಿಸಿದರು. ಇವರ ಸೂಚನೆಯನ್ನು ತಿರಸ್ಕರಿಸಿ, ಉದ್ದೇಶಿಸಿದಂತೆ ಸ್ಥಳಾಂತರಕ್ಕೆ ಮುಂದಾದರು. ದುರದೃಷ್ಟವಶಾತ್ ಡಿಸೆಂಬರ್ 31ರಂದು ಇದೇ ಐ.ಎ.ಎಸ್ ನಿರ್ದೇಶಕರು ಎಲ್ಲ ಹಿರಿಯ ಅಧಿಕಾರಿಗಳನ್ನು ಅವರ ಕುಟುಂಬ ವರ್ಗದವರನ್ನೂ ಈ ಸರ್ಕಾರಿ ಬಂಗಲೆಗೆ ಆಹ್ವಾನಿಸಿ ನೂತನ ವರ್ಷಾಚರಣೆ ಮಾಡಿದರು. ಈ ಎಲ್ಲಾ ವಿಷಯಗಳನ್ನು ತಿಳಿದ ತೋಟಗಾರಿಕಾ ಸಚಿವರಾಗಿದ್ದ ವೈ.ಕೆ. ರಾಮಯ್ಯನವರು ನಿರ್ದೇಶಕರ ವಾಸದ ಬಂಗಲೆಯಲ್ಲಿರುವ ಗ್ರಂಥಾಲಯದ ಮಹತ್ವವನ್ನು ತಿಳಿಸಿದರು. ಇದನ್ನು ಯಾವ ಕಾರಣಕ್ಕೂ ಸ್ಥಳಾಂತರಿಸ ಬಾರದೆಂದೂ ನಿರ್ದೇಶಕರ ವಾಸದ ಬಂಗಲೆಯನ್ನೇ **ಡಾ. ಎಂ.ಎಚ್. ಮರೀಗೌಡ ರಾಷ್ಟ್ರೀಯ ತೋಟಗಾರಿಕಾ ಗ್ರಂಥಾಲಯ** ಎಂದು ಹೆಸರಿಟ್ಟು ಸರ್ಕಾರಿ ಆದೇಶವನ್ನೇ ಹೊರಡಿಸಿದರು. ತನ್ಮೂಲಕ ಅಧಿಕಾರದ ಮತ್ತಿನ ಗುಂಗಿನಲ್ಲಿದ್ದು, ತಾನೇ ಸರ್ಕಾರವೆಂದು ಭಾವಿಸಿದ್ದ ಈ ಹಿರಿಯ ಐ.ಎ.ಎಸ್ ಅಧಿಕಾರಿಗೆ ಪ್ರಜಾಪ್ರಭುತ್ವದಲ್ಲಿ ಪ್ರಜಾಪ್ರತಿನಿಧಿಗಳಾದ ಸಚಿವರ ಆದೇಶವೇ ಅಂತಿಮ ಮತ್ತು ಅವರೇ ಸರ್ಕಾರವೆಂಬುದನ್ನು ಮಾರ್ಮಿಕವಾಗಿ ರಾಮಯ್ಯನವರು ತಿಳಿಸಿಕೊಟ್ಟರು. ಅವರ ದಕ್ಷತೆಗೆ, ಕಾರ್ಯವೈಖರಿಗೆ ಇದು ಒಂದು ಉತ್ತಮ ನಿದರ್ಶನ.

ವೈ.ಕೆ.ಆರ್ ಅವರು ಎಲ್ಲರನ್ನೂ ಸಮಾನವಾಗಿ ನೋಡುವ ನಿರ್ದಾಕ್ಷಿಣ್ಯ ಗುಣ ಉಳ್ಳವರು. ಒಮ್ಮೆ ಇವರು ಸಚಿವರಾಗಿದ್ದಾಗ ಅಧಿಕಾರಿಗಳ ಸಭೆ ಏರ್ಪಟ್ಟಿತು. ಈ ಇಲಾಖೆಯಲ್ಲಿಯೇ ಅಧಿಕಾರಿಯಾಗಿದ್ದ ಅವರ ಬಂಧು ಒಬ್ಬರು, ತಾವು ಸಚಿವರ ಸಂಬಂಧಿಕರೆಂದು ತೋರ್ಪಡಿಸಿಕೊಳ್ಳಲು ಸಭೆಯಲ್ಲಿ ಅನವಶ್ಯಕವಾಗಿ ಹೆಚ್ಚುಗಾರಿಕೆಯಿಂದ ಮೆರೆಯಲು ಪ್ರಯತ್ನಿಸಿದರು. ಕೂಡಲೇ ಇದನ್ನು ಮನಗಂಡ ರಾಮಯ್ಯನವರು ಸಂಬಂಧಿಕ ಅಧಿಕಾರಿಯ ಮಾತುಗಳನ್ನು ಮೊಟಕುಗೊಳಿಸುವಂತೆ ತಿಳಿಸಿ, ಅವರ ಅತ್ಯುತ್ಸಾಹಕ್ಕೆ

ತಣ್ಣೀರೆರಚಿದರು. ಇದನ್ನು ಗಮನಿಸಿದ ಎಲ್ಲ ಅಧಿಕಾರಿಗಳೂ ಅವರ ನಿಷ್ಪಕ್ಷಪಾತ ವರ್ತನೆಗೆ ತಲೆದೂಗಿದರು.

ಇವರು ತಮ್ಮ ಅಧಿಕಾರಾವಧಿಯಲ್ಲಿ ಬಹಳಷ್ಟು ಉತ್ತಮ ಜನೋಪಯೋಗಿ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ತೋಟಗಾರಿಕೆ ಇಲಾಖೆಗೆ ನವಚೇತನವನ್ನು ತುಂಬಿ ಜನತೆಯ ಪ್ರೀತಿಗೆ ಪಾತ್ರರಾದರು. ರಾಜ್ಯದ ಎಲ್ಲೆಡೆ ಹೆಚ್ಚು - ಹೆಚ್ಚು ಹಣ್ಣಿನ ಗಿಡಗಳನ್ನು ಬೆಳೆಸಲು ವಿಶೇಷ ಪ್ರೋತ್ಸಾಹಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಮುಖ್ಯವಾಗಿ ಇಂದು ಕರ್ನಾಟಕದಲ್ಲಿ ವಿವಿಧ ಮಾವಿನ ತಳಿಗಳು ಜಲಾನಯನ ಪ್ರದೇಶಗಳಲ್ಲಿ ಹಾಗೂ ರೈತರ ಭೂಮಿಗಳಲ್ಲಿ ಚೆನ್ನಾಗಿ ಬೆಳೆದು ಫಲಕೊಡುತ್ತಿರುವುದಕ್ಕೆ ಇವರೇ ಕಾರಣಕರು. ಇವರು ಸಚಿವರಾಗಿದ್ದಾಗ ಮೃದುಮರಗಳ ಕಸಿಮಾಡುವ ತಾಂತ್ರಿಕತೆ ಆಗತಾನೆ ಕಾರ್ಯರೂಪಕ್ಕೆ ಬಂದಿತ್ತು. ಇದರ ಉಪಯೋಗವನ್ನು ಮನವರಿಕೆ ಮಾಡಿಕೊಂಡು ಇವರು ಇಲಾಖೆಯ ಎಲ್ಲಾ ಅಧಿಕಾರಿಗಳೂ ಖುದ್ದಾಗಿ ಈ ತಾಂತ್ರಿಕತೇಯನ್ನು ಅಭ್ಯಸಿಸಿ ಉತ್ತಮ ತಳಿಯ ಮಾವಿನ ಸಸಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಬೇಕೆಂದು ಈ ವಿಷಯದಲ್ಲಿ ಪರಿಣತರಾಗಿದ್ದ ಡಾ. ಹಿತ್ತಲಮನಿಯವರಿಗೆ ಆದೇಶ ನೀಡಿದರು. ಇವರ ಈ ಮಹತ್ವದ ನಿರ್ಧಾರದಿಂದ ಇಂದು ಕರ್ನಾಟಕ ರಾಜ್ಯದಲ್ಲಿ ವಿವಿಧ ಮಾವಿನ ತಳಿಯ ಮರಗಳಿಂದ ಕೋಟ್ಯಾಂತರ ರೂ.ಗಳ ಬೆಲೆಯ ಮಾವಿನ ಹಣ್ಣುಗಳನ್ನು ಬೆಳೆಯಲಾಗುತ್ತಿದೆ. ಸಹಸ್ರಾರು ರೈತಕುಟುಂಬಗಳಿಗೆ ಜೀವನಾಧಾರ ವಾಗಿದೆ. ಈ ಬಗೆಯ ಚಟುವಟಿಕೆಯಿಂದ ಸ್ವಂತ ಉದ್ಯೋಗ ಹೆಚ್ಚಿತು. ರೈತರು ಸ್ವಾವಲಂಬಿ ಗಳಾಗುವುದರ ಜೊತೆಗೆ ಉತ್ತಮ ಗುಣಮಟ್ಟದ ಪೌಷ್ಟಿಕಾಂಶಗಳು ದೊರೆಯುವಂತಾಯಿತು. ಹಲವು ಹಂತಗಳಲ್ಲಿ ಹೆಚ್ಚು ಹೆಚ್ಚು ಉದ್ಯೋಗಗಳು ಸೃಷ್ಟಿಯಾದವು.

ವೈ.ಕೆ.ಆರ್ ಅವರು ಮೊದಲಿನಿಂದಲೂ ಪರಿಸರವಾದಿಗಳು. ತಮ್ಮ ಕ್ಷೇತ್ರದಲ್ಲಿ ಗಿಡ-ಮರಗಳನ್ನು ನೆಡಲು ಹೆಚ್ಚು ಆದ್ಯತೆ ನೀಡಿದ್ದರು. ತಮ್ಮ ಹುಲಿಯೂರುದುರ್ಗ ವಿಧಾನಸಭಾ ಕ್ಷೇತ್ರದ ಎಲ್ಲೆಡೆ ಸುಮಾರು ಹತ್ತು ಲಕ್ಷ ವಿವಿಧ ಮರಗಿಡಗಳನ್ನು ನೆಡುವುದಾಗಿ ತಿಳಿಸಿ ಕಾರ್ಯೋನ್ಮುಖರಾದರು. **ಕರ್ನಾಟಕ ವನಸಂವರ್ಧನ ಟ್ರಸ್ಟ್** ಮತ್ತು **ಅರಣ್ಯ ಇಲಾಖೆ** ಸಹಯೋಗದೊಡನೆ ಈ ಬೃಹತ್ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದಾಗಿ ನಿರ್ಧರಿಸಿದರು. ಜಿಲ್ಲೆಯ ಎಲ್ಲ ಇಲಾಖೆಯ ಅಧಿಕಾರಿಗಳ ಸಭೆಯನ್ನು ಏರ್ಪಡಿಸಿ ಈ ಸಾರ್ಥಕ ಕಾರ್ಯಕ್ಕೆ ಎಲ್ಲರೂ ಸಹಕರಿಸಬೇಕೆಂದು ಹೇಳಿದರು. ಎಲ್ಲಾ ಅಧಿಕಾರಿಗಳಿಗೂ ವೈ.ಕೆ.ಆರ್ ಎಂದರೆ ಭಯವೆ. ಕೊಟ್ಟ ಮಾತಿನಂತೆ ಕಾರ್ಯ ನಡೆಯಲೇ ಬೇಕು. ಜಿಲ್ಲೆಯ ಇತರ ಭಾಗಗಳಿಂದ ಸಸಿಗಳನ್ನು ತಂದು ಶೇಖರಿಸಿದರು. ಟ್ರಸ್ಟಿನ ಅಧ್ಯಕ್ಷರಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸರ್ಕಾರ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರು ಗಿಡನೆಡುವ ಕಾರ್ಯಕ್ರಮವನ್ನು ದಿನಾಂಕ 25-8-2001ರಂದು ನೆರವೇರಿಸಿದರು. ಈ ಸಭೆಯಲ್ಲಿ

ಅನೇಕ ಧರ್ಮಗುರುಗಳೂ, ಸಚಿವರುಗಳೂ, ಶಾಸಕರುಗಳೂ ಹಾಜರಿದ್ದರು. ಕೆಲವೇ ದಿವಸಗಳಲ್ಲಿ ಇವರ ಇಡೀ ವಿಧಾನಸಭಾ ಕ್ಷೇತ್ರದಲ್ಲಿ ಗಿಡಗಳನ್ನು ನೆಡಲಾಯಿತು. ವೈ.ಕೆ.ಆರ್ ಅವರು ಇವುಗಳ ಸಂರಕ್ಷಣೆಯ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾರೆ. ಈ ಕಾರ್ಯಕ್ರಮದಲ್ಲಿ ಅವರ ಜನಪ್ರಿಯತೆ, ಅಧಿಕಾರಿಗಳು, ಸಾರ್ವಜನಿಕರು ನೀಡಿದ ಸಹಕಾರ ಕಂಡು ನಾನು ಪುಳಕಿತನಾದೆ. ಇದರಿಂದ ಪ್ರೇರಿತರಾದ ಇತರ ಕ್ಷೇತ್ರಗಳ ಶಾಸಕರೂ ಗಿಡಮರಗಳನ್ನು ನೆಡಲು ಮುಂದಾದರು. **ಹೀಗೆ ಪರಿಸರ ಸಂವರ್ಧನೆಗೆ ಶ್ರೀಯುತರು ತಮ್ಮದೇ ಆದ ದೊಡ್ಡ ಕೊಡುಗೆಯನ್ನು ಸಲ್ಲಿಸಿದ್ದಾರೆ.**

ವೈ.ಕೆ.ಆರ್ ಅವರು ಎಲ್ಲ ಸೇವಾ ಕ್ಷೇತ್ರಗಳಲ್ಲಿಯೂ ತಮ್ಮದೇ ಆದ ಛಾಪು ಮೂಡಿಸಿದ, ಬಹುಮುಖ ವ್ಯಕ್ತಿತ್ವದ ಮೇರುಸದೃಶ ವ್ಯಕ್ತಿತ್ವವುಳ್ಳವರು. ಜನಸೇವೆಗೆ ತಮ್ಮನ್ನೇ ತೊಡಗಿಸಿಕೊಂಡು ಜನಸಾಮಾನ್ಯರ ಪ್ರೀತಿಗೆ ಪಾತ್ರರಾಗಿದ್ದಾರೆ; ದಕ್ಷತೆಗೆ ಮತ್ತೊಂದು ಹೆಸರೂ ಆಗಿದ್ದಾರೆ.

○



# ನೆನಪಿನ ಸುರುಳಿಯಿಂದ

**ಎಸ್ ಷಡಕ್ಷರಯ್ಯ**

ಕರ್ನಾಟಕದ ರೇಷ್ಮೆ ಇಲಾಖೆಯಲ್ಲಿ ಮೂರು ದಶಕಗಳ ಕಾಲ ಸೇವೆ ಸಲ್ಲಿಸಿರುವ ನಾನು ಗ್ರಾಮೀಣ ಪ್ರದೇಶಗಳಲ್ಲಿನ ಅತ್ಯಂತ ಪ್ರಭಾವಿ ಕಸುಬೆನಿಸಿ ರಾಜ್ಯದ ಬೊಕ್ಕಸಕ್ಕೆ ತನ್ನ ಪಾಲಿನ ಕೊಡುಗೆಯನ್ನು ನೀಡುತ್ತ ತನ್ನನ್ನು ನಂಬಿದವರಿಗೆ ಅನ್ನದ ಮಾರ್ಗ ತೋರುತ್ತ ವಿದ್ಯಾವಂತರಿರಲಿ, ವಿದ್ಯೆಯೇ ಇಲ್ಲದಿರಲಿ ಎಲ್ಲರನ್ನೂ ತನ್ನ ತೋಳತೆಕ್ಕೆಯಲ್ಲಿರಿಸಿಕೊಂಡು ಕಾಪಾಡುತ್ತಿರುವ ''ರೇಷ್ಮೆ ಕೃಷಿ''ಯ ಬಗ್ಗೆ ನನಗೆ ಅಪಾರ ಅಭಿಮಾನ. ನಾಡಿನ ಉದ್ದಗಲಕ್ಕೂ ಸಂಚಾರ ಮಾಡಿ ರೈತ ಸಮುದಾಯದ ಅನುಭವಲೋಕಕ್ಕೆ ನನ್ನನ್ನು ಒಳಪಡಿಸಿಕೊಂಡು ಅವರಿಂದ ನಾನು ಬಹಳಷ್ಟು ಕಲಿತಿದ್ದೇನೆ. ಅವರ ಸಮಸ್ಯೆಗಳಿಗೆ ಪರಿಹಾರ ಹುಡುಕಿ ಎಲ್ಲ ತೆರನಾದ ಸಮೂಹ ಮಾಧ್ಯಮಗಳ ಮುಖಾಂತರ ನನ್ನದೇ ರೀತಿಯ ''ಛಾಪು'' ಮೂಡಿಸಿ ನಿವೃತ್ತಿಯಾದರೂ ರೈತರು ಅಪೇಕ್ಷೆಪಟ್ಟು ನನ್ನೆಡೆಗೆ ಬರುವಂತಾಗಿರುವುದನ್ನು ಹೆಮ್ಮೆಯಿಂದ ನೆನೆಯುತ್ತೇನೆ. ನನ್ನ ಮನದ 'ಒಳತೋಟ'ಯ ಸಮಾನಾಂತರ ಸ್ವಭಾವದ ಶ್ರೀ ವೈ.ಕೆ.ಆರ್ ರಾಜಕೀಯದಲ್ಲಿ ಪ್ರಭಾವಿ ವ್ಯಕ್ತಿಯಾಗಿದ್ದರೂ ಸಹ ನನಗೆ ಹತ್ತಿರವಾದುದು ನನಗೆ ತೃಪ್ತಿ ಕೊಟ್ಟಿತ್ತೆಂಬುದನ್ನು ನೆನೆಯುತ್ತಲೇ ಇದ್ದೇನೆ.

ಆರು ದಶಕದ ತುಂಬು ಜೀವನ ನಡೆಸಿರುವ ಶ್ರೀ ವೈ.ಕೆ.ಆರ್ ಶತಕಪೂರ್ತಿ ನಮ್ಮೊಟ್ಟಿಗೆ ಇದ್ದು, ಅವರು ನಂಬಿರುವ ಧ್ಯೇಯ; ತಾಳುವ ಧೋರಣೆ ನಾಡಿನ ಜನರಿಗೆ ಹೆಚ್ಚು ಲಾಭ ತರಲಿ ಎಂದು ಆಶಿಸುತ್ತ; ಅವರ ''ಅಭಿನಂದನಾ'' ಗ್ರಂಥ ಒಳಗೊಂಡಂತೆ ಅಭಿಮಾನದ ಸನ್ಮಾನಕ್ಕೆ ಕನ್ನಡ ನಾಡಿನ ಹೆಮ್ಮೆಯ ಜಿಲ್ಲೆ ತುಮಕೂರು ಸಜ್ಜಾಗುತ್ತಿರುವ ಸಂದರ್ಭದಲ್ಲಿ - ಅವರ ಒಡನಾಟದ ನೆನಪಿನ ಸುರುಳಿ ಬಿಚ್ಚಿಕೊಳ್ಳುತ್ತಿರುವ ಪ್ರಸಂಗಗಳನ್ನು ವಾಚಕರೊಡನೆ ಹಂಚಿಕೊಂಡರೆ ಅದೇ ಅವರಿಗೆ ನನ್ನ ''**ನುಡಿ ನಮನ**'' ವಾಗುತ್ತದೆಂದು ನಂಬಿದ್ದೇನೆ.

ವೈ.ಕೆ.ಆರ್ ಬಗ್ಗೆ ಸಾಕಷ್ಟು ಕೇಳಿದ್ದ ನಾನು ಅವರು ಮೊಟ್ಟ ಮೊದಲಿಗೆ ಶಾಸಕರಾಗಿ ಆಯ್ಕೆಯಾದರೆಂಬ ಸುದ್ದಿ ಕೇಳಿ ಒಂದು ಪತ್ರ ಬರೆದು ಜನ ನಿಮ್ಮಿಂದ ಏನು ಬಯಸುತ್ತಾರೆ ಎಂಬುದನ್ನು ಸೂಚ್ಯವಾಗಿ ನೆನಪು ಮಾಡಿದ್ದೆ. ಅದಕ್ಕೆ ಉತ್ತರಿಸಿದ ಅವರು ಅಕಸ್ಮಾತ್ ನಾನು ದಾರಿ ತಪ್ಪಿದ್ದೇ ಆದರೆ, ಒಂದು ಮುಂದು ನೋಡದೆ ಕಠೋರವೆನಿಸಿದರೂ ಯೋಚನೆ ಮಾಡದೆ, ನನಗೆ ಬರೆಯಿರಿ ಅಥವಾ ಬಂದು ಮಾತನಾಡಿ; ನನ್ನ ಜನಪರ ಸೇವಾ ಕೈಂಕರ್ಯದಲ್ಲಿ ನನ್ನೊಡನೆ ಇರಿ'' ಎಂದು ಬರೆದ ಪತ್ರ ನನ್ನ ಬಳಿ ಇನ್ನೂ ಜೋಪಾನವಾಗಿ ಉಳಿದಿದೆ.

ಸ್ವಭಾವತಃ ನಿಷ್ಠುರವಾದಿಯಾದ ರಾಮಯ್ಯನವರು ಯಾರನ್ನೋ ತೃಪ್ತಿ ಪಡಿಸಲು ಹೊಗಳುವ ಸ್ವಭಾವ ಅವರದ್ದಲ್ಲ. ರೇಷ್ಮೆ ಇಲಾಖೆಯ ಬಹುಪಾಲು ಅಧಿಕಾರಿಗಳು ಕೋಪಿಷ್ಠ... ಇವರ ಜೊತೆ ವ್ಯವಹರಿಸುವುದು ಕಷ್ಟ ಎಂದು ಅಭಿಪ್ರಾಯ ಪಡುತ್ತಿದ್ದುದು ನನಗೆ ಗೊತ್ತಿತ್ತು. ನನ್ನದೇನಾದರೂ ತಪ್ಪು ಆಗಿದ್ದರೆ ''ದಯವಿಟ್ಟು ಕ್ಷಮಿಸಿಬಿಡಿ ಮುಂದೆ ಇಂತಹ ಅಚಾತುರ್ಯಕ್ಕೆ ಅವಕಾಶ ಕೊಡುವುದಿಲ್ಲ'' ಎಂದು ವಿನೀತನಾಗಿ ಹೇಳಿಬಿಡುತ್ತಿದ್ದೆ. ಅದು ಅವರಿಗೆ ತುಂಬ ಮೆಚ್ಚುಗೆಯಾಗುತ್ತಿತ್ತು ಎಂದು ಕಾಣುತ್ತದೆ.



ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿದ್ದ ದಿನಗಳು ... ಯಾವುದೋ ಕಾರ್ಯ ನಿಮಿತ್ತ ನಾನು ಅವರ ಮನೆಗೆ ಹೋಗಿದ್ದೆ. ಅವರ ಕ್ಷೇತ್ರದಿಂದ ಇಬ್ಬರು ರೈತರು ಬಂದಿದ್ದರು. ಏನಾಗಬೇಕಿತ್ತು ಬೇಗ ಹೇಳಿ ನನಗೆ ಸಮಯದಾನ ಮಾಡಿ ಎಂದರು. ''ನನ್ಮಗನಿಗೆ ವಿಧಾನಸೌಧದಲ್ಲಿ ಒಂದು ಜವಾನನ ಕೆಲ್ಸವಾದರೂ ಕೊಡ್ಸಬೇಕು'' ಎಂದು ಕೈಮುಗಿದುಕೊಂಡು ನಿಂತ ಆ ರೈತ. ಆಗ ನನ್ನ ಮುಖ ನೋಡಿ ಹೇಳಿದರು... ''ನೋಡಿ ಇವರಿಗೆ ಸಮೃದ್ಧವಾಗಿ ಜಮೀನು ಇದೆ. ಅದರಲ್ಲಿ ಬೇಸಾಯ ಮಾಡೋದು ಬಿಟ್ಟು ಮಗನನ್ನ ಜವಾನನ ಕೆಲಸಕ್ಕೆ ಹಾಕುವುದಕ್ಕೆ ಬಂದವ್ರೆ'' ಎಂದವರೇ ರೈತನ ಕಡೆ ದಿಟ್ಟಿಸಿ ''ಇದಕ್ಕೇನಾ ನೀವು ನಂಗೆ ಓಟು ಕೊಟ್ಟದ್ದು? ಅಲ್ರೀ ನಿಮ್ಮೂರಿಗೆ ರಸ್ತೆ ಕೇಳಿ, ಪಶು ವೈದ್ಯ ಆಸ್ಪತ್ರೆ, ಸ್ಕೂಲು, ಇಂಥ ಹತ್ತು ಜನಕ್ಕೆ ಉಪಯೋಗವಾಗುವ ಕೆಲಸ ಮಾಡಿಕೊಡೀಂತ ಒತ್ತಾಯ ತನ್ನಿ. ಅದು ಬಿಟ್ಟು ಮಗನ ಕೆಲಸ ಮಾಡಿಕೊಡಿ ಅಂತೀರಲ್ಲ'' ಎಂದು ಬರವಣಿಗೆಗೆ ನನಗೆ ಇಷ್ಟವಾಗದ ಕೆಟ್ಟ ಬೈಗುಳ ಅಂದದ್ದಲ್ಲದೆ, ಛೀಮಾರಿ ಹಾಕಿದಾಗ ಆ ವ್ಯಕ್ತಿ ಉಸಿರೆತ್ತದೆ ಅಲ್ಲಿಂದ ಜಾಗಖಾಲಿ ಮಾಡಿಬಿಟ್ಟರು.

''ಮಗಳಿಗೆ ಮೇಡಂ ಕೆಲಸವೇನೋ ಕೊಡ್ಸಿದ್ರಿ, ಆದ್ರೆ ಏನ್ಮಾಡೋದು ದಿನಾ ಆರು-ಏಳು ಮೈಲಿ ದೂರ ಓಗ್ ಬೇಕು. ನಮ್ಮೂರಿನ ಸ್ಕೂಲ್ಗೆ ಹಾಕ್ಕೊಡಬೇಕು'' ಎಂದು ಮನವಿ ಮಾಡಿದ ಇನ್ನೊಬ್ಬ ಆಸಾಮಿಗೆ ಹೇಳಿದರು. ''ಯಾಕ್ ಬಿಡು ನಿಮ್ಮನೆ ಜಗ್ಲಿ ಮೇಲೆ ಒಂದು ಸ್ಕೂಲ್ ಮಾಡವಾ, ಅಲ್ಲೇ ಪಾಠ ಮಾಡ್ಕೊಂಡು ಇದ್ ಬಿಡ್ಲಿ'' ಎಂದು ಕೆಕ್ಕರಿಸಿ ಕೊಂಡು ನೋಡಿದಾಗ ಅವರೂ ಅಲ್ಲಿಂದ ನಾಪತ್ತೆಯಾಗಿ ಬಿಟ್ಟರು.

ಊರಿಗೆ ಅನುಕೂಲವಾಗುವಂತಹ ಕೆಲಸ ಕೇಳುವುದು ಅವರಿಗೆ ಪ್ರಿಯವಾಗಿತ್ತು ಎನ್ನುವುದಕ್ಕೆ ಇವೆರಡು ಉದಾಹರಣೆಗಳು ಸಾಕು.

ಒಮ್ಮೆ ತುಮಕೂರಿನಲ್ಲಿದ್ದ ಗ್ರೈನೇಜ್ ಇನ್ಸ್‌ಪೆಕ್ಷನ್‌ಗೆ ಹೋಗಿದ್ದರು. ಅಲ್ಲಿ ಒಪ್ಪ - ಓರಣ ಇರಲಿಲ್ಲವೆಂದು ಆಕ್ಷೇಪಿಸಿ ಅಲ್ಲಿನ ನೌಕರ ಒಬ್ಬನಿಗೆ ಕಪಾಳಮೋಕ್ಷ ಮಾಡಿದರು. ಅಲ್ಲಿನ ಉಸ್ತುವಾರಿಯಲ್ಲಿದ್ದ ಇನ್‌ಛಾರ್ಜ್ ಅಧಿಕಾರಿಯನ್ನು ಕೆಲಸಗಾರರ ಎದುರಿಗೇ ಅಸಹ್ಯವಾಗಿ ಮಾತನಾಡಿದರೆಂಬ ಸುದ್ದಿ ಬಹುಬೇಗ ಎಲ್ಲರ ಕಿವಿಗೂ ಬಿದ್ದು ನಾನೂ ಸಹ ''ಅನ್ನಲಾರದೆ ಆನುಭವಿಸಲಾರದೆ'' ಒಳಗೊಳಗೇ ನೋವು ತಿನ್ನುವಂತಾಗಿತ್ತು. ನಾನೂ ಸಹ ಸರ್ಕಾರಿ ಕಾರ್ಯನಿಮಿತ್ತ ಆ ಜಿಲ್ಲೆಯಲ್ಲಿ ಪ್ರವಾಸದಲ್ಲಿದ್ದೆ. ಸಿಬ್ಬಂದಿಯೆದುರು ತನ್ನನ್ನು ತುಚ್ಛವಾಗಿ ನಿಂದಿಸಿದ್ದುದನ್ನು ನೆನಪು ಮಾಡಿಕೊಂಡು ''ನಾನು ಇವರ ಕೈಲಿ ಕೆಲಸ ತಗೊಳ್ಳೊದು ಹ್ಯಾಗೆ ನೀವೇ ನೋಡಿ'' ಎಂದು ಅವರು ನೊಂದುಕೊಂಡು ನನ್ನೊಡನೆ ಹೇಳಿದ್ದು ನನಗೆ ತುಂಬ ಬೇಸರ ಉಂಟುಮಾಡಿತ್ತು. ಈ ಅವಮಾನಕ್ಕೆ ಒಳಗಾದ ವ್ಯಕ್ತಿ ತುಂಬ ಒಳ್ಳೆಯವರು. ಅವರ ಕೆಲಸವೂ ಅಷ್ಟೇ. ಅವರನ್ನು ಹೋಲಿಸಲು ಇಲಾಖೆಯಲ್ಲಿ ಮತ್ತೊಬ್ಬರಿಲ್ಲ ಎನ್ನುವಷ್ಟು ಸಂಪನ್ನರೆಂಬುದು ಇಲಾಖೆಯಲ್ಲಿ ಎಲ್ಲರಿಗೂ ಗೊತ್ತಿದ್ದದ್ದೆ. ಇಷ್ಟು ಸಾಕು. ತುಮಕೂರು ಪ್ರವಾಸಿಮಂದಿರದಲ್ಲಿ ರೇಷ್ಮೆ ಇಲಾಖೆಯ ಅಧಿಕಾರಿಗಳನ್ನೆಲ್ಲ ಕರೆಸಿಕೊಂಡು ಮೀಟಿಂಗ್ ಮುಗಿಸಿ ಬೆಂಗಳೂರಿಗೆ ಹೊರಡಲು ವೈ.ಕೆ.ಆರ್ ಸಿದ್ಧರಾಗಿದ್ದರು. ನಾನು ಹೊರಗಡೆಯೇ ನಿಂತಿದ್ದೆ. ನಾನೂ ವಾಪಸ್ ಹೋಗಬೇಕಿತ್ತು. ನನ್ನನ್ನು ದೂರದಿಂದಲೇ ಗಮನಿಸಿದ ವೈ.ಕೆ.ಆರ್ ಅವರು ನನ್ನನ್ನು ಅವರ ಬಳಿ ಕರೆದು ''ಬನ್ನಿ ಹೋಗೋಣ'' ಎಂದರು. ''ನನ್ನ ಜೀಪು ಇದೆ ಬರ್ತೀನಿ ನಡೀರಿ ಸಾರ್'' ಎಂದೆ. ಪರವಾಯಿಲ್ಲ ಆ ಜೀಪ್‌ನಲ್ಲಿ ಯಾರಾದರೂ ಬರ್ತಾರೆ ನೀವು ನನ್ನ ಜೊತೆಯೇ ಬನ್ನಿ ಎಂದರು. ಹೊರಟೆ. ಹಿರೇಹಳ್ಳಿ ಬಂದರೂ ನಾನು ಮಾತನಾಡಿರಲಿಲ್ಲ. ''ಇದೇನು ಮೌನವ್ರತ ಧರಿಸಿರೋ ಹಾಗಿದೆ'' ಎಂದರು. ಆಗ ತುಮಕೂರು ಗ್ರೈನೇಜ್‌ನಲ್ಲಿ ನಡೆದ ಪ್ರಸಂಗ ಎತ್ತಿಕೊಂಡು ನನ್ನ ಅಭಿಪ್ರಾಯವನ್ನು ನೇರವಾಗಿ ಹೇಳಿದೆ : ''ಸಿಬ್ಬಂದಿ ವರ್ಗದ ಒಬ್ಬನಿಗೆ ಕಪಾಳ ಮೋಕ್ಷ ಮಾಡಿದ್ದು, ಗ್ರೈನೇಜ್ ಉಸ್ತುವಾರಿಯಲ್ಲಿದ್ದವರನ್ನು ಸಲ್ಲದ ಮಾತುಗಳಿಂದ ಛೀಮಾರಿ ಹಾಕಿದ್ದು ನನಗೆ ಸರಿಕಾಣಲಿಲ್ಲ. ನೀವು ದೊಡ್ಡವರು ಅಧಿಕಾರದಲ್ಲಿದ್ದೀರಿ. ನಿಮ್ಮನ್ನು ಪ್ರಶ್ನಿಸುವ ಎದೆಗಾರಿಕೆ ನನ್ನಲ್ಲಿಲ್ಲ. ಆದರೆ ನನ್ನ ಮನದ ಒಳತೋಟಿಯನ್ನು ಹೇಳದಿದ್ದರೆ ತಡೆದುಕೊಳ್ಳುವ ಶಕ್ತಿಯೂ ನನಗಿಲ್ಲ'' ಎಂದೆ. ಸ್ವಲ್ಪ ಹೊತ್ತು ಇಬ್ಬರ ಬಾಯಿಂದಲೂ ಮಾತು ಹೊರಡಲಿಲ್ಲ. ಆ ಮೇಲೆ ಮೌನ ಮುರಿದು ಅವರೇ ಹೇಳಿದರು. ನನ್ನ ವರ್ತನೆ ಸರಿಯಲ್ಲವೆಂದು ನನಗೆ ಅನ್ನಿಸಿದ್ದು ತಡವಾಗಿ! ಎಂದು ಅವಲತ್ತುಕೊಂಡರು. ಈಗ ಏನು ಹೇಳುತ್ತೀರಿ?... ಕೆಲಸ ಸರಿಯಾಗಿ ಆಗಬೇಕು ಎನ್ನುವ ಸಂದರ್ಭದಲ್ಲಿ ಅಚಾತುರ್ಯಕ್ಕೆ ಎಡೆಮಾಡಿಕೊಂಡವರು ಆಗಿಹೋದ ಘಟನೆಗಾಗಿ ಪಶ್ಚಾತ್ತಾಪ ಪಟ್ಟಿದ್ದರು.

ಇಲಾಖೆಯ ನೌಕರರಿಗೆ ರಾಮಯ್ಯನವರು ಎದುರಿಗೆ ಬಂದು ಏನನ್ನಾದರೂ ಕೇಳಿದರೆಂದರೆ, ಅವರ ಸಿಡುಕುಮಾತು, ನೋಟ ಎಂತಹ ಚಳಿಯಲ್ಲಿಯೂ ಬೆವರು ಬರಿಸುತ್ತಿತ್ತು. ಇದಕ್ಕೆ ಹಿರಿಯ ಅಧಿಕಾರಿಗಳೂ ಹೊರತಾಗಿರಲಿಲ್ಲ. ದೇವರ ದಯೆಯೆಂದುಕೊಳ್ಳುತ್ತೇನೆ, ನಾನು ಅವರೊಂದಿಗೆ ವ್ಯವಹರಿಸುವಾಗ ನಿಶ್ಚಿಂತನಾಗಿರುತ್ತಿದ್ದೆ. ನನ್ನ ಈ ವರ್ತನೆಯನ್ನು ಆಶ್ಚರ್ಯವೆಂಬಂತೆ ಗಮನಿಸುತ್ತಿದ್ದ ಗೆಳೆಯರು ''ನಿಮ್ಮ ರಾಮಯ್ಯ ಬಿಡಿ, ನಿಮ್ಮನ್ನು ಕಿರಿಕಿರಿ ಮಾಡುವುದುಂಟೆ?'' ಎಂದು ಅನ್ನುತ್ತಿದ್ದುದೂ ಉಂಟು.

ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿ ಹೆಚ್ಚು ದಿನಗಳಾಗಿರಲಿಲ್ಲ. ನನಗೆ ಫೋನ್ ಮಾಡಿ ಇಲಾಖೆಯ ಪ್ರಗತಿ ಚಿತ್ರವನ್ನು ಬಿಂಬಿಸುವ ಛಾರ್ಟ್ ಮಾಡಿಕೊಡುವಂತೆ ಆದೇಶ ಕೊಟ್ಟರು ನನಗೆ. ನಾನು ಆಗ ಇಲಾಖಾ ತಾಂತ್ರಿಕ ಮಾಸಪತ್ರಿಕೆಯ ಸಂಪಾದಕನಾಗಿದ್ದೆ. ಪಬ್ಲಿಸಿಟಿ ವಿಂಗ್ ನನ್ನ ಉಸ್ತುವಾರಿಯಲ್ಲಿಯೇ ಇತ್ತು. ಒಂದು ವಾರ ಕಳೆದಿರಬಹುದು. ಮಂತ್ರಿಗಳಿಂದ ಫೋನ್ ಕರೆ ಬಂತು. ''ಸ್ವಾಮಿ ಪೆನ್ಸಿಲ್ಲು, ಹಾಳೆ ನಾನೇ ಕೊಡಿಸ್ತೀನಿ, ಬಂದು ಛಾರ್ಟು ಗೀಚಿಕೊಟ್ಟು ಹೋಗೋಕೆ ಆಗ್ತದಾ'' ಎಂದು ಖಾರವಾಗಿಯೇ ಮಾತನಾಡಿದರು. ನನಗೆ ಆದ ಕಹಿ ಅನುಭವ ಇದೇ ಎನ್ನಬೇಕು. ''ಎರಡೇ ದಿನ ಕಾಲವಕಾಶ ಕೊಡಿ, ಈಗ ಆಗಿರುವ ವಿಳಂಬಕ್ಕೆ ನಾನು ವಿಷಾದಿಸುತ್ತೇನೆ'' ಎಂದಿದ್ದೆ.

ಅಂಕಿ ಅಂಶಗಳ ''ಛಾರ್ಟ್''ನ್ನು ornamental ಆಗಿ ಮಾಡಿಸಿಡಬೇಕೆಂಬ ನನ್ನ ಪ್ರಯತ್ನ ತಡವಾದುದಕ್ಕೆ ಅದರ ಜವಾಬ್ದಾರಿ ವಹಿಸಿಕೊಂಡಿದ್ದ ಕಲಾವಿದನ ವಿಳಂಬ ಧೋರಣೆಯೇ ಕಾರಣವೆಂಬುದು ನನ್ನನ್ನು ಸಹಜವಾಗಿಯೇ ಸಿಟ್ಟಿಗೆಬ್ಬಿಸಿತ್ತು. ಬೇರೆಲ್ಲ ನನ್ನ ಕೆಲಸಗಳನ್ನು ದೂರವಿಟ್ಟು ಆ ಕಲಾವಿದನೊಡನೆ ಒಬ್ಬನಾಗಿ ನನಗೆ ತೃಪ್ತಿ ಕೊಡುವಂತಹ ಕೆಲಸಮಾಡಿ ಮುಗಿಸಿ ತ್ವರಿತವಾಗಿ ಮಂತ್ರಿಗಳ ಛೇಂಬರ್‌ಗೆ ತೆಗೆದುಕೊಂಡು ಹೋಗಿ ಓರಣವಾಗಿ ವ್ಯವಸ್ಥೆಮಾಡಿ ಬಂದುಬಿಟ್ಟೆ. ಆಗವರು ಪ್ರವಾಸದಲ್ಲಿದ್ದರೆಂದು ತಿಳಿಯಿತು. ಎಂದಿನಂತೆ ಮರುದಿನ ತಮ್ಮ ಛೇಂಬರ್‌ಗೆ ಬಂದವರು ಆಪ್ತ ಸಹಾಯಕರನ್ನು ಕರೆದು ನನಗೆ ಫೋನಾಯಿಸಲು ತಿಳಿಸಿದರಂತೆ. ಆಗ ಅವರು ನಾನು ಹಿಂದಿನ ದಿನ ಬಂದು ಮಾಡಿರುವ ವ್ಯವಸ್ಥೆಯನ್ನು ತಿಳಿಸಿದರಂತೆ. ತುಂಬ ಖುಷಿಯಾದ ಶ್ರೀಯುತರು ''ಅದಕ್ಕೇ ಕಣ್ರೀ ತಡಮಾಡಿರುವುದು... ವರ್ಣಮಯ, ಸಮಯೋಚಿತ ಚಿತ್ರಗಳನ್ನು ಬಳಸಿ ಆಕರ್ಷಕವಾಗಿ ಜೋಡಿಸಿದ್ದಾರೆ'' ಎಂದು ಮೆಚ್ಚುಗೆ ವ್ಯಕ್ತಪಡಿಸಿದರಂತೆ. ನನಗೂ ಫೋನ್ ಮಾಡಿ ''ತುಂಬಾ ಥ್ಯಾಂಕ್ಸ್ ಚೆನ್ನಾಗಿ ಮೂಡಿ ಬಂದಿದೆ'' ಎಂದಿದ್ದರು.

ನೆನಪಿನ ಸುರುಳಿ ಬಿಚ್ಚಿಕೊಂಡಂತೆ ಹೆಚ್ಚು ಹೆಚ್ಚು ಪ್ರಸಂಗಗಳು ಕಣ್ಮುಂದೆ ಸುಳಿಯುತ್ತವೆ. ಕಾಲಾವಕಾಶವಿಲ್ಲ. ಪುಟಗಳ ಇತಿ-ಮಿತಿ ಲೇಖನ ಮುಂದುವರಿಯಲು ಬಿಡುತ್ತಿಲ್ಲ.

○

# ನ್ಯಾಯದ ಹಾದಿಯ ಧೀರ

ಎಸ್ ಎಂ ಕೃಷ್ಣ

ವೈ ಕೆ ರಾಮಯ್ಯ ವಿಶಿಷ್ಟ ವ್ಯಕ್ತಿತ್ವದ ರಾಜಕಾರಣಿ. ಕೇವಲ ರಾಜಕೀಯವನ್ನು ತಮ್ಮ ಬದುಕಿನ ಗುರಿಯನ್ನಾಗಿಸಿಕೊಳ್ಳದೆ, ತಮ್ಮ ಸುತ್ತಣ ಬದುಕಿನಲ್ಲಿ ಗುಣಾತ್ಮಕ ಬದಲಾವಣೆ ತರಲು ಪ್ರೇರೇಪಕರಾಗಿ ಶ್ರಮಿಸುತ್ತಿರುವ ಅವರ ಕಾರ್ಯವೈಖರಿ ಹಲವು ನಿಟ್ಟಿನಲ್ಲಿ ಮಾದರಿ. ತುಮಕೂರು ಜಿಲ್ಲೆಗೆ ಹೇಮಾವತಿ ನದಿಯ ನೀರನ್ನು ಹರಿಸಲು ಕಟಿಬದ್ಧರಾಗಿ ಹೋರಾಡಿ ಯಶಸ್ವಿಯಾಗಿರುವ ಅವರು ನಾಡಿನಾದ್ಯಂತ ಜನಮನದಲ್ಲಿ ನೆಲೆಗೊಂಡಿದ್ದಾರೆ.

ಸಾಮಾನ್ಯ ಜನರ ಸಂಕಷ್ಟಗಳಿಗೆ ಸ್ಪಂದಿಸುವ ಅವರ ಕ್ರಿಯಾಶೀಲತೆ ಅಪರೂಪದಲ್ಲಿ ಅಪರೂಪ. ನೇರ, ನಿಷ್ಠುರ ನಡೆಗೆ ಆಗಾಗ್ಗೆ ಶೀಘ್ರಕೋಪದ ಸಿಂಚನ ತುಸು ಅಪ್ರಿಯ ವ್ಯಕ್ತಿತ್ವದ ಪರಿಚಯ ಮಾಡಿಸಿದರೂ ಹೃದಯಾಂತರಾಳದ ಆಶಯ ಮತ್ತು ಮಿಡಿಯುವ ಮನಸ್ಸು ಎಲ್ಲರನ್ನೂ ಅವರತ್ತ ಆಕರ್ಷಿಸಿದೆ ಎಂದರೆ ತಪ್ಪಲ್ಲ. ಕರ್ನಾಟಕದ ರಾಜಕೀಯ ಕ್ಷೇತ್ರದಲ್ಲಿ ಅವರದೇ ಆದ ಸ್ಥಾನ ರೂಪುಗೊಳ್ಳಲು ಅವರ ಕ್ರಿಯಾಶೀಲತೆ ಮತ್ತು ಸಂವೇದನಾಶೀಲತೆಗಳು ಕಾರಣಗಳಾಗಿವೆ. ರಾಜಕೀಯ ಅಭಿವೃದ್ಧಿ, ಪರಿಸರಪರ ಕಾಳಜಿ, ದುರ್ಬಲರ ಏಳಿಗೆ, ಗ್ರಾಮೀಣ ಜನಪರ ನಿಲುವು ಮತ್ತು ಸಮಾಜವನ್ನು ಕಾಡುವ ಎಲ್ಲಾ ವಿಧದ ಸಮಕಾಲೀನ ಸಮಸ್ಯೆಗಳಿಗೆ ವಿಶ್ಲೇಷಣೆಗಳನ್ನು ಮತ್ತು ಸ್ಪಂದನವನ್ನು ವ್ಯಕ್ತಪಡಿಸುವ ಅವರ ವ್ಯಕ್ತಿತ್ವವು ಸೂಜಿಗಲ್ಲಿನಂತೆ ಅವರತ್ತ ಎಲ್ಲಾ ವಯೋಮಾನದ ಜನರನ್ನು ಸೆಳೆದಿದೆ.

ಶಾಸನ ಸಭೆಯಲ್ಲಿ ಯಾವತ್ತೂ ಕಡುಬಡವರ, ರೈತರ, ವಿದ್ಯಾರ್ಥಿ ಯುವಜನರ ದನಿಯಾಗಿ ಅವರು ವಿಜೃಂಭಿಸಿದ್ದಾರೆ. ವ್ಯವಸಾಯ, ತೋಟಗಾರಿಕೆ, ರೇಷ್ಮೆ, ನೀರಾವರಿ, ಪರಿಸರ ಅಭಿವೃದ್ಧಿ ಮೊದಲಾದ ವಿಚಾರಗಳ ಬಗ್ಗೆ ಅನುಭವಜನ್ಯ ವಿಚಾರಗಳ ಬೆಂಗಾವಲಿನಲ್ಲಿ ಪ್ರಬುದ್ಧ ಚರ್ಚೆಯನ್ನು ಮಂಡಿಸುವ ಅವರ ಮಾತಿನ ವೈಖರಿ ನಮ್ಮೆಲ್ಲರನ್ನು ಬೆರಗುಗೊಳಿಸಿದೆ. ಹಿಡಿದ ಕೆಲಸವನ್ನು ಹಠಸಾಧಿಸಿ ಪೂರ್ಣಗೊಳಿಸಿಕೊಳ್ಳುವ ಜಾಯಮಾನ ಅವರನ್ನು ಇತರರಿಗಿಂತ ಭಿನ್ನ ರಾಜಕಾರಣಿಯನ್ನಾಗಿಸಿದೆ. ಜನಪರ ಹೋರಾಟಗಳಲ್ಲಿ ಪ್ರಖರ ಚಿಂತನೆಯ ನೆಲೆಯಲ್ಲಿ ತೊಡಗಿಸಿಕೊಳ್ಳುವ ಅವರು ನಾವೆಲ್ಲ ನೆಚ್ಚಬಹುದಾದ ಮತ್ತು ಮೆಚ್ಚಿಕೊಳ್ಳಬಹುದಾದ ವ್ಯಕ್ತಿಯಾಗಿದ್ದಾರೆ.

ಸಂಸ್ಕೃತ ಸುಭಾಷಿತ ತಿಳಿಸುವಂತೆ : **"ನೀತಿನಿಪುಣರು ನಿಂದಿಸಲಿ ಅಥವಾ ವಂದಿಸಲಿ, ಹಣ ಸಂಪಾದನೆಯಾಗಲಿ ಅಥವಾ ಇಲ್ಲದಿರಲಿ, ಮರಣ ಇಂದೇ ಬರಲಿ ಅಥವಾ ಯುಗಾಂತರದಲ್ಲಿ ಸಂಭವಿಸಲಿ, ಧೀರರು ನ್ಯಾಯದ ಪಥವನ್ನು ಬಿಟ್ಟು ಸರಿಯಲಾರರು"** ಎಂಬರ್ಥದ ಮಾತುಗಳಿಗೆ ಅನುರೂಪವಾಗಿ ನಮ್ಮ ನಡುವೆ ಬದುಕಿರುವ ಶ್ರೀ ವೈ.ಕೆ. ರಾಮಯ್ಯ ತಮ್ಮ ಬದುಕಿನ ಅರವತ್ತು ವಸಂತಗಳನ್ನು ಕಳೆದು ಇಂದಿಗೂ ಸ್ವಚ್ಛ ಮತ್ತು ಶಕ್ತ ಮೈಮನಸ್ಸುಗಳುಳ್ಳವರಾಗಿ ಕ್ರಿಯಾಶೀಲ ರಾಗಿದ್ದಾರೆ.

ಶ್ರೀ ವೈ.ಕೆ. ರಾಮಯ್ಯ ಅವರು ಅರವತ್ತನ್ನು ತಲುಪಿದ ಈ ಸಂದರ್ಭದಲ್ಲಿ ಅಭಿನಂದನಾ ಸಂಪುಟ ಅರ್ಪಿಸುವ ಮೂಲಕ ಅವರ ಸಾರ್ಥಕ ಬದುಕನ್ನು ಅರ್ಥಪೂರ್ಣವಾಗಿ ಪ್ರತಿಬಿಂಬಿಸುವ ಅವರ ಅಭಿಮಾನಿಗಳ ಪ್ರಯತ್ನ ಶ್ಲಾಘನೀಯವಾಗಿದೆ. ಅವರು ದೀರ್ಘಾಯುಷಿಗಳಾಗಿ ನಾಡು-ನುಡಿಯ ಕೈಂಕರ್ಯದಲ್ಲಿ ಮತ್ತಷ್ಟು ಹುರುಪಿನಿಂದ ತೊಡಗಿಸಿಕೊಳ್ಳಲು ಈ ಅರವತ್ತರ ಹೊಸ್ತಿಲಲ್ಲಿ ಜರುಗುತ್ತಿರುವ ಶುಭಕೋರುವ ಸಮಾರಂಭ ಸ್ಫೂರ್ತಿದಾಯಕವಾಗಲೆಂದು ನಾನು ಹೃತ್ಪೂರ್ವಕವಾಗಿ ಹಾರೈಸಿ ಅಭಿನಂದಿಸುತ್ತೇನೆ.



# ಜನತೆಯ ಬದುಕಿನ ಜೀವನಾಡಿ

**ಪ್ರೊ. ಕಾಳೇಗೌಡ ನಾಗವಾರ**

ಸಕ್ರಿಯ ರಾಜಕಾರಣದಲ್ಲಿರುವ ಕೆಲವು ಹಿರಿಯರು ಮತ್ತು ಸ್ನೇಹಿತರ ನಡುವಣ ನನ್ನ ಒಡನಾಟ ಹಾಗೂ ಆತ್ಮೀಯತೆಯನ್ನು ಕಂಡಿರುವ ಅನೇಕರು ಆಶ್ಚರ್ಯಪಡುತ್ತಾರೆ. ಬುದ್ಧ, ಬಸವ, ಅಂಬೇಡ್ಕರ್, ಕುವೆಂಪು, ಲೋಹಿಯಾ, ಪೆರಿಯಾರ್ - ಮುಂತಾದ ಮಹನೀಯರ ವಿಚಾರಧಾರೆಗೆ ಎಳೆತನದಲ್ಲಿಯೇ ಮನಸೋತುದ್ದರ ಫಲವಾಗಿ ನನ್ನ ತಲೆಮಾರಿನ ಕೆಲವರಾದರೂ ಈ ಸಮಾಜದ ಆರೋಗ್ಯಕರಸ್ಥಿತಿಯ ಬಗ್ಗೆ ಕೈಲಾದ ಮಟ್ಟಿನ ಚಟುವಟಿಕೆಗಳನ್ನು ಹಮ್ಮಿಕೊಳ್ಳ ಬೇಕೆಂಬ ಆಶಯಗಳ ಬೆನ್ನಲ್ಲಿ ಪ್ರಯತ್ನಶೀಲರಾಗಲು ಸಾಧ್ಯವಾಯಿತು. ಈ ಕಾರಣ ದಿಂದಾಗಿ ಮತ್ತು ಬದುಕಿನ ಸಹಜ ತಿರುವುಗಳ ದಾರಿಯಲ್ಲಿ - ನಾಡಿನ ಉದ್ದಗಲದ ನನ್ನ ಸುತ್ತಾಟದ ನಡುವೆ ಸಮಾನಮನಸ್ಕರಾದ ಹಿತೈಷಿಗಳ ದೊಡ್ಡ ಬಳಗ ನನಗೆ ಚಿರಪರಿಚಿತ ವಾದುದ್ದು ಒಂದು ರೀತಿಯ ಆಕಸ್ಮಿಕವೇ ಸರಿ. ಅದರಲ್ಲೂ ಬಿ. ಬಸವಲಿಂಗಪ್ಪ, ಎಂ.ಪಿ. ಪ್ರಕಾಶ್ ಮತ್ತು ವೈ.ಕೆ. ರಾಮಯ್ಯನವರ ಜೀವನ ಹಾಗೂ ಕಾರ್ಯಶೈಲಿಯನ್ನು ಅನೇಕ ವರ್ಷಗಳ ಕಾಲ ತೀರಾ ಹತ್ತಿರದಿಂದ ನೋಡಲು ಸಾಧ್ಯವಾದದ್ದೂ ನನಗೆ ಹೆಚ್ಚಿನ ಸಂತೋಷವನ್ನು ನೀಡಿದೆ.

ಎಲೆಕಡಕಲು ಕಂಬೇಗೌಡ ರಾಮಯ್ಯನವರು ಮತ್ತು ನಾನು ಒಂದೇ ಹಳ್ಳಿಗಾಡಿನ ಹಿನ್ನೆಲೆಯವರು. ಅವರ ಮತ್ತು ನನ್ನ ಬಾಲ್ಯದ ವಾತಾವರಣ, ಬೇಸಾಯದ ಸಕಲ ಸಂಕಷ್ಟಗಳು, ಬಿಸಿಲು-ಬೆಳುದಿಂಗಳ ಒಡನಾಟ, ದನಕರುಗಳ ಪಾಲನೆಪೋಷಣೆ, ರೇಷ್ಮೆ ಬೆಳೆ ಸಂಬಂಧದ ರೇಜಿಗೆಗಳು - ಇತ್ಯಾದಿಯಾದ ಅನುಭವಮಾಲೆ ಎಲ್ಲಾ ಬಹುಪಾಲು ಒಂದೇ ಬಗೆಯವು. ರಾಮಯ್ಯನವರು ನನಗಿಂತಲೂ ಸುಮಾರು ಐದಾರು ವರ್ಷಗಳು ಹಿರಿಯರು. ಸಾಹಿತ್ಯ, ಜನಜೀವನದಲ್ಲಿನ ಬದಲಾವಣೆಗಳು ಮತ್ತು ಸಾಂಸ್ಕೃತಿಕ ವಲಯದ ಬಗೆಗೆ ಹೆಚ್ಚಿನ ಅಭಿರುಚಿ ಹೊಂದಿದ್ದ ಇವರು ನನ್ನ ಕತೆ, ಕವನ, ಲೇಖನಗಳು ಹಾಗೂ ಸಾಮಾಜಿಕ ಕಳಕಳಿಯನ್ನು ಗಮನಿಸಿದ್ದುದರಿಂದ ಸಹಜವಾಗಿಯೇ ನಮ್ಮಿಬ್ಬರ ನಡುವೆ ಆತ್ಮೀಯತೆ ಬೆಳೆಯಲು ಸಾಧ್ಯವಾಯಿತು. ನನ್ನ ಊರು ನಾಗವಾರ ಮತ್ತು ರಾಮಯ್ಯನವರ ಎಲೆಕಡಕಲು ಗ್ರಾಮಕ್ಕೆ ಕಾಲುನಡಿಗೆಯಲ್ಲೇ ಆಕಾಲದಲ್ಲಿ ನಾವೆಲ್ಲ ಓಡಾಡುತ್ತಿದ್ದೆವು. ಹೆಣ್ಣುಕೊಟ್ಟು ಹೆಣ್ಣು ತರುವ ಸಂಬಂಧಗಳು ಹಿಂದಿನಿಂದಲೂ ನಡೆದಿದ್ದವು. ನಮ್ಮ ಊರಿನ ಶ್ರಮ ಜೀವಿಗಳು - ಅವರ ಹಳ್ಳಿಯಲ್ಲಿ ಕಾಣಸಿಗದ - ವೀಳ್ಯದೆಲೆ ತೋಟಗಳಿಗೆ ಭಾರೀ ಭಾರಿ ಗುಂಬ (ಮಣ್ಣಿನ ದೊಡ್ಡ

ಕೊಡ)ಗಳಲ್ಲಿ ನೀರು ಹೊತ್ತು ಹೊಯ್ಯುವ ಸಾಹಸಮಯ ಚೋದ್ಯವನ್ನು ತಾವು ತಮ್ಮ ಎಳೆಯ ಕಣ್ಣುಗಳಲ್ಲಿ ಕಂಡು ಬೆರಗಾಗುತ್ತಿದ್ದುದನ್ನು ಅವರು ಅನೇಕ ಸಲ ನನಗೆ ಸಂತೋಷದಿಂದ ವಿವರಿಸಿದ್ದಾರೆ.

ನಾನು ಮತ್ತು ಡಾ. ಬೆಸಗರಹಳ್ಳಿರಾಮಣ್ಣ ಸುಮಾರು 1966-67ರಿಂದಲೂ ಪರಸ್ಪರ ಆತ್ಮೀಯರು; ಸಮಾನ ಆಸಕ್ತಿಯ ಗೆಳೆಯರು, ಕತೆಗಾರರು. ರಾಮಯ್ಯನವರು ಬೆಸಗರಹಳ್ಳಿ ಗ್ರಾಮದ ಅಳಿಯಂದಿರು. ಡಾ. ರಾಮಣ್ಣ ಮತ್ತು ರಾಮಯ್ಯನವರು ಒಂದು ರೀತಿಯಲ್ಲಿ ನೆಂಟರಾದರೂ ಸಹ ಅದಕ್ಕಿಂತ ಹೆಚ್ಚಾಗಿ ಸ್ನೇಹಿತರು. ಹೀಗಾಗಿ ನಾವೆಲ್ಲ ಆಗಾಗ ಭೇಟಿಯಾಗುವ, ಚರ್ಚಿಸುವ, ಊಟೋಪಚಾರಗಳಲ್ಲಿ ಸೇರುವ ಸಂದರ್ಭಗಳು ಹೆಚ್ಚಾದವು. ರಾಮಯ್ಯನವರು ಶಾಸಕರಾಗುವ ಮೊದಲು ಆ ಭಾಗದ ಪ್ರಸಿದ್ಧ ವಕೀಲರು; ಖಂಡಿತವಾದಕ್ಕೆ, ನಿರ್ದಾಕ್ಷಿಣ್ಯ ಪ್ರವತ್ತಿಗೆ, ಸತ್ಯನಿಷ್ಠೆಗೆ ಮತ್ತೊಂದು ಹೆಸರಾಗಿದ್ದರು. ಅವರ ಆತಿಥ್ಯವನ್ನು ಸವಿಯುವುದೇ ಒಂದು ವಿಶೇಷವಾದ ಆನಂದ. ಅವರ ಮನೆ, ತೋಟ ಮತ್ತು ಕುಣಿಗಲ್ ಪ್ರವಾಸಿಮಂದಿರದಲ್ಲಿ ನಮಗೆಲ್ಲಾ ರಾಜೋಪಚಾರವೇ ಇರುತ್ತಿತ್ತು. ಸರಳತೆ ಮತ್ತು ಸಜ್ಜನಿಕೆಯ ಪ್ರತಿರೂಪವಾಗಿರುವ ಇವರು ಹಿಡಿದ ಕಾರ್ಯವನ್ನು ಬೆನ್ನುಹತ್ತಿ ನೆರವೇರಿಸುವವರು. ಅದರಲ್ಲೂ ಜನಪರವಾದ ಚಟುವಟಿಕೆಗಳಲ್ಲಿ ಜನತೆಯ ಬದುಕಿನ ಜೀವನಾಡಿಯಾಗಿ ಸದಾ ಮುಳುಗಿರುವವರು. ಇಂತಹ ಕೆಲಸಗಳಲ್ಲಿ ಆಸಕ್ತಿಯುಳ್ಳ ಗೆಳೆಯರು ಮತ್ತು ಅಧಿಕಾರಿಗಳ ಜೊತೆಗೆ ತಮ್ಮ ಸನ್ನಡತೆಯ ಮೂಲಕವೇ ಎಲ್ಲರನ್ನೂ ಹುರಿದುಂಬಿಸಿ ಹಗಲಿರುಳೆನ್ನದೆ ದುಡಿಯುವುದರಲ್ಲಿ ಇನ್ನಿಲ್ಲದ ಆನಂದವನ್ನು ಇವರು ಕಾಣುವವರು.

ತಾವಂತೂ ತುಂಬು ಕ್ರಿಯಾಶೀಲರು: ಇವರಿಗೆ ಯಾವ ಸಾರ್ವಜನಿಕ ಕಾರ್ಯವೂ ತಡವಾಗ ಬಾರದು. ಜೊತೆಗೆ ಆ ಕಾರ್ಯದಲ್ಲಿ ತಮ್ಮಂತೆಯೇ ಆತ್ಮಪೂರ್ವಕವಾಗಿ ಪಾಲುಗೊಳ್ಳುವ ಆನಂದದಾಯಕ ಮನಸ್ಸಿನವರು ಸಿಕ್ಕರಂತೂ ಅವರ ಅಭಿಮಾನಿಯೇ ತಾವಾಗಿ ಮಾರ್ಪಡುತ್ತಾರೆ. ಮೈಗಳ್ಳರು ಮತ್ತು ಸಮಾಜವಿರೋಧಿಗಳ ಪಾಲಿಗಂತೂ ಇವರು ಸಿಂಹಸ್ವಪ್ನವಾಗಿರುತ್ತಾರೆ, ಸಾಕ್ಷಾತ್ ದೂರ್ವಾಸಮುನಿಯಾಗಿ ಸಿಡಿದೇಳುತ್ತಾರೆ. ಹೀಗಾಗಿ ರಾಮಯ್ಯನವರು ಇರುವ ಪರಿಸರದಲ್ಲಿ ಜನಸಮುದಾಯದ ಹಿತಕ್ಕೆ ಪೂರಕವಾದ ಕೆಲಸಕಾರ್ಯಗಳು ಯಾವ ಅಡೆ-ತಡೆಯೂ ಇಲ್ಲದೆ ಸಲೀಸಾಗಿ ನಡೆಯುತ್ತಿರುವುದನ್ನು ನಾವೆಲ್ಲ ಅನೇಕ ವರ್ಷಗಳಿಂದ ಕಣ್ಣಾರೆ ಕಾಣುತ್ತಿದ್ದೇವೆ.

ಡಾ. ಬೆಸಗರಹಳ್ಳಿ ರಾಮಣ್ಣ ನನಗಿಂತ ವಯಸ್ಸಿನಲ್ಲಿ ಹತ್ತಿರ ಹತ್ತಿರ ಹತ್ತು ವರ್ಷಗಳ ಕಾಲಕ್ಕೆ ದೊಡ್ಡವರು, ರಾಮಯ್ಯನವರು ಸಹ ರಾಮಣ್ಣನವರಿಗಿಂತ ನಾಲ್ಕೈದು ವರ್ಷ ಚಿಕ್ಕವರು. ಆದರೂ ರಾಮಣ್ಣನವರು ರಾಮಯ್ಯನವರನ್ನು ಅಪಾರ ಗೌರವದಿಂದ

ಕಾಣುತ್ತಿದ್ದರು. ''ಈ ವೈ.ಕೆ.ರಾಮಯ್ಯ ನಮ್ಮೆಲ್ಲರ ಆಶೋತ್ತರಗಳನ್ನು ಈಡೇರಿಸಬಲ್ಲನಾಯಕರು. ಮರಗಿಡಗಳ ವಿಚಾರದಲ್ಲಿ ಇವರ ಅಕ್ಕರೆ ಅಸಾಧಾರಣವಾಗಿದೆ. ಜನರ ಭಂಗ-ಬಡಸ್ತನಗಳನ್ನು ಕಂಡು ಈ ಮನುಷ್ಯ ಕಣ್ಣೀರಿಡುವಷ್ಟು, ಆಳವಾಗಿ ಇದನ್ನೆಲ್ಲ ಅರ್ಥಪೂರ್ಣಮಾಡಿಕೊಳ್ಳುವಷ್ಟು ದೊಡ್ಡವ ನಿದ್ದಾನೆ. ಇಂತಹ ಜನನಾಯಕರು ಮಾತ್ರ ನಾಡಿನ ಉದ್ಧಾರದ ಕನಸುಗಳನ್ನು ಸಾಕಾರಗೊಳಿಸಲು ಸಾಧ್ಯ'' ಎಂದು ಅವರು ಹೃದಯ ತುಂಬಿ ಹೇಳುತ್ತಿದ್ದರು. ರಾಮಣ್ಣ ತಮ್ಮದೇ ಆದ ರೀತಿಯ ತೀರಾ ಭಾವುಕ ಮತ್ತು ಮುಗ್ಧಸ್ಥಿತಿಯಲ್ಲಿ ಸಾಮಾನ್ಯವಾಗಿ ಇಂದಿರಾಗಾಂಧಿ ಅವರಿಂದ ಆರಂಭಿಸಿ ಸಾರ್ವಜನಿಕವಲಯದ ಅನೇಕ ವ್ಯಕ್ತಿಗಳನ್ನು ಹಿಗ್ಗಾಮುಗ್ಗಾ ಟೀಕಿಸುತ್ತಾ, ಬೈಯುತ್ತಾ ಸ್ವಾರಸ್ಯಕರವಾಗಿ ಪ್ರತಿಯೊಂದನ್ನೂ ಕತೆ ಕಟ್ಟಿ ವಿವರಿಸುತ್ತಿದ್ದರು.

ಸೃಜನಶೀಲ ಲೇಖಕರಾದ ಬೆಸಗರಹಳ್ಳಿ ರಾಮಣ್ಣನವರ ವಿಚಾರದಲ್ಲಿ ವೈ.ಕೆ.ರಾಮಯ್ಯ ನವರಿಗೆ ತೀರಾ ಕುತೂಹಲ: ರಾಮಣ್ಣನವರ ಕೆಲವು ವಿಶಿಷ್ಟಗುಣ ಮತ್ತು ವರ್ತನೆಗಳು ಅವರಿಗಷ್ಟೇ ಮೀಸಲಾದುವುಗಳು. ಇದನ್ನೆಲ್ಲಾ ಕಂಡು ನಾವೆಲ್ಲಾ ಖುಷಿಪಡುತ್ತಿದ್ದೆವು. ರಾಮಣ್ಣ ಕೊಂಚ ಷೋಕಿಲಾಲ್, ಅದೆಲ್ಲಕ್ಕಿಂತ ಮಿಗಿಲಾಗಿ ತೀರಾ ಉದಾರಿ. ಅವರದು ಥೇಟ್ ಹಳ್ಳಿಗನ ಭಾಷೆ ಮತ್ತು ಹೃದಯ; ಮಾತಿನ ಸವಿಯಲ್ಲಿ, ಕೂತಲ್ಲೇ ಎಲ್ಲಾ ವಿಷಯಗಳ, ಕಾಲಗಳ ಅತಿಯಾದ ಉತ್ಪ್ರೇಕ್ಷಿತ ಘಟನೆಗಳನ್ನು ನಿರೂಪಿಸುವ ಸ್ವಾರಸ್ಯಕರವಾದ ಅಭಿವ್ಯಕ್ತಿ ವಿಧಾನಗಳ ಸರದಾರ ಅವರು. ತಾನೇ ಕಂಡುಂಡ, ತಾನೇ ಸೃಷ್ಟಿಸಿದ ಈ ಘಟನೆಗಳಲ್ಲಿ ಸತ್ಯ ಮತ್ತು ಕಲ್ಪನೆಗಳ ಪಾಲು ಎಷ್ಟೆಂಬುದನ್ನು ಕ್ಷಣಕಾಲ ಮರೆತು ಎಲ್ಲವನ್ನೂ ನಂಬುವ ವ್ಯಕ್ತಿ . ರಾಜಕೀಯದ ಸಕಲ ವಿವರಗಳಲ್ಲಿಯೂ ಆಸಕ್ತಿ. ಆದರೆ, ಅಲ್ಲಿ ಧುಮುಕಲು ತುಂಬಾ ಭಯ. ಅವರೇ ವೈದ್ಯರಾದುದರಿಂದ ಆರೋಗ್ಯ-ಅನಾರೋಗ್ಯದ ಅಂಶಗಳ ಬಗ್ಗೆ ವಿಪರೀತ ಆತಂಕ. ಕೆಲವು ಸಲ ತಮ್ಮ ಅತಿರೇಕದ ನಿಲುವುಗಳಿಂದ ಸುತ್ತಲಿನ ಎಲ್ಲರನ್ನೂ ಬೆಚ್ಚಿಬೀಳಿಸುತ್ತಿದ್ದರು. ಇವೆಲ್ಲವುಗಳ ಜೊತೆಗೆ ಡಾ. ರಾಮಣ್ಣನವರ ಹೃದಯ ವೈಶಾಲ್ಯ ತುಂಬಾ ದೊಡ್ಡದು. ಎಲ್ಲಾ ಗೆಳೆಯರನ್ನೂ ಅಪಾರವಾಗಿ ಪ್ರೀತಿಸುತ್ತಿದ್ದರು; ತನ್ನ ಜೇಬಿನ ಹಣವನ್ನು ಸ್ನೇಹಿತರಿಗಾಗಿ ಎಡೆಬಿಡದೆ ಖರ್ಚುಮಾಡುತ್ತಿದ್ದರು. ಈ ರಾಮಣ್ಣನವರ ಸಮಗ್ರ ಕಥೆಗಳ ಸಂಕಲನ ''ಕನ್ನಂಬಾಡಿ'' ಗ್ರಂಥದ ಬಿಡುಗಡೆ ಸಮಾರಂಭವು ಮಂಡ್ಯದ ರೈತ ಸಭಾಂಗಣದಲ್ಲಿ ನಡೆಯಿತು. ಅಲ್ಲಿ ಮುಖ್ಯ ಅತಿಥಿಯಾಗಿ ವೈ.ಕೆ.ಆರ್ ಅವರು ಸಹ ಬಂದಿದ್ದರು. ತಮ್ಮ ಸಹಜ ಮಾತಿನ ಧಾಟಿಯಲ್ಲಿ ರಾಮಣ್ಣನವರ ವ್ಯಕ್ತಿತ್ವವನ್ನು ಕುರಿತು ಆತ್ಮೀಯವಾಗಿ ಮಾತನಾಡುತ್ತಾ ''ರಾಮಣ್ಣನವರು ತುಂಬಾ ಸ್ವಾರಸ್ಯ ಕರವಾದ ವ್ಯಕ್ತಿ. ಇಂತಿಷ್ಟೇ ಎಂದು ನಾವ್ಯಾರೂ ಗ್ರಹಿಸಲು ಸಾಧ್ಯವಾಗದ ಮನಸ್ಸು ಮತ್ತು ಆರೋಗ್ಯ ಇವರದು'' ಎಂದು ಸಹಜವಾಗಿ ಹೇಳಿದರು. ಗೆಳೆಯ ರಾಮಣ್ಣನವರ ಸದಾ ಅನಿಕೇತನಸ್ಥಿತಿಯ, ಮುಕ್ತಮನಸ್ಸನ್ನು ಕುರಿತು ರಾಮಯ್ಯನವರು ಸೂಕ್ತ ಶಬ್ದಗಳಲ್ಲಿ ಕರಾರುವಾಕ್ಕಾಗಿ ಹೇಳಿದ್ದು ಕಂಡು ನಮಗೆಲ್ಲ ಆಶ್ಚರ್ಯವಾಯಿತು.

ನಾವು ಪರಸ್ಪರ ಹತ್ತಿರವಾಗಲು ಆರಂಭಿಸಿದ ದಿನಗಳಲ್ಲಿ ...... ಒಮ್ಮೆ ನನ್ನ ಕಿರಿಯ ಮಿತ್ರರಾದ ಹಿತ್ತಲಪುರ ಬೋರಲಿಂಗಯ್ಯನವರ ಜೊತೆಯಲ್ಲಿ ನಾನು ರಾಮಯ್ಯನವರ ಅತಿಥಿಯಾಗಿದ್ದೆ. ಅವರು ಎಂದಿನ ತಮ್ಮ ಸಜ್ಜನಿಕೆ ಪ್ರೀತ್ಯಾದರಗಳಿಂದ ನಮ್ಮನ್ನು ಸತ್ಕರಿಸಿದರು. ನಾವು ಉಳಿದುಕೊಂಡಿದ್ದ ಪ್ರವಾಸಿಮಂದಿರದ ಎದುರಿಗೇ ವಿಶಾಲವಾದ ಕುಣಿಗಲ್ ಕೆರೆಯು ತುಂಬುಬೆಳದಿಂಗಳಿನಲ್ಲಿ ಅಷ್ಟೇ ಹಿತವಾಗಿ ತುಂಬಿತುಳುಕುತ್ತಿತ್ತು. ಈ ಕೆರೆಯು ತೀರಾ ಪ್ರಸಿದ್ಧವಾದುದು. ನಮ್ಮ ಜನಪದ ಕವಿಯ ಹೃದಯವನ್ನು ಸೂರೆಗೊಂಡಿದೆ. ಆ ರಾತ್ರಿ ಊಟಾನಂತರ ಕೆರೆಯ ಏರಿಯ ಉದ್ದಕ್ಕೂ ತುಂಬಾ ಹೊತ್ತಿನ ತನಕ ತಿರುಗಾಡುತ್ತಿದ್ದು ಆನಂದಿಸಿದ ದೃಶ್ಯ ನನ್ನ ಕಣ್ಣುಗಳಲ್ಲಿ ಈಗಲೂ ಅಚ್ಚಳಿಯದಂತೆ ತಂಗಿದೆ. ಆನಂತರದ ದಿನಗಳಲ್ಲಿ ಹಳ್ಳಿಯ ನಿಸ್ಸಹಾಯಕ ಮಹಿಳೆಯೊಬ್ಬಳು ತನ್ನ ಹತಾಶಸ್ಥಿತಿಯಲ್ಲಿ ನೀರಲ್ಲಿ ಮುಳುಗಿ ಆತ್ಮಹತ್ಯೆಮಾಡಿಕೊಳ್ಳುವ ಆಲೋಚನೆಯಲ್ಲಿದ್ದಾಗ, ಆಪತ್‌ಬಾಂಧವನಾಗಿ ಬಂದ ಅಪರಿಚಿತ ಹಳ್ಳಿಯ ಮುಗ್ಧನೊಬ್ಬನು, ಆಕೆಯಲ್ಲಿ ಸಣ್ಣ ಆಶಾಕಿರಣವನ್ನು ಹೊಮ್ಮಿಸಿ ಅನಾಯಾಸವಾಗಿ ಅದೇ ದಾರಿಯ ತನ್ನ ಊರಿಗೆ ಕರೆದೊಯ್ಯುವ ಚಿತ್ರಣದ ನನ್ನ "**ಮಾಯೆ**" ಎಂಬ ವಿಚಿತ್ರತರ ತಿರುವುಗಳ ಕತೆಯನ್ನು ಕಡೆಯುವಾಗ ಆ ನೆನಪಿನ ಹುಣ್ಣಿಮೆಯ ರಾತ್ರಿಯಲ್ಲಿ ನಾನು ಅಕ್ಷರಶಃ ಮುಳುಗಿದ್ದೆ.

ಆದರ್ಶದ ಮನಸ್ಸಿನ ಪಾರದರ್ಶಕತೆಯ ಜೊತೆಗೆ ರಾಮಯ್ಯನವರಲ್ಲಿ ಅಸಾಧಾರಣ ಚಾಕಚಕ್ಯತೆಯ ಗುಣವೂ ಹದವಾಗಿ ಬೆರೆತಿರುವುದರಿಂದ ತಾವು ಮುಟ್ಟಿದ ಯಾವುದೇ ದೊಡ್ಡ ಕಾರ್ಯವನ್ನು ಸಹ ಹೂವೆತ್ತಿದಂತೆ ಇವರು ನೆರವೇರಿಸಬಲ್ಲರು. ಇವರಲ್ಲಿರುವ ಅತೀವ ಜನಪರ ಕಾಳಜಿ, ಶ್ರಮಜೀವನ, ಶಿಸ್ತು ಮತ್ತು ಜಿಗಟುತನಗಳಿಂದಾಗಿ ಯಾರ ಮನಸ್ಸನ್ನಾದರೂ ಗೆದ್ದು ತಮ್ಮ ಗುರಿಯೆಡೆಗೆ ಸಾಗಬಲ್ಲರೆಂಬುದನ್ನು ಕಂಡೇ ಅನೇಕರು ಅಸೂಯೆಯಿಂದ ನರಳುತ್ತಿರುತ್ತಾರೆ. ತನಗೆ ನೇರ ಸಂಬಂಧವಿಲ್ಲದ ಯಾವುದನ್ನೇ ಆದರೂ ಸರಿಯೇ ರಾಮಯ್ಯನವರು ದಿವ್ಯನಿರ್ಲಕ್ಷ್ಯದಿಂದ ಕಾಣಬಲ್ಲರು; ತಮ್ಮ ಹೊಸ ಕನಸನ್ನು ನನಸಾಗಿಸುವ ದಿಕ್ಕಿನಲ್ಲಿ ಮುನ್ನುಗ್ಗಿ ಉಳಿದೆಲ್ಲವನ್ನೂ ತಾವು ಮರೆಯಬಲ್ಲರು.

ಪ್ರಗತಿಪರ ಸಾಹಿತ್ಯ ಮತ್ತು ಚಿಂತನೆಯ ದಿಕ್ಕಿನಲ್ಲಿ ಹೆಚ್ಚಿನ ಆಸಕ್ತಿಯಿಂದಿರುವ ರಾಮಯ್ಯನವರು ಕುವೆಂಪು ಅವರ ವೈಚಾರಿಕತೆಯ ಪ್ರಭಾವಕ್ಕೆ ಹೆಚ್ಚಾಗಿ ಒಳಗಾದವರು. 1972ರಲ್ಲಿ ರಾಜ್ಯ ಮಟ್ಟದ ಜಾನಪದ ಸಮ್ಮೇಳನವನ್ನು ಉದ್ಘಾಟಿಸಲು ನಾಗಮಂಗಲಕ್ಕೆ ಬಂದಿದ್ದ ಕುವೆಂಪು ಅವರನ್ನು ಕಾಣಲೆಂದೇ ಕುಣಿಗಲ್‌ನಿಂದ ಬಂದ ಇವರು ದೂರದಲ್ಲಿ ಒಂದು ಮರದ ಕೆಳಗೆ ನಿಂತು ಕುವೆಂಪು ಅವರ ಉಪನ್ಯಾಸವನ್ನು ಕೇಳಿದ ಅನುಭವವನ್ನು ಕುರಿತು ಆಗಾಗ ಮೆಲುಕು ಹಾಕುತ್ತಿದ್ದರು. ಹೊಸಸಮಾಜದ ಕನಸುಗಳ ದಾರ್ಶನಿಕರಾದ ಕುವೆಂಪು ಅವರನ್ನು ಹತ್ತಿರದಿಂದ ಕಂಡು, ಬಿಡುವಾಗಿ ಚರ್ಚಿಸಬೇಕೆಂಬ ಆಸೆ ರಾಮಯ್ಯನವರಿಗೆ ತುಂಬಾ ಇತ್ತು. 1984ರಲ್ಲಿ ಇವರು



ಕರ್ನಾಟಕ ಗೃಹಮಂಡಳಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ನಾವೆಲ್ಲ ಕೆಲವು ಮಿತ್ರರು ಮೈಸೂರಿನ ಉದಯರವಿಯಲ್ಲಿ ಕುವೆಂಪು ಅವರನ್ನು ಕಂಡೆವು. ''ನಮ್ಮ ಹಳ್ಳಿಗಾಡಿನ ಜನರ ಏಳಿಗೆಯ ವಿಷಯದಲ್ಲಿ ಅಪಾರ ಕಳಕಳಿಯನ್ನಿಟ್ಟುಕೊಂಡಿರುವ ಚೈತನ್ಯಶಾಲಿ ಇವರು'' ಎಂದು ಕುವೆಂಪು ಅವರಿಗೆ ರಾಮಯ್ಯನವರನ್ನು ನಾನೇ ಪರಿಚಯಿಸಿದೆ. ಆಗಲೇ ಸಾಕಷ್ಟು ಹಣ್ಣಾಗಿದ್ದ ಕುವೆಂಪು ಅವರು ತುಂಬು ಸಮಾಧಾನದಿಂದ ತಮಗೆ ಅತ್ಯಂತ ಪ್ರಿಯವಾದ ಕೆಲವು ವಿಚಾರಗಳನ್ನು ಸುತ್ತ ಕುಳಿತವರೊಡನೆ ಹಂಚಿಕೊಂಡರು. ಸಾಕ್ಷಾತ್ ಬುದ್ಧದೇವನನ್ನೇ ಕಂಡು ಮಾತನಾಡಿಸಿದಷ್ಟು ಆನಂದದಿಂದ ನಾವೆಲ್ಲ ಅಲ್ಲಿಂದ ನಿಧಾನವಾಗಿ ಹೊರಬಂದೆವು.

ತೋಟಗಾರಿಕಾ ಸಚಿವರಾಗಿದ್ದ ರಾಮಯ್ಯನವರು ಒಮ್ಮೆ ಮೈಸೂರು, ಕೊಡಗು ಮತ್ತು ಹಾಸನ ಜಿಲ್ಲೆಗಳಲ್ಲಿ ಪ್ರವಾಸದಲ್ಲಿದ್ದರು. ಮೊದಲು ಮೈಸೂರಿಗೆ ಬಂದ ಇವರು ಅಲ್ಲಿಂದ ಹೊರಡುವಾಗ ತಮ್ಮೊಡನೆ ನನ್ನನ್ನೂ ಸೇರಿಸಿಕೊಂಡರು. ಇಡೀ ಎರಡು ಹಗಲು-ಎರಡು ರಾತ್ರಿಗಳ ಅವರ ಒಡನಾಟದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ, ಇವರು ಜನರು ಮತ್ತು ಅಧಿಕಾರಿಗಳ ನಡುವೆ ಚರ್ಚಿಸುವಾಗ ಸಂಪೂರ್ಣ ತಲ್ಲೀನರಾಗಿದ್ದುಕೊಂಡು ದಣಿವರಿಯದೆ ದುಡಿಯುವುದನ್ನು ಕಂಡು ನಾನು ಅವಾಕ್ಕಾದೆ. ಬೇರೆ ಬೇರೆ ಜಿಲ್ಲೆಗಳ ಒಳಭಾಗಗಳಲ್ಲಿ ವಿಶಾಲವಾದ ಹಣ್ಣಿನ ತೋಟಗಳು. ರಾಮಯ್ಯನವರು ತಾವು ಮಂತ್ರಿಯೆಂಬುದನ್ನು ಮರೆತು ಕೃಷಿಕಾರ್ಮಿಕನ ರೀತಿಯಲ್ಲಿ ಮೈಲಿಗಟ್ಟಲೆ ಇರುವ ತೋಟಗಳಲ್ಲಿ ಬಿರುಸಾಗಿ ಸುತ್ತುತ್ತಾ ಪ್ರತಿಗಿಡಮರಗಳ ಆರೋಗ್ಯ ವಿಚಾರಿಸುತ್ತಿದ್ದರು. ಸೋಮಾರಿಗಳನ್ನು ಮತ್ತು ಭ್ರಷ್ಟರನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ಅಲ್ಲಿ ಬಂದೊದಗುವ ಸಮಸ್ಯೆಗಳನ್ನು ತಾವು ಚೆನ್ನಾಗಿ ಅರಿತವರಾಗಿದ್ದರು, ಅವುಗಳಿಗೆ ಸ್ಥಳದಲ್ಲೇ ಪರಿಹಾರವನ್ನು

ಸೂಚಿಸುತ್ತಿದ್ದರು. ಇವರ ಆಗಮನದಿಂದ ಅಲ್ಲಿ ಮಿಂಚಿನ ಸಂಚಾರವಾಗುತ್ತಿತ್ತು. ಆಯಾಯ ಪ್ರದೇಶಗಳಲ್ಲಿ ಕಂಡುಬರುವ ಉತ್ತಮ ನೌಕರರು ಮತ್ತು ಅಧಿಕಾರಿಗಳನ್ನು ತುಂಬುಪ್ರೇಮದಿಂದ ಕಂಡು ಇನ್ನಷ್ಟು ಹುಮ್ಮಸ್ಸಿನಿಂದ ದುಡಿಯುವಂತೆ ಪ್ರೋತ್ಸಾಹಿಸುತ್ತಿದ್ದರು.

ಗಿಡಮರಗಳ ವಿಷಯದಲ್ಲಿ ರಾಮಯ್ಯನವರಷ್ಟು ಗಾಢವಾದ ಪ್ರೇಮವನ್ನು ಇಟ್ಟುಕೊಂಡವರು ನಮ್ಮಲ್ಲಿ ಹೆಚ್ಚಾಗಿ ಇಲ್ಲವೆಂದೇ ಹೇಳಬೇಕು. ಎಲ್ಲೆಲ್ಲಿಯೂ ಹಸಿರು ಸದಾ ನಳನಳಿಸುವ ಸ್ಥಿತಿಯನ್ನು ನಮ್ಮ ಕಣ್ಣುಗಳು ಕಾಣುತ್ತಿರಬೇಕೆಂಬುದು ನನ್ನ ಮತ್ತು ಬೆಸಗರಹಳ್ಳಿ ರಾಮಣ್ಣನವರ ಆಸೆ (ನಾನಂತೂ ಸದಾ ಹಸಿರು ಮುಕ್ಕುಳಿಸುವ ನಮ್ಮ ಕೊಡಗು, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಉತ್ತರಕನ್ನಡ ಜಿಲ್ಲೆಯ ಮಲೆನಾಡು ಭಾಗಗಳಲ್ಲಿ ವರ್ಷದಲ್ಲಿ ಹಲವಾರು ಸಲ ಯಾವುದಾದರೂ ನೆಪದಲ್ಲಿ ಹೊರಟು ಕಾಲಿಗೆ ಚಕ್ರಕಟ್ಟಿಕೊಂಡವನಂತೆ ಅಲ್ಲಿ ಸುತ್ತಾಡುತ್ತಿರುತ್ತೇನೆ). ಸಂವೇದನಾಶೀಲನಾದ, ಹೊಣೆಗಾರಿಕೆಯುಳ್ಳ ಶಾಸಕನೊಬ್ಬ ತನ್ನ ಕ್ಷೇತ್ರದ ಎಲ್ಲ ಭಾಗಗಳಲ್ಲಿ ಗಿಡಮರಗಳನ್ನು ಬೆಳೆಸಿ ಶುದ್ಧವಾದ ಗಾಳಿಗೆ, ಭೂತಾಯಿಯ ತಂಪಿಗೆ, ಉತ್ತಮವಾದ ಅಂತರ್ಜಲದ ಅಭಿವೃದ್ಧಿಗೆ ಕಾರಣನಾಗಬೇಕೆನ್ನುವ ಆಶಯವನ್ನು ನಾವು ರಾಮಯ್ಯನವರ ಜೊತೆಯಲ್ಲಿ ವ್ಯಕ್ತಪಡಿಸುತ್ತಿದ್ದೆವು. ಈ ವಿಚಾರದಲ್ಲಿ ಅವರು ನಮಗಿಂತ ಹೆಚ್ಚು ಸ್ಪಷ್ಟವಾದ ತಿಳುವಳಿಕೆಯನ್ನು ಹೊಂದಿದ್ದರು. ತನ್ನ ಅಂತರಂಗಕ್ಕೆ ಅತ್ಯಂತ ಪ್ರಿಯವಾದ ಸಂಗತಿಯ ಬಗ್ಗೆ ಸಾಮಾನ್ಯವಾಗಿ ಯಾವುದೇ ಗಂಭೀರ ಸ್ವಭಾವದ ವ್ಯಕ್ತಿಯು ಹೊರಗಡೆ ಕೇವಲ ಮಾತನಾಡಲು ಇಷ್ಟಪಡುವುದಿಲ್ಲ. ಹಾಗೆಯೇ ರಾಮಯ್ಯನವರು ಈ ಗಿಡಮರಗಳನ್ನು ನೆಟ್ಟು, ನೀರೆರೆದು ಬೆಳೆಸುವ ಚಟುವಟಿಕೆಗಳನ್ನು ಅಕ್ಷರಶಃ ತಮ್ಮ ಜನ್ಮ ಸಾಫಲ್ಯದ ಕ್ರಮವೆಂದು ಸದಾ ಧ್ಯಾನಿಸುವವರೇ ಆಗಿದ್ದರು. ತಮ್ಮ ಸುತ್ತಣ ಜನರು ಮತ್ತು ಅಧಿಕಾರಿಗಳನ್ನು ಈ ದಿಕ್ಕಿನಲ್ಲಿ ಹುರಿದುಂಬಿಸಿ, ಸರ್ಕಾರಿ ಯಂತ್ರವನ್ನು ಚುರುಕುಗೊಳಿಸಿ ತಮ್ಮ ವಿಧಾನಸಭಾಕ್ಷೇತ್ರ ಹಾಗೂ ತಾಲ್ಲೂಕಿನ ಎಲ್ಲಾ ರಸ್ತೆಗಳಲ್ಲಿ ತಾವೇ ಹುಚ್ಚುಹಿಡಿದವರಂತೆ ಕಾಲ್ನಡಿಗೆಯಲ್ಲಿ ನಡೆಯುತ್ತಾ ಗಿಡನೆಡುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ನಾನು ಮತ್ತು ರಾಮಣ್ಣ ಇಬ್ಬರೂ ಅವರ ಪಕ್ಕದ ಬೇರೆಬೇರೆ ಜಿಲ್ಲೆಗಳು ಮತ್ತು ಬೇರೆ ಬೇರೆ ತಾಲ್ಲೂಕುಗಳಲ್ಲಿ ಹುಟ್ಟಿ ಬೆಳೆದವರು. ''ನಿಮ್ಮ ನೆರೆಯ ತಾಲ್ಲೂಕುಗಳ ಜನತೆ ಮತ್ತು ಜನಪ್ರತಿನಿಧಿಗಳಿಗೆ ಈ ಬಗೆಯ ಸದಭಿರುಚಿಯ ಪಾಠವನ್ನು ನೀವೇ ಹೇಳಬೇಕಾಗಿದೆ. ದಯಮಾಡಿ ನಿಮ್ಮ ಈ ಗಿಡನೆಡುವ ಪಾದಯಾತ್ರೆಯ ಕಾರ್ಯಕ್ರಮಗಳನ್ನು ಪಕ್ಕದ ಚನ್ನಪಟ್ಟಣ ಮತ್ತು ಮದ್ದೂರು ತಾಲ್ಲೂಕು ಕೇಂದ್ರಗಳವರೆಗೆ ನೀವೇ ವಿಸ್ತರಿಸಬೇಕು'' ಎಂದು ನಾವು ಕೇಳಿಕೊಂಡೆವು. ತಮ್ಮ ಆತ್ಮಪೂರ್ವಕ ಕಾರ್ಯಾಚರಣೆಗಳಲ್ಲಿ ರಾಮಯ್ಯನವರದು ಯಾವಾಗಲೂ ಬಿರುಗಾಳಿಯ ವೇಗ ನೋಡಿ. ನಾನು ಮತ್ತು ರಾಮಣ್ಣ ಇದಾದನಂತರ ಯಥಾಪ್ರಕಾರ ನಮ್ಮ ಕೆಲಸಕಾರ್ಯಗಳಲ್ಲಿ ಮುಳುಗಿದೆವು. ಒಂದು ಸುಂದರ ಮುಂಜಾನೆ ಗಿಡಗಳನ್ನು ನೆಟ್ಟು ನೀರೆರೆಯುತ್ತಾ ಹುಲಿಯೂರುದುರ್ಗದಿಂದ ಮದ್ದೂರಿನ ತನಕ ಇವರು ಪಾದಯಾತ್ರೆ ನಡೆಸಿದರು. ಇನ್ನು

ಕೆಲವೇ ದಿನಗಳಲ್ಲಿ ನಾನಾಗ ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದಲ್ಲಿ ನಡೆದ ಸಣ್ಣಕಥೆಗಳ ವಿಚಾರ ಸಂಕಿರಣದ ಉದ್ಘಾಟನಾ ಕಾರ್ಯಕ್ರಮಕ್ಕೆ ಹೋಗಿದ್ದೆ-ಹುಲಿಯೂರುದುರ್ಗದಿಂದ ಚನ್ನಪಟ್ಟಣಕ್ಕೆ, ನಾನು ಹುಟ್ಟಿ ಬೆಳೆದು ಬೆಳಕುಕಂಡ ಹಳ್ಳಿಗಳ ಮೂಲಕ ರಾಮಯ್ಯನವರು ಇದೇ ಪಾದಯಾತ್ರೆಯನ್ನು ಆರಂಭಿಸಿದ್ದರು. ಈ ಸುದ್ದಿ ತಿಳಿದ ನಾನು ರಾತ್ರೋ ರಾತ್ರಿ ಪ್ರಯಾಣ ಮಾಡಿ ಅವರ ಯಾತ್ರೆಯ ಎರಡನೆಯ ದಿನದ ಮುಂಜಾನೆ ನಮ್ಮ ಪಕ್ಕದ ಹಳ್ಳಿಯಾದ ಮಾಕಳಿಗೆ ಬಂದು ಅವರೊಡನೆ ಆತುರಾತುರವಾಗಿ ಸೇರಿಕೊಂಡೆ. ಇಡೀ ದಿನ ಒಟ್ಟಿಗೆ ನಾವು ನಡೆದು, ಗಿಡನೆಟ್ಟು, ನೀರೆರೆದು ಸಂತೋಷಪಟ್ಟೆವು.

ಅತ್ಯಂತ ಸೂಕ್ಷ್ಮವಾದುದೂ, ಬಡರೈತರ ಹಣಕಾಸಿನ ಸ್ಥಿತಿಯ ಅನುಕೂಲದ ದೃಷ್ಟಿಯಿಂದ ಉಪಯುಕ್ತವಾದುದೂ ಆಗಿರುವ ರೇಷ್ಮೆಬೆಳೆಯಲ್ಲಿ ಮುಳುಗಿರುವ ರೈತರ ಮನೆಮಗನಾಗಿ ಬೆಳೆದಿರುವ ರಾಮಯ್ಯನವರು ಈ ಕ್ಷೇತ್ರದಲ್ಲಿನ ಸಮಸ್ಯೆಗಳನ್ನು ಅಡಿಯಿಂದ ಮುಡಿವರೆಗೆ ಚೆನ್ನಾಗಿಯೇ ಅರಿತವರು. ಆದುದರಿಂದ ಈ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಲು ಸುದೀರ್ಘ ಕಾಲ ದೊಡ್ಡ ಹೋರಾಟವನ್ನೇ ನಡೆಸಿದವರು. ಹೀಗಾಗಿ ರೇಷ್ಮೆ ಸಂಬಂಧದ ಯಾವುದೇ ಕಗ್ಗಂಟು ಬಿಡಿಸಲು, ಪರಿಹಾರ ಕಾಣಲು ಎಲ್ಲರೂ ರಾಮಯ್ಯನವರ ಕಡೆಗೇ ಈಗಲೂ ನೋಡುವಂತಾಗಿರುವುದು ಆಶ್ಚರ್ಯದ ಸಂಗತಿಯೇನಲ್ಲ.

ಹೇಮಾವತಿ ನದಿಯ ನೀರನ್ನು ದೂರದ ತುಮಕೂರು ಜಿಲ್ಲೆಗೆ ತರುವ ಅಸಾಧಾರಣ ಸಾಹಸಮಾಡಿ, ಸತತವಾಗಿ ಹೋರಾಟಗಳನ್ನು ನಡೆಸಿ, ಸೆರೆವಾಸ ಅನುಭವಿಸಿ, ವಿವಿಧ ಸರ್ಕಾರಗಳನ್ನು ಮಣಿಸಿ, ಕೋಟ್ಯಾಂತರ ರೂಪಾಯಿಗಳ ಖರ್ಚಿನ ಈ ಜನೋಪಯೋಗಿ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿಯಾಗಿರುವ ರಾಮಯ್ಯನವರ ಸಾಧನೆಯು ಯಾವುದೇ ಜನಪರವಾದ ಹೋರಾಟಗಾರನಿಗೆ ಎಲ್ಲಕಾಲಕ್ಕೂ ಮಾರ್ಗದರ್ಶನ ನೀಡವಷ್ಟು ಆದರ್ಶಯುತವಾಗಿದೆ.

ರೈತಾಪಿಜನತೆಯ ಕಷ್ಟಕೋಟಲೆಗಳನ್ನು ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ, ಅಹಿಂಸಾತ್ಮಕವಾಗಿ, ಹೋರಾಟದ ಮೂಲಕ ಬಗೆಹರಿಸುವ ನೂರಾರು ಕನಸುಗಳನ್ನು ಹೊತ್ತ ಯುವವಕೀಲರಾದ ಎಲೆಕಡಕಲು ರಾಮಯ್ಯನವರಿಗೆ ತಮ್ಮ ಬಿಸಿರಕ್ತದ ಆದರ್ಶದ ದಿನಗಳಲ್ಲಿ ಹಿರಿಯ ಆತ್ಮೀಯ ಒಡನಾಡಿಯಾಗಿ ಜತೆಗೂಡಿದವರು ಹರದನಹಳ್ಳಿ ದೇವೇಗೌಡರು. ವಾಸ್ತವವಾಗಿ ಗಾಣದೆತ್ತುಗಳಂತೆ ದುಡಿಯುತ್ತಲೇ ನಡೆಯುವ ಹಳ್ಳಿಗಾಡಿನ ಶ್ರಮಜೀವಿಗಳು ತಮ್ಮ ಜೀವನದುದ್ದಕ್ಕೂ ಯಾವುದೇ ಮೂಲಭೂತ ಸೌಲಭ್ಯಕ್ಕಾಗಲೀ ನಾಗರಿಕವಾದ ಹಕ್ಕುಗಳಿಗಾಗಲಿ ಕಿಂಚಿತ್ತೂ ಆಲೋಚಿಸದೆ ಮೂಕವಾಗಿ ಬದುಕುತ್ತಿರುವಾಗ-ಈ ಜನಗಳ ಕಣ್ಣೀರನ್ನು ಒರೆಸುವ, ಅವರು ನಿರಾಳವಾಗಿ ಉಸಿರಾಡಲು ಸಾಧ್ಯವಾಗುವಂತಹ ವಾತಾವರಣವನ್ನು ಸೃಷ್ಟಿಸುವುದು ನಮ್ಮ ಆದ್ಯ ಕರ್ತವ್ಯವಾಗಬೇಕಲ್ಲವೆ? ಎಂಬ ಪ್ರಶ್ನೆಗಳ ಜೊತೆಗೆ ಹಗಲಿರುಳೆನ್ನದೆ

ಹಠದಿಂದ ಮುನ್ನುಗ್ಗಿ ಗುರಿಯೆಡೆಗೆ ಸಾಗಬಲ್ಲ ಅಸಾಧಾರಣ ಛಲ ಮತ್ತು ಸಾಮರ್ಥ್ಯವನ್ನು ಸಮಾನವಾಗಿ ಹೊಂದಿರುವ ಜೋಡಿಗಳು ಇವರಾಗಿದ್ದಾರೆ. ಕಷ್ಟ-ಸುಖಗಳಲ್ಲಿ, ಜನಪರ ಚಳುವಳಿಗಳಲ್ಲಿ, ಹೊಸಯೋಜನೆ ಗಳನ್ನು ರೂಪಿಸುವಲ್ಲಿ ಅನೇಕ ವರ್ಷಗಳ ಕಾಲ ಒಂದಾಗಿ ನಡೆದ ಇವರಿಬ್ಬರೂ ಪರಸ್ಪರ ಅಗಲುವ ದಿನಗಳು ಕಾಲಾನುಕ್ರಮದಲ್ಲಿ ಅನಿವಾರ್ಯವೆನ್ನುವಂತೆ ಬಂದುಬಿಟ್ಟವು. ಕೇವಲ ಮನುಷ್ಯರೇ ಆಗಿರುವ ನಮ್ಮೆಲ್ಲರ ಬದುಕಿನಲ್ಲಿ ಅನೇಕ ಸಲ ನಮಗೆ ಥಟ್ಟನೆ ಗೊತ್ತಾಗದಷ್ಟು ತಪ್ಪುಗಳಿಂದ, ಪರಸ್ಪರ ತಪ್ಪು ತಿಳುವಳಿಕೆಗಳಿಂದ, ಅಹಂನಿಂದ, ಅಸೂಯಾಪರ ಜಾಣತನದ ಚಿತಾವಣೆಗಳಿಂದ ಅಥವಾ ಯಾವುದೇ ಇನ್ನಿತರ ಕಾರಣಗಳಿಂದ ಈ ಬಗೆಯ ಅಗಲುವಿಕೆಯು ಬಂದೊದಗುವ ಸಾಧ್ಯತೆಗಳು ಬಹುಶಃ ಇದ್ದೇ ಇರುತ್ತವೆ. ಆದರೂ ಸಹ ಒಂದಾಗಿದ್ದ ದಿನಗಳಲ್ಲಿನ ಎಲ್ಲಾ ಒಳ್ಳೆಯ ಅಂಶಗಳನ್ನು, ಆತ್ಮೀಯ ಕ್ಷಣಗಳನ್ನು, ಅಮೂಲ್ಯವೂ, ಪವಿತ್ರವೂ ಆಗಿದ್ದ ಶುಭಗಳಿಗೆಗಳೆಂದು ನಾವೆಲ್ಲ ಬದುಕಿರುವಷ್ಟು ದಿನಗಳ ಕಾಲ ನೆನಪಿಟ್ಟು ಕೊಳ್ಳಲೇಬೇಕಾಗುತ್ತದೆ. ಅಗಲುವಿಕೆಯ ನಂತರದ ದಿನಗಳಲ್ಲೂ ನಮ್ಮೆಲ್ಲರ ಮಾನಸಿಕ ಆರೋಗ್ಯವು ಚೆನ್ನಾಗಿ ಉಳಿಯಬೇಕೆಂದರೆ ಇದೆಲ್ಲಾ ತುಂಬಾ ಅವಶ್ಯವಾದುದು. ಇಷ್ಟರಮಟ್ಟಿನ ಪರಿಶುದ್ಧತೆಯ ನಂತರ ವಾಸ್ತವವಾಗಿ ನಮ್ಮ ನೈತಿಕಧೈರ್ಯ ಇನ್ನೂ ಹೆಚ್ಚಾಗುತ್ತದೆ; ಆರೋಗ್ಯ ಇಮ್ಮಡಿಸುತ್ತದೆ. ಜನಪರಕಾರ್ಯಯೋಜನೆಗಳಲ್ಲಿ ಸಂಪೂರ್ಣವಾಗಿ, ಕರಗಿಹರಿಯಲು ಸಾಧ್ಯವಾಗುತ್ತದೆ. ಈ ಚಿಂತನೆಯು ಒಳ್ಳೆಯದನ್ನೇ ನೆನೆದು, ಒಳ್ಳೆಯದರೆಡೆಗೆ ನಿರಂತರವಾಗಿ ಸಾಗುವ.ಪೆಬ್ಬಯಕೆಯ, ಹಿರಿಯ ಹಠದ, ಲೋಕಕಲ್ಯಾಣದ ಸೆಲೆಯ, ನಿರಂತರ ಹುಮ್ಮಸ್ಸಿನ, ಪ್ರಸನ್ನತೆಯ, ಯಾವುದರಿಂದಲೂ ವಿಚಲಿತವಾಗದಷ್ಟು ಗಟ್ಟಿಯೂ ಮಧುರತರವೂ ಆದ ಬುದ್ಧದೇವನ ತೆರೆದ ದಾರಿಯಾಗಿದೆ.

ಜನಸಮುದಾಯದ ಉತ್ತಮ ಬದುಕಿಗೆ ಕಾರಣವಾಗಬಲ್ಲ ಯಾವುದೇ ಸಂಗತಿಯ ಬಗ್ಗೆ ರಾಮಯ್ಯನವರು ಬೇಷರತ್ತಾಗಿ, ಮಗುವಿನ ರೀತಿಯ ಮುಕ್ತಮನಸ್ಸಿನಿಂದ ಒಂದಾಗುವ, ಬೆಂಬಲಿಸುವ ವಿಶಿಷ್ಟಗುಣವನ್ನು ಹೊಂದಿರುವುದನ್ನು ಕಂಡು ನಾನು ಸಂತೋಷಪಟ್ಟಿದ್ದೇನೆ. ನಮ್ಮಲ್ಲಿನ ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದನೀತಿ ಹಾಗೂ ವರ್ಗಭೇದ ಸಂಬಂಧದ ಅನೇಕಾನೇಕ ರೀತಿಯ ಕ್ರೌರ್ಯ ಮತ್ತು ವಿಕಾರಗಳನ್ನು ಕುರಿತು ಅಲ್ಲದೆ ನಮ್ಮ ನಡುವಣ ಪರಸ್ಪರ ಅಸಹನೆ, ದ್ವೇಷಾಸೂಯೆ ಮತ್ತು ಕುಬ್ಜತೆಯ ಸ್ಥಿತಿಯ ಬಗ್ಗೆ ಇನ್ನಿಲ್ಲದಂತೆ ಸೂಕ್ಷ್ಮವಾಗಿ ವಿಶ್ಲೇಷಿಸುವ ಇಪ್ಪತ್ತನೆಯ ಶತಮಾನದ ಅತ್ಯಂತ ಸಂವೇದನಾಶೀಲ ಚೇತನವಾದ ಡಾ. ರಾಮಮನೋಹರ ಲೋಹಿಯಾ ಅವರ ಬರಹಗಳು ಕನ್ನಡ ಭಾಷೆಯಲ್ಲಿ ಅತ್ಯುತ್ತಮವಾಗಿ ಅನುವಾದಗೊಂಡು ತೀರಾ ಸುಲಭ ಬೆಲೆಯಲ್ಲಿ ನಮ್ಮ ತಾಯಿನುಡಿಯ ಓದುಗರಿಗೆ ದೊರೆಯುವಂತಾಗಬೇಕೆನ್ನುವ ನಮ್ಮೆಲ್ಲರ ಕನಸುಗಳ ಯೋಜನೆಯು ವಾಸ್ತವವಾಗಿ ಜಾರಿಗೆಬಂದದ್ದು ಎಚ್.ಡಿ. ದೇವೇಗೌಡರು ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ. ಈ ಯೋಜನೆಯ ವಿವಿಧ ಸಂಪುಟಗಳು ಅಚ್ಚುಕಟ್ಟಾಗಿ ಹೊರಬಂದು ಕನ್ನಡಿಗರ ಕೈಸೇರಿದಾಗ ತುಂಬಾ ಸಂತೋಷಪಟ್ಟ

ನಾಡಿನ ಕ್ರಿಯಾಶಾಲಿಗಳಲ್ಲಿ ವೈ.ಕೆ.ರಾಮಯ್ಯನವರು ಸಹ ಒಬ್ಬರು. ಈ ಯೋಜನೆಯು ಜಾರಿಗೊಳ್ಳಲು ಕಾರಣರಾದ ದೇವೇಗೌಡರನ್ನು ಅವರು ಈ ವಿಷಯದಲ್ಲಿ ತುಂಬು ಆಸಂದಾಶ್ಚರ್ಯಗಳಿಂದ ನನ್ನೆದುರು ಅನೇಕ ಸಲ ಮನಸಾರೆ ಅಭಿನಂದಿಸಿದ್ದಾರೆ.

ಹೊರನೋಟಕ್ಕೆ ತೀರಾ ಬಿಗುವಿನ ವ್ಯಕ್ತಿಯಾಗಿ ಕಾಣುವ ರಾಮಯ್ಯನವರು ತಮ್ಮ ಓರಗೆಯ ಗೆಳೆಯರ ಆತ್ಮೀಯ ಕೂಟದಲ್ಲಿ ಹೆಚ್ಚು ಉಲ್ಲಾಸದಿಂದ ಇರುತ್ತಾರೆ. ಇವರು ಮತ್ತು ಇವರ ಓರಗೆಯ ಗೆಳೆಯರ ತಂಡದ ಜೊತೆಗೆ ನಾನೊಮ್ಮೆ ಎರಡು- ಮೂರು ದಿನಗಳ ಮಟ್ಟಿಗೆ ನಮ್ಮ ಪಶ್ಚಿಮ ಕರಾವಳಿಯ ಮಂಗಳೂರು - ಉಡುಪಿ - ಕುಂದಾಪುರ - ಬೈಂದೂರು - ಭಟ್ಕಳ- ಮುರುಡೇಶ್ವರ - ಹೊನ್ನಾವರ ಮುಂತಾದ ಭಾಗಗಳಲ್ಲಿ ಕೊಂಚ ಪುರುಸೊತ್ತಾಗಿ ಅಡ್ಡಾಡುವ ಕಾರ್ಯಕ್ರಮದಲ್ಲಿ ಪಾಲುಗೊಂಡಿದ್ದೆ. ಅಭಿವೃದ್ಧಿ ಯೋಜನೆಗಳ ಹಲವಾರು ಜಂಜಾಟ, ನಗರ ಜೀವನದ ಯಾಂತ್ರಿಕಸ್ಥಿತಿ ಹಾಗೂ ಮತದಾರ ಪ್ರಭುಗಳ ಅಸಂಖ್ಯ ಅಹವಾಲುಗಳ ಮುತ್ತಿಗೆಯಿಂದ ಸಂಪೂರ್ಣ ಪಾರಾಗಿದ್ದ ರಾಮಯ್ಯನವರು ಎಳೆಹರೆಯದ ಹುಡುಗನಂತೆ ಹಳ್ಳಿಗಾಡಿನ ಬದುಕಿನ ತಮ್ಮ ಬಾಲ್ಯದ ನೆನಪುಗಳನ್ನು ವಿವರವಾಗಿ ಹಂಚಿಕೊಂಡರು. ಹಳ್ಳಿಗಳ ಸಂಸ್ಕೃತಿಯ ತಾಜಾತನ, ಭಾಷೆಯ ವೈವಿಧ್ಯಮಯ ಅಭಿವ್ಯಕ್ತಿ ಹಾಗೂ ಚಿತ್ರವಿಚಿತ್ರತರವಾದ ಹಾಸ್ಯಪೂರಿತವೂ, ಆತ್ಮೀಯವೂ ಆದ ಸನ್ನಿವೇಶಗಳ ವರ್ಣನೆಯಲ್ಲಿ ಇಡೀ ಗೆಳೆಯರ ಗುಂಪು ಭಾಗವಹಿಸಿತ್ತು. ಈಚೆಗೆ ಸಂಪೂರ್ಣವಾಗಿ ಕಣ್ಮರೆಯಾಗುತ್ತಿರುವ ಅನೇಕಾನೇಕ ಪರಾಂಪರಾಗತ ಶಬ್ದಗಳ ವೈಶಿಷ್ಟ್ಯಗಳನ್ನು ಕುರಿತು ನಾವೆಲ್ಲ ಅಲ್ಲಿ ಚರ್ಚಿಸಿದೆವು.

ಕನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷನಾಗಿ 1998-2001ರ ಅವಧಿಯಲ್ಲಿ ನಾನು ಕನ್ನಡ ನೆಲದ ಎಲ್ಲ ತೀರಗಳಲ್ಲಿ ಸುತ್ತಾಡುವಾಗ ರಾಮಯ್ಯನವರ ಕುಣಿಗಲ್ ಮನೆಯಲ್ಲಿ ಅನೇಕ ಸಲ ಭೇಟಿಯಾಗಿ, ಸ್ವಯಂ ಅತ್ಯುತ್ತಮ ಸಂಘಟಕರೇ ಆಗಿರುವ ಅವರ ಸಲಹೆ, ಸೂಚನೆ ಮತ್ತು ಮಾರ್ಗದರ್ಶನವನ್ನು ಪಡೆದಿದ್ದೇನೆ. ಅಕಾಡೆಮಿಯ ಆ ಅವಧಿಯ ಮೂರನೇ ಜಾನಪದ ಪ್ರಶಸ್ತಿ ಸಮಾರಂಭವನ್ನು ತುಮಕೂರಿನ ಗುಬ್ಬಿವೀರಣ್ಣ ರಂಗಮಂದಿರದಲ್ಲಿ ಅತ್ಯಂತ ಪರಿಣಾಮಕಾರಿಯೂ ಸದಭಿರುಚಿಯ ದ್ಯೋತಕವೂ ಆಗಿರುವ ರೀತಿಯಲ್ಲಿ ನಾವೆಲ್ಲ ಸೇರಿ ಸಾಮೂಹಿಕ ಸಂತೋಷದಿಂದ ಏರ್ಪಡಿಸಿದ್ದೆವು. ಶ್ರೀ ಜಯರಾಮರಾಜ ಅರಸ್ ಅವರು ಆಗ ಅಲ್ಲಿ ಜಿಲ್ಲಾಧಿಕಾರಿಗಳಾಗಿದ್ದರು. ಅವರು ಮತ್ತು ರಾಮಯ್ಯನವರ ಬೆಂಬಲದಿಂದಾಗಿ ಇಡೀ ಜಿಲ್ಲಾಡಳಿತವು ಆ ಕಾರ್ಯಕ್ರಮವನ್ನು ಯಶಸ್ವಿಯಾಗಿ ಸಾಂಸ್ಕೃತಿಕ ಹಬ್ಬವನ್ನಾಗಿ ಆಚರಿಸಿತು.

ನಾಡಿನ ಸುಸಂಸ್ಕೃತ ಹಿರಿಯ ರಾಜಕಾರಣಿಗಳಲ್ಲಿ ಒಬ್ಬರಾಗಿರುವ ಶ್ರೀ ಎಸ್.ಎಂ. ಕೃಷ್ಣ ಅವರೊಡನೆ ಅತ್ಯಂತ ಮಧುರತರವಾದ ಬಾಂಧವ್ಯವನ್ನು ಹೊಂದಿರುವ ರಾಮಯ್ಯನವರು ತಮ್ಮ ಶಾಸನಸಭಾ ಕ್ಷೇತ್ರ ಮತ್ತು ತುಮಕೂರು ಜಿಲ್ಲೆಯ ಜನತೆಯ ಆಶೋತ್ತರಗಳನ್ನು ಈಡೇರಿಸುವ ದಿಕ್ಕಿನ

ಎಲ್ಲರೀತಿಯ ಉಪಯುಕ್ತ ಯೋಜನೆಗಳಿಗೆ ನ್ಯಾಯಬದ್ಧವಾಗಿ ದೊರೆಯಬೇಕಾದ ನೆರವನ್ನು ಪಡೆಯುತ್ತಿದ್ದಾರೆ. ಮಂತ್ರಿಯಾಗದೆಯೂ ಮಂತ್ರಿಗಳ ಮಂತ್ರಿಯಂತಿರುವ, ನಿರಾಳ ಗಾಳಿ ಬೆಳಕಿನ ಆನಂದದ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಇವರು ತಮ್ಮ ನೇರ ನಡೆನುಡಿಯ ಮೂಲಕ, ಕಠಿಣತಮವಾದ ನೈತಿಕ ಧೈರ್ಯದ ಪ್ರತೀಕವಾಗಿದ್ದು, ಜನಮನ್ನಣೆಗೆ ಪಾತ್ರರಾಗಿದ್ದಾರೆ. ಈ ಬಗೆಯ ಅಪರೂಪದ ಆತ್ಮಾನಂದವನ್ನು ತಾನೂ ಉಂಡು ಸುತ್ತಲವರಿಗೂ ಹಂಚಬಲ್ಲ ಧೀರರು ನಮ್ಮಲ್ಲಿ ಎಷ್ಟು ಜನರಿದ್ದಾರೆ?

ನಾನು ಚೆನ್ನಾಗಿ ಗಮನಿಸಿರುವಂತೆ ಇತ್ತೀಚೆಗಂತೂ ರಾಮಯ್ಯನವರು ತುಂಬಾ ಮಾಗಿದ್ದಾರೆ. ಇಷ್ಟೊಂದು ಕ್ರಿಯಾಶಾಲಿಯೂ, ದಿಟ್ಟರೂ, ಪ್ರಗತಿಪರರೂ, ಜನತೆಯ ಕಾರ್ಯ ಚಟುವಟಿಕೆಗಳಿಗಾಗಿ ತಮ್ಮನ್ನೇ ತೆತ್ತುಕೊಂಡವರೂ ಆಗಿರುವ ಪ್ರಾಮಾಣಿಕ ವ್ಯಕ್ತಿಗೆ ಮಂತ್ರಿ ಪದವಿ ದೊರೆಯಲಿಲ್ಲವಲ್ಲಾ - ಎಂದು ಇಡೀ ನಾಡಿನ ಸಂವೇದಾಶೀಲರೆಲ್ಲ ಆಶ್ಚರ್ಯವ್ಯಕ್ತ ಪಡಿಸುತ್ತಾರೆ. ಆದರೆ, ರಾಮಯ್ಯನವರು ಇದಾವುದರ ಗೋಜಿಗೂ ಹೋಗದೆ ಆರೋಗ್ಯಕರವಾದ ಚಿಂತನೆಯಿಂದ, ಉದಾರವೂ, ಪ್ರಸನ್ನವೂ ಆದ ಮನಸ್ಥಿತಿಯಲ್ಲಿ ತನಗೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನಪ್ರತಿನಿಧಿಯಾಗಿ ದುಡಿಯುವ ಅವಕಾಶ ನೀಡಿರುವ ತನ್ನ ಮತದಾರಪ್ರಭುವಿನ ದಾರಿಗೆ ಅಡ್ಡಲಾಗಿರುವ ಕಲ್ಲುಮುಳ್ಳುಗಳನ್ನು ಆಯ್ದು ಪಕ್ಕಕ್ಕೆ ಸರಿಸುವ, ಆತನ ಕಷ್ಟ- ಸುಖಗಳನ್ನು ಕೇಳುವವರೇ ಇಲ್ಲದ ಸ್ಥಿತಿಯಲ್ಲಿರುವ ಈ ದಣಿಯ ಮುಖದಲ್ಲಿ ಆನಂದದ ಪರಿಶುದ್ಧ ಮುಗುಳ್ನಗೆಯ ಅಲೆಯನ್ನು ಹೊಮ್ಮಿಸುವ ದಿಕ್ಕಿನ ಕೈಂಕರ್ಯದಲ್ಲಿ ಅನುದಿನವೂ ತಲ್ಲೀನರಾಗಿದ್ದಾರೆ. ಇವತ್ತು ರಾಮಯ್ಯನವರ ಕಾರ್ಯಶೈಲಿಯನ್ನು ಹತ್ತಿರದಿಂದ ನೋಡಿದವರೆಲ್ಲ ಬೆಕ್ಕಸಬೆರಗಾಗುತ್ತಾರೆ. ''ಯಾವುದೇ ವಿಚಾರದಲ್ಲಿಯೂ ಅನ್ಯಾಯದ ವಿರುದ್ಧ ಥಟ್ಟನೆ ಸ್ಫೋಟಗೊಳ್ಳುವ ಸಿಡಿಲಮರಿಯಂತೆ ಓಡಾಡುತ್ತಿರುವ ಈತನ ರೀತಿಯಲ್ಲಿ ನಾವೆಲ್ಲಾ ಇರಲು ಸಾಧ್ಯವಾಗುತ್ತಿಲ್ಲವಲ್ಲ'' ಎಂದು ಅನೇಕ ಆದರ್ಶವಾದಿಗಳು, ಆದರ್ಶದ ಕನಸುಗಳ ಅಂಶಗಳನ್ನು ಹೊಂದಿದವರು, ಮೌಲ್ಯಯುತವಾದ ದಾರಿಯ ಮಹತ್ವದ ಅರಿವಿದ್ದೂ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಿರುವವರು...... ಮುಂತಾದ ಹಿರಿಯರು ಕಿರಿಯರೆಲ್ಲ ರಾಮಯ್ಯನವರ ನೇರ ಅಭಿಮಾನಿಗಳಾಗಿದ್ದಾರೆ. ಈ ನೆಲದ ಪುಣ್ಯದ ಫಲವೇ ರೂಪುಗೊಂಡಂತೆ ದಟ್ಟ ಮಲೆನಾಡಿನ ನಡುವಣ ಗೇಣಿದಾರನ ಮಗನಾಗಿ ಹುಟ್ಟಿ, ಸಮಾಜವಾದಿ ಹೋರಾಟಗಾರನಾಗಿ ಬೆಳೆದು, ಪ್ರಾಮಾಣಿಕತೆಯ ತಾರಕಸ್ಥಿತಿಯಲ್ಲಿ ಬದುಕಿ ದುಡಿಯುತ್ತಲೇ ಕಣ್ಮರೆಯಾದ ಶಾಂತವೇರಿ ಗೋಪಾಲಗೌಡರ ನೆನಪನ್ನು ಬೇರೆಬೇರೆ ರೀತಿಗಳಲ್ಲಿ ಉಕ್ಕಿಸುತ್ತಿರುವ ವೈ.ಕೆ. ರಾಮಯ್ಯನವರು ಈ ಸಮಾಜದ ಋಣವನ್ನು ತೀರಿಸುವ ಕಡುಸಂಕಲ್ಪದ ವಿನಯವಂತ ಜನಪ್ರತಿನಿಧಿಯಾಗಿ ಇತರರಿಗೆ ಅಕ್ಷರಶಃ ಮಾದರಿಯಾಗಿದ್ದಾರೆ. ಇಂತಹ ವಿನಯವಂತ ಜನಮನದ ಅಭೀಪ್ಸೆಗಳನ್ನು ಈಡೇರಿಸುವ ಛಲವಂತ ಕ್ರಿಯಾಶಾಲಿಗಳ ಸಂತತಿ ಕರ್ನಾಟಕದಲ್ಲಿ ಹೆಚ್ಚಾಗುತ್ತಿರಲೆಂದು ನಾನು ಹೃದಯತುಂಬಿ ಹಾರೈಸುತ್ತೇನೆ.

○

# ಹಸಿರು ಸಿರಿಯ ಹರಿಕಾರ

**ಎಂ ಆರ್ ಸುರೇಶ್**

ಅಂದು ಮಂಗಳವಾರ: ಅಂಗಳದ ತುಂಬಾ ಜನವಿತ್ತು. ಹೌದು ನನಗಿನ್ನೂ ಚೆನ್ನಾಗಿ ನೆನಪಿದೆ. 1986ರ ಜೂನ್ ತಿಂಗಳು ಎರಡನೇ ಮಂಗಳವಾರ ಸಂಜೆ. ಆಗ ತಾನೆ ಬೆಂಗಳೂರಿನಿಂದ ವೈ.ಕೆ.ಆರ್ ಬಂದಿದ್ದರು. ಅವರನ್ನು ಕಾಣಲು ನನಗೆ ಕರೆ ಬಂತು. ಮನೆಯಂಗಳದ ತುಂಬಾ ಜನ ತುಂಬಿದ್ದರು. ನನಗಿಂತ ಮೊದಲೇ ಬಂದಿದ್ದ, ತುಮಕೂರು ಅರಣ್ಯ ಅಧಿಕಾರಿ ಶಿವಲಿಂಗಯ್ಯನವರೊಂದಿಗೆ ಗಂಭೀರ ಚರ್ಚೆಯಲ್ಲಿದ್ದರು. ರಾಮಯ್ಯನವರ ಮಾತುಗಳು ನನಗೆ ತುಂಬಾ ವಿಶೇಷವಾಗಿ ಕಾಣತೊಡಗಿದವು. ತುಮಕೂರಿನಿಂದ ಕುಣಿಗಲ್ ಕಡೆಗೆ ಪಾದಯಾತ್ರೆ, ದಾರಿಯುದ್ದಕ್ಕೂ ಸಸಿ ನೆಡುವುದು, ಸಸಿಗಳ ವಿತರಣೆ, ಜನರಿಗೆ ಪರಿಸರ, ಶಿಕ್ಷಣ ಮತ್ತು ಆರೋಗ್ಯದ ಬಗ್ಗೆ ಅರಿವು ಮೂಡಿಸುವುದು. ರಾಮಯ್ಯನವರು ತಮ್ಮ ಈ ಚಿಂತನೆಯನ್ನು ತೆರೆದಿಟ್ಟಾಗ ನಿಜಕ್ಕೂ ನನಗೆ ಆಶ್ಚರ್ಯವಾಯಿತು. ಅವರು ತಮ್ಮ ಈ ಚಿಂತನೆಯನ್ನು ಕಾರ್ಯಗತಗೊಳಿಸುವ ದೃಢನಿರ್ಧಾರ ತಳೆದಿದ್ದರು.

ರಾಮಯ್ಯನವರು ಕನ್ನಡ ನಾಡು ಕಂಡ ಕೆಲವೇ ಕೆಲವು ಸ್ವತಂತ್ರ ಚಿಂತಕರಲ್ಲಿ ಒಬ್ಬರು. ತಮ್ಮ ಚಿಂತನೆಗಳನ್ನು ಕಾರ್ಯರೂಪಕ್ಕೆ ಇಳಿಸಲು ಎಲ್ಲರನ್ನು ಹುರಿದುಂಬಿಸಿ ಕಣಕ್ಕಿಳಿಸುವ ಜಾಣ್ಮೆ ಆತ್ಮೀಯತೆಗಳೇ ಇವರ ಯಶಸ್ಸಿನ ಗುಟ್ಟು. ರಾಮಯ್ಯನವರು ತಮ್ಮ ಕಾಲಕ್ಕಿಂತ ಎಷ್ಟೋ ವರ್ಷಗಳಾಚೆ ನಡೆಯಬಲ್ಲ ದೂರದೃಷ್ಟಿಯುಳ್ಳ ರಾಜಕೀಯ ಚಿಂತಕರು. ಆಳುವವರು ಹಾಗೂ ಆಳಿಸಿಕೊಳ್ಳುವವರ ಮಧ್ಯೆ ಇರುವ ಅಂತರವನ್ನು ತೊಡೆದುಹಾಕಲು ಇವರು ಹಮ್ಮಿಕೊಂಡ ಕಾಲ್ನಡಿಗೆ ಕಾರ್ಯಕ್ರಮ ನಮ್ಮ ಎಲ್ಲಾ ಜನಪ್ರತಿನಿಧಿಗಳಿಗೆ ಮಾರ್ಗದರ್ಶಿಯಾಗಿದೆ.

ಪಾದಯಾತ್ರೆಯುದ್ದಕ್ಕೂ ಸಸಿಗಳ ವಿತರಣೆ, ಶಾಲಾ ಕಾಲೇಜು, ಸರ್ಕಾರಿ ಕಛೇರಿಗಳ ಆವರಣಗಳಲ್ಲಿ ಊರ ಜನರೊಂದಿಗೆ ಸಸಿ ನೆಡುವುದು, ಅಲ್ಲಲ್ಲಿ ಪುಟ್ಟ ಸಭೆ, ಸಮಾರಂಭ. ಕುಣಿಗಲ್ -ತುಮಕೂರು ನಡುವೆ ಇರುವ ಹೆಬ್ಬೂರು ಒಂದು ಸಣ್ಣ ಗ್ರಾಮ. ಅಲ್ಲಿ ತಲುಪಿದಾಗ ಮಟಮಟ ಮಧ್ಯಾಹ್ನ. ಸಸಿ ವಿತರಣೆಗಾಗಿ ತಂದ ಸಸಿಗಳಿಂದ ತುಂಬಿದ ಲಾರಿಗೆ ಊರಿನ ಜನರು ಲಗ್ಗೆಹಾಕಿದರು. ನಾವು ವಿತರಿಸುವುದಕ್ಕೆ ಮೊದಲೇ ಲಾರಿ ಮೇಲೆ ಹತ್ತಿ ತಮಗೆ ಬೇಕಾದ ಸಸಿಗಳನ್ನು ಆಯ್ದು ಒಯ್ಯಲಾರಂಭಿಸಿದರು. ಈ ಪೈಪೋಟಿಯಲ್ಲಿ ನಮ್ಮ ನೂರಾರು ಸಸಿಗಳು ಹಾಳಾಗುವುದನ್ನು ನೋಡಿ ಅರಣ್ಯಾಧಿಕಾರಿಗಳಾದ ನಾವೆಲ್ಲ ಖಿನ್ನರಾಗಿದ್ದೆವು. ಅಲ್ಲಿ

ಸಮೀಪದಲ್ಲಿಯೇ ಜನರೊಂದಿಗೆ ಮಾತನಾಡುತ್ತ ನಿಂತಿದ್ದ ರಾಮಯ್ಯನವರ ಮುಖದಲ್ಲಿ ಈ ಚಿತ್ರಣ ನೋಡಿಯೂ ಸಂತೃಪ್ತನಗೆ. ನಮ್ಮ ಮನಸ್ಸಿನ ನೋವನ್ನು ಅರ್ಥಮಾಡಿಕೊಂಡ ಅವರು ನಮ್ಮನ್ನು ಕರೆದು ಹೇಳಿದ ಮಾತು : ''ನೋಡ್ರಿ ಈ ನನ್ನ ಜನ ಹೊಟ್ಟೆಯ ಹಿಟ್ಟಿಗಾಗಿ ಒಬ್ಬರ ಮೇಲೊಬ್ಬರು ಬಿದ್ದು ಕಿತ್ತಾಡ್ತಾ ಇಲ್ಲ. ತಮ್ಮ ಹೊಲಗಳಲ್ಲಿ ನೆಡಲು ಸಸಿಗಳಿಗಾಗಿ ಕಿತ್ತಾಡುತ್ತಿದ್ದಾರೆ. ಇರ್ಲಿ ಬಿಡಿ. ನಿಮಗಿಂತ ಚೆನ್ನಾಗಿ ಸಾಕ್ತಾರೆ.'' ಗ್ರಾಮೀಣ ಜನರ ನಾಡಿಯ ಮಿಡಿತವನ್ನು ಬಲ್ಲ ವೈ.ಕೆ.ಆರ್‌ರಂತಹ ಜನಪ್ರತಿನಿಧಿಗೆ ಮಾತ್ರ ಈ ಸತ್ಯ ಅರ್ಥವಾಗಬಲ್ಲದು.

ನನ್ನ ಅಭಿಪ್ರಾಯದಲ್ಲಿ ರಾಮಯ್ಯನವರ ಪಾದಯಾತ್ರೆಯ ಮೂಲಮಂತ್ರ ಪರಿಸರ ಸಂರಕ್ಷಣೆ. ಪರಿಸರದ ಮೇಲಿನ ಒತ್ತಡ ಕಡಿಮೆಯಾಗಬೇಕಿದ್ರೆ ಜನಸಂಖ್ಯೆ ಕಡಿಮೆಯಾಗಬೇಕು. ಜನಸಂಖ್ಯೆ ಇಳಿಮುಖವಾಗಬೇಕಿದ್ರೆ ಜನರಲ್ಲಿ ಅರಿವು, ಜ್ಞಾನ ಬೇಕು; ಶಿಕ್ಷಣ ಬೇಕು. ಅದಕ್ಕಾಗಿಯೇ ಈ ಮೂರು ಮಂತ್ರಗಳೊಂದಿಗೆ ಜನರ ಮನೆಬಾಗಿಲಿಗೆ ಹೊರಟ ಇತ್ತೀಚಿನ ಅಪರೂಪದ ಜನಪ್ರತಿನಿಧಿ ವೈ.ಕೆ. ರಾಮಯ್ಯನವರು.

ರಾಮಯ್ಯನವರು ಸಚಿವರಾಗಿದ್ದಾಗ, ಒಮ್ಮೆ ಜಪಾನ್ ದೇಶಕ್ಕೆ ಭೇಟಿಕೊಟ್ಟಿದ್ದರು. ಅಲ್ಲಿಯ ಉದ್ಯಾನವನಗಳನ್ನು ನೋಡಿ ಬೆರಗಾದ ಇವರು ಅಲ್ಲಿಂದ ಬರುವಾಗ ಎರಡು ಪುಸ್ತಕಗಳನ್ನು ತಂದು ನನಗೆ ಕೊಟ್ಟಿದ್ದು ನನಗೆ ಕೊಟ್ಟಿದ್ದು ಇನ್ನೂ ಚೆನ್ನಾಗಿ ನೆನಪಿದೆ. ದಿ ಗಾರ್ಡನ್ಸ್ ಆಫ್ ಕ್ಯೊಟೋ (Kyoto) ಅನ್ನುವ ಪುಸ್ತಕ ನನಗೆ ಕೊಟ್ಟು ''ನೋಡಿ ಸುರೇಶ್ ಸಾಧ್ಯವಾದರೆ ಇದರಲ್ಲಿಯ ಒಂದು ಗಾರ್ಡನ್ ನನ್ನ ತಾಲ್ಲೂಕಿನಲ್ಲಿ ರೂಪಿಸಿಕೊಡಿ'' ಎಂದು ಹೇಳಿದರು. ರಾಮಯ್ಯನವರ ಈ ಕನಸೇ ರಾಷ್ಟ್ರೀಯ ಹೆದ್ದಾರಿ 48ರ ಕುಣಿಗಲ್ ತಾಲ್ಲೂಕಿನ ಬ್ಯಾಲದಕೆರೆಯಲ್ಲಿರುವ ಸಸ್ಯಕಾಶಿಯಾಗಿ ರೂಪತಾಳಿದ್ದು.

ಕರ್ನಾಟಕ ಅರಣ್ಯ ಇಲಾಖೆಯ ಹಿರಿಯ ಅಧಿಕಾರಿಯಾಗಿದ್ದ ಗಾಂವ್‌ಕರ್ ರಾಮಯ್ಯನವರ ಅಭಿಮಾನಿಗಳು. ರಾಮಯ್ಯನವರ ಎಲ್ಲಾ ಪಾದಯಾತ್ರೆ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ರಾಜ್ಯದ ಎಲ್ಲಾ ಜನಪ್ರತಿನಿಧಿಗಳು ರಾಮಯ್ಯನವರಂತೆ ಕ್ರಿಯಾಶೀಲ ರಾದಲ್ಲಿ, ನಮ್ಮ ಇಲಾಖೆಯ ಸಿಬ್ಬಂದಿವರ್ಗವನ್ನು ಅರ್ಧದಷ್ಟು ಕಡಿಮೆ ಮಾಡಬಹುದೆಂದು ಆಗಾಗ್ಗೆ ಅವರು ಹೇಳುತ್ತಿದ್ದರು.

ಕುಣಿಗಲ್ ತಾಲ್ಲೂಕಿಗೆ ಅಧಿಕಾರಿಗಳು ವರ್ಗಾವಣೆಗೊಂಡು ಬರಲು ಅಂಜುತ್ತಿದ್ದ ದಿನಗಳಲ್ಲಿ ಒಂದು ಒಳ್ಳೆಯ ಅಧಿಕಾರಿಗಳ ಗುಂಪನ್ನು ತಾಲ್ಲೂಕಿನಲ್ಲಿ ರಾಮಯ್ಯನವರು ಕಟ್ಟಿಕೊಂಡಿದ್ದರು. ತಮ್ಮ ತಮ್ಮ ಇಲಾಖಾ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವೈ.ಕೆ.ಆರ್ ರಿಂದ ಪ್ರಶಂಸೆ ಪಡೆಯುವುದೇ ಒಂದು ಸುಯೋಗ ಎಂಬಂತೆ ಅಂದಿನ ಅಧಿಕಾರಿವರ್ಗ ದುಡಿಯುತ್ತಿತ್ತು. ಅವು ಎಂಬತ್ತರ ದಶಕದ ಉತ್ತರಾರ್ಧದ ದಿನಗಳು. ಅಂದಿನ ತಹಸೀಲ್ದಾರ

ರಾಗಿದ್ದ ರಾಮಾಂಜನೇಯ, ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿದ್ದ ಶ್ಯಾಮಯ್ಯ, ಶಿಕ್ಷಣಾಧಿಕಾರಿಯಾಗಿದ್ದ ರಂಗೇಗೌಡ, ಮಕ್ಕಳ ಕಲ್ಯಾಣಾಧಿಕಾರಿಯಾಗಿದ್ದ ನಂಜೇಗೌಡ, ನಾನು - ಎಲ್ಲರೂ ತಿಂಗಳ ಕೊನೆಯಲ್ಲಿನಡೆಯುವ ಮಾಸಿಕ ಪ್ರಗತಿ ಸಭೆಯಲ್ಲಿ ಶಾಸಕರ ಗಮನ ಸೆಳೆಯಲು ಮುಂದಿನ ಸಾಲಿನಲ್ಲಿ ಕುಳಿತು ಪ್ರಗತಿ ಮಂಡನೆಮಾಡಲು, ಶಾಲಾ ಮಕ್ಕಳಂತೆ ಪೈಪೋಟಿಯಲ್ಲಿರುತ್ತಿದ್ದೆವು.

ಭ್ರಷ್ಟ , ಅದಕ್ಷ ಸರ್ಕಾರಿ ಅಧಿಕಾರಿಗಳ ಪಾಲಿಗೆ ಸಿಂಹಸ್ವಪ್ನವಾಗಿದ್ದ ವೈ.ಕೆ.ಆರ್ ಅವರು ಅಷ್ಟೇ ಪ್ರೀತಿಯಿಂದ ಉತ್ತಮ ಕೆಲಸ ಮಾಡುವ ಅಧಿಕಾರಿಗಳ ಬೆನ್ನುತಟ್ಟುತ್ತಿದ್ದರು. ಕುಣಿಗಲ್ ತಾಲ್ಲೂಕಿನಲ್ಲಿದ್ದ ನಾಲ್ಕು ವರ್ಷಗಳ ಅವಧಿಯಲ್ಲಿ ಒಮ್ಮೆಯೂ ರಾಮಯ್ಯನವರ ಸಿಟ್ಟಿಗೆ, ಕೆಂಗಣ್ಣಿಗೆ ಗುರಿಯಾಗದಿದ್ದ ನಾನು ಹಾಗೂ ನನ್ನ ಗೆಳೆಯ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾದ ಶ್ಯಾಮಯ್ಯನವರು ಒಮ್ಮೆ ಮಾತ್ರ ಅವರಿಂದ ಪ್ರೀತಿತುಂಬಿದ ಸಿಹಿ ಬೈಗುಳದ ಆಶೀರ್ವಾದವನ್ನು ಪಡೆದಿದ್ದೆವು. 1986ರ ವಿಧಾನಸಭಾ ಚುನಾವಣಾ ಫಲಿತಾಂಶ ಆಗತಾನೆ ಬಂದಿತ್ತು; ರಾಮಯ್ಯನವರು ಕೆಲವೇ ಮತಗಳ ಅಂತರದಲ್ಲಿ ಸೋಲನ್ನಪ್ಪಿದ್ದರು. ಫಲಿತಾಂಶದಿಂದ ಮನನೊಂದ ನಾನು ನನ್ನ ಗೆಳೆಯ ಶ್ಯಾಮಯ್ಯ ವೈ.ಕೆ.ಆರ್‌ರವರನ್ನು ಭೇಟಿಯಾಗಲು ಅವರ ಮನೆಗೆ ಹೋದೆವು. ಅದೇ ರೀತಿ ಅಂದು ಅಂಗಳದ ತುಂಬಾ ಜನವಿತ್ತು; ಒಳಮನೆಯಲ್ಲಿ ಕುಳಿತಿದ್ದ ರಾಮಯ್ಯನವರನ್ನು ನಮ್ಮಿಂದ ಎದುರಿಸಲಾಗಲಿಲ್ಲ. ನಮ್ಮ ಮನದಲ್ಲಿ ತುಂಬಿಬಂದ ದುಃಖ ಕಣ್ಣೀರಾಗಿ ಹೊರಬಂದಿತ್ತು. ಮೊದಲಬಾರಿಗೆ ರಾಮಯ್ಯನವರು ನಮ್ಮಿಬ್ಬರ ಮೇಲೂ ರೇಗಾಡಿದರು: ಇದರಲ್ಲೂ ಅವರದ್ದೇ ಆದ ಶೈಲಿ; ಇದೊಂದು ರೀತಿಯ ಸಾತ್ವಿಕ ಸಿಟ್ಟು. ''ನೀವು ಸರ್ಕಾರಿ ಅಧಿಕಾರಿಗಳು ಅನ್ನೋದನ್ನ ಮರೀಬೇಡಿ. ನೀವೇನು ಈ ತಾಲ್ಲೂಕಿನ ರಾಜಕೀಯ ಕಾರ್ಯಕರ್ತರಾ? ದುಃಖಪಡಲು ನಿಮಗೇನಾಗಿದೆ? ಸರ್ಕಾರದ ಯೋಜನೆಗಳನ್ನು ಕಾರ್ಯಗತಗೊಳಿಸಲು ಮಾತ್ರ ನೀವು ಸೀಮಿತವಾಗಿರಬೇಕು ಅನ್ನೋದು ನಿಮಗೆ ಗೊತ್ತಿಲ್ವೆ?''... ಈ ರೀತಿ ಇನ್ನೇನನ್ನೋ ಬೈಯುತ್ತಾ ರೇಗಾಡುತ್ತಾ ಎದ್ದು ಪಕ್ಕದ ರೂಮಿಗೆ ಹೋದರು. ಎರಡು ನಿಮಿಷ ಬಿಟ್ಟು ಹೊರಬಂದಾಗ ರಾಮಯ್ಯನವರ ದಿರಿಸಿನೊಂದಿಗೆ ಒಂದು ಭಾಗವಾಗಿರುವ ಅವರ ಪ್ರೀತಿಯ ಶಾಲು ಒದ್ದೆಯಾಗಿತ್ತು. ನಮ್ಮನ್ನು ಮೈದಡವಿ ''ಇನ್ನೊಮ್ಮೆ ಬನ್ನಿ'' ಅಂತ ಹೇಳಿಕಳುಹಿಸಿಕೊಟ್ಟರು. ಅಂಗಳದಲ್ಲಿ ನೆರೆದಿದ್ದ ಜನಸಮೂಹ ಇನ್ನೂ ಕರಗಿರಲಿಲ್ಲ : ಅಂದು ಅಂಗಳದ ತುಂಬಾ ಜನವಿತ್ತು.

○

## ಪುಟವಿಟ್ಟ ಚಿನ್ನ

**ಅಬ್ಬೂರು ರಾಜಶೇಖರ**

ಕರ್ನಾಟಕ ಕಂಡ ಜನಪರ ಕಾಳಜಿಯ ವಿರಳ ರಾಜಕರಣಿಗಳಲ್ಲಿ ವೈ.ಕೆ. ರಾಮಯ್ಯ ಅವರು ಪ್ರಮುಖರು. 1980ರ ದಶಕದಿಂದ ಸತತವಾಗಿ ಕರ್ನಾಟಕದ ಸಾರ್ವಜನಿಕ ಬದುಕಿನಲ್ಲಿ ಇವರು ರಾಜ್ಯದ ಗಮನಸೆಳೆಯುತ್ತಾ ಬಂದವರು. ಹಳ್ಳಿಗಾಡಿನ ಕುಟುಂಬದಿಂದ ಬಂದು ಕಷ್ಟ ಕೋಟಲೆಗಳ ನಡುವೆ ಪುಟವಿಟ್ಟ ಚಿನ್ನದಂತೆ ಸಾರ್ವಜನಿಕ ಜೀವನ ಪ್ರವೇಶಿಸಿದ ರಾಮಯ್ಯನವರ ಸಾತ್ವಿಕ ಸಿಟ್ಟು, ಅನ್ಯಾಯ ಆಕ್ರಮಗಳ ವಿರುದ್ಧ ಆಕ್ರೋಶ ಹಾಗೂ ಅದರ ಹಿಂದಿನ ಕಳಕಳಿಯನ್ನು ಅರಿತವರಿಗೆ ಅವರ ಬಗ್ಗೆ ಅಭಿಮಾನ ಮೂಡುತ್ತದೆ.

ನಾನಾಗ ಹಾಸನ ಜಿಲ್ಲೆಯಲ್ಲಿ ಪ್ರಜಾವಾಣಿಯ ಜಿಲ್ಲಾ ವರದಿಗಾರನಾಗಿ ಕೆಲಸ ಮಾಡುತ್ತಿದ್ದೆ. ಆಗ ತೋಟಗಾರಿಕೆ ಸಚಿವರಾಗಿದ್ದ ವೈ.ಕೆ. ರಾಮಯ್ಯ ಅವರು ಇಲಾಖೆಯ ಕಾರ್ಯ ವೈಖರಿ ಪರಿಶೀಲನೆಗೆ ಬಂದಿರುವ ವಿಷಯ ತಿಳಿದು, ಅವರನ್ನು ಭೇಟಿ ಮಾಡಲು ಹೋಗಿದ್ದೆ. ಆಗ ಹಾಸನ ಜಿಲ್ಲಾ ಪರಿಷತ್ತಿನ ಸದಸ್ಯ ಹಾಗೂ ಲೋಕೋಪಯೋಗಿ ಸಚಿವ ಎಚ್.ಡಿ. ದೇವೇಗೌಡ ಅವರ ಪುತ್ರ ಎಚ್.ಡಿ. ರೇವಣ್ಣ ಅವರೂ ಸಚಿವರನ್ನು ಕಾಣಲು ಬಂದಿದ್ದವರಲ್ಲಿದ್ದರು. ರೇವಣ್ಣ ಅವರ ಮುಖ ಕಂಡ ತಕ್ಷಣ 'ಏನೋ ರೇವಣ್ಣ, ನಿನ್ನ ಆರ್ಭಟ ಜಾಸ್ತಿ ಆಗಿರುವಂತಿದೆ. ನಿಮ್ಮಪ್ಪನ ಹೆಸರಿಗೆ ಮಸಿ ಬಳಿತೀಯೆ ಹುಷಾರ್' ಎಂದು ಎಲ್ಲರ ಸಮ್ಮುಖದಲ್ಲೇ ಅಂದುಬಿಟ್ಟರು. ಹೀಗೆ ತಮ್ಮ ಮನದಲ್ಲಿರುವುದನ್ನು ಹೊರಗೆಡಹುವಾಗ ಮುಚ್ಚು - ಮರೆಯಿಲ್ಲ, ಅದರ ಪರಿಣಾಮದ ಬಗ್ಗೆ ಅಂಜಿಕೆಯಿಲ್ಲ. ಇದ್ದದ್ದನ್ನು ಇದ್ದಂತೆ, ಕಂಡದ್ದನ್ನು ಕಂಡಂತೆ ಹೇಳುತ್ತಾ ತಕ್ಷಣಕ್ಕೆ ಪ್ರತಿಕ್ರಿಯಿಸುವುದು ರಾಮಯ್ಯನವರು ಕಾರ್ಯನಿರ್ವಹಿಸಿದ ಕ್ಷೇತ್ರಗಳಲ್ಲೆಲ್ಲಾ ಒಳ್ಳೆಯದು ಕೆಟ್ಟದ್ದು ಎರಡನ್ನೂ ಅವರಿಗೆ ತಂದು ಕೊಟ್ಟಿದೆ. ಆದರೆ ರಾಮಯ್ಯನವರಿಗೆ ಈ ಮಣ್ಣಿನ ಬಗ್ಗೆ, ಇಲ್ಲಿನ ಜನರ ದುಃಖ - ದುಮ್ಮಾನಗಳ ಬಗ್ಗೆ, ಅವರ ಸಂಕಟ ನೋವುಗಳ ಬಗ್ಗೆ ಇರುವ ಆಳವಾದ ಕಾಳಜಿ, ಕಳಕಳಿ ಪ್ರಶ್ನಾತೀತ. ಕೆಲವೊಮ್ಮೆ ರಾಮಯ್ಯನವರು ತೆಗೆದುಕೊಂಡ ನಿಲುವುಗಳು ಅತಿರೇಕ ಎನ್ನಿಸಿದರೂ, ಅವರ ರಾಜಕೀಯ ಜೀವನದಲ್ಲಿ ಅವರಿಗೆ ಅರ್ಹವಾದ, ಇನ್ನಷ್ಟು ಪರಿಣಾಮಕಾರಿಯಾಗಿ ಜನಪರವಾಗಿ ಕೆಲಸ ಮಾಡಬಹುದಾದ ಅವಕಾಶಗಳು ಅವರಿಗೆ ಸಿಕ್ಕಿಲ್ಲ.

ರಾಮಯ್ಯನವರನ್ನು ಹತ್ತಿರದಿಂದ ನೋಡಿದ ನನ್ನ ಹಲವಾರು ಗೆಳೆಯರ ಪ್ರಕಾರ ಅವರ ಮುಂಗೋಪ ಅವರ ಮೊದಲ ಶತ್ರು. ನನ್ನ ಪ್ರಕಾರ ಸಾಮಾಜಿಕ ಅನ್ಯಾಯಗಳು-

ಪಾಪಗಳ ವಿರುದ್ಧ ಸಿಟ್ಟು, ಆಕ್ರೋಶ ಬರದಿದ್ದಲ್ಲಿ ಅಂತಹ ವ್ಯಕ್ತಿಯ ಬದುಕು ನಾಯಿಮೊಲೆಯ ಹಾಲಿನಂತೆ! ಸಾತ್ವಿಕ ಸಿಟ್ಟು ಇತರರಿಗೆ ವಕ್ರತೆ ಆದರೆ ಸ್ವಾಭಿಮಾನಿಗೆ ಅದು ಆತ್ಮಗೌರವದ ಸಂಕೇತ. ಈಗ ರಾಮಯ್ಯ ಶಾಸಕರಾದ ನಂತರದ ಘಟನಾವಳಿಗಳನ್ನು ಸ್ವಲ್ಪ ನೋಡಿ. 1983ರಲ್ಲಿ ಜನತಾರಂಗದ ಅಭ್ಯರ್ಥಿಯಾಗಿ ವಿಧಾನಸಭೆ ಪ್ರವೇಶಿಸಿದ ಅವರಿಗೆ ಕೆಲವೇ ದಿನಗಳಲ್ಲಿ ಕರ್ನಾಟಕ ಗೃಹಮಂಡಳಿ ಅಧ್ಯಕ್ಷಸ್ಥಾನವೂ ಲಭ್ಯವಾಯಿತು. ತಮ್ಮ ವಾಕ್ಪಟುತ್ವ, ಕಾರ್ಯವೈಖರಿ ಹಾಗೂ ಜನಹಿತದ ದೀಕ್ಷೆಯಿಂದಾಗಿ ಅವರ ಬೆಳವಣಿಗೆ ಕ್ಷಿಪಣಿಯ ವೇಗದಲ್ಲಿ ಸಾಗಿತು. ಜನತಾ ಸರ್ಕಾರದಲ್ಲಿ ಬಲಿಷ್ಠ ಸಚಿವರಾಗಿದ್ದ ಎಚ್.ಡಿ. ದೇವೇಗೌಡ ಅವರು ರಾಮಯ್ಯನವರ ಶಕ್ತಿ - ಸಾಮರ್ಥ್ಯ ಗುರುತಿಸಿ 'ರಾಮಯ್ಯ ನನ್ನ ಉತ್ತರಾಧಿಕಾರಿ' ಎಂದು ಘೋಷಿಸಿದ್ದು ರಾಜಕೀಯ ವಲಯದಲ್ಲಿ ಸಾಕಷ್ಟು ಚರ್ಚೆಗೆ ಗ್ರಾಸವಾಗಿತ್ತು. ಆದರೆ ಜನತಾ ಸರ್ಕಾರ ಮೊದಲ ಬಾರಿಗೆ ಹಳ್ಳಿಗಾಡಿನ ಜನರ ಸಂಕಟಗಳಿಗೆ ಸ್ಪಂದಿಸಲು, ಅವರ ಮೂಲಭೂತ ಅಗತ್ಯಗಳಾದ ಕುಡಿಯುವ ನೀರು, ರಸ್ತೆ, ಶಾಲೆಯಂತಹ ಪ್ರಾಥಮಿಕ ಅಗತ್ಯಗಳ ಕಡೆಗೆ ಒತ್ತು ನೀಡುವಲ್ಲಿ ದೇವೇಗೌಡರಿಗೆ ಹೆಗಲು ಕೊಟ್ಟು, ಅವುಗಳನ್ನು ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸಿದ ಬೆರಳೆಣಿಕೆಯ ಶಾಸಕರಲ್ಲಿ ರಾಮಯ್ಯ ಅವರು ಅಗ್ರಗಣ್ಯರಾಗಿದ್ದರು.

ದೇವೇಗೌಡರು ಮತ್ತು ರಾಮಯ್ಯನವರ ಸಂಬಂಧ ಈ ಜನಪರ ಕಾಳಜಿಯ ಕಾರಣದಿಂದಲೇ ಹೆಚ್ಚು ನಿಕಟವಾಗಿತ್ತು. ಆಗ ದೇವೇಗೌಡರ ಜತೆಗಿದ್ದ ಶಾಸಕಗಣದಲ್ಲಿ ಇವರಂತೆ ಯಾವ ಮುಲಾಜಿಗೂ ಒಳಗಾಗದೆ, ಇದ್ದದ್ದನ್ನು ಇದ್ದಂತೆ ಪ್ರತಿಪಾದಿಸುವವರ ಸಂಖ್ಯೆ ಬೆರಳೆಣಿಕೆ ಯದಾಗಿತ್ತು. ಕ್ಷೇತ್ರದಲ್ಲಿ ರಾಮಯ್ಯನವರು ಕೈಗೊಂಡ ಸಾಲುಮರಗಳನ್ನು ನೆಡುವ ಯೋಜನೆಯಾಗಲಿ, ರೇಷ್ಮೆಬೆಳೆಗಾರರ ಸಮಸ್ಯೆ ಬಗ್ಗೆ ನಿರಂತರವಾಗಿ ನಡೆಸಿದ ಹೋರಾಟ ಗಳಾಗಲಿ, ಹೇಮಾವತಿ ನೀರಿನ ಆಂದೋಲನವಾಗಲಿ-ಇವೆಲ್ಲವೂ ಗೌಣವಾಗಿ ಕೇವಲ ದೇವೇಗೌಡ-ರಾಮಯ್ಯನವರ ಸಂಬಂಧದ ಒಳಿತು-ಕೆಡುಕುಗಳ ತುಲನೆಯ ಮಟ್ಟಕ್ಕೆ ಬೆಳವಣಿಗಳು ಇಂದು ಸೀಮಿತವಾಗಿದ್ದರೆ ಅದಕ್ಕೆ ಅವರ ನಡುವಿನ ಗಾಢ ವಿಶ್ವಾಸವೂ ಕಾರಣ. ಇಬ್ಬರೂ ಜನರ ಕೆಲಸಕ್ಕಾಗಿ ಊಟ-ನಿದ್ರೆ ಲೆಕ್ಕಿಸದೆ ಅರ್ಪಿಸಿಕೊಳ್ಳುವ ದೈತ್ಯಶಕ್ತಿಯುಳ್ಳವರು. ಜನರಿಗಾಗಿ ಯಾವ ಕ್ಷಣದಲ್ಲಾದರೂ ಬೀದಿಗೆ ಇಳಿದುಬಿಡುವವರು. ಇದರಿಂದಲೇ ಬಹುಶಃ ಪರಸ್ಪರ ಸಂಘರ್ಷವೂ ಇರಬಹುದು!

1984ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ತುಮಕೂರು ಕ್ಷೇತ್ರದಿಂದ ವೈ.ಕೆ.ರಾಮಯ್ಯ ಅವರು ಜನತಾಪಕ್ಷದ ಅಭ್ಯರ್ಥಿಯಾಗಿದ್ದರು. ಶಾಸಕರಾಗಿದ್ದು ಒಂದೆರಡು ವರ್ಷಗಳ ಉರುಳುವ ಮುನ್ನವೇ ಪಕ್ಷದಲ್ಲಿ ಇಷ್ಟು ಎತ್ತರಕ್ಕೆ ಅವರು ಬೆಳೆದಿದ್ದರು. ಅಲ್ಪ ಅಂತರದಿಂದ ಪರಾಭವಗೊಂಡರೂ ಅವರ ವರ್ಚಸ್ಸು ವೃದ್ಧಿಸಲು ಸಹಕಾರಿಯಾಯಿತು.

1985ರಲ್ಲಿ ನಡೆದ ವಿಧಾನಸಭೆ ಚುನಾವಣೆಯಲ್ಲಿ ಇನ್ನೂ ಅಧಿಕ ಬಹುಮತದಿಂದ ವಿಧಾನಸಭೆಗೆ ಆಯ್ಕೆಯಾಗಿ ಬರಲು, ಸಚಿವಸ್ಥಾನ ಲಭ್ಯವಾಗಲು ಈ ಎಲ್ಲ ಬೆಳವಣಿಗೆಗಳು ಕಾರಣ. ಒಂದಂತೂ ಸತ್ಯ. ದೇವೇಗೌಡರು ಹಠ ಹಿಡಿಯದಿದ್ದಲ್ಲಿ, ಆಗ ಒಕ್ಕಲಿಗ ಜನಾಂಗದಲ್ಲಿ ಅತ್ಯಂತ ಸೂಕ್ಷ್ಮಮತಿ ಹಾಗೂ ನಿಷ್ಠುರನಡೆಯ ಮನುಷ್ಯ ಎಂಬ ಖ್ಯಾತಿಗೆ ಪಾತ್ರರಾಗಿದ್ದ ರಾಮಯ್ಯ ಅವರಂತಹ ಪ್ರತಿಭಾವಂತರನ್ನು ಸಚಿವರನ್ನಾಗಿ ಮಾಡಿಕೊಳ್ಳಲು ರಾಮಕೃಷ್ಣಹೆಗಡೆ ಸಮ್ಮತಿಸುತ್ತಿರಲಿಲ್ಲ. ನಿಷ್ಠುರವಾದಿ ಲೋಕವಿರೋಧಿ ಎಂಬ ನಾಣ್ಣುಡಿಯಂತಾಗುತ್ತಿತ್ತು.

ರಾಮಯ್ಯನವರು ರಾಜಕೀಯವಾಗಿ ಬೆಳೆಯುತ್ತಿದ್ದ ವೇಗ ಹೆಗಡೆ ಅವರಂತಹ ನಾಯಕರ ಅರಿವಿಗೆ ಬಂದಿತ್ತು. ದೇವೇಗೌಡರಿಗೂ ರಾಮಕೃಷ್ಣಹೆಗಡೆ ಅವರಿಗೂ ಆಗಲೇ ಭಿನ್ನಾಭಿಪ್ರಾಯ ಆರಂಭವಾಗಿತ್ತು. ಅದು ನೀರಾವರಿ ಹಣ ಬಿಡುಗಡೆ ವಿಚಾರದಲ್ಲಿ ಬಹಿರಂಗ ಗೊಂಡರೂ ವಾಸ್ತವವಾಗಿ ದೇವೇಗೌಡರ ರೆಕ್ಕೆ ಪುಕ್ಕ ಕತ್ತರಿಸುವ ಯತ್ನ ಅದಾಗಿತ್ತು. ಪಕ್ಷದ ಶಾಸಕರ ವಲಯದಲ್ಲಿ ದೇವೇಗೌಡರಿಗೆ ಇದ್ದ ಬೆಂಬಲದ ಸುಳಿವು ಅರಿತು ಅವರನ್ನು ದುರ್ಬಲ ಗೊಳಿಸುವ ಕೆಲಸ ಆರಂಭವಾಯಿತು. ಆದರೆ ಆಗ ದೇವೆಗೌಡರು ಇತ್ತ ಅಸಮಾಧಾನಗೊಂಡ ಶಾಸಕರ ಜತೆಗೂಡಿ ಬಹಿರಂಗವಾಗಿ ತೊಡೆತಟ್ಟುವ ಧೈರ್ಯಮಾಡಲಿಲ್ಲ. ಹೀಗೆ ಹೆಗಡೆ-ಗೌಡರ ಸರಸ ವಿರಸದ ಪರಕಾಷ್ಠೆ ತಲುಪಿ ಹೆಗಡೆ ಅಂತಿಮವಾಗಿ ಶಾಸಕಾಂಗ ಪಕ್ಷದ ಸಭೆ ಕರೆದು ದೇವೇಗೌಡರನ್ನು ಮತ್ತೆ ಮನವೊಲಿಸಿಯೇ ಬಿಟ್ಟಿದ್ದರು. ಆಗ ದೇವೆಗೌಡರನ್ನು ಶಾಸಕಾಂಗ ಸಭೆಯಿಂದ ರಟ್ಟೆಹಿಡಿದು ಎಳೆತಂದು ರಾಜಿಯಾಗದಂತೆ ಒತ್ತಡ ಹೇರಿದವರಲ್ಲಿ ರಾಮಯ್ಯ ಮೊದಲಿಗರು. ನಂತರ ಬೊಮ್ಮಾಯಿ ಸರ್ಕಾರವು ಬಹಳ ದಿನ ಉಳಿಯದೆ ಉರುಳಿಬಿದ್ದಾಗ ದೇವೇಗೌಡರ ಜತೆ ಸಮಾಜವಾದಿ ಜನತಾಪಕ್ಷ ಕಟ್ಟಿ ಹೋರಾಟಕ್ಕೆ ಧುಮುಕಿದರು. ತುಮಕೂರು ಲೋಕಸಭೆ-ಕುಣಿಗಲ್ ವಿಧಾನಸಭೆ ಎರಡೂ ಕ್ಷೇತ್ರಗಳಲ್ಲಿ ಸ್ಪರ್ಧಿಸಿ ಪರಾಭವ ಗೊಂಡರು. ಸ್ವಲ್ಪ ದಿನದಲ್ಲೇ ದೇವೇಗೌಡರ ಜತೆ ಭಿನ್ನಾಭಿಪ್ರಾಯ ದೊಡ್ಡದಾಗಿ ದೂರವಾದರೂ, ಆದರೆ ಲಕ್ಕಪ್ಪನವರ ನಿಧನದಿಂದ ತೆರವಾದ ಕುಣಿಗಲ್ ಉಪ-ಚುನಾವಣೆಯಲ್ಲಿ ದೇವೇಗೌಡ ರೊಬ್ಬರೇ ರಾಮಯ್ಯ ಅವರ ಪರವಾಗಿ ಊರೂರು ಸುತ್ತಿದ್ದರು. ಸರ್ಕಾರದ ದಬ್ಬಾಳಿಕೆ-ದೌರ್ಜನ್ಯ-ಚುನಾವಣಾ ಹಿಂಸಾಚಾರ, ಸಚಿವ ರಮೇಶ್ ತಂಡದ ಗುಂಡಿಗೆ ಅಮಾಯಕನೊಬ್ಬನ ಬಲಿಯೂ ಆಯಿತು.

ಅದೆಲ್ಲ ಇತಿಹಾಸ. ನಂತರ ಹೇಮಾವತಿಯಲ್ಲಿ ಸಾಕಷ್ಟು ನೀರು ಹರಿದಿದೆ. ಅದೂ ಕೂಡ ಮತ್ತೆ ದೇವೇಗೌಡ-ರಾಮಯ್ಯ ಅವರನ್ನು ದೂರಮಾಡಿದೆ. ಮರಳಿ ಒಂದಾಗದಷ್ಟು ರಾಜಕೀಯ ಅಂತರ. ರಾಮಯ್ಯ ಕಾಂಗ್ರೆಸ್ ಸೇರಿ ತಮ್ಮ ಭವಿಷ್ಯ ಅರಸಲು ಹೊರಟರು. ದೇವೇಗೌಡರು ಮರಳಿ ಜನತಾದಳ ಸೇರಿ ಮುಖ್ಯಮಂತ್ರಿ-ಪ್ರಧಾನಿ ಎಲ್ಲವೂ ಆದರು. ಚುನಾವಣೆಯಲ್ಲಿ ಪರಾಭವಗೊಂಡರು. ಮತ್ತೆ ಕನಕಪುರದಲ್ಲಿ ರಾಜಕೀಯ ಮರುಹುಟ್ಟು



ಪಡೆದರು. ದೇವೇಗೌಡರಿಂದ ದೂರಾದ ರಾಮಯ್ಯನವರು ಕಳೆದ ವಿಧಾನಸಭಾ ಚುನಾವಣೆಯಲ್ಲಿ ಹುಲಿಯಾರುದುರ್ಗ ಕ್ಷೇತ್ರದಿಂದ ಶಾಸನಸಭೆಗೆ ಪ್ರವೇಶಿಸಿದರೂ ಸರ್ಕಾರದಲ್ಲಿ ಅವರ ಅರ್ಹತೆಗೆ ಸೂಕ್ತ ಮಾನ್ಯತೆ ಲಭ್ಯವಾಗಲಿಲ್ಲ.

ಈ ನಡುವೆ ಪರಸ್ಪರ ಕೆಸರಾಟ ಅತಿರೇಕಕ್ಕೆ ಹೋಯಿತು ಇಲ್ಲಿ ದೇವೇಗೌಡರದು ತಪ್ಪೆ? ರಾಮಯ್ಯನವರದು ತಪ್ಪೆ? ಎನ್ನುವ ಬಗ್ಗೆ ತಲೆಕೆಡಿಸಿಕೊಳ್ಳುವ ಮುನ್ನ ಇಬ್ಬರ ವಿರಸಕ್ಕೆ ಜನಮಾನ್ಯತೆ ಇಲ್ಲ ಎಂಬುದಂತೂ ಸಂಶಯಕ್ಕೆ ಎಡೆಯಿಲ್ಲದಂತೆ ಸಾಬೀತಾಗಿದೆ.

ಇಲ್ಲಿ ಒಂದು ಘಟನೆ ಜ್ಞಾಪಕಕ್ಕೆ ಬರುತ್ತದೆ: ಚೀನಾದೇಶದ ಮಹಾಕ್ರಾಂತಿಗೆ ಮುನ್ನ ಮಾವೋತ್ಸೇ ತುಂಗ್ ಲಾಂಗ್‌ಮಾರ್ಚ್‌ನಲ್ಲಿ ಜನರನ್ನು ಸಂಘಟನೆ ಮಾಡುತ್ತಾ ಹಳ್ಳಿ -ಹಳ್ಳಿಗಳ ಮೂಲಕ ಹಾದು, ತಮ್ಮ ಕೆಂಪುಸೇನೆಯು ವಿಮೋಚನೆಗಾಗಿ ನಡೆಸುತ್ತಿರುವ ಹೋರಾಟವನ್ನು ಜನರಿಗೆ ಮನವರಿಕೆ ಮಾಡುತ್ತಾ ಸಾಗುತ್ತಿರುತ್ತಾರೆ. ಈ ಮಹಾ ಅಭಿಯಾನವು ಒಂದು ಹಳ್ಳಿಯ ಬಳಿ ತಲುಪಿದಾಗ ಮಾವೊ ಜತೆಗಿದ್ದ ಕೆಂಪುಸೇನೆಯ ಸೈನಿಕರಿಗೆ ಒಂದು ಕೊಳ ಎದುರಾಗುತ್ತದೆ. ಅದರಲ್ಲಿ ಮೀನುಗಳು ರಾಶಿರಾಶಿಯಾಗಿ ವಿಹರಿಸುತ್ತಿರುತ್ತವೆ. ದೀರ್ಘ ಪಯಣದಲ್ಲಿ ಬಸವಳಿದಿದ್ದ ಸೈನಿಕರಿಗೆ ಈ ಮೀನುಗಳನ್ನು ಹಿಡಿದು ಮಾವೋಗೆ ತಿನ್ನಿಸುವ ತವಕ. ಆದರೆ ಎಂದೂ ಮಾವೋಗೆ ಹೇಳದೆ, ಜತೆ ಚರ್ಚಿಸದೆ ಏನನ್ನು ಮಾಡುತ್ತಿರಲಿಲ್ಲ. ಹಿಂಬಾಲಕರು ಮಾವೋ ಬಳಿ ಹೋಗಿ ಆ ಕೊಳದ ಮೀನುಗಳನ್ನು ಹಿಡಿದುತರುತ್ತೇವೆ ಎಂದರು.

ತಕ್ಷಣ ಮಾವೋ ಅವರನ್ನು ತಡೆದು 'ನೋಡಿ ಈ ಹಳ್ಳಿಯ ಜನರು ಬಹುಶಃ ಆ ಕೊಳವನ್ನು, ಅದರಲ್ಲಿರುವ ಮೀನುಗಳನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ನಡೆಸಿಕೊಳ್ಳುತ್ತಿರಬೇಕು. ಆ ಕಾರಣದಿಂದಲೇ ಅವುಗಳನ್ನು ತಿನ್ನದೆ ಬಿಟ್ಟಿದ್ದಾರೆ. ನೀವು ಆ ಮೀನುಗಳನ್ನು ಹಿಡಿದು ತಿಂದರೆ ಆ ಜನರ ಭಾವನೆಗಳನ್ನು ತಿರಸ್ಕರಿಸಿದಂತೆ. ಆಗ ಜನರು ನಿಮ್ಮಿಂದ ದೂರವಾಗುತ್ತಾರೆ. ಜನರ ಭಾವನೆಗಳನ್ನು ಗೌರವಿಸಿ, ಅವರನ್ನು ನಿಮ್ಮೊಂದಿಗೆ ತೆಗೆದುಕೊಳ್ಳಿ. ಈ ವ್ಯವಸ್ಥೆಯ ವಿಕೃತಿಯನ್ನು ಅವರಿಗೆ ಮನವರಿಕೆ ಮಾಡಿಕೊಡಿ. ಆಗ ಅವರೇ ಒಂದು ದಿನ ಆ ಕೊಳದ ಮೀನುಗಳನ್ನು ಹಿಡಿದು ತಂದು ನಿಮಗೆ ತಿನ್ನಿಸುತ್ತಾರೆ' ಎಂದು ಸೂಚಿಸುತ್ತಾರೆ. ಈ ಘಟನೆ ಚೀನಾದಂತಹ ವೈವಿಧ್ಯಮಯ-ವಿಶಾಲ-ಬೃಹತ್ ರಾಷ್ಟ್ರದಲ್ಲಿ ಮಾವೋ ಕ್ರಾಂತಿ ಸಫಲವಾಗಲು ಹೇಗೆ ಸಾಧ್ಯವಾಯಿತು ಎಂಬುದನ್ನು ಮನವರಿಕೆ ಮಾಡಿಕೊಡುವ ಜತೆಗೆ ನಾಯಕನಾಗಿರಬೇಕಾದವರಿಗೆ ಇರಬೇಕಾದ ದಾರ್ಶನಿಕತೆಯನ್ನು ಪರಿಚಯಿಸುತ್ತದೆ.

ಮಾನವ ಸಹಜ ದೌರ್ಬಲ್ಯದ ದೇವೇಗೌಡರೂ-ರಾಮಯ್ಯನವರೂ ಸೇರಿದಂತೆ ಇದು ನಮ್ಮ ನಡುವೆ ಇರುವ ಪ್ರಗತಿಪರ ನಾಯಕರು, ವಿಚಾರವಾದಿಗಳು, ರಾಜಕಾರಣಿಗಳು ಎಲ್ಲರಿಗೂ ಒಂದು ಪಾಠವಿದ್ದಂತಿದೆ.

ಜನರಭಾವನೆ-ಮನೋಭಾವವನ್ನು ಅರ್ಥಮಾಡಿಕೊಳ್ಳಲು ವಿಫಲರಾದವರು ಅವುಗಳನ್ನು ಗೌರವಿಸಲು ಸಾಧ್ಯವಾಗದವರು ಎಂದೂ ಜನರನ್ನು ತಲುಪಲಾಗುವುದಿಲ್ಲ. ಜನರನ್ನು ಕೆಲವು ಸಂದರ್ಭಗಳಲ್ಲಿ ಹಲವು ವಿಧಾನಗಳ ಮೂಲಕ ವಂಚಿಸಿದರೂ ಶಾಶ್ವತವಾಗಿ ವಂಚಿಸಿಸಲಾಗದು. ಸತ್ಯ ವಜ್ರದಷ್ಟು ಕಠಿಣ. ಅದನ್ನು ಪುಡಿ ಮಾಡುವುದು ಮತ್ತಷ್ಟು ಹರಳಗಳ ಸೃಷ್ಟಿಗೆ ಕಾರಣ.

ರಾಜಕಾರಣದಲ್ಲಿ ಇತರರನ್ನೂ ನಿಂದೆ ಮಾಡುತ್ತಲೇ ಯಾರೂ ಮೇಲೆ ಬರಲಾಗದು. ಅದು ಕ್ಷಣಿಕದ ಪರನಿಂದಾನಂದವನ್ನೂ ತಂದು ಕೊಡಬಲ್ಲುದೇ ಹೊರತು, ವ್ಯಕ್ತಿಯು ಸಕಾರಾತ್ಮಕವಾಗಿ ತೊಡಗಿಸಿಕೊಳ್ಳುವುದರಿಂದ ಆತನನ್ನು ವಿಮುಖನನ್ನಾಗಿಸುತ್ತದೆ. ರಾಮಯ್ಯ-ದೇವೇಗೌಡರ ವಿಷಯದಲ್ಲಿ ಆದದ್ದು ಇದೇ. ಆದರೆ ಅದನ್ನು ಪ್ರಜ್ಞಾಪೂರ್ವಕವಾಗಿ ನಿರ್ವಹಿಸಿದ ಹೊಣೆ ಮಾತ್ರ ದುರುದ್ದೇಶಪೂರಿತ ಮಾಧ್ಯಮಗಳ ಕೆಲವೇ ಕೆಲವು ಮಂದಿಯದು.

ಹಾಗೆ ನೋಡಿದರೆ ನಮ್ಮ ಸಮೂಹ ಮಾಧ್ಯಮಗಳಿಗೆ ಇಂದಿಗೂ ಹಳ್ಳಿಗಾಡು ಒಂದು ಅಸ್ಪೃಶ್ಯ ಸಮುದಾಯವಿದ್ದಂತೆ. ಪುರೋಹಿತಶಾಹಿ,ಯಜಮಾನ ಸಂಸ್ಕೃತಿಯ ಪಳೆಯುಳಿಕೆಯಂತಿರುವ ಈ ಮಾಧ್ಯಮಗಳಿಗೆ ಹಳ್ಳಿಗಾಡಿನ ಜನರನ್ನು ಪರಸ್ಪರ ಕಚ್ಚಾಡಿಸಿ ಅವರು ಶೋಷಕರ ವ್ಯವಸ್ಥೆಯನ್ನು ಪ್ರಶ್ನಿಸುವ ತೀವ್ರತೆಯನ್ನು ಕಡಿಮೆಮಾಡುವ ದುರುದ್ದೇಶವೂ ಇದರ ಹಿಂದಿದೆ. ವೈ.ಕೆ. ರಾಮಯ್ಯನವರು ಜೀವನದುದ್ದಕ್ಕೂ ಹೋರಾಡಿದ ರೇಷ್ಮೆ ಬೆಳೆಗಾರರ ಸಮಸ್ಯೆಯಾಗಲಿ,

ಹೇಮಾವತಿ ನೀರಿನ ಹೋರಾಟವಾಗಲಿ, ಜನಪರವಾಗಿ ಅವರು ಕೈಗೆತ್ತಿಕೊಂಡ ಕೆಲಸಕಾರ್ಯಗಳಾಗಲಿ ಅವುಗಳ ಗುಣಮಟ್ಟಕ್ಕೆ ಅನುಗುಣವಾಗಿ ಅತ್ಯುತ್ತಮ ರೀತಿಯಲ್ಲಿ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಪ್ರಚಾರ ಪಡೆಯಲೇ ಇಲ್ಲ. ಆದರೆ ದೇವೇಗೌಡರ ಪ್ರತಿಯೊಂದು ನಡೆಯ ಬಗ್ಗೆಯೂ ರಾಮಯ್ಯನವರ ಪ್ರತಿಕ್ರಿಯೆಯನ್ನು ಸ್ವಯಂಮಾಧ್ಯಮದವರೇ ಪಡೆದುಕೊಳ್ಳುವ, ಇಲ್ಲವೇ ರಾಮಯ್ಯನವರು ಪ್ರತಿಕ್ರಿಯಿಸಿದಾಗ ಅದಕ್ಕೆ ಎಲ್ಲಿಲ್ಲದ ಮಾನ್ಯತೆ ನೀಡಿ ವಿಕೃತಾನಂದ ಪಡುವ ಮನಸ್ಥಿತಿ ಮಾಧ್ಯಮ ಗಳದಾಗಿದೆ.

ಪ್ರಚಾರ ಮಾಧ್ಯಮ ಚಿನ್ನದ ಚೂರಿಯಿದ್ದಂತೆ: ವ್ಯಕ್ತಿಯ ಒಳ್ಳೆಯ ಮಗ್ಗಲು ಪರಿಚಯವಾಗುವ ಜೊತೆಗೆ, ಆತನಿಗೆ ಅರಿವಿಲ್ಲದಂತೆ ಶತ್ರುಗಳನ್ನು ಹುಟ್ಟುಹಾಕುತ್ತದೆ. ಬಹುಶಃ ರಾಮಯ್ಯನವರು ಅಥವಾ ದೇವೇಗೌಡರ ವೈಯಕ್ತಿಕ ವಿಷಯಗಳನ್ನು ವ್ಯಕ್ತಿದ್ವೇಷದ ಮಟ್ಟಕ್ಕೆ ನೀರೆರೆದು ಪೋಷಿಸಿದ ಪತ್ರಕರ್ತರಿಗೆ ಸದುದ್ದೇಶವಂತೂ ಇರಲಿಲ್ಲ. ಒಕ್ಕಲಿಗ ಜನಾಂಗದವರಾದ ಪರಸ್ಪರ ಇಬ್ಬರು ಮುಖಂಡರನ್ನು ಕೆಸರೆರಚಾಟಕ್ಕೆ ಇಳಿಸಿದಾಗ, ಇಬ್ಬರ ಮೈಗೂ ಕೆಸರು ಅಂಟುವುದನ್ನು ಲೋಕವೇ ಗಮನಿಸುತ್ತದೆ. ಈಗ ರಾಮಯ್ಯನವರು ರಾಜಕಾರಣದಲ್ಲಿ ಸಾಕಷ್ಟು ಮಾಗಿದ್ದಾರೆ. ಅನುಭವ ಮೂಸೆಯಲ್ಲಿ ನೊಂದು-ಬೆಂದಿದ್ದಾರೆ. ಅವರ ಜನಪರ ಕಾಳಜಿಯ ತೀಕ್ಷ್ಣತೆ ಈಗ ಮತ್ತಷ್ಟು ಪ್ರಜ್ವಲಿಸುವ ಎಲ್ಲ ಗುಣಗಳನ್ನು ಪಡೆದುಕೊಂಡಿದೆ.

ಈ ನಾಡಿಗೆ ರಾಮಯ್ಯನವರ ಕ್ರಿಯಾತ್ಮಕ ಸೇವೆ ಮತ್ತಷ್ಟು ಲಭ್ಯವಾಗಲಿ. ಸಾರ್ವಜನಿಕ ಜೀವನ ಸಂಪೂರ್ಣ ಅಧಃಪತನದ ಅಂಚಿನಲ್ಲಿರುವಾಗ ರಾಜಕಾರಣಿಗಳು ಉದುರುವ ಉಲ್ಕೆಗಳಂತಾಗುತ್ತಿದ್ದಾರೆ. ರಾಮಯ್ಯನವರಂತಹ ಮಣ್ಣಿನ ಗಾಢ ಸಂಬಂಧ ಹೊಂದಿರುವ ಸದೃಢರು ಈ ಉಲ್ಕೆಗಳ ನಡುವಿನ ನಕ್ಷತ್ರಗಳಂತೆ ಗೋಚರಿಸಿದರೆ ಅದು ಹಳ್ಳಿಗಾಡಿನ ದಿಗ್ವಿಜಯವಾಗುತ್ತದೆ.

○

## ಹಸಿರು ಕ್ರಾಂತಿಯ ರೂವಾರಿ

**ಉದಯಶಂಕರ ಭಟ್**

ಹುಲಿಯೂರುದುರ್ಗಕ್ಕೆ ಬನ್ನಿ ಯಾವುದೋ ಐತಿಹಾಸಿಕ ಕ್ರಾಂತಿಗೆ ಹೊರಟಂತೆ ಸಮರೋಪಾದಿ ಸಿದ್ಧತೆ ಇಲ್ಲಿ ನಡೆದಿದೆ.

ಸರ್ಕಾರಿ ಯಂತ್ರ, ಜನಪ್ರತಿನಿಧಿಗಳು, ಧರ್ಮಗುರುಗಳು, ಹಳ್ಳಿ ಹಳ್ಳಿಗಳ ಜನರೆಲ್ಲ ಹಗಲು ರಾತ್ರಿ ಎನ್ನದೆ ಸಿದ್ಧತೆಯಲ್ಲಿ ಮುಳುಗಿದ್ದಾರೆ. ರಸ್ತೆ ಬದಿ, ಗೋಮಾಳ, ಕೆರೆ ಬದಿ ಪಾಳುಭೂಮಿ, ನಾಲೆ ಬದಿ, ಪಂಚಾಯ್ತಿ ಆವರಣ, ದೇವಸ್ಥಾನ, ಮಸೀದಿ, ಚರ್ಚ್, ಶೇಂದಿ ವನ, ಕಚೇರಿ ಆವರಣ, ರೈತರ ಹೊಲಗದ್ದೆ ಒಟ್ಟಿನಲ್ಲಿ ಶಾಲೆಯಿಂದ ಹಿಡಿದು ಸ್ಮಶಾನದವರೆಗೆ ಎಲ್ಲವೂ ಹಸಿರು ಸಮವಸ್ತ್ರಕ್ಕೆ ಸಿದ್ಧವಾಗಿವೆ.

**ಈ ಜನರಿಗೆ ನಾಗಪಂಚಮಿ, ವರಮಹಾಲಕ್ಷ್ಮಿ, ಉಪಾಕರ್ಮ, ಶ್ರಾವಣ ಎಲ್ಲ ಹಬ್ಬಗಳೂ ಮರೆತೇ ಹೋಗಿವೆ. ನಾನು ಹಿಂದು. ನೀನು ಮುಸ್ಲಿಂ. ಅವನು ಕ್ರೈಸ್ತ ಎಂಬ ಬೇಧಭಾವವಿಲ್ಲ; ಎಲ್ಲರಿಗೂ ಒಂದೇ ಹಬ್ಬ- ಅದು ಹಸಿರು ಹಬ್ಬ.**

ಮಳೆ ಬಂದ ದಿನ ಸಾಲು ಸಾಲಾಗಿ ಹೊರಡುವ ಇರುವೆಗಳಂತೆ ಹಳ್ಳಿ ಹಳ್ಳಿಗಳಲ್ಲಿ ಚುರುಕಿನ ಚಲನೆ. ಗುಂಪುಗುಂಪಾಗಿ ಪ್ರತಿಯೊಬ್ಬರ ಹೊಲಗಳ ಸುತ್ತಮುತ್ತ ಗುಂಡಿಗಳನ್ನು ತೋಡುತ್ತಿದ್ದರೆ, ಮತ್ತೊಂದೆಡೆ ಹತ್ತು ಜೆ.ಸಿ.ಬಿ. ಯಂತ್ರಗಳು ಸರ್ಕಾರಿ ಸ್ಥಳಗಳಲ್ಲಿ, ರಸ್ತೆಬದಿಗಳಲ್ಲಿ ಗಿಡ ನೆಡಲು ಸಿದ್ಧತೆ ನಡೆಸುತ್ತಿವೆ.

ಜಲಾನಯನ ತೋಟಗಾರಿಕೆ, ಅರಣ್ಯ, ಸಾಮಾಜಿಕ ಅರಣ್ಯ, ಕೃಷಿ ಕೇತ್ರಗಳಲ್ಲಿ ಹೊಂಗೆ, ಬಿದಿರು, ಸರ್ವೆ, ಹಲಸು, ನುಗ್ಗೆ, ನೀಲಗಿರಿ, ಸಾಗುವಾನಿ, ತೇಗ, ಬೇವು, ಸಿಲ್ವರ್‌ಓಕ್, ಬಸರಿ, ಆಲ, ನೇರಳೆ, ಮಾವು, ಸಪೋಟ, ತೆಂಗು ಹೀಗೆ ವಿವಿಧ ಜಾತಿಯ ಲಕ್ಷಾಂತರ ಸಸಿಗಳು ಹಬ್ಬವನ್ನು ಎದರು ನೋಡುತ್ತಿವೆ.

ಇದೇ 24ಕ್ಕೆ ಚೀಫ್ ಮಿನಿಸ್ಟ್ರು ಬರುತ್ತಾರಂತೆ. ಗಿಡನೆಡಲು ಹಸಿರು ಬಾವುಟ ತೋರಿಸುತ್ತಾರಂತೆ. ಮುಂದಿನ ಐದು ವರ್ಷಗಳಲ್ಲಿ ರಾಜ್ಯದಲ್ಲಿ ಐದು ಕೋಟಿ ಸಸಿ ನೆಡುವ ಮಹತ್ವಾಕಾಂಕ್ಷೆಯ **'ವನವಿಕಾಸ'** ಯೋಜನೆಗೆ ಇಲ್ಲಿಂದ ಚಾಲನೆ ಸಿಗಲಿದೆಯಂತೆ. ಹೇಗೆ

ಗೊತ್ತೆ? ನೂರಲ್ಲ, ಸಾವಿರವಲ್ಲ; ಮೂರು ಲಕ್ಷ ಸಸಿಗಳನ್ನು ನೆಡುವ ಮೂಲಕ! ಹುಲಿಯೂರು ದುರ್ಗದ ಈ ಹಸಿರು ಹಾದಿಯ ಮೂಲಕ ರಾಜ್ಯದ ಮೂಲೆಮೂಲೆಗಳ ಧರ್ಮಗುರುಗಳು ಜಾತಿ, ಮತ ಬೇಧವನ್ನು ಬದಿಗೊತ್ತಿ ಪಯಣ ಹೊರಟಿದ್ದಾರೆ. ಹಿಂದು, ಮುಸ್ಲಿಂ, ಕ್ರೈಸ್ತ ಜೈನ ಬೌದ್ಧ, ಸಿಖ್ಖರು ಹೀಗೆ ಎಲ್ಲರೂ ಈ ಮೆಗಾ ಯೋಜನೆಯ ರೂವಾರಿಗಳೇ.

ಆದಿಚುಂಚನಗಿರಿ ಮಠಾಧ್ಯಕ್ಷ ಬಾಲಗಂಗಾಧರನಾಥ ಸ್ವಾಮೀಜಿಯವರ ಅಧ್ಯಕ್ಷತೆಯ 'ವನ ಸಂವರ್ಧನ ಟ್ರಸ್ಟ್' ಧಾರ್ಮಿಕತೆಯ ಜತೆಗೆ ಜನತೆಯಲ್ಲಿ ಪರಿಸರ ಪ್ರೇಮ ಮೂಡಿಸುವ ಕ್ರಾಂತಿಕಾರಿ ಹಾದಿ ತುಳಿಯಲು ಹೊರಟಿದೆ. ಸುತ್ತೂರು, ಸಿರಿಗೆರೆ, ಶಿವಪುರಿ ಕಾಗಿನೆಲೆ. ಸಿದ್ಧಗಂಗೆ, ಪೇಜಾವರ, ಪುತ್ತಿಗೆ , ಬಿಜಾಪುರ, ಗದಗ, ಹಂಪಿ , ಕೋಡಿಮಠ, ಮಳವಳ್ಳಿ, ಕೊಡಗು, ಕಾವೇರಿಆಶ್ರಮ, ರಾಜನಹಳ್ಳಿ, ವಾಲ್ಮೀಕಿ ಮಠ, ಆದಿಜಾಂಬವ ಮಠ ಕಾಸರಗೋಡಿನ ಎಡನೀರು, ಹೊಸನಗರದ ರಾಮಚಂದ್ರಾಪುರ, ಹೊಸದುರ್ಗ, ಹುಬ್ಬಳ್ಳಿಯ ಮೂರು ಸಾವಿರ ಮಠ, ಬೆಂಗಳೂರಿನ ವೇದವಿಜ್ಞಾನ ವಿದ್ಯಾಪೀಠ, ಗೋಸಾಯಿ ಮಠ, ಶ್ರವಣಬೆಳಗೊಳ, ಬೆಳಗಾವಿಯ ರುದ್ರಾಕ್ಷಿ ಮಠ, ಉತ್ತರಕನ್ನಡದ ಸ್ವರ್ಣವಲ್ಲಿ ಇಷ್ಟೇ ಅಲ್ಲ ಧರ್ಮಸ್ಥಳದ ಧರ್ಮಾಧಿಕಾರಿ ವಿರೇಂದ್ರ ಹೆಗ್ಗಡೆ. ಹೀಗೆ ನಾಡಿನ ಹತ್ತು - ಹಲವು ಪ್ರಮುಖ ಮಠಗಳ ಸ್ವಾಮೀಜಿಗಳು ಪ್ರಕೃತಿಮಾತೆಯ ಪೂಜೆಗಾಗಿ ಒಂದಾಗಿದ್ದಾರೆ.

ಚಿಕ್ಕಮಗಳೂರಿನ ಬಸ್ತಿ. ಮಂಡ್ಯದ ಸೇಂಟ್ ಜೋಸೆಫ್‌ನ ರೆವರೆಂಡ್ ನರ್‍ಹೋನಾ. ಬೆಂಗಳೂರು ಗುರುದ್ವಾರದ ಜೋಗಿಂದ್ರ ಸಿಂಗ್ ಸಬರವಾಲಾ, ಮಹಮ್ಮದ್ ಅಬ್ದುಲ್ ಖನ್ನಿ. ಮೌಲಾನಾ ಮೌಲ್ವಿ ಮಹಮ್ಮದ್ ಉಲ್ಲಾ. ಅರಿಕೇಶನ್ ರೆವರಂಡ್ ಫಾದರ್ ಇಗ್ನೇಷಿಯಸ್ ಪಿಂಟೋ, ಮಹಾಬೋಧಿಯ ಬುದ್ದರೇಖಿತ... ಈ ಎಲ್ಲರೂ ಇರುವ ಟ್ರಸ್ಟ್‌ಗೆ ಹಸಿರು ಹಾದಿಯ ಎ. ಎನ್. ಯಲ್ಲಪ್ಪ ರೆಡ್ಡಿ ಕಾರ್ಯದರ್ಶಿ. ಇಂಥವರು ಟೊಂಕಕಟ್ಟಿ ನಿಂತಾಗ ಸರಕಾರ ಸುಮ್ಮನಿದ್ದೀತೆ. ತಾನೂ ಈ ಯೋಜನೆಗೆ ಮೂರು ಕೋಟಿ ರೂಪಾಯಿ ಕೊಡುವುದಾಗಿ ಮುಖ್ಯಮಂತ್ರಿ ಹೇಳಿದರು. ''ಆದರೆ ಸರಕಾರದ ಹಣ ಪಡೆದರೆ, ಏನೆಲ್ಲ ನಿಯಮಗಳು, ಅಡ್ಡಿ ಆತಂಕಗಳು ತಲೆದೋರುತ್ತವೆ. ಆ ಹಣದಲ್ಲಿ ಪಾಲು ಪಡೆಯುತ್ತಲೇ ವ್ಯವಸ್ಥೆಯ ಗಮನ ಹೋಗುತ್ತದೆ. ಜನರ ಆಸಕ್ತಿ ಕಮ್ಮಿಯಾಗುತ್ತದೆ. ಅದ್ಕೆ ಆ ಮೂರು ಕೋಟಿಯ ನೆರವನ್ನು ನಾವು ನಯವಾಗಿಯೇ ಬೇಡ'' ಎಂದಿದ್ದೇವೆ ಎನ್ನುತ್ತಾರೆ ಯಲ್ಲಪ್ಪ ರೆಡ್ಡಿ.

**ಇಲ್ಲಿ ಈಗಾಗಲೇ ಹಸಿರುಕ್ರಾಂತಿಗೆ ರಂಗಸಜ್ಜಿಕೆ ನಡೆದಿದೆ. ಸ್ಥಳೀಯ ಶಾಸಕ ವೈ.ಕೆ.ರಾಮಯ್ಯನವರು ಇಷ್ಟೆಲ್ಲ ವರ್ಷಗಳಿಂದ ಜನರಿಗೆ, ಸರಕಾರಿ ಅಧಿಕಾರಿಗಳಿಗೆ ದುಂಬಾಲು ಬಿದ್ದು ಹಸಿರು ಹುಚ್ಚು ಹಚ್ಚಿಸಿದ್ದಾರೆ. 'ಅಂತರ್ಜಲ ಕಣ್ಣೆದುರೇ ನೂರಾರು ಅಡಿ ಆಳಕ್ಕೆ ಹೋಗಿ, ನೀರಿಗೆ ಪರದಾಡುವ ಸ್ಥಿತಿ ಬಂತಲ್ಲ? ಎಂದು ಚಿಂತಿಸಿ, ರಾಮಯ್ಯ ನಾಳಿನ ತಮ್ಮ ಊರಿನ ಭವಿಷ್ಯಕ್ಕೆ ತಂಪು ಕೊಡಲು ನಿರ್ಧರಿಸಿದರು.**

ಕಬ್ಬಿನ ತೋಟಕ್ಕೆ ನೀರೆರೆಯಲು ಹೋಗುವಾಗ ಸಿಕ್ಕ ಆಲದ ಟೊಂಗೆಗಳನ್ನು ಕಡಿದು, ಜಾಗ ಸಿಕ್ಕಲ್ಲೆಲ್ಲ ನೆಡುವಲ್ಲಿಂದ ಗಿಡ ಬೆಳೆಸುವ ಹುಚ್ಚು ಅಂಟಿಕೊಂಡಿತು. ನಂತರ ಜಿಲ್ಲಾ ಉಸ್ತುವಾರಿ ಸಚಿವರಾದಾಗ ಅಧಿಕಾರವೂ ಇತ್ತು . ಲಕ್ಷಾಂತರ ಗಿಡಗಳನ್ನು ನೆಡಲು, ನೆಡಿಸಲು ಸಾಧ್ಯವಾಯಿತು ಎಂದು ರಾಮಯ್ಯ ನೆನಪಿಸಿಕೊಳ್ಳುತ್ತಾರೆ.

ಸಚಿವರಾಗಿದ್ದಾಗ ಹಳ್ಳಿ ಹಳ್ಳಿಗಳಿಗೆ ಪಾದಯಾತ್ರೆ, ಪರಿಸರ ಬಗ್ಗೆ ಭಾಷಣ, ಖಾಲಿ ಜಾಗದಲ್ಲೆಲ್ಲ ಗಿಡ ನೆಡುವ, ನೆಡಿಸುವ ಕೈಂಕರ್ಯ ಕೈಗೊಂಡರು. ಗಿಡಗಳನ್ನು ರಕ್ಷಿಸುವ ಹೊಣೆಯನ್ನು ಗ್ರಾಮಸ್ಥರಿಗೇ ಕೊಟ್ಟರು. ಇಂದು ಸೊಂಪಾಗಿ ಬೆಳೆದ ಮರ ಕಡಿಯಲು ಹೋದರೆ, ಗ್ರಾಮಸ್ಥರೇ ಸೇರಿ ನಿಮ್ಮನ್ನು ಮರಕ್ಕೆ ಕಟ್ಟಿ ಹಾಕಿ ಹೊಡೆಯುವಷ್ಟರ ಮಟ್ಟಿಗೆ ಪರಿಸರ ಪ್ರಜ್ಞೆ ಇಲ್ಲಿ ಮೂಡಿದೆ.

**ರಾಮಯ್ಯನವರಂಥ ಉತ್ಸಾಹಿಗಳಿಂದಾಗಿ ಈಗ ಹುಲಿಯೂರುದುರ್ಗ ಬರಪೀಡಿತ ಜಿಲ್ಲೆಗೆ ಸೇರಿದ ಒಂದು ಊರೆಂದು ಅನ್ನಿಸುವುದೇ ಇಲ್ಲ. ಹಸಿರುಟ್ಟ ಬೆಟ್ಟಗುಡ್ಡಗಳ ಸಾಲು, ರಸ್ತೆಯ ಇಕ್ಕೆಲಗಳಲ್ಲಿ ತೋರಣ. ಹದಿನೆಂಟು ವರ್ಷಗಳಿಂದ ಸದ್ದು ಗದ್ದಲವಿಲ್ಲದ ಪರಿಸರ ಕ್ರಾಂತಿ ನಡೆಯುತ್ತಿರುವ 'ದುರ್ಗ' ಈಗ ಹಸಿರು ಕಾಶಿ.**



ಧರ್ಮಗುರುಗಳೆಲ್ಲ ಸೇರಿ **ವನ ಸಂವರ್ಧನ ಟ್ರಸ್ಟ್** ಆರಂಭಿಸಲು ಯೋಚಿಸಿದಾಗ ಸಹಜವಾಗಿಯೇ ಅವರ ಕೆಲಸಕ್ಕೆ ಸಹಕಾರ ನೀಡಲು ವೈ.ಕೆ.ಆರ್ ಮುಂದೆ ಬಂದರು. ಈ ಮಹಾ ಯೋಜನೆಯನ್ನು ಹುಲಿಯೂರುದುರ್ಗದಿಂದಲೇ ಆರಂಭಿಸೋಣ ಎಂದರು. ಉದ್ಘಾಟನೆಗೆ ಬರಲು ಮುಖ್ಯಮಂತ್ರಿ ಕೃಷ್ಣರನ್ನೂ ಆಮಂತ್ರಿಸಿದರು.

ಮುಖ್ಯಮಂತ್ರಿ ಬರುವವರೆಗೆ ಕಾಯುವ ತಾಳ್ಮೆ ಇಲ್ಲಿನ ಜನಕ್ಕಿಲ್ಲ. ಕಳೆದ ಒಂದು ವಾರದಲ್ಲಿ ಒಂದೂವರೆ ಲಕ್ಷ ಗಿಡ ನೆಟ್ಟಿದ್ದೂ ಆಗಿದೆ. ಮಕ್ಕಳಿಂದ ಅಜ್ಜನವರೆಗೆ ಎಲ್ಲರ ಕೈ ಕೆಸರಾಗಿದೆ.

ಮುಖ್ಯಮಂತ್ರಿ ಬರುವವರೆಗೆ ಕಾಯುವ ತಾಳ್ಮೆ ಧರ್ಮಗುರುಗಳಿಗೂ ಇಲ್ಲ! ನಾಳೆ ಭಾನುವಾರ ತಿಪಟೂರಿಗೆ ಅವರು ಬರಲಿದ್ದಾರೆ. ಅಲ್ಲಿ 'ಬೈಫ್' ನವರ ಮುಂದಾಳತ್ವದಲ್ಲಿ ಸುಮಾರು ಒಂದು ಸಾವಿರ ರೈತರು, ಹಸಿರು ಹಬ್ಬದ ಹೆಸರಿನಲ್ಲಿ ಹೊಸ ಆಶೋತ್ತರ ಹೊತ್ತು ಹೊಲಕ್ಕಿಳಿಯಲಿದ್ದಾರೆ. ಅಮಾವಾಸ್ಯೆಯ ದಿನ, ಹಿಂದೂ ಧರ್ಮಾಧಿಕಾರಿಗಳು ಹೊಸ ಕೆಲಸ ಆರಂಭಿಸುವುದಿಲ್ಲ. ಅದು ಅಶುಭ ದಿನವೆಂಬ ನಂಬುಗೆ ಇದೆ. **ಆದರೆ ಗಿಡ ನೆಡುವ ದಿನಗಳೆಲ್ಲವೂ ಶುಭ ದಿನಗಳೇ** ಎಂದು ಹೇಳಿ ಯಲ್ಲಪ್ಪ ರೆಡ್ಡಿಯವರು ಧರ್ಮ ಗುರುಗಳನ್ನು ಈ ಹಬ್ಬಕ್ಕೆ ಬರಲು ಒಪ್ಪಿಸಿದ್ದಾರೆ. ನಸುಕಿನಲ್ಲಿ ಸಾವಿರಾರು ರೈತರು **'ಹಸಿರು ಕಂಕಣ'** ಕಟ್ಟಿ ತಂತಮ್ಮ ಹೊಲಗಳ ಬದುಗಳಲ್ಲಿ ಜಲಸಂರಕ್ಷಣೆಯ ಕಾರ್ಯಕ್ರಮದ ಅಂಗವಾಗಿ ಗಿಡಗಳನ್ನು ನೆಡಲಿದ್ದಾರೆ. ನೀರು ದೂರ ಹರಿದು ಹೋಗದಂತೆ ಅಲ್ಲಲ್ಲಿ ಕಟ್ಟೆಕಟ್ಟಲಿದ್ದಾರೆ.

**'ಕಟ್ಟುವೆವು ನಾವು ಹೊಸ ನಾಡೊಂದನು'** ಎಂಬ ಮಾತಿನ ಅರ್ಥ ಏನೆಂದು ತೋರಿಸಲಿದ್ದಾರೆ.

O

(**ಪ್ರಜಾವಾಣಿ :** 18-8-2001)



# ನಿರಂತರ ಆಶಾವಾದಿ

**ಪಿ ಲಂಕೇಶ್**

ಮೊನ್ನೆ ಕುಣಿಗಲ್‌ನಲ್ಲಿ ಆದ ಬಗ್ಗೆ ನನ್ನದೇ ಆದ ರೀತಿಯಲ್ಲಿ ನಿಮ್ಮೊಂದಿಗೆ ಚಿಂತಿಸಲು ಆಸೆಯಾಗಿದೆ. ಕಳೆದ 200 ವರ್ಷದಲ್ಲಿ ಆಮೆರಿಕೆಯ ಪ್ರಜಾಪ್ರಭುತ್ವದಲ್ಲಿ ಆದ ಖಾಸಗೀಕರಣ ಮತ್ತು ಸರ್ಕಾರಿಕರಣವನ್ನು ಕುರಿತು ಟಿಪ್ಪಣಿ ಮಾಡಿದ್ದೆ. ಅಲ್ಲಿ ಹೇಗೆ ಜನತಂತ್ರ ಜನರಿಂದ ದೂರವಾದೊಡನೆ ಹೊಸ ಶಕ್ತಿಗಳು ಹುಟ್ಟಿಕೊಂಡು ಸಮಾಜದ್ರೋಹಿಗಳನ್ನು ಹತ್ತಿಕ್ಕಿ ಜನತಂತ್ರವನ್ನು ಬಲಪಡಿಸುತ್ತವೆ ಎಂಬುದನ್ನು ವಿವರಿಸಲು ಇಷ್ಟಪಟ್ಟಿದ್ದೆ. ಆದರೆ ಅಷ್ಟರಲ್ಲಿ ಕುಣಿಗಲ್ ಚುನಾವಣೆ ಬಂತು. ಕೆ. ಲಕ್ಕಪ್ಪನವರು ತೀರಿಕೊಂಡಾಗಲೇ ಕುಣಿಗಲ್‌ನಲ್ಲಿ ಏನಾಗಬಹುದೆಂದು ಊಹಿಸತೊಡಗಿದ್ದೆ. ಆದದ್ದೇನೆಂದು ಎಲ್ಲರಿಗೂ ಗೊತ್ತಿದ್ದರೂ ಇಲ್ಲಿ ಮುಖ್ಯ ಸಂಗತಿಗಳನ್ನು ಕಾಣಿಸಿ ಮುಂದುವರಿಯುತ್ತೇನೆ. 1989ರಲ್ಲಿ ಅಂದರೆ ಕೇವಲ 3 ವರ್ಷದ ಹಿಂದೆ ವೈ. ಕೆ. ರಾಮಯ್ಯನವರನ್ನು ಕುಣಿಗಲ್ ಶಾಸನಸಭೆಗೆ ಮತ್ತು ತುಮಕೂರಿನ ಲೋಕಸಭೆಗೆ ದೇವೇಗೌಡರು ನಿಲ್ಲಿಸಿದ್ದು ಮೊನ್ನೆ ತಾನೇ ನಡೆದಂತಿದೆ. ಇಡೀ ಕರ್ನಾಟಕದಲ್ಲಿ ಮಣ್ಣುಮುಕ್ಕಿದ ಜನತಾ ದಳ ಮತ್ತು ಜನತಾಪಕ್ಷದಲ್ಲಿ ಇನ್ನಷ್ಟು ಕಿತ್ತಾಟ ಶುರುವಾಯಿತು. ಚಂದ್ರಶೇಖರ್ ಅನುಯಾಯಿಗಳಾಗಿದ್ದರೂ, ಸಮಾಜವಾದಿ ಜನತಾಪಕ್ಷದವರಾದರೂ ದೇವೇಗೌಡರು ಸಮಾಜವಾದಿ ಜನತಾಪಕ್ಷದಲ್ಲಿ ಇದ್ದು ಹುಚ್ಚು ಹಿಡಿದವರಂತೆ ವರ್ತಿಸತೊಡಗಿದರು. 1991ರ ಲೋಕಸಭೆಯ ಚುನಾವಣೆ ಬರುವಷ್ಟರಲ್ಲಿ ದೇವೇಗೌಡರಿಗೆ ಗೌರವಕ್ಕೆ ಬದಲು ಸಂತಾಪ ಸೂಚಿಸುವ ಜನ ಹೆಚ್ಚಾದರು. ವೈ. ಕೆ. ರಾಮಯ್ಯನವರ ಬೆಂಬಲವನ್ನು ಊಹಿಸಿಕೊಂಡಿದ್ದ ದೇವೇಗೌಡರು ರಾಮಯ್ಯನವರ ಮಾತುಗಳಿಂದ ಬೆಚ್ಚಿದರು. ರಾಮಯ್ಯ ಹಿಂದಕ್ಕೂ ಹೋಗದೆ, (ಅಂದರೆ ಜನತಾದಳಕ್ಕೆ ಹಿಂದುರುಗದೆ) ಮುಂದಕ್ಕೂ ಹೋಗದೆ (ಅಂದರೆ ದೇವೆಗೌಡರ ಚೇಲರಾಗಲು ಒಪ್ಪದೆ) ತಮ್ಮಗನಿಸಿದ್ದನ್ನೆಲ್ಲ ಹೇಳ ತೊಡಗಿದರು. ಆಗ ಸಿಕ್ಕ ರಾಮಯ್ಯನವರು ನನ್ನ ಅಭಿಪ್ರಾಯ ಕೇಳಿದಾಗ ಹೇಳಿದೆ, ''ದಿಗ್ಭ್ರಮೆಗೊಂಡಿದ್ದಾಗ ಅಥವಾ ಗೊಂದಲಗೊಂಡಿದ್ದಾಗ ಸುಮ್ಮನೆ ಇರುವುದು ಜಾಣರ ಲಕ್ಷಣ. ನೀವಿಗ ಮನಸ್ಸಿಗೆ ಬಂದ ಹಾಗೆ ಮಾತಾಡದೆ ಮೌನ ತಾಳಿ ತಟಸ್ಥರಾಗಿರುವುದನ್ನು ಕಲಿಯಿರಿ. ಯಾರ ಮನಸ್ಸನ್ನೂ ನೋಯಿಸಲು ಯತ್ನಿಸ ಬೇಡಿ'' ಅಂದೆ.

ಪ್ರಕ್ಷುಬ್ಧ ಸ್ಥಿತಿಯಲ್ಲಿದ್ದ ರಾಮಯ್ಯನವರಿಗೆ ನನ್ನ ಮಾತು ಅರ್ಥವಾಯಿತೋ ಇಲ್ಲವೋ ಗೊತ್ತಿಲ್ಲ. 'ಸುಮ್ಮನಿರಿ' ಎಂಬ ಸಾಮಾನ್ಯ ಮಾತು ಅವರಿಗೆ ಅರ್ಥಪೂರ್ಣವಾಗಿ ಕಾಣಿಸದೆಯೂ

ಇರಬಹುದು. ಆಮೇಲಿನ ಲೋಕಸಭೆ ಚುನಾವಣೆಯಲ್ಲಿ ಎಲ್ಲರ ಬಣ್ಣ ಬಯಲಾಯಿತು. ರಾಮಯ್ಯ ಮುಂದೆ ಬರಕೂಡದೆಂದು ದೇವೇಗೌಡರು ಬೇರೊಬ್ಬರಿಗೆ ಟಿಕೇಟನ್ನು ಕೊಡಿಸಿದರು. ಕೋಪದಲ್ಲಿದ್ದ ರಾಮಯ್ಯ ಚುನಾವಣೆಗೆ ನಿಂತು ಸೋತರು. ಕುಣಿಗಲ್‌ನಲ್ಲಿ ನಮ್ಮ ನೈತಿಕತೆಗೆ ಜಯಲಭಿಸಿದೆ ಎಂದು ತಿಳಿಯುವ ವೈ.ಕೆ. ರಾಮಯ್ಯ, ತಮ್ಮ ಬೆಂಬಲದಿಂದ ಶಿಷ್ಯ ರಾಮಯ್ಯ ಗೆದ್ದಿದ್ದಾರೆ ಎಂದು ಬೆನ್ನು ತಟ್ಟಿಕೊಳ್ಳುವ ದೇವೇಗೌಡ ಮತ್ತೆ ವಿರೋಧಪಕ್ಷಗಳತ್ತ ಜನ ವಾಲುತ್ತಿದ್ದಾರೆ ಎಂದು ನಂಬುವ ದಳ, ಬಿ.ಜೆ.ಪಿ.ಗಳು ಸಮಾನ ಭ್ರಮೆಯಲ್ಲಿ ಮುಳುಗಿದ್ದಾರೆ.

ಕುಣಿಗಲ್‌ನಲ್ಲಿ ಆದದ್ದು ಒಂದು ಪ್ರಯೋಗ. ಈ ಪ್ರಯೋಗವನ್ನು ತಿಳಿದುಕೊಂಡು ಎಲ್ಲರೂ ವರ್ತಿಸ ಬೇಕು. ಕಾಂಗ್ರೆಸ್‌ನಂತಹ ಭ್ರಷ್ಟ ಪಕ್ಷವನ್ನು ಅಷ್ಟೇ ಭ್ರಷ್ಟತೆಯಿಂದ ಎದುರಿಸಲೆತ್ನಿಸುವ ಬೇರೆ ಪಕ್ಷಗಳಿವೆ. ಬಿಹಾರ, ಉತ್ತರ ಪ್ರದೇಶ ಮುಂತಾದ ಕಡೆ ಆಗುತ್ತಿರುವುದು ಅದೇ . ಮೊದಲನೆಯದಾಗಿ, ಅಲ್ಲಿ ಜನರ ಅಭಿಮತಕ್ಕೂ ಅವರು ನೀಡುವ ಮತಕ್ಕೂ ಸಂಬಂಧವೇ ಇಲ್ಲ . ಅಧಿಕಾರದಲ್ಲಿರುವ ಪಕ್ಷ ಮತ್ತು ಅಧಿಕಾರಕ್ಕೆ ಬರಲೆತ್ನಿಸುವ ವಿರೋಧ ಪಕ್ಷ ಮತಗಟ್ಟೆಗಳನ್ನು ಆಕ್ರಮಿಸಿಕೊಳ್ಳುವುದು, ಜನ ಮತಗಟ್ಟೆಗೆ ಬಾರದಂತೆ ನೋಡಿಕೊಳ್ಳುವುದು, ಇದನ್ನು ಯಶಸ್ವಿಯಾಗಿ ಮಾಡಲು ಪೊಲೀಸರು, ಅಧಿಕಾರಿಗಳನ್ನು ತಮ್ಮೆಡೆಗೆ ಸೆಳೆದುಕೊಳ್ಳುವುದು. ತಮಗೆ ವಿರೋಧವಿರುವ ಊರುಗಳಲ್ಲಿನ ಮತಗಟ್ಟೆಗಳಿಗೆ ಬಾಂಬೆಸೆಯುವುದು ಇಷ್ಟೆಲ್ಲ ಅಲ್ಲಿ ಸಹಜ ಘಟನೆಗಳು. ಅಸಹಾಯಕ ಜನ ದೂರದಿಂದ ನೋಡುತ್ತಿದ್ದಂತೆ ಮತದಾನ ಮುಗಿದು ಹೋಗಿರುತ್ತದೆ. ಊರಲ್ಲಿ ಯಾವುದು ಪ್ರಬಲ ಪಕ್ಷವೋ ಅದಕ್ಕೆ ಮತಗಟ್ಟೆ ಸೇರಿಹೋಗುತ್ತದೆ. ಕರ್ನಾಟಕದಲ್ಲಿ ಇದೆಲ್ಲಾ ಆರಂಭವಾಗಲಿದೆ. ಕುಣಿಗಲ್ ಕ್ಷೇತ್ರವನ್ನು ತಮ್ಮ ವರ್ಚಸ್ಸಿನ ಪರೀಕ್ಷೆಯೆಂದು ತಿಳಿದ ಮುಖ್ಯಮಂತ್ರಿ, ಪ್ರತಿಯೊಂದು ಊರಿಗೂ ಹೋಗಿ ಪ್ರಚಾರ ನಡೆಸಿದರು. ಅವರ ಸಹೋದ್ಯೋಗಿಗಳು ಊರುಗಳನ್ನು ಹಂಚಿಕೊಂಡರು. ತಿಪಟೂರನ್ನು ಕಳ್ಳರು ಮತ್ತು ದರೋಡೆಕೋರರ ಆಸ್ತಿಯನ್ನಾಗಿಸಿರುವ ಮಂಜುನಾಥ ಕುಣಿಗಲ್‌ನಲ್ಲಿ ಝುಂಡಾ ಹಾಕಿದರು. ಇವರೆಲ್ಲರ ಭೇಟಿಗಳೇ ಜನರಲ್ಲಿ ದಿಗ್ಭ್ರಮೆ ಹುಟ್ಟಿಸಿರಬೇಕು. ಇದು ಸಾಲದೆಂಬಂತೆ ರಮೇಶ್, ನಜೀರ್ ಮುಂತಾದ ಮಂತ್ರಿಗಳು ತಮ್ಮ ನೂರಾರು ಜನ 'ಎಕ್ಸ್‌ಪರ್ಟ್'ಗಳನ್ನು ಕರೆದೊಯ್ದು ನಕಲಿ ಮತ ಹಾಕಿಸಲು, ಸಾಧ್ಯವಾದರೆ ಮತಗಟ್ಟೆ ಆಕ್ರಮಿಸಿಕೊಳ್ಳಲು ಯತ್ನಿಸಿದರು . ಅದು ಸಾಧ್ಯವಾಗದೆ ಹೋದಾಗ ಜನರಿಗೆ ಬೆದರಿಕೆ ಹಾಕಿದರು.

ಇದರಿಂದೆಲ್ಲಾ ಆದದ್ದು ... ನನಂತಹವರಲ್ಲಿ ನಮ್ಮ ಜನರ ಬಗ್ಗೆ ಭರವಸೆ ಹುಟ್ಟಿಸಿತು. ಎಸ್. ರಮೇಶ್ ಮತ್ತು ಅವರ ಸಹಚರರು ಮಾಡಿದ್ದು ಯಾವುದೇ ಗೂಂಡಾ ಗುಂಪು ಮಾಡುವುದನ್ನೆ. ಜನ ಸಿಟ್ಟಿಗೆದ್ದು ಸೇರಿದರು. ಮಂತ್ರಿ ಮತ್ತು ಗೂಂಡಾ ಒಬ್ಬನೇ ಆಗಿದ್ದಾಗ ಏನಾಗಬಹುದೋ ಅದೇ ಆಯಿತು. ಜನರನ್ನು ಚದುರಿಸಬೇಕಾಯಿತು . ರಮೇಶ್ ಗುಂಡು ಹಾರಿಸಿ ಕೊಂದರು. ಈಗ ಜನರಿಗೆ ಬದಲು, ಮಂತ್ರಿಗಳು ಮತ್ತು ಅವರ ಮುಖ್ಯಮಂತ್ರಿ

ಇದರಿಂದೆಲ್ಲಾ ತಪ್ಪಿಸಿಕೊಂಡು ಪಾರಾಗಬೇಕು . ಗುಂಡುಹಾರಿಸಿದ್ದಾಗಿ ಒಪ್ಪಿಕೊಳ್ಳುವ ಪೊಲೀಸರು ಬೇಕು.

ಇದರಿಂದಾಗಿಯೇ ಕರ್ನಾಟಕದಲ್ಲಿ ಆದದ್ದು ಅರ್ಥಪೂರ್ಣ. ದೊಂಬಿಯಾದಗ ಪೊಲೀಸರು ಗುಂಡು ಹಾರಿಸುವುದು ಸ್ವಾಭಾವಿಕ. ಆದರೆ ಕರ್ನಾಟಕದ ಪೊಲೀಸರು ನಾವು ಗುಂಡುಹಾರಿಸಿದ್ದು ಕೋವಿಯನ್ನು ಆಕಾಶಕ್ಕೆ ತಿರುಗಿಸಿ, ಕೊಲ್ಲುವುದಕ್ಕೆ ಅಲ್ಲ ಎಂದು ಹೇಳುತ್ತಿದ್ದಾರೆ. ಅಂಗರಕ್ಷಕ ಪೊಲೀಸಿನವನು (ಗನ್‌ಮ್ಯಾನ್ ಹಾರಿಸಿದ್ದಾಗಿ ಹೇಳಲು ಯತ್ನಿಸಿದರು. ಗನ್‌ಮ್ಯಾನ್ ನಾನು ಹಾರಿಸಿಲ್ಲ ಎಂದು ಹೇಳುತ್ತಿದ್ದಾನೆ . ಹಾಗೆಯೇ ಯಾರು ಗುಂಡು ಹಾರಿಸಿ ಕೊಂದರು ಎಂದು ಹೇಳಲು ಸಿದ್ಧನಿದ್ದಾನೆ ಅನ್ನಲಾಗಿದೆ.

ಕುಣಿಗಲ್ ಜನರ ಧೈರ್ಯ, ಮಾನಗೆಟ್ಟ ಮಂತ್ರಿಗಳ ಕ್ರೌರ್ಯದೆದುರು ಅವರು ತೋರಿದ ದಿಟ್ಟತನ, ಬಿಕ್ಕಟ್ಟಿನ ವೇಳೆಯಲ್ಲಿ ಕರ್ನಾಟಕದ ಪೊಲೀಸರು ತೋರುತ್ತಿರುವ ನಿಷ್ಠುರ ಸತ್ಯ, ನಿಷ್ಠೆ, ಇದರಿಂದೆಲ್ಲ ಸ್ಫೂರ್ತಿಗೊಂಡು ಮುಂದೆ ಬರುತ್ತಿರುವ ಉತ್ತಮ ಅಧಿಕಾರಿಗಳು, ಇಡೀ ಘಟನೆಯಿಂದ ಆಶಾವಾದಿಗಳಾಗುತ್ತಿರುವ ಸಾಮಾನ್ಯ ಜನತೆ. ಇದು ನಿಜಕ್ಕೂ ಅಚ್ಚರಿ ಹುಟ್ಟಿಸುವ ಸಂದರ್ಭ. ಕರ್ನಾಟಕ ಬಿಹಾರದಂತಾಗಲು ಒಪ್ಪಲಾರದು ಎಂಬುದಕ್ಕೆ ಸಾಕ್ಷಿ.

ಇಲ್ಲಿ ಜ್ಞಾಪಿಸಿಕೊಳ್ಳಿ. ಇನ್ನೇನು ಮತದಾನಕ್ಕೆ ನಾಲ್ಕು ದಿನ ಮಾತ್ರ ಇದೆ ಅನ್ನುವಾಗ ಜನತಾಪಕ್ಷದ ಮುಖಂಡ ಸುಬ್ರಹ್ಮಣ್ಯಸ್ವಾಮಿ ರಾಮಯ್ಯನವರನ್ನು ಪಕ್ಷದಿಂದ ಸಸ್ಪೆಂಡ್ ಮಾಡಿದರು. ಆದರಿಂದ ಏನೂ ಆಗಲಿಲ್ಲ . ರಾಮಯ್ಯ ಚುನಾವಣೆಗೆ ಇಳಿಯುವ ಮುನ್ನ ತಮ್ಮ ಪಕ್ಷ ಮತ್ತು ಚುನಾವಣಾ ಚಿಹ್ನೆಯ ಬಗ್ಗೆ ರೈತ ನಾಯಕರನ್ನು , ನನ್ನಂತಹ ಕೆಲವರನ್ನು ಕೇಳಿದರು . ಎಲ್ಲರೂ ಹೇಳಿದ್ದು, ನೀವು ಯಾವುದೇ ಪಕ್ಷದ ಚಿಹ್ನೆಯೊಂದಿಗೆ ನಿಲ್ಲಿ. ಪಕ್ಷೇತರರಾಗಿ ಮುಕ್ತ ಚಿಹ್ನೆಯೊಂದಿಗೆ ನಿಂತರೆ ನಾವು ಬೆಂಬಲಿಸುವುದು ಸುಲಭವಾಗುತ್ತದೆ. ವೈ.ಕೆ. ರಾಮಯ್ಯ ಹಾಗೆ ಮಾಡಿದ್ದರೆ ಚೆನ್ನಾಗಿತ್ತು . ಆದರೆ ಅವರು ನೇಗಿಲು ಹೊತ್ತ ರೈತನ ಚಿಹ್ನೆ ಪಡೆದರು. ಹಾಗೆ ಪಡೆದದ್ದರಿಂದ ಅಥವಾ ಪಡೆಯದೇ ಇದ್ದರೂ ಏನೂ ಆಗುತ್ತಿರಲಿಲ್ಲ. ಯಾಕೆಂದರೆ ಈ ಚುನಾವಣೆಯಲ್ಲಿ ಆದಾವುದೂ ಮುಖ್ಯವಾಗಿರಲಿಲ್ಲ.

○

**(ಲಂಕೇಶ್‌ಪತ್ರಿಕೆ : 24-6-1992)**

# ಗ್ರಾಮೀಣ ಸಂಸ್ಕೃತಿಯ ಆರಾಧಕ

**ಬಿ ಎಲ್ ಶಂಕರ್**

ಕ್ರಿಯಾಶೀಲ ಹಾಗೂ ಗ್ರಾಮೀಣ ಬದುಕಿನ ಬಗ್ಗೆ ಅಸಾಧಾರಣ ಬದ್ಧತೆಯುಳ್ಳ ಕರ್ನಾಟಕದ ರಾಜಕಾರಣಿಗಳಲ್ಲಿ ವೈ.ಕೆ. ರಾಮಯ್ಯನವರು ಅತ್ಯಂತ ಪ್ರಮುಖರು. ಅಂತಹವರ ಬಗ್ಗೆ ಅಭಿನಂದನಾ ಗ್ರಂಥ ತರುತ್ತಿರುವುದು ಎಂದರೆ ಇದು ಗ್ರಾಮೀಣ ಭಾರತದ ಬಗ್ಗೆ ಪ್ರೀತಿಯಿರುವ ಎಲ್ಲರಿಗೂ ಸಂದ ಗೌರವವೆಂದು ನಾನು ಭಾವಿಸುತ್ತೇನೆ.

1975ರ ತುರ್ತುಪರಿಸ್ಥಿತಿಯ ನಂತರ ಭಾರತದ ರಾಜಕಾರಣದಲ್ಲಿ ಅನೇಕ ಹೊಸ ಪ್ರತಿಭೆಗಳ ಆವಿಷ್ಕಾರಗಳಾದವು. ಅವುಗಳಲ್ಲಿ ಕೆಲವು ತಾತ್ವಿಕ ಬದ್ಧತೆ ಇಲ್ಲದ ಯುವನಾಯಕರು ಎಷ್ಟು ಬೇಗ ಅರಳಿದರೋ ಅಷ್ಟೇ ಬೇಗ ಮುದುಡಿ ಹೋಗಿದ್ದುಂಟು. ತಾತ್ವಿಕಬದ್ಧತೆ, ಜನಪರ ಕಾಳಜಿ ಹಾಗೂ ಪ್ರಗತಿಪರ ಭಾವನೆಯುಳ್ಳ ಅನೇಕ ವ್ಯಕ್ತಿತ್ವಗಳು ಕಾಲದ ಹೊಯ್ದಾಟದ ನಡುವೆ ಕೂಡ ಜನಮನದಲ್ಲಿ ನಿಂತಿರುತ್ತಾರೆ. ಅಂತಹವರಲ್ಲಿ ವೈ.ಕೆ. ರಾಮಯ್ಯನವರು ಮೊದಲನೆಯ ವರೆಂದು ಹೆಸರಿಸಬಹುದು.

ತುಮಕೂರು ಜಿಲ್ಲೆಯ ಕುಣಿಗಲ್ ವಿಧಾನಸಭಾ ಕ್ಷೇತ್ರ ತುಂಬಾ ವಿಶಿಷ್ಟ ಮಹತ್ವ ಪಡೆದ ಸ್ಥಳ. ಕಾಂಗ್ರೆಸ್ ಹಾಗೂ ಇತರ ಪಕ್ಷಗಳಿಗೂ ಅಲ್ಲಿ ಸ್ಥಾನ ಸಿಕ್ಕಿದ್ದನ್ನು ಚುನಾವಣಾ ಇತಿಹಾಸ ಹೇಳುತ್ತದೆ. ಅರವತ್ತರ ದಶಕದಲ್ಲಿ ವೀರೇಂದ್ರ ಪಾಟೀಲರ ಸಚಿವ ಸಂಪುಟದಲ್ಲಿ ಮಂತ್ರಿಯಾಗಿದ್ದ ತಮ್ಮಣ್ಣ, ಎಪ್ಪತ್ತರ ದಶಕದಲ್ಲಿ ದೇವರಾಜ್ ಅರಸುರವರ ಸಂಪುಟದಲ್ಲಿ ಸಚಿವರಾಗಿದ್ದ ಅಂದಾನಯ್ಯ, ಮೈಸೂರು ಪ್ರಜಾಪ್ರತಿನಿಧಿ ಸಭೆಯಿಂದಲೂ ಶಾಸಕರೂ ಹಾಗೂ ಸಚಿವರಾಗಿದ್ದ ಎನ್. ಹುಚ್ಚಮಾಸ್ತಿಗೌಡ ಮೊದಲಾದವರು ಕುಣಿಗಲ್ ತಾಲ್ಲೂಕಿನಿಂದ ಬಂದವರು. ಒಕ್ಕಲಿಗರು ಈ ಕ್ಷೇತ್ರದಲ್ಲಿ ಬಹುಸಂಖ್ಯಾತರಿದ್ದರೂ ಮುಸಲ್ಮಾನರನ್ನೊಳಗೊಂಡಂತೆ ಎಲ್ಲಾ ಸಮುದಾಯದವರನ್ನು ಇಲ್ಲಿ ಅಲಕ್ಷಿಸುವಂತಿಲ್ಲ. ಕುಣಿಗಲ್ ತುಮಕೂರಿನ ಇತರ ತಾಲ್ಲೂಕುಗಳಿಗಿಂತ ತುಂಬಾ ಭಿನ್ನವಾದ ತಾಲ್ಲೂಕು. ಮಾರ್ಕೋನಹಳ್ಳಿ ಅಣೆಕಟ್ಟಿನಿಂದ ನೀರಾವರಿ ಸೌಲಭ್ಯ ಪಡೆದ ಸ್ಥಳ. ರೈತಾಪಿ ಜನರೇ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇಂತಹ ಸಂದರ್ಭದಲ್ಲಿ ಈ ಕ್ಷೇತ್ರವನ್ನು ಪ್ರತಿನಿಧಿಸುವ ಶಾಸಕರಿಗೆ ವಿಶೇಷ ಜವಾಬ್ದಾರಿ ಹೆಗಲ ಮೇಲಿರುತ್ತದೆ. ವೈ.ಕೆ. ರಾಮಯ್ಯನವರು 1983,1985 ಉಪಚುನಾವಣೆ ಹಾಗೂ 1999ರ ಸಾರ್ವತ್ರಿಕ ಚುನಾವಣೆಗಳಲ್ಲಿ ಕುಣಿಗಲ್ ಹಾಗೂ ಹುಲಿಯೂರು ದುರ್ಗ ಕ್ಷೇತ್ರವನ್ನು

ಪ್ರತಿನಿಧಿಸಿದ್ದಾರೆ. **ಆಡಳಿತದಲ್ಲೇ ಇರಲಿ ಅಥವಾ ವಿರೋಧ ಪಕ್ಷದಲ್ಲೇ ಇರಲಿ, ವೈ ಕೆ ರಾಮಯ್ಯನವರ ಮೂಲಭೂತ ವ್ಯಕ್ತಿತ್ವದಲ್ಲಿ ಯಾವುದೇ ಬದಲಾವಣೆ ಇಲ್ಲ. ಹೇಮಾವತಿ ನೀರು ಇಂದು ತುಮಕೂರಿನ ಹೊಲಗದ್ದೆಗಳಿಗೆ ಬಂದಿದ್ದರೆ ಅದಕ್ಕೆ ಮೂಲ ರೂವಾರಿ ವೈ ಕೆ ರಾಮಯ್ಯನವರು.** ರೇಷ್ಮೆ ಕೃಷಿಯಿಂದ ತುಮಕೂರು ಜಿಲ್ಲೆಗೆ ಮಹತ್ವ ಸ್ಥಾನ ದೊರಕಿದ್ದರೆ ಅದರ ಹಿಂದೆ ವೈ ಕೆ ರಾಮಯ್ಯನವರ ದೂರದೃಷ್ಟಿ ಇರುವುದನ್ನು ಗಮನಿಸಬಹುದು. ಕ್ಷೀರಕ್ರಾಂತಿಯಲ್ಲಿ ತುಮಕೂರು ಜಿಲ್ಲೆಗೆ ಮಹತ್ವ ಸ್ಥಾನ ದೊರಕಿದ್ದರೆ ಅದರ ಹಿಂದೆ ವೈ ಕೆ ರಾಮಯ್ಯನವರ ಕ್ರಿಯಾಶೀಲ ವ್ಯಕ್ತಿತ್ವವಿದೆ.

ವೈ.ಕೆ. ರಾಮಯ್ಯನವರನ್ನು ದೂರದಿಂದ ಅಥವಾ ಹತ್ತಿರದಿಂದ ಕಂಡವರೆಲ್ಲ ಅವರನ್ನು ದೂರ್ವಾಸ ಮುನಿಯ ಅಪರಾವತಾರ ಎಂದು ಭಾವಿಸಬಹುದು. ಇದಕ್ಕೆ ಮೂಲ ಕಾರಣ ವೈ ಕೆ ರಾಮಯ್ಯನವರಲ್ಲಿ ಈ ಕಾಲದ ರಾಜಕಾರಣಿಗಳಲ್ಲಿ ಢಾಳವಾಗಿ ಗೋಚರಿಸುವ ನಯ-ನಾಜೂಕುತನ ಇಲ್ಲದಿರುವುದು. ಅವರು ಮಾಧ್ಯಮದ ಪ್ರತಿನಿಧಿಗಳಿಗೆ ಅಥವಾ ಬೇರಾವ ಗುಂಪಿಗೆ ಹೆದರಿಕೊಂಡು ಸತ್ಯ ಹೇಳಲು ಹಿಂಜರಿಯುವುದಿಲ್ಲ. ಬಡರೈತನ ಹಾಗೂ ಗ್ರಾಮೀಣ ಜನರ ಬದುಕಿನ ಬಗ್ಗೆ ಅಪಾರ ಆಸ್ಥೆ ಇರುವ ಅವರು, ಇದ್ದದ್ದನ್ನು ಇದ್ದಂತೆ ಹೇಳುವ ಅಪರೂಪದ ವ್ಯಕ್ತಿ. ರೈತರ ಹಿತವನ್ನು ಕಡೆಗಣಿಸಿ ದುಡ್ಡು ಹೊಡೆಯುವವರ ವಿರುದ್ಧ ವೈ ಕೆ ರಾಮಯ್ಯನವರ ಹೋರಾಟ ಸದಾ ಕಾಲ ನಡೆಯುವಂಥದ್ದು. ಅವರದು ತುಂಬಾ ಪರಿಪಕ್ವವಾದ ವ್ಯಕ್ತಿತ್ವ. ಕಳೆದ ಐವತ್ತು ವರ್ಷಗಳಿಂದ ಭಾರತದ ರೈತಸಮುದಾಯ ಅನುಭವಿಸಿದ ಕಷ್ಟ ಕೋಟಲೆಗಳನ್ನು ಕಂಡಾಗ ಅವರು ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ರೈತ, ನೀರಾವರಿ, ಕೃಷಿಉತ್ಪನ್ನಗಳಿಗೆ ಅಗತ್ಯ ಬೆಲೆ, ಕೃಷಿಕಾರ್ಮಿಕರು ಎಂಬುದು ರಾಜಕೀಯ ಹಿತಾಸಕ್ತಿಗೆ ಒಳಪಡುವ ವಿಚಾರಗಳು ಆಗಬಾರದೆಂಬುದು ಅವರ ಧೋರಣೆ. ಯಾವುದೇ ರೈತನ ಹಿತದ ವಿಷಯ ಬಂದಾಗ ಎಲ್ಲರೂ ಒಕ್ಕೊರಲಿನಿಂದ ಅವನ ಹಿಂದೆ ನಿಲ್ಲಬೇಕೆಂಬುದು ವೈ ಕೆ ರಾಮಯ್ಯನವರ ಅಭಿಮತ.

ವೈ ಕೆ ರಾಮಯ್ಯನವರಲ್ಲಿ ಯಾವಾಗಲೂ ಕಡುನಿಷ್ಠೆಯನ್ನು ಕಾಣಬಹುದು. ಅವರು ತಾವು ನಂಬಿದ ತತ್ವ ಅಥವಾ ವ್ಯಕ್ತಿ ಬಗ್ಗೆ ಅರ್ಪಣಾ ಮನೋಭಾವನೆಯಿಂದ ದುಡಿಯುವರು. ಅವರ ವಿಶ್ವಾಸವನ್ನು ಎಂದೂ ಬೆಟ್ಟು ಮಾಡಿ ತೋರಿಸುವಂತಹುದಲ್ಲ. ಆ ನಿಷ್ಠೆಯಲ್ಲಿ ಅಂಧವಿಶ್ವಾಸ ಇಲ್ಲ. ತಾವು ತೋರಿದ ನಿಷ್ಠೆ ಸಮರ್ಪಕವಲ್ಲ ಎಂದು ಅವರು ಭಾವಿಸಿದರೆ, ಅದನ್ನು ಬದಲಾಯಿಸಲೂ ಅವರು ಹಿಂಜರಿಯುವುದಿಲ್ಲ. ಅವರ ಮುಖ್ಯ ಉದ್ದೇಶ ತತ್ವದ ಅನುಷ್ಠಾನವೇ ಹೊರತು ಉಳಿದ ವಿಚಾರಗಳು ಅಲ್ಲ. ಅವರಲ್ಲಿ ಎಂದೂ ಸಮಯ ಸಾಧಕತನದ ಹಾಗೂ ಕೀಳುಮಟ್ಟದ ಅಭಿರುಚಿಯನ್ನು ಕಾಣಲು ಸಾಧ್ಯವಿಲ್ಲ. ಅವರೊಬ್ಬ ತಾತ್ವಿಕ ಹೋರಾಟದ ಸೇನಾನಿ.



ವೈ ಕೆ ರಾಮಯ್ಯನವರ ವ್ಯಕ್ತಿತ್ವವನ್ನು ವಿಶ್ಲೇಷಿಸುವಾಗ ಅವರ ಸಾಹಿತ್ಯಾಸಕ್ತಿಯನ್ನು ಮರೆಯುವಂತಿಲ್ಲ. ಕುವೆಂಪು ಅವರ ಸಾಹಿತ್ಯವನ್ನು ಅವರಷ್ಟು ಶ್ರದ್ಧಾಪೂರ್ವಕವಾಗಿ ಅಧ್ಯಯನ ಮಾಡಿರುವ ರಾಜಕಾರಣಿಗಳು ನಮ್ಮಲ್ಲಿ ಬಹಳ ಜನರು ಇಲ್ಲ. ಸಾಹಿತ್ಯ ವಿಮರ್ಶಕರಿಗೆ ಅಚ್ಚರಿ ಎನಿಸುವ ವ್ಯಾಖ್ಯಾನವನ್ನು ಕುವೆಂಪು ಅವರ ಅನೇಕ ಕವನಗಳಿಗೆ ಶ್ರೀಯುತರು ನೀಡುತ್ತಾರೆಂದರೆ, ಈ ಕ್ಷೇತ್ರದಲ್ಲಿ ಅವರ ಜ್ಞಾನ ಎಂತಹುದೆಂದು ಊಹಿಸಬಹುದು. ರಾಷ್ಟ್ರಕವಿ ಕುವೆಂಪು ಅವರ ವಿಶ್ವಮಾನವಪ್ರಜ್ಞೆ ಅವರಿಗೆ ತುಂಬಾ ಪ್ರಿಯವಾದ ವಿಚಾರ ಅದನ್ನು ಕಾರ್ಯಗತ ಮಾಡುವಲ್ಲಿ ರಾಮಯ್ಯನವರು ಸಾಕಷ್ಟು ಶ್ರಮಿಸುತ್ತಿದ್ದಾರೆ. ವಿಚಾರವಾದ, ಸಾಹಿತ್ಯಪ್ರೇಮ, ಸಮಾಜವಾದ ಹಾಗೂ ಗ್ರಾಮೀಣ ಸಂಸ್ಕೃತಿಯೇ ಎರಕ ಹೊಯ್ದಂತಿರುವ ವೈ ಕೆ ರಾಮಯ್ಯನವರು ನೂರು ವರ್ಷಗಳ ಕಾಲ ಬಾಳಲಿ. ಅವರ ಆದರ್ಶ ಯುವಜನತೆಗೆ ಮಾರ್ಗದರ್ಶನವಾಗಲಿ. ನಮ್ಮ ಸಾರ್ವಜನಿಕ ಬದುಕು ಅವರ ಅನುಭವವನ್ನು ಸಮರ್ಥವಾಗಿ ಬಳಸಿಕೊಳ್ಳಲಿ ಎಂದು ಈ ಸಂದರ್ಭದಲ್ಲಿ ಆಶಿಸುತ್ತೇನೆ.

○

## ಜನಪರ ಕಾಳಜಿ

**ಎಸ್ ಗಣೇಶನ್**

**ನಾನು ಹುಟ್ಟಿದಾಗ ನಮ್ಮ ಅಪ್ಪ - ಅವ್ವ ಅಂದುಕೊಂಡಿರಬಹುದು; ದನ ಮೇಯಿಸಲೋ ಅಥವಾ ಗದ್ದೆಯಲ್ಲಿ ಕೆಲಸ ಮಾಡಲೋ ನಮಗೊಬ್ಬ ಮಗ ಹುಟ್ಟಿ ಬಂದ' ಎಂದು. ಆದರೆ ನಾನು ಆದದ್ದೇ ಬೇರೆ. ಓದಿದೆ, ವಕೀಲನಾದೆ, ಶಾಸಕನಾದೆ, ಮಂತ್ರಿಯೂ ಆದೆ. ಬದುಕಲು ಮನೆ, ಓಡಾಡಲು ಕಾರು ಇದೆ.**

- ಇದು ರಾಮಯ್ಯನವರು ಅನೇಕ ಬಾರಿ ಸಾರ್ವಜನಿಕ ಸಭೆಯಲ್ಲಿ ಹೇಳುವುದುಂಟು. ನಿಜ. ಒಂದು ಹಳ್ಳಿಯಲ್ಲಿ, ಒಬ್ಬ ಕೃಷಿಕನ ಮನೆಯಲ್ಲಿ ಹುಟ್ಟಿದ ವ್ಯಕ್ತಿ ತನ್ನ ಜೀವನದಲ್ಲಿ ಇಷ್ಟು ಸಾಧನೆ ಕಂಡರೆ ಅದು ನಿಜವಾಗಿಯೂ ಸಾಧನೆಯೇ. ಇದಷ್ಟೆ ಅವರಿಗೆ ತೃಪ್ತಿ ತಂದುಕೊಟ್ಟಿದ್ದರೆ ಯಾರೂ ಅವರ ಸಹವಾಸಕ್ಕೆ ಹೋಗುತ್ತಿರಲಿಲ್ಲ. ಆದರೆ ರಾಮಯ್ಯ ಅವರನ್ನು ಅವರ ರಾಜಕಾರಣ, ಅವರ ದಕ್ಷತೆ, ಹಳ್ಳಿಯ ಬದುಕಿನ ಬಗೆಗೆ ಅವರಿಗಿರುವ ಅಪಾರ ಕಾಳಜಿ, ಹಳ್ಳಿಯ ಅಮಾಯಕ ಜನರನ್ನು ನಗರದ ಜಾಣ ಜನರು ಮತ್ತು ಅಧಿಕಾರಿಗಳು ನಡೆಸಿಕೊಳ್ಳುವ ರೀತಿ - ನೀತಿಯ ಬಗೆಗೆ ಅಪಾರ ಸಿಟ್ಟು. ಕೆಲವೊಮ್ಮೆ ಈ ಅನ್ಯಾಯಗಳನ್ನು ಕಂಡು, ನೆನಪಿಸಿಕೊಂಡು ಭಾವುಕರಾಗಿ ಗಳಗಳನೆ ಮಗುವಿನಂತೆ ಅತ್ತುಬಿಡುತ್ತಾರೆ. ಸಿಟ್ಟು, ಭಾವುಕತೆ ಮತ್ತು ಅಳು ಸುಲಭವಾಗಿ ಎಲ್ಲರಿಗೂ ಬರುವುದಿಲ್ಲ. ಇದು ನಿಜವಾಗಿಯೂ ಅಂತರಂಗವನ್ನು ಕಲಕುವ ಮಾನವೀಯ ಗುಣವಾದ್ದರಿಂದ ವೈ.ಕೆ. ರಾಮಯ್ಯ ಅವರಲ್ಲಿ ನಿಜವಾದ ಮಾನವೀಯತೆಯ ಪ್ರದರ್ಶನ ಅವರ ವ್ಯಕ್ತಿತ್ವದಲ್ಲಿ ಅಡಗಿರುವುದು ಗೋಚರವಾಗುತ್ತದೆ.

ರಾಮಯ್ಯ ಅವರ ಕಾರ್ಯಶೈಲಿ ಕಂಡ ನನ್ನಂತಹ ಅನೇಕರಿಗೆ ಅಚ್ಚು ಮೆಚ್ಚು. ಅದೇ ರೀತಿ ಮತ್ತೆ ಕೆಲವರಿಗೆ ವಿಭಿನ್ನವಾದ ಅಭಿಪ್ರಾಯ ಇರುವುದನ್ನು ನಾನು ಕಂಡು ಕೇಳಿದ್ದೇನೆ. ಅದಕ್ಕೆ ರಾಮಯ್ಯ ಅವರಿಗೆ ಉತ್ತರ ಸಿಕ್ಕಿದೆಯೋ ಇಲ್ಲವೋ ಗೊತ್ತಿಲ್ಲ. ಏಕೆಂದರೆ ಸಮಾಜದಲ್ಲಿನ ಜನರ ಅನಿಸಿಕೆಗಳ ಬಗೆಗೆ ಅವರೇ ಹೇಳುವುದೆಂದರೆ; **'ನೋಡಿ ತಲೆ ಬಗ್ಗಿಸಿ ನಡೆದರೆ ಇವನೊಬ್ಬ ಕುರಿ ಅನ್ನುತ್ತಾರೆ; ತಲೆ ಎತ್ತಿ ನಡೆದರೆ ಇವನಿಗೆ ದುರಹಂಕಾರ ಎನ್ನುತ್ತಾರೆ. ಹಾಗಿದ್ದರೆ ಒಬ್ಬ ಮನುಷ್ಯ ಹೇಗೆ ನಡೆಯಬೇಕು'** ಎಂದು ಸಮಾಜಕ್ಕೇ ಪ್ರಶ್ನೆ ಹಾಕುತ್ತಾರೆ.

ನಿಜ. ಯಾರೂ ಯಾರನ್ನೂ ಮೆಚ್ಚಿಸಿ ನಡೆಯಲು ಆಗದು. ಅದು ಸರಿಯೂ ಅಲ್ಲ. ಯಾರಿಗೋ ಅಂಜಿ ನಮ್ಮ ನಡತೆಯನ್ನು ಬದಲಿಸಿಕೊಂಡರೆ ಅದು ಕೃತ್ರಿಮವಾಗುತ್ತದೆ. ನಾವು ನಮ್ಮ ಸಹಜ ನಡವಳಿಕೆಯನ್ನೇ ಪ್ರಾಮಾಣಿಕವಾಗಿ ಪ್ರದರ್ಶಿಸಿದರೆ ಬೇರೆಯವರ ಸರ್ಟಿಫಿಕೇಟ್ ಗಳಿಗೆ

ಕಾಯುವ ಅವಶ್ಯಕತೆ ಬರುವುದಿಲ್ಲ. ಆದ್ದರಿಂದ ರಾಮಯ್ಯನವರು ಹೇಗಿದ್ದಾರೋ ಹಾಗೆಯೇ ಇರುವುದು ಒಳ್ಳೆಯದು.

ನಾನು ಹತ್ತನ್ನೆರಡು ವರ್ಷಗಳ ಒಂದೆ ತುಮಕೂರಿನಲ್ಲಿ ಮತ್ತು ದೆಹಲಿಯಲ್ಲಿ ವರದಿಗಾರನಾಗಿದ್ದಾಗಿನಿಂದಲೂ ರಾಮಯ್ಯನವರ ಜತೆ ಆತ್ಮೀಯವಾದ ಬಾಂಧವ್ಯವನ್ನು ಇಟ್ಟುಕೊಂಡಿದ್ದೇನೆ. ನನ್ನದು ಸ್ವಲ್ಪ ಸಂಕೋಚದ ಸ್ವಭಾವ ಮತ್ತು ನಾನು ನಂಬಿಕೊಂಡು ಬಂದಿರುವ ಕೆಲವೊಂದು ಮೌಲ್ಯಗಳಿಗೆ ಹತ್ತಿರವಾಗಿ ಸಮಾನಮನಸ್ಕರಂತೆ ಕಂಡವರ ಜತೆ ಮಾತ್ರ ನಾನು ತುಂಬಾ ಆಪ್ತನಾಗಿಬಿಡುತ್ತೇನೆ. ಇಲ್ಲವಾದರೆ ದೂರವೇ ಉಳಿದುಬಿಡುತ್ತೇನೆ. ಇಂತಹ ಕಾರಣಗಳಿಗಾಗಿ ನನಗೆ ಇಷ್ಟವಾಗುವ ಕೆಲವೇ ರಾಜಕಾರಣಿಗಳಲ್ಲಿ ರಾಮಯ್ಯ ಒಬ್ಬರು.

ರಾಮಯ್ಯ ಅವರು ರಾಜಕಾರಣ ಮಾಡಿ ಎಷ್ಟು ಬೆಳೆದಿದ್ದಾರೆ ಎನ್ನುವುದನ್ನು ಅವರ ಕೆಲಸಗಳು ಹೇಳಬೇಕು. ಪತ್ರಕರ್ತನಾಗಿ ರಾಜ್ಯದ ಹಲವು ಜಿಲ್ಲೆಗಳಲ್ಲಿ ಮತ್ತು ಹಲವು ರಾಜಕಾರಣಿಗಳ ಸಂಪರ್ಕದಿಂದ ಬಂದ ಅನುಭವದ ಪ್ರಕಾರ, ಶಾಸಕರಲ್ಲಿ ಬೆರಳೆಣಿಕೆಯಷ್ಟು ಮಂದಿ ಮಾತ್ರ ತಮ್ಮ ಕ್ಷೇತ್ರಗಳನ್ನು ಅಭಿವೃದ್ಧಿ ಪಡಿಸಿದ್ದಾರೆ. ಅಂತಹ ಮಂದಿಯಲ್ಲಿ ರಾಮಯ್ಯ ಮುಖ್ಯವಾಗಿ ಕಾಣುತ್ತಾರೆ. ಆದರೆ ಐದು ವರ್ಷ ನಾನು ತುಮಕೂರಿನಲ್ಲಿ ವರದಿಗಾರ ನಾಗಿದ್ದಾಗ ಅವರ ಕಾರ್ಯವನ್ನು ಹತ್ತಿರದಿಂದ ನೋಡಿದ್ದೇನೆ. ಅವರು ರಾಜಕೀಯದಲ್ಲಿ ಬೆಳೆದಂತೆ, ತಮ್ಮ ಕ್ಷೇತ್ರವನ್ನೂ ಬೆಳೆಸಿದರು.

ಕುಣಿಗಲ್ ತಾಲ್ಲೂಕು ರೇಷ್ಮೆ ಕೃಷಿಯಲ್ಲಿ ಸಾಧಿಸಿರುವ ಅಭಿವೃದ್ಧಿ ಮತ್ತು ಹೇಮಾವತಿ ನದಿನೀರು ಕಂಡಿದ್ದರೆ ಅದರ ಹಿಂದೆ ರಾಮಯ್ಯನವರ ಅಪಾರವಾದ ಪರಿಶ್ರಮವಿದೆ. ನೀರಿಗಾಗಿ ಜೈಲು ಶಿಕ್ಷೆ ಅನುಭವಿಸಿದ್ದಾರೆ. ಅವರು ಪಾದಯಾತ್ರೆ ನಡೆಸಿ ತಾಲ್ಲೂಕಿನಾದ್ಯಂತ ರಸ್ತೆ ಬದಿಗಳಲ್ಲಿ ಹಾಕಿಸಿದ ಗಿಡಗಳು ಇಂದು ದೊಡ್ಡದಾಗಿ ಬೆಳೆದಿದೆ. ತಮ್ಮ ಕ್ಷೇತ್ರವನ್ನು ಹಸಿರಾಗಿಸುವ ಈ ಕಾರ್ಯವನ್ನು ಬೇರೆ ಯಾವುದೇ ವ್ಯಕ್ತಿ ಮಾಡಿದ್ದರೂ ಅವರು ಲಕ್ಷಾಂತರ ರೂಪಾಯಿ ಬರುವ **ಇಂದಿರಾ ಪ್ರಿಯದರ್ಶಿನಿ** ಪ್ರಶಸ್ತಿಯನ್ನು ಗಿಟ್ಟಿಸಿಬಿಡುತ್ತಿದ್ದರು. ರಾಮಯ್ಯ ಅವರು ಇಂತಹ ಯಾವುದೇ ಪ್ರಶಸ್ತಿಯ ಬೆನ್ನುಹತ್ತಿಲ್ಲ. ಅವರು ಗಳಿಸಿರುವ ಕ್ಷೇತ್ರದ ಮತ್ತು ಹಳ್ಳಿಗಾಡಿನ ಜನರ ಪ್ರೀತಿಗೆ ಯಾವುದೇ ಸಂಸ್ಥೆಗಳು ಕೊಡುವ ಪ್ರಶಸ್ತಿ ಸಮಾನವಾಗಿರುವುದಿಲ್ಲ. ಅದು ಅವರನ್ನು ಕೈ ಹಿಡಿದು ಬೆಳೆಸಿದೆ. ಅದಕ್ಕಾಗಿ ಅವರನ್ನೇ ಹುಡುಕಿಕೊಂಡ ಬಂದ **ಜನಪರ ರಾಜಕಾರಣಿ** ಎಂಬ ಗೌರವ ಸಾಕ್ಷಿ.

ಇಂತಹ ಪ್ರಬುದ್ಧ ಮತ್ತು ಜನಪ್ರಿಯ ಶಾಸಕ, ಸಚಿವರಾಗಿ ರಾಜ್ಯದ ಅಭಿವೃದ್ಧಿಗೇ ಕೆಲಸ ಮಾಡುವ ಅಕಾಶ ಸಹಜವಾಗಿಯೇ ಸಿಗಬೇಕಿತ್ತು. ಅವರಿಗೆ ಆ ಅವಕಾಶ ಸಿಗದೇ ಹೋದುದಕ್ಕೆ ಹಲವು ಕಾರಣಗಳಿವೆ. ರಾಜಕಾರಣ ಎಂದ ಮೇಲೆ ಹೀಗೆಯೇ ತಾನೆ! ಜನಪರ ಕಾಳಜಿಯ, ವಿಶೇಷವಾಗಿ ಹಳ್ಳಿಗಾಡಿನ ಬಗೆಗೆ ಅಪಾರ ಪ್ರೀತಿ ಇಟ್ಟುಕೊಂಡಿರುವ ಶಾಸಕರಿಗೆ ಅಧಿಕಾರ ಯುಕ್ತವಾಗಿ ಹೆಚ್ಚು ಕೆಲಸ ಮಾಡಲು ಅವಕಾಶ ಸಿಗದಿದ್ದರೆ ಅದು ಆ ಸರ್ಕಾರಕ್ಕೆ ಮತ್ತು ರಾಜ್ಯಕ್ಕೆ ಆದ ಅನ್ಯಾಯವಷ್ಟೇ.

○

## ಹೋಲಿಕೆ ಇಲ್ಲದ ಶಾಸಕ

**ಡಾ. ತೋಂಟದ ಸಿದ್ಧಲಿಂಗ ಸ್ವಾಮೀಜಿ**

ಬೋನಸ್ ರಾಮಯ್ಯ, 'ಜೀನಸ್ ರಾಮಯ್ಯ' 'ರೇಷ್ಮೆ ರಾಜ' 'ಜನಪರ ರಾಜಕಾರಣಿ' 'ಜಗಳಗಂಟ ರಾಮಯ್ಯ' ಎಂದು ಖ್ಯಾತರಾಗಿರುವ ಮಾನ್ಯ ಶ್ರೀ ವೈ.ಕೆ. ರಾಮಯ್ಯ ರೈತ ಮುಂದಾಳು; ಶಾಸಕ, ಮಂತ್ರಿ ಹೀಗೆ ವೈವಿಧ್ಯಮಯ ವ್ಯಕ್ತಿತ್ವ ಹೊಂದಿ ಬೆಳೆದ ಎತ್ತರಗಳು ಅವರ ಹೋರಾಟದ ಮಜಲುಗಳಾಗಿವೆ. ಇಂದಿನ ಭ್ರಷ್ಟ ರಾಜಕಾರಣದ ಕೊಳಚೆಯಲ್ಲಿನ ತಾವರೆಯಾಗಿ, ಮರಳುಗಾಡಿನ ಓಯಾಸಿಸ್‌ನಂತಿರುವ ರಾಮಯ್ಯನವರು ಈ ದಿನಮಾನದ ಅಪರೂಪದ ರಾಜಕಾರಣಿ. ಲಕ್ಷ್ಮೀಧರಮಾತ್ಯನ ತಾಯಿ ತನ್ನ ಮಗುವಿಗೆ ಹಾಲುಣಿಸುವಾಗ

> **ಕೆರೆಯಂ ಕಟ್ಟಿಸು, ಬಾವಿಯಂ ಕಟ್ಟಿಸು**
> **ಅಜ್ಜರೆಯಾಳು ಸಿಲುಕಿದನಾಥರಮ ಬಿಡಿಸು**
> **ನಂಬಿದವರಿಗಿಂಬುಗೆಯ್ ....**

ಎಂದು ಕಿವಿಯಲ್ಲಿ ಉಪದೇಶವನ್ನು ಮಾಡುತ್ತಿದ್ದಳೆಂದು ಶಾಸನವೊಂದು ಹೇಳುತ್ತದೆ. ಇಂಥ ಮಹಾತಾಯಿಯ ಪೋಷಣೆಯಲ್ಲಿ ಬೆಳೆದ ರಾಮಯ್ಯನವರು ತಮ್ಮ ಕ್ಷೇತ್ರದಲ್ಲಿ ಬೆಳೆಸಿದ ಮರ-ಗಿಡಗಳು ಅವರ ವೃಕ್ಷ ಪ್ರೇಮಕ್ಕೆ ಸಾಕ್ಷಿಯಾಗಿ ನಿಂತಿವೆ. '**ಹೆತ್ತ ಮಕ್ಕಳನ್ನು ಬೆಳೆಸುವಂತೆ ಮರ-ಗಿಡಗಳನ್ನು ಬೆಳೆಸಿ**' ಎಂದು ಸಾಮಾನ್ಯ ಜನರಿಗೆ ಪ್ರೇರಣೆ ನೀಡಿದ್ದರ ಪರಿಣಾಮ ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಹಾಗೂ ಹುಲಿಯೂರುದುರ್ಗ ಗ್ರಾಮಾಂತರ ಪ್ರದೇಶದ ಜನ, ತಮ್ಮ ಮಕ್ಕಳೋಪಾದಿಯಲ್ಲಿಯೆ ಗಿಡ-ಮರಗಳನ್ನು ಪ್ರೀತಿಸುತ್ತಿದ್ದಾರೆ. ತಾವು ಬಾಳಿ ಬದುಕುವ ನೆಲದಾಯಿಯನ್ನು ಸುಜಲೆ, ಸುಫಲೆ, ಸಸ್ಯಶಾಮಲೆಯನ್ನಾಗಿಸಿದ್ದಾರೆ.

ಭಾರತ, ಇದು ಗ್ರಾಮಭಾರತ. ಭಾರತದ ಶೇಕಡಾ 70ರಷ್ಟು ಜನ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಬಹುತೇಕ ಒಕ್ಕಲು ಮಕ್ಕಳು. ಅವರ ಬದುಕು ಒಕ್ಕಲುತನದೊಂದಿಗೆ ಬೆಸೆದುಕೊಂಡಿದೆ. ಅನಿಶ್ಚಿತ ಮಳೆಗಾಲ, ಬೆಳೆದ ಬೆಳೆಗೆ ತಕ್ಕ ಫಲ ದೊರಕದಿರುವುದು ನಮ್ಮ ರೈತರನ್ನು ಕಷ್ಟಕ್ಕೀಡುಮಾಡಿದೆ. ರೈತರ ಈ ಕಷ್ಟ ಪರಿಹರಿಸಲೆಂದು ಮೈಸೂರು ಅರಸರ ಕಾಲದಿಂದ ನಡೆದುಕೊಂಡು ಬಂದ ರೇಷ್ಮೆ ಕಸಬು ಒಕ್ಕಲುತನಕ್ಕೆ ಪೂರಕವಾದ, ಹೈನೋದ್ಯಮ, ಕೋಳಿ ಸಾಕಾಣಿಕೆ, ತೋಟಗಾರಿಕೆ, ದಕ್ಷಿಣ ಕರ್ನಾಟಕದ ಬಹುತೇಕ ರೈತರ ಜೀವನಾಧಾರ ವಾಗಿದೆ. ಈ

ಜೀವನಾಧಾರವಾದ ಉದ್ಯೋಗಕ್ಕೆ ಆಗಾಗ ಒದಗಿಬರುವ ಆಘಾತಗಳಿಗೆ ರಾಮಯ್ಯನವರು ಸ್ಪಂದಿಸಿ ಪರಿಹಾರ ಒದಗಿಸಿದವರು, ರೇಷ್ಮೆ ಬೆಳೆಗಾರನ ಬಿತ್ತನೆ ಕೋಠಿಗಳನ್ನು ದೇವಾಲಯಗಳೆಂದು ನಂಬಿದವರು.

ರೈತರಿಂದ ಜನಪರ ರಾಜಕಾರಣಿಯೆಂದು ಗೌರವಿಸಲ್ಪಟ್ಟ ರಾಮಯ್ಯನವರು ಆದರ್ಶ ಶಾಸಕ ಹೇಗಿರಬೇಕು ಎಂಬುದಕ್ಕೆ ತಾವೇ ಉದಾಹರಣೆಯಾಗಿ, ಒಬ್ಬ ಆದರ್ಶ ಶಾಸಕನ ಕ್ಷೇತ್ರ ಹೇಗಿರಬೇಕು ಎಂಬುದಕ್ಕೆ ತಾವು ಪ್ರತಿನಿಧೀಕರಿಸಿದ ಕ್ಷೇತ್ರವನ್ನು ಮಾದರಿ ಕ್ಷೇತ್ರವನ್ನಾಗಿ ಮಾಡುತ್ತಿದ್ದಾರೆ. ಸನ್ಮಾನ್ಯ ಶ್ರೀ ವೈ.ಕೆ. ರಾಮಯ್ಯ, ಈ ದಿನಮಾನದ ಹೋಲಿಕೆ ಇಲ್ಲದ ರಾಜಕಾರಣಿಯಾಗಿದ್ದಾರೆ. ಅವರ ಈ ಸೇವೆ ನಿರಂತರವಾಗಿ ಹೀಗೆಯೇ ಸಾಗಲಿ. ಬಸವಾದಿ ಪ್ರಮಥರು, ಮಹಾಗುರು ಎಡೆಯೂರು ಸಿದ್ಧಲಿಂಗ ಯತಿ ಇವರಿಗೆ ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಹಾರೈಸಲಾಗಿದೆ.

○



# ಸಮಾಜವಾದಿಗಳ ಆಶಯಗಳ ದಾರಿಯಲ್ಲಿ

**ಪಿ ಲಂಕೇಶ್**

ಇವರನ್ನು ನಾನು ನೋಡೇ ಇರಲಿಲ್ಲ. ಒಬ್ಬರು ಮಂತ್ರಿ ಕೃಷ್ಣ, ಕೆ.ಆರ್. ಪೇಟೆಯವರು; ಇನ್ನೊಬ್ಬರು ಮಾಜಿ ಮಂತ್ರಿ ವೈ.ಕೆ. ರಾಮಯ್ಯ. ಅನೇಕ ವರ್ಷಗಳಿಂದ ಮಂತ್ರಿಗಳ ಜೊತೆಗೆ ವೇದಿಕೆಯಲ್ಲಿ ಕಾಣಿಸಕೊಳ್ಳದಿರುವ ನನಗೆ ಸ್ವಲ್ಪ ಇರುಸು ಮುರುಸು. ಆದರೆ ಕೃಷ್ಣ ಮತ್ತು ರಾಮಯ್ಯ ತುಂಬ ಒಳ್ಳೆಯವರೆಂದು ನನಗೆ ನಮ್ಮ ವರದಿಗಾರರು ಹೇಳಿದ್ದರು. ಮೊನ್ನೆ ಕೃಷ್ಣರ ಸಂದರ್ಶನ ನಮ್ಮಲ್ಲಿ ಪ್ರಕಟವಾಗಿತ್ತು.

**'ಕನ್ನಂಬಾಡಿ'** ನಮ್ಮ ಹುಡುಗನೊಬ್ಬ ಪ್ರಾರಂಭಿಸುತ್ತಿರುವ ಪಾರಪತ್ರಿಕೆ. ಇದು ಮಂಡ್ಯದಲ್ಲಿ ಪ್ರಕಟವಾಗುತ್ತದೆ. ಹುಡುಗನ ಹೆಸರು ವಿಶುಕುಮಾರ್; ಈತನ ಹೆಂಡತಿ ಸುಜಾತ. ಮದುವೆಗೆ ಮುಂಚೆ ನಮ್ಮ ಪತ್ರಿಕೆಯಲ್ಲಿ ಎರಡು ಸಲ ' ಹೆಣ್ಣು ದನಿ 'ಯಲ್ಲಿ ಬರೆದಿದ್ದರು. ಕೃಷ್ಣ ಮಂತ್ರಿ, ಅವರೇ ಅವತ್ತಿನ ಅಧ್ಯಕ್ಷ. ಮಂತ್ರಿಯಾದೊಡನೆ ಅದೇಕೋ ದನಿ ಬಿದ್ದು ಹೋಗುತ್ತದೆ. ಇದು ಕೃಷ್ಣರಿಗೆ ಮಾತ್ರ ಆದದ್ದಲ್ಲ; ನೆಹರೂ ಕೂಡ ಪ್ರಧಾನಿಯಾಗುವುದಕ್ಕೆ ಮುಂಚೆ ಅದ್ಭುತ ಭಾಷಣಕಾರರಾಗಿದ್ದು . ಪ್ರಧಾನಿಯಾದ ಮೇಲೆ ವೇದಿಕೆಯಿಂದ ಕೆಟ್ಟದಾಗಿ ಗೊಣಗುತ್ತ ಹೋಗುತ್ತಿದ್ದರು. ಕೃಷ್ಣ ತರಹದವರಿಗೆ ಮಂತ್ರಿಯಾಗಿರುವುದೇ ಪಾಪದ ಕೆಲಸವೆನ್ನಿಸಿದರೆ ಆಶ್ಚರ್ಯವಿಲ್ಲ. ಯಾಕೆಂದರೆ ಹೆಗಡೆ, ಬೊಮ್ಮಾಯಿ ಮುಂತಾದವರ ನೆರಳಲ್ಲಿ ಮಂತ್ರಿಗಿರಿ ಖಳತ್ವ ಪಡೆದಿರುತ್ತದೆ. ಕೃಷ್ಣರ ಮೇಲಿನ ಭಾರ ಸ್ವಯಂ ವೇದ್ಯವಾಗಿತ್ತು.

ರಾಮಯ್ಯ ಹಾಗಲ್ಲ. ಈತ ಸಮಾಜವಾದಿ, ಬುದ್ಧಿಜೀವಿ. ಆದರೆ ಜಾತಿಯ ಕಾರಣಕ್ಕೆ ದೇವೇಗೌಡರನ್ನು ಬೆಂಬಲಿಸುವುದಾದರೆ, ಈ ರಾಮಯ್ಯನವರ ಸಮಾಜವಾದ ಕೂಡ ಪ್ರಶ್ನಾರ್ಹವಾಗುತ್ತದೆ. ನಾನು ರಾಮಯ್ಯನವರನ್ನು ನೋಡುತ್ತಿದ್ದುದು ಅದೇ ಮೊದಲು. ತೆಳ್ಳಗೆ ಸೊರಗಿದಂತಿರುವ ರಾಮಯ್ಯ ತಾವು ಹೇಳಬೇಕಾದ್ದನ್ನು ಚಿಂತಿಸಿ, ಆಡುಮಾತಿನಲ್ಲಿ ಹೇಳಿದರು. ಅವರ ಒಂದು ಮಾತು ಚೆನ್ನಾಗಿತ್ತು. ಈ ದೇಶದ ನಾಯಕತ್ವ ಹೇಗಿದೆಯೆಂದರೆ , ಎಂದೂ ರೈತರ ಹೊಲ-ಗದ್ದೆ, ಹಕ್ಕೆ, ಕೊಟ್ಟಿಗೆ ನೋಡದ ವ್ಯಕ್ತಿ ಮಂತ್ರಿಯಾಗುತ್ತಾನೆ; ಈ ದೇಶದ ಮಣ್ಣು ಗೊತ್ತಿಲ್ಲದವನು ಕೃಷಿ ತಜ್ಞನಾಗುತ್ತಾನೆ. ಅಲ್ಲದೆ - ಇಲ್ಲಿ ಯಾವುದು ಕೂಡಲೇ ಆಗಬೇಕಾಗಿದೆ, ಯಾವುದು ಸ್ವಲ್ಪ ಕಾಯಬಹುದು, ಎಂಬುದೇ ರಾಜಕಾರಣಿಗಳಿಗೆ ಗೊತ್ತಿರುವುದಿಲ್ಲ. ಇದೇ ಮಾತು ರಾಮಯ್ಯನವರ ಸಂಗಡಿಗರಿಗೂ ಅನ್ವಯವಾಗುವುದು ತಮಾಷೆ.

○

**(ಲಂಕೇಶ್ ಪತ್ರಿಕೆ : 26-3-1989)**

# ನೇರ ನಡೆ ನುಡಿಯ ವ್ಯಕ್ತಿ

ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ

ಸಾರ್ವಜನಿಕ ಸೇವೆಗೆ ತಮ್ಮನ್ನೇ ತೊಡಗಿಸಿಕೊಂಡಿರುವ ಕ್ರಿಯಾಶೀಲರೂ, ಮಾಜಿ ಸಚಿವರೂ ಆದ ಶ್ರೀ ವೈ.ಕೆ. ರಾಮಯ್ಯ ಅವರನ್ನು ಕುರಿತು ಅಭಿನಂದನಾ ಸಂಪುಟವೊಂದನ್ನು ಹೊರತರುತ್ತಿರುವ ವಿಷಯ ತಿಳಿದು ನಮಗೆ ಬಹಳ ಸಂತೋಷವಾಯಿತು. ತತ್ವನಿಷ್ಠ ರಾಜಕಾರಣಿಯಾಗಿ, ನೇರ ನಡೆನುಡಿಗಳಿಗೆ ಹೆಸರಾಗಿರುವ ಶ್ರೀಯುತರು, ನ್ಯಾಯವಾದಿಯಾಗಿ ಸಚಿವರಾಗಿ ಪ್ರಸ್ತುತ ಶಾಸಕರಾಗಿ ನಾಡಿಗೆ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು. ಹಲವಾರು ಸಂಘ-ಸಂಸ್ಥೆಗಳ ನಿರ್ದೇಶಕರಾಗಿ, ಅಧ್ಯಕ್ಷರಾಗಿ ಅವುಗಳ ಏಳಿಗೆಗೆ ಶ್ರಮಿಸಿರುವ ಇವರು, ಸಚಿವರಾಗಿದ್ದ ಅವಧಿಯಲ್ಲಿ ಮಾಡಿದ ಜನೋಪಯೋಗಿ ಸಾಧನೆಗಳು ಎಲ್ಲರ ಮೆಚ್ಚುಗೆಯನ್ನು ಗಳಿಸಿವೆ. ನಮ್ಮ ಶ್ರೀ ಮಠದ ಪರಮಭಕ್ತರೂ ಆಗಿರುವ ಇವರು ನಾವು ಕೈಗೊಳ್ಳುವ ಧರ್ಮಕಾರ್ಯಗಳಲ್ಲಿ ಪಾಲ್ಗೊಂಡು ಸೇವಾತತ್ಪರತೆಯನ್ನು ಮೆರೆಯುತ್ತಿದ್ದಾರೆ. ಪರಿಸರ ಸಂರಕ್ಷಣೆಯ ಬಗೆಗೆ ಕಾಳಜಿಯನ್ನು ಹೊಂದಿ, ಸಸಿಗಳನ್ನು ನೆಟ್ಟು ಬೆಳೆಸುವ ನಿಟ್ಟಿನಲ್ಲಿ ದುಡಿಯುತ್ತಿದ್ದಾರೆ. ಸಮಾಜಸೇವೆಯಲ್ಲಿ ನಿರತರಾಗಿರುವ ಇಂಥ ಜನಸೇವಕರನ್ನು ಗುರುತಿಸಿ ಅಭಿನಂದಿಸುವುದು ಜನತೆಯ ಆದ್ಯ ಕರ್ತವ್ಯ. ಆ ದಿಸೆಯಲ್ಲಿ ಅಭಿಮಾನಿ ಜನತೆ ಕೈಗೊಂಡಿರುವ ಈ ಕಾರ್ಯ ಸ್ತುತ್ಯಾರ್ಹವಾದುದು. ಪ್ರಸ್ತುತ ಹೊರತರುತ್ತಿರುವ ಸಂಪುಟವು ಶ್ರೀ ವೈ.ಕೆ. ರಾಮಯ್ಯ ಅವರ ಸೇವೆಯ ವಿವಿಧ ಮುಖಗಳನ್ನು ಪರಿಣಾಮಕಾರಿಯಾಗಿ ಮೂಡಿಸಿ ಮುಂದಿನ ಯುವಪೀಳಿಗೆಗೆ ಮಾರ್ಗದರ್ಶಕವಾಗಲೆಂದೂ, ಶ್ರೀಯುತರಿಗೆ ಭಗವಂತನು ಆಯುರಾರೋಗ್ಯಾದಿ ಸಕಲ ಸನ್ಮಂಗಳಗಳನ್ನು ಕರುಣಿಸಲೆಂದೂ ತುಂಬು ಹೃದಯದಿಂದ ಹಾರೈಸುತ್ತೇನೆ.

○

# ನ್ಯಾಯನಿಷ್ಠುರಿ ರಾಮಯ್ಯನವರು

**ದೇಜಗೌ**

ವೈಕೆ ರಾಮಯ್ಯನವರು ನಮ್ಮ ನಾಡಿನ ಮೇಧಾವಿಗಳಲ್ಲೊಬ್ಬರು. ವಿಚಾರವಾದಿಗಳೂ ಹೌದು. ಅವರನ್ನು ಕಂಡಾಗಲೆಲ್ಲ ಬಸವಣ್ಣನವರ **ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ; ಲೋಕವಿರೋಧಿ ಶರಣನಾರಿಗಂಜುವನಲ್ಲ** ಎಂಬ ವಚನ ನೆನಪಿಗೆ ಬರುತ್ತದೆ. ತಮಗೆ ಅನಿಸಿದ್ದನ್ನು ಮುಚ್ಚುಮರೆಯಿಲ್ಲದೆ, ಖಂಡತುಂಡವಾಗಿ ಹೇಳಿಬಿಡುವ ನಿಷ್ಕಪಟಿಯಿವರು. ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಆಗಾಗ್ಗೆ ಬಣ್ಣ ಬದಲಾಯಿಸುವ ಗೋಸುಂಬೆಯೂ ಅಲ್ಲ. ಭ್ರಷ್ಟಾಚಾರದಿಂದ ರಾಜಕೀಯದಲ್ಲಿ ಅವರಿಗೆ ಸಿಗಬೇಕಾಗಿದ್ದ ಸ್ಥಾನ ಲಭ್ಯವಾಗಿಲ್ಲ.

ಸಾಮಾನ್ಯವಾಗಿ ರಾಜಕೀಯ ನಾಯಕರಿಗೆ ಗ್ರಂಥ ವ್ಯಾಸಂಗಕ್ಕಾಗಲಿ, ವ್ಯಾಸಂಗದ ಮೂಲಕ ಪೂರ್ವದ ಋಷಿ ಮನೀಷಿಗಳೊಡನೆ ವಾಸಿಸಲಿಕ್ಕಾಗಲಿ ಬಿಡುವೇ ಇಲ್ಲ. ಅಂಥ ಗುಂಪಿನಲ್ಲಿ ರಾಮಯ್ಯನವರೊಂದು ಅಪವಾದ. ಅವರು ಸಾಹಿತ್ಯ ಪ್ರಿಯರು. ಕನ್ನಡದ ಆಧುನಿಕ ಶ್ರೇಷ್ಠ ಲೇಖಕರೆಲ್ಲ ಅವರಿಗೆ ಪರಿಚಿತರು. ಕುವೆಂಪು ಸಾಹಿತ್ಯವನ್ನಂತೂ ಅವರು ಚೆನ್ನಾಗಿ ಓದಿಕೊಂಡಿದ್ದಾರೆ; ಆದರೆ ಅದನ್ನು ಕುರಿತ ಅವರ ವ್ಯಾಖ್ಯಾನದ ಬಗ್ಗೆ ಭಿನ್ನಾಭಿಪ್ರಾಯ ವಿರಬಹುದು. ಸಾಹಿತ್ಯ ವ್ಯಾಸಂಗದಿಂದೊದಗುವ ಹೃದಯವಂತಿಕೆ, ಆತ್ಮಸಂಸ್ಕಾರ ಮತ್ತು ಸಾಂಸ್ಕೃತಿಕ ಪ್ರಜ್ಞೆ ಅವರಲ್ಲಿ ಅಪಾರ ಪ್ರಮಾಣದಲ್ಲಿದೆ. ಸಾಹಿತಿಗಳ ಬಗ್ಗೆ ಗೌರವ ವಿಶ್ವಾಸಗಳೂ ಅವರಿಗುಂಟು.

ರಾಮಯ್ಯನವರು ಸದ್ಗೃಹಸ್ಥರು, ಒಳ್ಳೆಯ ಆತಿಥೇಯರು. ಅವರ ಅತಿಥಿ ಸತ್ಕಾರದಲ್ಲಿ ಔದಾರ್ಯ, ನಯವಂತಿಕೆ ಹಾಗೂ ಔಚಿತ್ಯಪ್ರಜ್ಞೆ ಎದ್ದುಕಾಣುತ್ತವೆ. ಅದನ್ನು ಅನುಭವಿಸುವ ಸುಯೋಗ ನನಗೂ ದೊರಕಿತ್ತು.

ರಾಮಯ್ಯನವರು ನಾಡಿನ ಗಣ್ಯವ್ಯಕ್ತಿಯೆಂಬುದನ್ನು ನಾನು ಬಲ್ಲೆ. ಆದರೆ ಅವರನ್ನು ತೀರ ಹತ್ತಿರದಿಂದ ನೋಡುವ ಅವಕಾಶ ನನಗೆ ದೊರೆಯಲಿಲ್ಲ. ಒಂದು ಸಲ ಆದಿ ಚುಂಚನಗಿರಿಯ ಮಠಾಧೀಶರಾದ ಪೂಜ್ಯ ಶ್ರೀ ಬಾಲಗಂಗಾಧರನಾಥಸ್ವಾಮಿಗಳು, ಶ್ರೀ ಮಠದಲ್ಲೊಂದು ಸಭೆಯನ್ನು ಕರೆದಿದ್ದರು. ಸಭೆಯ ಮುಂದಿದ್ದ ವಿಷಯ, ಒಕ್ಕಲಿಗರ ಇತಿಹಾಸ ರಚನೆ. ನಾನೂ ಹೋಗಿದ್ದೆ. ಅದರೂ ಏನೂ ಮಾತನಾಡದೆ ಮೌನದಿಂದ ಕುಳಿತು, ಮಿತ್ರರ

ಭಾಷಣಗಳನ್ನು ಆಲಿಸುತ್ತಿದ್ದೆ. ಆ ಸಭೆಯಲ್ಲಿ ಹಾಜರಿದ್ದ ರಾಮಯ್ಯನವರು, ನಾನೂ ಮಾತಾಡಬೇಕೆಂದು ಆಗ್ರಹಿಸಿದರು. ನಾನು ಇತಿಹಾಸದ ರೂಪರೇಷೆ, ವಿಸ್ತಾರ, ವ್ಯಾಪ್ತಿಗಳನ್ನು ಕುರಿತು ಮಾತಾಡಿದೆ.

ನಾನೇ ಕೊನೆಯ ಭಾಷಣಕಾರ. ಇಲ್ಲಿಗೆ ಭಾಷಣಗಳು ಸಾಕೆಂದು ಹೇಳಿ ಸ್ವಾಮೀಜಿ, ರಾಮಯ್ಯ, ಜವರಪ್ಪ ಗೌಡರು ಸಮಾಲೋಚನೆಗಾಗಿ ಪಕ್ಕದ ಕೋಣೆಗೆ ಹೋದರು. ಕಾಲುಗಂಟೆಯ ನಂತರ ಮೂವರೂ ಸಭೆಗೆ ವಾಪಸಾದರು. ಸ್ವಾಮೀಜಿಯವರ ಕೃಪೆಯಿಂದ ನಾವೊಂದು ತೀರ್ಮಾನಕ್ಕೆ ಬಂದಿದ್ದೇವೆ, ಪ್ರೊ. ದೇಜಗೌ ಅವರ ನೇತೃತ್ವದಲ್ಲಿ ಈ ಇತಿಹಾಸ ರಚನೆಯಾಗಬೇಕು. ತಮಗೆ ಬೇಕಾದ ಹಾಗೆ ಅವರು ಸಮಿತಿ ರಚಿಸಿಕೊಳ್ಳಬಹುದು. ಎಲ್ಲ ಅನುಕೂಲಗಳನ್ನು ಕಲ್ಪಿಸಲು ಸ್ವಾಮೀಜಿ ಒಪ್ಪಿದ್ದಾರೆ ಎಂದು ರಾಮಯ್ಯನವರು ನುಡಿದರು. ಅವರ ನುಡಿಯಲ್ಲಿ ನಿಶ್ಚಿತತೆಯಿತ್ತು. 'ನನಗೆ ಸಾಧ್ಯವಿಲ್ಲ, ನನಗೆ ಬಿಡುವಿಲ್ಲ, ಜತೆಗೆ ಆಗಾಗ್ಗೆ ನಾನು ಅಮೆರಿಕೆಗೆ ಹೊಗುತ್ತಿರುತ್ತೇನೆ' ಎಂದು ಎಷ್ಟು ವಿಧವಾಗಿ ಭಿನ್ನವಿಸಿಕೊಂಡರೂ ರಾಮಯ್ಯನವರು ತಮ್ಮ ಪಟ್ಟು ಬಿಡಲಿಲ್ಲ. ಸ್ವಾಮೀಜಿಯವರು ನನ್ನಲ್ಲಿ ಭರವಸೆಯನ್ನು ವ್ಯಕ್ತಪಡಿಸಿದ್ದರಿಂದ, ಇಡೀ ಸಭೆ ಅವರ ಮಾತನ್ನು ಅನುಮೋದಿಸಿದ್ದರಿಂದ ನಾನು ಒಪ್ಪಿಕೊಂಡೆ.

ಒಂದೆರಡು ತಿಂಗಳು ಕೆಲವು ಮಿತ್ರರೊಡನೆ ಕೆಲಸ ಮಾಡಿ, ಇತಿಹಾಸದ ಸಮಗ್ರ ರೂಪರೇಷೆಗಳನ್ನು ತಯಾರಿಸಿದ ನಂತರ, ಯಾರೋ ಒಬ್ಬ ನಿರಕ್ಷರಿಯ ಕಿಡಿಗೇಡಿತನದಿಂದಾಗಿ ನಾನು ನನ್ನ ಹುದ್ದೆಗೆ ರಾಜೀನಾಮೆ ನೀಡಬೇಕಾಗಿ ಬಂತು. ಆ ಬಗ್ಗೆ ನನಗೆ ಚಿಂತೆಯಿಲ್ಲ. ಶ್ರೀ ರಾಮಯ್ಯನವರು ನನ್ನಲ್ಲಿಟ್ಟಿದ್ದ ಗೌರವ, ವಿಶ್ವಾಸಕ್ಕಾಗಿ, ಅವರ ಗುಣಗ್ರಹಣ ಸಾಮರ್ಥ್ಯಕ್ಕಾಗಿ ನಿರಸೂಯತೆಯ ಅವರ ಸಜ್ಜನಿಕೆಯನ್ನು ನೆನೆದು, ಕೃತಜ್ಞತೆಯನ್ನು ಸಲ್ಲಿಸುವ ಸಲುವಾಗಿ ಈ ಪ್ರಕರಣವನ್ನಿಲ್ಲಿ ಪ್ರಸ್ತಾಪಿಸ ಬೇಕಾಯಿತು.

ಶುದ್ಧ ಹಸ್ತರೂ, ಬುದ್ಧಿವಂತರೂ, ಧೈರ್ಯವಂತರೂ, ಉಜ್ವಲ ದೇಶಾಭಿಮಾನಿಗಳೂ, ಕರ್ತೃತ್ವ ಸಾಮರ್ಥ್ಯವುಳ್ಳವರೂ ಆದ ರಾಮಯ್ಯನವರು ಯಾವ ದೇಶಕ್ಕಾದರೂ ಭೂಷಣರು. ಅಂಥವರ ಸೇವೆಯನ್ನು ನಾಡಿನ ಶ್ರೇಯಸ್ಸಿಗಾಗಿ ಬಳಸಿಕೊಳ್ಳಬೇಕಾದ್ದು ಸಮಾಜದ ನಾಯಕರ ಧರ್ಮವೆಂಬುದು ಅವರನ್ನು ಬಲ್ಲ ಹಲವರ ಮತ. ದೇಶಕ್ಕೆ ಅವರ ಸೇವೆ ನಿರಂತರವಾಗಿ ದೊರೆಯಲೆಂದು ಅವರ ಯೋಗ್ಯತೆಗೆ ತಕ್ಕ ಸ್ಥಾನಮಾನಗಳು ರಾಜಕೀಯ ಕ್ಷೇತ್ರದಲ್ಲಿ ಲಭಿಸಲೆಂದೂ ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

○

## ಸ್ನೇಹಮಯಿ

**ಡಾ. ಡಿ ಕೆ ರಾಜೇಂದ್ರ**

ರಾಜಕೀಯದ ಜೊತೆ ಜೊತೆಯಲ್ಲಿಯೇ ನಾಡು-ನುಡಿಯ ಪ್ರೀತಿ, ಸಾಹಿತ್ಯಾ-ಕಲೆಗಳ ಅಭಿರುಚಿ, ದೀನದಲಿತರ ಬಗೆಗಿನ ಕಾಳಜಿ, ಮಣ್ಣನ್ನೇ ನಂಬಿ ಕಂಗಾಲಾದವರ ಏಳಿಗೆಗಾಗಿ ಹೋರಾಟ, ಹೀಗೆ ವೈ.ಕೆ.ಆರ್ ಅವರು ಹತ್ತು ಹಲವು ಜನಪರವಾದ ಕಾರ್ಯಗಳಲ್ಲಿ ತಮ್ಮನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡವರು. ರಾಮಯ್ಯ ಅವರ ಹೆಚ್ಚುಗಾರಿಕೆ ಎಂದರೆ, ಅಧಿಕಾರ ಇರಲಿ, ಇಲ್ಲದಿರಲಿ ತಾವು ಕೈಗೊಂಡ ಕಾರ್ಯವನ್ನು ಛಲದಿಂದ ಮುನ್ನಡೆಸುವುದು. ಅಧಿಕಾರದ ಲಾಲಸೆಯಿಂದ ತಮ್ಮ ಉದ್ದೇಶವನ್ನು ಎಂದೂ ಕೈಬಿಟ್ಟವರಲ್ಲ. ಉದ್ದೇಶದ ಈಡೇರಿಕೆಗಾಗಿ ನಿರಂತರ ಹೋರಾಟ ನಡೆಸುತ್ತ ಬಂದ ಧೀಮಂತ ರಾಜಕಾರಣಿ. ಅನೇಕ ವೇಳೆ ಅವರ ಮಾತು ನಿಷ್ಠುರ, ನೇರ, ಆದರೆ ಮನಸ್ಸು ಮೃದು. ಅಷ್ಟೇ ಸ್ನೇಹಮಯಿ, ಸಹೃದಯಿ, ಪ್ರಜ್ಞಾವಂತ ರಾಜಕಾರಣಿ.

ರಾಮಯ್ಯ ಅವರು ರೈತಾಪಿ ವರ್ಗದಿಂದ ಬಂದವರು. ಗ್ರಾಮೀಣ ಸಮಸ್ಯೆಗಳನ್ನು ಚೆನ್ನಾಗಿ ಅರಿತವರು. ಅವುಗಳ ಪರಿಹಾರಕ್ಕಾಗಿ ಶ್ರಮಿಸಿದವರು. ಅವಕಾಶಹೀನರ ಉದ್ಧಾರದ ಕನಸು ಕಂಡು, ಅದಕ್ಕಾಗಿ ಛಲದಿಂದ ಹೋರಾಡುವ ಮನೋಧರ್ಮವನ್ನು ಬೆಳೆಸಿಕೊಂಡವರು. ಅಪ್ಪಟ ಕ್ರಿಯಾಶೀಲ ರಾಜಕಾರಣಿ ಎಂದೇ ಕರೆಸಿಕೊಳ್ಳುವ ಅರ್ಹತೆಗೆ ಪಾತ್ರರಾಗಿ ಆ ಎತ್ತರಕ್ಕೆ ಏರುತ್ತ ಬಂದವರು. ಕಳೆದ ಮೂರು ದಶಕಗಳ ಅವರ ರಾಜಕೀಯ ಜೀವನ ತತ್ವನಿಷ್ಠೆಗೆ ಹೆಸರಾದದ್ದು. ಸಾಮಾನ್ಯರಲ್ಲಿ ಸಾಮಾನ್ಯರಾಗಿ ಬೆರೆತು ಕೆಲಸ ಮಾಡುತ್ತ ಬಂದವರು.

ರಾಮಯ್ಯ ಅವರು ಒಳ್ಳೆಯ ಪರಿಸರ ಪ್ರೇಮಿ. ಅವರ ಕ್ಷೇತ್ರದಲ್ಲಿ ಲಕ್ಷಾಂತರ ಗಿಡಮರಗಳನ್ನು ನೆಡಿಸಿ, ಅಕ್ಕರೆಯಿಂದ ಅವುಗಳನ್ನು ಬೆಳೆಸಲು ಕಾರಣವಾದ ವಿಷಯ ಎಲ್ಲರಿಗೂ ತಿಳಿದಿರುವಂತಹುದು. ಪ್ರಕೃತಿಯನ್ನು ಆಸ್ವಾದಿಸುವ ವ್ಯಕ್ತಿ ಇಡೀ ಜೀವರಾಶಿಯನ್ನು ಪ್ರೀತಿಸುತ್ತಾನೆ. ಏಕೆಂದರೆ ಅಂತಹವನಲ್ಲಿ ಅಂತಃಕರಣ ಕೆಲಸ ಮಾಡುತ್ತಿರುತ್ತದೆ. ರಾಮಯ್ಯ ಅವರು ಕೈಗೊಂಡಿರುವ ಇಂತಹ ಹತ್ತು ಹಲವು ಜನಪರವಾದ ಕಾರ್ಯಗಳ ಮೂಲಕ ಇದು ಸಾಬೀತಾಗಿದೆ. ವಕೀಲರಾಗಿ, ಶಾಸಕರಾಗಿ, ಮಂಡಳಿಗಳ ಅಧ್ಯಕ್ಷರಾಗಿ, ಮಂತ್ರಿಯಾಗಿ, ಸಮಾಜ ಸೇವಕರಾಗಿ ಅವರು ಮಾಡುತ್ತ ಬಂದಿರುವ ಜನಪರ ಕಾರ್ಯಗಳು ಅವರ ಹೆಸರನ್ನು ಶಾಶ್ವತಗೊಳಿಸಿವೆ. ಇಡೀ ತಮ್ಮ ಕ್ಷೇತ್ರವನ್ನು ಮಾದರಿಯ ಕ್ಷೇತ್ರವನ್ನಾಗಿಸಲು ಅವರು ಕೈಗೊಂಡ ಕ್ರಮಗಳು, ನಡೆಸಿದ

ಹೋರಾಟ, ಕಂಡ ಕನಸು, ತೋರಿದ ಛಲ, ಮಾಡಿದ ಸಂಕಲ್ಪ - ಇವೆಲ್ಲ ಒಬ್ಬ ಪ್ರಾಮಾಣಿಕ ರಾಜಕಾರಣಿಯಲ್ಲಿ ಮಾತ್ರ ಕಾಣಲು ಸಾಧ್ಯ. ಹೇಮಾವತಿಯ ನೀರನ್ನು ತನ್ನ ಜಿಲ್ಲೆಗೆ ತರಲು ವೈ.ಕೆ.ಆರ್ ಅವರು ನಡೆಸಿದ ಹೋರಾಟ, ಒಂದು ರೀತಿ ಭಗೀರಥ ಪ್ರಯತ್ನವೇ. ಕೊನೆಗೂ ಅದರಲ್ಲಿ ಅವರು ಯಶಸ್ವಿಯಾದದ್ದು ಅವರ ಸಾಹಸದ, ಶ್ರಮದ ಹಾಗೂ ಅಪಾರ ಕನಸಿನ ಫಲ. ಆ ಯಶಸ್ಸು ಅವರ ನಾಯಕತ್ವಕ್ಕೆ ಸಂದ ದೊಡ್ಡ ಗೌರವ. ಅವರ ಕ್ಷೇತ್ರದಲ್ಲಿ ಅಭಿವೃದ್ಧಿ ಕಾರ್ಯಗಳ ನಿತ್ಯೋತ್ಸವವೇ ನಡೆದಿದೆ ಎಂಬುದು ಅಲ್ಲಿನ ಜನರ ಹಾಗೂ ಅಧಿಕಾರಿಗಳ ಒಮ್ಮತದ ಮಾತು.

ಒಳ್ಳೆಯ ಕನಸುಗಾರ ಒಳ್ಳೆಯ ಕಲಾಕಾರನೂ ಆಗಿರುತ್ತಾನೆ. ಅದಕ್ಕೆ ಬಣ್ಣ- ಬರಹವೇ ಬೇಕೆಂದೇನಿಲ್ಲ. ಒಂದು ಸುಂದರ ಸಮಾಜದ ಕನಸು ಕಂಡವನಲ್ಲಿಯೂ ಇದು ಸಾಧ್ಯವಾಗುತ್ತದೆ. ಒಂದು ಸುಂದರ ಸಮಾರಂಭ ಮಾಡಬೇಕೆಂದು ಬಯಸಿದವನಲ್ಲಿಯೂ ಇದು ಬೇಕಾಗುತ್ತದೆ. ರಾಮಯ್ಯ ಅವರು ಒಳ್ಳೆಯ ಸಂಘಟಕರು, ಸೂಕ್ಷ್ಮಮತಿಯಾದ ಸಂಯೋಜಕರು. ಹಾಗಾಗಿ ಅವರು ಕೈಗೊಳ್ಳುವ ಯಾವುದೇ ಕಾರ್ಯಗಳು, ರೂಪಿಸುವ ಕಾರ್ಯಕ್ರಮಗಳು ಕಲಾತ್ಮಕವಾಗಿರುತ್ತವೆ. ಅದರ ಹಿಂದಿನ ಅವರ ಶ್ರಮ, ದುಡಿಮೆ, ಹೊಳಹುಗಳು ಆಶ್ಚರ್ಯ ಹುಟ್ಟಿಸುತ್ತವೆ. **'ಛಲಬೇಕು ಶರಣಂಗೆ'** ಎಂಬ ವಚನಕಾರರ ಮಾತು ಸುಳ್ಳಲ್ಲ. ಅದು ಶರಣಂಗೆ ಮಾತ್ರವಲ್ಲ, ಎಲ್ಲ ರಂಗದ ವ್ಯಕ್ತಿಗಳಿಗೂ ಅನ್ವಯವಾಗುತ್ತದೆ. ಕನಸು ಕಾಣುವ ವ್ಯಕ್ತಿ ಸದಾ ಕ್ರಿಯಾಶೀಲನಾಗಿರುತ್ತಾನೆ. ತಾನು ಕಾಣುವ ಕನಸಿಗೆ, ಛಲ ಬೆನ್ನೆಲುಬಾದಾಗ ಅದು ನನಸಾಗುವುದು ನಿಶ್ಚಿತ. ರಾಮಯ್ಯ ಅವರು ಈ ಎರಡನ್ನೂ ತಮ್ಮ ಯಶಸ್ಸಿನ ಆಯುಧವನ್ನಾಗಿಸಿಕೊಂಡವರು. ಅದರಲ್ಲಿ ಸಾಫಲ್ಯವನ್ನು ಕಂಡುಕೊಂಡವರು.

ವೈ.ಕೆ.ಆರ್ ಅವರು ಅರವತ್ತು ವಸಂತಗಳನ್ನು ಕಳೆದಿದ್ದಾರೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಇದು ಪ್ರಮುಖ ಘಟ್ಟವೇ. ಈ ಅರವತ್ತು ವಸಂತಗಳೂ ಫಲಪ್ರದವಾಗಿ ಅವರ ಹೆಸರಿಗೆ ಜ್ಯೋತಿಯಾಗಿರುವುದು ಇನ್ನೂ ಸಂತಸದ ಸಂಗತಿ.

○

# ಮಾನವೀಯ ವ್ಯಕ್ತಿ

**ಪಿ ಲಂಕೇಶ್**

ಈ ನನ್ನ ಚಿಂತೆ ಇನ್ನೂ ಕೆಲವರನ್ನು ಒಳಗೊಳ್ಳುತ್ತಿದೆ. ವೈ.ಕೆ. ರಾಮ್ಮಯನವರನ್ನು ನೋಡಿ, ಈ ರಾಮಯ್ಯನವರ ಬಗ್ಗೆನನಗೆ ಗೊತ್ತಿರುವುದರಿಂದ, ತನಿಖೆ ಮಾಡಿ ತಿಳಿದುಕೊಂಡಿರುವುದರಿಂದ ಹೇಳುತ್ತಿದ್ದೇನೆ. ಕುಣಿಗಲ್ ಶಾಸನ ಸಭಾ ಕ್ಷೇತ್ರದಿಂದ,ತುಮಕೂರು ಲೋಕಸಭಾ ಕ್ಷೇತ್ರದಿಂದ ನಿಂತಿದ್ದ ರಾಮಯ್ಯನವರನ್ನು ಸೋಲಿಸಿರುವ ಜನಕ್ಕೆ ತಮ್ಮ ದುಷ್ಟತನ ಗೊತ್ತಾಗಬೇಕಾಗಿದೆ. ರಾಮಯ್ಯ ಶುದ್ಧ ಹಸ್ತದ ಮನುಷ್ಯ. ದಕ್ಷ ವ್ಯಕ್ತಿ. ಇವರು ಹೆಗಡೆ ಸಂಪುಟದಲ್ಲಿ ರೇಷ್ಮೆ ಮಂತ್ರಿಯಾಗಿದ್ದಾಗ ರೇಷ್ಮೆ ಲಾಬಿಯ ಜನಕ್ಕೆ ಒಂದು ಕೆಲಸವಾಗಬೇಕಾಗಿತ್ತು. ಈ ಲಾಬಿಯ ಘಡವರು ರಾಮಯ್ಯನವರನ್ನು ಕಂಡು ಮೂವತ್ತು ಲಕ್ಷ ಕೊಡುವುದಾಗಿ ಹೇಳಿದರು. ರಾಮಯ್ಯ ಲಂಚ ತೆಗೆದುಕೊಳ್ಳುವುದಿಲ್ಲ, 'ನಿಮ್ಮ ಕೆಲಸ ಒಳ್ಳೆಯದಾಗಿದ್ದರೆ ಹಾಗೆಯೇ ಮಾಡಿಕೊಡಬೇಕಾದ್ದು ಮಂತ್ರಿಯಾಗಿ ನನ್ನ ಕರ್ತವ್ಯ' ಅಂದರು. ಆದರೆ ಈ ರೇಷ್ಮೆ ಲಾಬಿಯವರು ಕಪ್ಪು ಕೆಲಸ ಮಾಡಿಸಿ ಕೊಳ್ಳಲು ಬಂದಿದ್ದರು. ರಾಮಯ್ಯನವರ ನಿಲುವು ಕಂಡು ತಬ್ಬಿಬ್ಬಾದರು. ಚೌಕಾಶಿ ಮಾಡತೊಡಗಿದರು. ರಾಮಯ್ಯ ಅವರನ್ನು ಬೈದು ಕಳಿಸಿದರು . ಅಮೇಲೆ ಅದೇ ಲಾಬಿ ಹೆಗಡೆ, ಬೊಮ್ಮಾಯಿ ಮೂಲಕ ಆ ಕೆಲಸ ಮಾಡಿಸಿಕೊಂಡಿತು. ಹೇಗೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**ವೈ.ಕೆ. ರಾಮಯ್ಯ ಗರ್ವದ ಮನುಷ್ಯನೆಂದು ಕೆಲವರು ಅಪಪ್ರಚಾರ ಮಾಡುತ್ತಾರೆ. ಆದರೆ ರಾಮಯ್ಯ ದುಷ್ಟ ಅಧಿಕಾರಿಗಳು, ಕೊಳಕು ಪುಢಾರಿಗಳ ಬಗ್ಗೆ ಸಿಟ್ಟುಗೊಂಡು ಬೈಯುವ ಮುನುಷ್ಯ; ನಾನು ಬಲ್ಲಂತೆ ಅತ್ಯಂತ ಬುದ್ಧಿವಂತರಾದ , ನಿಷ್ಠುರರಾದ, ತಮ್ಮಕ್ಷೇತ್ರಕ್ಕೆ ಅಪಾರ ಕೆಲಸ ಮಾಡಿರುವ ಮಾನವೀಯ ವ್ಯಕ್ತಿ ರಾಮಯ್ಯ.**

ಈ ರಾಮಯ್ಯನವರನ್ನು ಜನ ಸೋಲಲು ಬಿಟ್ಟಿದ್ದಾರೆ. ಅವರಿಗೆ ದ್ರೋಹ ಬಗೆದಿದ್ದಾರೆ. ಹಾಗೆಯೇ ಮೈಸೂರಿನಲ್ಲಿ ಸಿದ್ದರಾಮಯ್ಯ, ಕೆ.ಆರ್. ಪೇಟೆಯಲ್ಲಿ ಕೃಷ್ಣ ಸೋತಿದ್ದಾರೆ. ಇವರಿಬ್ಬರ ಬಗ್ಗೆ ಮತ್ತೆ ಹೇಳಬೇಕಿಲ್ಲ. ಗುಂಡೂರಾಯರ ಹಣಕ್ಕೆ ತಲೆದೂಗಿದ ಜನ, ಪಟೇಲರ ಹಣಕ್ಕೆ ತಲೆದೂಗಲಿಲ್ಲ. ಇದು ಗೊಂದಲ. ರಾಮಯ್ಯನವರ ಗುಣವನ್ನು ತಿರಸ್ಕರಿಸಿದರು, ಇದು ದುರಂತ.



ಈ ಚುನಾವಣೆಗಳು ನಮ್ಮ ನೊಂದ, ಸಿಟ್ಟಿಗೆದ್ದಿರುವ ಜನತೆ, ತಮ್ಮ ಅಭಿಪ್ರಾಯ ಹೇಳಲು ಒಳ್ಳೆಯ ಅವಕಾಶ. ಎಲ್ಲೆಲ್ಲೂ ಪ್ರತಿಭಟನೆ ಬತ್ತಿಹೋಗಿ, ಜನರ ಸಿಟ್ಟು ವೈಯಕ್ತಿಕ ಸಿಟ್ಟಿನ ಮಟ್ಟಕ್ಕೆ ಇಳಿಯುತ್ತಿರುವಾಗ, ಜನರು ತಮ್ಮ ಸುತ್ತ ನೋಡಬೇಕಾಗಿದೆ. ಇಲ್ಲಿಯ ಕಾಡುಗಳು ವೀರಪ್ಪನ್‌ನಂಥ ಚೋರರ ವಶಕ್ಕೆ ಹೋಗುತ್ತಿವೆ. ಇಲ್ಲಿಯ ಕೃಷಿ ಬಡತನದಲ್ಲಿ ಕುಗ್ಗಿಹೋಗುತ್ತಿದೆ. ಇಲ್ಲಿಯ ಗ್ರಾನೈಟ್ ಕಲ್ಲು ಕೂಡ ಮಾಯವಾಗುತ್ತಿವೆ; ವಿಧಾನಸೌಧವನ್ನು ಭಂಡ, ನೀಚ ಅಧಿಕಾರಿಗಳು ಮತ್ತು ಹಗಲುಗಳ್ಳರಾದ ರಾಜಕಾರಣಿಗಳು ಆಕ್ರಮಿಸಿಕೊಂಡಿದ್ದಾರೆ. ಜನ ಎಚ್ಚೆತ್ತು ಕಾಂಗ್ರೆಸ್‌ನ ಮೂತಿಗೆ ಇಕ್ಕುವ ಅವಕಾಶ ಕಳೆದುಕೊಳ್ಳಕೂಡದು.

**ನಾನೇ ಬಲ್ಲಂತೆ ವೈ. ಕೆ. ರಾಮಯ್ಯ ನಮ್ಮ ಅಪರೂಪದ ರಾಜಕಾರಣಿಗಳಲ್ಲಿ ಒಬ್ಬರು. ನಮ್ಮ ಜನರ ಕಷ್ಟ - ಸುಖ ಅರಿತ ರಾಮಯ್ಯ ಸ್ವಲ್ಪ ಅಬ್ಬರದವರೆಂದು ಅವರ ಶತ್ರುಗಳು ಟೀಕಿಸಿದರೂ, ಅವರಲ್ಲಿರುವ ಪ್ರಾಮಾಣಿಕತೆ ಮತ್ತು ನಿಷ್ಠುರತೆ ರಾಮಯ್ಯನವರನ್ನು ಹಾಗೆ ಸಿಟ್ಟಿಗೇಳಿಸುತ್ತದೆ.** ವಿದ್ಯಾವಂತರೂ, ವಿಚಾರವಂತರೂ ಆದ ರಾಮಯ್ಯ ಹಿಡಿದ ಕೆಲಸ ಮಾಡಬಲ್ಲ , ಜನತೆಯ ಆಶೋತ್ತರಗಳನ್ನು ಈಡೇರಿಸಬಲ್ಲ ಮನುಷ್ಯ - ಈಗಾಗಲೇ ಅವರು ಕುಣಿಗಲ್‌ನ ಪ್ರಕೃತಿ ಸಂಪತ್ತು ಹೆಚ್ಚಿಸಿ, ಕೃಷಿರಂಗದಲ್ಲಿ ಅಪಾರ ಕೆಲಸ ಮಾಡಿದ್ದಾರೆ. ರಾಮಯ್ಯನವರು ಮಂತ್ರಿಯಾಗಿದ್ದಾಗ 30 ಲಕ್ಷ ಲಂಚಕೊಟ್ಟು ಕೆಲಸ ಮಾಡಿಸಿಕೊಳ್ಳಲು ಬಂದ ರೇಷ್ಮೆ ವ್ಯಾಪರಿಗಳ ಗುಂಪೊಂದಕ್ಕೆ ಉಗಿದು ಕಳಿಸಿದ್ದನ್ನು ನಾನು ಬಲ್ಲೆ. ಕಳಂಕಿತ ಹಣದ ಬಗ್ಗೆ ರಾಮಯ್ಯನವರ ತಿರಸ್ಕಾರ ಕಂಡ ಆ ವ್ಯಾಪಾರಿಗಳು ರಾಮಯ್ಯನವರನ್ನು ಈಗಲೂ ಹೊಗಳುತ್ತಾರೆ. ರಾಮಯ್ಯನವರನ್ನು ಕೈ ಬಿಡುವುದು ದಿಟ್ಟ ಕುಣಿಗಲ್ ಜನಕ್ಕೆ ಒಳ್ಳೆಯದಲ್ಲ.

○

**(ಲಂಕೇಶ್ ಪತ್ರಿಕೆ :1992)**

# ಅಪ್ರತಿಮ ಹೋರಾಟಗಾರ

**ಡಾ. ಶ್ರೀ ಶಿವಕುಮಾರ ಸ್ವಾಮೀಜಿ**

ವೈ ಕೆ ರಾಮಯ್ಯನವರು ವಿಶಿಷ್ಟ ವ್ಯಕ್ತಿತ್ವದ ರಾಜಕೀಯ ಮುತ್ಸದ್ದಿಗಳು. ನೇರ ನಡೆ-ನುಡಿಯ ದಿಟ್ಟ ಸ್ವಭಾವ ಅವರದು. ಶಾಸಕರಾಗಿ, ಸಚಿವರಾಗಿ, ಸಾರ್ವಜನಿಕ ಜೀವನದಲ್ಲಿ ತನ್ನತನವನ್ನೆಂದೂ ಬಿಟ್ಟುಕೊಡದ ಅಪ್ರತಿಮ ಹೋರಾಟಗಾರರು. ಹೇಮಾವತಿ ನದಿನೀರನ್ನು ತುಮಕೂರು ನಗರ ಮತ್ತು ಜಿಲ್ಲೆಗೆ ತರುವಲ್ಲಿ ಭಗೀರಥಪ್ರಯತ್ನ ನಡೆಸಿ ಸಫಲರಾದವರು. ಅಧ್ಯಯನ ಸಂಪನ್ನರು. ವಿವೇಕಕ್ಕೆ, ವಿಚಾರಕ್ಕೆ ಹೆಸರಾದ ಶ್ರೀ ರಾಮಯ್ಯನವರು ಕವಿ ಕುವೆಂಪು ರವರ ವಿಚಾರಧಾರೆಯನ್ನು ಆರಾಧನಾ ಮನೋಭಾವದಿಂದ ಒಪ್ಪಿಕೊಂಡವರಾಗಿ, ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರರ ತತ್ವಾದರ್ಶಗಳಲ್ಲಿ ಶ್ರದ್ಧೆಯುಳ್ಳ ಸೌಜನ್ಯ ಶೀಲರು. **ತುಮಕೂರು ಜಿಲ್ಲೆಯ ಅಭಿವೃದ್ಧಿಯಲ್ಲಿ ಶ್ರೀಯುತರ ಗಣನೀಯವಾದ ಶ್ರಮವಿದೆ. ಸೇವೆ ಸಂದಿದೆ.**

ಸಮಾಜಕ್ಕಾಗಿ ಸೇವೆ ಸಲ್ಲಿಸಿದವರನ್ನು ಅಭಿನಂದಿಸುವುದು ಸುಸಂಸ್ಕೃತಿಯ ಲಕ್ಷಣ. ಗ್ರಂಥ ಸಮರ್ಪಣೆ ಪ್ರಶಂಸನೀಯ ಯೋಜನೆ. ಯುವಜನತೆಗೆ ಕೊಡಬಹುದಾದ ಆದರ್ಶ ಕೊಡುಗೆ. ಶ್ರೀಯುತರ ಸಾರ್ವಜನಿಕ ಜೀವನದ ಎಲ್ಲ ಮುಖಗಳ ಪರಿಚಯವನ್ನು ತುಂಬಿ ಕೊಂಡು ಅಕ್ಷರ ಸಂಪುಟವಾಗಿ ಅಭಿನಂದನ ಗ್ರಂಥ ಪ್ರಕಟವಾಗಲಿ ಎಂದು ಆಶಿಸುತ್ತೇನೆ. ಶ್ರೀ ವೈ.ಕೆ. ರಾಮಯ್ಯನವರಿಂದ ಜಿಲ್ಲೆಯ ಜನಜೀವನಕ್ಕೆ ಒಳ್ಳೆಯ ಸೇವಾವಕಾಶ ಲಭ್ಯವಾಗುವಂತೆ ಪರಶಿವನು ಅವರಿಗೆ ಆಯುರಾರೋಗ್ಯವನ್ನು ಕರುಣಿಸಲೆಂದು ಹಾರೈಸುತ್ತೇವೆ.

○

# ಗುಣಶೀಲಗಳುಳ್ಳ ರಾಜಕಾರಣಿ

**ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ**

ಪ್ರಸ್ತುತ ಸಮಾಜ ಪ್ರಕ್ಷುಬ್ಧಗೊಂಡು ಇಡೀ ಭಾರತ ದೇಶದ ಜನತೆ ತಲ್ಲಣಗೊಂಡಿದೆ. ಭವಿಷ್ಯ ಕರಾಳ ಎನ್ನಿಸುತ್ತಿದೆ. ಮತ್ತೆ ನಮ್ಮ ದೇಶ ಸುವ್ಯವಸ್ಥೆಗೊಳ್ಳಲು ಸುಭದ್ರಗೊಳ್ಳಲು ನಮ್ಮ ರಾಜಕಾರಣಿಗಳ ಹೊಣೆ ಈ ವಿಪನ್ನಾವಸ್ಥೆಯಲ್ಲಿ ಅತ್ಯಂತ ಗುರುತರವಾಗಿದೆ.

ರಾಜಕಾರಣಿಗಳೆಲ್ಲ ಮುತ್ಸದ್ದಿಗಳಾಗಬೇಕು. ರಾಜಕಾರಣಿಗಳು ತಾವು ಆರಿಸಿ ಬಂದ ಕ್ಷೇತ್ರದ ಜನತೆಗೆ ಪೊರೆಯುವ ತಾಯಿಯಾಗಬೇಕು, ರಕ್ಷಿಸುವ ತಂದೆಯಾಗಬೇಕು, ಜನ-ಜೀವನ ಮೌಲ್ಯಗಳನ್ನು ಪಾಲಿಸುವಂತಾಗಲು ಅವರು ಆದರ್ಶಪ್ರಾಯರಾಗಬೇಕು ಹೀಗಾದಾಗ ಮಾತ್ರ ದೇಶಕ್ಕೆ ಭವಿಷ್ಯವಿದೆ.

ಇಂಥ ಗುಣಶೀಲಗಳುಳ್ಳ ರಾಜಕಾರಣಿ, ಮುತ್ಸದ್ದಿ ಶ್ರೀ ವೈ.ಕೆ. ರಾಮಯ್ಯನವರಿಗೆ ಅರವತ್ತು ತುಂಬಿದ ಸಂದರ್ಭದಲ್ಲಿ, ಜನತೆ ಅವರನ್ನು ಅಭಿಮಾನದಿಂದ, ಆತ್ಮೀಯತೆಯಿಂದ ಸಂಭ್ರಮದಿಂದ ಸನ್ಮಾನಿಸುತ್ತಿರುವುದು ಸುತ್ಯಾರ್ಹ.

ಈ ಸಂದರ್ಭದಲ್ಲಿ ಪ್ರಕಟಿಸುತ್ತಿರುವ 'ಅಭಿನಂದನ ಗ್ರಂಥ' ರಾಜಕಾರಣಿಗಳಿಗೆ, ಜನಕ್ಕೆ, ಮುಖ್ಯವಾಗಿ ಯುವಕರಿಗೆ ಮಾರ್ಗದರ್ಶಿಯಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇವೆ.

ಶ್ರೀಯುತ ವೈ.ಕೆ. ರಾಮಯ್ಯನವರಿಗೆ ಭಗವಂತನು ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲಿ. ಶುಭವಾಗಲಿ.

○



# ಬುದ್ಧಿಗುಣ ಸಂಪನ್ನ

**ಡಾ. ಕರೀಗೌಡ ಬೀಚನಹಳ್ಳಿ**

ನಾನು ಹುಲಿಯೂರು ದುರ್ಗದ ಪ್ರೌಢಶಾಲೆಯಲ್ಲಿ 1967ರಲ್ಲಿ ಓದುತ್ತಿದ್ದೆ. ಆ ವರ್ಷ ಶ್ರೀ ವೈ.ಕೆ. ರಾಮಯ್ಯನವರು ಸ್ವತಂತ್ರ ಅಭ್ಯರ್ಥಿಯಾಗಿ ಸಿಂಹದ ಗುರುತಿನಲ್ಲಿ ಚುನಾವಣೆಗೆ ನಿಂತಿದ್ದರು. ಒಂದು ಅಂಬ್ಯಾಸಿಡರ್ ಕಾರು ದೂಳೆಬ್ಬೆರಿಸಿಕೊಂಡು ಬಂತು. ಊರು ಮುಂದೆ ನಿಂತಿದ್ದ ನನ್ನ ವಾರಿಗೆಯ ಹುಡುಗರೆಲ್ಲ ಕಾರು ಬಂದು ನಿಂತ ಸ್ಥಳಕ್ಕೆ ಓಡಿದೆವು. ಕಾರಿನಲ್ಲಿ ಕೂತಿದ್ದ ವ್ಯಕ್ತಿ ''ಸ್ವತಂತ್ರ ಅಭ್ಯರ್ಥಿ ಶ್ರೀ ವೈ. ಕೆ. ರಾಮಯ್ಯನವರಿಗೆ ನಿಮ್ಮ ಅಮೂಲ್ಯ ಮತ ಕೊಡಿ'' ಎಂದು ಮೈಕ್‌ನಲ್ಲಿ ಕಿರುಚುತ್ತಿದ್ದ. ಕಾರಿನ ಕಿಟಕಿಯಿಂದ ತೂರಿದ 'ಕರಪತ್ರಗಳು' ಗಾಳಿಯಲ್ಲಿ ಹಾರಾಡಿ ಬಂದು ನನ್ನ ಕೈಗೂ ಒಂದು ಸಿಕ್ಕಿತು. ಓದಿದೆ. ರಾಮಯ್ಯನವರು ಬ್ರಿಟೀಷ್ ಮಾದರಿಯ ಷೂಟು ಹಾಕಿ ಟೈ ಕಟ್ಟಿದ್ದ ಪೋಟೋ ಅದರಲ್ಲಿ ಅಚ್ಚಾಗಿತ್ತು. ವೈ.ಕೆ. ರಾಮಯ್ಯ ಎಂ. ಎ., ಎಲ್.ಎಲ್. ಬಿ. ಎಂದು ಅವರ ಹೆಸರಿನ ಮುಂದೆ ಪದವಿಗಳು ಅಚ್ಚಾಗಿದ್ದವು. ನನಗೆ ಆ ಪದವಿಗಳನ್ನು ಓದಿ ನನ್ನ ಮನಸ್ಸಿನಲ್ಲಿ ಅವತ್ತು ಅಸ್ಪಷ್ಟವಾಗಿ ನನಗೂ ಆಸೆ ಮೂಡಿತು. ನಾನೂ ಮುಂದೆ ಇಷ್ಟನ್ನು ಓದಬೇಕು; ಇಷ್ಟು ಸಾಧ್ಯವಾಗದಿದ್ದರೆ ಬಿ.ಎ. ಪದವಿಯನ್ನಾದರೂ ಮಾಡಬೇಕು ಅನ್ನಿಸಿತು. ಅಂದು ಆ ಶುಭಗಳಿಗೆಯಲ್ಲಿ ನನ್ನ ಮನಸ್ಸಿನಲ್ಲಿ ನಾನೂ ಓದಬೇಕು ಅನ್ನತಕ್ಕಂಥ ಭಾವನೆ ತೀವ್ರವಾಗಿ ಬಂತಲ್ಲ ಅದು ಮುಖ್ಯ.

ಆಮೇಲೆ ಆ ಕಾರು ವಾಪಸ್ಸು ಹೋಗುವಾಗ ಧೂಳೆಬ್ಬಿಸುತ್ತಾ ಹೋಯಿತು. ನಾವೆಲ್ಲಾ ಅದರ ಹಿಂದೆ ಸ್ವಲ್ಪ ದೂರ ಓಡಿ ಆ ಧೂಳಿನಲ್ಲಿ ಮಾಯವಾಗಿದ್ದೆವು. ಆಮೇಲೆ ರಾಮಯ್ಯನವರ ಬಗ್ಗೆ ನನಗೆ ಸುಮಾರು 1983ರವರೆಗೆ ಏನೂ ಗೊತ್ತಾಗಲಿಲ್ಲ.

ಜನತಾಪಕ್ಷ ಅಧಿಕಾರಕ್ಕೆ ಬಂದಾಗ ವೈ ಕೆ ರಾಮಯ್ಯನವರು ರೇಷ್ಮೆ ಸಚಿವರಾದರು. ಆಗ ನಾನು ಎಂ. ಎ. ಮುಗಿಸಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಸಾರಾಂಗದಲ್ಲಿ ಕೆಲಸದಲ್ಲಿದ್ದೆ. ಆಗ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ಗೆಳೆಯ ಹಿ ಚಿ ಬೋರಲಿಂಗಯ್ಯನವರು ನನ್ನ ಆಫೀಸಿಗೆ ಒಂದು ದಿನ ಬಂದು, ''ಸರ್, ನಿಮ್ಮನ್ನು ರಾಮಯ್ಯನವರು ಕರೆದುಕೊಂಡು ಬರೋದಕ್ಕೆ ಹೇಳಿದ್ದಾರೆ. ಯಾವತ್ತು ಬರ್‍ತೀರಿ ಹೇಳಿ ಸರ್'' ಎಂದರು. ನನಗೆ ಆಶ್ಚರ್ಯವಾಗಿ, ''ನಾನು ಅವರಿಗೆ ಹೇಗೆ ಗೊತ್ತು ಸರ್?'' ಎಂದು

ಬೋರಲಿಂಗಯ್ಯನವರನ್ನು ಕೇಳಿದೆ. ಆಗ ಅವರು ''ನಿಮ್ಮ ಕಥೆಗಳನ್ನೆಲ್ಲಾ ಅವರು ಓದಿದ್ದಾರೆ ಸರ್'' ಎಂದರು. ಬೋರಲಿಂಗಯ್ಯನವರು ಮುಂದುವರಿದು ನಿಮ್ಮದೊಂದು ಕಥೆ ಅವರ ಮೇಲೆ ತುಂಬಾ ಪ್ರಭಾವ ಬೀರಿದೆ. ಅದನ್ನು ನನಗೆ ಹೇಳಿದರು'' ಎಂದರು.

''ನಿಮಗೆ ರಾಮಯ್ಯನವರು ಎಷ್ಟು ದಿನದಿಂದ ಗೊತ್ತು?'' ಎಂದು ಬೋರಲಿಂಗಯ್ಯನವರನ್ನು ಕೇಳಿದೆ. ಅವರು ''ನಮ್ಮ ಊರಿನ ಪಕ್ಕದ ಊರೇ ಅವರದು. ಎಲೆಕಡಕಲು ಅಂಥ. ನಮ್ಮೂರು ಹಿತ್ತಲಪುರ. ಹುಲಿಯೂರುದುರ್ಗದಿಂದ ಆ ಕಡೆ ನಮ್ಮ ಊರುಗಳು. ಈ ಕಡೆ ನಿಮ್ಮ ಊರು ಅಷ್ಟೆ. ಮತ್ತು ರಾಮಯ್ಯನವರ ಅಕ್ಕನನ್ನು ನಮ್ಮೂರಿಗೆ ಕೊಟ್ಟಿದೆ. ನನಗೆ ಬಹಳ ದಿನದಿಂದ ಅವರು ಗೊತ್ತು'' ಎಂದರು.

ನಾನು ಅವರನ್ನು ನೋಡಿಯೇ ಇರಲಿಲ್ಲ. ಆದರೆ ಅವರು 1967ರಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಚುನಾವಣೆಗೆ ನಿಂತಿದ್ದು ಮಾತ್ರ ನನಗೆ ಹಳೆಯ ನೆನಪಾಗಿ ಉಳಿದಿತ್ತು. ನಾನು ಬೋರಲಿಂಗಯ್ಯನವರಿಗೆ ''ಆಗಲಿ, ಒಂದು ದಿನ ಹೋಗುವ. ಯಾವತ್ತು ಅಂಥ ನನಗೆ ಹೇಳಿ'' ಅಂದಿದ್ದೆ. ಒಂದು ವಾರ ಬಿಟ್ಟು ಬೋರಲಿಂಗಯ್ಯನವರು ಮತ್ತೆ ನಮ್ಮ ಕಛೇರಿಗೆ ಬಂದವರೇ ''ಇವತ್ತು ನಿಮ್ಮನ್ನು ಕರೆದುಕೊಂಡು ಬರ್ತೀನಿ? ಅಂಥ ರಾಮಯ್ಯನವರಿಗೆ ಹೇಳಿದ್ದೀನಿ ಸರ್'' ಎಂದರು. ಸಂಜೆ ನಾವಿಬ್ಬರೂ ನಾಲ್ಕು ಗಂಟೆಗೆ ವಿಧಾನಸೌಧಕ್ಕೆ ಹೊರಟೆವು. ವಿಧಾನಸೌಧಕ್ಕೆ ಬಂದಾಗ ರಾಮಯ್ಯನವರು ಅವರ ಕಛೇರಿಯಲ್ಲಿ ರೇಷ್ಮೆ ಇಲಾಖೆಗೆ ಸಂಬಂಧಿಸಿದಂತೆ ಮೀಟಿಂಗ್ ಮಾಡ್ತಾ ಇದ್ದಾರೆ ಎಂದು ಗೊತ್ತಾಯಿತು.

ನಾವು ಇಬ್ಬರೂ ಅವರ ಕಛೇರಿಯಲ್ಲಿ ಕಾಯುತ್ತಾ ಕೂತಿದ್ದಾಗ ರಾಮಯ್ಯನವರು ಬಂದವರೆ ''ಬನ್ನಿ, ಯಾವುದೋ ಒಂದು ಮೀಟಿಂಗ್ ಇತ್ತು'' ಎಂದವರೇ ಅವರ ರೂಮಿನಿಂದ ಹೊರಟರು. ಅಷ್ಟರಲ್ಲಿ ಬೋರಲಿಂಗಯ್ಯನವರು ನನ್ನನ್ನು ರಾಮಯ್ಯನವರಿಗೆ ಪರಿಚಯಿಸಿದರು. ಆಗ ರಾಮಯ್ಯನವರು ನನ್ನ ಕೆಲಸ, ವೃತ್ತಿ ಮದುವೆ, ಮಕ್ಕಳು ಇತ್ಯಾದಿ ವಿವರಗಳನ್ನು ವಿಚಾರಿಸುತ್ತಾ ವಿಧಾನಸೌಧದ ಮೆಟ್ಟಿಲುಗಳನ್ನು ಇಳಿಯುತ್ತಿದ್ದರು. ನಾನು ನನ್ನ ಪರಿಚಯ ಎಲ್ಲಾ ಹೇಳುತ್ತಾ ಅವರ ಕಾರನ್ನು ಹತ್ತಿದೆ. ರಾಮಯ್ಯನವರು ತಮ್ಮ ಸರ್ಕಾರಿ ಬಂಗಲೆಗೆ ಕರೆದೊಯ್ದರು. ವಿಧಾನ ಸೌಧದಿಂದ ಅವರ ಮನೆ ತಲುಪುವಾಗ ದಾರಿಯಲ್ಲಿ ಅವರು ''ನಿಮ್ಮ ಮನೆ ಎಲ್ಲಿ? ಎಲ್ಲಿದ್ದೀರಿ? ಎಂದು ನನ್ನ ಕೇಳಿದರು. ನಾನು ಕೆಂಗೇರಿ ಉಪನಗರದಲ್ಲಿದ್ದೇನೆ. 10-12 ವರ್ಷಗಳಿಂದ ಅಲ್ಲೇ ಬಾಡಿಗೆ ಮನೆಯಲ್ಲಿದ್ದೇನೆ. ಆರಾಮವಾಗಿದ್ದೇನೆ. ಏನೂ ತೊಂದರೆ ಇಲ್ಲ'' ಎಂದೆ. ಆಗ ಅವರು, ''ನಾನು ಕರ್ನಾಟಕ ಹೌಸಿಂಗ್ ಬೋರ್ಡ್ ಛೇರ್ಮನ್ ಆಗಿದ್ದಾಗ ಅನೇಕರಿಗೆ ಮನೆ ಅಲಾಟ್ ಮಾಡಿದೆ. ಆದರೆ ಯಾಕೋ ನೀವು ಆಗ ನನ್ನ ಪರಿಚಯಕ್ಕೆ ಬರಲಿಲ್ಲ'' ಎಂದು ವಿಷಾದಿಸಿದರು.

ಅವರು ಮತ್ತೆ ತಮ್ಮ ಮಾತನ್ನು ಮುಂದುವರಿಸಿ ಒಂದು ಮಾತು ಹೇಳಿದರು. ಆ ಮಾತು ನನಗೆ ಇನ್ನೂ ನೆನಪಿದೆ. ''ಗೌಡ್ರೆ, ಜಗತ್ತಿನಲ್ಲಿ ಸಾಮ್ರಾಜ್ಯಕ್ಕಾಗಿ, ಪ್ರೇಮಕ್ಕಾಗಿ ಅನೇಕ ಯುದ್ಧಗಳು ನಡೆದಿದೆ. ಆದರೆ ಸಾಹಿತ್ಯದಿಂದ ಸಮಾಜ ಬದಲಾವಣೆ ಆಗುತ್ತದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ಸಾಹಿತ್ಯದಿಂದ ಸಮಾಜ ಬದಲಾವಣೆ ಆಗುತ್ತೆ ಅಂಥ ಕೇಳಿದ್ದೇನೆ. ಆದರೆ ಈ ಮಾತು ಎಷ್ಟು ನಿಜವೋ, ಸುಳ್ಳೋ ನನಗೆ ತಿಳಿಯದು. ಆದರೆ ನಿಮ್ಮ ಒಂದು ಕಥೆಯಿಂದ ಮಾತ್ರ ನನ್ನ ಬದುಕಿನಲ್ಲಿ ಒಂದು ಮಹತ್ವದ ತಿರುವು ಉಂಟಾಗಿದೆ. ಏಕೆಂದರೆ, ನಿಮ್ಮ ಕಥೆ ಓದಿದ ಮೇಲೆ ನಾನು ಈ ರಾಜ್ಯದ ಮಂತ್ರಿಯಾದರೆ ಕೊನೆಪಕ್ಷ ನನ್ನ ಕ್ಷೇತ್ರದಲ್ಲಿ ಬರುವ ಪ್ರತಿಹಳ್ಳಿಗೂ ಕರೆಂಟ್ ಕೊಡಿಸಿಬಿಡಬೇಕು ಎಂದು ನಿರ್ಧರಿಸಿ, ನನ್ನ ಕ್ಷೇತ್ರದ ಎಲ್ಲಾ ಹಳ್ಳಿಗಳಿಗೂ ಇದನ್ನು ಮಾಡಿಸುತ್ತಿದ್ದೇನೆ'' ಎಂದರು. ನನಗೆ ಅವರ ಕಳಕಳಿ ಮತ್ತು ಕ್ಷೇತ್ರದ ಜನತೆಯ ಬಗ್ಗೆ ಇರುವ ಬದ್ಧತೆ ಕಂಡು ಆಶ್ಚರ್ಯವಾಯಿತು.

ಇದಾದ ಮೇಲೆ ರಾಮಯ್ಯನವರು ನನ್ನನ್ನು ಪ್ರೀತಿಯಿಂದ ಒಂದೆರಡು ಸಭೆಗಳಿಗೆ ಕರೆದು ಸನ್ಮಾನಿಸಿದರು. ಶಾಲು ಹೊದಿಸಿ ತಮ್ಮ ಮೆಚ್ಚಿಗೆ ಸೂಚಿಸಿ ತಮ್ಮ ಪ್ರೀತಿಯನ್ನು ಪ್ರಕಟಿಸಿದರು. ಆಮೇಲೆ ರಾಮಯ್ಯನವರ ಬಗ್ಗೆ ನಾನು ಹೆಚ್ಚು ಹೆಚ್ಚು ತಿಳಿಯುತ್ತಾ, ಅರ್ಥ ಮಾಡಿಕೊಳ್ಳುತ್ತಾ ಹೋದದಂತೆಲ್ಲಾ ಅವರಿಗೆ ರೈತರ ಬಗ್ಗೆ, ಕೃಷಿಯ ಬಗ್ಗೆ, ರೇಷ್ಮೆಯ ಬಗ್ಗೆ, ಪರಿಸರದ ಬಗ್ಗೆ, ನೀರಿನ ಬಗ್ಗೆ, ಇರುವ ಕಳಕಳಿ ಕನಸುಗಳು ಅದ್ಭುತವೆನಿಸತೊಡಗಿದವು. ಈ ಬಗ್ಗೆ ಅವರ ಹೋರಾಟದ, ಕಾರ್ಯಕ್ರಮಗಳನ್ನು ದಿನಪತ್ರಿಕೆಗಳಲ್ಲಿ ಸಂಪಾದಕೀಯವಾಗಿ ಪ್ರಕಟವಾಗುತ್ತಿದ್ದುದನ್ನು ಗಮನಿಸುತ್ತಾ ಹೋದೆ. ಅವರ ನೇರ ನಡೆ-ನುಡಿ, ನಿಷ್ಠುರ ವ್ಯಕ್ತಿತ್ವ ಮತ್ತು ಕೃಷಿ, ನೀರಾವರಿ, ರೇಷ್ಮೆ, ಪರಿಸರದ ಬಗ್ಗೆ ಅವರು ನಿಖರವಾಗಿ ಮಂಡಿಸುವ ವಿಚಾರಗಳು ನನ್ನನ್ನು ಆಕರ್ಷಿಸಿದವು. ಅವರು ಶಾಸನಸಭೆಯಲ್ಲಾಗಲಿ, ಸಾರ್ವಜನಿಕ ವೇದಿಕೆಗಳಲ್ಲಾಗಲೀ ಮಾತನಾಡುವ ಭಾಷಣಗಳು ತುಂಬಾ ವಸ್ತುನಿಷ್ಠವೂ, ವಿಚಾರಪೂರ್ಣವೂ ಆಗಿರುತ್ತಿದ್ದುದನ್ನು ನೋಡುತ್ತಿದ್ದೆ. ಅವರು ತಮ್ಮ ಭಾಷಣಕ್ಕಾಗಿ ವಿವಿಧ ಮೂಲಗಳಿಂದ ವಿಷಯಗಳನ್ನು ಸಂಗ್ರಹಿಸಿ ಮಾತನಾಡುತ್ತಿದ್ದ ವಿಧಾನ ಒಬ್ಬ ಸಂಶೋಧಕನ ರೀತಿಯಲ್ಲಿ ಇರುತ್ತಿತ್ತು. ತಾವು ಮಾತನಾಡಲಿರುವ ವಿಷಯದ ಬಗ್ಗೆ ಎಂದೂ ಸುಳ್ಳಾಗಲೀ, ಉತ್ಪ್ರೇಕ್ಷೆ ಮಾಡಿದ್ದನ್ನಾಗಲೀ ನಾನು ಕೇಳಿಲ್ಲ. ನಿಖರವಾದ ಅಂಕಿ-ಅಂಶಗಳ ಮೂಲಕ ವಿಚಾರವನ್ನು ಮಂಡಿಸಿ ತಮ್ಮ ತಜ್ಞತೆಯನ್ನು ಅವರು ಪ್ರಕಟಿಸಿದ್ದಾರೆ. ಅವರ ವಿಷಯಸಂಗ್ರಹ ಹಾಗೂ ಅವರ ಮಂಡನೆಯನ್ನು ನೋಡಿ ದಿನಪತ್ರಿಕೆಗಳಲ್ಲಿ ಕೆಲವು ಹಿರಿಯ ಪತ್ರಕರ್ತರು ಪ್ರಶಂಸೆ ಮಾಡಿ ವರದಿ ಮಾಡಿರುವುದನ್ನು ಓದಿದ್ದು ನನಗೆ ನೆನಪಿದೆ.

ರಾಮಯ್ಯನವರಿಗೆ ಇದೆಲ್ಲಾ ಹೇಗೆ ಸಾಧ್ಯವಾಯಿತು ಎಂದು ನಾನೇ ಅನೇಕ ಸಲ ಪ್ರಶ್ನೆ ಹಾಕಿಕೊಂಡಿದ್ದೇನೆ. ಅವರು ಮುಂಗೋಪಿ, ಸಿಡುಕಿನ ಸ್ವಭಾವದವರು ಎಂದೆಲ್ಲಾ ಕೇಳಿದ್ದೇನೆ. ಆದರೆ ನನಗೆ ಮಾತ್ರ ಎಂದೂ ಆ ಅನುಭವ ಆಗಿಲ್ಲ. ಸಾಮಾನ್ಯ ಮನುಷ್ಯರ ಬಗ್ಗೆ ಅವರಿಗಿರುವ

ಪ್ರೀತಿ ಅದಮ್ಯವಾದುದು. ಅವರ ಸಿಟ್ಟು ದಲ್ಲಾಳಿಗಳ ಮೇಲೆ, ಭ್ರಷ್ಟ ಅಧಿಕಾರಿಗಳ ಮೇಲೆ. ಅದನ್ನು ನಾನು ಹತ್ತಿರದಿಂದ ನೋಡಿದ್ದೇನೆ. ಅದರಲ್ಲೂ ಹಳ್ಳಿಯ ರೈತಾಪಿ ಮಕ್ಕಳ ಬದುಕನ್ನು ಕಂಡರೆ ಅವರ ಹೃದಯ ತುಂಬಿಬರುತ್ತದೆ. ಮನುಷ್ಯರ ಚಲನವಲನಗಳನ್ನು, ಅವರ ಚಹರೆಗಳನ್ನು ರಾಮಯ್ಯನವರಷ್ಟು ಸೂಕ್ಷ್ಮವಾಗಿ ಅಧ್ಯಯನ ಮಾಡಿದವರನ್ನು ನಾನು ಕಾಣೆ. ಹಳ್ಳಿಯ ಮನುಷ್ಯರ ಜೊತೆ ಅಪ್ಪಟ ಹಳ್ಳಿಯ ಮನುಷ್ಯರಾಗಿರುತ್ತಾರೆ. ಸಮುದಾಯದ ಭಾಗವಾಗಿ ಇರಲು ಯಾವಾಗಲೂ ಇಷ್ಟಪಡುತ್ತಾರೆ. ಅವರು ವ್ಯಕ್ತಿವಾದಿಯಲ್ಲ. ಸಮುದಾಯದ ಭಾಗವಾಗಿದ್ದು ಸಮುದಾಯದಲ್ಲಿಯೇ ತನ್ನತನವನ್ನು ಉಳಿಸಿಕೊಂಡಿರುವ ವ್ಯಕ್ತಿ.

ಇದಕ್ಕೆಲ್ಲಾ ಕಾರಣ ನನಗೆ ಅನ್ನಿಸುವುದು ಏನೆಂದರೆ, ಅವರು ಸಾಮಾಜಿಕ ಮಾನವ ಶಾಸ್ತ್ರವನ್ನು ಎಂ.ಎ. ಯಲ್ಲಿ ಆಳವಾಗಿ ಓದಿರುವುದು. ಆದರೆ ರಾಮಯ್ಯನವರು ತಾವು ಓದಿದ್ದನ್ನು ಪ್ರಾಯೋಗಿಕವಾಗಿ ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ. ವೃತ್ತಿಯಿಂದ ವಕೀಲರಾಗಿ ಅನೇಕ ವರ್ಷಗಳ ಕಾಲ ದುಡಿದಿರುವುದರಿಂದ ದೀನ ದಲಿತರ, ಬಡಬಗ್ಗರ ಸಂಪರ್ಕ ಅವರಿಗೆ ಗಾಢವಾಗಿ ಇದೆ. ಇವತ್ತಿಗೂ ಅವರು ಒಬ್ಬ ಯಶಸ್ವೀ ವಕೀಲರೇ ಆಗಿದ್ದಾರೆ. ಅವರು ಕಾನೂನು ಕಟ್ಟಳೆಗಳನ್ನು ಮನುಷ್ಯ ಮನುಷ್ಯರ ನಡುವೆ ಸ್ನೇಹ ಸೇತುವೆಯ ನಿರ್ಮಾಣಕ್ಕೆ, ಬದುಕಿನ ಮುಂದುವರಿಕೆಗೆ ಬಳಸುವುದನ್ನು ನಾನು ಕೇಳಿದ್ದೇನೆ.

ರಾಮಯ್ಯನವರಲ್ಲಿ ನಾನು ಕಂಡ ಮತ್ತೊಂದು ಗುಣ ಎಂದರೆ, ಸಾಮಾಜಿಕ ನಡವಳಿಕೆ. ಅವರು ಮನುಷ್ಯರಿಗೆ ಬೆಲೆಕೊಡುವಷ್ಟು ಗಿಡ ಮರಗಳಿಗೂ, ನೀರು ನೆರಳಿಗೂ ತುಂಬಾ ಬೆಲೆ ಕೊಡುತ್ತಾರೆ. ಯಾರಾದರೂ ನೊಂದು ಕೊಂಡಾರೋ ಎಂಬ ಭಾವನೆಯಿಂದಲೇ ಅವರು ತಮ್ಮ ಸಜ್ಜನಿಕೆಯನ್ನು ಪ್ರಕಟಿಸುತ್ತಾರೆ. ವ್ಯಕ್ತಿ ಒಮ್ಮೊಮ್ಮೆ ಒರಟಾಗಿ ಕಂಡರೂ ಹೃದಯ ಮಾತ್ರ ಹೆಂಗರುಳು. ಬೇರೆಯವರ ಕಷ್ಟಗಳಿಗೆ ಅಂತರ್ಯದಲ್ಲಿ ಅವರ ಜೀವ ಮರುಗುತ್ತದೆ.. ತೂಕದ ಮಾತು. ತಾಳ ತಪ್ಪದ ಕ್ರಿಯಾಶೀಲತೆ, ಸುಸಂಸ್ಕೃತ ಮನಸ್ಸು ಇವೆಲ್ಲಾ ಅವರನ್ನು ಮಾಗಿದ ವ್ಯಕ್ತಿಯನ್ನಾಗಿ ರೂಪಿಸಿದೆ. ಅವರಿಗೆ ಬದುಕಿನ ಬಗ್ಗೆ ಇರುವ ದೀರ್ಘವಾದ ಅನುಭವ ಮತ್ತು ಸಮಾಜವಾದಿ ನೆಲೆಯ ಅಧ್ಯಯನ ಇವು ಅವರ ಮನಸ್ಸನ್ನು ಪ್ರಸನ್ನಗೊಳಿಸಿವೆ. ಅವರು ತಮ್ಮ ಕ್ಷೇತ್ರದ ಆಯ್ಕೆ ಮತ್ತು ಹೋರಾಟದಲ್ಲಿ ಸ್ಪಷ್ಟತೆಯನ್ನು ಖಚಿತತೆಯನ್ನು ಹೊಂದಿದ್ದಾರೆ. ಅವರಲ್ಲಿ ಯಾವ ಗೊಂದಲಗಳೂ ದ್ವಂದ್ವಗಳೂ ಇಲ್ಲ. ಅವಕಾಶವಾದಿತನ ಮೊದಲೇ ಇಲ. ರಾಮಯ್ಯನವರು ಉತ್ತಮ ವಾಗ್ಮಿ ಮತ್ತು ಅಪರೂಪದ ರಾಜಕಾರಣಿ ಹಾಗೂ ಉತ್ತಮ ಲೇಖಕರು. ಅವರು ತಮ್ಮ **ನಾನು ಮತ್ತು ರೇಷ್ಮೆ** ಪುಸ್ತಕದಲ್ಲಿ ಒದು ಘಟನೆಯನ್ನು ಹೇಳುತ್ತಾರೆ. ''1972ನೇ ಇಸವಿಯ ಒಂದು ಸಂಜೆ ನನ್ನ ಬದುಕಿನಲ್ಲಿ ಬಹಳ ಪ್ರಮುಖವಾದ ದಿನ. ನನ್ನ ಸಾಮಾಜಿಕ ಪ್ರಜ್ಞೆಗೆ ಕಿಚ್ಚು ಇಕ್ಕಿದ ದಿನ. ಹಣ ಸಂಪಾದನೆ ಮಾಡುವ ಯಂತ್ರವಾಗಿದ್ದ ನನಗೆ ಜೀವ ಕೊಟ್ಟ ವಿದ್ಯೆಕೊಟ್ಟ, ಹಣ, ಆಸ್ತಿ-ಅಧಿಕಾರ ಕೊಟ್ಟ ಜನರ ಬಗ್ಗೆ ನನಗಿರಬೇಕಾದ ಸಾಮಾಜಿಕ

ಹೊಣೆಗಾರಿಕೆ ಕುರಿತು ಜ್ಞಾನೋದಯವಾದ ದಿನ ಅದು. ಸಂಜೆ ಸುಮಾರು ಆರು ಗಂಟೆಯ ಸಮಯ. ಕಛೇರಿಯ ಗುಮಾಸ್ತರು ಮತ್ತು ನನ್ನ ಕಿರಿಯ ವಕೀಲರುಗಳು ಅವರವರ ಕೆಲಸದಲ್ಲಿ ಮಗ್ನರಾಗಿದ್ದರು. ಕೆಲವು ಜನ ಕಕ್ಷಿದಾರರು ಕುಳಿತಿದ್ದರು. ಆಗ ಕಪ್ಪನೆ ಬಣ್ಣದ ಹಳ್ಳಿಯ ಒಂದು ಹೆಂಗಸು ಮತ್ತುಗಂಡಸು ನನ್ನ ಆಫೀಸಿಗೆ ಬಂದು ನನ್ನಿಂದ ಬಹುದೂರಲ್ಲೇ ನಿಂತು ಕೈ ಮುಗಿದರು. ಯಾವುದೋ ಕಟ್ಟಳೆಯ ಕಟ್ಟಿನಲ್ಲಿ ಮಗ್ನನಾದ್ದ ನಾನು ಕತ್ತೆತ್ತಿ ನೋಡಿದೆ ಆ ಎರಡು ಜೀವಗಳು ಮಿಕಿಮಿಕಿ ನನ್ನನ್ನು ನೋಡುತ್ತಿದ್ದುವು. ಆ ಜೀವಗಳು ಕುಣಿಗಲ್ ತಾಲ್ಲೂಕಿನ ಹುಲಿಯೂರುದುರ್ಗದ ಹೋಬಳಿಗೆ ಸೇರಿದವುಗಳು ಎಂದು ತಿಳಿಯಿತು. ಅವೆರಡೂ ಜೀವಗಳು ಅನ್ಯಾಯಕ್ಕೆ ಒಳಗಾಗಿ ನನ್ನಬಳಿಗೆ ಬಂದಿದ್ದವು. ಅವರ ಅನ್ಯಾಯದ ಸತ್ಯಕಥೆ ಕೇಳಿ ನಾನು ಅಂದು ಬದಲಾದೆ. ಹೀಗೆಯೇ ನನ್ನ ಅಕ್ಕ ತಂಗಿಯರಿಗೆ, ಅಣ್ಣ ತಮ್ಮಂದಿರಿಗೆ ಆದರೆ ಗತಿ ಏನು? ಎಂದು ನನಗೆ ನಾನೇ ಪ್ರಶ್ನಿಸಿಕೊಂಡು ಆತಂಕಕ್ಕೆ ಒಳಗಾದೆ''

ಈ ಕಥೆಯನ್ನು ರಾಮಯ್ಯನವರು ನನಗೆ ಒಂದು ದಿನ ಸಿಕ್ಕಾಗ ವಿವರವಾಗಿ ಹೇಳಿದ್ದರು ''ಇದನ್ನು ನಿಮ್ಮಂಥವರು ಕಥೆಯಾಗಿ ಬರೆಯಬೇಕು'' ಎಂದಿದ್ದರು ನಾನು ಆ ಘಟನೆಯನ್ನು ಕುರಿತು. **ಕಡಲ ಮಂತು** ಎಂಬ ಒಂದು ಕಥೆಯನ್ನು ಬರೆದೆ. ಇದು ಪ್ರಜಾವಾಣಿಯಲ್ಲಿ ಬಂತು. ನನ್ನ ನೆಚ್ಚಿನ ಕಥೆಗಾರರಲ್ಲಿ ಒಬ್ಬರಾದ ಡಾ. ಬೆಸಗರಹಳ್ಳಿ ರಾಮಣ್ಣನವರು ಈ ಕಥೆಯನ್ನು ಕುರಿತು ಒಂದು ದೀರ್ಘವಾದ ಕಾಗದ ಬರೆದಿದ್ದರು. ಆ ಕಾಗದ ಇನ್ನೂ ನನ್ನ ಬಳಿ ಇದೆ. ಆ ಕಥೆಯಲ್ಲಿ ವಕೀಲ ರಾಮಯ್ಯನವರ ಬಳಿ ಬಂದ ಎರಡು ಜೀವಗಳೆಂದರೆ ಅಣ್ಣ ಮತ್ತು ತಂಗಿ. ಆ ತಂಗಿಗೆ ಮದುವೆಯಾಗಿ ಅವಳ ಗಂಡ ಅವಳಿಗೆ ಮೋಸ ಮಾಡಿದ ಸಂಗತಿ ಅದು. ಅವಳ ಗಂಡ ಇನ್ನೊಬ್ಬಳನ್ನು ಮದುವೆಯಾಗಿ ಮೊದಲಿನವಳಿಗೆ ತನ್ನ ಆಸ್ತಿಯಲ್ಲಿ ಜೀವನಾಂಶಕ್ಕೆಂದು ತನ್ನ ಊರುಮುಂದಿನ ಜಮೀನನ್ನು ಬರೆದುಕೊಟ್ಟಿರುತ್ತಾನೆ. 'ನಾನು' ಮತ್ತು 'ನೀನು' ಶಬ್ದಗಳ ಅದಲು ಬದಲಿನಿಂದ ಆಕೆಗೆ ಅನ್ಯಾಯವಾಗಿರುತ್ತದೆ.· ಅದನ್ನು ಉದ್ದೇಶಪೂರ್ವಕವಾಗಿಯೇ ಮಾಡಲಾಗಿರುತ್ತದೆ. ಆದರೆ ಆ ಮುಗ್ದೆ ಅನಕ್ಷರಸ್ಥೆ ಹೆಣ್ಣುಮಗಳಿಗೆ ತಿಳಿಯದು. ''ನಾನು ನಿನಗೆ ಎಲ್ಲಿ ಜಮೀನು ಬರೆದು ಕೊಟ್ಟಿದ್ದೀನಿ ಪತ್ರ ತೋರಿಸು'' ಎಂದು ಆಕೆಗೆ ಗಂಡ ಪ್ರಶ್ನಿಸುತ್ತಾನೆ. ಆ ಪತ್ರದದಲ್ಲಿ ಆಗಿರುವ ಅನ್ಯಾಯ ತಿಳಿದು ಅದನ್ನು ರಾಮಯ್ಯನವರ ಹತ್ತಿರ ಬಂದಿರುತ್ತಾಳೆ. ಕೊನೆಗೆ ರಾಮಯ್ಯನವರು ಆ ಕೇಸನ್ನು ತೆಗೆದುಕೊಂಡು ಗೆಲ್ಲುತ್ತಾರೆ. ಅವಳಿಗೆ ನ್ಯಾಯ ದೊರಕಿಸಿಕೊಡುತ್ತಾರೆ. ಅದರಲ್ಲಿ ಭಾಗಿಯಾಗಿದ್ದು ಪುರುಷಪ್ರಧಾನ ಸಮಾಜ, ಅಧಿಕಾರ ವರ್ಗ ಎಲ್ಲವೂ ಆಗ ಬಯಲಾಗುತ್ತದೆ. ರಾಮಯ್ಯನವರು ಆ ಘಟನೆಯನ್ನು ತಮ್ಮ ಬದುಕಿನಲ್ಲಿ ಒಂದು ಮಹತ್ವದ ತಿರುವನ್ನಾಗಿ ಪರಿಗಣಿಸುತ್ತಾರೆ. ರಾಮಯ್ಯನವರು ಯಾವಾಗಲೂ ಒಂದು ಮಾತನ್ನು ಹೇಳುತ್ತಿರುತ್ತಾರೆ. ಏನೆಂದರೆ ''ನಮ್ಮವ್ವ ನನ್ನನ್ನು ಹೆತ್ತು ವೊರಕ್ಕೆ ಹಾಕಿದಾಗ ಇವನು ರಾಜಕುಮಾರ ಆಗ್ತಾನೆ, ಮಂತ್ರಿಯಾಗ್ತನೆ ಅಂಥ ಕನಸನ್ನೇನೂ ಕಂಡಿರಲಿಲ್ಲ ಆಕೆ ಅನಕ್ಷರಸ್ಥೆ. ದನ ಕಾಯ್ಕೊಂಡು ಬಂದ್ರೆ ಸಾಕು ದೊಡ್ಡವನಾದ ಮೇಲೆ ಅಂದುಕೊಂಡಿರಬೇಕು ಆಕೆ. ಆದರೆ ನಾವೆಲ್ಲಾ ಆಕಸ್ಮಿಕದಲ್ಲಿ

ಓದಿ ನಾಲ್ಕು ಅಕ್ಷರ ಕಲಿತೆವು. ಅದೃಷ್ಟವೋ ದುರಾದೃಷ್ಟವೋ ಎಂ.ಎಲ್.ಎ ಆದೆ, ಮಂತ್ರಿಯಾದೆ. ಸಾರ್ವಜನಿಕರ ಸೇವೆ ಮಾಡುವ ಅವಕಾಶ ಸಿಕ್ಕಿತು. ಜನರಿಂದ ಸಾಕಷ್ಟು ಪಡೆದು ಬೆಳೆದಿದ್ದೇನೆ. ಈ ಜನ್ಮದಲ್ಲಿ ಋಣ ತೀರಿಸದೆ ಇದ್ದರೆ ಯಾವ ದೇವರೂ ನನ್ನನ್ನು ಕ್ಷಮಿಸೋದಿಲ್ಲ'' ಎಂದು. ಇದರಿಂದ ಅವರ ಹೊಣೆಗಾರಿಕೆ ವ್ಯಕ್ತವಾಗುತ್ತದೆ.

ರೇಷ್ಮೆ, ನೀರಾವರಿ ಮತ್ತು ಪರಿಸರ ಸಮೃದ್ಧತೆಗಾಗಿ ರಾಮಯ್ಯನವರು ತಮ್ಮ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಕಾಣಿಕೆ ಅನನ್ಯವಾದುದು. ಈ ಕ್ಷೇತ್ರದಲ್ಲಿ ರಾಮಯ್ಯನವರ ಹೆಸರು ಚಿರಸ್ಥಾಯಿಯಾಗಿ ನಿಂತಿದೆ. ಹೇಮಾವತಿ ನೀರನ್ನು ತುಮಕೂರಿಗೆ, ಅಲ್ಲಿಂದ ಕುಣಿಗಲ್‌ವರೆಗೆ ಕುಡಿಯಲು ಮತ್ತು ಕೃಷಿಗೆ ತರಲು ಅವರು ಕಳೆದ ಸುಮಾರು 15-20 ವರ್ಷಗಳಿಂದ ನಿರಂತರವಾಗಿ ನಡೆಸಿರುವ ಹೋರಾಟದ ಕಥೆ ಒಂದು ಕಾದಂಬರಿಯ ವಸ್ತುವಾಗಬಲ್ಲುದು. ಬಾಗೂರು-ನವಿಲೆ ಸುರಂಗದ ಘಟನೆಯೇ ಒಂದು ದೊಡ್ಡ ಸಾಹಸಗಾಥೆ. ಇದನ್ನು ಕುರಿತೇ ಒಂದು ಸಂಶೋಧನೆ ಮಾಡಲು ಅವಕಾಶವಿದೆ. ರೇಷ್ಮೆ ಬಗ್ಗೆ ಅವರು ಮಾಡಿರುವ ಹೋರಾಟದ ಕಥೆಯು ಒಂದು ಸಂಪುಟವಾಗುತ್ತದೆ. ಇನ್ನು ಕ್ಷೇತ್ರದಲ್ಲಿ ಎಲ್ಲಾ ರಸ್ತೆಗಳ ಅಕ್ಕ ಪಕ್ಕ ಹಾಗೂ ಶಾಲೆ, ಆಸ್ಪತ್ರೆ ಆವರಣಗಳಲ್ಲಿ ಅವರು ಅಸಂಖ್ಯ ಮರಗಿಡಗಳನ್ನು ನೆಡಿಸಿದ್ದಾರೆ. '' ಪರಿಸರ ರಕ್ಷಣೆಗೆ ಇವತ್ತು ಸಾಮಾಜಿಕ ಅರಣ್ಯ ಬೆಳೆಸುವುದೊಂದೇ ದಾರಿ'' ಎಂದು ಅವರು ಹೇಳುತ್ತಿರುತ್ತಾರೆ. ಈ ವಿಷಯದಲ್ಲಿ ಅವರಿಗೆ ಗೊಂದಲಗಳಿಲ್ಲ. ಆ ಕೆಲಸವನ್ನು ಅವರು ಕಳೆದ 25-30 ವರ್ಷಗಳಿಂದ ಅವ್ಯಾಹತವಾಗಿ ಮಾಡಿಕೊಂಡು ಬರುತ್ತಿದ್ದಾರೆ.

ಈ ನಡುವೆ ರಾಮಯ್ಯನವರು ಹೆಚ್ಚು ವೈಚಾರಿಕವಾಗಿ, ಬೌದ್ಧಿಕವಾಗಿ ಎತ್ತರಕ್ಕೆ ಬೆಳೆದಿದ್ದಾರೆ. ಗುಣಮಟ್ಟದ ಕಾರ್ಯಕ್ಕಾಗಿ ಮತ್ತು ಮಾನವೀಯ ಮೌಲ್ಯಗಳ ಸೃಷ್ಟಿಗಾಗಿ ಅವರು ಸದಾ ತಹತಹಿಸುವ ವ್ಯಕ್ತಿಯಾಗಿದ್ದಾರೆ. ನಮ್ಮ ಸಾಂಸ್ಕೃತಿಕ ನಾಯಕರಲ್ಲಿ ಅವರು ಪ್ರಮುಖರಾಗಿದ್ದಾರೆ.

○



# ಜನರಿಗೆ ಬೇಕಾದ ರಾಜಕಾರಣಿ

**ಆರ್ ವಿ ದೇಶಪಾಂಡೆ**

ಕರ್ನಾಟಕದ ರಾಜಕಾರಣಿಗಳಲ್ಲಿ ಕುಣಿಗಲ್ ಕ್ಷೇತ್ರದಿಂದ 1983ರಲ್ಲಿ ಆಯ್ಕೆಯಾದ ವೈ.ಕೆ. ರಾಮಯ್ಯಅವರು ಪ್ರಮುಖರು. ನಾನು ಆಗ ಉತ್ತರ ಕನ್ನಡ ಜಿಲ್ಲೆಯ ಹುಳಿಯಾಳ ಕ್ಷೇತ್ರದಿಂದ ಹೊಸದಾಗಿ ಆಯ್ಕೆಯಾದ ಶಾಸಕನಾಗಿದ್ದೆ.

1985ರಲ್ಲಿ ಮತ್ತೆ ಇಬ್ಬರೂ ಕರ್ನಾಟಕ ವಿಧಾನಸಭೆಗೆ ಆಯ್ಕೆಯಾದೆವು. ಹೆಚ್ಚುಕಡಿಮೆ ಏಕ ಕಾಲದಲ್ಲಿ ರಾಮಕೃಷ್ಣ ಹೆಗಡೆ ಸಚಿವ ಸಂಪುಟದಲ್ಲಿ ಸಚಿವರಾದೆವು. ನಾನು ಕೃಷಿ ಸಚಿವನಾಗಿದ್ದಾಗ ಅವರು ರೇಷ್ಮೆ ಖಾತೆ ಸಚಿವರು. ಅವರು ಸಚಿವರಾಗಿ ಕಾರ್ಯನಿರ್ವಹಿಸಿದ ರೀತಿ ಅನೇಕರಿಗೆ ಮಾರ್ಗದರ್ಶನ ನೀಡುವಂತದ್ದು. ಅದರಲ್ಲೂ ಯುವಮಂತ್ರಿಗಳು ಹಾಗೂ ಆಡಳಿತಗಾರರು ಅವರ ದಕ್ಷತೆಯಿಂದ ಕಲಿಯಬೇಕಾದುದು ಬಹಳವಿದೆ.

ವೈ.ಕೆ. ರಾಮಯ್ಯ ಹಾಗೂ ನಾನು ಆ ತನಕ ಕರ್ನಾಟಕದ ರಾಜಕಾರಣಿಗಳಲ್ಲಿ ಅಪರೂಪವಾಗಿದ್ದ ವರ್ಕ್‌ಕಲ್ಚರ್ ಪದ್ಧತಿಯನ್ನು ಜಾರಿಗೆ ತಂದೆವು. ನಮಗೆ ಮತನೀಡಿದ ಮತದಾರನೇ ಶ್ರೇಷ್ಠ. ಶ್ರೀ ಸಾಮಾನ್ಯರ ಆಸೆಗಳಿಗೆ ಸ್ಪಂದಿಸುವುದೇ ಜನಪ್ರತಿನಿಧಿಯ ಪ್ರಥಮ ಕಾಯಕ. ಯಾವ ಮುಲಾಜು ಇಲ್ಲದೆ ಅಧಿಕಾರಿ ವರ್ಗದವರಿಂದ ಕೆಲಸ ಮಾಡಿಸುವುದು ಶಾಸಕರ ಆದ್ಯತೆ ಎಂಬುದು ಆಗ ನಮಗೆ ಮನವರಿಕೆಯಾಗಿತ್ತು. ಆಡಳಿತ ಪಕ್ಷದಲ್ಲಿದ್ದರೂ ಹೋರಾಟಮಾಡಿ ಕ್ಷೇತ್ರದ ಜನರ ಅಭೀಪ್ಸೆ ತೀರಿಸುವುದು ನಮ್ಮ ಗುರಿಯಾಗಿತ್ತು. ಈ ದಿಸೆಯಲ್ಲಿ ವೈ.ಕೆ. ರಾಮಯ್ಯ ಅವರು ಹೇಮಾವತಿ ನೀರಿಗಾಗಿ ಮಾಡಿದ ಹೋರಾಟ ರಾಜ್ಯದ ಜನತೆಯ ಗಮನ ಸೆಳೆದಿತ್ತು. ತುಮಕೂರಿನಲ್ಲಿ ಇಂದು ಬಹುತೇಕ ತಾಲ್ಲೂಕುಗಳು ನೀರಾವರಿ ಸೌಲಭ್ಯ ಪಡೆದಿದ್ದರೆ ಅದಕ್ಕೆ ವೈ.ಕೆ. ಆರ್ ಕಾರಣರಾಗಿದ್ದಾರೆ.

ರೇಷ್ಮೆ ಕೃಷಿ ವೈ.ಕೆ.ಆರ್ ಅವರ ಮತ್ತೊಂದು ಆಸಕ್ತ ವಿಷಯ. ಇವರು ರಾಜ್ಯದ ಶ್ರೇಷ್ಠ ರೇಷ್ಮೆ ಕೃಷಿ ತಜ್ಞರಲ್ಲಿ ಒಬ್ಬರಾಗಿದ್ದಾರೆ. ವೃತ್ತಿ ರಾಜಕಾರಣಿಯೊಬ್ಬರು ಹೀಗೆ ಜ್ಞಾನಾರ್ಜನೆ ಮಾಡುವುದು ಇತ್ತೀಚಿನ ದಿನಗಳಲ್ಲಿ ಆಶ್ಚರ್ಯದ ವಿಚಾರ.

1983ಕ್ಕಿಂತ ಹಿಂದೆ ಹಳಿಯಾಳ ಹಾಗೂ ಕುಣಿಗಲ್ ವಿಧಾನಸಭಾ ಕ್ಷೇತ್ರಗಳನ್ನು ಇಂದಿನದಕ್ಕೆ ಹೋಲಿಸಿದರೆ ಅಜಗಜಾಂತರ ಬದಲಾವಣೆ ಕಾಣಲು ಸಾಧ್ಯ. ಅದಕ್ಕೆ ಈ ಕ್ಷೇತ್ರಗಳಲ್ಲಿ

ನಡೆದಿರುವ ಅದ್ಭುತ ಪ್ರಗತಿ ಕಾರಣವೆನ್ನಬೇಕು. ಅಧಿಕಾರಿಗಳಿಂದ ಕೆಲಸ ತೆಗೆಯುವುದು ಸಾಮಾನ್ಯದ ವಿಚಾರವಲ್ಲ. ಅದಕ್ಕಾಗಿ ದೊಡ್ಡ ಹೋರಾಟ ಮಾಡಬೇಕಾಗುತ್ತದೆ. ಅಹಂಕಾರಿ ಎಂಬ ಬಿರುದು ಧರಿಸಬೇಕಾಗುತ್ತದೆ. ಏನಾದರೂ ಪರವಾಗಿಲ್ಲ, ತಮ್ಮ ಮತದಾರರ ಋಣವನ್ನು ಸ್ವಲ್ಪವಾದರೂ ತೀರಿಸಿದ ಸಂತೃಪ್ತಿ ನಮ್ಮಲ್ಲಿರುತ್ತದೆ.

ಈ ದೃಷ್ಟಿಯಲ್ಲಿ ನೋಡಿದಾಗ ವೈ.ಕೆ.ಆರ್ ಇಂದಿಗೂ ಜನರಿಗೆ ಬೇಕಾದ ಪ್ರಭಾವಶಾಲಿ ರಾಜಕಾರಣಿಯಾಗಿದ್ದಾರೆ. ಗ್ರಾಮೀಣ ಭಾರತದ ಹಿತಚಿಂತಕರಾಗಿ ಅವರು ಯಾವಾಗಲೂ ಪ್ರಸ್ತುತರೇ ಹೌದು. ಇದೀಗ ಅರವತ್ತರ ವಸಂತಗಳನ್ನು ಮುಟ್ಟುತ್ತಿರುವ ವೈ.ಕೆ.ಆರ್ ಸೇವೆ ಈ ರಾಜ್ಯಕ್ಕೆ ಸದಾಕಾಲ ದೊರೆಯಲಿ. ಅವರಿಗೂ ಮತ್ತು ಅವರ ಕುಟುಂಬಕ್ಕೆ ಪರಮಾತ್ಮ ಎಲ್ಲಾ ಸೌಭಾಗ್ಯಗಳನ್ನು ಕರುಣಿಸಲಿ.

○



## ಸಾಮಾಜಿಕ ಕಳಕಳಿಯ ವ್ಯಕ್ತಿತ್ವ

**ಜಿ ಇಂದ್ರಕುಮಾರ್**

ಎಲೆಕಡಕಲು ಎಂಬ ಗ್ರಾಮ ಬಯಲು ಸೀಮೆಯ ಹಳ್ಳಿ. ಈ ಊರಿನಲ್ಲಿ ಜನಿಸಿದ ವ್ಯಕ್ತಿಯೊಬ್ಬರು 80ರ ದಶಕದಲ್ಲಿ ಇನ್ನೇನು ಮುಖ್ಯಮಂತ್ರಿ ಆಗಿಯೇಬಿಟ್ಟರೆಂಬ ಸುದ್ದಿ ಪತ್ರಿಕೆಗಳ ತುಂಬ ನಾಲ್ಕೈದು ದಿನ ಅಬ್ಬರದ ಪ್ರಚಾರ ಪಡೆಯಿತು. ಆದರೆ ಅವರು ಕನಸಿನಲ್ಲೂ ಮುಖ್ಯಮಂತ್ರಿಯಾಗುವ ಆಸೆಯನ್ನು ಕಂಡಿರಲಿಲ್ಲ. ಒಂದು ವೇಳೆ ಅವರು ಮುಖ್ಯಮಂತ್ರಿ ಯಾಗಿದ್ದರೆ ಈ ರಾಜ್ಯ ಇನ್ನಷ್ಟು ಅಭಿವೃದ್ಧಿ ಕಾಣುತ್ತಿತ್ತು. ಆದರೆ ಅಂದಿನ ರಾಜಕೀಯ ಪಲ್ಲಟ, ವ್ಯವಸ್ಥಿತ ಪಿತೂರಿ, ಆ ವ್ಯಕ್ತಿಗೆ ಮುಖ್ಯಮಂತ್ರಿ ಪಟ್ಟವನ್ನು ದಕ್ಕಿಸಲಿಲ್ಲ. ಇದರಿಂದ ಅವರೇನು ದುಃಖಿಸಲಿಲ್ಲ. ದುಃಖಿಸಿದ್ದು ಜಿಲ್ಲೆಯ ಪ್ರಜ್ಞಾವಂತ ಪ್ರಜೆಗಳು.

ಆ ವ್ಯಕ್ತಿ ಬೇರಾರು ಅಲ್ಲ! ಅನ್ಯಾಯದ ವಿರುದ್ಧ ಕೆಂಡಕಾರುವ ವೈ.ಕೆ. ರಾಮಯ್ಯ. ಬಾಲ್ಯದಿಂದಲೇ ಉನ್ನತ ಧ್ಯೇಯಗಳನ್ನು ಇಟ್ಟುಕೊಂಡು, ಒಂದೊಂದಾಗಿ ಸಾಧನೆಗೈಯುತ್ತಾ ಬಂದ ವೈ.ಕೆ. ರಾಮಯ್ಯ ತಮ್ಮ ವಿಶಿಷ್ಟ ರಾಜಕಾರಣ ಶೈಲಿಯಿಂದಾಗಿ ಕರ್ನಾಟಕದ ಕೆಲವೇ ಹೃದಯ ಸಂಪನ್ನ ರಾಜಕಾರಣಿಗಳಲ್ಲಿ ಒಬ್ಬರಾಗಿದ್ದಾರೆ. ಕರ್ನಾಟಕದ ಭವಿಷ್ಯದ ಬಗ್ಗೆ ಸ್ಪಷ್ಟವಾದ ಮುನ್ನೋಟವನ್ನು ಇಟ್ಟುಕೊಂಡಿರುವ ಅವರು, ಹಠ ಮತ್ತು ಹೋರಾಟದ ಮನೋಭಾವ ದವರು. ಸಿಟ್ಟಿನಲ್ಲಿ ದೂರ್ವಾಸಮುನಿಯನ್ನು ಮೀರಿಸುತ್ತಾರೆ. ಆದರೆ ಆ ಸಿಟ್ಟು ಸ್ವಾರ್ಥದ್ದಲ್ಲ! ಜನರ ಹಿತಕ್ಕಾಗಿ. ತಮ್ಮ ಪ್ರೀತಿಯ ಯೋಜನೆಗಳು ನಿಗಧಿತ ಅವಧಿಯಲ್ಲಿ ಕಾರ್ಯಗತ ವಾಗದಿದ್ದರೆ, ಬಡರೈತರ ಸಂಕಷ್ಟ ಬಗೆಹರಿಸದಿದ್ದರೆ ಸಂಬಂಧಪಟ್ಟವರನ್ನು ಹಿಂದೆಮುಂದೆ ನೋಡದೆ ಬೆಂಡೆತ್ತುವ ಜಾಯಮಾನದವರು. ವೈ.ಕೆ. ರಾಮಯ್ಯ ಬಗ್ಗೆ ನನ್ನ ಶಾಸಕಮಿತ್ರರೊಬ್ಬರು ಹೀಗೆ ಹೇಳಿದ್ದರು. **"ನಿಮ್ಮ ವೈ.ಕೆ. ರಾಮಯ್ಯನಿಗೆ ಬರುವ ಸಿಟ್ಟನ್ನು ವಿದ್ಯುತ್ ಆಗಿ ಪರಿವರ್ತಿಸಿದರೆ ಒಂದು ಮನೆಗೆ 3 ದಿನ ಬಳಸಬಹುದು" ಎಂದು.**

ಈ ಹಿಂದಿನ ಜನತಾದಳ ಸರ್ಕಾರವಿದ್ದಾಗ ತುಮಕೂರು - ಕುಣಿಗಲ್ ಮಾರ್ಗದ ಹೇಮಾವತಿ ನಾಲೆಯ ಕೆಲಸಕ್ಕೆ ಮತ್ತು ನಾಲೆಗೆ ಸ್ವಾಧೀನಪಡಿಸಿಕೊಂಡ ಜಮೀನಿನ ರೈತರಿಗೆ ಪರಿಹಾರ ನೀಡಲು ಹಾಸನದ ಪ್ರಭಾವಿ ರಾಜಕಾರಣಿಯೊಬ್ಬರು ಅಡ್ಡಿಯಾಗಿದ್ದರು. ಸಾರ್ವಜನಿಕ ಬದುಕನ್ನು ಹಸನುಮಾಡಬಲ್ಲ ಮತ್ತು ಸೂಕ್ಷ್ಮ ಸಂವೇದನಾಶೀಲ ವೈ.ಕೆ. ಆರ್ ಒಂದು ದಿನ ಹೇಮಾವತಿ ಮುಖ್ಯ ನಾಲಾ ಇಂಜಿನಿಯರ್ ಕಛೇರಿಗೆ ಬೀಗ ಜಡಿದು ಪ್ರತಿಭಟಿಸ

ತೊಡಗಿದರು. ಈ ಕಛೇರಿ ಅಂದು ತುಮಕೂರಿನ ಗಾಂಧಿನಗರದಲ್ಲಿತ್ತು. ಕಛೇರಿಯ ಒಳಗೆ ಮುಖ್ಯ ಇಂಜಿನಿಯರ್ ರತ್ನಾನಾಯಕ್ ಸೇರಿದಂತೆ ಸಿಬ್ಬಂದಿ, ಅಧಿಕಾರಿಗಳೆಲ್ಲಾ ಇದ್ದರು. ಕಿಟಕಿ ಮೂಲಕವೇ ರತ್ನಾನಾಯಕ್ ಸರ್ಕಾರದ ಭರವಸೆಯನ್ನು ಹೇಳಿದರೂ ಕೇಳದೆ, ''ನಿಮ್ಮ ಭಾರಿ ನೀರಾವರಿ ಸಚಿವರು ಸ್ಥಳಕ್ಕೆ ಭೇಟಿ ನೀಡಲು ಹೇಳಿ'' ಎಂದು ಹೇಳಿ ಮೌನವಾದ ವೈ.ಕೆ.ಆರ್, ಊಟದ ವೇಳೆಗೆ ಕಛೇರಿಯ ಸಿಬ್ಬಂದಿಗೂ ಊಟ ಕೊಡಿಸಿದರು. ಆ ವೇಳೆಗಾಗಲೇ ಹೆಚ್.ಡಿ. ದೇವೇಗೌಡರೊಂದಿಗೆ ರಾಜಕೀಯರ ವಿರಸ ಕಟ್ಟಿಕೊಂಡಿದ್ದ ವೈ.ಕೆ.ಆರ್ ಅವರ ಪ್ರತಿಭಟನೆ ಯಶಸ್ವಿಯಾಗಬಾರದೆಂದು ದೇವೇಗೌಡ ಪ್ರಯತ್ನಿಸಿದರೂ ಸಹ, ಅಂದಿನ ಭಾರಿ ನೀರಾವರಿ ಸಚಿವರು ಸ್ಥಳಕ್ಕೆ ಭೇಟಿ ನೀಡಿ, ರಾಮಯ್ಯನವರಿಂದ ಅಹವಾಲು ಸ್ವೀಕರಿಸಿ, ಸ್ಥಳದಲ್ಲೇ ಅವರ ಒಂದೆರಡು ಬೇಡಿಕೆಗಳನ್ನು ಈಡೇರಿಸಿದರು. ಉಳಿದ ಬೇಡಿಕೆಗಳನ್ನು ಪರಿಶೀಲಿಸಿ ಬಗೆಹರಿಸುವೆ ಎಂದು ಭರವಸೆ ನೀಡಿದ ಮೇಲೆ, ಹೇಮಾವತಿ ಮುಖ್ಯ ನಾಲಾ ಇಂಜಿನಿಯರ್ ಕಛೇರಿಗೆ ಹಾಕಿಸಿದ್ದ ಬೀಗ ತೆಗೆಸಿದರು.

ಕೆರೆ - ಕುಂಟೆ, ನೆಲ - ಜಲ, ಪಶು - ಪಕ್ಷಿ, ವನ್ಯ ಸಂಪತ್ತು ಮಾನವನ ಒಳಿತಿಗೆ ರಕ್ಷಣೆಗೊಂಡು ವೃದ್ಧಿಯಾಗಬೇಕೆಂಬ ಮನಸ್ಸು ರಾಮಯ್ಯ ಅವರದು. ರೇಷ್ಮೆ ಸಚಿವರಾಗಿದ್ದ ಸಂದರ್ಭದಲ್ಲಿ ಮತ್ತು ನಂತರದ ದಿನಗಳಲ್ಲಿ ಕೈಗೊಂಡ ಕಾರ್ಯಕ್ರಮಗಳು ಇತರೆ ಅಧಿಕಾರಸ್ಥ ರಾಜಕಾರಣಿಗಳಿಗೆ ಮಾರ್ಗದರ್ಶಕವಾಗಿದೆ. ನಮ್ಮ ದೇಶದ ಚರಿತ್ರೆಯಲ್ಲಿ ಅಶೋಕ ಮಹಾರಾಜನನ್ನು ಹೊರತು ಪಡಿಸಿದರೆ ಬೇರಾವ ರಾಜನೂ, ರಸ್ತೆ ಬದಿ ಸಾಲುಮರಗಳನ್ನು ನೆಟ್ಟು ಬೆಳೆಸಿದ ಮತ್ತು ಹಾಗೆ ಬೆಳೆಸಲು ಪ್ರೇರೇಪಿಸಿದ ವ್ಯಕ್ತಿಯ ಬಗ್ಗೆ ದಾಖಲೆಗಳಿಲ್ಲ. ಆದರೆ ಇಪ್ಪತ್ತನೇ ಶತಮಾನದ ಅಂತ್ಯದಲ್ಲಿ ವೈ.ಕೆ. ರಾಮಯ್ಯ ರೇಷ್ಮೆ ಸಚಿವರಾಗಿದ್ದಾಗ ಗೂಳೂರಿನಿಂದ ಕುಣಿಗಲ್ ರಸ್ತೆಯ ಇಕ್ಕೆಲಗಳಲ್ಲಿ ವಿವಿಧ ಜಾತಿಯ ಸಸಿಗಳನ್ನು ಸಮರೋಪಾದಿಯಲ್ಲಿ ನೆಡಿಸಿದರು. ಆಗ ತುಮಕೂರಿನ ಎಲ್ಲಾ ಪತ್ರಕರ್ತರನ್ನು ಕರೆದೊಯ್ದು ಪಾದಯಾತ್ರೆಯ ಮೂಲಕ ಸಸಿ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. (ನಾನು ಆಗ ಬಹುಶಃ ಹೈಸ್ಕೂಲ್ ವಿದ್ಯಾರ್ಥಿ. ನನ್ನ ಹಿರಿಯ ಪತ್ರಕರ್ತರು ಈಗಲೂ ರಸವತ್ತಾಗಿ ಈ ಘಟನೆಯನ್ನು ಹೇಳುತ್ತಾರೆ). ಆ ಸಂದರ್ಭದಲ್ಲಿ ಎಲ್ಲಾ ಜಾತಿಯ ಸಸಿಗಳನ್ನು ನೆಡುತ್ತಿದ್ದದ್ದನ್ನು ಗಮನಿಸಿದ ಸದಾ ಬೇರೊಬ್ಬರನ್ನು ಗೇಲಿ, ವ್ಯಂಗ್ಯಕ್ಕೀಡುಮಾಡುವ ಪತ್ರಕರ್ತರೊಬ್ಬರು 'ಸಾರ್ ನಾನೊಂದು ಸಸಿ ನೆಡಬಹುದೆ ?' ಎಂದು ವೈ.ಕೆ.ಆರ್‌ಗೆ ಕೇಳಿದರು. ಧಾರಾಳವಾಗಿ ನೆಡಿ ಎಂದು ಹೇಳಿ ತಮ್ಮ ಜೊತೆಗಿದ್ದ ಡಿ.ಎಫ್.ಓ ಅವರಿಗೆ 'ನೋಡಿ.. ಅವರಿಗೆ ಗಂಧದ ಸಸಿಯೊಂದು ಕೊಡಿ' ಎಂದರು. ಆ ಕೂಡಲೆ ಸಸಿ ನೆಡುವ ಆಶಯ ವ್ಯಕ್ತಪಡಿಸಿದ ಪತ್ರಕರ್ತ.. 'ಸ್ವಾಮಿ.. ಜಗದ್ರಕ್ಷಕ ತಂದೆ ಡಿ.ಎಫ್.ಓ ಅವರೆ ನನಗೆ ಈ ರಾಜ್ಯಕ್ಕೆ ಕಾಂಚಾಣ ತರುವ, ರಾಜಕಾರಣಿಗಳನ್ನು ಆಳುವ ಸಸಿ ಬೇಕೆಂದರು'. ಇದರಿಂದ ಅಲ್ಲಿದ್ದ ಡಿ.ಎಫ್.ಓ. ಸೇರಿ ಎಲ್ಲಾ ಅಧಿಕಾರಿಗಳು ಅವಾಕ್ಕಾದರು.

ಆ ಪತ್ರಕರ್ತನ ಮಾತಿನ ಮರ್ಮ ಅರಿತ ವೈ.ಕೆ. ಆರ್ 'ನೋಡಿ ನನಗೆ ಅಂತಹ ಗಿಡನೆಡಲು ವೈಯುಕ್ತಿಕವಾಗಿ ವಿರೋಧವಿದೆ. ನಮ್ಮ ಜನ ಆ ಗಿಡದಿಂದ ಹಾಳಾಗುವುದು ನನಗಿಷ್ಟವಿಲ್ಲ. ಗಂಧದ ಸಸಿ ನೆಡಿ... ಇಲ್ಲ ನಿಮಗಿಷ್ಟವಾದ ಸಸಿ ನೆಡಿ...' ಎಂದರು. ಆ ವೇಳೆಗೆ ಕುತೂಹಲ ತಡೆಯಲಾರದೆ ಡಿ.ಎಫ್.ಓ ಅವರು ನೀವು ಕೇಳಿದ ಸಸಿ ಯಾವುದು ಸರ್ ಎಂದರು. 'ಅಷ್ಟು ತಿಳಿಯಾದಿಲ್ವಾ ಸ್ವಾಮಿ.. ಕರ್ತರಾದ ಏಸು ನಿಮ್ಮ ಅಜ್ಞಾನವನ್ನು ಹೋಗಲಾಡಿಸಲಿ... ಅದು ಈಚಲ ಗಿಡ' ಎಂದು ಆ ಪತ್ರಕರ್ತರು ತಿಳಿಸಿದರು. ನಂತರ ಆ ಪ್ರಕರಣ ಹಾಸ್ಯಮಯವಾಗಿ ಮುಗಿಯಿತು.

ಈಚಲುಗಿಡ ಬೆಳೆಸಬಾರದೆಂಬ ಮನಸ್ಥಿತಿಯ ವೈ.ಕೆ.ಆರ್ ಅವರನ್ನು ಕುಣಿಗಲ್ ಮತ್ತು ಹುಲಿಯೂರುದುರ್ಗ ಶಾಸಕರಾದ ದಿನಗಳಿಂದ ನೋಡುತ್ತಲೇ ಬಂದಿರುವ ನಾನು, ಗ್ರಾಮೀಣ ಭಾಗಗಳಲ್ಲಿ ಮದ್ಯಪಾನ ಮಾಡದಂತೆ ಜನರಿಗೆ ಎಚ್ಚರಿಸುತ್ತಲೇ ಅದರ ದುಷ್ಪರಿಣಾಮಗಳನ್ನು ತಿಳಿಸುತ್ತಾ ಬಂದಿದ್ದಾರೆ. ತೀರಾ ಇತ್ತೀಚೆಗೆ ಹುಲಿಯೂರುದುರ್ಗ ವಿಧಾನಸಭಾ ಕ್ಷೇತ್ರದಲ್ಲಿ ವನ ಸಂವರ್ಧನಾ ಟ್ರಸ್ಟ್ ವತಿಯಿಂದ ಸಾರ್ವಜನಿಕರ ಸಹಭಾಗಿತ್ವದಲ್ಲಿ 5 ಲಕ್ಷ ಸಸಿಗಳನ್ನು ನೆಡಿಸಲು ಕಾರಣರಾದ ವೈ.ಕೆ.ಆರ್ ಆಶಯಕ್ಕೆ ಆ ಕ್ಷೇತ್ರದ ಜನ ಸಮರ್ಪಕವಾಗಿ ಸ್ಪಂದಿಸಿದ್ದಾರೆ. ಸಸಿಗಳನ್ನು ನೆಡುವ ಸಂದರ್ಭದಲ್ಲಿ ಗುಣಿ ತೋಡಿಸುವಿಕೆಯಿಂದ ಸಸಿ ನೆಡುವವರೆಗೆ 18ರ ಹರೆಯದ ಹುಡುಗನಂತೆ ಹುಲಿಯೂರುದುರ್ಗ ಕ್ಷೇತ್ರದ ತುಂಬಾ ಓಡಾಡುತ್ತಿದ್ದ ಅವರ ಉತ್ಸಾಹಕ್ಕೆ ಮೇರೆ ಇರಲಿಲ್ಲ. ಅನಾರೋಗ್ಯವನ್ನು ಲೆಕ್ಕಿಸದೆ, ಕಂಡ ಕಂಡ ಸರ್ಕಾರಿ ಜಾಗದಲ್ಲಿ, ರಸ್ತೆ ಬದಿಯಲ್ಲಿ ವಿವಿಧ ಜಾತಿಯ ಸಸಿಗಳನ್ನು ನೆಡಿಸುತ್ತಾ, ಖಾಸಗಿ ಜಮೀನು ಕಂಡಲ್ಲಿ ಅದರ ಮಾಲೀಕರ ಮನ ಒಲಿಸಿ ಸಸಿ ನೆಡಿಸುತ್ತಾ ಒಂದು ರೀತಿಯ ಅತಾರ್ಕಿಕ ಸುಖ ಅನುಭವಿಸುತ್ತಿದ್ದರು.

ಹುಲಿಯೂರುದುರ್ಗದಲ್ಲಿ 5 ಲಕ್ಷ ಸಸಿಗಳನ್ನು ನೆಡುವ ಕಾರ್ಯಕ್ರಮ ನಿಗದಿಯಾದ ದಿನಕ್ಕೆ 5 ಲಕ್ಷ ಸಸಿಗಳನ್ನು ಬೇರೆ ಬೇರೆ ಜಿಲ್ಲೆಗಳಿಂದ ಹೊಂದಿಸಿಕೊಳ್ಳಲು ಡಿ.ಎಫ್.ಓ ಶ್ರೀಕಂಠಯ್ಯ ಸಾಕಷ್ಟು ಶ್ರಮವಹಿಸಿದ್ದರು. ಶ್ರೀಕಂಠಯ್ಯ ಒಮ್ಮೆ, ನನ್ನೊಂದಿಗೆ ಮಾತನಾಡುತ್ತಾ, 'ನಮ್ಮ ಫಾರಂಗಳಲ್ಲಿರುವ ಸಸಿಗಳೊಂದಿಗೆ ಬೇರೆ ಬೇರೆ ಜಿಲ್ಲೆಗಳಿಂದಲು ಸಸಿ ತರಿಸಿದ್ದೇವೆ. ಬೇರೆ ಶಾಸಕರಾಗಿದ್ದರೆ ಹೇಗೋ ನಿಭಾಯಿಸಬಹುದಿತ್ತು. ಮೊನ್ನೆ ನಡೆದ ಮೀಟಿಂಗ್‌ನಲ್ಲಿ ಖಚಿತವಾಗಿ ಹೇಳಿದ್ದಾರೆ. ಹೆಚ್ಚು ಕಮ್ಮಿಯಾದರೆ ಕಷ್ಟ. ಅರಣ್ಯ ಇಲಾಖೆ ಬಗ್ಗೆ ಅವರಿಗಿರುವ ಮಾಹಿತಿ ನಮ್ಮ ಇಲಾಖೆ ಅಧಿಕಾರಿಗಳಿಗಿಲ್ಲ. ಇಂತಹ ಪ್ರದೇಶದಲ್ಲಿ ಇಷ್ಟು ಅರಣ್ಯ ಭೂಮಿಯಿದೆ ಎಂದು ಹೇಳುತ್ತಾರೆ' ಎಂದು ಹೇಳಿದ್ದರು. ಈ ಮಾತು ಕೇವಲ ಶ್ರೀಕಂಠಯ್ಯನವರದಲ್ಲ. ಬಹುತೇಕ ಅಧಿಕಾರಿಗಳ ಮಾತಾಗಿದೆ. ಯಾವುದೇ ಇಲಾಖೆ ತೆಗೆದುಕೊಂಡರೂ ಸಹ, ನಿಖರವಾದ ಮಾಹಿತಿಯನ್ನು ಹೊಂದಿರುವ ವೈ.ಕೆ. ರಾಮಯ್ಯ ಅವರಿಗೆ ಯಾವುದೇ ಸಂದರ್ಭದಲ್ಲಿ ಉಡಾಫೆ, ತಗಲೂಪಿ ಉತ್ತರ ಹೇಳಲು ಸಾಧ್ಯವಿಲ್ಲವೆಂಬ ಅಂಶ ನನಗೆ ಮನದಟ್ಟಾಗಿದೆ.

ಅವರು ಜಿಲ್ಲಾ ಉಸ್ತುವಾರಿ ಸಚಿವರಾಗಿದ್ದ ಸಂದರ್ಭ. ಜಿಲ್ಲಾ ಪರಿಷತ್ ವ್ಯವಸ್ಥೆಯಿದ್ದ ಕಾಲದಲ್ಲಿ, ಜಿಲ್ಲಾ ಪಂಚಾಯ್ತಿ ಸಾಮಾನ್ಯ ಸಭೆ, ಪ್ರಗತಿ ಪರಿಶೀಲನಾ ಸಭೆ (ಕೆ.ಡಿ.ಪಿ)ಗಳಿಗೆ ಅಧಿಕಾರಿಗಳು ನಿಗಧಿತ ಸಮಯಕ್ಕೆ ಬರಲೇಬೇಕೆಂದು ಕಟ್ಟುನಿಟ್ಟಿನ ಆದೇಶ ಹೊರಡಿಸಿದ್ದರು. ಸಭೆ 11 ಗಂಟೆಗೆ ಎಂದರೆ 11.05ಕ್ಕೆ ಅಧಿಕಾರಿಗಳೂ ಹಾಜರಿರಬೇಕು. 11-05ಕ್ಕೆ ಸಭೆಯ ಸಭಾಂಗಣದ ಬಾಗಿಲು ಮುಚ್ಚಿಸಿ, ಸಭೆ ನಡೆಸುತ್ತಿದ್ದರು. ಸಭೆಗೆ ಗೈರುಹಾಜರಾದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸುತ್ತಿದ್ದರು. ಆನಂತರ ಜಿಲ್ಲಾ ಪಂಚಾಯ್ತಿ ವ್ಯವಸ್ಥೆ ಬಂದಿತು. ನಂತರದಲ್ಲಿ ಈಗಿನ ಜಿಲ್ಲಾ ಉಸ್ತುವಾರಿ ಸಚಿವರು ವೈ.ಕೆ.ಆರ್‌ರಂತೆ ಕಠಿಣವಾಗಿ ನಡೆದುಕೊಳ್ಳುತ್ತಿಲ್ಲ. ಅಧಿಕಾರಿಗಳು ಇದರಿಂದ ಉದಾಸೀನ ಮನೋಭಾವ ತಳೆಯುವುದು ಹೆಚ್ಚುತ್ತಿದೆ. ಶಿಸ್ತಿಗೆ ಹೆಸರಾದ ರಾಮಯ್ಯ ತಮ್ಮ ಖಾಸಗಿ ಜೀವನದಲ್ಲೂ ಕಠಿಣವಾಗಿ ನಡೆದುಕೊಂಡ ಬಗ್ಗೆ ನನಗೆ ಗೊತ್ತಿದೆ.

ಕುಣಿಗಲ್ ತಾಲ್ಲೂಕು ಒಕ್ಕಲಿಗ ಜನಾಂಗವನ್ನು ಪ್ರಧಾನವಾಗಿ ಹೊಂದಿದೆ. ಆದರೆ ರಾಮಯ್ಯ ಅವರು ಹಿಂದುಳಿದ ಮತ್ತು ದಲಿತ ವರ್ಗದವರನ್ನು ಕಡೆಗಣಿಸಿಲ್ಲ. ಜೆ.ಹೆಚ್. ಪಟೇಲರು ಮುಖ್ಯಮಂತ್ರಿಯಾಗಿದ್ದ ಸಂದರ್ಭ. ಹುಲಿಯೂರುದುರ್ಗದ ಅಂದಿನ ಶಾಸಕ ಡಿ. ನಾಗರಾಜಯ್ಯ ರೇಷ್ಮೆ ಸಚಿವರು. ಅವರ ಸಹೋದರರು ಯಾವುದೋ ರಾಜಕೀಯ ಕಾರಣಕ್ಕೆ ರಾಮಯ್ಯ ಅವರ ಕಟ್ಟಾ ಬೆಂಬಲಿಗರಾಗಿರುವ ಅಂದಿನ ಗ್ರಾಮ.ಪಂ. ಸದಸ್ಯ ಹಳ್ಳಯ್ಯ ಎಂಬುವರನ್ನು ಹಿಗ್ಗಾ ಮುಗ್ಗಾ ಬಡಿದಿದ್ದರು. ಅವರನ್ನು ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಕೊಡಿಸಿ, ನನಗೆ ದೂರವಾಣಿ ಕರೆಮಾಡಿ ಹೇಳಿದರು (ಇತರೆ ಪತ್ರಕರ್ತರಿಗೂ ಕರೆ ಮಾಡಿರಬಹುದು). ನೋಡಿ ನಾಗರಾಜಯ್ಯನ ಕಡೆಯವರ ದೌರ್ಜನ್ಯ ಅತಿಯಾಯಿತು. ಹಳ್ಳಯ್ಯ ಗ್ರಾ.ಪಂ. ಸದಸ್ಯ. ಹಿಂದುಳಿದ ವರ್ಗದವ ಎಂಬ ಕಾರಣಕ್ಕೆ ಕ್ಷುಲ್ಲಕ ವಿಷಯಕ್ಕೆ ಜಗಳ ತೆಗೆದು ಆತನನ್ನು ಥಳಿಸಿದ್ದಾರೆ. ಪತ್ರಿಕೆಯಲ್ಲಿ ಹೈಲೈಟ್ ಮಾಡಿ... ಮಿಕ್ಕಿದ್ದನ್ನು ನಾನು ನೋಡಿಕೊಳ್ಳುವೆ ಎಂದರು. ಅದರಂತೆ ನಡೆದುಕೊಂಡರು.

ರಾಮಯ್ಯ ಅವರು ಹುಲಿಯೂರುದುರ್ಗ ಕ್ಷೇತ್ರದಲ್ಲಿ ಸ್ಪರ್ಧಿಸಿದ್ದರಿಂದ ಆ ಕ್ಷೇತ್ರ ತನ್ನದೇ ಆದ ವೈಶಿಷ್ಟ್ಯದಿಂದ ರಾಷ್ಟ್ರಮಟ್ಟದಲ್ಲಿ ಗಮನಿಸುವಷ್ಟು ಪ್ರಸಿದ್ಧಿಯಾಯಿತು. ನಾವೆಲ್ಲ (ಪತ್ರಕರ್ತರು) ಮತದಾನದ ದಿನ ಈ ಕ್ಷೇತ್ರದ ಕೆಲ ಊರುಗಳ ಮತದಾರ ಕೇಂದ್ರಕ್ಕೆ ಭೇಟಿ ನೀಡಿದೆವು. ಎಲ್ಲೆಲ್ಲೂ ಉದ್ವಿಗ್ನ ವಾತಾವರಣ. ಬೆಟ್ಟ-ಗುಡ್ಡ, ಕುರುಚಲು ಗಿಡಗಳ ಕಾಡುಗಳನ್ನು ಹೊಂದಿರುವ ಕುಗ್ರಾಮಗಳಲ್ಲಿ ನಕಲಿ ಮತದಾನ ಮಾಡಲು ಪ್ರಯತ್ನಿಸುವ ಗುಂಪುಗಳು. ನಕಲಿ ಮತದಾನವನ್ನು ತಡೆಯಲು ವೈ.ಕೆ.ಆರ್. ಅಭಿಮಾನಿಗಳ ಗುಂಪು. ಎದುರಾಳಿಗೆ ಸೋಲುವ ಭೀತಿಯಿಂದ ಹುಲಿಯೂರುದುರ್ಗ ಕ್ಷೇತ್ರ ಕುದಿಯುವ ಕೊಪ್ಪರಿಗೆಯಾಗಿತ್ತು. ನಕಲಿ ಮತದಾರರು ಸಿಕ್ಕಿದರೆ, ಪೊಲೀಸರು ಮುಖಮೂತಿ ನೋಡದೆ ಚಚ್ಚುತ್ತಿದ್ದರು. ರಾಜಕೀಯದ ಎಲ್ಲಾ ಪಟ್ಟುಗಳನ್ನು ಬಲ್ಲ ಅನುಭವಿ ರಾಜಕಾರಣಿ ವೈ.ಕೆ.ಆರ್ ಜನರ ವಿಶ್ವಾಸ ಗಳಿಸಿದ್ದರಿಂದ ಎದುರಾಳಿ

ಪರಾಭವಗೊಂಡರು. ಮತದಾನದ ದಿನ ಹುಲಿಯೂರುದುರ್ಗದಲ್ಲಿ ನಮಗೆ ಸಿಕ್ಕಿ ವೈ.ಕೆ.ಆರ್ ಪ್ರತಿಕ್ರಿಯಿಸಿದ ರೀತಿ ಹೀಗೆ... ಜನಕ್ಕೆ ನನ್ನ ಬಗ್ಗೆ ಗೊತ್ತಿದೆ. ನಕಲಿ ಮತದಾನವನ್ನು ಜನರೇ ನಿಯಂತ್ರಿಸುತ್ತಿದ್ದಾರೆ. ಜನರ ವಿಶ್ವಾಸ ಗಳಿಸಿದ್ದೇನೆ. ಗೆಲುವು ಖಚಿತ. ಈ ಭಾಗದಲ್ಲಿ ಕನಿಷ್ಠ ಸೌಕರ್ಯಗಳು ದೊರೆತಿಲ್ಲ. ನಾನು ಗೆದ್ದ ಎರಡು ವರ್ಷದೊಳಗೆ ಶೇ.60ರಷ್ಟು ಸೌಕರ್ಯ ಒದಗಿಸುವೆ ಎಂದರು.

ಈಗ ನುಡಿದಂತೆ ನಡೆದುಕೊಂಡಿರುವ ರಾಮಯ್ಯನವರ ಕ್ಷೇತ್ರವನ್ನು ಒಮ್ಮೆ ಅವಲೋಕಿಸಿದರೆ ಹಲವಾರು ಸ್ವಾರಸ್ಯಕರ ವಿಷಯಗಳು ತಿಳಿಯುತ್ತವೆ. ಅಂದು ಹುಲಿಯೂರುದುರ್ಗ ಕ್ಷೇತ್ರದ ಮತ ಎಣಿಕೆ ನಡೆದು ವೈ.ಕೆ.ಆರ್ ಗೆದ್ದರು ಎಂಬ ಘೋಷಣೆ ಹೊರಬೀಳುತ್ತಿದ್ದಂತೆ, ಕೃಷಿ ಇಲಾಖೆಯ ಸಹಾಯಕ ನಿರ್ದೇಶಕ ಹಿರಿಯಣ್ಣಯ್ಯ ಸಿಬ್ಬಂದಿ ಸಮೇತವಾಗಿ ಅಮೃತೂರು ಸುತ್ತಮುತ್ತಲ ಹಳ್ಳಿಗಳಲ್ಲಿನ ಭತ್ತದ ಗದ್ದೆಗಳ ಬಳಿಗೆ ತೆರಳಿ, ಬೆಂಕಿರೋಗಕ್ಕೆ ಔಷಧಿಯನ್ನು ಸಿಂಪಡಿಸಲು ಹೊರಟರು. 3 ದಿನಗಳಿಂದ ವಿದ್ಯುತ್ ತಂತಿ ತುಂಡಾಗಿ ವಿದ್ಯುತ್ ಕಾಣದ ಸಣಬ ಗ್ರಾಮಕ್ಕೆ ತಂತಿ ದುರಸ್ಥಿಯಾಗಿ ವಿದ್ಯುತ್ ಬರುತ್ತದೆ. ಯಡವಾಣಿಯಲ್ಲಿ ಕೆಟ್ಟ ಕೊಳವೆ ಬಾವಿ ದುರಸ್ಥಿಯಾಗುತ್ತದೆ. ಅಲ್ಲಿಂದಾಚೆಗೆ ಸೋಮಾರಿತನ ಬೆಳೆಸಿಕೊಂಡಿದ್ದ ಅಧಿಕಾರಿಗಳ ಬಳಿಗೆ ಸೋಮಾರಿತನ ಸುಳಿಯುವುದಿಲ್ಲ. ಆದರೆ ಡಾ. ಕೃಷ್ಣಯ್ಯ ಎಂಬ ಕುಣಿಗಲ್ ಆಸ್ಪತ್ರೆಯ ವೈದ್ಯಾಧಿಕಾರಿ, ರಾಮಯ್ಯ ನಮ್ಮವರು ಎಂಬ ಧೈರ್ಯದ ಮೇಲೆ ತುಮಕೂರಿನ ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗೆ ಡೆಪ್ಯೂಟೇಷನ್ ಮೇಲೆ ಹಾಕಿಸಿಕೊಂಡು ಕೆಲಸ ಮಾಡುತ್ತಿದ್ದರು. ವೈದ್ಯಾಧಿಕಾರಿ ಡಾ. ಕೃಷ್ಣಯ್ಯರನ್ನು ಕರೆಸಿ ಕುಣಿಗಲ್ ಅಥವಾ ತುಮಕೂರು ಆಯ್ಕೆ ಮಾಡಿಕೊಳ್ಳಿ. ರೋಗಿಗಳಿಗೆ ತೊಂದರೆಯಾಗುತ್ತಿದೆ ಎಂದು ಕಡ್ಡಿ ಮುರಿದಂತೆ ತಿಳಿಸಿದರು. ರಾಮಯ್ಯರ ಸ್ವಭಾವ ಗೊತ್ತಿದ್ದ ಡಾ. ಕೃಷ್ಣಯ್ಯ ತುಮಕೂರಿಗೆ ವರ್ಗ ಮಾಡಿಸಿಕೊಂಡರು. ಕುಣಿಗಲ್ ಗೆ ಬೇರೆ ವೈದ್ಯಾಧಿಕಾರಿ ಬಂದರು. ರಾಮಯ್ಯ ಜನರ ಪರವೇ ಹೊರತು, ಜಾತಿ ಪರವಲ್ಲವೆಂಬುದಕ್ಕೆ ಈ ಘಟನೆ ಸಾಕ್ಷಿ. ಆದರೆ ಒಬ್ಬ ಶಾಸಕರಾಗಿ ಜಾತಿಗೆ ಮಹತ್ವ ನೀಡದೆ ಸಮುದಾಯದ ಒಳಿತಿಗೆ ಅವರು ಆದ್ಯತೆ ನೀಡುತ್ತಾರೆಂಬುದಕ್ಕೆ ಇದೊಂದು ಉದಾಹರಣೆಯಾಗಿದೆ.

ಜನರ ಒಳಿತಿಗೆ ಅಧಿಕಾರ ಬೇಕೆಂದು ಪ್ರಬಲವಾಗಿ ಪ್ರತಿಪಾದಿಸುವ ರಾಮಯ್ಯ ಅಧಿಕಾರಕ್ಕಾಗಿ ಕೆಟ್ಟ ರಾಜಕಾರಣ ಮಾಡಿದವರಲ್ಲ. ಹಾಗೆಯೇ ನಡೆದುಕೊಂಡಿದ್ದರೆ ಎಸ್.ಆರ್. ಬೊಮ್ಮಾಯಿ ಮತ್ತು ಎಸ್.ಎಂ. ಕೃಷ್ಣ ಸಂಪುಟದಲ್ಲಿ ಯಾವತ್ತೋ ಮಂತ್ರಿಯಾಗಿರುತ್ತಿದ್ದರು. ಮಂತ್ರಿಯಾಗಲಿಲ್ಲ ಎಂಬ ಕೊರಗು ಅವರಿಗೆ ಇದ್ದಂತೆ ನನಗೆ ಕಂಡುಬಂದಿಲ್ಲ. ಎಸ್.ಎಂ. ಕೃಷ್ಣ ಹುಲಿಯೂರುದುರ್ಗ ಕ್ಷೇತ್ರಕ್ಕೆ ಹೊಂದಿಕೊಂಡಿರುವ ಮದ್ದೂರು ಕ್ಷೇತ್ರದ ಶಾಸಕರು. ರಾಮಯ್ಯ ಮತ್ತು ಅವರಿಗೆ ಹಲವಾರು ಸಂಬಂಧಗಳಿವೆ. ಮೇಲಾಗಿ ಒಳ್ಳೆಯ ಸ್ನೇಹಿತರು. ನನಗೆ ತಿಳಿದಂತೆ ಕೃಷ್ಣಾರ ಬಳಿ ನನ್ನನ್ನು ಮಂತ್ರಿ ಮಾಡಿ ಎಂದು ಎಂದೂ ಅಂಗಲಾಚಿದವರಲ್ಲ. ಸದಾ ಕ್ರಿಯಾಶೀಲವಾಗಿರುವ ಅವರು ತಮ್ಮ ಕ್ಷೇತ್ರದಲ್ಲಿ ಕೋಟ್ಯಂತರ ರೂಪಾಯಿ ಕೆಲಸ ಮಾಡಿಸಿದ್ದಾರೆ.

ಈ ವ್ಯಕ್ತಿ ಎಲ್ಲಾ ಕೆಲಸಗಳನ್ನು ಒಂದೇ ಬಾರಿ ನಿರ್ವಹಿಸುವುದಿಲ್ಲ. ಒಂದೊಂದೇ ಸಮಸ್ಯೆಯನ್ನು ತೆಗೆದುಕೊಂಡು ಬಿಡಿಸುತ್ತಾರೆ. ಹೇಮಾವತಿ, ರೇಷ್ಮೆ ಯಾವುದೇ ಇರಲಿ, ನಿಗಧಿತ ಅವಧಿಯೊಳಗೆ ಒಂದು ಕೆಲಸ ಪೂರೈಸಿ, ಇನ್ನೊಂದಕ್ಕೆ ಕೈ ಇಡುವ ರಾಮಯ್ಯ ಕಳೆದ ಎರಡು ವರ್ಷಗಳಲ್ಲಿ ತಮ್ಮ ಕ್ಷೇತ್ರದಲ್ಲಿ ಕಳೆದ 50 ವರ್ಷಗಳಿಂದ ಆಗದ ಜನಹಿತ ಕೆಲಸಗಳನ್ನು ಮಾಡಿಸಿದ್ದಾರೆ. ರಸ್ತೆ ವಿದ್ಯುತ್, ಕುಡಿಯುವ ನೀರು ಇತ್ಯಾದಿ ಸಮಸ್ಯೆಗಳನ್ನು ಬಗೆಹರಿಸಿದ್ದಾರೆ. ತನ್ನ ಕ್ಷೇತ್ರದತುಂಬೆಲ್ಲಾ ಗಿಡಮರ ಬೆಳೆಸಲು ಕೋಲು ಹಿಡಿದ ಮುಖ್ಯೋಧ್ಯಾಪಾಯರಂತೆ ಕ್ಷೇತ್ರದ ಉದ್ದಕ್ಕೂ ಓಡಾಡುತ್ತಿದ್ದಾರೆ.

ರೇಷ್ಮೆ ರಾಜನೆಂದೇ ಹೆಸರಾಗಿರುವ ರಾಮಯ್ಯನವರಿಗೆ ಹಿಪ್ಪುನೇರಳೆ ಸೊಪ್ಪು ಕಿತ್ತು, ರೇಷ್ಮೆ ಹುಳು ಸಾಕಿದ ಅನುಭವ ಅಪಾರವಾಗಿದೆ. ಹೀಗಾಗಿ ಮೈಸೂರು ರೇಷ್ಮೆ ಬಿತ್ತನೆ ವಲಯದ ಸಂಕಷ್ಟ ಅವರಿಗೆ ಚೆನ್ನಾಗಿ ತಿಳಿದಿರುವುದರಿಂದ ಬೋನಸ್ ಕೊಡಿಸಲು ಹೋರಾಡಿದರು. 5 ರೂ.ನಿಂದ ಆರಂಭಗೊಂಡ ಬೋನಸ್ ಈಗ 50 ರೂ.ಗೆ ಏರಿದೆ. ಕಾರು, ಬಂಗಲೆ, ಆಸ್ತಿ, ಅಂತಸ್ತು, ವಿದ್ಯೆ, ಅಧಿಕಾರಗಳನ್ನೆಲ್ಲ ಪಡೆದುಕೊಂಡ ವೈ.ಕೆ.ಆರ್ ನಿಗರ್ವಿ. ಕೋಪ ಅವರ ಸದ್ಗುಣ ಮತ್ತು ದುರ್ಗುಣವೂ ಆಗಿದೆ. ಹೆಂಡತಿ ಅನಸೂಯರನ್ನು ಅಪಾರವಾಗಿ ಪ್ರೀತಿಸುವ ಈ ವ್ಯಕ್ತಿಗೆ ತಮ್ಮ ನಿರೀಕ್ಷೆಗೆ ತಕ್ಕಂತೆ ಮಕ್ಕಳು ಬೆಳೆಯಲಿಲ್ಲ ಎಂಬ ನೋವು ಅವರ ಹೃದಯದಲ್ಲಿ ಮಡುಗಟ್ಟಿದೆ. ಅವರು ತಮ್ಮ ಹೆಂಡತಿಯನ್ನು ಎಷ್ಟು ಪ್ರೀತಿಸುತ್ತಾರೆಂಬುದಕ್ಕೆ ನನ್ನ ಶಾಸಕ ಮಿತ್ರರೊಬ್ಬರು ಹೇಳಿದ ಘಟನೆ ನೆನಪಿಗೆ ಬರುತ್ತದೆ. ಒಮ್ಮೆ ಶಾಸನ ಸಭೆ ನಡೆಯುತ್ತಿದ್ದ ಸಂದರ್ಭ. ಅವರ ಶ್ರೀಮತಿಯವರಿಗೆ ಜ್ವರ ಬಂದಿದೆ ಎಂಬ ವಿಷಯ ಇವರ ಕಿವಿಗೆ ಬಿದ್ದಿತು. ಚಕ್ಕನೆ ಕಾರಿನ ಬಳಿಗೆ ಓಡಿಬಂದವರೆ ಕಾರನ್ನು ಖುದ್ದು ಚಾಲನೆ ಮಾಡಿಕೊಂಡು ಮನೆಗೆ ಹೋದರು. ಆ ವೇಳೆಗೆ ಅವರ ಶ್ರೀಮತಿ ವೈದ್ಯರ ಬಳಿಗೆ ಹೋಗಿ ಬಂದಿದ್ದರು. ವೈದ್ಯರು ಔಷಧಿ ಕೊಟ್ಟಿದ್ದಾರೆ ಎಂದರೂ ಕೇಳದೆ, ಮತ್ತೊಮ್ಮೆ ವೈದ್ಯರ ಬಳಿಗೆ ಕರೆದೊಯ್ದರು. ಅವರಿಗೆ ಇನ್ನೊಬ್ಬ ಹೆಂಡತಿ ಇದ್ದಾರೆ. ಹೇಮಾವತಿ ಎಂದು ಹೆಸರು. ಹಾಸನದ ಪ್ರಬಲ ರಾಜಕಾರಣದ ನಡುವೆ ತುಮಕೂರಿಗೆ ಅಲ್ಲಿಂದ ಕುಣಿಗಲ್ ಗೆ ಹೇಮಾವತಿಯನ್ನು ಕರೆತರಲು ಹರಸಾಹಸ ಮಾಡಿ ಗೆದಿದ್ದಾರೆ. ಹೇಮಾವತಿಯನ್ನು ಕಾವೇರಿ ಮೂಲಕ ತಮಿಳುನಾಡಿಗೆ ಹರಿಸಿದಾಗ, ನಾಲೆ ಕೆಲಸ ವಿಳಂಬವಾದಾಗ, ರಸ್ತೆಯನ್ನು ಅಡ್ಡಗಟ್ಟಿ ಚಳುವಳಿ ಮಾಡಿ ಜೈಲಿಗೆ ಹೋದ ಘಟನೆಗಳು, ನಮ್ಮ ಕಣ್ಣ ಮುಂದೆ ಇನ್ನೂ ಅಚ್ಚ ಹಸಿರಾಗಿದೆ.

ವೈ.ಕೆ.ಆರ್ ಯಾವುದೇ ಚಳವಳಿ, ಪ್ರತಿಭಟನೆಗಳನ್ನು ಮಾಡಬೇಕಾದರೆ ಪೂರ್ವ ಸಿದ್ಧತೆ ಮಾಡಿಕೊಂಡು ಪತ್ರಿಕೆಗಳ ಮೂಲಕ ಜನರಿಗೆ ತಿಳಿಸುತ್ತಾರೆ. ಅವರು ಚಳುವಳಿ, ಪ್ರತಿಭಟನೆ ಯಾವ ಸ್ವರೂಪ ಇರಬೇಕೆಂದು ನಿರ್ಧರಿಸಿ ಮುನ್ನಡೆಯುವುದರಿಂದ ಪ್ರತಿಫಲ ಉತ್ತಮ ವಾಗಿರುತ್ತದೆ. ಸಣ್ಣಪುಟ್ಟ ಕಾರಣಗಳಿಗೆಲ್ಲ ಹೋರಾಟ ನಡೆಸದೆ ತಮ್ಮ ಘನತೆಯನ್ನು ಉಳಿಸಿ ಕೊಂಡಿರುವುದರಿಂದ ಮತ್ತು ಹೇಳಬೇಕಾದ ವಿಷಯವನ್ನು ಖಚಿತವಾಗಿ ವಿವರಿಸುವುದರಿಂದ ರಾಜ್ಯದ ರಾಜಕೀಯ ಹಾಗೂ ಅಧಿಕಾರಿ ವರ್ಗದಲ್ಲಿ ಅವರಿಗೆ ವಿಶೇಷ ಮನ್ನಣೆಯಿದೆ.



ಹೀಗೆ ಜನಪರ ಕಾಳಜಿಯುಳ್ಳ ವೈ.ಕೆ. ರಾಮಯ್ಯ ಅವರು ಬಡವರೆಲ್ಲ ವಿದ್ಯಾವಂತರಾಗಬೇಕೆಂಬ ಹಂಬಲವುಳ್ಳವರು. ಅದು ಕೇವಲ ಆಶಯವಲ್ಲ. ಅವರು ಹುಲಿಯೂರು ದುರ್ಗ ಕ್ಷೇತ್ರದ ಶಾಸಕರಾಗಿ ಆಯ್ಕೆಗೊಂಡ ನಂತರದ ದಿನಗಳಲ್ಲಿ ತಮ್ಮ ಕ್ಷೇತ್ರದ 7,10 ಮತ್ತು ಪಿ.ಯು.ಸಿ ವಿದ್ಯಾರ್ಥಿಗಳು ಉತ್ತಮ ಫಲಿತಾಂಶ ತರಲಿಲ್ಲ. ಅಂದರೆ ಸರ್ಕಾರಿ ಶಾಲಾ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳು ಉತ್ತಮ ಫಲಿತಾಂಶ ತಾರದಿರುವುದನ್ನು ಗಮನಿಸಿದ ಅವರು ಆ ಕೂಡಲೆ, ಕುಣಿಗಲ್ ತಾಲ್ಲೂಕಿನ ಎಲ್ಲಾ ಶಿಕ್ಷಣ ಅಧಿಕಾರಿಗಳ ಮತ್ತು ಸರ್ಕಾರಿ ಶಾಲಾ ಕಾಲೇಜಿನ ಮುಖ್ಯಸ್ಥರನ್ನು ಕರೆಸಿ ಚರ್ಚಿಸಿ, ಕೆಲ ಸುಧಾರಣೆಗಳನ್ನು ತರಲು ಕಾರಣರಾದರು. ಸಭೆ-ಸಮಾರಂಭಗಳಲ್ಲಿ ಪೋಷಕರಿಗೆ ತಿಳಿಯ ಹೇಳಿದರು. ಪರಿಣಾಮವಾಗಿ ಈ ಬಾರಿ ಉತ್ತಮ ಫಲಿತಾಂಶ ಬಂದಿದೆ. ಅಷ್ಟೇ ಅಲ್ಲ. ಇಡೀ ಜಿಲ್ಲೆಗೆ ಹುಲಿಯೂರುದುರ್ಗದ ಫಲಿತಾಂಶ ಪ್ರಥಮ ಸ್ಥಾನದಲ್ಲಿದೆ. ತಾವು ಅಂದುಕೊಂಡಂತೆ ಜನಪರ ಕೆಲಸಗಳನ್ನು ಕಾಲಮಿತಿಯಲ್ಲಿ ಮುಗಿಸುವ ರಾಜ್ಯದ ಅಪರೂಪದ ರಾಜಕಾರಣಿಗಳಲ್ಲಿ ಒಬ್ಬರಾದ ವೈ.ಕೆ. ರಾಮಯ್ಯ ಅವರ ಹೆಸರಿನಲ್ಲಿ ಒಂದು ಟ್ರಸ್ಟ್ ಇದೀಗ ಆರಂಭವಾಗಿದೆ. ಆ ಮೂಲಕ ಅವರ ಆಶಯಗಳು ಈಡೇರಲಿ. ದಟ್ಟ ಜನಪರ ಕಾಳಜಿಯುಳ್ಳ ಅವರು ನಮ್ಮೊಡನೆ ನೂರ್ಕಾಲ ಬಾಳಲಿ. ಅವರ ಆದರ್ಶಗಳು ಇತರರಿಗೆ ಮಾರ್ಗದರ್ಶಕವಾಗಲಿ.

○

# ನೀರಾವರಿಗಾಗಿ ತುಡಿಯುವ ವ್ಯಕ್ತಿ

**ಪಿ ಲಂಕೇಶ್**

ಮಾಜಿ ನೀರಾವರಿ ಸ್ಪೆಷಲಿಸ್ಟ್ ಎಚ್.ಡಿ. ದೇವೇಗೌಡರು ಮುಖ್ಯಮಂತ್ರಿಯಾದ ಮೇಲೆ ನೀರಾವರಿ ಬಗ್ಗೆ ಮಾತನಾಡುವುದನ್ನೆ ಮರೆತಿದ್ದಾರೆ. ಗೌಡರ ಮಾಜಿ ಸಂಗಾತಿ ಹಾಲಿ ಸಮಾಜ ವಾದಿ ಪಕ್ಷದ ಅಧ್ಯಕ್ಷ ವೈ. ಕೆ. ರಾಮಯ್ಯ ಈಗ ಹಗಲಿರುಳು ನೀರಾವರಿ ಬಗ್ಗೆ ಮಾತನಾಡುತ್ತಿರುತ್ತಾರೆ.

ರಾಮಯ್ಯ ಏನು ಮಾಡಬೇಕೆಂದು ಹೇಳುತ್ತಾರೋ ಆ ಕೆಲಸದ ಬಗ್ಗೆ ಗೌಡರು ಮೌನಕ್ಕೆ ಮಹತ್ವ ನೀಡಿ ದಿವ್ಯ ನಿರ್ಲಕ್ಷ್ಯದ ಪ್ರದರ್ಶನ ನಡೆಸುತ್ತಾರೆ. ಹಠಮಾರಿ ರಾಮಯ್ಯ ನೀರಾವರಿಯನ್ನು ಸರ್ಕಾರ ನಿರ್ಲಕ್ಷಿಸಿದ ಬಗ್ಗೆ ''ಜನಜಾಗೃತಿ'' ಕಾರ್ಯಕ್ರಮ ಹಾಕಿಕೊಂಡಿದ್ದಾರೆ. ಇದು ಒಂದು ಅರ್ಥದಲ್ಲಿ ಪ್ರತಿಷ್ಠೆಯ ವಿರುದ್ಧ ಕಾಳಜಿಯೇ ಆಗಿದೆ. ಈ ಬಗ್ಗೆ 'ಪತ್ರಿಕೆ' ಜತೆ ಮಾತನಾಡಿದ ರಾಮಯ್ಯ, ತರ್ಕಬದ್ಧ ಚಿಂತನೆ ಮುಂದಿಟ್ಟಿದ್ದಾರೆ.

**ಕರ್ನಾಟಕದಲ್ಲಿ ನೀರಾವರಿಗೆ ಲಭ್ಯವಿರುವ ಜಮೀನು 55 ಲಕ್ಷ ಹೆಕ್ಟೇರು. 23ಲಕ್ಷ ಹೇಕ್ಟೆರು ಜಮೀನಿಗೆ ಆಗುವಷ್ಟು ನೀರಾವರಿ ಸಾಮರ್ಥ್ಯವನ್ನು ಇಲ್ಲಿ ಸೃಷ್ಟಿಸಲಾಗಿದೆ. ಇದರ ಲಾಭ ಪಡೆಯುತ್ತಿರುವುದು 10 ರಿಂದ 12 ಲಕ್ಷ ಹೇಕ್ಟರು ಜಮೀನು ಮಾತ್ರ. ಅಂದರೆ ಸಾಮರ್ಥ್ಯದಲ್ಲಿ ಇನ್ನು 14 ಲಕ್ಷ ಹೆಕ್ಟೇರು ಜಮೀನಿಗೆ ನೀರು ಒದಗಿಸುವ ಸಾಧ್ಯತೆ ಇದ್ದರೂ, ಅದರ ಬಗ್ಗೆ ಸರ್ಕಾರ ತಲೆ ಕೆಡಿಸಿಕೊಂಡಿಲ್ಲ ಸೃಷ್ಟಿಯಾಗಿರುವ ನೀರಾವರಿ ಸಾಮರ್ಥ್ಯವನ್ನು ಸಮರ್ಪಕವಾಗಿ ಬಳಸಿಕೊಳ್ಳ ಬೇಕೆಂದು ರಾಮಯ್ಯನವರ ಮುಖ್ಯ ಆಗ್ರಹವಾಗಿದೆ.**

ಅವರ ಪ್ರಕಾರ ''ರಾಷ್ಟ್ರದ ನೀರಾವರಿ ಸಾಮರ್ಥ್ಯ ಶೇ 35 ಆಗಿದ್ದು, ರಾಜ್ಯದಲ್ಲಿ ಶೇ.15 ಆಗಿದೆ . ಇತರ ರಾಜ್ಯಗಳೊಂದಿಗೆ ಹೋಲಿಸಿದರೆ ಕರ್ನಾಟಕದ ಪರಿಸ್ಥಿತಿ ನಿಕೃಷ್ಟವಾಗಿದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡೆ ವೀರೇಂದ್ರಪಾಟೀಲ್, ಎಸ್. ನಿಜಲಿಂಗಪ್ಪ ಬೃಹತ್ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಂಡರು''.

ಒಮ್ಮೊಮ್ಮೆ ಕಾವ್ಯಮಯವಾಗಿ ಮಾತನಾಡುವ ವೈ.ಕೆ.ಆರ್ **ಕೃಷ್ಣಾ ಮತ್ತು ಕಾವೇರಿ ನೀರಾವರಿ ಯೋಜನೆಗಳು ಕರ್ನಾಟಕದ ಎರಡು ಕಣ್ಣುಗಳಿದ್ದಂತೆ. ಅವುಗಳ ಆನಂದ ಬಾಷ್ಪದಿಂದ ಭೂಮಿ ತೊಯ್ದು ಜನರ ಬದುಕು ಹಸನಾಗುವ ಬಯಕೆ ಈ ನಾಡಿನ ಜನರದ್ದು. ಆದರೆ ಆನಂದ ಬಾಷ್ಪದ ಬದಲು ಕಣ್ಣೀರು ಬರುತ್ತಿದೆ. ಈ ಎರಡು ಯೋಜನೆಗಳು ಆದಷ್ಟು ಬೇಗನೆ ಮುಗಿಯಬೇಕಾದ ಅನಿವಾರ್ಯತೆ ಇದೆ ಎನ್ನುತ್ತಾರೆ.**

''ಯಾಕೆ ?'' ಎಂದೇನಾದರೂ ಪ್ರಶ್ನಿಸಿದರೆ ರಾಮಯ್ಯ ಅವರಲ್ಲಿ ಅದಕ್ಕೂ ಉತ್ತರವಿದೆ. ''ಕೃಷ್ಣಾ ಯೋಜನೆಯನ್ವಯ 2000 ಇಸವಿಯೊಳಗೆ ಮುಗಿಸಬೇಕಾದ ಪರಿಸ್ಥಿತಿ ಇದೆ. ಕಾವೇರಿ ನದಿ ನೀರಿನ ಬಗ್ಗೆ ಆಯೋಗದ ಮಧ್ಯಂತರ ತೀರ್ಪು ನೀಡಲಾಗಿದ್ದು, ಈ ಬಗ್ಗೆ ಪರಿಹಾರ ಕಂಡುಕೊಳ್ಳುವ ಸಲುವಾಗಿ ಯಾರಾದರು ಶೀಘ್ರದಲ್ಲೇ ಈ ಯೋಜನೆಯನ್ನು ಪೂರ್ಣಗೊಳಿಸಬೇಕಾದ ವಿಶೇಷ ಪರಿಸ್ಥಿತಿ ನಿರ್ಮಾಣವಾಗಿದೆ'' ಎನ್ನುತ್ತಾರೆ. ''ಈ ವಿಶೇಷ ಪರಿಸ್ಥಿತಿ ನಿಭಾಯಿಸಲಿಕ್ಕೆ ಈವರೆಗಿನ ಸರ್ಕಾರಗಳು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಿಲ್ಲ. ಬಜೆಟ್ಟಿನಲ್ಲಿ ಒದಗಿಸಿದಷ್ಟು ಹಣವನ್ನು ಯಾವುದೇ ವರ್ಷ ಖರ್ಚು ಮಾಡಿಲ್ಲ, ಕೋರಮಂಗಲದಲ್ಲಿ ಕ್ರೀಡಾ ಗ್ರಾಮ ನಿರ್ಮಿಸಲಿರುವ ಬಗ್ಗೆ ತುಡಿತ, ಆತುರ ಆಸಕ್ತಿ ನೀರಾವರಿ ಬಗ್ಗೆ ಏಕಿಲ್ಲ?'' ಎನ್ನುವುದು ಅವರ ನೋವು.

''ರೈತರ ಭೂಮಿಗೆ ನೀರು ಕೊಡುವ ಈ ವಿಷಯದಲ್ಲಿ 70ರ ದಶಕದಿಂದ ಎಲ್ಲಾ ಸರ್ಕಾರಗಳು ಮೋಸದ ಪರಂಪರೆಯನ್ನೇ ಸೃಷ್ಟಿಮಾಡಿವೆ. ಇಡೀ ರಾಜಕೀಯ ಜೀವನದಲ್ಲಿ ನೀರಾವರಿ ಬಗ್ಗೆ ಅಷ್ಟೊಂದು ಆಸಕ್ತಿ (ಪ್ರದರ್ಶನ?) ತೋರಿದ ದೇವೆಗೌಡರು ಮುಖ್ಯಮಂತ್ರಿಯಾದ ನಂತರ ಈ ರಾಜ್ಯದ ನೀರಾವರಿ ಯೋಜನೆಗಳು ಯುದ್ಧೋಪಾದಿಯಲ್ಲಿ ಮುಂದುವರಿಯುತ್ತವೆ ಎಂದು ನಾವು ಪ್ರಾಮಾಣಿಕವಾಗಿ ನಂಬಿಕೆ ಇಟ್ಟುಕೊಂಡಿದ್ದೆವು. ಆದರೆ ಅವರು ಮುಖ್ಯಮಂತ್ರಿಯಾದ ತಕ್ಷಣ ರೈತರಿಗೆ ಕೊಟ್ಟ ಕೊಡುಗೆ ನೀರಾವರಿ ಯೋಜನೆಗಳ ಕೆಲಸ ನಿಲ್ಲಿಸಿದ್ದು. ಈ ಯೋಜನೆಯನ್ನು ಪ್ರಾರಂಭಿಸಲು ಕುಂಟು ನೆಪ ನೀಡುತ್ತಾ ನಿಧಾನಿಸಿದ್ದಾರೆ''. ಎನ್ನುವುದು ರಾಮಯ್ಯನವರ ನಂಬಿಕೆ.

''ಈ ಯೋಜನೆಗಳನ್ನು ಪ್ರಾರಂಭ ಮಾಡಿ ಎಂದು ಸತ್ಯಾಗ್ರಹ ಮಾಡಿದರೆ, ಹಿಡಿದು ಜೈಲಿಗೆ ಹಾಕುತ್ತಾರೆ. ಹಿಂದಿನ ರಾಜ್ಯಸರ್ಕಾರದ ಮೋಸದ ಪರಂಪರೆಯನ್ನು ದೇವೆಗೌಡರು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ ಎನ್ನುವುದರಲ್ಲಿ ಅನುಮಾನವೇ ಇಲ್ಲ'' ಎನ್ನುವ ರಾಮಯ್ಯ ''ಈ ಬಗ್ಗೆ ಅಧಿಕೃತ ವಿರೋಧ ಪಕ್ಷವಾದ ಬಿ.ಜೆ.ಪಿ. ಮೌನವಹಿಸಿದೆ. ನೀರಾವರಿ ಯೋಜನೆಗಳ ಪ್ರದೇಶದಲ್ಲಿ ಬರುವ ಜನಪ್ರತಿನಿಧಿಗಳು ಇದರ ಬಗ್ಗೆ ಯಾಕೋ ಗಮನ ಹರಿಸುತ್ತಿಲ್ಲ'' ಎನ್ನುವ ಆರೋಪವನ್ನು ಮಾಡುತ್ತಾರೆ. ''ಈ ಬಗ್ಗೆ ಎಚ್.ಕೆ.ಪಾಟೀಲರಂಥವರು ಮಾತನಾಡಿರಬಹುದು. ಆದರೆ ಸಂಘಟಿತರಾಗಿ ಯಾವ ಪಕ್ಷಗಳೂ ಈ ವಿಷಯವನ್ನು ಕೈಗೆತ್ತಿಕೊಳ್ಳಲಿಲ್ಲ'' ಎನ್ನುತ್ತಾರೆ ಅವರು. ಹೀಗಾಗಿ ರಾಮಯ್ಯ ರೈತ ಸಂಘದ ಅಧ್ಯಕ್ಷ ಎಂ. ಡಿ. ನಂಜುಂಡ ಸ್ವಾಮಿ ಜೊತೆ ಸೇರಿ ಸರ್ಕಾರದ ವಿರುದ್ಧ ಸಂಘಟಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದ್ದಾರೆ. ಈ ಜೋಡಿ, ಕೃಷ್ಣಾ ಮೇಲ್ದಂಡೆ ಯೋಜನೆಯ ಅಚ್ಚುಕಟ್ಟು ಪ್ರದೇಶ ಮತ್ತು ಕಾವೇರಿ ಕಣಿವೆ ಪ್ರದೇಶದಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಇದು ದೇವೆಗೌಡರ ವಿರುದ್ಧ ಸಮರ ಸಾರುವ ಮೊದಲ ಯತ್ನ ಇರಬಹುದೆ?

○

**(ಲಂಕೇಶ್ ಪತ್ರಿಕೆ : 19-7-1995)**

# ಏಕಾಂಗಿ

ಸತ್ಯ



ಯಾರು ವೈ.ಕೆ. ರಾಮಯ್ಯ ?

ಕುಣಿಗಲ್, ತುಮಕೂರು ಪ್ರದೇಶದ ಜನರಿಗೆ ವಕೀಲರೆಂದೂ ಸಾರ್ವಜನಿಕ ಕಾರ್ಯಕರ್ತರೆಂದೂ ಪರಿಚಯವಾಗಿದ್ದರು. ವಕೀಲಿ ಕಾಲದಲ್ಲೂ ನಿಷ್ಠುರ ನಡೆ ನುಡಿಗೆ ಹೆಸರು ಮಾಡಿದ್ದರು.

ಅವರ ಸಾರ್ವಜನಿಕ ಜೀವನಕ್ಕೆ ಪ್ರಚಾರ ಸಿಕ್ಕಿದ್ದು ರೇಷ್ಮೆ ಬೆಳೆಗಾರರ ಸಂಘಟನೆಯ ವಕ್ತಾರರಾಗಿ, ಕೇಂದ್ರ ಸರ್ಕಾರದ ರೇಷ್ಮೆ ಆಮದು ನೀತಿಯನ್ನು ಪ್ರತಿಭಟಿಸಿ ಆಂದೋಲನ ನಡೆಸಿದಾಗ, ಬೆಂಗಳೂರಿನ ಮುಖಂಡರು ಗ್ರಾಮೀಣ ಕರ್ನಾಟಕದ ದಕ್ಷಿಣ ಭಾಗದ ಈ ವ್ಯಕ್ತಿಯ ಪ್ರಾಮಾಣಿಕ ಕಳಕಳಿ ನಾಯಕತ್ವದ ಲಕ್ಷಣಗಳನ್ನು ಗುರುತಿಸಿದ್ದು ಆಗಲೇ. ಅದುವರೆಗೆ ರಾಮಯ್ಯ ಸಂಸ್ಥಾ ಕಾಂಗ್ರೆಸ್ ಪಕ್ಷದ ವ್ಯಕ್ತಿ ಅಷ್ಟೇ.

1983,1985ರಲ್ಲಿ ಕುಣಿಗಲ್ ಕ್ಷೇತ್ರದಲ್ಲಿ '' ಪಕ್ಷದ ಸಹಜ ಅಭ್ಯರ್ಥಿ'' ಗೆದ್ದರು. ಗಡುಸಾದ ಮಾತು, ಜನಪರ ಕಾಳಜಿ , ಜನರಿಂದ ಸಂಬಳ ಪಡೆದು ಜನರನ್ನೇ ಹೀನಾಯವಾಗಿ ಕಾಣುವ ನೌಕರಶಾಹಿಗೆ ಸಿಂಹಸ್ವಪ್ನದ ವ್ಯಕ್ತಿ. ಗೃಹಮಂಡಳಿ ಅಧ್ಯಕ್ಷರಾದರು, ನಂತರ ಮಂತ್ರಿಯಾದರು 1987 ರ ವೇಳೆಗೆ ವೈ.ಕೆ. ರಾಮಯ್ಯ ರಾಜ್ಯಮಟ್ಟದ ನಾಯಕರೇ.

1989ರ ನವಂಬರ್ ಚುನಾವಣೆಯಲ್ಲಿ ಜನತಾಪಕ್ಷ ಮತ್ತು ಜನತಾದಳಗಳ ಜಗಳದಲ್ಲಿ ಎರಡು ಪಕ್ಷಗಳು ನೆಲಕಚ್ಚಿದಾಗ ವೈ. ಕೆ. ರಾಮಯ್ಯನವರು ಸೋತರು. ಆದರೆ ರೈತಪರ, ಜನಪರ ಸಂಘರ್ಷವನ್ನು ಬಿಡಲಿಲ್ಲ. ಹೇಮಾವತಿ ನೀರಿಗಾಗಿ ನಡೆಯುತ್ತಿರುವ ಹೋರಾಟದ ನಾಯಕ.

○

**(ಕನ್ನಡ ಪ್ರಭ : 11-9-1994)**

# ಕುಣುಗಲು ರಾಮಯ್ಯ

**ಬಿ ಚಂದ್ರೇಗೌಡ**

ಮುದ್ದಣ್ಣ ಈಗಿನ ಮೇಷ್ಟ್ರುಗಳೊಂದಿಗೆ ತನ್ನ ಕಾಲದ ಮೇಷ್ಟ್ರ ಗುಣಗಳನ್ನು ತಾಳೆ ನೋಡುತ್ತಾ ಒಳಗಣ್ಣಾಗಿರುವ ಉಗ್ರಿ, ಇದೀಗ ತಾನೇ ವೈ.ಕೆ. ರಾಮಯ್ಯನ ಜೊತೆಯಿಂದ ಬಿಡಿಸಿಕೊಂಡು ಬಂದವನಂತೆ ಮುದ್ದುಮಾವ ನಮ್ಮ ಕುಣುಗುಲು ರಾಮಯ್ಯ ಜಂತಾದಳ ಬಿಟ್ಟು ಹೊರಟೋದಾ! ಎಂದ.

''ಯಾಕೋ?''

ಉಗ್ರಿ ಬಾಯಿ ಬಿಡುವ ಮುನ್ನವೇ ಮಧ್ಯ ಬಾಯಿ ಹಾಕಿದ ಅಮಾಸೆ, ''ದ್ಯಾವೇಗೌಡ್ರಿಗೂ ರಾಮಯ್ಯಂಗೂ ಭಾರಿ ಜಗಳವಾಗಿ ಹೊಡೆದಾಟಾಯ್ತಂತೆ'' ಎಂದ.

ಸೀರ ರಾಮಯ್ಯನ ಮೇಲಿನ ಅಭಿಮಾನದಿಂದ ''ರಾಮಯ್ಯ ಬಗ್ಗಲಿಲ್ಲ ಬಿಡು'' ಎಂದ. ಸಿಟ್ಟಾದ ಅಮಾಸೆ ''ದ್ಯಾವೆಗೌಡರು ಬಗ್ಗರೆ?'' ಎಂದ

ದ್ಯಾವೇಗೌಡರು ಆಳು ಜೋರಾಗಿರಬಹುದು ಕಂಡ್ಲ, ರಾಮಯ್ಯ ಸನ್ನೆಲಿ ಹ್ವಡಿತನೆ ಗೊತ್ತೆ?'' ಎಂದು ಮಾತಿಗೆ ಮಾತು ಬೆಳಸಿಕೊಂಡ ಸೀರ ಅಮಾಸೆಯರು ಜಗಳಕ್ಕೆ ಹತ್ತಿಕೊಂಡರು.

''ಸುಮ್ಮನಿರ್ರೋ ನಿಮ್ಮನೆ ಹಾಳಾಗ!'' ಎಂದು ಸುಮ್ಮನಿರಿಸಿದ ಉಗ್ರಿ ''ಈ ರಾಮಯ್ಯ ಯಾರು ಅಂತಿ ಮಾವ?'' ಅಂದ.

''ಕುಣುಗಲೆಮ್ಮೆಲ್ಲೆ''

''ಯೆಮ್ಮೆಲ್ಲೆಸರಿ. ಇಲ್ಲೇ ಬೆಳ್ಳೂರು ಹರದ್ನಳ್ಳಿಲೆಲ್ಲಾ ದಾಗುಟ್ರದ್ದಾ ನೋಡು ಬ್ಯಸಗರಳಿ ರಾಮಣ್ಣ ಅಂತ ........''

''ಊಕಣೇಳ್ಳ ಕತೆ ಪತೆ ಬರಿತಿದ್ದ''

ಮಧ್ಯೆ ಬಾಯಾಕಿದ ಅಮಾಸೆ ''ದಾಗುಟ್ರೂ ಕತೆ ಬರದರೆ?'' ಎಂದ.

''ಊ ಬರಿಯಕ್ಕುಲವೆ ?'' ಎಂದ ಉಗ್ರಿ. ಸೀರ ಇದಕ್ಕೆ ಸಾಕ್ಷಿಯೆಂಬಂತೆ, ''ಅದಕ್ಕೆ ಏನಪ್ಪ ಅವುನು ಇಂಜಿಸನ್ನು ಮಾತ್ರ ಕೊಡದ ಮರ್ರ್ತು ಕಷ್ಟಸುಖ ಕೇಳೋದು ?'' ಎಂದು ಇವತ್ತು ಸಿಕ್ಕ

ಸತ್ಯ ಸಂಗತಿಗೂ ವೈದ್ಯರ ಅಂದಿನ ನಡವಳಿಕೆಗೂ ಹೊಂದಿಸುತ್ತಾ ತನ್ನ ಒಣ ಕಣ್ಣುಗಳ ರೆಪ್ಪೆಯನ್ನು ಪಟಪಟನೆ ಆಡಿಸಿದ.

**"ಆ ದಾಗುಟ್ರುವೆ ಈ ರಾಮಯ್ಯನೂ ಸಡುಕ್ರಂತೆ!"**

**"ಸುಡುಕಲ್ಲ ಕಣೋ ನಂಟನಂತೆ!"**

**"ಸಡಕ ನಂಟಾಗದಿಲ್ವೆ ?"**

**"ಅಂದ್ಯಂಗಾಯ್ತನೆ ಅಣತಮ್ಮಾಗದಿಲ್ವೆ ?"**

ಈ ತರ್ಲೆ ವಿಷಯಾಂತರದಿಂದ ರೋಸಿದ ಉಗ್ರಿ "ಸಟಾಗೆ ನೀವು ಸುಮ್ಮನಿರತಿರ" ಎಂದ.

**"ಊ ಯೇಳಪ್ಪ ಆ ರಾಮಯ್ಯ ಯಾಕೆ ಜಂತಾದಳ ಬುಟ್ಟಾ?** ಅಂದ. "ಯಾಕೆ ಬುಟ್ಬಾ ಅಂದ್ರೆ ರಾಮಯ್ಯ ಒಂಥರಾ ಸಿಡಕ!"

**"ಅದವನು ಹುಟ್ಟಿದಾಗಲೇ ಬಂದಿದ್ದು ಇವತ್ತೇನು ಹ್ವಸದೆ?"**

**"ಅವನು ಓಟು ಕೇಳದು ನೋಡಿದ್ದಿಯಾ, ಕೊಟ್ರು ಕೊಡು ಇಲ್ದಿದ್ರೆ ಹೋಗಯ್ಯ, ನಿನಗೆ ದಮ್ಮಯ್ಯಾ ಅನ್ನಕ್ಕೆ ನಾನೇನು ಮಾಡಿದ್ದಿನಿ"** ಅಂತ ಹ್ವಂಟೋಯ್ತನಪ್ಪ

ಮೆಚ್ಚಿಕೊಂಡ ಮುದ್ದಣ್ಣ. **"ಅಂಗಿರಬೇಕು ಕಂಡ್ಲ ಆದೇ ಸರಿ. ನಮ್ಮೆಮ್ಮೆಲ್ಲೆ ನೋಡು ಗೊಳೋ ಅಂತ ಅತ್ತಗಂಡು ಕಾಲಿಗೆ ಬೀಳ್ತನೆ !?"**

**"ರಾಮಯ್ಯ ಅಂಗಿರದ್ಕೆ ಅವುನು ಜಂತಾದಳದಲ್ಲಿ ಇರಕ್ಕಾಗಲಿಲ್ಲ !?"**

**ಅಲ್ಲ ಕಂಡ್ಲ ಇಂತ ಜ್ಯನಲ್ಲ ಆ ಪಾರ್ಟಿ ಬುಟ್ರೆಯಂಗೇ ಅಂತ?"**

"ಅದೆಯಪ್ಪ ನಾನೂ ಯೋಚ್ನೆ ಮಾಡ್ತಾಯಿದ್ದಿನಿ. ಆ ಆಳುವ ಹೋಗಿ ಬಿ.ಜೆ.ಪಿ ಗೂಡಾರದಲ್ಲಿ ನಿಂತಗಂಡು, ನಮ್ಮ ದ್ಯಾವೇಗೌಡ್ರನ್ನ ಬೈತಾ ಅವುನೆ. ಈ ರಾಮಯ್ಯನೂ ದ್ಯಾವೇಗೌಡ್ರನ್ನೆ ಬೈತಾ ಅವುನೆ. ಒಕ್ಕಲಿಗರ ದ್ವಡ್ಡ ಜಾಥ ಆದೇಟಿಗೆ ದ್ಯಾವೇಗೌಡ್ರು ಸಣ್ಣ ಗಾಗ್ಯೋದ್ರು, ಏನೇ ಆಗ್ಲಿ ಮಾವ ದ್ಯಾವೇಗೌಡ್ರು ರಾಮಯ್ಯನ್ನ ಕಳಕಬಾರದಿತ್ತು?

○

**(ಲಂಕೇಶ್ ಪತ್ರಿಕೆ)**

## ಸಾಮಾಜಿಕ ಕನಸುಗಾರ

**ಬಾ ಹ ರಮಾಕುಮಾರಿ**

ತಮ್ಮ ಕ್ಷೇತ್ರದ ಜನರ ಒಳಿತಿಗಾಗಿ ಒಬ್ಬ ಜವಾಬ್ದಾರಿಯುತ ಜನಪ್ರತಿನಿಧಿಯಾಗಿ ಕಾರ್ಯಕ್ಷೇತ್ರವನ್ನು ಸಾಕಾರಗೊಳಿಸಿದ ವಿಶಿಷ್ಟ ರಾಜಕಾರಣಿಗಳಲ್ಲಿ ಒಬ್ಬರಾಗಿರುವ ಶ್ರೀಯುತ ವೈ ಕೆ ರಾಮಯ್ಯನವರ ಬಗ್ಗೆ ಬರೆಯುವುದಕ್ಕಿಂತ, ಅವರ ಕಾರ್ಯವೈಖರಿಯನ್ನು ನೋಡುವುದೇ ಹೆಚ್ಚು ಸೂಕ್ತ ಎಂದು ನನ್ನ ಭಾವನೆ. ಅವರ ವ್ಯಕ್ತಿತ್ವ, ರಾಜಕಾರಣ, ಕಾರ್ಯ ಶೈಲಿಗಳನ್ನು ಮಾತಿನಲ್ಲಿ ಅಳೆಯುವುದು, ವ್ಯಕ್ತಪಡಿಸುವುದು, ಅವರು ಮಾಡಿರುವ ಕೆಲಸಗಳನ್ನು ಮಂಕಾಗಿಸುತ್ತವೇನೋ ಎಂಬ ಅಳುಕು ನನಗಿದೆ. ಇತ್ತೀಚೆಗೆ ರಾಮಯ್ಯನವರು ಅಧಿಕಾರದ ಹಂಬಲವನ್ನು ಮೂಲೆಗೊತ್ತಿ, ರಾಜಕೀಯ ಮೌನಧರಿಸಿ ತಾವು ಆಯ್ಕೆಯಾದ ವಿಧಾನಸಭಾ ಕ್ಷೇತ್ರದಲ್ಲಿ ಕೈಗೊಂಡಿರುವ ಅಭಿವೃದ್ಧಿ ಕೆಲಸಗಳನ್ನು ಕಂಡಾಗ ಎಂಥವರಿಗೂ ಆಶ್ಚರ್ಯ ಉಂಟಾಗುತ್ತದೆ. ಆದರೆ ರಾಮಯ್ಯ ವರನ್ನು ಒಬ್ಬ ರಾಜಕಾರಣಿಯನ್ನಾಗಿ ನೋಡದೆ, ಜನಪರ ಮತ್ತು ಸಂವೇದನಾಶೀಲ ವ್ಯಕ್ತಿಯಾಗಿ ಬುದ್ಧಿಜೀವಿಗಳ ಸಾಲಿನಲ್ಲಿ ನೋಡುತ್ತ ಬರಲಾಗಿದೆ.

ಕೆಲವಾರು ವರ್ಷಗಳ ಹಿಂದೆ ನಾನು ಕೆಲಸಕ್ಕೆ ಸೇರಿದ ಹೊಸತು. ಕುಣಿಗಲ್‌ನಲ್ಲಿ ಆಹಾರ ನಿರೀಕ್ಷಕರ ಮೇಲೆ ಕೈಮಾಡುವ ಶಾಸಕರು, ಸರ್ಕಾರಿ ನೌಕರರನ್ನು ಬಾಯಿಗೆ ಬಂದಂತೆ ಬಯ್ಯುತ್ತಾರೆ ಎಂದೆಲ್ಲಾ ರಾಮಯ್ಯನವರ ಬಗ್ಗೆ ಹೇಳುತ್ತಿದ್ದರು. ಆ ಘಟನೆ ನಡೆದ ಸಂದರ್ಭದಲ್ಲಿ ನಾನೂ ಕೂಡ ಆಕ್ರೋಶಗೊಂಡಿದ್ದುಂಟು. ''ಸರ್ಕಾರಿ ನೌಕರರು ಎಂದರೆ ಗುಲಾಮರೇ, ಜೀತದಾಳುಗಳೇ, ಶಾಸಕರ ಕೆಲಸದಾಳುಗಳೇ'' ಎಂದೆಲ್ಲಾ ಹೇಳಿ ಸಿಟ್ಟು ತೀರಿಸಿಕೊಂಡಿದ್ದೆ. ಆಗ ಸಮಾಜವಾದದ ಕೆಲ ಕನಸುಗಳನ್ನು ಹೊತ್ತುಕೊಂಡು ಸರ್ಕಾರಿ ವ್ಯವಸ್ಥೆಯೊಳಗೆ ಒಬ್ಬ ನೌಕರಳಾಗಿ, ಇಲ್ಲಿಯೂ ಜನಪರ ಕೆಲಸಗಳನ್ನು ಮಾಡಬಹುದೆಂಬ ಅಮಿತ ಆಕಾಂಕ್ಷೆ ಹೊಂದಿದ್ದೆ. ನಂತರದಲ್ಲಿ ಬರಬರುತ್ತಾ ವ್ಯವಸ್ಥೆಯ ಕೊಳಕು ಮುಖಗಳ ಅರಿವು ಆಗುತ್ತಾ ಬಂತು. ಅಸಹಾಯಕ ಜನರ ಕಣ್ಣುಗಳ ಒಳಗಿನ ಆಕ್ರಂದನ ಅರ್ಥವಾದಂತೆಲ್ಲಾ, ರಾಮಯ್ಯನವರು ಈ ಜಡಗೊಂಡ ನೌಕರರಿಗೆ ಬಯ್ಯುವುದು ಸರಿ ಎನ್ನವುದು ನನ್ನ ಅನುಭವಕ್ಕೆ ಬರತೊಡಗಿತು.

ಅದುವರೆಗೂ ರಾಮಯ್ಯನವರ ಮೇಲೆ ಸಿಟ್ಟುಗೊಂಡಿದ್ದ ನಾನು ಅವರೊಳಗಿನ ಜನಪರ ಅಂತಃಕರಣ ಆಕ್ರೋಶವಾಗಿ ಸಿಡಿಯುವುದರ ಅರ್ಥವನ್ನು ಗ್ರಹಿಸಲಾರಂಭಿಸಿದೆ. ಹೀಗೆ ಒಂದು ಆದರ್ಶ ಮೌಲ್ಯವನ್ನು ಎತ್ತಿಹಿಡಿಯಲು, ಜನಪರ ಕೆಲಸಮಾಡಲು ವೈಚಾರಿಕ ವಾಗಿಯೂ ಜನರನಡುವೆ ಒಬ್ಬ ರಾಜಕಾರಣಿ ಸೂಕ್ಷ್ಮ ಸಂವೇದನಾಶೀಲ, ಕ್ರಿಯಾಶೀಲ

ಆಗದಿದ್ದರೆ ಆ ದೇಶವು ಸಾಂಸ್ಕೃತಿಕವಾಗಿ ದಿವಾಳಿಯಾಗುತ್ತದೆ. ದೇಶದ ಜನರ ಭವಿಷ್ಯತ್ತಿಗೆ ಶೂನ್ಯ ಆವರಿಸುತ್ತದೆ.

ಗ್ರಾಮೀಣಾಭಿವೃದ್ಧಿ ನೆಲೆಯಲ್ಲಿ ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ, ಗ್ರಾಮ ಸ್ವರಾಜ್ಯಗಳ ಪರಿಕಲ್ಪನೆಯನ್ನು ಜನರಿಗೆ ಅರ್ಥಮಾಡಿಸುವ, ಕಾರ್ಯಗತಗೊಳಿಸುವ ಉತ್ಸುಕತೆ ಇಂದಿನ ರಾಜಕೀಯಕ್ಕೆ ಅತ್ಯವಶ್ಯಕವೆಂದು ನನ್ನ ಆನಿಸಿಕೆ. ಗಾಂಧೀ ಚಿಂತನೆಯು ಇವತ್ತಿನ ನಮ್ಮ ಆದ್ಯತೆಯಾಗಬೇಕು. ಇವನ್ನೆಲ್ಲಾ ಆಲೋಚಿಸಿ ದೇಶದ ರಾಜಕಾರಣಕ್ಕೆ ಸುಸ್ಥಿತಿಯನ್ನು ತಂದುಕೊಡಲು ರಾಮಯ್ಯನವರಂತಹ ಕ್ರಿಯಾಶೀಲ ವ್ಯಕ್ತಿಗಳಿಂದ ಮಾತ್ರ ಸಾಧ್ಯ.

ತಮ್ಮ ವಿಚಾರವಾದವನ್ನು ಪ್ರತಿಪಾದಿಸುತ್ತಿದ್ದ ಜಿಲ್ಲೆಯ ಜನಪ್ರತಿನಿಧಿಗಳಲ್ಲಿ ಇಬ್ಬರು ಆಗ ನನ್ನ ಗಮನ ಸೆಳೆದಿದ್ದರು. ಅವರಲ್ಲಿ ಒಬ್ಬರು ರಾಮಯ್ಯನವರು. ವಿಚಿತ್ರವೆಂದರೆ ಅದುವರೆಗೂ ನಾನು ಇವರನ್ನು ನೋಡಿಯೇ ಇರಲಿಲ್ಲ. ಕೇವಲ ಅವರ ವಿಚಾರಪರತೆ, ಕಾರ್ಯ ವೈಖರಿಗಳನ್ನು ಪತ್ರಿಕೆಗಳ ಮೂಲಕ ಮಾತ್ರ ಅರಿತಿದ್ದೆ. ತೀರಾ ಇತ್ತೀಚಿಗೆ ಅವರನ್ನು ನೋಡಿ, ಅವರೊಂದಿಗೆ ಮಾತಾಡುವ ಅವಕಾಶವು ನನಗೆ ದೊರೆಯಿತು.

ರಾಜಕಾರಣ ಹಾಗೂ ರಾಜಕಾರಣಿಗಳ ಬಗ್ಗೆ ಅವಜ್ಞೆ ಬೆಳೆಸಿಕೊಂಡ ಬುದ್ಧಿಜೀವಿಗಳ ಮನೋಭಾವದಲ್ಲಿ ಬದಲಾವಣೆಯಾಗಿ, ರಾಮಯ್ಯನಂತಹವರನ್ನು ಗುರುತಿಸುವ, ಅವರಲ್ಲಿ ಇನ್ನಷ್ಟು ಜನಪರ ಚಿಂತನೆಗಳನ್ನು, ಹುಟ್ಟು ಹಾಕಿ, ಇವತ್ತಿನ ನಮ್ಮ ರಾಜಕೀಯ ಮತ್ತು ಸಾಮಾಜಿಕ ಸಮಸ್ಯಗಳಿಗೆ ಸಾಂತ್ವನ ಹೇಳುವ, ಪರಿಹಾರ ಸೂಚಿಸುವ ಕ್ರಿಯಯಲ್ಲಿ ಒಟ್ಟುಗೂಡಿ ನಿರಂತರ ಗುಣಾತ್ಮಕವಾಗಿ ಏನಾನ್ನಾದರೂ ಸಾಧಿಸಲು ಸಹಕಾರಿಯಾಗುತ್ತದೆ.

ಗ್ರಾಮೀಣ ಜನರ ಬದುಕಲ್ಲಿ ಬದುಕಾಗಿ, ನೆಲದ ಮಣ್ಣಿನ ವಾಸನೆ ಹೀರುತ್ತ, ಗಿಡಮರ ಬೆಳೆಸುತ್ತ ಹಸಿರಲ್ಲಿ ಹಸಿರಾಗುವ, ನೀರಾವರಿ ಹರಿಕಾರನಾಗಿ, ಸದಾ ಸಮೃದ್ಧ ಕರ್ನಾಟಕದ ಕನಸು ಕಾಣುತ್ತ ಬಂದಿರುವ ನಮ್ಮ ವಿರಳ ಜನಪ್ರತಿನಿಧಿಗಳಲ್ಲಿ ಒಬ್ಬರಾದ ರಾಮಯ್ಯನವರು ನಮ್ಮ ಜಿಲ್ಲೆ ಕಂಡ ಅಪರೂಪದ ರಾಜಕಾರಣಿ.

''ರಾಜಕೀಯದಲ್ಲಿ ವೈರ ಕಟ್ಟಿಕೊಳ್ಳಲಾರದವನು ಸ್ನೇಹಿತರನ್ನೂ ಪಡೆಯುವುದಿಲ್ಲ'' ಎಂಬ ಮಾತಿದೆ. ಅಂತ್ಹೇ ರಾಮಯ್ಯನವರಿಗೂ ಕೂಡ ವೈರಿಗಳೂ ಇದ್ದಾರೆ. ಇವರ ಜನಹಿತ ಕಾರ್ಯಕ್ರಮಗಳಿಗೆ ಹುಚ್ಚರಾಗುವಂತಹ ಅಭಿಮಾನಿ ಗಳೆಯರೂ ಇದ್ದಾರೆ. ಇವರ ಕೆಲಸಕಾರ್ಯಗಳನ್ನು ಕಂಡು ದೂರದಿಂದಲೇ ಅಭಿನಂದಿಸುವ ನನ್ನಂತಹ ಸಾರ್ವಜನಿಕರೂ ಇದ್ದಾರೆ. ಹಾಗೆ ಹಗೆತನಗಳ ನಡುವೆಯೂ, ವಿವಿಧ ರಾಜಕೀಯ ಪಟ್ಟು, ವರಸೆಗಳ ಆಚೆಯೂ ನಮ್ಮೊಳಗೆ ನೆಲೆ ನಿಲ್ಲುವ ಜನಹಿತಕಾರಿ ವ್ಯಕ್ತಿತ್ವದ ವೈ.ಕೆ.ಆರ್ ಅವರ ಆದರ್ಶಗಳು ಇಂದಿನ ಹೊಸ ಜನಾಂಗಕ್ಕೆ ಚೈತನ್ಯ ನೀಡಲಿ.

○

## ಹೃದಯ ಸಂಪನ್ನ

**ಪ್ರೊ. ಎಚ್ ಆರ್ ದಾಸೇಗೌಡ**

ನಾನು ರಾಮಯ್ಯ ಅವರನ್ನು ಪ್ರಥಮ ಭಾರಿಗೆ ಭೇಟಿಯಾದದ್ದು ಅವರು ಕರ್ನಾಟಕ ಗೃಹಮಂಡಲಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ. ನಾನಾಗ ಬೆಂಗಳೂರು ವಿಶ್ವವಿದ್ಯಾಲಯದ ಕಾಲೇಜು ಅಭಿವೃದ್ಧಿಮಂಡಲಿಯ ನಿರ್ದೇಶಕನಾಗಿ ಕಾರ್ಯನಿರ್ವಹಿಸುತ್ತಿದ್ದೆ. ವಿಶ್ವವಿದ್ಯಾಲಯ ದಲ್ಲಿ ಆಗ ಸೇವೆ ಸಲ್ಲಿಸುತ್ತಿದ್ದ ಸುಮಾರು 60-70 ವಿಶ್ವವಿದ್ಯಾಲಯದ ನೌಕರವರ್ಗ ಕೆಂಗೇರಿ ಉಪನಗರದಲ್ಲಿ ಗೃಹಮಂಡಲಿಯವರು ಕಡಿಮೆ ವರಮಾನಗಾರರಿಗಾಗಿ ನಿರ್ಮಿಸಿದ್ದ ಮನೆಗಳ ಅಲಾಟ್ ಮೆಂಟ್‌ಗಾಗಿ ಅರ್ಜಿಸಲ್ಲಿಸಿದ್ದರು.

ರಾಮಯ್ಯನವರಿಗೆ ಅವರ ಪರವಾಗಿ ಶಿಫಾರಸು ಮಾಡಲು ನನ್ನನ್ನು ಅವರಲ್ಲಿಗೆ ಕರೆದೊಯ್ದಿದ್ದರು. ನಾನು ವಿಶ್ವವಿದ್ಯಾಲಯದ ಓರ್ವ ಅಧಿಕಾರಿಯಾಗಿ ಮತ್ತು ವಿಶ್ವವಿದ್ಯಾಲಯ ನೌಕರರ ಗೃಹ ನಿರ್ಮಾಣ ಸಂಘದ ಪ್ರಥಮ ಅಧ್ಯಕ್ಷನಾಗಿ ನನ್ನ ಸಹೋದ್ಯೋಗಿಗಳಿಗೆ ಸಹಾಯವಾಗಬಹುದೆಂದು ಭಾವಿಸಿ ಅಲ್ಲಿನವರೆಗೆ ನನಗೆ ಅಪರಿಚಿತ ರಾಗಿದ್ದ ರಾಮಯ್ಯ ಅವರನ್ನು ಕಾಣಲು ಅವರ ಕಛೇರಿಗೆ ಹೋಗಿದ್ದೆ. ನಾನು ಅಲ್ಲಿಗೆ ಹೋಗಿದ್ದ ಕಾರ್ಯಭಾರವನ್ನು ಆಸ್ಥೆಯಿಂದ ಆಲಿಸಿದ ಶ್ರೀಯುತರು ತಕ್ಷಣ ತಮ್ಮ ಆಪ್ತಸಹಾಯಕಿಗೆ ಸಂಬಂಧಪಟ್ಟ ಇಂಜಿನಿಯರ್ ಮತ್ತು ಗುಮಾಸ್ತರನ್ನು ಕರೆಯಿಸಲು ತಿಳಿಸಿ, ಕ್ಷೇಮ ಸಮಾಚಾರಗಳನ್ನು ವಿನಿಮಯಮಾಡಿಕೊಳ್ಳ ತೊಡಗಿದರು. ಹೀಗೆ ಕೆಲವು ಗಳಿಗೆ ಲೋಕಾಭಿರಾಮವಾಗಿ ಮಾತುಕತೆಯಾಡಿದ ನಂತರ ಸಂಬಂಧಪಟ್ಟ ಗೃಹಮಂಡಲಿ ಅಧಿಕಾರಿಗಳು ಬಂದಾಗ ಅವರಿಗೆ ಸೂಕ್ತ ನಿರ್ದೇಶನಗಳನ್ನು ನೀಡಿ, ವಿಶ್ವವಿದ್ಯಾಲಯದ ನೌಕರವರ್ಗಕ್ಕೆ ಸಾಧ್ಯವಾದಷ್ಟು ಸಹಾಯ ಮಾಡುವುದಾಗಿ ತಿಳಿಸಿದರು. ಅದಾದ ಕೆಲವು ದಿನಗಳ ನಂತರ ನಮ್ಮ ಸಹೋದ್ಯೋಗಿಗಳು ಕೆಲವರು ತಮಗೆ ಮನೆಗಳು ಲಭ್ಯವಾಗಿರುವ ವಿಚಾರ ತಿಳಿಸಿದರು. ಕೊಟ್ಟ ಮಾತಿನಂತೆ ನಡೆದ ವೈ.ಕೆ.ರಾಮಯ್ಯ ಅವರ ಕಾರ್ಯದಕ್ಷತೆಯನ್ನು ಕಣ್ಣಾರೆಕಂಡ ನನಗೆ ಅವರ ಬಗ್ಗೆ ಅಪಾರವಾದ ಗೌರವವನ್ನುಂಟು ಮಾಡಿತು.

ಅದಾದನಂತರ ಅವರನ್ನು ನಾನು ಭೇಟಿಯಾದದ್ದು ಅವರು ಕರ್ನಾಟಕ ಸರ್ಕಾರದಲ್ಲಿ ಮಂತ್ರಿಗಳಾಗಿದ್ದಾಗ. ಸನ್ಮಿತ್ರರಾದ ಡಾ. ಕಾಳೇಗೌಡ ನಾಗವಾರ ಅವರು ಮತ್ತು ತುಮಕೂರು

ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾಗಿದ್ದ ಶ್ರೀಯುತ ಎಚ್. ನಿಂಗಯ್ಯ ಅವರೂ ಸೇರಿ ನನ್ನನ್ನು ರಾಮಯ್ಯನವರಲ್ಲಿಗೆ ಕರೆದೊಯ್ದು ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರ ಹುದ್ದೆಯನ್ನು ನಾನು ಪಡೆಯುವಂತೆ ತಮ್ಮ ಪ್ರಭಾವ ಬೀರಬೇಕೆಂದು ಅವರಲ್ಲಿ ವಿನಂತಿಸಿ ಕೊಂಡರು. ನನ್ನ ಅನುಭವ, ವಿದ್ಯಾರ್ಹತೆ ಮುಂತಾದ ವಿವರಗಳೆಲ್ಲವನ್ನು ತಿಳಿದುಕೊಂಡ ರಾಮಯ್ಯನವರು ತಪ್ಪದೆ ಪ್ರಯತ್ನಿಸುವುದಾಗಿ ತಿಳಿಸಿದರು. ಅದಾದ ಕೆಲವು ದಿನಗಳಲ್ಲಿ ರಾಮಯ್ಯನವರು ನನ್ನನ್ನು ಅವರ ಕಛೇರಿಗೆ ಬರಮಾಡಿಕೊಂಡು, ಅವರು ನನಗೆ ಸಹಾಯ ಮಾಡಲು ಕೈಗೊಂಡ ಎಲ್ಲಾ ಪ್ರಯತ್ನಗಳನ್ನು ತಿಳಿಸಿ ಶುಭ ಹಾರೈಸಿ ಬೀಳ್ಕೊಟ್ಟರು. ಅವರು ನನಗಾಗಿ ವಹಿಸಿದ ಆಸಕ್ತಿ ನನಗೆ ತುಂಬಾ ಸಂತಸವನ್ನುಂಟು ಮಾಡಿತ್ತು ಮತ್ತು ಅವರಲ್ಲಿ ನನಗಿದ್ದ ಗೌರವ ಇಮ್ಮಡಿಯಾಗಲು ಸಹಕರಿಸಿತು.

ರಾಮಯ್ಯನವರೊಂದಿಗಿನ ನನ್ನ ಸಂಬಂಧ ನಿಕಟವಾಗತೊಡಗಿ ಅವರ ಕಾರ್ಯ ಕ್ಷೇತ್ರದ ಬಗ್ಗೆ, ಅವರ ವೈಯ್ಯಕ್ತಿಕ ಬೆಳೆವಣಿಗೆಯ ಬಗೆಗೆ ಆಸಕ್ತಿವಹಿಸುವಂತೆ ಮಾಡಿತು. ಸ್ಥಿತ್ಯಂತರವನ್ನು ಹೊಂದುತ್ತಿದ್ದ ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ರಾಮಯ್ಯನವರ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಬಂದೆ. ರಾಜ್ಯದ ಹಿಂದುಳಿದವರ, ಬಡವರ ಭವಿಷ್ಯದ ಬಗೆಗೆ ಅವರ ಖಚಿತ ಅಭಿಪ್ರಾಯಗಳು ನನಗೆ ಮುದವನ್ನು ನೀಡುತ್ತಿದ್ದವು. ಸರ್ವರ ಏಳ್ಗೆಗಾಗಿ ದುಡಿಯುವ ಅವರ ಸಂಕಲ್ಪ ಅವರ ಹೃದಯಸಂಪನ್ನತೆಯನ್ನು ಎತ್ತಿ ತೋರುತ್ತಿದ್ದವು. ನವಸಮಾಜ ನಿರ್ಮಾಣ ಮಾಡಲು ಅವರು ಕಂಡ ಕನಸುಗಳು ಅನಂತ. ಅವುಗಳಲ್ಲಿ ಕೆಲವನ್ನಾದರೂ ತಮ್ಮ ಜೀವಿತದ ಅವಧಿಯಲ್ಲಿ ನನಸಾಗಿಸಬೇಕೆನ್ನುವ ಅವರಲ್ಲಿನ ಅಪರೂಪದ ಹಠ ಮತ್ತು ಹೋರಾಟದ ಮನೋಭಾವ ನನಗೆ ಮೆಚ್ಚುಗೆಯಾಯಿತು. ಸಾರ್ವಜನಿಕವಾಗಿ ಸಾಮಾನ್ಯರ ಪ್ರಗತಿಗಾಗಿ ದುಡಿಯುವ ಅವರ ಯೋಜನೆಗಳಿಗೆ ಅಡ್ಡ ಬರುವ ಎಲ್ಲಾ ಎಡರು-ತೊಡರುಗಳನ್ನು ಅಪಾರ ಸಹನೆ ಮತ್ತು ಧೈರ್ಯದಿಂದ ಎದುರಿಸಿ ಮುನ್ನುಗ್ಗುವ ಅವರ ಸಾಹಸಗುಣ ಹಾಗೂ ಕಾರ್ಯಸಾಧನೆಯಲ್ಲಿ ತೋರುವ ಸೂಕ್ಷ್ಮತೆಗಳು ನನಗೆ ನಿರಂತರವಾಗಿ ಅವರ ಬಗ್ಗೆ ಗೌರವ ಇಮ್ಮಡಿಯಾಗುವಂತೆ ಮಾಡಿದವು. ನಾನು ಸ್ವಇಚ್ಛೆಯಿಂದ ನನ್ನ ವಿಶ್ವವಿದ್ಯಾನಿಲಯದ ಪದವಿಗೆ ರಾಜಿನಾಮೇ ನೀಡಿ, ನಾಡಿನ ಧೀಮಂತ ರಾಜಕಾರಣಿ ಯಾಗಿರುವ ಶ್ರೀ ಹೆಚ್.ಡಿ. ದೇವೇಗೌಡರು ಸ್ಥಾಪಿಸಿದ ಜನತಾಪಕ್ಷದಲ್ಲಿ ಪ್ರಚಾರ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವಾಗ ರಾಮಯ್ಯ ಅವರ ಸೇವಾಮನೋಭಾವ ಮತ್ತು ಆದರ್ಶದ ಗುಣಗಳನ್ನು ಹತ್ತಿರದಿಂದ ಕಂಡೆ.

ದೇವೇಗೌಡರು ಹೊಸ ಪಕ್ಷವನ್ನು ಕಟ್ಟುವಲ್ಲಿ ರಾಮಯ್ಯ ಅವರು ತಮ್ಮೆಲ್ಲ ಶಕ್ತಿಯನ್ನು ಹಗಲಿರುಳು ಎನ್ನದೆ ವ್ಯಯಿಸಿ ನಾಯಕನ ಕೀರ್ತಿಗೆ ಮೆರುಗು ತಂದುಕೊಟ್ಟರು. ಅವರ

ದಣಿವರಿಯದೆ ದುಡಿಯುವ ಕ್ರಮವನ್ನು ನೋಡುತ್ತಿದ್ದ ನನಗೆ ರೋಮಾಂಚನವಾಗುತ್ತಿತ್ತು. ತುಮಕೂರು ಜಿಲ್ಲೆಯ ಪ್ರಸುತ್ತ ರಾಜಕಾರಣಿಗಳಲ್ಲಿ ಎತ್ತರದ ವ್ಯಕ್ತಿತ್ವವುಳ್ಳವರು ರಾಮಯ್ಯನವರು ಮಾತ್ರ ಎಂಬುದು ನನ್ನ ನಂಬಿಕೆ. ತಮ್ಮ ಎತ್ತರದ ವ್ಯಕ್ತಿತ್ವದ ಜೊತೆ ಜೊತೆಯಲ್ಲಿಯೇ ರಾಮಯ್ಯನವರು ಜನತಾ ಜನಾರ್ದನರ ಸೇವೆಯನ್ನೇ ತಮ್ಮ ಜೀವನದ ಮುಖ್ಯ ಧ್ಯೇಯವನ್ನಾಗಿ ಪರಿಗಣಿಸಿ ಅದರ ಅನುಷ್ಠಾನಕ್ಕಾಗಿ ಸತತ ದುಡಿಯುತ್ತಿದ್ದಾರೆ. ಹುಲಿಯಾರುದುರ್ಗ ಕ್ಷೇತ್ರದ ಶಾಸಕರಾಗಿ ಒಟ್ಟಾರೆ ಜಿಲ್ಲೆಯ ಪ್ರಗತಿಗೆ ದುಡಿಯುತ್ತಿದ್ದಾರೆ. ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಕೃಷಿಗಾಗಿ, ತುಮಕೂರು ನಗರಕ್ಕೆ ಕುಡಿಯುವ ನೀರು ಸರಬರಾಜು ಮಾಡವುದರಲ್ಲಿ ಅವರ ಶ್ರಮ ಚರಿತ್ರಾರ್ಹವಾದುದಾಗಿದೆ.

○



# ದಣಿವರಿಯದ ಹೋರಾಟಗಾರ

**ಕೆ ಎಚ್ ವೆಂಕಟೇಶ್**

ವಿದ್ಯಾರ್ಥಿ ದಿಸೆಯಿಂದಲೂ ಸಾಮಾಜಿಕ ನ್ಯಾಯ ಹಾಗೂ ಸಾಂಸ್ಕೃತಿಕ ಚಟುವಟಿಕೆ ಗಳಿಗಾಗಿ ಹುಟ್ಟು ಹೋರಾಟಗಾರರಾಗಿ ಹೋರಾಡಿದ ರಾಮಯ್ಯನವರು ಬಡತನ, ಅನಕ್ಷರತೆ, ಅಜ್ಞಾನ, ಅನ್ಯಾಯ, ಅಸಮಾನತೆ, ದಬ್ಬಾಳಿಕೆ ಇವುಗಳ ವಿರುದ್ಧ ಕುಪಿತಗೊಂಡವರು. ದೀನ- ದಲಿತರ, ಬಡವರ, ಅಲ್ಪಸಂಖ್ಯಾತರ, ಹಿಂದುಳಿದ ವರ್ಗಗಳ, ಭೂಹೀನ ರೈತರ, ಕೃಷಿ ಕಾರ್ಮಿಕರ, ಮಹಿಳೆಯರ ದೈನಂದಿನ ಕಡು ಕಷ್ಟಗಳನ್ನು, ಸಮಸ್ಯೆಗಳನ್ನು ಅತ್ಯಂತ ಮಾನವೀಯ ದೃಷ್ಟಿಯಿಂದ ನೋಡಿ ಅವರ ಭಾವನೆಗಳಿಗೆ ಸ್ಪಂದಿಸಿದವರು. ಅನಕ್ಷರಸ್ಥ ರೈತರಿಗೆ ನ್ಯಾಯವನ್ನು ದೊರಕಿಸಿಕೊಡುವ ಮುಂಚೂಣಿಯಲ್ಲಿ ರಾಮಯ್ಯನವರು ಕಂಕಣ ಕಟ್ಟಿ ನಿಂತರು. ಇವರು ತಮ್ಮ ವಕೀಲಿ ವೃತ್ತಿಯ ಜೊತೆಗೆ ಸಾರ್ವಜನಿಕ ಕ್ಷೇತ್ರವನ್ನು ತಮ್ಮ ಸೇವೆಯ ರಂಗವನ್ನಾಗಿ ಮಾಡಿಕೊಂಡರು. ಹಲವಾರು ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಾ ಜನತೆಯ ಗಮನ ಸೆಳೆದವರು.

ರಾಮಯ್ಯನವರು ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿದ್ದಾಗಲೇ ಸರ್ಕಾರದ ಮೇಲೆ ಹೋರಾಟ ನಡೆಸಿ ಕೆ.ಜಿ.ಗೆ. ಐದು ರೂಪಾಯಿ ಬೋನಸ್ ಬರುವಂತೆ ಮಾಡಿದ್ದರು. ತಾವು ಮಂತ್ರಿಯಾದ ಕೂಡಲೇ ಮತ್ತೆ ಐದು ರೂಪಾಯಿಗಳ ಬೋನಸ್ಸನ್ನು ವಿಧಾನಸಭೆಯಲ್ಲಿ ಘೋಷಿಸಿದರು . ರೇಷ್ಮೆಗಾಗಿ, ನೀರಿಗಾಗಿ, ನೆರಳಿಗಾಗಿ ಹೋರಾಡಿದ ವೈ.ಕೆ. ಆರ್ ಅವರ ದೇಹ ಇಂದು ಬಳಲಿದೆ. ಆದರೆ ಅವರ ಛಲ, ಹಠ, ಜನತೆಗೆ ಒಳ್ಳೆಯದು ಮಾಡಬೇಕೆಂಬ ಉತ್ಸಾಹ ಮಾತ್ರ ಸದಾ ಹಸಿರಾಗಿದೆ. ಹುಲಿಯೂರುದುರ್ಗದ ಕ್ಷೇತ್ರ ವೈ.ಕೆ. ಆರ್. ಸೇವೆಯ ಸ್ಪರ್ಶದಿಂದ ಮತ್ತಷ್ಟು ಅಭಿವೃದ್ಧಿಯ ಕಡೆಗೆ ಚಲಿಸುವ ದಿನಗಳು ಬಂದಿರುವುದು ನಮ್ಮೆಲ್ಲರ ಅದೃಷ್ಟ.

ರಾಮಯ್ಯನವರ ಮಾತುಗಳನ್ನು ಹೀಗೆ ಕೇಳಿದ ಹಿರಿಯ ರಾಜಕಾರಣಿ ದಿವಂಗತ ಬಿ. ಬಸವಲಿಂಗಪ್ಪ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತ ಪಡಿಸುತ್ತಾರೆ. **ಮಾನ್ಯ ರಾಮಯ್ಯನವರು ಮಾತನಾಡತಕ್ಕ ಶೈಲಿ, ಆವೇಶ, ಗುರಿ, ರೈತರ ಬಗೆಗಿನ ಕಳಕಳಿ ನೋಡಿದರೆ ನಮಗೂ ಕುಣಿಯುವ ಹಾಗೆ ಆಗುತ್ತದೆ.**

ವೈ. ಕೆ. ರಾಮಯ್ಯನವರು ಸಿಟ್ಟಿನ, ಸಿಡುಕಿನ, ಮುಂಗೋಪಿ ಮನುಷ್ಯ ಎಂದು ಕೆಲವು ಜನ ಹೇಳುತ್ತಾರೆ . ಇವರ ಸಿಟ್ಟು ಯಾರ ಮೇಲೆ? ದುರ್ಬಲರ ಮೇಲೆ ಅಲ್ಲ. ಅಸಹಾಯಕರ

ಮೇಲೆ ಅಲ್ಲ. ಇವರ ಸಿಟ್ಟು ಇರುವುದು ಮುಖ್ಯವಾಗಿ ಲಂಚಕೋರರ ಮೇಲೆ. ಮೋಸಗಾರರ ಮೇಲೆ. ಹಾಗಾಗಿ ರಾಮಯ್ಯವರು ಖಂಡಿತವಾದಿಗಳೆನಿಸಿಕೊಂಡಿದ್ದಾರೆ. ನೇರವಾದಿಗಳಿಗೆ ಸಿಟ್ಟು ಸೆಡವು ಸಹಜ. ಆದರೆ ಅವಕಾಶವಾದಿಗಳಿಗೆ ಈ ನೇರತನ ಹಿಡಿಸದು. ಅಂತಹ ಶತ್ರುಗಳು ರಾಮಯ್ಯನವರ ವ್ಯಕ್ತಿತ್ವದ ಬಗ್ಗೆ ವ್ಯವಸ್ಥಿತವಾಗಿ ಹಬ್ಬಿಸಿದ ಕಥೆ ಇದು. ರಾಮಯ್ಯನವರು ತಮ್ಮ ಬಳಿ ಬಂದವರಿಗೆ 'ಈ ಕೆಲಸ ಆಗುತ್ತೆ, ಈ ಕೆಲಸ ಆಗಲ್ಲ' ಎಂದು ನೇರವಾಗಿ ಹೇಳುತ್ತಾರೆ. ಆದರೆ ಹೀಗೆ ಹೇಳುವುದು ಆ ಜನಕ್ಕೆ ಹಿಡಿಸದು. ಅವಕಾಶವಾದಿಗಳು ಹೇಳುವ ಹಾಗೆ , ಕೆಲಸ ಆಗದೆ ಇದ್ದರೂ ಆಗುತ್ತದೆಂದು ರಾಮಯ್ಯನವರು ಎಂದೂ ಹೇಳುವುದಿಲ್ಲ.

ರಾಮಯ್ಯನವರ ಕೋಪ ಸಾತ್ವಿಕವಾದದ್ದು. ಅವರದು ಸಾಮಾಜಿಕ ಅನ್ಯಾಯ ಹಾಗೂ ಅಸಮಾನತೆಗಳ ವಿರುದ್ಧ ಕೆಂಡಕಾರುವ ಕೋಪವೇ ಹೊರತು, ವ್ಯಕ್ತಿಗಳ ಮೇಲೆ ದ್ವೇಷ ತೀರಿಸಿಕೊಳ್ಳುವ ಸೇಡಲ್ಲ. ಹಾಗೆ ನೋಡಿದರೆ ರಾಮಯ್ಯನವರು ಒಬ್ಬ ಮಗುವಿನಂತಹ ಮನುಷ್ಯ.

ವೈ.ಕೆ. ರಾಮಯ್ಯನವರು ಬರೀ ವಕೀಲರು, ಶಾಸಕರು, ಮಂತ್ರಿಗಳು ಮಾತ್ರವಲ್ಲ; ಅವರೊಬ್ಬ ಮುಖ್ಯ ಲೇಖಕರೂ ಹೌದು. ತಮ್ಮ ಅನೇಕ ವರ್ಷಗಳ ಅನುಭವ, ಅಧ್ಯಯನ ಹಾಗೂ ತಾವು ನಡೆಸಿದ ಪ್ರಯೋಗಗಳಿಂದ ಒಂದು ಪುಸ್ತಕವನ್ನು ಬರೆದಿದ್ದಾರೆ. ಆ ಪುಸ್ತಕದ ಹೆಸರು **ನಾನು ಮತ್ತು ರೇಷ್ಮೆ** ಎಂದು.

ರಾಜಕೀಯ ಕ್ಷೇತ್ರದಲ್ಲಿ ನಾಯಕತ್ವ ವಹಿಸುವುದರಿಂದ ಮಾತ್ರ ಶಾಸನಗಳನ್ನು, ಕಾಯಿದೆಗಳನ್ನು ಸಮಾಜದ ಪ್ರಗತಿಗಾಗಿ, ಒಳಿತಿಗಾಗಿ ಅನುಷ್ಠಾನಕ್ಕೆ ತರಬಹುದು ಅನ್ನಿಸಿದರಿಂದ ವೈ.ಕೆ. ಆರ್ ಅವರು ರಾಜಕೀಯ ರಂಗಕ್ಕೆ ಪ್ರವೇಶ ಮಾಡಿದರು . ಮಂತ್ರಿಗಳಾಗಿ ವೈ.ಕೆ.ಆರ್ ತುಮಕೂರು ಜಿಲ್ಲೆಗೆ ಮಾಡಿದ ಸೇವೆ, ಪ್ರಗತಿಪರ ಕಾರ್ಯಕ್ರಮಗಳು ಇಂದಿಗೂ ಜನತೆಯ ಮನದಿಂದ ಮಾಸಿಲ್ಲ.

ಗೂಡು ಮಾರುಕಟ್ಟೆಯ ಲೋಪದೋಷಗಳನ್ನು ಅರ್ಥಮಾಡಿಕೊಳ್ಳಲು ರಾಮಯ್ಯ ನೇರವಾಗಿ ರಾಮನಗರದ ಮಾರ್ಕೆಟಿಗೆ ನಡೆದರು. ಆದರೆ ಮಂತ್ರಿಯಾಗಿ ಕಾರಿನಲ್ಲಿ ಹೋಗಲಿಲ್ಲ. ಒಬ್ಬ ಅಪ್ಪಟ ಹಳ್ಳಿಯ ರೈತನಂತೆ ಪಂಚೆಹಾಕಿ, ತಲೆಗೆ ಟವಲ್ ಸುತ್ತಿ, ಗೂಡು ತಂದ ರೈತನಂತೆ, ಯಾರಿಗೂ ಗೊತ್ತಿಲ್ಲದ ಹಾಗೆ ಹೋದರು. ಮಾರುವೇಷದ ರಾಮಯ್ಯನವರನ್ನು ಯಾರೂ ಗುರುತಿಸಲಿಲ್ಲ. ರಾಮಯ್ಯ ಅಲ್ಲಿ ನಡೆಯುವ ಅಧಿಕಾರಿಗಳ ದವಲತ್ತು, ದಳ್ಳಾಳಿಗಾರರ ಮೋಸ, ಇದರಿಂದ ರೈತನಿಗಾಗುವ ಅನ್ಯಾಯವನ್ನು ಸ್ವತಃ ಕಂಡು ದುಃಖ ಪಟ್ಟರು. ಅವರಿಗೆ ಎಲ್ಲಿಲ್ಲದ ಸಿಟ್ಟು ಬಂತು. ಅಲ್ಲಿದ್ದ ದುಷ್ಟ ಅಧಿಕಾರಿಗಳನ್ನು ಕೆಲಸದಿಂದ ತೆಗೆದು, ದಳ್ಳಾಳಿಗಳಿಗೆ ಎಚ್ಚರಿಕೆ ಕೊಟ್ಟರು. ಮಾರನೆಯ ದಿನದಿಂದಲೇ ಎಲ್ಲ ವ್ಯವಸ್ಥೆಯೂ ಸರಿಹೋಯಿತು, ಬಡರೈತ ಬದುಕಿದ. ಇದೇ ರೀತಿಯ ತಪಾಸಣೆ ಕೆಲಸವನ್ನು ರಾಜ್ಯದ ಪ್ರತಿ ಮಾರುಕಟ್ಟೆಯಲ್ಲೂ ಮಾಡಿದರು. ಇವರು ಅಧಿಕಾರ

ತೆಗೆದುಕೊಂಡ ಮೂರೇ ತಿಂಗಳಲ್ಲಿ ಇದೇ ಇಲಾಖೆಯ ಭ್ರಷ್ಟರು ಗಡಗಡ ನಡುಗಿದರು. ರಾಮಯ್ಯನವರ ಆಸಕ್ತಿಯಿಂದ ವ್ಯವಸ್ಥೆ ಸರಿಹೋಯಿತು. ರೈತರು ನೆಮ್ಮದಿಯ ನಿಟ್ಟುಸಿರು ಬಿಟ್ಟರು.

ಇಷ್ಟೆಲ್ಲಾ ಆದರೂ ರೈತನಿಗೆ ಸರಿಯಾದ ಬೆಲೆ ಸಿಗುತ್ತಿರಲಿಲ್ಲ. ಅದರಲ್ಲೂ ಹಿತ್ತನೆ ಗೂಡು ಬೆಳೆಯುವ ರೈತನ ಪಾಡಂತೂ ಹೇಳತೀರದಂತಾಗಿತ್ತು. ದಿನಕ್ಕೊಂದು ಬೆಲೆ, ದಿನಕ್ಕೊಂದು ಹರಾಜು, ಇದನ್ನು ಗಮನಿಸಿದ್ದ ರಾಮಯ್ಯನವರು ಕೆ.ಜಿ.ಗೆ ಐದು ರೂಪಾಯಿ ಬೋನಸ್ ಬರುವಂತೆ ಮಾಡಿದರು. ಇದನ್ನು ಸಹಿಸದ ಕೆಲವರು ಹೀಗೆ ಬೋನಸ್ ಕೊಡುವುದು ಸರಿಯಲ್ಲ ಎಂದು ತಕರಾರು ತೆಗೆದರು. ಹಾಗೇನಾದರೂ ಬೋನಸ್ ನಿಲ್ಲಿಸಿದರೆ ರಾಜೀನಾಮೆ ನೀಡುತ್ತೇನೆ ಎಂದು ಗುಡುಗಿದರು. ರೇಷ್ಮೆ ಬೆಳೆಗಾರರ ಒಳ್ಳೆಯದಕ್ಕಾಗಿ ಅನೇಕರ ಜೊತೆ ಇವರು ಜಗಳವಾಡಿದ್ದೂ ಉಂಟು. ಸರ್ಕಾರದಲ್ಲಿ ಕೆಲವರು ಇವರನ್ನು 'ಜಗಳಗಂಟಿ' ಎಂದು ಕರೆದದ್ದೂ ಉಂಟು. ಆದರೆ ಜನಕ್ಕೆ ಒಳ್ಳೆಯದಾಗುವುದಾದರೆ ನಾನು ಯಾವ ದೂಷಣೆಗೂ ಸಿದ್ಧ ಎಂದೇ ವೈ.ಕೆ. ಆರ್ ಸಾರಿದರು.

ರಾಮಯ್ಯನವರು ಜನರನ್ನು ತಮ್ಮ ಹಿಂದೆ ಕರದುಕೊಂಡು ಹೊರಟರು. ಹೇಮಾವತಿ ನಾಲಾ ಕಚೇರಿಗಳನ್ನೂ ಬಂದ್ ಮಾಡಿ, **ನೀರು ಕೊಡುವವರೆಗೆ ಕಛೇರಿಗೆ ಬೀಗ** ಎಂದು ಘೋಷಿಸಿದರು. ರಸ್ತೆಗೆ ಕೋಟೆಯಂಥ ಭದ್ರ ಗೋಡೆ ನಿರ್ಮಿಸಿ **ಮೊದಲು ನೀರು ನಂತರ ದಾರಿ** ಎಂದರು. ಈ ಹೋರಾಟ ಉಗ್ರರೂಪಕ್ಕೆ ತಿರುಗಿದ ಮೇಲೆ ಸರ್ಕಾರ ವೈ.ಕೆ. ಆರ್ ಅವರನ್ನು ಬಂಧಿಸಿ ಜೈಲಿನಲ್ಲಿ ಇಟ್ಟಿತು. ವೈ. ಕೆ. ಆರ್ ಜಾಮೀನು ನಿರಾಕರಿಸಿ **ನೀರು ಹರಿಯುವವರೆಗೆ ಜೈಲಿನಲ್ಲೇ** ಎಂದು ಘೋಷಿಸಿದರು. ಹೇಮಾವತಿ, ಕಾವೇರಿ ನೀರಿಗಾಗಿ ಮತ್ತು ರೇಷ್ಮೆಗಾಗಿ ಅವರು ಇಂಥ ಎಷ್ಟೋ ಹೋರಾಟಗಳನ್ನು ಮಾಡಿದರು. ಅಧಿಕಾರ ಬಂದಾಗ ಹಿಗ್ಗಲಿಲ್ಲ, ಅಧಿಕಾರ ಹೋದಾಗ ಕುಗ್ಗಲಿಲ್ಲ. ಕುಣಿಗಲ್‌ಗೆ ಇದೀಗ ಹೇಮಾವತಿ ಬರತೊಡಗಿದ್ದಾಳೆ. ಮಾರ್ಕೋನಹಳ್ಳಿ ಜಲಾಶಯಕ್ಕೆ ಹೇಮಾವತಿ ಹರಿದು ಬಂತು.

ಕರ್ನಾಟಕದಲ್ಲಿ ಹುಟ್ಟುವ ಕಾವೇರಿ ನೀರು ತಮಿಳುನಾಡಿನ ರೈತರ ಗದ್ದೆಗಳಿಗೆ ನೀರುಣಿಸುತ್ತದೆ. ಮಲೆನಾಡಿನ ತುಂಗಭದ್ರಾ ನೀರು ಆಂಧ್ರದ ಬಯಲು ಸೀಮೆಗಳಿಗೆ ನೀರುಣಿಸುತ್ತದೆ. ಹಾಗಾದರೆ ನಮ್ಮ ಪಕ್ಕದ ಜಿಲ್ಲೆಯಾದ ಹಾಸನದಲ್ಲಿ ಹುಟ್ಟುವ ಹೇಮಾವತಿ ತುಮಕೂರು ಜಿಲ್ಲೆಗೆ ಯಾಕೆ ಹರಿಯಬಾರದು ? ಇದು ವೈ.ಕೆ. ಆರ್ ಅವರ ಮೂಲಭೂತವಾದ ಪ್ರಶ್ನೆ. ಈ ಹೋರಾಟಕ್ಕೆ ನಿಸ್ವಾರ್ಥ ಹಾಗೂ ಪ್ರಾಮಾಣಿಕ ಮನುಷ್ಯನೊಬ್ಬನ ನಾಯಕತ್ವ ಅಗತ್ಯವಿತ್ತು. ಆ ನಾಯಕತ್ವವನ್ನು ವೈ. ಕೆ. ಆರ್ ವಹಿಸಿಕೊಂಡರು. ಚುನಾವಣೆಯಲ್ಲಿ ಗೆಲ್ಲಲಿ, ಸೋಲಲಿ ಜನರಿಂದ ಅವರು ದೂರ ಹೋಗಲಿಲ್ಲ. ಹೇಮಾವತಿಯನ್ನು ಒಂದು ಮಂತ್ರವೆಂಬಂತೆ ಜಪಿಸಿದರು. ವಿಧಾನಸಭೆಯಲ್ಲಿ ಗುಡುಗಿದರು. ಸಾರ್ವಜನಿಕ ಹೋರಾಟಗಳನ್ನು ಮಾಡಿದರು.

ವೈ.ಕೆ. ಆರ್ ಅವರು ಶಾಸಕರಾಗಿ ವಿಧಾನ ಸಭೆಯಲ್ಲಿ ಎಂದೂ ಸುಮ್ಮನೆ ಕೂರಲಿಲ್ಲ. ಸ್ವಾರ್ಥಕ್ಕಾಗಿ ಕೂಗಾಡಲಿಲ್ಲ. ತಮ್ಮ ಅನುಭವದ ಮಾತುಗಳಿಂದ ತರ್ಕಬದ್ಧ ಉದಾಹರಣೆ ಗಳಿಂದ, ಸೈದ್ಧಾಂತಿಕವಾದ ವಿಚಾರಗಳಿಂದ, ನೆಪಿನಲ್ಲಿ ಉಳಿಯುವಂಥ ಭಾಷಣಗಳನ್ನು ಮಾಡಿದರು. ವೈ. ಕೆ. ರಾಮಯ್ಯನವರು ಮಾತನಾಡುತ್ತಾರೆಂದರೆ ಇಡೀ ಸಭೆ ಗಂಭೀರವಾಗಿ ಆಲಿಸುತ್ತಿತ್ತು. ಅವರು ಮಾತನಾಡಿದರೆ ಜನರ ಬಗೆಗಿನ ಕಾಳಜಿಯಿಂದ, ರೈತರ ಬಗೆಗಿನ ಪ್ರೀತಿಯಿಂದ ಮಾತನಾಡುತ್ತಾರೆ ಎಂಬುದು ಎಲ್ಲರಿಗೂ ಗೊತ್ತು.

ಆಳುವ ಪಕ್ಷದ ಶಾಸಕರಾಗಿದ್ದಾಗಲೂ ಯಾವುದೇ ಮುಲಾಜಿಲ್ಲದೆ ಸಮಸ್ಯೆಗಳ ವಾಸ್ತವಾಂಶವನ್ನು ಬಿಡಿಸುವ ಜಾಯಮಾನ ಅವರದು. ರಾಮಯ್ಯನವರು ಕೇವಲ ಮಾತುಗಾರರಷ್ಟೇ ಅಲ್ಲ, ಕಡ್ಡಿ ಮುರಿದಂತೆ ನೇರ ಅಭಿಪ್ರಾಯವನ್ನು ವ್ಯಕ್ತಪಡಿಸುವವರು. ವಿರೋಧ ಪಕ್ಷದ ಸದಸ್ಯರು ಅಥವಾ ಆಡಳಿತ ಮಾಡುತ್ತಿರುವ ನಾವು ಈ ಜನರ ಹಿತವನ್ನು ರಕ್ಷಣೆ ಮಾಡುವುದರಲ್ಲಿ, ಒಣಗಿದ ಪೈರಿಗೆ ನೀರನ್ನು ಕುಡಿಸುವದರಲ್ಲಿ ಹಿಂದೆ ಬಿದ್ದಲ್ಲಿ ಈ ರಾಜ್ಯದ ಜನ ಎಚ್ಚೆತ್ತುಕೊಳ್ಳಬೇಕಾಗುತ್ತದೆ. ಅವರು ರಾಜ್ಯಸರ್ಕಾರದ ಮೇಲೆ, ಕೇಂದ್ರ್ರದ ಮೇಲೆ, ಜಿಲ್ಲಾ ಪರಿಷತ್ತುಗಳ ಮೇಲೆ, ಎಂ.ಎಲ್.ಎ ಗಳ ಮೇಲೆ ತಿರುಗಿ ಬೀಳುವ ಪರಿಸ್ಥಿತಿಯನ್ನು ನೋಡಬೇಕಾಗುತ್ತದೆ. ಈ ರಾಜ್ಯದ ಹಿತವನ್ನು ಕಾಪಾಡುವುದಾದರೆ, ಕಾವೇರಿ ಕೊಳ್ಳದ ಜನ ರೊಚ್ಚಿಗೆದ್ದಾರು. ಎಂದು ಸದನದ ಮೂಲಕ ಎಚ್ಚರಿಸಿದರು. ರೈತನ ಬಗ್ಗೆನಮಗೆ ಅನುಕಂಪವಿದ್ದರೆ ಒಳ್ಳೆಯ ಕೆಲಸಮಾಡಿ. ಓಟಿಗಾಗಿ ನೀವು ತಪ್ಪು ತೀರ್ಮಾನ ತೆಗೆದುಕೊಳ್ಳದೆ ರಾಜ್ಯದ ಜನತೆಯ ಹಿತವನ್ನು ಕಾಪಾಡಲಿಕ್ಕೆ ದೊಡ್ಡ ನಿರ್ಧಾರವನ್ನು ಈ ಸರ್ಕಾರ ತೆಗೆದುಕೊಳ್ಳಬೇಕು. ನಿಮಗೆ ಆ ಗಂಡಸುತನ ಇದ್ದರೆ , ಆ ಧೈರ್ಯವಿದ್ದರೆ, ತಾಕತ್ತು ಇದ್ದರೆ ಎಲ್ಲಾ ವೆಚ್ಚಗಳನ್ನು ಕಟ್ ಮಾಡಿ ರಾಜ್ಯದ ಹಿತವನ್ನು ಕಾಪಾಡುವಂತಹ ನಿಲುವನ್ನು ತೆಗೆದುಕೊಳ್ಳಿ. ಇಲ್ಲದೆ ಹೋದರೆ ಇಂತಹ ಸಂದರ್ಭದಲ್ಲಿ ಜನಪ್ರತಿನಿಧಿಗಳಾಗಿ ಕೆಲಸ ಮಾಡುವಂತಹ ನಾವು-ನೀವು ಆ ಪಾಪದ ಅಧ್ಯಾಯಕ್ಕೆ ಗುರಿಯಾಗಿ ಅದರ ಪಾಲುದಾರರಾಗುತ್ತೇವೆ. ಆದ್ದರಿಂದ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಹಣ ಒದಗಿಸಬೇಕು ಎಂದು ಒತ್ತಾಯ ಮಾಡಿದರು.

ವಿಧಾನಸಭೆಯಲ್ಲಿ ರಾಮಯ್ಯ ಮಾತನಾಡಿದ್ದಾರೆ, ಎಂದು ಹೇಳುವುದಕ್ಕಿಂತ ಸಿಡಿದಿದ್ದಾರೆ ಎಂದು ಹೇಳುವುದೇ ಉಚಿತ. ರೇಷ್ಮೆ ಆಮದು ಮಾಡಿಕೊಳ್ಳುವ ನೀತಿಯಲ್ಲಿ ನಮ್ಮ ರಾಜ್ಯದ ರೇಷ್ಮೆ ಬೆಳೆಗೆ ಧಕ್ಕೆಯುಂಟಾಗಿದೆ. ಈ ರೇಷ್ಮೆ ಉತ್ಪತ್ತಿ ಮಾಡುವಂತಹ ಜನ ಎಲ್ಲಿದ್ದಾರೆ. ಅವರು ಭಾರತ ದೇಶದಲ್ಲಿ ತುಂಬಾ ಕೆಳಗಡೆ ಇದ್ದಾರೆ. ಆದರೆ ರೇಷ್ಮೆ ವ್ಯಾಪಾರ ಮಾಡುವಂತಹ ಜನ ಡೆಲ್ಲಿಯಲ್ಲಿದ್ದಾರೆ. ಸಾಮಾನ್ಯ ಬೆಳೆಗಾರನ ಕೂಗು ಡೆಲ್ಲಿಗೆ ಕೇಳಿಸುತ್ತಿಲ್ಲ. ಕೆಲವು ರಾಜಕಾರಣಿಗಳ ಹಿತವನ್ನು ಕಾಪಾಡುವುದಕ್ಕಾಗಿ , ಕರ್ನಾಟಕದ ಲಕ್ಷಾಂತರ ಬೆಳೆಗಾರರ ಜೀವನವನ್ನು, ಅವರ ಹಿತವನ್ನು ಬಲಿಗೊಡುತ್ತಿದ್ದಾರೆ. ಈ ಬಗ್ಗೆ ಕರ್ನಾಟಕದ ಯಾವುದೇ

**ರಾಜಕಾರಣಿ ಅಥವಾ ಮಂತ್ರಿಗಳು ಕಷ್ಟ ಪಡುತ್ತಿಲ್ಲ. ಆದ್ದರಿಂದ ನಾನು ಕಳಕಳಿಯಿಂದ ಕೇಳುತ್ತಿದ್ದೇನೆ. ಈ ಆಮದು ನೀತಿಯನ್ನು ಭಾರತ ಸರ್ಕಾರ ಕೈ ಬಿಡದಿದ್ದರೆ ನಾವು ಏನು ಮಾಡಬೇಕು? ಇನ್ನೇನು ದಾರಿ ಇಲ್ಲವೆಂದು ಕಾಣಿಸುತ್ತದೆ. ಪರಿಸ್ಥಿತಿ ವಿಕೋಪಕ್ಕೆ ಹೋಗುವ ಮೊದಲು ಈ ದೇಶಕ್ಕೆ ರೇಷ್ಮೆ ಆಮದು ಮಾಡಿಕೊಳ್ಳುವುದು ನಿಲ್ಲಿಸಬೇಕು**

ರಾಮಯ್ಯನವರ ಇಂಥ ಸತ್ಯವಂತ ಹೋರಾಟದಿಂದಾಗಿ ಅಂದು ರೇಷ್ಮೆ ಆಮದು ನಿಂತಿತು. ಆದರೆ ಇಂದು ಮತ್ತೆ ಈ ಸಮಸ್ಯೆ ಬೃಹದಾಕಾರವಾಗಿ ಬಂದು ನಿಂತಿದೆ. ಇದೀಗ ಕರ್ನಾಟಕ ಮತ್ತೊಮ್ಮೆ ರಾಮಯ್ಯನವರ ರೇಷ್ಮೆ ಹೋರಾಟವನ್ನು ಎದುರು ನೋಡುತ್ತಿದೆ. ರಾಮಯ್ಯ ಕೈ ಬಿಟ್ಟರೆ ಇಡೀ ರೇಷ್ಮೆ ಉದ್ಯಮ ನೆಲ ಕಚ್ಚುತ್ತದೆ ಎಂಬ ಪ್ರಾಮಾಣಿಕ ಕಳಕಳಿಯನ್ನು ರೈತರು ವ್ಯಕ್ತಪಡಿಸಿದ್ದಾರೆ. ಸರ್ಕಾರದ ಹಣವನ್ನು ತಮ್ಮ ಕ್ಷೇತ್ರದ ಅಭಿವೃದ್ಧಿಗಾಗಿ ನಿಯೋಜಿಸುವ ಸಮಯದಲ್ಲಿ ಸಚಿವರುಗಳೇ ತಲೆತಗ್ಗಿಸ ಬೇಕಾದಂತಹ ನೈಪುಣ್ಯತೆ ಇವರದು.

ರಾಮಯ್ಯನವರು ಕುಣಿಗಲ್ ಕ್ಷೇತ್ರದಿಂದ ಹಲವಾರು ಬಾರಿ ಶಾಸಕರಾಗಿ ಆರಿಸಿ ಬಂದು ರೇಷ್ಮೆ ಹಾಗೂ ತೋಟಗಾರಿಕೆ ಸಚಿವರುಗಳಾಗಿ ಇಡೀ ಕುಣಿಗಲ್ ತಾಲ್ಲೂಕಿನ ಪ್ರತಿ ಹಳ್ಳಿಗಳ ಉದ್ಧಾರಕ್ಕಾಗಿ, ರೈತರ ಕಷ್ಟ ನಿವಾರಣೆಗಾಗಿ ಹಗಲಿರುಳು ಶ್ರಮಿಸಿದ್ದಾರೆ . ಕುಣಿಗಲ್ ತಾಲ್ಲೂಕಿನಲ್ಲಿ ಬರುವ ಹುತ್ತರಿದುರ್ಗ ಎಂಬ ಒಂದು ಗುಡ್ಡಗಾಡನ್ನು ಇಂದು ಒಂದು ನಂದನವನವನ್ನಾಗಿ ಮಾಡಿರುವ ಶ್ರೇಯಸ್ಸು ವೈ. ಕೆ. ಆರ್ ಗೆ ಸಲ್ಲುತ್ತದೆ. ಇವರು ಶಾಸಕರಾದ ಕೂಡಲೇ ಮೊದಲು ಮಾಡಿದ ಸ್ತುತ್ಯಾರ್ಹವಾದ ಕೆಲಸ ಎಂದರೆ, ಇದೇ ಕುಣಿಗಲ್ ತಾಲ್ಲೂಕಿನ ಪ್ರತಿ ಹಳ್ಳಿಗೂ ವಿದ್ಯುತ್ ದೀಪವನ್ನು ಕಲ್ಪಿಸಬೇಕೆಂದು ನಿರ್ಧರಿಸಿ, ಕತ್ತಲೆಯ ಕೂಪದಲ್ಲಿದ್ದ ಹಳ್ಳಿಗಳಿಗೆ ವಿದ್ಯುತ್ ದೀಪವನ್ನು ಕಲ್ಪಿಸಿ ಪ್ರತಿ ಹಳ್ಳಿಗೂ ಬೆಳಕು ತಂದರು.

ಶಾಸಕರಾದಾಗ ರಾಮಯ್ಯನವರು ಜನರಿಗಾಗಿ ಮಾಡಿದ ಅನೇಕ ಒಳ್ಳೆಯ ಕೆಲಸಗಳನ್ನು ಗುರುತಿಸಿದ ನಾಯಕರು ಅವರನ್ನು ರೇಷ್ಮೆ ಮಂತ್ರಿಯನ್ನಾಗಿ ಮಾಡಿದರು. ಈ ಸಂದರ್ಭವನ್ನು ಕುರಿತು ಸ್ವತಃ ರಾಮಯ್ಯನವರೇ ತಮ್ಮ ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ **ಜನತಾ ಮಂತ್ರಿಮಂಡಲದಲ್ಲಿ ಸ್ನೇಹಿತರೆಲ್ಲ ಊಹಿಸಿದ್ದಂತೆ ನನಗೆ ರೇಷ್ಮೆಖಾತೆಯನ್ನೇ ವಹಿಸಿದ್ದರು. ಅಧಿಕಾರ ನನಗೆ ಬೇಕೆ ಬೇಕು. ಆದರೆ ಅದು ಜನರ ಸೇವೆಗೆ ಹೊರತು ಸ್ವಾರ್ಥ ಸಾಧನೆಗಾಗಿ ಅಲ್ಲ ಎಂಬ ನಂಬಿಕೆ ನನಗೆ. ರೇಷ್ಮೆ ಉಳಿವಿಗಾಗಿ ಮತ್ತು ರೇಷ್ಮೆ ಬೆಳೆಗಾರರ ಹಿತಕ್ಕಾಗಿ ಅನೇಕ ವರ್ಷಗಳಿಂದ ಹೋರಾಡುತ್ತಾ ಬಂದಿದ್ದ ನನಗೆ ಒಂದು ಪ್ರಬಲ ಅಸ್ತ್ರ ಸಿಕ್ಕಂತಾಯಿತು. ನಾನು ಹಂಬಲಿಸಿದ ಕೆಲಸಗಳನ್ನು ನಾನೇ ಮಾಡುವ ಅವಕಾಶ ಒದಗಿ ಬಂದಿತು** ಹೀಗೆ ದೊರಕಿದ ಅವಕಾಶವನ್ನು ರಾಮಯ್ಯನವರು ಸದುಪಯೋಗ ಪಡಿಸಿಕೊಂಡರು.

ಅದೇ ಸಂದರ್ಭಕ್ಕೆ ವಿಶ್ವಬ್ಯಾಂಕ್ ನೆರವನ್ನು ಪಡೆದ ವೈ. ಕೆ. ಆರ್ ರೇಷ್ಮೆಯ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿದರು. ಚಾಕಿ ಸೆಂಟರ್ ಗಳು, ರೋಗ ಸಂಶೋಧನಾ

ಕೇಂದ್ರಗಳು ಮುಂತಾಗಿ ಹಲವು ಸುಧಾರಣೆಗಳನ್ನು ತಂದರು. ಮಾರುಕಟ್ಟೆ ಇಲ್ಲದ ಸ್ಥಳಗಳಲ್ಲಿ ಮಾರುಕಟ್ಟೆ ನಿರ್ಮಿಸಿದರು. ಕಟ್ಟಡಗಳು ಇಲ್ಲದ ಕಡೆ ಕಟ್ಟಡಗಳನ್ನು ಕಟ್ಟಿಸಿದರು. ರೈತರಿಗೆ ಬ್ಯಾಂಕಿನ ಮೂಲಕ ನೇರ ಹಣ ಬರುವ ವ್ಯವಸ್ಥೆ ಮಾಡಿದರು. ವೈ. ಕೆ. ರಾಮ್ಯಯನವರ ಕಾಲದಲ್ಲಿ ಆದ ಪ್ರಮುಖ ಕೆಲಸಗಳನ್ನು ಎಷ್ಟು ವರ್ಷವಾದರೂ ಮರೆಯುವಂತಿಲ್ಲ. ಊಜಿನೊಣದ ಕಾಟ ಹಾಗೂ ಗಂಟುರೋಗದ ವಿಚಾರದಲ್ಲಿ ಕೂಡ ಹೊಸ ಸಂಶೋಧನೆಗಳನ್ನು ನಡೆಸಿ, ಅವುಗಳ ನಿಯಂತ್ರಣಕ್ಕೆ ಸಾಕಷ್ಟು ಕೆಲಸ ಮಾಡಿದರು.

ತಾಲ್ಲೂಕಿನ ಎಲ್ಲಾ ರಸ್ತೆಗಳಲ್ಲಿ ಗಿಡ ನೆಡುವ ಕಾರ್ಯಕ್ರಮ ಹಾಕಿಕೊಂಡರು. ಮಹಾತ್ಮ ಗಾಂಧೀಜಿಯವರ ದಂಡಿನ ಸತ್ಯಾಗ್ರಹವನ್ನು ನೆನಪಿಸುವಂತೆ ಕಾಲ್ನಡಿಗೆಯ ಪ್ರವಾಸ. ಅವರ ಹಿಂದೆ ನೂರಾರು ಅಭಿಮಾನಿಗಳು. ಆಯಾಸವಿಲ್ಲದಂತೆ ಊರೂರು ಸುತ್ತಿ ಎಲ್ಲಾ ರಸ್ತೆಗಳಲ್ಲಿ ಸಾವಿರಾರು ಗಿಡ ನೆಟ್ಟರು. ಇದೊಂದು ದೊಡ್ಡ ಆಂದೋಲನವಾಯಿತು. ಗಿಡ ನೆಡುವ ಜೊತೆಗೆ **ಮಕ್ಕಳಿಗೆ ವಿದ್ಯಾಭ್ಯಾಸ ನೀಡಿ, ಕುಟುಂಬ ಯೋಜನೆ ಜಾರಿಗೆ ತನ್ನಿ** ಎಂಬ ಬುದ್ದಿವಾದ ಹೇಳಲು ಮರೆಯಲಿಲ್ಲ. ಭಾರತದ ಚಕ್ರವರ್ತಿ ಎನಿಸಿದ್ದ ಅಶೋಕ ಈ ಕಲಸ ಮಾಡಿದ್ದು. ಎರಡು ಸಾವಿರ ವರ್ಷಗಳ ನಂತರವೂ ಜನ ಅಶೋಕನನ್ನು ನೆನೆಯುತ್ತಾರೆ.

ಶಾಸಕರಾಗಿಲ್ಲದಿದ್ದರೂ ಯಾವ ಒಬ್ಬ ಮಂತ್ರಿ, ಶಾಸಕರು ಕಾಣದ ಜನಪ್ರಿಯತೆ ವೈ.ಕೆ.ಆರ್‌ಗೆ ಇತ್ತು. ನೀರಾವರಿಯಿಂದ ಅಮೃತೂರು, ಯಡವಾಣಿ ಬಯಲು 365 ದಿನವೂ ಹಸಿರು ಸಂಪತ್ತಿನಿಂದ ಸಂಪದ್ಭರಿತವಾಗುವ ಕಾಲ ಕೂಡಿ ಬಂದಿದೆ. ಕುಣಿಗಲ್ ಕೆರೆಗೂ ಇಷ್ಟರಲ್ಲೇ ಹೇಮಾವತಿ ಹರಿಯಲಿದ್ದಾಳೆ. ಆಡಳಿತ ಪಕ್ಷದಲ್ಲಿದ್ದುಕೊಂಡೇ, ತಮ್ಮ ಸರ್ಕಾರ ರೈತರ ವಿಚಾರದಲ್ಲಿ ಉಪೇಕ್ಷೆ ಮಾಡಿದಾಗ ತೀವ್ರವಾದ ತರಾಟೆಗೆ ತೆಗೆದುಕೊಂಡರು.

ರಾಜ್ಯದ ಗೃಹ ನಿರ್ಮಾಣ ಮಂಡಳಿಯಲ್ಲಿ ಬೇರೂರಿದ್ದ ನಿಸ್ಸೀಮ ನಿಷ್ಕ್ರಿಯತೆ, ಅವ್ಯಹಾರ ಅಸಡ್ಡೆಗಳನ್ನು ತೊಡೆದು ಹಾಕಿ, ವಸತಿಹೀನರಿಗೆ ಬೇಗನೆ ಸ್ವಂತ ನೆಲೆಯನ್ನು ಕಲ್ಪಿಸುವ ಕಾರ್ಯಕ್ಕೆ ಹೊಸ ಚುರುಕು ವೇಗಗಳನ್ನು ತಂದುಕೊಡಲು ಅಧ್ಯಕ್ಷರಾಗಿದ್ದ ವೈ. ಕೆ. ರಾಮಯ್ಯನವರು ಸಂಪೂರ್ಣ ಯಶಸ್ವಿಯಾದರು.

ವೈ.ಕೆ. ರಾಮಯ್ಯನವರು ತಮ್ಮ ಆಸ್ತಿಯನ್ನು ಘೋಷಿಸಿಕೊಂಡಿರುವುದನ್ನು 4-5-1989ರ ಪ್ರಜಾವಾಣಿಯಲ್ಲಿ ಓದಿದ್ದೇವೆ. ತಮ್ಮ ಹಾಗೂ ತಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರಲ್ಲಿ ಯಾವ ಯಾವ ಆಸ್ತಿ ಇದೆ ಎಂದು ಸ್ಪಷ್ಟಪಡಿಸಿ ಇದಕ್ಕಿಂತ ಹೆಚ್ಚಿಗೆ ಏನಾದರೂ ಇದ್ದಲ್ಲಿ ಸರ್ಕಾರ ವಶಪಡಿಕೊಳ್ಳಬೇಕೆಂದು ಅವರು ಆಹ್ವಾನಿಸಿದರು. ಇದು ಬಹು ಮೆಚ್ಚಬೇಕಾದ ಸವಾಲು. ವೈ.ಕೆ. ರಾಮಯ್ಯನವರು ಸಾಕಷ್ಟು ಅಧಿಕಾರದಲ್ಲಿದ್ದವರು. ಇವರ ನಿಲುವನ್ನು ಮೌಲ್ಯಧಾರಿತ ರಾಜಕೀಯ ಮಾಡುತ್ತಿದ್ದೇವೆಂದು ಇನ್ನೂ ಪಿಸುಗುಡುತ್ತಿರುವ ಇನ್ನಿತರ ರಾಜಕಾರಣಿಗಳ ವೃಂದ ಏಕೆ ಅನುಸರಿಸಲಾರದು ?

ಅನೇಕ ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಎಂತಹ ಕ್ಲಿಷ್ಟ ಪರಿಸ್ಥಿತಿ ಬಂದರು ತಮ್ಮ ತತ್ವಗಳನ್ನು ಬಿಡದೆ, ನಡೆದುಕೊಂಡು ಕೆಲವು ಸ್ವಾರ್ಥಿಗಳಿಗೆ ನಿಷ್ಠೂರ ಆದರು. ಸಾರ್ವಜನಿಕರ ಸೇವೆಗಾಗಿ ನಾನು ಈ ಅಧಿಕಾರಕ್ಕೆ ಬಂದಿದ್ದೇನೆ. ನನ್ನ ಸೇವೆ ಈ ಸಾರ್ವಜನಿಕರಿಗೆ ಮೀಸಲು ಎಂಬುದು ಇವರ ತತ್ವಗಳಲ್ಲಿ ಒಂದು.

ಸಾರ್ವಜನಿಕರ ಹಣ ದುರುಪಯೋಗ ಆಗದಂತೆ ಅಧಿಕಾರಿಗಳ ಮೇಲೆ ಸದಾ ಹದ್ದಿನ ಕಣ್ಣನ್ನು ಇಟ್ಟು ಅವರಿಂದ ಯೋಗ್ಯ ಮತ್ತು ಗುಣಮಟ್ಟದ ಕೆಲಸವನ್ನು ಪಡೆಯುವಲ್ಲಿ ಯಾವಾಗಲೂ ಯಶಸ್ವಿಯಾಗುತ್ತಾರೆ. ಇದಕ್ಕೆ ಉದಾಹರಣೆ, ಹೇಮಾವತಿ ನಾಲಾ ಕೆಲಸದ ಸಮಯದಲ್ಲಿ ತುಂಡುಗುತ್ತಿಗೆ ರೂಪದಲ್ಲಿ ಹಣದ ದುರುಪಯೋಗವಾಗಿದೆ ಎಂಬ ಆರೋಪದ ಮೇಲೆ ಕಾಮಗಾರಿ ನಿಲ್ಲುವ ಹಂತ ತಲುಪಿದಾಗ ವೈ.ಕೆ.ಆರ್ ಅವರು ಹಣ ದುರುಪಯೋಗವನ್ನು ಪತ್ತೆ ಹಚ್ಚಲು ತನಿಖಾಧಿಕಾರಿಗಳನ್ನು ನೇಮಿಸಿದರು. ತಪ್ಪಿತಸ್ಥ ಅಧಿಕಾರಿ ಮತ್ತು ಗುತ್ತಿಗೆದಾರನ ವಿರುದ್ಧ ಕ್ರಮ ಕೈಗೊಳ್ಳುವಂತೆ ಸರ್ಕಾರವನ್ನು ಒತ್ತಾಯಿಸಿದರು. ಈ ಕಾಮಗಾರಿ ಪೂರ್ಣ ಗೊಳ್ಳಲು ಬೇಕಾಗುವ ಹಣ ಬಿಡುಗಡೆ ಮಾಡಿಸುವಲ್ಲಿ ಮತ್ತು ಈ ಕಾಮಗಾರಿಯು ಪೂರ್ಣಗೊಳ್ಳುವಲ್ಲಿ ಸಂಪೂರ್ಣ ಯಶಸ್ವಿಯಾದರು. ಇವರ ತೀಕ್ಷ್ಣತೆ ಎಷ್ಟಿದೆ ಎಂದರೆ, ಈ ನಾಲೆಗೆ ಸಂಬಂಧಪಟ್ಟ ಅಧಿಕಾರಿಗಳಿಗೂ ಈ ನಾಲೆಯ ಪ್ರಾರಂಭದಿಂದ ಕುಣಿಗಲ್ ದೊಡ್ಡ ಕೆರೆಯವರೆಗೆ ಬರುವ ಆಗುಹೋಗುಗಳು (ಬಿಡ್.ಎನ್‌ಕೇಪ್.ಸಿ.ಡಿ) ತಿಳಿದಿದೆಯೋ ಇಲ್ಲವೋ, ಆದರೆ ನಮ್ಮ ಶಾಸಕರಿಗೆ ಅವು ಬೆರಳಿನ ತುದಿಯಲ್ಲೇ ಇಟ್ಟುಕೊಂಡಿರುವಂತಹ ಜ್ಞಾಪಕ ಶಕ್ತಿ ಅವರಲ್ಲಿದೆ. ಇದಕ್ಕಾಗಿ ಅವರು ಬಿಸಿಲು - ಮಳೆಯನ್ನು ಲೆಕ್ಕಿಸದೆ, ಧೂಳಿನ ಸ್ನಾನ ಮಾಡುತ್ತಾ ಹಗಲು-ರಾತ್ರಿ ಎನ್ನದೆ ಅಧಿಕಾರಕ್ಕೆ ಬಂದಾಗಿನಿಂದ ಇಲ್ಲಿಯವರೆಗೆ ನಾಲೆಯ ಮೇಲೆ ಅಡ್ಡಾಡಿ, ನಾಲೆಯ ಆಗು ಹೋಗುಗಳನ್ನು ಕರತಲಾಮಲಕ ಮಾಡಿಕೊಂಡು ಉದ್ಭವಿಸುವ ಸಮಸ್ಯೆಗಳನ್ನು ಎಲ್ಲರ ಸಮಕ್ಷಮದಲ್ಲಿ ಪರಿಹರಿಸುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದ್ದಾರೆ.

ಒಂದು ಕಾಲದಲ್ಲಿ ರೇಷ್ಮೆ ಬೆಳೆಯುತ್ತಿದ್ದ ರೈತರು ಮರದ ಕೆಳಗೆ ತಮ್ಮ ಗೂಡನ್ನು ಇಟ್ಟು ಮಾರುತ್ತಿದ್ದ ದಿನಗಳೂ ಇತ್ತು. ಆದರೆ ಕೇವಲ 5 ವರ್ಷ ರೇಷ್ಮೆ ಸಚಿವರಾಗಿದ್ದ ಇವರು, ರೇಷ್ಮೆ ಮಾರಾಟ ಮಾಡುವ ರೈತರಿಗೆ ಇವರು ಕಲ್ಪಿಸಿಕೊಟ್ಟ ಸವಲತ್ತು ಅಷ್ಟಿಷ್ಟಲ್ಲ. ಇವರ ಕಾರ್ಯವೈಖರಿ ಎಷ್ಟಿತ್ತೆಂದರೆ, ಸ್ವತಃ ರೈತರೆ ಬಂದು ನೀವು **ಕಟ್ಟಿಕೊಟ್ಟ ಕಟ್ಟಡಗಳಿಗೆ ಸುಣ್ಣ ಬಣ್ಣ ಮಾಡಿಸೋಕೆ ಈಗಿರುವ ಸಚಿವರಿಗೆ, ಅಧಿಕಾರಿಗಳಿಗೂ, ಸಾಧ್ಯವಾಗುತ್ತಿಲ್ಲ** ಎಂದು ಹೇಳುತ್ತಿದ್ದಾರೆ, ಅದರ ಜೊತೆಗೆ ಈ ರಾಜ್ಯದ ಜನತೆ ವೈ.ಕೆ. ಆರ್ ಅವರಿಗೆ **ರೇಷ್ಮೆ ರಾಜ** ಎಂದ ಬಿರುದನ್ನು ಕೊಟ್ಟು ಸನ್ಮಾನಿಸಿದ್ದಾರೆ.

○

# ನಿಷ್ಠುರ ನಡವಳಿಕೆ

**ಆರ್ ಹಿತೇಂದ್ರ**

ವೈ.ಕೆ ರಾಮಯ್ಯನವರ ಬಗ್ಗೆ ಹೊರತರಲಿರುವ ಅಭಿನಂದನಾ ಸಂಪುಟಕ್ಕೆ, ನನ್ನದೊಂದು ಲೇಖನ ಬೇಕೆಂದು ಮಿತ್ರರಾದ ಜಿ.ವಿ. ಆನಂದಮೂರ್ತಿಯವರು ಒಮ್ಮೆ ಹೇಳಿದ್ದರು. ಆನಂದಮೂರ್ತಿಯವರು ನನ್ನನ್ನು ಭೇಟಿಯಾದಾಗಲೆಲ್ಲ ನನ್ನನ್ನು ಲೇಖನ ಕೊಡಿರೆಂದು ಒತ್ತಾಯಿಸುತ್ತಲೇ ಇದ್ದರು. ನನಗೆ ಇಲ್ಲವೆನ್ನಲು ಸಾಧ್ಯವಾಗಲಿಲ್ಲ. ಆದರೆ ವೈ.ಕೆ. ರಾಮಯ್ಯನವರ ಬಗ್ಗೆ ಬರೆಯಲು ತೊಡಗಿದಾಗ, ಈ ಕೆಲಸ ಮೇಲುನೋಟಕ್ಕೆ ಕಾಣಿಸುವಷ್ಟು ಸುಲಭವಲ್ಲ ಎಂದು ಭಾಸವಾಯಿತು.

ಏಕೆಂದರೆ, ಮೊದಲನೆಯದಾಗಿ ನಾನು ವೃತ್ತಿಪರ ಲೇಖಕನಲ್ಲ ! ಎರಡನೆಯದಾಗಿ ನಾನು ಬರೆಯಲು ಉದ್ದೇಶಿಸಿದ ವ್ಯಕ್ತಿ, ಖ್ಯಾತ ನ್ಯಾಯವಾದಿ, ಹುಟ್ಟು ಹೋರಾಟಗಾರ, ಯಶಸ್ವೀ ರಾಜಕಾರಣಿ, ಚಿಂತನಕಾರ, ಲೋಹಿಯಾವಾದಿ, ನೇರ ನಿಷ್ಠುರ ನಡವಳಿಕೆಯುಳ್ಳ ವ್ಯಕ್ತಿ. ಬುದ್ಧಿಜೀವಿಗಳಿಂದ ಮೊದಲುಗೊಂಡು; ಸಾಮಾನ್ಯ ಜನರವರೆಗೆ ಅಪಾರ ಅಭಿಮಾನಿ ಬಳಗವನ್ನು ಹೊಂದಿರುವಂತ ವ್ಯಕ್ತಿ. ಅದೇ ರೀತಿ ಕೆಲವು ಜನ ಇವರನ್ನು ಕಂಡರೆ ವೈರಿಗಳಂತೆ ಭಾವಿಸುವುದೂ ಕೂಡ ಸತ್ಯ! ಆದ್ದರಿಂದ ವೈ.ಕೆ. ರಾಮಯ್ಯನವರ ಬಗ್ಗೆ ಬರೆಯಲು ಅನೇಕ ವಿಷಯಗಳಿದ್ದರೂ, ನಾನು ಹತ್ತಿರದಿಂದ ಕಂಡ ಅವರ ವ್ಯಕ್ತಿತ್ವದ ಕೆಲವು ಅಂಶಗಳನ್ನು ಈ ಲೇಖನದಲ್ಲಿ ತರಲು ಪ್ರಯತ್ನಿಸಿದ್ದೇನೆ.

ವೈ.ಕೆ. ರಾಮಯ್ಯನವರೆಂದರೆ ತುಮಕೂರು ಜಿಲ್ಲೆಯ, ಅದರಲ್ಲಿಯೂ ಅವರ ಕ್ಷೇತ್ರವಾದ ಹಳೆಯ ಕುಣಿಗಲ್, ಹುಲಿಯೂರುದುರ್ಗದ ಭಾಗದಲ್ಲಿರುವ ಸರಕಾರಿ ಅಧಿಕಾರಿಗಳಿಗೆ ಬಹಳ ಹೆದರಿಕೆ ಎಂಬ ಮಾತು ಸತ್ಯವೆಂಬುದನ್ನು ನಾನು ತುಮಕೂರು ಜಿಲ್ಲೆಗೆ ಬಂದಾಗಿನಿಂದ ಗಮನಿಸಿದ್ದೇನೆ. ಈ ಭಯಕ್ಕೆ ಕಾರಣ, ರಾಮಯ್ಯನವರು ಸರಕಾರಿ ಅಧಿಕಾರಿಗಳ ಭ್ರಷ್ಟತೆಯ ವಿರುದ್ಧ ಸಾರ್ವಜನಿಕವಾಗಿ ಕಿಡಿಕಾರುವುದು. ಅಧಿಕಾರಿಶಾಹಿಯ ಭ್ರಷ್ಟತೆಯ ವಿರುದ್ಧ ಶಾಸಕರಾದವರು, ಸಾರ್ವಜನಿಕ ಜೀವನದಲ್ಲಿರುವಂತಹವರು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಜಾಗ್ರತೆವಹಿಸಿ, ಭ್ರಷ್ಟಾಚಾರ, ವಿಳಂಬ ತಡೆಗಟ್ಟಬೇಕೆನ್ನುವುದರಲ್ಲಿ ಯಾರದೂ ತಕರಾರು ಇರಬಾರದು. ಆದರೆ ಪ್ರಾಮಾಣಿಕ ಅಧಿಕಾರಿಗಳಿಗೆ, ಜನತೆಗಾಗಿ ಶ್ರಮವಹಿಸಿ ದುಡಿಯುವ

ಅಧಿಕಾರಿಗಳಿಗೆ, ವೈ.ಕೆ. ರಾಮಯ್ಯನವರು ನೀಡಿದ ಆಸರೆ, ಆಶ್ರಯ, ಪ್ರೀತಿ - ಗೌರವ ಬಹುಶಃ ಬೇರಾವುದೇ ಅಧಿಕಾರಿಗಳು ಪಡೆಯಲು ಸಾಧ್ಯವಿಲ್ಲವೆಂಬುದು ನನ್ನ ಖಚಿತ ಅಭಿಮತ.

ವೈ.ಕೆ. ರಾಮಯ್ಯನವರಲ್ಲಿ ನಾನು ಕಂಡಿರುವ ಇನ್ನೊಂದು ಪ್ರಮುಖ ಅಂಶವೆಂದರೆ, ಅವರಿಗಿರುವ ನಿರ್ಣಯ ತೆಗೆದುಕೊಳ್ಳುವ ಸಾಮರ್ಥ್ಯ ಮತ್ತು ತಮ್ಮ ನಿರ್ಣಯವನ್ನು ಕಾರ್ಯಗತಗೊಳಿಸುವ ಸಮಯದ ಅರಿವು. ಇದನ್ನು ಬಹುಶಃ ಇನ್ನಾವುದೇ ವ್ಯಕ್ತಿಯಲ್ಲಿ ಕಾಣಲಾಗದು! ನಾನು ನೋಡಿದ ಹಾಗೆ, ಅನೇಕ ಸಂದರ್ಭಗಳಲ್ಲಿ ಅವರು ಒಂದು ಅಭಿಪ್ರಾಯಕ್ಕೆ ಬಂದಿದ್ದರೂ ಸಹ, ಅದನ್ನು ಜನರಿಗೆ ತಿಳಿಯಪಡಿಸಿದೆ; ಸೂಕ್ತ ಸಂದರ್ಭದಲ್ಲಿ ತಮ್ಮ ನಿರ್ಣಯವನ್ನು ಪ್ರಕಟಿಸುವುದರ ಮೂಲಕ ಗರಿಷ್ಟ ಲಾಭವನ್ನು ಪಡೆಯುವ ಜಾಣ್ಮೆ ಅವರದು. ಇದಕ್ಕೆ ಅನೇಕ ಉದಾಹರಣೆಗಳಿವೆ. ಅವುಗಳಲ್ಲಿ ಮಾರ್ಕೋನಹಳ್ಳಿ ಜಲಾಶಯದ ಘಟನೆಯನ್ನು ಮಾತ್ರ ಇಲ್ಲಿ ಉದಾಹರಿಸುತ್ತೇನೆ.

ಮಾರ್ಕೋನಹಳ್ಳಿ ಜಲಾಶಯ ಮೈಸೂರ ಮಹಾರಾಜರ ಕಾಲದಲ್ಲಿ ಶಿಂಷಾ ನದಿಗೆ ಅಡ್ಡಲಾಗಿ ಕಟ್ಟಲಾಗಿರುವ ಮಣ್ಣಿನ ಅಣೆಕಟ್ಟು. ಅಣೆಕಟ್ಟೆಗೆ ಗೇಟ್‌ಗಳನ್ನೂ ಸಹ ಅದೇ ಕಾಲದಲ್ಲಿ ಅಳವಡಿಸಿದ್ದರಿಂದಾಗಿ, ಕಾಲದ ಮಹಿಮೆಯಿಂದ ಆ ಗೇಟ್‌ಗಳು ಮೇಲಕ್ಕಾಗಲೀ, ಕೆಳಕ್ಕಾಗಲೀ ಚಲಿಸುವುದನ್ನು ಬಿಟ್ಟು ಬಹಳ ಕಾಲವೇ ಆಗಿತ್ತು! ಮಾನ್‌ಸೂನ್ ಆರಂಭದಲ್ಲಿ ಹೇಮಾವತಿ ಜಲಾಶಯದಿಂದ ತುಮಕೂರು ಜಿಲ್ಲೆಯ ಕೆರೆಗಳಿಗೆ ನೀರು ಹರಿದುಬರುವುದರಿಂದ; ಕೆರೆಗಳಲ್ಲಿ ನೀರು ತುಂಬಿ, ಮಾನ್‌ಸೂನ್ ಕಡೆಯ ಭಾಗದಲ್ಲಿ ಹರಿದುಬರುವ ನೀರನ್ನು ಹಿಡಿದಿಡಲು ಸಾಧ್ಯವಾಗದೇ, ಕೋಡಿ ಬೀಳುವುದು ಈಚಿನ ವರ್ಷಗಳಲ್ಲಿ ಸರ್ವೆಸಾಧಾರಣವಾಗಿದೆ. ಈ ಕೆರೆಗಳ ನೀರೆಲ್ಲಾ ಶಿಂಷಾ ಕಣಿವೆಗೆ ಬರುವುದರಿಂದ ಮಾರ್ಕೋನಹಳ್ಳಿ ಜಲಾಶಯ ತುಂಬುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು.

ಮಾರ್ಕೋನಹಳ್ಳಿ ಜಲಾಶಯದ ಗೇಟ್‌ಗಳನ್ನು ರಿಪೇರಿ ಮಾಡಿಸಲು ಸಣ್ಣ ನೀರಾವರಿ ಇಲಾಖೆಯವರಿಗೆ ಹಣಕಾಸಿನ ಕೊರತೆ ಜೊತೆಗೆ, ಆಸಕ್ತಿಯೂ ಇಲ್ಲದಿದ್ದರಿಂದ ಜಲಾಶಯಕ್ಕೆ ಹೊಸ ಗೇಟ್ ಹಾಕಿಸುವ ಕೆಲಸ ನಿಧಾನಗತಿಯಲ್ಲಿ ಸಾಗಿತ್ತು. ವೈ.ಕೆ. ರಾಮಯ್ಯನವರು ಈ ಬಗ್ಗೆ ಪ್ರಯತ್ನ ನಡೆಸಿ, ಮುಂಜಾಗ್ರತೆವಹಿಸಲು ತಿಳಿಸಿದರು. ಆದರೆ ಉದಾಸೀನ ಮನೋಭಾವದಿಂದ ಅಧಿಕಾರಿಗಳು ಸುಮ್ಮನಾದರೆಂದು ತೋರುತ್ತದೆ!

2000ನೇ ಇಸವಿಯ ಸೆಪ್ಟೆಂಬರ್ - ಅಕ್ಟೋಬರ್ ತಿಂಗಳಿನಲ್ಲಿ ಶಿಂಷಾ ಕಣಿವೆಯ ಮೇಲ್ಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಳೆ ಬಿದ್ದಿದ್ದರಿಂದ, ಮಾರ್ಕೋನಹಳ್ಳಿ ಜಲಾಶಯದ ನೀರಿನ ಮಟ್ಟ ಏರತೊಡಗಿತು. ಆಗ ಕಾರ್ಯೋನ್ಮುಖರಾದ ಸಣ್ಣ ನೀರಾವರಿ ಇಲಾಖೆಯ

ಅಧಿಕಾರಿಗಳು ಜಲಾಶಯದ ಗೇಟ್ ತೆಗೆಯಲು ಪ್ರಯತ್ನಿಸಿ ವಿಫಲರಾದರು. ವಿಷಯ ತಿಳಿದ ವೈ.ಕೆ. ರಾಮಯ್ಯನವರು ಮಧ್ಯರಾತ್ರಿಯಲ್ಲಿಯೇ ಮುಖ್ಯಮಂತ್ರಿಗಳಿಗೆ ದೂರವಾಣಿ ಮುಖೇನ ಜಲಾಶಯದ ನೀರಿನ ಮಟ್ಟ ಅಪಾಯಕಾರಿ ಹಂತಕ್ಕೆ ತಲುಪಿ, ಜಲಾಶಯ ಒಡೆಯುವ ಸಾಧ್ಯತೆ ಇದೆ ಎಂದು ವಿವರಿಸಿ ಹೇಳಿದರು. ಕೂಡಲೇ ಮುಖ್ಯಮಂತ್ರಿಗಳು ಎಲ್ಲ ಅಧಿಕಾರಿಗಳನ್ನು ಮಾರ್ಕೋನಹಳ್ಳಿಗೆ ಕಳುಹಿಸಿ ಮುಂದಿನ ಕ್ರಮ ಕೈಗೊಳ್ಳಲು ಆದೇಶಿಸಿದರು. ಅದರಂತೆ ಎಲ್ಲ ಅಧಿಕಾರಿಗಳೂ ಅಲ್ಲಿಗೆ ಧಾವಿಸಿದರು. ಮರುದಿವಸ ಅಲ್ಲೇ ಮೊಕ್ಕಾಂ ಹೂಡಿ, ಜಲಾಶಯ ಉಳಿಸಿದರು. ಅದುವರೆವಿಗೆ ಜಲಾಶಯದ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಏನೇನು ವಿಳಂಬವಿತ್ತೋ, ಅವೆಲ್ಲವು ತೀವ್ರಗತಿಯಲ್ಲಿ ಚಾಲನೆಗೊಂಡು ಜಲಾಶಯಕ್ಕೆ ಹೊಸ ಗೇಟ್‌ಗಳನ್ನು ಅಳವಡಿಸಲಾಯಿತು. ಅಂದಿನಿಂದಲೇ ಜಲಾಶಯವನ್ನು ಭಾರೀ ನೀರಾವರಿ ಇಲಾಖೆಗೆ ವರ್ಗಾಯಿಸಲಾಯಿತು. ಹೀಗೆ ಜಲಾಶಯದ ಬಗ್ಗೆ ವೈ.ಕೆ. ರಾಮಯ್ಯನವರ ಬೇಡಿಕೆಗಳೆಲ್ಲವೂ ಈಡೇರಿದವು ಎಂದು ನನ್ನ ಅಭಿಮತ.

ಮುಂದಿನ ವರ್ಷ ಅದೇ ಮಾರ್ಕೋನಹಳ್ಳಿ ಜಲಾಶಯದಲ್ಲಿ ಎಲ್ಲ ಅಧಿಕಾರಿಗಳನ್ನೂ ಕರೆದು ಸಭೆ ಏರ್ಪಡಿಸಿದರು. ಅವರಿಗೆಲ್ಲಾ ಧನ್ಯವಾದವನ್ನು ಹೇಳುತ್ತಿದ್ದಾಗ, ಅವರ ಕಂಠ ಗದ್ಗದಿತವಾದದ್ದನ್ನು ನಾನೇ ನೋಡಿದ್ದೇನೆ. ಜಡವಾಗಿದ್ದ ಸರ್ಕಾರದ ಇಲಾಖೆಯನ್ನು ಸೂಕ್ತ ಸಮಯದಲ್ಲಿ ಎಚ್ಚರಿಸದೇ ಇದ್ದಲ್ಲಿ ಇದು ಕಾರ್ಯಗತವಾಗಲು ಇನ್ನೂ ಸಾಕಷ್ಟು ಸಮಯ ತೆಗೆದುಕೊಳ್ಳುತ್ತಿತ್ತು. ಇದು ನಾನು ಕಂಡಂತೆ ವೈ.ಕೆ. ರಾಮಯ್ಯನವರ ಕಾರ್ಯವೈಖರಿ.

ಇಂತಹ ಉದಾಹರಣೆಗಳು ಸಾಕಷ್ಟಿವೆ. ಬೇರೆ ಶಾಸಕರು ತಮ್ಮ ಕ್ಷೇತ್ರದ ಯೋಜನೆಗಳನ್ನು ಸಾಧಿಸಿಕೊಳ್ಳಲು ಬಳಸುವ ವಿಧಾನಗಳಿಗಿಂತ, ಭಿನ್ನವಾಗಿ, ವಿನೂತನ ವಿಧಾನಗಳು ವೈ.ಕೆ. ಆರ್ ಅವರಲ್ಲಿವೆ. ಅವರು ಹಿಡಿದ ಕೆಲಸವನ್ನು ಸಾಧಿಸುವ ಬಗ್ಗೆ ಅನೇಕ ಶಾಸಕರು ಮೆಚ್ಚುಗೆ ವ್ಯಕ್ತಪಡಿಸಿದ್ದನ್ನು ನಾನೇ ಕಂಡಿದ್ದೇನೆ. ಈಗಲೂ ಕುಣಿಗಲ್ ಭಾಗದ ಜನರಿಗೆ ವೈ.ಕೆ. ರಾಮಯ್ಯನವರು ಹಿಡಿದ ಕೆಲಸವನ್ನು ಸಾಧಿಸುವ ಹಠಗಾರನಾಗಿ ಕಂಡಿದ್ದಾರೆ. ಆ ಬಗ್ಗೆ ಅಪಾರ ಅಭಿಮಾನವನ್ನೂ ಇಟ್ಟುಕೊಂಡಿದ್ದಾರೆ. ಆ ದಾರಿಯಲ್ಲಿ ಎಡರು-ತೊಡರುಗಳು ಬಂದರೂ ಸಹ, ಅದನ್ನೆಲ್ಲಾ ಜಾಣ್ಮೆಯಿಂದ ಬಗೆಹರಿಸಿಕೊಳ್ಳುವ ರಾಮಯ್ಯನವರಿಗೆ ಅಭಿಮಾನಿಗಳು ಬಹಳ.

ಅವರು ಅರವತ್ತನೆ ವಯಸ್ಸಿಗೆ ಕಾಲಿಡುತ್ತಿರುವ ಸಂದರ್ಭದಲ್ಲಿ ಅವರಿಗೆ ಶುಭವನ್ನು ಹಾರೈಸುತ್ತೇನೆ.

○

# ತಂಪು ತಿಂಗಳು ಭಾರವಾದ ಹೃದಯ

ಪಿ ಲಂಕೇಶ್

ನವಂಬರ್, ಡಿಸೆಂಬರ್, ಜನವರಿ ನನ್ನ ಮೆಚ್ಚಿನ ತಿಂಗಳುಗಳು; ಸ್ವಚ್ಛ ಆಕಾಶದ ತಂಪು ವಾತಾವರಣ ಕಾಲ. ಮಳೆಯ ವಜ್ಜಲವಿಲ್ಲ ; ಬಿಸಿಲಿನ ತಾಪವಿಲ್ಲ; ನಾನು ಹೆಚ್ಚಾಗಿ ಬರೆಯುವುದು, ತೀವ್ರವಾಗಿ ಬದುಕುವುದು ಈ ತಿಂಗಳುಗಳಲ್ಲಿ. ನನ್ನ ಮಾವಿನ ಮರಗಳು ಹೂ ಬಿಡತೊಡಗುತ್ತವೆ; ಸುತ್ತಣ ಹೊಲಗಳಲ್ಲಿ ತೆನೆ ಕಾಳುಗಳೊಂದಿಗೆ ನಿಂತಿರುತ್ತವೆ. ನಮ್ಮ ಎರಡು ಜೇನು ಪೆಟ್ಟಿಗೆಗಳು ಜೇನುತುಪ್ಪದಿಂದ ಗಿಡಿಯುತ್ತವೆ. ಹುಚ್ಚೆಳ್ಳಿನ ಹೂವು (ನಮ್ಮ ಕಡೆ ಕುರೇಸಾಣೆ ಅನ್ನುತ್ತೇವೆ) ಜೇನುಗಳಿಗೆ ಪ್ರಿಯ. ವಸಂತಕ್ಕೆ ಮುನ್ನ ಹೂ ಬಿಡುವ ಮಾವು, ಹುಚ್ಚೆಳ್ಳು, ಕಲ್ಲಂಗಡಿ ವಸಂತದ ಮುನ್ಸೂಚನೆಗಳಂತೆ. ಯಾರೋ ನನಗೆ ವೈ. ಕೆ. ರಾಮಯ್ಯ ನನ್ನನ್ನು ನೋಡಬೇಕೆಂದಿದ್ದಾರೆ ಎಂದು ಹೇಳಿದರು. ನಾನು ಕೂಡಲೆ ಅವರ ನಂಬರ್ ಪಡೆದು ಫೋನ್ ಮಾಡಿ ಕರೆದೆ. ರಾಮಯ್ಯನವರನ್ನು ನಾನು ನೋಡುತ್ತಿದ್ದುದು ಎರಡನೆ ಸಲ. ಮೊದಲನೆ ಸಲ ಮಂಡ್ಯದಲ್ಲಿ ನೋಡಿದ್ದೆ. ನಮ್ಮಲ್ಲಿದ್ದ ಹುಡುಗ ವಿಶು ಮಂಡ್ಯದಲ್ಲಿ ಪತ್ರಿಕೆಯೊಂದನ್ನು ಶುರುಮಾಡಿದಾಗ ಅದರ ಉದ್ಘಾಟನೆಗೆ ನಾನು, ಕೃಷ್ಣ, ರಾಮಯ್ಯ ಹೋಗಿದ್ದೆವು. ಇಬ್ಬರು ಮಾನವಂತ ರಾಜಕಾರಣಿಗಳ ಜೊತೆಗೆ ಇದ್ದುದರ ಬಗ್ಗೆ ಆವತ್ತು ಸಂತೋಷದಿಂದ ಮಾತಾಡಿದ್ದೆ. ಕೃಷ್ಣ ಕೆ.ಆರ್. ಪೇಟೆಯಲ್ಲಿ, ರಾಮಯ್ಯ ಕುಣಿಗಲ್‌ನಲ್ಲಿ ಸೋತಿದ್ದಾರೆ. ಒಬ್ಬರು ದಳದ ಚಕ್ರದವರು,ಇನ್ನೊಬ್ಬರು ದೇವೇಗೌಡರ ಜನತಾದಳದವರು.

ವೈ.ಕೆ.ರಾಮಯ್ಯ ಮತ್ತು ಈ ಡಿಸೆಂಬರ್ ತಿಂಗಳು ಪರಸ್ಪರ ಮಾನಸ್ತಾಪ ಗೊಂಡಂತಿತ್ತು. ಈ ರಾಮಯ್ಯನವರ ದುಗುಡ ತೀವ್ರವಾಗಿತ್ತು . ಡಿಸೆಂಬರ್‌ನ ಹಿತಕರ ಹವೆಯಲ್ಲಿ ರಾಮಯ್ಯನವರ ಆಳದ ನೋವು, ಅವರನ್ನು ತಲ್ಲಣಗೊಳಿಸಿದ್ದ ಹತಾಶೆ, ಈ ರಾಮಯ್ಯ ಮತ್ತು ನನ್ನಂಥವರು ಹೆಚ್ಚೆಟ್ಟೊತ್ತುವ ಕುಟುಂಬದಿಂದ ಬಂದವರು. ಕಷ್ಟಪಟ್ಟು ಓದಿ, ಮೈಮುರಿದು ದುಡಿದು ಸ್ವಂತ ಛಾತಿಯಿಂದಲೇ ಸಮೃದ್ಧಿ ಪಡೆದವರು. ಅನೇಕ ವರ್ಷ ವಕೀಲರಾಗಿದ್ದು ತೋಟ, ಮನೆ, ಕಾರು ಗಳಿಸಿದವರು; ಇದೆಲ್ಲವನ್ನೂ ಸಾಧ್ಯಗೊಳಿಸಿದ ನಮ್ಮ ಜನತೆಗ ಏನನ್ನಾದರೂ ಒಳ್ಳೆಯದು ಮಾಡಬೇಕು. ಅದು ತಮ್ಮ ಕರ್ತವ್ಯ ಎಂದು ತಿಳಿದವರು. ಇಡೀ ಜನತೆ ಚೂರು ರೊಟ್ಟಿಗಾಗಿ, ಬೊಗಸೆ ಹೆಂಡಕ್ಕಾಗಿ ತಮ್ಮನ್ನು ತಾವೇ ಮಾರಿಕೊಂಡು ಆತ್ಮ ಹತ್ಯೆಗೆ ತೊಡಗಿರುವುದನ್ನು ನೋಡಿ ಬೆಚ್ಚಿಕೂತವರು.

ನಾನು ಬೆಚ್ಚಿಕೂತಿಲ್ಲ, ನನಗೆ ಅಷ್ಟು ಹತಾಶೆ ಆಗಿಲ್ಲ. ಆದರೆ ರಾಮಯ್ಯ ಖುದ್ದು ರಂಗಕ್ಕಿಳಿದವರು, ಅಖಾಡಾದಲ್ಲಿ ಸೆಣಸಿ ಫಲಿತಾಂಶಕ್ಕೆ ವಿಷಾದಗೊಂಡವರು. ಬಂದೊಡನೆ ಅಂದರು, ''ಜನರ ಬಗ್ಗೆನಾನು ಹೇಳಬೇಕಾದ್ದೇ ಇಲ್ಲ. ಪ್ರಾಣಿಗಳು ಕೂಡ ಅಷ್ಟೇ. ಹಾವು ಕಚ್ಚುತ್ತೆ, ತೋಳ ಸಾಯಿಸುತ್ತೆ. ಆದರೆ ಮರಗಿಡಗಳು ಎಂದೂ ನನಗೆ ಮೋಸ ಮಾಡಿಲ್ಲ. ಅವಕ್ಕೆ ಜೀವ ಇರುತ್ತೆ. ನೋಡಲು ಮನೋಹರವಾಗಿದ್ದುಹೂವು, ಹಣ್ಣು ಕೊಡುತ್ತವೆ. ಆದರೆ ಈ ಸಸ್ಯಗಳು ಎಂದೂ ಕೆಡಕು ಮಾಡುವುದಿಲ್ಲ. ಸ್ನೇಹ ಹೆಚ್ಚಾದಷ್ಟೂ ಸಂತೋಷವನ್ನೇ ಕೊಡುತ್ತವೆ.'' ಅಂದರು.

ರಾಮಯ್ಯ ತೆಳ್ಳಗೆ ಎತ್ತರವಾಗಿರುವ ಮನುಷ್ಯ. ತುಂಬ ಸಹಜವಾಗಿ, ಕೆಲವೊಮ್ಮೆ ಒರಟೊರಟಾಗಿ ಮಾತಾಡುತ್ತಾರೆ. ಆದರೆ ಇವರ ನಿಷ್ಠುರತೆಯ ಹಿಂದೆ ಪ್ರೀತಿ ಇದೆ. ಬೆಚ್ಚನೆಯ ವ್ಯಾಮೋಹವಿದೆ. ಅವರೆಂದರು, ''ನಾನೀಗ ಏನು ಮಾಡಬೇಕು? ನನ್ನ ಕುಣಿಗಲ್ ಕ್ಷೇತ್ರದ ಐನೂರು ಹಳ್ಳಿಗಳಿಗೆ ವರ್ಷಕ್ಕೆ ಒಮ್ಮೆಯಾದರೂ ಭೇಟಿಕೊಟ್ಟು ಕಷ್ಟ-ಸುಖ ವಿಚಾರಿಸಿ ಕೈಲಾದಷ್ಟು ಕೆಲಸ ಮಾಡಿದವನು ನಾನು. ನಮ್ಮ ಜನರೊಂದಿಗೆ ನೂರಾರು ಮೈಲಿ ನಡೆದು ಅದರಿಂದ ಸಂತೋಷಪಟ್ಟವನು. ಈಗ ನಮ್ಮ ಜನರ ಬಗ್ಗೆ ನನಗೆ ಸಿಟ್ಟು ಬರ್ತಿಲ್ಲ, ದ್ವೇಷ ಬರ್ತಿಲ್ಲ. ಅವರಿಂದ ನಾನು ಏನನ್ನೂ ನಿರೀಕ್ಷಿಸುವುದಿಲ್ಲ. ಆದರೆ ನಮ್ಮ ಸಂಬಂಧ ಏಕೆ ಹೀಗಾಯಿತು ಎಂದು ಚಿಂತಿಸುವಂತೆ ಆಗಿದೆ.''

ನಾನು ಬಹಳ ಹೊತ್ತು ಯೋಚಿಸುತ್ತ ಅವರ ಮಾತು ಕೇಳಿದೆ. ಅವರಿಗೆ ಹೇಳಿದೆ: ''ಇದೆಲ್ಲ ಸಾರ್ವಜನಿಕ ಜೀವನದಲ್ಲಿ ಆಗುತ್ತೆ. ನೀವು ನಿಮ್ಮ ಜನರಿಗಾಗಿ ಕೆಲಸ ಮಾಡುವುದನ್ನು ನಿಲ್ಲಿಸಬಾರದು. ನೀವು ಅವರ ಊರುಗಳಿಗೆ ನಡೆದುಕೊಂಡು ಹೋದಾಗ, ಎಲ್ಲೆಂದರಲ್ಲಿ ಉಂಡು, ನಾಟಕ ನೋಡಿ , ಮಾತಾಡಿ, ಮಲಗಿದಾಗ ನಿಮಗೆ ಸಿಕ್ಕ ಸಂತೋಷ, ಮುಖ್ಯವಾಗಿ ನೀವು ಮಾಡಿದ ಕೆಲಸದಿಂದ ದೊರೆತ ಸಂಭ್ರಮ ಮತ್ತೆ ಹೇಳಿದೆ; '' ರಾಜಕೀಯ ಇವತ್ತು ಪಾರ್ಲಿಮೆಂಟ್ ಭವನದಲ್ಲಿ , ವಿಧಾನಸೌಧದಲ್ಲಿ ನಡೆಯುವದರಿಂದ ಏನಾಗಿದೆ ನೋಡಿ. ವಿಧಾನಸಭೆಗೆ ಹೋಗಲು ಜನ ಕೊಲೆ, ಸುಲಿಗೆ, ಮೋಸ ಕೂಡ ಮಾಡುತ್ತಾರೆ. ರಾಜಕೀಯ ಜನರ ನಡುವೆ ನಡೆದು ಅವರ ಕೈತುತ್ತಿನಿಂದ ಬೆಳೆದಿದ್ದರೆ ಹೀಗಾಗುತ್ತಿರಲಿಲ್ಲ; ಒಬ್ಬೊಬ್ಬ ವಿಧಾನ ಸಭೆಯ ಸದಸ್ಯನ ಬೆಲೆಯನ್ನು ಹಣದಲ್ಲಿ ಕಟ್ಟುತ್ತಿರಲಿಲ್ಲ. ಇದನ್ನು ನಾನು ನಿಮ್ಮನ್ನು ಸಮಾಧಾನ ಪಡಿಸಲು ಹೇಳುತ್ತಿಲ್ಲ. ಇವತ್ತು ಒಬ್ಬ ಬಾಬಾಆಮ್ಟೆ, ಎಸ್. ರಾಮ್, ಶಬನಾ ಅಜ್ಮಿ ಕೂಡ ಯಾವನೇ ಒಬ್ಬ ವಿಧಾನಸಭೆಯ, ಪಾರ್ಲಿಮೆಂಟಿನ ಸದಸ್ಯನಿಗಿಂತ ಅರ್ಥಪೂರ್ಣವಾಗಿ ಕಾಣಲು ಕಾರಣಗಳಿವೆ.ಏನನ್ನೂ ಬಯಸದೆ ಒಳಿತನ್ನು ಮಾಡುವ ಸೌಜನ್ಯಮೂರ್ತಿಗಳ ರಾಜಕೀಯ ಜನಕ್ಕೆ ಬೇಕಾಗಿದೆ; ಅಂಥವರನ್ನು ರೂಪಿಸಿ ವಿಧಾನಸಭೆಗೆ ಕಳಿಸಿದರೆ ಮಾತ್ರ ನಮ್ಮ ಆಡಳಿತ ಯಂತ್ರ ಜನಕ್ಕೆ ಒಳ್ಳೆಯದು ಮಾಡುತ್ತದೆ. ಇದು ಅಸಾಧ್ಯ ಎಂದು ತಿಳಿಯಬೇಡಿ.

○

(ಲಂಕೇಶ್ ಪತ್ರಿಕೆ : 17-12-1989)

## ಆದರ್ಶ ಶಾಸಕ

ಬಿ ಜಿ ೭ ೩ಕಾರ

ಪಾಳೇಗಾರಿಕೆಯಿಂದ ಪಾರಾಗಿ ನಮ್ಮ ರಾಷ್ಟ್ರ ಸ್ವತಂತ್ರ ರಾಷ್ಟ್ರವಾಗಿ ಪ್ರಜಾತಂತ್ರ ವ್ಯವಸ್ಥೆಯ ಗಣರಾಜ್ಯವಾಗಿ 1952ರಿಂದ ನಮ್ಮ ರಾಷ್ಟ್ರದ ಪ್ರಜೆಗಳೇ ಪ್ರಭುಗಳಾಗಿ ಪ್ರಜಾರಾಜರುಗಳಾಗಿ ಪ್ರಜಾಪ್ರತಿನಿಧಿಗಳ ಮುಖಾಂತರ ಈ ರಾಷ್ಟ್ರ ಹಾಗೂ ರಾಜ್ಯಗಳ ಆಡಳಿತ ಹಾಗೂ ಅಭಿವೃದ್ಧಿಯ ಚುಕ್ಕಾಣಿಯನ್ನು ಹಿಡಿದು ಆಳುತ್ತಿದ್ದಾರೆ. ಪ್ರಜಾ ಸಾಮ್ರಾಜ್ಯ ವ್ಯವಸ್ಥೆಯಲ್ಲಿ ವಿಧಾನಸಭೆಯ ಸದಸ್ಯರಾದ ಜನ ಪ್ರತಿನಿಧಿಗಳು ಈ ರಾಜ್ಯಗಳ ಆಡಳಿತ ಅಭಿವೃದ್ಧಿಯನ್ನು, ಲೋಕಸಭೆಯ ಸದಸ್ಯರಾದ ಜನ ಪ್ರತಿನಿಧಿಗಳು ಈ ರಾಷ್ಟ್ರದ ಆಡಳಿತ ಅಭಿವೃದ್ದಿಯನ್ನು ಸಾಧಿಸುತ್ತಿದ್ದಾರೆ. ಭಾರತದ ಜನತೆ ಪ್ರಜಾರಾಜ್ಯದಲ್ಲಿ ವಿಶ್ವಾಸವಿಟ್ಟು ಅದರ ಯಶಸ್ವಿಗಾಗಿ ಕೇಂದ್ರ ಸರ್ಕಾರಕ್ಕೆ ಲಕ್ಷಾಂತರ ಕೋಟಿ ಹಣವನ್ನು ,ರಾಜ್ಯ ಸರಕಾರಗಳಿಗೆ ಸಹಸ್ರಾರು ಕೋಟಿ ಹಣವನ್ನು ವಿವಿಧ ಕರ, ಕಂದಾಯ ಇತ್ಯಾದಿ ರಾಜಸ್ವ ಹಣವನ್ನು ಪ್ರತಿವರ್ಷ ಕೊಡುತ್ತಲೇ ಇದ್ದಾರೆ. ಈ ರಾಷ್ಟ್ರದ ಆಡಳಿತ ಅಭಿವೃದ್ಧಿ ಸಾಧನೆಗಾಗಿ ಶಾಸಕಾಂಗ ಕಾರ್ಯಾಂಗಗಳು ಸಂವಿಧಾನಬದ್ಧವಾಗಿ ರಚಿತವಾಗಿ ಅಸ್ತಿತ್ವದಲ್ಲಿವೆ.

ಕರ್ನಾಟಕ ರಾಜ್ಯದ ಜನತೆಯಿಂದ 224 ಜನ ಪ್ರತಿನಿಧಿಗಳು ಚುನಾಯಿತರಾಗಿ ಶಾಸಕಾಂಗವನ್ನು ರಚಿಸಿಕೊಂಡು ಈ ಶಾಸಕಾಂಗದಲ್ಲಿ ಮುಖ್ಯಮಂತ್ರಿಗಳು ಇತರ ಮಂತ್ರಿಗಳು ವಿರೋಧಿ ಪಕ್ಷದ ನಾಯಕರು ವಿರೋಧಿ ಗುಂಪುಗಳ ನಾಯಕರೆಲ್ಲರೂ ಸೇರಿ ವಿಧಾನಸಭೆಯ ಅಧ್ಯಕ್ಷ ಹಾಗೂ ಉಪಾಧ್ಯಕ್ಷರನ್ನು ಆಯ್ಕೆ ಮಾಡಿ ಅವರ ಮುಖಾಂತರ ಶಾಸನಸಭೆಯ ಕಾರ್ಯಕಲಾಪಗಳನ್ನು ಯಶಸ್ವಿಯಾಗಿ ಸಾಗಿಸುತ್ತಲಿದ್ದಾರೆ. ವಿಧಾನಸಭೆಯಲ್ಲಿ ಬಹುಮತ ಪಡೆದ ಅಧಿಕೃತ ರಾಜಕೀಯ ಪಕ್ಷದ ಶಾಸಕರೆಲ್ಲರೂ ಸೇರಿ ತಮ್ಮ ಸಭಾನಾಯಕರನ್ನು ಅಂದರೆ ಮುಖ್ಯಮಂತ್ರಿಯನ್ನು ಆಯ್ಕೆ ಮಾಡಿಕೊಂಡು, ಮಂತ್ರಿಮಂಡಲವನ್ನು ರಚಿಸಿಕೊಂಡು ಈ ರಾಜ್ಯದ ಆಡಳಿತ ಹಾಗೂ ಅಭಿವೃದ್ಧಿಯನ್ನು ವಿಧಾನಸಭೆಯ ಅಂಗೀಕಾರ ಮಾಡಿಕೊಟ್ಟ ಬಜೆಟ್ ಪ್ರಕಾರ ಹಣವನ್ನು ಸಂಗ್ರಹಮಾಡಿ, ಸಂಗ್ರಹ ಮಾಡಿದ ಹಣವನ್ನು ನಿಗದಿತ ಕಾರ್ಯಕ್ರಮ, ಆಡಳಿತ ಹಾಗೂ ಅಭಿವೃದ್ಧಿಗಾಗಿ ವೆಚ್ಚ ಮಾಡುತ್ತಾರೆ. ಕಾರ್ಯಾಂಗ ಸರಕಾರದ ಆಡಳಿತ ವೈಖರಿಯನ್ನು ಶಾಸಕರು ನಿಗಾವಹಿಸಿ ನೋಡಬೇಕಾಗುತ್ತದೆ. ಕಾರ್ಯನಿರ್ವಹಿಸುವಲ್ಲಿ ಮುಖ್ಯಮಂತ್ರಿಗಳ ಪಾತ್ರ ಹಾಗೂ ಮಂತ್ರಿಗಳ ಪಾತ್ರ ಭಾರೀ ಹೊಣೆಗಾರಿಕೆಯದಿರುತ್ತದೆ. ಮುಖ್ಯಮಂತ್ರಿಗಳ

ಮೇಲ್ವಿಚಾರಣೆ, ಮಂತ್ರಿಗಳ ಮೇಲೆ ಇರಬೇಕಾಗುತ್ತದೆ. ಮುಖ್ಯಮಂತ್ರಿ ಹಾಗೂ ಮಂತ್ರಿಗಳ ಮೇಲ್ವಿಚಾರಣೆ ಹಾಗೂ ಹಿಡಿತ ರಾಜ್ಯ ಸರಕಾರದ ಮುಖ್ಯಕಾರ್ಯದರ್ಶಿ ಹಾಗೂ ಇತರ ಇಲಾಖೆಯ ಕಾರ್ಯದರ್ಶಿಗಳನ್ನೊಳಗೊಂಡ ಅಧಿಕಾರಶಾಹಿಗಳ ಮೇಲೆ ಇರಲೇ ಬೇಕಾಗುತ್ತದೆ. ಸರಕಾರ ಕಾರ್ಯಾಂಗ ಸುಭದ್ರ ಹಾಗೂ ಸಮರ್ಥ ಆಡಳಿತವನ್ನು ಕೊಡಲಿಕ್ಕೆ ತಪ್ಪಿದಲ್ಲಿ ಆದಾಯ ಮೂಲದ ಪ್ರಕಾರ ಹಣಶೇಖರಿಸಲು ತಪ್ಪಿದಲ್ಲಿ ನಿಗದಿತ ಕಾರ್ಯಕ್ರಮ ಚಟುವಟಿಕೆ ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳ ನಿಗದಿತ ಗುರಿಯನ್ನು ಸಾಧಿಸುವಲ್ಲಿ ವಿಫಲವಾದರೆ, ಶಾಸಕರ ಶಾಸಕಾಂಗ ಸೂಕ್ತ ಕ್ರಮವನ್ನು ಸರಕಾರದ ಮೇಲೆ ತೆಗೆದುಕೊಳ್ಳುವ ಪರಮಾಧಿಕಾರ ಹೊಂದಿರುತ್ತದೆ. ಈ ಬಗ್ಗೆ ಸುದೀರ್ಘ ಚರ್ಚೆಗೆ ಹಾಗೂ ತೀರ್ಮಾನಕ್ಕೆ ವಿಧಾನಸಭೆಯಲ್ಲಿ ಸದಸ್ಯರಿಗೆ ಸೂಕ್ತ ಅವಕಾಶ ಮಾಡಿಕೊಡುವ ಹೊಣೆಗಾರಿಕೆ ವಿಧಾನಸಭೆಯ ಅಧ್ಯಕ್ಷರ ಮೇಲೆ ಇರುತ್ತದೆ. ನಮ್ಮ ರಾಜ್ಯದ ಕಾರ್ಯಾಂಗ, ಸರಕಾರದಲ್ಲಿ ಕೆಲವು ಅಪವಾದಗಳಿಗೆ ಒಳಪಟ್ಟು ಬಹುತೇಕ ಉತ್ತಮ ಮಂತ್ರಿಗಳನ್ನೇ ಹೊಂದಿರುವ ಸತ್ ಸಂಪ್ರದಾಯ ಹಿನ್ನೆಲೆ ಇದೆ. ಅಂತೆಯೇ ಮಂತ್ರಿಗಳ ಕಾರ್ಯಾಂಗ ಸರಕಾರವನ್ನು ಹದ್ದುಬಸ್ತಿನಲ್ಲಿಟ್ಟು ಉತ್ತಮ ಆಡಳಿತ ಹಾಗೂ ಅಭಿವೃದ್ಧಿ ಸಾಧನೆಯಲ್ಲಿ ಸರಕಾರ ಯಶಸ್ವಿಯಾಗಲು ಸೂಕ್ತ ಚರ್ಚೆ ತೀರ್ಮಾನಗಳನ್ನು ತೆಗೆದುಕೊಳ್ಳಲು ವಿಧಾನಸಭೆಯಲ್ಲಿ ಶಾಸಕರಿಗೆ ಸಾಕಷ್ಟು ಅವಕಾಶವನ್ನು ವಿಧಾನಸಭಾಧ್ಯಕ್ಷರು ಮಾಡಿಕೊಡ ಬೇಕಾಗುತ್ತದೆ ಹಾಗೂ ಮಾಡಿಕೊಟ್ಟ ಸಂಪ್ರದಾಯ ಕೂಡ ನಮ್ಮ ರಾಜ್ಯದಲ್ಲಿದೆ. ಈ ರಾಜ್ಯದ ಆಗುಹೋಗು, ಅಳಿಗಾಲ, ಉಳಿಗಾಲ, ಯಶಸ್ಸು, ಅಪಯಶಸ್ಸು, ಕೀರ್ತಿ, ಅಪಕೀರ್ತಿ, ಉನ್ನತಿ, ಅಧೋಗತಿ ಈ ರಾಜ್ಯದ ಶಾಸಕಾಂಗ ಹಾಗೂ ಕಾರ್ಯಾಂಗದ ಕೈಯಲ್ಲಿರುವುದನ್ನು ಅಂದರೆ ಶಾಸಕರು ಹಾಗೂ ಮಂತ್ರಿಗಳ ಕೈಯಲ್ಲಿರುವುದನ್ನು ಪ್ರಜಾತಂತ್ರ ವ್ಯವಸ್ಥೆ ಸಾರಿಹೇಳುತ್ತಲೇ ಬಂದಿದೆ.

ಈ ಹಿನ್ನೆಲೆಯಲ್ಲಿ ವೈ.ಕೆ. ರಾಮಯ್ಯನವರು ತುಮಕೂರು ಜಿಲ್ಲೆಯ ಒಬ್ಬ ಆದರ್ಶ ಸತ್‌ಪ್ರಜೆ. ಜನಮನ್ನಣೆ ಪಡೆದು ಕರ್ನಾಟಕ ವಿಧಾನಸಭೆಯ ಸದಸ್ಯರಾಗಿ ಶಾಸಕಾಂಗದಲ್ಲಿ ಅವರು ನಿರ್ವಹಿಸಿರುವ ಮಹಾತ್ಕಾರ್ಯ ಶ್ಲಾಘನೀಯವಾಗಿದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಶಾಸಕರು, ಮಂತ್ರಿಗಳು, ಪವಾಡ-ಸದೃಶ ಕಾರ್ಯ ಮಾಡಬಲ್ಲ ಮೇರು - ಮಹನೀಯರು, ಜನರ ಆಗುಹೋಗು ಅಭಿವೃದ್ಧಿ - ಭವಿಷ್ಯವನ್ನು ನಿರ್ಮಾಣ ಮಾಡಬಲ್ಲ ಕಾರಣ ಪುರುಷರು. ಬೇಡಿದ ಬೇಡಿಕೆಗಳಿಗೆ ವರವನೀವ ವರಪುತ್ರರು. ಜನತೆಯ ಧ್ವನಿಯಾಗಿ ಶಾಸನಸಭೆಯಲ್ಲಿ ಜನಪರ ಮಾತಾಡಬಲ್ಲ ಹಾಗೂ ಜನತೆಯ ಬೇಡಿಕೆಗಳನ್ನು ಈಡೇರಿಸಿ ಕೊಡಬಲ್ಲ ಮಹಾಪುರುಷರು. ಸರಕಾರದ ಚಟುವಟಿಕೆಗಳನ್ನು ಸಾಧಕ-ಬಾಧಕಗಳನ್ನು ತಿಳಿದು, ಬಾಧಕಗಳನ್ನು ಕಟುವಾಗಿ ಟೀಕಿಸಿ ಸಲಹೆ ಸೂಚನೆಗಳನ್ನು ಕೊಟ್ಟು ಸರಕಾರವನ್ನು ಹದ್ದುಬಸ್ತಿನಲ್ಲಿಡಬಲ್ಲ ಅದ್ಭುತ ಶಕ್ತಿಯುಳ್ಳವರು ಶಾಸಕರು. ವೈ.ಕೆ. ರಾಮಯ್ಯನವರು ಇಂತಹ ಆದರ್ಶ ಶಾಸಕರಲ್ಲಿ ಅತ್ಯುನ್ನತರು. ಅವರ ನ್ಯಾಯನಿಷ್ಠೂರ ಕಾರ್ಯ, ಆದರ್ಶ, ನೇರನುಡಿ ಹಾಗೂ ನಡೆ ಅನುಕರಣೀಯವಾಗಿದೆ.

ರಾಮಯ್ಯನವರು ಕಾರ್ಯಾಂಗದಲ್ಲಿ ಒಬ್ಬ ಪ್ರಭಾವಿ, ಚತುರ, ನಿಷ್ಠುರ, ನಿಷ್ಕಲಂಕ, ಪ್ರಾಮಾಣಿಕ, ನಿಸ್ವಾರ್ಥ, ಜಾತ್ಯತೀತ ಮಂತ್ರಿಗಳಾಗಿ ಭ್ರಷ್ಟಾಚಾರ, ಜಾತೀಯತೆ, ಅಧಿಕಾರ ದುರುಪಯೋಗ, ದುರಾಡಳಿತ ಇತ್ಯಾದಿ ಸಾಮಾಜಿಕ ಪೀಡೆಗಳಿಂದ ದೂರವಿದ್ದು ಜನಸೇವೆಯೇ ಜನಾರ್ದನ ಸೇವೆ, ದೇಶಸೇವೆಯೇ ಈಶಸೇವೆ, ಸರ್ವೇ ಜನಾ ಸುಖಿನೋಭವಂತು ಎಂಬಂತೆ ಕಾರ್ಯನಿರ್ವಹಿಸಿರುವುದು ಪ್ರಜಾತಂತ್ರ ವ್ಯವಸ್ಥೆಗೆ ಭೂಷಣ ಹಾಗೂ ಜನತೆಯ ಸುದೈವ. ತೋಟಗಾರಿಕೆ ಹಾಗೂ ರೇಷ್ಮೆ ಇಲಾಖೆಯ ಮಂತ್ರಿಗಳಾಗಿ ಬಜೆಟ್ ಪ್ರಕಾರ ನಿಗದಿತ ಗುರಿ ಸಾಧನೆಯನ್ನು ಸಾಧಿಸುವಲ್ಲಿ ಯಶಸ್ವಿಯಾಗುವುದಲ್ಲದೆ, ಪರಿಣಾಮಕಾರಿಯಾಗಿ ಯಶಸ್ವಿಗೊಳಿಸಿದ ಹಿರಿಮೆ ರಾಮಯ್ಯನವರಿಗುಂಟು.

ಗ್ರಾಮೀಣ ಅಭಿವೃದ್ಧಿ, ಪರಿಶಿಷ್ಟ ಜಾತಿ, ಪಂಗಡಗಳ ಅಭಿವೃದ್ಧಿ, ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರ ಅಭಿವೃದ್ಧಿ, ನೀರಾವರಿ ಅಭಿವೃದ್ಧಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ, ರೇಷ್ಮೆ ಬೆಳೆಗಾರರ ಅಭಿವೃದ್ಧಿ, ತೋಟಗಾರರ ಅಭಿವೃದ್ಧಿ, ರೈತರ ಅಭಿವೃದ್ಧಿ ಕುಡಿಯುವ ನೀರಿನ ಹಾಗೂ ರಸ್ತೆ ಅಭಿವೃದ್ಧಿ, ಶಿಕ್ಷಣಾಭಿವೃದ್ಧಿ ಇತ್ಯಾದಿ ವಿವಿಧ ಅಭಿವೃದ್ಧಿಗೆ ಮೂಲಕಾರಣವಾಗಿ, ತುಮಕೂರು ಜಿಲ್ಲೆಗಷ್ಟೇ ಏಕೆ ಈ ರಾಜ್ಯದ ಅಭಿವೃದ್ಧಿ ಹಾಗೂ ಉತ್ತಮ ಆಡಳಿತಕ್ಕೆ ಶಾಸಕರಾಗಿ ಮಂತ್ರಿಗಳಾಗಿ ಹಾಗೂ ಸದ್ಯ ಶಾಸಕರಾಗಿ ಮಾಡುತ್ತಿರುವ ಸೇವೆ ಶ್ರೇಷ್ಠತರವಾಗಿರುವುದು ಈ ರಾಜ್ಯದ ಜನತೆಯ ಸುದೈವ.

ರಾಮಯ್ಯನವರು ಒಬ್ಬ ಖ್ಯಾತ ನ್ಯಾಯವಾದಿ-ಶಾಸಕ-ಮಂತ್ರಿ ಮತ್ತೊಬ್ಬರಿಗೆ ಅನುಕರಣೀಯವಾಗಿರುವವರು. ಇಂತಹ ಶಾಸಕರ ಸಾಧನೆ ಕುರಿತು ಅಭಿನಂದನಾ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಹಾಗೂ ಜನತೆ ಅವರ ಸತ್ಕಾರ್ಯ ಸ್ಮರಿಸುವುದು ಒಳ್ಳೆಯ ಸತ್ ಸಂಪ್ರದಾಯ. ವೈ.ಕೆ.ಆರ್ ರಂಥ ಜನನಾಯಕನನ್ನು ಪಡೆದಿರುವುದು ತುಮಕೂರು ಜಿಲ್ಲೆಯ ಹಾಗೂ ಕರ್ನಾಟಕ ರಾಜ್ಯದ ಜನತೆಯ ಸುದೈವ.

○



# ನನ್ನ ಮಾರ್ಗದರ್ಶಿ

**ಎಚ್ ನಿಂಗಯ್ಯ**

ನಾನು 1972ರಲ್ಲಿ ವಕೀಲಿ ವೃತ್ತಿಯಲ್ಲಿದ್ದೆ. ಆಗ ನನಗೆ ವೈ.ಕೆ. ರಾಮಯ್ಯನವರ ಪರಿಚಯ ವಾಯಿತು. ಪರಿಚಯದ ನಂತರ; ನಾನು ಅವರಲ್ಲಿದ್ದ ಕೆಲವು ಅಪರೂಪದ ಗುಣಗಳಿಂದ ಆಕರ್ಷಿತನಾದೆ. ಬಹಳ ಮುಖ್ಯವಾಗಿ ಅವರಲ್ಲಿದ್ದ ಜಾತ್ಯತೀತ ಗುಣ ನನಗೆ ಅಚ್ಚುಮೆಚ್ಚಾಯಿತು. ಏಕೆಂದರೆ ಈ ಹಿಂದೆ ಇದ್ದಂಥ ಕೆಲವು ಶಾಸಕರು ಮತ್ತು ಎಂ.ಪಿ.ಗಳು ಜಾತಿ - ಒಳಜಾತಿ ಇವುಗಳ ಲೆಕ್ಕಾಚಾರದಲ್ಲೇ ಎಲ್ಲವನ್ನೂ ನೋಡುತ್ತಿದ್ದರು. ಇದರಿಂದಾಗಿ ನನಗೆ ಅವರ ಬಗ್ಗೆ ಗೌರವ ಇರಲಿಲ್ಲ! ಆದರೆ ವೈ.ಕೆ. ರಾಮಯ್ಯನವರು ಜಾತಿ-ಮತಗಳನ್ನು ಮೀರಿ ಎಲ್ಲರೊಂದಿಗೆ ಬೆರೆಯುತ್ತಿದ್ದರು. ಇದು ನಾನು ಕಂಡಂತೆ ಬಹಳ ಅಪರೂಪದ ಗುಣ.

ನಾನು ಕಂದಿಕೆರೆ ಕ್ಷೇತ್ರದಿಂದ ತುಮಕೂರು ಜಿಲ್ಲಾ ಪಂಚಾಯತ್‌ಗೆ ಆಯ್ಕೆಯಾಗಿ ಬಂದಿದ್ದೆ. ಆಗ ನಮ್ಮ ಪಕ್ಷವೇ ಬಹುಮತ ಪಡೆದಿತ್ತು. ಆಗ ಮೈಸೂರಿನ ಜಿಲ್ಲಾ ಪಂಚಾಯತ್ ಅಧ್ಯಕ್ಷ ಸ್ಥಾನವನ್ನು ವೀರಶೈವರಿಗೆ ಕೊಟ್ಟು, ತುಮಕೂರಿನ ಅಧ್ಯಕ್ಷ ಸ್ಥಾನವನ್ನು ಒಕ್ಕಲಿಗರಿಗೆ ಬಿಟ್ಟುಕೊಡಬೇಕೆಂದು ನಮ್ಮ ಪಕ್ಷದ ಉನ್ನತ ಹಂತದಲ್ಲಿ ತೀರ್ಮಾನವಾಗಿತ್ತು. ಆಗ ನಮ್ಮ ಪಕ್ಷದಲ್ಲಿ ಗೆದ್ದು ಬಂದಿದ್ದ ಒಟ್ಟು ಸದಸ್ಯರಲ್ಲಿ 25 ಜನ ಗಂಗಡಿಗಾರ ಒಕ್ಕಲಿಗರು, ಕುಂಚಟಿಗರಲ್ಲಿ 8 ಜನ ಸದಸ್ಯರಿದ್ದರು. ಆಗ ಅಧ್ಯಕ್ಷಸ್ಥಾನಕ್ಕೆ ಗಂಗಡಿಗಾರ ಒಕ್ಕಲಿಗರ ಆಯ್ಕೆ ಖಚಿತವಾಗಿತ್ತು. ಆಗ ವೈ.ಕೆ. ರಾಮಯ್ಯನವರು ನನ್ನ ಪರವಾಗಿ ನಿಂತು ನನ್ನನ್ನೇ ತುಮಕೂರು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನಾಗಿ ಮಾಡಿದರು. ಅಂದಿನಿಂದ ನಾನು ಅವರ ಅಭಿಮಾನಿಯಾಗಿದ್ದೇನೆ.

ಈ ನಡುವೆ ನನ್ನ ಮತ್ತು ವೈ.ಕೆ. ರಾಮಯ್ಯನವರ ಸಂಬಂಧವನ್ನು ಮುರಿಯಲು ಅನೇಕರು ನಾನಾ ಬಗೆಯಾಗಿ ಪ್ರಯತ್ನಿಸಿದರು. ಎಚ್.ಡಿ. ದೇವೇಗೌಡರೂ ಕೂಡ, ನೀನು ನನ್ನೊಂದಿಗೆ ಬಂದುಬಿಡು, ಆ ರಾಮಯ್ಯನ ಜೊತೆ ಹೋಗಬೇಡ' ಎಂದು ಹಲವಾರು ರೀತಿಯಿಂದ ಹೇಳಿದರು. ಆಗ ನಾನು, ಅವರಿಗೆ 'ನೀವು ನನ್ನನ್ನು ಅಧ್ಯಕ್ಷಗಿರಿಯಿಂದ ಕಿತ್ತುಹಾಕಿದರೂ ನಾನು ರಾಮಯ್ಯನವರನ್ನು ಬಿಟ್ಟು ಬರಲಾರೆ' ಎಂದು ಹೇಳಿದೆ. ನನ್ನ ಮತ್ತು ರಾಮಯ್ಯನವರ ಸಂಬಂಧ ಯಾವ ಬಗೆಯದು ಅಂದರೆ, ಅವರು ಯಾವ ಪಕ್ಷದಲ್ಲಿರುತ್ತಾರೋ, ನಾವೂ ಕೂಡ ಆ ಪಕ್ಷದಲ್ಲಿರುತ್ತೇವೆ. ಹೀಗಿದೆ ನಮ್ಮ ಅನ್ಯೋನ್ಯತೆ.

ರಾಮಯ್ಯನವರ ವಿಶೇಷಗುಣ ಅಂದರೆ, ಅವರು ಯಾರನ್ನಾದರೂ ಒಮ್ಮೆ ನಂಬಿದರೆ, ಕೊನೆಯವರೆಗೂ, ಅವರ ಕೈಬಿಡೋದಿಲ್ಲ! ಇದಕ್ಕೆ ಮುಖ್ಯವಾಗಿ ಅವರ ವಿಶ್ವಾಸ-ನಂಬಿಕೆ ಸಂಪಾದಿಸಬೇಕಾದರೆ, ನಮ್ಮಲ್ಲಿ ಪ್ರಾಮಾಣಿಕತೆ, ಸ್ವಚ್ಛತೆ ಇರಬೇಕು. ಅಪ್ರಾಮಾಣಿಕರು, ಸುಳ್ಳು-ಮೋಸ, ವಂಚನೆ ಮಾಡುವವರಿಗೆ ರಾಮಯ್ಯನವರ ಬಳಿ ಸ್ಥಾನವಿರುವುದಿಲ್ಲ.

ರಾಮಯ್ಯನವರು ಯಾವುದೇ ಒಂದು ಕಾರ್ಯವನ್ನು ಕೈಗೆತ್ತಿಕೊಳ್ಳುವ ಮೊದಲು, ಅದನ್ನು ಹತ್ತಾರು ಸಲ ಯೋಚಿಸಿ, ಆ ನಂತರ ಕಾರ್ಯಪ್ರವೃತ್ತರಾಗುತ್ತಾರೆ. ಆ ಕಾರ್ಯ ಕಾನೂನು ಬಾಹಿರವಾಗಿದ್ದರೆ, ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗಿದ್ದರೆ, ಅದನ್ನು ಕೈಗೆತ್ತಿಕೊಳ್ಳುವುದಿಲ್ಲ. ಯಾರು ಎಷ್ಟೇ ಒತ್ತಡ, ಪ್ರಭಾವ ಬೀರಿದರೂ ಅವರು ತಮ್ಮ ತೀರ್ಮಾನವನ್ನು ಬದಲಿಸಿಕೊಳ್ಳುವುದಿಲ್ಲ! ಅದೇ ಕಾರ್ಯ ಜನಪರವಾಗಿದ್ದರೆ, ಅದನ್ನು ನಾನು ಹೇಳಲಿ ಅಥವಾ ಆನಂದಮೂರ್ತಿ ಹೇಳಲಿ ಮಾಡುತ್ತಾರೆ. ಯಾರೇ ಅಡ್ಡ ಬಂದರೂ ನಿಲ್ಲಿಸುವುದಿಲ್ಲ. ಈ ಗುಣದಿಂದಾಗಿಯೇ ನಾನು ಅವರೊಂದಿಗೆ ಇದ್ದೇನೆ. ಜನಸಂಘಟನೆ ಮಾಡೋದರಲ್ಲಿ, ಹೋರಾಟವನ್ನು ಮಾಡೋದರಲ್ಲಿ ಅವರನ್ನು ಯಾರೂ ಸರಿಗಟ್ಟಲಾರರು.

ನಾನು ತುಮಕೂರು ಜಿಲ್ಲಾ ಪಂಚಾಯತ್ ಅಧ್ಯಕ್ಷನಾಗಿದ್ದ ಅವಧಿಯಲ್ಲಿ, ವೈ.ಕೆ. ರಾಮಯ್ಯನವರು, ತಮ್ಮ ವೈಯಕ್ತಿಕ ಕೆಲಸವನ್ನಾಗಲೀ ಅಥವಾ ಕಾನೂನಿಗೆ ವಿರುದ್ಧವಾದ ಕಾರ್ಯಮಾಡಲು ನನಗೆ ಎಂದೂ ಹೇಳಲಿಲ್ಲ ಎನ್ನುವುದು ದೊಡ್ಡ ಸಂಗತಿ. ಅವರಿಗೆ ವೈಯಕ್ತಿಕತೆಗಿಂತ; ಸಾರ್ವಜನಿಕ ಜೀವನ ಬಹಳ ಮುಖ್ಯ. ನನ್ನ ಅಧ್ಯಕ್ಷಗಿರಿಯ ಅವಧಿಯಲ್ಲಿ, ಅಭಿವೃದ್ಧಿ ಸಂಬಂಧವಾದ ಕಾರ್ಯಗಳಿಗೆ, ಸಲಹೆ-ಸೂಚನೆಗಳನ್ನು ಕೊಟ್ಟು ನನ್ನನ್ನು ಬೆಂಬಲಿಸಿದರು. ಈ ಕಾರಣದಿಂದಾಗಿಯೇ ನಾನು ಅನೇಕ ಒಳ್ಳೆಯ ಕೆಲಸಗಳನ್ನು ಮಾಡುವಂತಾದೆ. ಇದೇ ನನ್ನ ಭಾಗ್ಯ.

ಇದುವರೆಗೆ ರಾಮಯ್ಯನವರ ಜೊತೆ ಸಾವಿರಾರು ಜನ ಬಂದು ಹೋಗಿದ್ದಾರೆ. ಅಧಿಕಾರದ ಆಸೆಗೆ, ಹಣದ ಆಸೆಗೆ ಬಂದವರ್‍ಯಾರೂ ಇಂದು ರಾಮಯ್ಯನವರ ಬಳಿ ಇಲ್ಲ! ಆದರೆ ನಾನು, ಚೌದ್ರಿಶಂಕರ್, ಈಗ ನಮ್ಮ ನಡುವೆ ಇನ್ನಿಲ್ಲವಾಗಿರುವ ಸಿದ್ದಲಿಂಗೇಗೌಡರು ನಾವೆಲ್ಲ ಅಂದಿನಿಂದ ಇಂದಿನವರೆಗು ರಾಮಯ್ಯನವರ ಜೊತೆಯಲ್ಲೇ ಉಳಿದು ಬಂದಿದ್ದೇವೆ. ಅವರ ಎಲ್ಲ ಸ್ವಭಾವವೂ ನನಗೆ ಚೆನ್ನಾಗಿ ಗೊತ್ತಿದೆ. ಅದರಂತೆ ನಾವೂ ಕೂಡ ನಡೆಯುತ್ತೇವೆ. ಅವರ ಸ್ನೇಹವಾದಾಗಿನಿಂದ, ನಾನು ಸಾಕಷ್ಟು ಕಲಿತಿದ್ದೇನೆ. ಆದ್ದರಿಂದ ವೈ.ಕೆ. ರಾಮಯ್ಯನವರೇ ನನ್ನ ಬದುಕಿನ ಮಾರ್ಗದರ್ಶಿಯಾಗಿದ್ದಾರೆ.

○

## ಜನಪರ ಚಿಂತಕ

ಪ್ರೊ. ಜಯಪ್ರಕಾಶ ಗೌಡ

ಆಗಿನ ಜನತಾಸರ್ಕಾರದಲ್ಲಿ ಮೊದಲಬಾರಿಗೆ ರೇಷ್ಮೆಸಚಿವರಾಗಿದ್ದ ವೈ.ಕೆ. ರಾಮಯ್ಯನವರನ್ನು ಕನ್ನಡದ ಪ್ರಸಿದ್ಧಕಥೆಗಾರರಾದ ಡಾ. ಬೆಸಗರಹಳ್ಳಿ ರಾಮಣ್ಣನವರ ಜೊತೆ 1985ರಲ್ಲಿ ಭೇಟಿಯಾದ ಸಂದರ್ಭ. ಆ ವೇಳೆಗಾಗಲೇ ರಾಮಯ್ಯನವರ ಬಗ್ಗೆ ಬಹಳ ಆತ್ಮೀಯವಾದ ವಿವರಗಳನ್ನು ಡಾ. ಬೆಸಗರಹಳ್ಳಿ ರಾಮಣ್ಣ ನನ್ನೊಂದಿಗೆ ಹಂಚಿಕೊಂಡಿದ್ದರು. ನೇರ ನಡೆಯ, ಬಿರುಮೂರ್ತಿ ಗಟ್ಟಿತನದಿಂದೊಡಗೂಡಿದ ಇವರ ರಾಜಕಾರಣ ಆ ಕ್ಷೇತ್ರಕ್ಕೆ ಬಹಳಷ್ಟು ಸಹಾಯಕವಾಗುತ್ತದೆ ಎಂದು ಪದೇ ಪದೇ ಡಾ. ರಾಮಣ್ಣ ಹೇಳುತ್ತಿದ್ದುದು ನನ್ನ ಮನದಲ್ಲಿ ಉಳಿದಿತ್ತು. ಇವರನ್ನು ಕಾಣಲು ಕುಣಿಗಲ್‌ಗೆ ಹೋದೆವು. ಅದಾಗಲೇ ಕುಣಿಗಲ್ ತಾಲ್ಲೂಕಿನ ಪ್ರವಾಸಕ್ಕೆ ಅಣಿಯಾಗಿದ್ದ ರಾಮಯ್ಯನವರು ಡಾ. ಬೆಸಗರಹಳ್ಳಿ ಅವರನ್ನು ಕಂಡ ತಕ್ಷಣ ಎದ್ದು ಬಂದು ತುಂಬಾ ಆತ್ಮೀಯವಾಗಿ ಬರಮಾಡಿಕೊಂಡದ್ದು ಸಮಾಧಾನ ಎನಿಸಿತು.

ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿ, ಸೋದರರ ಜೊತೆಯಲ್ಲಿಯೇ ಕೃಷಿಕಾರ್ಯ ಮಾಡುತ್ತಾ ರಾಮಯ್ಯನವರು ಓದನ್ನು ಮುಂದುವರಿಸಿದವರು. ರೈತಕುಟುಂಬದ ಎಲ್ಲಾ ಬವಣೆಗಳನ್ನು ಎಳವೆಯಲ್ಲಿಯೇ ಅರ್ಥಮಾಡಿಕೊಂಡಿದ್ದ ವೈ.ಕೆ.ಆರ್ ರವರು ಅಂದಿನ ಆರ್ಥಿಕ ಸಂಕಷ್ಟದಲ್ಲಿ ನಗರ ಪ್ರವೇಶಿಸಿ, ಪದವೀಧರರಾದದ್ದೇ ಒಂದು ಸೋಜಿಗ. ಅಂತೂ ಸ್ವಸಾಮರ್ಥ್ಯದಿಂದ ವಕೀಲರಾದ ರಾಮಯ್ಯನವರು, ಗ್ರಾಮೀಣ ಪರಿಸರದ ಅನಾನುಕೂಲಗಳು, ಸಾಮಾಜಿಕ ಪರಿಸ್ಥಿತಿ, ಆ ಜನರ ಅಸಹಾಯಕತೆ, ಆ ಅಸಹಾಯಕತೆಯ ನಡುವಿನ ಈರ್ಷ್ಯೆ, ಅಸೂಯೆಗಳನ್ನು ಮನದಟ್ಟುಮಾಡಿಕೊಂಡಿದ್ದರು. ಮುಂದೊಂದು ದಿನ ಈ ಎಲ್ಲಾ ಅನಿಷ್ಟಗಳನ್ನು ತೊಡೆದುಹಾಕಬೇಕೆಂಬ ಶಕ್ತಿಯನ್ನು ತಂದುಕೊಳ್ಳಬೇಕೆಂಬ ಛಲ ಅವರಲ್ಲಿ ಮೂಡಿ ಬಂದದ್ದು ನಿಜಕ್ಕೂ ಆಶ್ಚರ್ಯದ ಸಂಗತಿ.

ವೈ.ಕೆ.ಆರ್ ರವರದು ರೇಷ್ಮೆಕೃಷಿ ಪ್ರಧಾನವಾದ ಕುಟುಂಬವಾದುದರಿಂದಲೇ ರೇಷ್ಮೆ ಕೃಷಿಯಲ್ಲಿನ ನೋವು ನಲಿವುಗಳನ್ನು ಅವರೇ ಬರೆದಿರುವ **"ನಾನು ಮತ್ತು ರೇಷ್ಮೆ"** ಎಂಬ ಕೃತಿಯಲ್ಲಿ ಖಚಿತವಾಗಿ ದಾಖಲಿಸಲು ಸಾಧ್ಯವಾಗಿದೆ. ವಕೀಲಿ ವೃತ್ತಿಯ ಒಳಹೊರಗುಗಳನ್ನು ಅರ್ಥಮಾಡಿಕೊಂಡಿರುವ ವೈ.ಕೆ.ಆರ್ ಕಕ್ಷಿದಾರರ ಹಿತಕಾಯುವಲ್ಲಿ ಯಾವತ್ತೂ ಮುಂದು ಸಲ್ಲದ ಕಾರಣಗಳಿಗಾಗಿ ಕೋರ್ಟು - ಕಛೇರಿಗಳ ಮೆಟ್ಟಿಲು ಹತ್ತಿ ಬಹಳ ವರ್ಷ ಅಲೆದಾಟದಲ್ಲಿಯೇ ತಮ್ಮ

ಬದುಕನ್ನು ಸವೆಸುವ ಹಳ್ಳಿಗಾಡಿನ ಜನರನ್ನು ಕಂಡು ಮನನೊಂದು 'ನಮ್ಮ ಜನಕ್ಕೆ ಯಾವಾಗ ಸಾಮರಸ್ಯದ ಬುದ್ಧಿ ಬರುತ್ತದೋ ಕಾಣೆ! ಹೊಂದಾಣಿಕೆ ಮಾಡಿಕೊಂಡು ಬದುಕಲಾರದೆ ಹೋದರೆ ದೊಡ್ಡ ದುರಂತವನ್ನಪ್ಪುತ್ತಾರೆ. ಶಿಕ್ಷಣ ಇದಕ್ಕೆಲ್ಲಾ ತಕ್ಕ ಪರಿಹಾರ. ಅದರಲ್ಲಿಯೂ ಪುಸ್ತಕದ ಬದನೆಕಾಯಿಗಿಂತ ಅನುಭವಗಳಿಂದ ಕೂಡಿದ ಶಿಕ್ಷಣದಿಂದ ಇವರನ್ನು ಮೇಲೆತ್ತಲು ಸಾಧ್ಯ ಎಂದು ಹತ್ತಾರು ಬಾರಿ ಭಾಷಣಗಳ ಮೂಲಕ ಮತ್ತು ಖಾಸಗಿಯಾಗಿ ಮಾತನಾಡಿರುವುದನ್ನು ಕೇಳಿದ್ದೇನೆ. ತುಂಬಾ ಸಂತೋಷ ಪಟ್ಟಿದ್ದೇನೆ. ತಮ್ಮ ವಕೀಲಿ ವೃತ್ತಿಗೆ ತೊಂದರೆಯಾದರೂ ಚಿಂತೆ ಇಲ್ಲ; ಕಕ್ಷಿದಾರ ಹಾಳಾಗಬಾರದೆಂಬ ಇವರ ಮನೋಧರ್ಮ. ನಮ್ಮ ಗ್ರಾಮೀಣ ಭಾರತದ ಮುಗ್ಧನೊಬ್ಬನ ಅಂತಃಕರಣವೆಂದರೆ ತಪ್ಪಾಗಲಾರದು.

ವೈ.ಕೆ.ಆರ್ ಅವರ ಓದಿನ ಹರವು ಕೇವಲ ಸಾಹಿತ್ಯಕ್ಕೆ ಮಾತ್ರ ಮೀಸಲಾದುದಲ್ಲ. ಸಂಸ್ಕೃತಿ, ಪರಿಸರ, ಕೃಷಿ ಮೊದಲಾದವುಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿರುವುದರಿಂದಲೇ ಯಾವ ವಿಚಾರವನ್ನಾದರೂ ಅಸ್ಖಲಿತವಾಗಿ, ನಿರ್ದಿಷ್ಟವಾಗಿ ಮಾತನಾಡಲು ಸಾಧ್ಯವಾಗಿದೆ. ಒಬ್ಬ ಉತ್ತಮ ವಾಗ್ಮಿ, ರಾಜಕಾರಣಿಯಾಗಿರುವ ವೈ.ಕೆ.ಆರ್ ಸುತ್ತ ಸಾಹಿತ್ಯ, ಸಂಸ್ಕೃತಿಯ ಚಿಂತಕರು ಸದಾ ಸುತ್ತುವರಿದಿರಲು ಸಾಧ್ಯವಾಗಿದೆ.

''ವೈ.ಕೆ.ಆರ್ ವ್ಯಕ್ತಿಗತವಾಗಿ ಯಾರಿಗೂ, ಏನನ್ನೂ ಮಾಡುವವರಲ್ಲ. ಆದರೆ ಸಮುದಾಯಕ್ಕೆ ಅವರಿಂದ ಆಗುವ ಕೆಲಸ ಅಪಾರ'' ಆದ್ದರಿಂದಲೇ ಹೇಮಾವತಿಯ ನೀರನ್ನು ಕುಣಿಗಲ್ ತಾಲ್ಲೂಕಿಗೆ ತರಲು ಸಾಧ್ಯವಾಯಿತು. ರೇಷ್ಮೆ ಮಂತ್ರಿಯಾಗಿದ್ದಾಗ ಆ ಇಲಾಖೆಯ ವಿಸ್ತರಣೆಗೆ ಪ್ರಯತ್ನವಾದದ್ದು. ಭಗೀರಥ ರಾಮಯ್ಯನವರಿಗೆ (ಆ ಭಾಗದ ಜನ ಪ್ರೀತಿಯಿಂದ ಕರೆದಿರುವುದು) ಅಧಿಕಾರದ ದಂಡ ರಚನಾತ್ಮಕ ಚಟುವಟಿಕೆಗಳಿಗೆ ಮಾತ್ರವೇ ಹೊರತು, ಐಷಾರಾಮದ ಜೀವನಕ್ಕಲ್ಲ. ಈ ಮನುಷ್ಯನ ಪರಿಸರದ ಬಗೆಗಿನ ಚಿಂತನೆಯನ್ನು ಕಂಡು ಮೂಕವಿಸ್ಮಿತನಾಗಿದ್ದೇನೆ. ಇಲ್ಲಿಯವರೆಗೆ ಲಕ್ಷೋಪಲಕ್ಷ ಸಸಿಗಳನ್ನು ತನ್ನ ಕ್ಷೇತ್ರದುದ್ದಕ್ಕೂ ನೆಡಿಸಿ, ಇಡೀ ಹುಲಿಯೂರುದುರ್ಗ ಕ್ಷೇತ್ರವನ್ನು ಹಸಿರನ್ನಾಗಿಸುವ ಇವರ ಧಾವಂತ ಇತರೆ ರಾಜಕಾರಣಿಗಳಿಗೆ ಮೇಲ್ಪಂಕ್ತಿಯಾಗಬೇಕು. ಅನ್ಯಾಯ, ಅಸಮಾನತೆಗಳ ವಿರುದ್ಧ ಕೋಪ ಕಾರುವ ವೈ.ಕೆ.ಆರ್ ಅಂಥವರು ಇವತ್ತಿನ ತಂತ್ರಗಾರಿಕೆಯ ರಾಜಕಾರಣದಲ್ಲಿ ಮರೆಯಾಗಿಬಿಡುವ ಅಪಾಯವೂ ಇದೆ. ವೈ.ಕೆ.ಆರ್ ಬರಡು ನೆಲದಲ್ಲಿ ಚಿಗುರು ಮೂಡಿಸುವ ದೈತ್ಯ ಶಕ್ತಿಯುಳ್ಳವರು. ಕೆಲಸ ಮಾಡಬೇಕೆಂಬ ಉತ್ಸಾಹವಿದ್ದರೆ ಯಾವ ಅಧಿಕಾರವಿಲ್ಲದಿದ್ದರೂ ಕೆಲಸ ಮಾಡಬಹುದು ಎಂಬುದಕ್ಕೆ ಇವರು ಜೀವಂತ ಮಾದರಿ.

ಮಂಡ್ಯದಲ್ಲಿ 'ಜನಪರ ರಾಜಕಾರಣಿ ಪ್ರಶಸ್ತಿ'ಯೊಂದನ್ನು ಸ್ಥಾಪಿಸಲಾಗಿದೆ. ಇದನ್ನು ಸ್ಥಾಪಿಸಿದಾಗ ಹಲವಾರು ಮಂದಿ ಹುಬ್ಬೇರಿಸಿದ್ದುಂಟು. ರಾಜಕಾರಣಿಗೆ ಪ್ರಶಸ್ತಿಯೇ? ಯಾವ ರಾಜಕಾರಣಿ ಉತ್ತಮವಾಗಿದ್ದಾನೆ? ಎಂದೆಲ್ಲಾ ಬೊಬ್ಬೆ ಹೊಡೆದವರೂ ಇದ್ದಾರೆ. ಆದರೆ ಉತ್ತಮ

ಸಾಹಿತ್ಯವಿರುವಂತೆ, ಉತ್ತಮ ರಾಜಕಾರಣವೂ ಇದೆ. ಉತ್ತಮ ಸಾಹಿತಿಯಿರುವಂತೆ ಉತ್ತಮ ರಾಜಕಾರಣಿಯೂ ಇದ್ದಾನೆ. ಈ ಎಲ್ಲದರ ಹಿನ್ನೆಲೆಯಲ್ಲಿ ಮಂಡ್ಯದಲ್ಲಿ ಉತ್ತಮ ರಾಜಕಾರಣಿ ಪ್ರಶಸ್ತಿಯನ್ನೂ ಪ್ರಾರಂಭ ಮಾಡಿದಾಗ ಯಾರಿಗೆ ಕೊಡಬೇಕು? ಎಂಬ ಪ್ರಶ್ನೆ ನಮಗೆದುರಾಯಿತು. ಪ್ರಥಮ ಸಭೆಯಲ್ಲಿ ನಾಲ್ಕಾರು ಹೆಸರುಗಳು ಪ್ರಸ್ತಾಪಕ್ಕೆ ಬಂದವು. ಅವುಗಳಲ್ಲಿ ವೈ.ಕೆ. ರಾಮಯ್ಯನವರ ಹೆಸರೂ ಒಂದು. ಅವರ ಹೆಸರು ಬಂದ ತಕ್ಷಣ ಎಲ್ಲರೂ ನೆಮ್ಮದಿಯ ಉಸಿರು ಬಿಟ್ಟರು. ರಾಮಯ್ಯನವರು ಪ್ರಶಸ್ತಿಗೆ ಸೂಕ್ತ ವ್ಯಕ್ತಿ ಎಂದು ಒಮ್ಮತದ ನಿರ್ಣಯವಾಗಿ ಎಲ್ಲ ಸದಸ್ಯರೂ ನಿರಾಳವಾದರು.

ರಾಮಯ್ಯನವರು ಇವತ್ತಿನ ರಾಜಕಾರಣಿಗಳಲ್ಲಿ ಭಿನ್ನವಾಗಿ ನಿಲ್ಲುತ್ತಾರೆ. ಜನಹಿತಕ್ಕೆ ಪೂರಕವಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಅದಕ್ಕೆ ಅಡ್ಡ ಬರುವ ಶಕ್ತಿಗಳು ಎಷ್ಟೇ ದೊಡ್ಡವಾಗಿದ್ದರೂ, ಅದನ್ನು ಎದುರಿಸಿ ನಿಲ್ಲುವ ತಾಕತ್ತು ವೈ.ಕೆ.ಆರ್ ಅವರಿಗೆ ಇದೆ. ಮಂತ್ರಿಗಿರಿ, ಅಧ್ಯಕ್ಷಗಿರಿ ಮೊದಲಾದ ಅಧಿಕಾರಕ್ಕೆ ಸದಾ ಹಲ್ಲುಗಿಂಜುತ್ತಾ ನಡು ಬಗ್ಗಿಸಿ ನಿಲ್ಲುವ ಟೊಳ್ಳು ವ್ಯಕ್ತಿತ್ವಗಳ ನಡುವೆ ವೈ.ಕೆ. ರಾಮಯ್ಯನವರು ಒಂದು ಆಶಾದೀಪವಾಗಿದ್ದಾರೆ.

ಯಾಕೆ? ಏನು? ಎಂದು ಪ್ರಶ್ನೆ ಮಾಡುತ್ತಲೇ, ತನ್ನೆದುರಿನ ವ್ಯಕ್ತಿಗಳನ್ನು ಅಲುಗಾಡಿಸುತ್ತಾ ತನ್ನ ದಿಟ್ಟತನವನ್ನು ಲೋಕಕ್ಕೆ ಪರಿಚಯ ಮಾಡಿಕೊಡುವುದು ಸಾಕ್ರಟೀಸ್ ಮಾದರಿಯ ಬದುಕು. ಈ ರೀತಿಯ ಬದುಕನ್ನು ಜೀವನದ ಉದ್ದಕ್ಕೂ ಕಾಯ್ದುಕೊಳ್ಳಬೇಕೆಂದು ಹಪಹಪಿಸುವ ರಾಮಯ್ಯನವರನ್ನು ಕಂಡಾಗ ಸಂತೆಯಲ್ಲಿ ನಿಂತ ಕಬೀರನ ನೆನಪು ಬರುತ್ತದೆ.

ಭ್ರಷ್ಟ ಅಧಿಕಾರಿಗಳಿಗೆ, ಪುಂಡು-ಪೋಕರಿಗಳಿಗೆ ಸಿಂಹಸ್ವಪ್ನವಾಗಿ, ಒಳಿತಿಗೆ, ಸಂಸ್ಕೃತಿಗೆ ಸಾಹಿತ್ಯಕ್ಕೆ, ಮೆದುವಾಗುವ ಶ್ರೀ ವೈ.ಕೆ. ರಾಮಯ್ಯನವರು ನಮ್ಮ ನಡುವೆ ನೂರ್ಕಾಲ ಬಾಳಿ ಯುವಜನರಿಗೆ ಆದರ್ಶಪ್ರಾಯರಾಗಲಿ ಎಂಬುದು ನನ್ನ ಆಶಯ.

○

# ಅರ್ಥಪೂರ್ಣ ಕಾಳಜಿ

**ಶೂದ್ರ ಶ್ರೀನಿವಾಸ**

ಇದು ರಾಮಯ್ಯನವರ ಮೊದಲನೆಯ ಪುಸ್ತಕ. ಕ್ರಿಯಾಶೀಲ ರಾಜಕಾರಣಿಯಾಗಿ ರಾಮಯ್ಯನವರು ಹೊರತಂದಿರುವ ಕೃತಿ. ರಾಮಯ್ಯನವರು ರಾಜಕಾರಣಕ್ಕಿಂತ ರೇಷ್ಮೆಯಲ್ಲಿ ಪಳಗಿದವರು. ಅದಕ್ಕಾಗಿ ದುಡಿದವರು. ಇಂದು ಕರ್ನಾಟಕದ ಬಹುಭಾಗದ ಜನರು ರಾಮಯ್ಯನವರನ್ನು ಅಭಿಮಾನದಿಂದ ನೆನಪು ಮಾಡಿಕೊಳ್ಳುತ್ತಾರೆ. ಯಾಕೆಂದರೆ ರೇಷ್ಮೆ ಅವರ ಜೀವನಾಧಾರವಾಗಿದೆ. ನಮ್ಮ ರೈತರು ನಾನಾ ರೀತಿಯ ಸಂಕಷ್ಟಗಳಿಂದ ನರಳುತ್ತಿರುವಾಗ ರೇಷ್ಮೆ ಕೃಷಿ ಅವರ ರಕ್ಷಣೆಗೆ ಬಂತು. ರಕ್ಷಣೆಗೆ ಬರುವ ರೀತಿಯಲ್ಲಿ ಮಾಡಿದವರು ವೈ.ಕೆ. ರಾಮಯ್ಯನವರಂಥ ಕಳಕಳಿಯ ಮನುಷ್ಯರು, ಬಾಲಸುಬ್ರಮಣ್ಯಂ ಮತ್ತು ಮೀನಾಕ್ಷಿ ಸುಂದರಂರವರಂಥ ಐ.ಎ.ಎಸ್ ಅಧಿಕಾರಿಗಳು. ಬಹಳ ಸ್ವಾರಸ್ಯಕರವಾದ ಸಂಗತಿಯೆಂದರೆ, ಕೆಲವು ವರ್ಷಗಳ ಹಿಂದೆ ರೈತರು ತಮ್ಮ ಮನೆಗಳಲ್ಲಿ ಬಾಲಸುಬ್ರಮಣ್ಯರವರ ಫೋಟೋವನ್ನು ಇಟ್ಟುಕೊಂಡಿದ್ದನ್ನು ಕಂಡಿದ್ದೆ. ಇದು ನಮ್ಮ ಅಧಿಕಾರಿಶಾಹಿ ಸಂದರ್ಭದಲ್ಲಿ ಅತ್ಯಂತ ಮಹತ್ವಪೂರ್ಣವಾದದ್ದು.



ವೈ.ಕೆ. ರಾಮಯ್ಯನವರ ಈ ಕೃತಿಯು ನಾಲ್ಕು ಹಂತಗಳಲ್ಲಿ ವಿಸ್ತಾರಗೊಂಡಿದೆ. ಮೊದಲನೆಯದಾಗಿ; ತಮ್ಮ ಬಾಲ್ಯದ ಕೃಷಿ ಜೀವನದ ನೆನಪು, ಎರಡನೆಯದಾಗಿ; ತಮ್ಮ ವಿದ್ಯಾಭ್ಯಾಸ ಮತ್ತು ವಕೀಲಿ ವೃತ್ತಿ ಮೂರನೆಯದಾಗಿ; ರೇಷ್ಮೆ ಸಂಘದ ಮೂಲಕ ತಮ್ಮನ್ನು ಗುರ್ತಿಸಿಕೊಂಡದ್ದು ಹಾಗೂ ನಾಲ್ಕನೆಯದಾಗಿ; ರಾಜಕಾರಣಿಯಾಗಿ. ರಾಮಯ್ಯನವರು ಮೂಲಭೂತವಾಗಿ ಒಬ್ಬ ಭಾವನಾತ್ಮಕ ವ್ಯಕ್ತಿ. ಆದ್ದರಿಂದಲೇ ಅವರಿಗೆ ಆದರ್ಶವೆಂಬುದು ಸೋಗಲಾಡಿತನದ ಮಾತಲ್ಲ; ಅದು ಮನುಷ್ಯನೊಬ್ಬನ ಕ್ರಿಯಾಶೀಲತೆಗೆ ಪೂರಕವಾದ ನೈತಿಕ ಮೌಲ್ಯ. ಇದರಿಂದಲೇ ಇವರು ಎಲ್ಲೆಲ್ಲಿ ಸಾರ್ವಜನಿಕ ಜೀವನಕ್ಕೆ ತೊಡಗುತ್ತಾರೋ ಅಲ್ಲಿ ಗಂಭೀರವಾಗಿ ಕ್ರಿಯಾಶೀಲರಾಗುವುದು. ಏನಾದರೂ ಮಾಡಬೇಕೆಂಬ ಕಳಕಳಿ ಬಹಳ ಮುಖ್ಯವಾದದ್ದು.

ರಾಮಯ್ಯನವರ ಒಟ್ಟು ಬರವಣಿಗೆ ತುಂಬ ಸರಳವಾಗಿದೆ. ನನ್ನ ಜೀವನದ ಇತರೆ ವಿಚಾರಕ್ಕಿಂತ, ನನ್ನ ಜನರಿಗೆ ಉಪ್ಪು – ಮೆಣಸು, ಬಟ್ಟೆ– ಬರೆಗಳಿಗೆ ದಾರಿ ಮಾಡಿಕೊಟ್ಟ ರೇಷ್ಮೆ ಬಗ್ಗೆ ಬರೆಯುವುದು ಒಳ್ಳೆಯದು ಅನ್ನಿಸಿತು ಎಂದು ಹೊರಡುವರು. ಹಾಗೆಯೇ ''ನಾನು ತುಂಬಾ

ಅದೃಷ್ಟಶಾಲಿ. ಬಂಗಲೆ, ಕಾರು, ಆಸ್ತಿ, ಅಧಿಕಾರ, ವಿದ್ಯೆ-ಅಂತಸ್ತು ಮತ್ತು ಸವಲತ್ತುಗಳನ್ನು ಪಡೆದುಕೊಂಡ ಕಾರಣಕ್ಕಾಗಿ ಅಲ್ಲ. ಹಸಿದಾಗ ಅನ್ನವಿಲ್ಲದೆ ಬಳಲಿದ ಅನುಭವ. ಅಂತೆಯೇ ಭಕ್ಷ್ಯ ಭೋಜನಗಳು ರಾಶಿರಾಶಿಯಾಗಿ ಲಭ್ಯವಾದ ಅನುಭವ ನನ್ನದು. ಕಾಡುಹಳ್ಳಿ ಒಂದರಲ್ಲಿ ದನಕುರಿಗಳನ್ನು ಮೇಯಿಸಿ, ಸೋಣೆಯ ನೀರು ಕುಡಿದು, ಜಡಿಮಳೆಯಲ್ಲಿ ನೆನೆದು, ಹಿಪ್ಪುನೇರಳೆಸೊಪ್ಪು ಕಿತ್ತು ಹುಳುಸಾಕಿದ ಅನುಭವ ಒಂದು ಕಡೆಯಾದರೆ, ಅತ್ಯಾಧುನಿಕ ಸಮಾಜವನ್ನು ನೋಡುವ ಅನುಭವ ಮತ್ತೊಂದು ಕಡೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಇಷ್ಟೊಂದು ವಿಭಿನ್ನ ಅನುಭವ ಪಡೆದುಕೊಂಡ ತಲೆಮಾರಿಗೆ ಸೇರಿದವನು ನಾನು ಎನ್ನುವುದೇ ಅದೃಷ್ಟಶಾಲಿ ಎನ್ನುವುದಕ್ಕೆ ಕಾರಣ. ಈ ಭಾಗವನ್ನು ಓದುತ್ತಿದ್ದಾಗ ತೇನ್‌ಸಿಂಗ್ ಜೀವನ ಚರಿತ್ರೆ ನೆನಪಿಗೆ ಬಂತು. ಆತನೂ ಅಷ್ಟೇ. ತನ್ನ ಆತ್ಮಕಥೆಯನ್ನು ಪ್ರಾರಂಭಿಸುವಾಗ ''ನಾನು ಅದೃಷ್ಟಶಾಲಿ, ಹಿಮಾಲಯ ಪರ್ವತದ ತಪ್ಪಲಲ್ಲಿ ಚಮರಿ ಮೃಗಗಳನ್ನು ಮೇಯಿಸುತ್ತ ಬಂದವನು. ಗೌರಿಶಂಕರದಿಂದ ಜಗತ್ತನ್ನೆಲ್ಲ ನೋಡಲು ಸಾಧ್ಯವಾಯಿತು'' ಎಂದು ಮತ್ತೆ ಮತ್ತೆ ಹೇಳುತ್ತಾನೆ. ರಾಮಯ್ಯನವರು ತಮ್ಮೆಲ್ಲ ಸರಳ ನಡವಳಿಕೆಯ ನಡುವೆಯೂ ತಮ್ಮೂರನ್ನು ತುಂಬಾ ಸ್ಮರಿಸಿಕೊಳ್ಳುತ್ತಾರೆ. ಹೀಗೆ ಸ್ಮರಣೆಯಲ್ಲೇ ರೇಷ್ಮೆ ಸಾಗಾಣಿಕೆಯ ಬಗ್ಗೆ, ಅಲ್ಲಿಯ ಜನರ ಬದುಕಿನ ಬಗ್ಗೆ ನಾನಾ ರೀತಿಯ ವಿವರಗಳನ್ನು ಕಾಣಬಹುದು. ತಮ್ಮ ಇಡೀ ಅನುಭವವನ್ನು ತಲ್ಲೀನರಾಗಿಯೇ ನೋಡುತ್ತಾರೆ. ಒಂದು ರೀತಿಯ ಅಂತರವನ್ನು ಕಾಯ್ದುಕೊಂಡು ಬರುವುದಿಲ್ಲ. ಈ ಕೃತಿಯ ಚೌಕಟ್ಟಿನಲ್ಲಿ 'ಅಂತರ'ದ ಅಗತ್ಯವೂ ಇಲ್ಲ ಅನ್ನಿಸುತ್ತದೆ. ಯಾಕೆಂದರೆ ರೇಷ್ಮೆಯೊಂದಿಗೆ ಒಟ್ಟೊಟ್ಟಿಗೆ ಬದುಕಿ ಬಂದಿರುವುದರಿಂದ ಮತ್ತು ಈಗಲೂ ಅದರ ವಲಯದಲ್ಲಿಯೇ ಕೆಲಸ ಮಾಡುತ್ತಿರುವುದರಿಂದ ರಾಮಯ್ಯನವರನ್ನು ಚೆನ್ನಾಗಿ ಬಲ್ಲವರು ಈ ಚೌಕ್ಕಟ್ಟಿನಲ್ಲಿಟ್ಟೇ ನೋಡುತ್ತಾರೆ.

ಇಂದು ರೇಷ್ಮೆ ಇಲಾಖೆ ಕ್ರಿಯಾಶೀಲವಾಗಿದ್ದರೆ ಅದು ರಾಮಯ್ಯನವರ ಮತ್ತು ಬಾಲಸುಬ್ರಹ್ಮಣ್ಯಂರವರ ಕೊಡುಗೆ. ಇದೇ ರೀತಿಯಲ್ಲಿ ಕೆಲಸ ಮಾಡುವ ನಾನಾ ರೀತಿಯ ಅಧಿಕಾರಿಗಳು ಅಲ್ಲಿ ಹುಟ್ಟಿಕೊಂಡಿದ್ದಾರೆ. ರಾಮಯ್ಯನವರು ಮತ್ತೆ ಮತ್ತೆ ಪ್ರಸ್ತಾಪ ಮಾಡುವ ವೀರಯ್ಯನಂಥವರ ಚಿತ್ರಣ ಕೃತಿಯುದ್ದಕ್ಕೂ ದೊರೆಯುತ್ತದೆ. ಒಮ್ಮೆ ಇವರು ವೀರಯ್ಯನವರ ಮನೆಗೆ ಹೋದಾಗ ''ಕಾಗದದ ರಟ್ಟಿನ ಮೇಲೆ ಹಿಪ್ಪನೇರಳೆ ಎಲೆ ತಿನ್ನುತ್ತಿದ್ದ ಹುಳುವಿನ ಚಿತ್ರದ ದೃಶ್ಯ ಇಂದಿಗೂ ಅಚ್ಚಳಿಯದೆ ಉಳಿದಿದೆ. ನನ್ನ ಜ್ಞಾಪಕದಲ್ಲಿ ಇನ್ನೂ ಉಳಿದಿರುವ ಮತ್ತೊಂದು ವಸ್ತು ಅವರ ಹಳೇ ರೇಡಿಯೋ'' ಎನ್ನುವಾಗ ವೀರಯ್ಯನಂಥವರ ನಿಸ್ಪೃಹತೆಯನ್ನು ಸ್ಮರಿಸಿಕೊಳ್ಳುತ್ತಾರೆ.

ನಾನು ಮತ್ತು ರೇಷ್ಮೆ ಕೃತಿಯು ಒಂದು ದೃಷ್ಟಿಯಿಂದ ರಾಮಯ್ಯನವರ ಆತ್ಮ ಕಥನ ಅನ್ನಿಸಿದರೂ ಒಟ್ಟು ರೇಷ್ಮೆ ಬೆಳವಣಿಗೆಯ ಚರಿತ್ರೆಯೇ ಇಲ್ಲಿದೆ. ಈ ದೃಷ್ಟಿಯಿಂದ ಚೇನಾಗೆ



ಸಂಬಂಧಿಸಿದ ವಿವರಗಳು ಆತ್ಮೀಯವಾದಂತಹವು. ಚೀನಾ, ಜಪಾನ್ ಮತ್ತು ಕೊರಿಯಾ ದೇಶಗಳು ರೇಷ್ಮೆಯ ಚರಿತ್ರೆಯನ್ನು ರಕ್ಷಿಸಿಕೊಂಡು ಬಂದಿವೆ. ಆದ್ದರಿಂದಲೇ ಅವರು ಒಟ್ಟು ಬೆಳೆಯ ಬೆಳವಣಿಗೆ ವಲಯದಲ್ಲಿ ಸಾಧಿಸಿರುವುದು ಅಪಾರ. ಇದಕ್ಕೆ ಕಾರಣ: ಶಿಸ್ತು ಮತ್ತು ಸ್ವಚ್ಛತೆ ಎಂಬುದನ್ನು ರಾಮಯ್ಯನವರು ಗಾಢವಾಗಿ ನಂಬುತ್ತಾರೆ. ರೇಷ್ಮೆ ತುಂಬ ಸೂಕ್ಷ್ಮ ರೀತಿಯ ಬೆಳೆ ಆಗಿರುವುದರಿಂದ ಶಿಸ್ತು ಮತ್ತು ಸ್ವಚ್ಛತೆ ನಿಜವಾಗಿಯೂ ಅಗತ್ಯವಾದ ವಿಷಯವಾಗಿದೆ. ಇವರು ರೇಷ್ಮೆ ಇಲಾಖೆಯ ಮಂತ್ರಿಯಾಗಿದ್ದಾಗ ಇದಕ್ಕೆ ರೂಪ ಕೊಡಲು ಪ್ರಯತ್ನಿಸಿದ್ದಾರೆ.

ಇಲ್ಲಿಯ ಒಟ್ಟು ಆತ್ಮಕಥನದಲ್ಲಿ ರೇಷ್ಮೆ ಕೃಷಿಯ ಬೆಳವಣಿಗೆಗೆ ಸಂಬಂಧಿಸಿದಂತೆ ನಾನಾ ರೀತಿಯ ಸಲಹೆಗಳಿವೆ. ಅವೆಲ್ಲ ಹೋರಾಟದ ಅನುಭವಗಳು. ಇವರು ಜಾರಿಗೆ ತರಲು ಕಾರಣವಾದ 'ಬೋನಸ್' ವಿಷಯ: ಒಂದು ಸಾವಿರ ಗೂಡಿಗೆ 5-10 ರೂಪಾಯಿ ಇಲಾಖೆಯ ಸವಲತ್ತು ವಾಸ್ತವವಾಗಿ ರೈತರನ್ನು ಎಷ್ಟೋಬಾರಿ ಜೀವಂತವಾಗಿ ಇಟ್ಟಿದೆ. ರೇಷ್ಮೆ ಬೆಳೆಗೆ ಇರುವ ನಾನಾ ರೀತಿಯ ಅಡಚಣೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಮಹತ್ವಪೂರ್ಣವಾದ್ದು.

ನೂರೆಂಬತ್ನಾಲ್ಕು ಪುಟಗಳ ಈ ಕೃತಿಯು ವಿಪುಲವಾದ ವಿವರಗಳನ್ನು ಪಡೆದಿದೆ. ಓದುವಾಗ ಎಲ್ಲಿಯೂ ಬೋರ್ ಅನ್ನಿಸುವುದಿಲ್ಲ. ಇದು ನಾವೆಲ್ಲರೂ ಆಸ್ಥೆಯಿಂದ ಓದಬೇಕಾದ ಕೃತಿ.

O

**(ಲಂಕೇಶ್ ಪತ್ರಿಕೆ : 16-9-1992)**

# ಹೋರಾಟದ ಹೊಸ ಹೆಜ್ಜೆ

**ಪಿ ಲಂಕೇಶ್**

ತುಮಕೂರು ಜಿಲ್ಲೆಯ ಅಭಿವೃದ್ಧಿಗೆ ಪ್ರಮುಖ ಆಧಾರವಾಗುವ, ಜಿಲ್ಲೆಯ ಅರ್ಧ ಭಾಗಕ್ಕೆ ಜೀವನಾಡಿಯಾಗುವ, ಜಿಲ್ಲೆಯ ಜನರ ಜೀವನ ಶೈಲಿಯನ್ನು ಬಂದ ಕೆಲವೇ ವರ್ಷಗಳಲ್ಲಿ ಬುಡಮೇಲು ಮಾಡಿಬಿಡುವಂಥ ಹೇಮಾವತಿ ಯೋಜನೆ ಪ್ರಾರಂಭವಾಗಿ ಹತ್ತು ವರ್ಷಗಳು ಕಳೆಯುತ್ತಾ ಬಂದರೂ, ಜಿಲ್ಲೆಯ ರೈತರ ಜಮೀನಿಗೆ ಮಾತ್ರ ಹೇಮಾವತಿ ಇನ್ನೂ ಕಾಲಿಟ್ಟಿಲ್ಲ; ಸದ್ಯಕ್ಕೆ ಬರುವ ಭರವಸೆಯೂ ಇಲ್ಲ. ಅಧಿಕಾರಕ್ಕೆ ಬಂದ ಪ್ರತಿಯೊಂದು ಸರ್ಕಾರವೂ, ಪ್ರತಿಯೊಬ್ಬ ಮುಖ್ಯಮಂತ್ರಿಯೂ, ಒಂದಲ್ಲ ಒಂದು ಕಾರಣ ತೋರುತ್ತಾ, ಕುಂಟುನೆಪ ಹುಡುಕುತ್ತಾ ತುಮಕೂರು ಜಿಲ್ಲೆಗೆಂದು ಹೊರಟ ಹೇಮಾವತಿಯನ್ನು ಹರಿಯಲು ಬಿಡದೆ, ಅಲ್ಲಲ್ಲೆ ಹಿಡಿದು ಕೂರಿಸುತ್ತಿದ್ದಾರೆ.

ಈ ರಾಜ್ಯಕ್ಕೆ ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸುವುದೇ ನನ್ನ ಧ್ಯಾನ, ನನ್ನ ಪ್ರಾಣ ಎಂದೆಲ್ಲ, ಮುಖ್ಯಮಂತ್ರಿಯಾಗುವ ಮೊದಲು ರಾಜ್ಯದುದ್ದಕ್ಕೂ ಕೂಗು ಹಾಕುತ್ತ ಗದ್ದಲವೆಬ್ಬಿಸಿಕೊಂಡು ಬಂದ ಮುಖ್ಯಮಂತ್ರಿ ದೇವೇಗೌಡರೂ ಸಹ ಹೇಮಾವತಿ ವಿಷಯದಲ್ಲಿ ಬೇರೆ ಮುಖ್ಯಮಂತ್ರಿಗಳಿಗಿಂತ ಕೆಟ್ಟದಾಗಿ ವರ್ತಿಸತೊಡಗಿದ್ದಾರೆ. ರಾಜಕೀಯ ವೈಷಮ್ಯಗಳನ್ನು ಇಂಥ ಮಹತ್ತರ ಯೋಜನಾ ಕಾರ್ಯಗಳೊಂದಿಗೂ ತಳುಕು ಹಾಕಿಕೊಂಡು, ತೀರ್ಮಾನ ಕೈಗೊಳ್ಳುವ ಇವರ ಕಾರ್ಯವೈಖರಿಯಿಂದಾಗಿ ಜಿಲ್ಲೆ ಅನ್ಯಾಯಕ್ಕೊಳಗಾಗುತ್ತಿದೆ. ಜಿಲ್ಲೆಯ ಜನತೆ ದೇವೇಗೌಡರಿಂದ ಬಹಳಷ್ಟು ನಿರೀಕ್ಷಿಸಿದ್ದರು. ಆದರೆ ದೇವೇಗೌಡರು ಹೇಮಾವತಿ ವಿಷಯದಲ್ಲಿ ನಡೆದುಕೊಳ್ಳುತ್ತಿರುವ ರೀತಿ ಜನರನ್ನು ನಿರಾಶೆಗೊಳಿಸಿದೆ. ಹೇಮಾವತಿ ಸಮಸ್ಯೆಯನ್ನು ದೇವೇಗೌಡ ಮತ್ತು ವೈ. ಕೆ. ರಾಮಯ್ಯನವರ ನಡುವಿನ ಸಮಸ್ಯೆ ಎಂಬಂತೆ ಬಿಂಬಿಸುತ್ತಿರುವುದು ಮಾತ್ರ ಈ ಜಿಲ್ಲೆಯ ದೌರ್ಭಾಗ್ಯವಾಗಿದೆ.

ಹೇಮಾವತಿಯಂಥ ಬೃಹತ್ ನೀರಾವರಿ ಯೋಜನೆ ಪ್ರಕಾರ 1990ಕ್ಕೆ ಜಿಲ್ಲೆಗೆ ನೀರು ಹರಿಸಬೇಕಾಗಿದ್ದರೂ, 1995 ಆದರೂ ಕಾಲುವೆ ಕೆಲಸವನ್ನೂ ಮುಗಿಸಿಲ್ಲ. ಸರ್ಕಾರಗಳ ಈ ಬೇಜವಾಬ್ದಾರಿತನ, ಕರ್ತವ್ಯ ಲೋಪವನ್ನು ತೀವ್ರವಾಗಿ ಪ್ರತಿಭಟಿಸುವಂತ ಕೆಲಸವಾಗಲಿ. ಈ ನಿಟ್ಟಿನಲ್ಲಿ ಜನರನ್ನು ಎಚ್ಚರಿಸಿ, ಸಂಘಟನಾತ್ಮಕ, ವ್ಯವಸ್ಥಿತ ಹೋರಾಟವನ್ನು ರೂಪಿಸುವಂತ ಕೆಲಸವನ್ನು ಯಾವುದೇ ರಾಜಕಾರಣಿಯಾಗಲಿ, ಯಾವುದೇ ರಾಜಕೀಯಪಕ್ಷ ಅಥವಾ

ಸಂಘಟನೆಯಾಗಲಿ ಮಾಡುವ ಸಾಮರ್ಥ್ಯ ಪಡೆದುಕೊಳ್ಳಲಿಲ್ಲ. ಚುನಾವಣೆಯಲ್ಲಿ ಸೋತಾಗ ಅಧಿಕಾರ ಕಳೆದುಕೊಂಡಾಗ ಹೇಮಾವತಿ ಸಮಸ್ಯೆ ಕೈಗೆತ್ತಿಕೊಳ್ಳುವ ಜಿಲ್ಲೆಯ ರಾಜಕಾರಣಿಗಳು ಜನರ ಗುಮಾನಿಗೆ ಗುರಿಯಾಗಿ ಬೆಂಬಲ ಕಳೆದುಕೊಂಡುಬಿಡುತ್ತಾರೆ. ಹೋರಾಟವೂ ನೆಪಮಾತ್ರವಾಗಿ ಸತ್ವ ಕಳೆದುಕೊಳ್ಳುತ್ತದೆ. ರಾಜಕೀಯ ಲಾಭ ಲೆಕ್ಕಾಚಾರದಲ್ಲಿರುವ ರಾಜಕಾರಣಿಗಳು ಬಿಡಿ ಬಿಡಿಯಾಗಿಯೇ ಹೋರಾಟವನ್ನು ಈವರೆಗೆ ರೂಪಿಸಿಕೊಂಡು ಬಂದಿದ್ದಾರೆ.

ನಾಲೆ ಕೆಲಸಕ್ಕಾಗಿ ಹೋರಾಟದ ಮಾರ್ಗ ಹಿಡಿದಿರುವ ಮಾಜಿ. ಸಚಿವ ವೈ.ಕೆ. ರಾಮಯ್ಯ ನಾಲೆಯ ಮಾರ್ಗದಿಂದ ರೈತರಿಗೆ ಅನ್ಯಾಯವಾಗುತ್ತಿದೆಯೆಂದು ಹೋರಾಟ ಮಾಡಿ ಇತ್ತೀಚೆಗೆ ಜೈಲಿಗೂ ಹೋಗಿಬಂದ ಮಾಜಿ ಸಚಿವ.

ಈ ಎಲ್ಲಾ ಅನುಭವಗಳಿಂದ ಪಾಠ ಕಲಿತವರಂತೆ ವೈ.ಕೆ. ರಾಮಯ್ಯನವರು ಈಗ ಹೋರಾಟದ ಹೊಸ ಹೆಜ್ಜೆ ಇಟ್ಟಿದ್ದಾರೆ. ದೇವೇಗೌಡರು ಅಧಿಕಾರಕ್ಕೇರಿದ ಮೇಲೆ 125 ಕಿ.ಮೀ. ನಿಂದ ಮುಂದಕ್ಕೆ ನಾಲೆ ಕೆಲಸ ನಿಲ್ಲಿಸಿರುವುದನ್ನು ಪ್ರಶ್ನಿಸಿ ಹೋರಾಟ ಘೋಷಿಸಿದ ರಾಮಯ್ಯನವರು, ಸೆಪ್ಟೆಂಬರ್ 28ರಂದು ತುಮಕೂರಿನ ಹೇಮಾವತಿ ಮುಖ್ಯ ಇಂಜಿನಿಯರ್ ಕಚೇರಿ ಎದುರು ಧರಣಿ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಈ ಧರಣಿ ಕಾರ್ಯಕ್ರಮಕ್ಕೆ ಜನತೆಯ ಬೆಂಬಲ ಕಮ್ಮಿಯಿದ್ದರೂ ಹೇಮಾವತಿ ಹೋರಾಟ ದೃಷ್ಟಿಯಲ್ಲಿ ಇದೊಂದು ಮಹತ್ವದ ಧರಣಿಯಾಗಿತ್ತು ವೈ. ಕೆ. ರಾಮಯ್ಯನವರು ಧರಣಿ ಹೆಸರಿನಲ್ಲಿ ಚದುರಿದ್ದ ಜೊತೆ ರಾಜಕಾರಣಿಗಳಲ್ಲಿ ಕೆಲವರನ್ನಾದರೂ ಒಟ್ಟಿಗೆ ಸೇರಿಸುವಲ್ಲಿ ಸಫಲರಾಗಿದ್ದಾರೆ. ಈ ಧರಣಿಯಲ್ಲಿ ಪಾಲ್ಗೊಂಡ ಮಂಡ್ಯದ ಜಿ. ಮಾದೇ ಗೌಡರು, ರೈತ ಸಂಘದ ಪ್ರೊ. ನಂಜುಂಡಸ್ವಾಮಿ, ಜಿಲ್ಲಾ ಕಾಂಗ್ರೆ ಅಧ್ಯಕ್ಷ ಜಿ. ಎಸ್. ಬಸವರಾಜು, ಜಿಲ್ಲಾ ಇಂದಿರಾ ಕಾಂಗ್ರೆಸ್ ಅಧ್ಯಕ್ಷ ಸಿ. ವೀರಭದ್ರಯ್ಯ ಎಲ್ಲರ ಬಾಯಲ್ಲೂ ಒಟ್ಟಿಗೆ ಒಂದೇ ವೇದಿಕೆಯ ಹೋರಾಟ ರೂಪಿಸಬೇಕೆಂಬ ಮಾತುಗಳು ಆಶಾದಾಯಕವಾಗಿದ್ದವು.

ಧರಣಿಯಲ್ಲಿ ಪ್ರಸ್ತಾವಿಕ ಭಾಷಣ ಮಾಡಿದ ವೈ.ಕೆ. ರಾಮಯ್ಯನವರು ತಾಳ್ಮೆ ಕಳೆದುಕೊಂಡುವರಂತೆ ಅಹಿಂಸಾತ್ಮಕ ಹೋರಾಟ ಯಶಸ್ವಿಯಾಗದಿದ್ದಲ್ಲಿ. ಹಿಂಸೆಗಿಳಿಯ ಬೇಕಾಗುತ್ತದೆ, ಬಾಂಬ್ ಹಾಕಬೇಕಾಗುತ್ತದೆ ಬಸ್ಸು, ಕಾರು ಸುಡಬೇಕಾಗುತ್ತದೆ ಎಂದೆಲ್ಲ ಮಾತಾಡಿದ್ದು ಕಾರ್ಯಕರ್ತರಲ್ಲಿ ಕಸಿವಿಸಿಯುಂಟುಮಾಡಿತು. ಏನೇ ಆಗಲಿ ಎಲ್ಲರೂ ಒಟ್ಟಾಗಿ ಒಂದೇ ಧ್ವನಿಯೆತ್ತಿ ಹೋರಾಡಿದರೆ ಹೇಮಾವತಿ ತುಮಕೂರು ಜಿಲ್ಲೆಗೆ ಹರಿದಾಳು. ಇಲ್ಲದಿದ್ದರೆ ..... ಯಥಾಪ್ರಕಾರ ರೈತ ಗೋಳಾಡುವುದು ಇದ್ದೇ ಇದೆ.

○

**(ಲಂಕೇಶ್ ಪತ್ರಿಕೆ :** 18 -10 -1995)

# ಮಣ್ಣಿನ ಪ್ರೀತಿ

ಪ್ರೊ. ಹಿ ಚಿ ಬೋರಲಿಂಗಯ್ಯ

ಆಗ ನಾನಿನ್ನೂ ಬಾಲಕ. ಬಹುಶಃ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ ಎಂದು ಕಾಣಿಸುತ್ತದೆ. ವೈ.ಕೆ. ರಾಮಯ್ಯನವರು ಸಿಂಹದ ಗುರುತು ಇಟ್ಟುಕೊಂಡು ವಿಧಾನಸಭೆ ಚುನಾವಣೆಗೆ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಬಲಗೈಗೆ ವಾಚು ಕಟ್ಟಿಕೊಂಡು ತುಂಬಾ ನೀಟಾದ ಉಡುಪು ತೊಟ್ಟು ಓಟು ಕೇಳುವುದಕ್ಕಾಗಿ ನಮ್ಮೂರಿಗೆ ಬಂದಿದ್ದರು. ಆಗ ನಮ್ಮ ಕಡೆಗೆಲ್ಲಾ ದೊಡ್ಡ ವಿದ್ಯಾವಂತರೆಂದು ಇಬ್ಬರನ್ನು ಗುರುತಿಸುತ್ತಿದ್ದರು. ಒಬ್ಬರು ಮದ್ದೂರು ತಾಲ್ಲೂಕು ಸೋಮನಹಳ್ಳಿಯ ಎಸ್.ಎಂ. ಕೃಷ್ಣರವರು. ಮತ್ತೊಬ್ಬರು ಕುಣಿಗಲ್ ತಾಲ್ಲೂಕಿನ ಎಲೆಕಡಕಲು ವೈ.ಕೆ. ರಾಮಯ್ಯನವರು. ಅಷ್ಟೊತ್ತಿಗಾಗಲೇ ಕೃಷ್ಣರವರು ಹೆಸರಾಂತ ರಾಜಕಾರಣಿ. ರಾಮಯ್ಯನವರು ಆವಾಗ ತಾನೇ ಸಾರ್ವಜನಿಕ ಜೀವನಕ್ಕೆ ಕಾಲಿಟ್ಟಿದ್ದ ನವಯುವಕ. ಎಂ.ಎ. ಎಲ್.ಎಲ್.ಬಿ ಎಂಬ ಉದ್ದನೆಯ ಪದವಿ ನನ್ನಂಥ ಎಳೆಯರಿಗೆ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಷ್ಟು ದೊಡ್ಡದು. ಕೇವಲ ಪದವಿಯಷ್ಟೇ ಅಲ್ಲ, ಅದಕ್ಕೆ ತಕ್ಕಂತೆ ಚಿಕ್ಕ ವಯಸ್ಸಿಗೇ ಹೆಸರಾಂತ ವಕೀಲ, ಉತ್ತಮ ಮಾತುಗಾರ, ಶಿಸ್ತಿನ ಸಿಪಾಯಿ ಎಂದೆಲ್ಲಾ ಜನ ಅವರನ್ನು ಗುರುತಿಸುತ್ತಿದ್ದರು.

ಕುಣಿಗಲ್ ತಾಲ್ಲೂಕು ಆಗಿನ್ನೂ ಒಣಗಾಡು. ಕುಣಿಗಲ್ ಕೆರೆ ಮತ್ತು ದೀಪಾಂಬುಧಿ ಕೆರೆ ಕ್ರಿ.ಶ. ಸಾವಿರದ ನೂರರಷ್ಟು ಹಿಂದೆಯೇ ಕಟ್ಟಿದ್ದ ದೊಡ್ಡ ಕೆರೆಗಳು. ನೀರನ್ನೇ ಕಾಣದ ಒಣಗಾಡಿನ ನಮ್ಮ ರೈತರು ಆ ಕೆರೆಗಳನ್ನು ದೈವೀಕ ಭಾವನೆಯಿಂದ ಕಂಡು ಅನೇಕ ಪುರಾಣಗಳನ್ನೇ ಸೃಷ್ಟಿಸಿದ್ದರು. ಆ ಕೆರೆಗಳ ಹಿಂದಿನ ಗದ್ದೆಸೀಮೆಯನ್ನು ಬಿಟ್ಟರೆ ಉಳಿದದ್ದೆಲ್ಲ ಅಪ್ಪಟ ಖುಷ್ಕಿ ಭೂಮಿ. ಅದರಲ್ಲಿಯೂ ಹುಲಿಯೂರುದುರ್ಗ ಪೂರ್ವಭಾಗಕ್ಕಿರುವ ಕುರುಚಲು ಕಾಡಿನ ಇಡೀ ಭೂಪ್ರದೇಶವಂತೂ ನಮ್ಮನ್ನು ನಾಗರೀಕ ಪ್ರಪಂಚದಿಂದಲೇ ದೂರ ಇಟ್ಟಿತ್ತು ಎಂದೇ ಹೇಳಬಹುದು. ಆದ್ದರಿಂದಲೇ ಚನ್ನಪಟ್ಟಣದ ಕಡೆಯ ಕಣ್ವ ಗದ್ದೆ ಬಯಲಿನ ಜನ ಮತ್ತು ಮದ್ದೂರಿನ ಕನ್ನಂಬಾಡಿ ನೀರು ಕಂಡ ನಮ್ಮನ್ನು 'ಗಿಡಸೀಮೆ'ಯವರು ಎಂದು ಕರೆಯುತ್ತಿದ್ದರಲ್ಲದೆ ನಮ್ಮ ಕಡೆಗೆ ಹೆಣ್ಣು ಕೊಡಲು ಹಿಂದೆ ಮುಂದೆ ನೋಡುತ್ತಿದ್ದರು. ಇಂಥ ನಿರ್ಲಕ್ಷಿತ ಗುಡ್ಡಗಾಡಿನ ಪ್ರದೇಶದಲ್ಲಿ ನನ್ನ ಮತ್ತು ವೈ.ಕೆ. ರಾಮ್ಯನವರ ಊರು. ಅವರ ಎಲೆಕಡಕಲಿಗೂ ನನ್ನ ಹಿತ್ತಲಪುರಕ್ಕೂ ನಾಲ್ಕು ಕಿ.ಮೀ.ಗಳ ಅಂತರ. ರಾಮಯ್ಯನವರ ಒಬ್ಬ ಅಕ್ಕನನ್ನು ನಮ್ಮ ಊರಿಗೇ ಕೊಟ್ಟು ಮದುವೆ ಮಾಡಿದ್ದರು. ಅವರು ನಮ್ಮ ಅಣ್ಣತಮ್ಮಿಕೆಯೂ ಹೌದು. ಇಂಥ ಒಣಗಾಡಿನ ಕುಗ್ರಾಮದಲ್ಲಿ ಹುಟ್ಟಿದ ವೈ.ಕೆ. ರಾಮಯ್ಯನವರು

ಎಂ.ಎ. ಎಲ್.ಎಲ್.ಬಿ ಮಾಡಿ ಪ್ರಸಿದ್ಧ ವಕೀಲರಾದದ್ದು ಆಕಸ್ಮಿಕವೇ. ನಮ್ಮ ಊರುಗಳ ನಡುವೆ ಇದ್ದ ಐತಿಹಾಸಿಕ ಸ್ಥಳ ಎಂದೇ ಹೆಸರಾದ ಉಜ್ಜನಿ ಎಂಬ ದೊಡ್ಡ ಗ್ರಾಮದಲ್ಲೂ ಒಬ್ಬನೇ ಒಬ್ಬ ಪದವೀಧರ ಇಲ್ಲದಿದ್ದ ಸಂದರ್ಭದಲ್ಲಿ ವೈ.ಕೆ. ರಾಮಯ್ಯನವರು ಮೂರು ಪದವಿಗಳನ್ನು ಪಡೆದು ಆ ಸುತ್ತಿನ ದೊಡ್ಡ ವಿದ್ಯಾವಂತ ಎಂಬ ಕೀರ್ತಿಗೆ ಪಾತ್ರರಾಗಿದ್ದರು. ಆದ್ದರಿಂದಲೇ ಸಿಂಹದ ಗುರುತು ಇಟ್ಟುಕೊಂಡು ವಿಧಾನಸಭೆಗೆ ಓಟು ಕೇಳಲು ಬಂದಾಗ, ನನ್ನಂಥ ಕಿರಿಯರೆಲ್ಲ ವೈ.ಕೆ. ರಾಮಯ್ಯನವರಿಗೆ ಓಟು ಕೊಡಿ ಎಂದು ಅವರ ಹಿಂದೆ ಕೂಗುತ್ತಾ ಹೋಗಿದ್ದೆವು.

ಒಬ್ಬ ಮನುಷ್ಯ ಪದವೀಧರನಾಗುವುದು, ವಕೀಲನಾಗುವುದು ಅಷ್ಟೇನೂ ಮುಖ್ಯವಲ್ಲ. ಯಾಕೆಂದರೆ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಇದು ಸರ್ವೇಸಾಮಾನ್ಯವಾದ ವಿಚಾರ. ಆದರೆ ತೀರಾ ಹಿಂದುಳಿದ ಕುಗ್ರಾಮದಿಂದ ಒಡಮೂಡಿದ ಒಬ್ಬ ಮನುಷ್ಯ ಆನಂತರದಲ್ಲಿ ತನ್ನ ಹುಟ್ಟಿದ ನೆಲಕ್ಕೆ ಏನು ಮಾಡಿದ ಎಂಬುದೇ ಬಹಳ ಮುಖ್ಯ. ವೈ.ಕೆ. ರಾಮಯ್ಯನವರ ಸಾಧನೆ ಇರುವುದು ಇಲ್ಲಿಯೇ. ಅವರು ವಿಶಿಷ್ಟವ್ಯಕ್ತಿಯಾಗಿ ರೂಪುಗೊಂಡದ್ದೇ ಒಂದು ಕಥನ.

ವಕೀಲರಾಗಿ ಅಪಾರ ಕೆಲಸ ಮತ್ತು ಅದಕ್ಕೆ ತಕ್ಕನಾಗಿ ಕೈತುಂಬ ಹಣ ಬರುತ್ತಿದ್ದರೂ ಕೇವಲ ಐಷಾರಾಮದ ಜೀವನಕ್ಕೆ ಗಂಟು ಬೀಳದೆ ತನ್ನನ್ನು ಬೆಳೆಸಿದ ಮಣ್ಣಿನ ಒಡಲನ್ನು ಮುಟ್ಟಿ ನೋಡತೊಡಗಿದ್ದು ಅವರ ವ್ಯಕ್ತಿತ್ವವನ್ನು ಬೇರೆಯದೇ ಹಾದಿಯಲ್ಲಿ ಕೊಂಡೊಯ್ದಿತು ಎಂದು ಹೇಳಬಹುದು. ರೇಷ್ಮೆ ನಮ್ಮ ಒಣಗಾಡಿನ ನೀರಸ ಬದುಕಿಗೆ ಆಗಾಗ ಸುಖದ ಸಿಂಚನ ನೀಡುವ ಒಂದು ಆಶಾದಾಯಕ ಸಂಗತಿಯಾಗಿತ್ತು. ಬೆಳೆಯುವ ಒಂದಿಷ್ಟು ರಾಗಿ ಮತ್ತು ಕಾಳು ಕಡ್ಡಿ ಹೊಟ್ಟೆಯನ್ನು ತುಂಬುತ್ತಿದ್ದಾರೂ ಬಟ್ಟೆ ಬರೆಗೆ, ಉಪ್ಪು ಮೆಣಸಿಗೆ ರೇಷ್ಮೆ ಗೂಡಿನ ಮಾರಾಟದಿಂದ ಬರುವ ಪುಡಿಗಾಸೇ ಆಧಾರವಾಗಿತ್ತು. ಅದರಲ್ಲಿಯೂ ನಮ್ಮ ತಾಲ್ಲೂಕು ಬಿತ್ತನೆ ವಲಯಕ್ಕೆ ಸೇರಿತ್ತಾದ್ದರಿಂದ ಹೆಚ್ಚು ಹಣ ತರುವ ಮಿಶ್ರತಳಿ ಗೂಡುಗಳನ್ನು ನಾವು ಉತ್ಪಾದಿಸುವ ಹಾಗಿರಲಿಲ್ಲ. ಈ ನಿರ್ಬಂಧ ನಮ್ಮನ್ನು ತೀರಾ ಇಕ್ಕಟ್ಟಿಗೆ ಸಿಲುಕಿಸಿತ್ತಲ್ಲದೇ ಬಿತ್ತನೆ ಗೂಡಿನ ದರವನ್ನು ಹೆಚ್ಚಿಸುವ ಯಾವ ಪ್ರಯತ್ನವೂ ನಡೆದಿರಲಿಲ್ಲ. ಸ್ವತಃ ರೇಷ್ಮೆ ಸೊಪ್ಪು ಕಿತ್ತು, ಹುಳ ಬದಲಿಸಿ, ಸೊಪ್ಪುಹಾಕಿ, ಗೂಡು ಕಟ್ಟಿಸುವವರೆಗಿನ ಅಪಾರ ಪರಿಶ್ರಮದಲ್ಲಿ ತನ್ನ ಬಾಲ್ಯ ಕಳೆದಿದ್ದ ರಾಮಯ್ಯನವರಿಗೆ ನಮ್ಮ ಕಷ್ಟಗಳ ಸರಮಾಲೆಯೇ ಗೊತ್ತಿದ್ದವು. ಬಾಲ್ಯದಿಂದಲೂ ಹೋರಾಟದ ಬದುಕನ್ನೇ ಸಾಗಿಸುತ್ತ ಬಂದಿದ್ದ ರಾಮಯ್ಯನವರಿಗೆ ಬೆಳೆಗಾರರ ಇಂಥ ದುಃಸ್ಥಿತಿಯನ್ನು ಕಂಡು ಸುಮ್ಮನಿರಲು ಸಾಧ್ಯವಿರಲಿಲ್ಲ. ಕರ್ನಾಟಕದ ರೇಷ್ಮೆ ಬೆಳೆಗಾರರ ಪರವಾದ ಪ್ರಥಮ ಹೋರಾಟವನ್ನು ಅವರೇ ಹುಟ್ಟುಹಾಕಿದರು. ರಾಮಯ್ಯನವರ ಹೋರಾಟದ ಪ್ರಭಾವ ಹೇಗಿತ್ತೆಂದರೆ, ಬಹುಬೇಗ ಅವರ ಕರ್ತೃತ್ವಶಕ್ತಿಯ ಪರಿಚಯ ಕೋಲಾರ ಮತ್ತು ಇತರ ಕಡೆಗಳ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿ ಚುನಾಯಿತರಾದರು. ಅಂದಿನಿಂದ ಅವರ ಹೋರಾಟಕ್ಕೆ ಒಂದು ತಾತ್ವಿಕ ಮತ್ತು ತಾಂತ್ರಿಕ ತಳಹದಿಯೂ ಸಿಕ್ಕಿತು.

ರೇಷ್ಮೆ ಬಗೆಗಿನ ಅವರ ಹೋರಾಟವನ್ನು, ಆ ಹೋರಾಟದ ಮೂಲಕ ಅವರು ಸಾಧಿಸಿದ ಸಾಧನೆಗಳನ್ನು ನಾನಿಲ್ಲಿ ಪಟ್ಟಿ ಮಾಡಲು ಬಯಸುವುದಿಲ್ಲ. 1992ರಷ್ಟು ಹಿಂದಯೇ ಅವರು ನಾನು ಮತ್ತು ರೇಷ್ಮೆ ಎಂಬ ಅನುಭವಾತ್ಮಕ ಗ್ರಂಥ ಬರೆದು ಅವೆಲ್ಲವನ್ನು ವಿವರಿಸಿದ್ದಾರೆ. ಆದರೆ ಅವರು ಛಲದಿಂದ ಸಾಧಿಸಿದ ಸಾಧನೆಗಳಿಗೆ ನಮ್ಮ ರೈತರಲ್ಲಿ ಎಂಥ ಪ್ರತಿಕ್ರಿಯೆ ಇತ್ತು ಎಂಬುದನ್ನು ಅದೇ ನೆಲದವನಾಗಿ ನಾನು ಹೇಳಬೇಕಾಗುತ್ತದೆ.

ಬಿತ್ತನೆ ವಲಯದ ರೈತರಿಗೆ ಕೆ.ಜಿ. ಗೂಡಿಗೆ ಇಂತಿಷ್ಟು ಎಂದು ಬೋನಸ್ ನೀಡಬೇಕು ಎಂದು ರಾಮಯ್ಯ ಸರ್ಕಾರಕ್ಕೆ ಸಲಹೆ ಮಾಡಿದರು. ಹಟ ಹಿಡಿದರು. ಆಳುವವರು ಮತ್ತು ಅಧಿಕಾರಿಗಳಿಗೆ ತಿಳಿಯ ಹೇಳಿದರು. ಕಡೆಗೆ ಛಲದಿಂದ ಹೋರಾಡಿದರು. ಬೋನಸ್ ಕಾರ್ಯರೂಪಕ್ಕೆ ಬಂತು. ಹಂತಹಂತವಾಗಿ ಅದು ಹೆಚ್ಚುತ್ತಾ ಹೋಯಿತು. ಇವತ್ತಿಗೂ ನಮ್ಮ ಬಿತ್ತನೆ ಪ್ರದೇಶದ ರೈತರಿಗೆ ಇದೊಂದು ಆಶಾಕಿರಣ. ಬೆಲೆ ಪಾತಾಳಕ್ಕಿಳಿದರೂ ಬೋನಸ್ ತಲೆ ಕಾಯುತ್ತದೆ ಎಂಬ ಒಂದು ಸಮಾಧಾನ. ರಾಮಯ್ಯನವರ ಈ ಹೋರಾಟ ಅವರಿಗೆ 'ಬೋನಸ್ ರಾಮಯ್ಯ' ಎಂಬ ಅಡ್ಡ ಹೆಸರನ್ನೇ ತಂದಿತು. ಪ್ರಥಮವಾಗಿ ನಿಂತ ಚುನಾವಣೆಯಲ್ಲಿ ಸೋತರೂ ಅವರು ಇಟ್ಟುಕೊಂಡಿದ್ದ ಸಿಂಹದ ಗುರುತು ಜನರ ನೆನಪಿನಿಂದ ಮಾಸಿರಲಿಲ್ಲ. ಇವನು ನಿಜವಾದ ಸಿಂಹ ಎಂದು ಹಳ್ಳಿಯ ಜನ ಪ್ರಶಂಸಿಸಿದರು.

ಮುಂದಿನ ದಿನಗಳಲ್ಲಿ ರೇಷ್ಮೆ ರೈತರ ಪರವಾದ ರಾಜ್ಯಮಟ್ಟದ ಹೋರಾಟ ಮತ್ತು ಸಂಘಟನೆಗಳನ್ನು ಅವರು ಹಮ್ಮಿಕೊಂಡರು. ರಾಮಯ್ಯನವರ ನಿಜ ವ್ಯಕ್ತಿತ್ವ ಇರುವುದು ಎಲ್ಲಿ ಎಂದರೆ, ಅದು ಕೇವಲ ಹೋರಾಟದಲ್ಲಲ್ಲ. ರೈತರ ಅಜ್ಞಾನದ ಬಗ್ಗೆ, ಅವರಲ್ಲಿದ್ದ ಮೂಢನಂಬಿಕೆಗಳ ಬಗ್ಗೆ ಅವರಿಗೇ ತಿಳಿಯ ಹೇಳಿ ತಿದ್ದಿಕೊಳ್ಳುವಂತೆ ಮಾಡುವ ಗುಣಾತ್ಮಕ ವೈಚಾರಿಕ ಬದಲಾವಣೆಗಳನ್ನು ಇಲ್ಲಿ ಗಮನಿಸಬೇಕು. 'ಕೇವಲ ಆಳುವ ವರ್ಗವನ್ನು ದೂಷಿಸಿದರೆ ಸಾಲದು, ನಮ್ಮ ತಪ್ಪುಗಳನ್ನು ನಾವು ನೋಡಿಕೊಳ್ಳಬೇಕು ಎಂಬ ಆತ್ಮನಿರೀಕ್ಷೆಯ ಬುದ್ಧಿವಾದವನ್ನು ಅವರು ಹೇಳುತ್ತಿದ್ದರು. ರೇಷ್ಮೆ ಬೆಳೆಯ ಬಗ್ಗೆ ರೈತರಲ್ಲಿದ್ದ ಅವೈಜ್ಞಾನಿಕ ಮೂಢನಂಬಿಕೆಗಳು, ಸ್ವಚ್ಛತೆ ಕಾಪಾಡದಿರುವುದು, ಸೋಮಾರಿತನ ಇತ್ಯಾದಿಯಾಗಿ ಅವರು ತಮ್ಮ ಭಾಷಣಗಳಲ್ಲಿ ಎಚ್ಚರಿಸುತ್ತಿದ್ದ ರೀತಿ ಇಂದಿಗೂ ನನ್ನ ನೆನಪಿನಲ್ಲಿದೆ. ರೇಷ್ಮೆಗೆ ಸಂಬಂಧಿಸಿದ ಹೊಸ ತಳಿಗಳನ್ನು ಸಂಶೋಧಿಸುವ ನಿಟ್ಟಿನಲ್ಲಿ, ವೈಜ್ಞಾನಿಕ ಆಂದೋಲನ ಹಮ್ಮಿಕೊಳ್ಳುವಲ್ಲಿ, ಮಾರುಕಟ್ಟೆಯ ಮೋಸದ ವ್ಯವಹಾರ ತಪ್ಪಿಸುವಲ್ಲಿ ಸರ್ಕಾರದ ಅನಾಧರಣೆಯನ್ನು ರಾಮಯ್ಯನವರಷ್ಟು ಕಟುವಾಗಿ ಟೀಕಿಸಿದವರು ಮತ್ತೊಬ್ಬರಿಲ್ಲ.

ನೇರ, ನಿಷ್ಠುರ ನಡೆಯ ರಾಮಯ್ಯನವರು ಶಾಸಕರೇ ಆಗಿ ಆಯ್ಕೆಗೊಂಡಾಗ, ಮುಂದೊಂದು ದಿನ ರೇಷ್ಮೆ ಮಂತ್ರಿಯೇ ಆದಾಗ ನಮ್ಮ ಭಾಗದ ರೈತರಿಗೆ ಆದ ಸಂತಸ ಅಷ್ಟಿಷ್ಟಲ್ಲ.

ಆ ಸಂದರ್ಭದಲ್ಲಿ ಅವರು ತಂದ ಸುಧಾರಣೆಗಳು, ಮಾಡಿದ ಆಂತರಿಕ ಬದಲಾವಣೆಗಳು, ಕೈಗೊಂಡ ಕ್ರಾಂತಿಕಾರಕ ಯೋಜನೆಗಳು ಅವರನ್ನು ಎಂದೂ ಮರೆಯಲಾರದ ಒಬ್ಬ ಸರ್ವಶ್ರೇಷ್ಠ ರೈತ ನಾಯಕನನ್ನಾಗಿ ರೂಪಿಸಿದವು. ನಮ್ಮ ಜನ ಅವರನ್ನು 'ರೇಷ್ಮೆ ರಾಜ' ಎಂಬ ಪ್ರೀತಿಯ ಬಿರುದು ಕೊಟ್ಟು ಹಾಡಿ ಹೊಗಳಿದರು.

ವೈ.ಕೆ. ರಾಮಯ್ಯನವರು ಕೇವಲ ರೇಷ್ಮೆಯನ್ನಷ್ಟೇ ತಮ್ಮ ಹೋರಾಟದ ಅಂಗಳದಲ್ಲಿ ಚಿಗುರಿಸಲಿಲ್ಲ. ರೈತರಿಗೆ ಮೂಲಭೂತವಾಗಿ ಬೇಕಾದ ನೀರಿನ ಬಗ್ಗೆ ಅವರು ಅಪಾರ ಆಸ್ಥೆ ವಹಿಸಿದರು. ತುಮಕೂರು ಜಿಲ್ಲೆಯಂಥ ಬೆಂಗಾಡಿಗೆ ಹೇಮಾವತಿಯನ್ನು ಎಳೆದುತರುವ ಪಣ ತೊಟ್ಟರು. ಅವರ ಅವಿರತ ಹೋರಾಟದ ಫಲವಾಗಿ ಇಂದು ತುಮಕೂರು ಜಿಲ್ಲೆಯ ಒಣ ಭೂಮಿಯ ಮಣ್ಣಿನ ಕಣಗಳನ್ನ ಹೇಮಾವತಿಯ ನೀರು ಸಮೃದ್ಧವಾಗಿ ತೋಯಿಸುತ್ತಿದೆ. ಹೇಮಾವತಿಯ ಹರಿಕಾರರೆಂದು ರೈತರೆಲ್ಲರಿಂದ ಪ್ರಶಂಸೆ ಪಡೆದ ರಾಮಯ್ಯ ಒಂದು ಅರ್ಥದಲ್ಲಿ ತುಮಕೂರು ಜಿಲ್ಲೆಯ ಜೀವನದಿಯಾಗಿ ದುಡಿಯುವ ಜನರ ಮನದಾಳದಲ್ಲಿ ಪ್ರವಹಿಸುತ್ತಿದ್ದಾರೆ.

ರೇಷ್ಮೆ ಮತ್ತು ನೀರಿಗೆ ಸಂಬಂಧಿಸಿದ ಇವೆರಡು ದೊಡ್ಡ ಸಾಧನೆಯ ಜೊತೆಗೆ ವೈ.ಕೆ.ಆರ್ ರವರ ಕ್ರಿಯಾಶೀಲ ವ್ಯಕ್ತಿತ್ವ ಇನ್ನೂ ಅನೇಕ ನಿಟ್ಟಿನಲ್ಲಿ ಪ್ರವೃತ್ತರಾಗುತ್ತಲೇ ಬಂದಿದೆ. ಕಳೆದ ಎರಡು ದಶಕಗಳಿಂದ ಪ್ರತಿವರ್ಷವೂ ನಿರಂತರವಾಗಿ ಹಮ್ಮಿಕೊಂಡು ಬಂದ ಸಸಿ ನೆಡುವ ಪಾದಯಾತ್ರೆ, ಚಳವಳಿ ಕುಣಿಗಲ್ ಮತ್ತು ಹುಲಿಯೂರುದುರ್ಗ ಕ್ಷೇತ್ರಗಳನ್ನು ಹಸಿರಿನ ತಪೋವನವನ್ನಾಗಿ ಮಾರ್ಪಡಿಸಿವೆ. ಇಂದು ನಮ್ಮ ಪ್ರದೇಶದ ಯಾವ ರಸ್ತೆಗಳೂ ಸಾಲು ಮರಗಳಿಲ್ಲದೆ ಇಲ್ಲ. ಇಕ್ಕೆಲಗಳಲ್ಲೂ ಸಮೃದ್ಧವಾಗಿ ಬೆಳೆದು ಆಕಾಶಕ್ಕೆ ಮುಖ ಮಾಡಿ ನಿಂತ ಪ್ರತಿ ಮರದ ಬೇರು ಮತ್ತು ಚಿಗುರು ರಾಮಯ್ಯನವರ ಪರಿಸರ ಕಾಳಜಿಯನ್ನು ನೆನಪಿಸಿಕೊಳ್ಳುತ್ತಾ ಹಾಡಿ ಹರಸುತ್ತಿವೆ. ರಾಮಯ್ಯನವರ ಈ ವಿಶಿಷ್ಟ ಸಾಧನೆಯನ್ನು ಗುರುತಿಸಿ ಜನ ಅವರನ್ನು ಸಾಲುಮರಗಳ ಸರದಾರ ಎಂದು ಪ್ರೀತಿಯಿಂದ ಕರೆಯುತ್ತಿದ್ದಾರೆ.

ಹಾಗೆಯೇ ಜನರನ್ನು ಕಾಡುತ್ತಿರುವ ಜನಸಂಖ್ಯಾ ನಿಯಂತ್ರಣ ಸಮಸ್ಯೆಯನ್ನು ಕುರಿತು ಪಾದಯಾತ್ರೆಯ ಸಂದರ್ಭದಲ್ಲಿ ಜನರಿಗೆ ತಿಳಿವಳಿಕೆ ಹೇಳುವುದು, ಶಿಕ್ಷಣದ ಮಹತ್ವವನ್ನು ಕುರಿತು ಮನವರಿಕೆ ಮಾಡುವುದು, ಉತ್ತಮ ಶಿಕ್ಷಕರು ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳನ್ನು ಸನ್ಮಾನಿಸುವುದು - ಇವೆಲ್ಲ ರಾಮಯ್ಯನವರ ದೂರದರ್ಶಿತ್ವಕ್ಕೆ ಹಿಡಿದ ಕನ್ನಡಿಯಾಗಿವೆ. ವೈ.ಕೆ. ರಾಮಯ್ಯನವರು ಒಬ್ಬ ಒಳ್ಳೆಯ ಓದುಗರು. ಕುವೆಂಪು, ಡಿ.ವಿ.ಜಿ, ಲೋಹಿಯಾ, ಗೋಪಾಲಗೌಡರು ಅವರ ನೆಚ್ಚಿನ ವ್ಯಕ್ತಿಗಳು. ಇವರ ಬರಹಗಳಿಂದಲೇ ವೈ.ಕೆ.ಆರ್ ರವರ ವೈಚಾರಿಕತೆ ರೂಪುಗೊಂಡಿದೆ. ಹೆಚ್ಚಿನ ಅಧ್ಯಯನದ ಕಾರಣಕ್ಕಾಗಿ ಉತ್ತಮ ಭಾಷೆಯೂ ಸಿದ್ಧಿಸಿದೆ. ನಾನು ಮತ್ತು ರೇಷ್ಮೆ ಗ್ರಂಥದ ಅವರ ಬರವಣಿಗೆಯ ಭಾಷೆಯೇ ಇದಕ್ಕೆ ಸಾಕ್ಷಿ.

ರಾಮಯ್ಯನವರ ವ್ಯಕ್ತಿತ್ವವೇ ಒಂದು ರೀತಿಯಲ್ಲಿ ವಿಚಿತ್ರವಾದದ್ದು. ಅವರನ್ನು ಅರ್ಥಮಾಡಿಕೊಳ್ಳಬೇಕಾದರೆ ಒಂದು ಒಳಗಣ್ಣುಬೇಕು. ಮೇಲ್ನೋಟಕ್ಕೆ ಅವರು ಶೀಘ್ರ ಕೋಪಿ, ನಿಷ್ಠುರವಾದಿ, ಕೆಲವರ ಮಾತಿನಲ್ಲೇ ಹೇಳುವುದಾದರೆ ಬೆಂಕಿಯ ಚೆಂಡು. ನಿಜ, ಕೇವಲ ವರ್ಗಾವಣೆ ಮಾಡಿಕೊಡಿ ಎಂದು ಅಂಗಲಾಚುತ್ತಾ ಬರುವ ಭ್ರಷ್ಟರಿಗೆ, ಕ್ಷುಲ್ಲಕ ರಾಜಕೀಯ ಮಾಡುವ ಗೋಸುಂಬೆ ಪುಢಾರಿಗಳಿಗೆ, ಸೋಮಾರಿ ಕೃಷಿಕರಿಗೆ ಅವರು ಶೀಘ್ರ ಕೋಪಿಯೂ ಹೌದು, ಅಹಂಕಾರಿಯೂ ಹೌದು. ಆದರೆ ಒಳ್ಳೆಯತನಕ್ಕೆ, ಪ್ರಾಮಾಣಿಕ ದುಡಿಮೆಗೆ, ನೇರ ವ್ಯಕ್ತಿತ್ವಕ್ಕೆ ಕರಗಿ ಹೋಗುತ್ತಾರೆ. ಅಸಹಾಯಕರ ಮತ್ತು ದುಡಿಯುವ ಜನರ ಪರವಾದ ಅವರ ವ್ಯಕ್ತಿತ್ವ ಅಷ್ಟೇ ಮೃದುವಾಗಿಯೂ ಇರುತ್ತದೆ. ಒಂದು ರೀತಿಯಲ್ಲಿ ಅವರೂ ರೇಷ್ಮೆಯಂತೆ ಎಷ್ಟು ಮೃದುವೋ ಅಷ್ಟೇ ಕಾಠಿಣ್ಯ. ಅದೊಂದು ಎಂದೂ ಮಾಸಿಹೋಗದ ಬೆಲೆಯುಳ್ಳ ವಜ್ರ. ಅವರಿಗೆ ಅರವತ್ತು ವರ್ಷ ತುಂಬಿದ ಈ ಶುಭಸಂದರ್ಭದಲ್ಲಿ ಅವರದೇ ನೆಲದ ಲೇಖಕನಾದ ನನ್ನ ಆತ್ಮಪೂರ್ವಕ ಶುಭಾಶಯಗಳು.

೦



# ನಮ್ಮ ಉತ್ತಮ ನಾಯಕ

**ಎಂ ಕೋಟೇಶ್**

ತುಮಕೂರು ಜಿಲ್ಲೆಯ ರಾಜಕೀಯ ನಾಯಕತ್ವ ಇತ್ತೀಚಿನ ಹಲವು ವರ್ಷಗಳಿಂದ ದುರ್ಬಲವಾಗಿದೆ. ಟಿ. ಸುಬ್ರಮಣ್ಯಂ, ಎಂ. ವಿ. ರಾಮರಾಯರು, ಚೆನ್ನಿಗರಾಮಯ್ಯನವರ ತರುವಾಯ ಹೇಳಿಕೊಳ್ಳುವ ನಾಯಕತ್ವ ಜಿಲ್ಲೆಯ ರಾಜಕೀಯದಲ್ಲಿ ಕಂಡು ಬಂದಿರಲೇ ಇಲ್ಲ.

ಕುಣಿಗಲ್ ರೇಷ್ಮೆ ಬಿತ್ತನೆತಳಿ, ಕುದುರೆ ತಳಿಗಳನ್ನು ನಾಡಿಗೆ ನೀಡಿದಂತೆ ಗಂಡುಮೆಟ್ಟಿನ ಪ್ರದೇಶದಿಂದ ಜಿಲ್ಲೆಯ ರಾಜಕೀಯದಲ್ಲಿ ಭ್ರಷ್ಟತೆಯ ವಿರುದ್ಧ ಹೋರಾಟ, ಎತ್ತರದ ದನಿ ಮತ್ತು ರಾಜಕೀಯ ನರನಾಡಿಗಳಲ್ಲಿ ಹೊಸರಕ್ತ ಸಂಚಾರವಾಗುತ್ತಿದೆ. ನಾಯಕತ್ವದ ಹೊಸ ಆಶಾಕಿರಣ ಎಂಬಂತೆ ವೈ. ಕೆ. ರಾಮಯ್ಯ ಕಂಡು ಬರುತ್ತಿದ್ದಾರೆ.

ಹಿಡಿದ ಕಾರ್ಯವನ್ನು ನಿಶ್ಚಿತವಾಗಿ, ನಿರ್ದಿಷ್ಟವಾಗಿ ಮುಗಿಸುತ್ತಾ ಇತ್ತೀಚಿನ ರಾಜಕಾರಣಿಗಳಲ್ಲಿರುವ ಆಲಸ್ಯ; ಭ್ರಷ್ಟತೆಗಳಿಗೆ ಕಡಿವಾಣಹಾಕಿ, ಓದಬಲ್ಲ, ಯೋಚಿಸಬಲ್ಲ, ಸರ್ಕಾರದ ಆಗುಹೋಗು, ಭ್ರಷ್ಟತೆ, ಅನೈತಿಕ ಆಡಳಿತದ ಬಗ್ಗೆ ಪ್ರಶ್ನಿಸಿದಾಗ, ಇಂತಹ ಮಂತ್ರಿಗಳ ಪ್ರಭುತ್ವದ ಕಾಲದಲ್ಲೂ, ಓರ್ವ ಮಂತ್ರಿ ಜನರ ಪ್ರಶ್ನೆಗಳಿಗೆ ನಾಚುತ್ತಾನೆ. ತಲೆ ತಗ್ಗಿಸುತ್ತಾನೆ ಮತ್ತು ಅಂಜುತ್ತಾನೆ. ತನ್ನ ಕ್ಷೇತ್ರಕ್ಕೆ ತಾನು ನೀಡಿದ ಭರವಸೆ ಈಡೇರಿಸದಿದ್ದರೆ ಮತ್ತು ಕ್ಷೇತ್ರದಲ್ಲಿ ಜನತೆಯ ಒಡನಾಟವಿಲ್ಲದೆ ಬಹಳ ದಿನ ಕಳೆಯಲಾರೆ ಎಂಬ ಪ್ರಜ್ಞೆ ರಾಮಯ್ಯನವರಲ್ಲಿ ಕಂಡುಬರುತ್ತಿದೆ. ಜಿಲ್ಲಾ ನಾಯಕತ್ವದ ಆಶಾಕಿರಣ ರಾಮಯ್ಯ ಎನ್ನಲು ಪ್ರಮುಖ ಕಾರಣ.

1982 ಡಿಸೆಂಬರ್‌ನಲ್ಲಿ ರಾಜ್ಯ ವಿಧಾನಸಭಾ ಚುನಾವಣೆಯ ಪ್ರಚಾರ ಭರದಿಂದ ಸಾಗಿದ್ದರೆ, ಕುಣಿಗಲ್‌ನ ಓರ್ವ ವಕೀಲ, ಜನತಾ ಪಕ್ಷದ ಅಭ್ಯರ್ಥಿಯಾದ ವೈ. ಕೆ. ರಾಮಯ್ಯ ಮಾತ್ರ ಸಿಕ್ಕವರ ಮುಂದೆಲ್ಲ ಮತ ಯಾಚಿಸದೆ, ''**ಒಳ್ಳೆಯ ಪ್ರತಿನಿಧಿ ಬೇಕು ಎನ್ನುವಂತಿದ್ದರೆ ನನಗೆ ಓಟು ಹಾಕಿ, ಇಲ್ಲದಿದ್ದರೆ ನಿಮ್ಮ ಕರ್ಮ ನಿಮ್ಮದು, ನನ್ನ ವಕೀಲಿ ನನಗೆ ಇದ್ದೇ ಇದೆ**'' ಎಂದು ಹೇಳಿಕೊಳ್ಳುತ್ತಾ ಓಡಾಡುತ್ತಿದ್ದರು.

ಭ್ರಷ್ಟತೆ ವಿರುದ್ಧ ತಾನು ನೀಡಿದ ಭರವಸೆಯಂತೆ ಮೊದಲ ಹೋರಾಟವನ್ನು ತಾಲ್ಲೂಕು ಕಛೇರಿಯಿಂದ ಆರಂಭಿಸಿ, ಜಿಲ್ಲಾ ಕಛೇರಿ, ವಿಧಾನಸೌಧಗಳಲ್ಲೂ ಮೊಳಗಲಾರಂಭಿಸಿ

ದರು. ರಾಮಯ್ಯನವರ ದಕ್ಷತೆ, ನಿರ್ಭಿಡೆಯಿಂದಾಗಿ 1982ರ ಆಗಸ್ಟ್‌ನಲ್ಲಿ ರಾಜ್ಯದ ಪ್ರಮುಖ ಮಂಡಳಿಗಳಲ್ಲೊಂದಾದ ರಾಜ್ಯದ ಗೃಹನಿರ್ಮಾಣ ಮಂಡಳಿ ಅಧ್ಯಕ್ಷಗಿರಿ ಇವರಿಗೆ ದಕ್ಕಿತು.

ತಮ್ಮ ಅನಿರೀಕ್ಷಿತ ಭೇಟಿಗಳ ಮೂಲಕ ಗೃಹ ಬಳಕೆದಾರರಿಗೆ ಅಧಿಕಾರಿಗಳು , ಕಂಟ್ರಾಕ್ಟರುಗಳು ಮಾಡುತ್ತಿದ್ದ ವಂಚನೆಯ ಇಡೀ ಸ್ವರೂಪಗಳನ್ನೆ ಬಯಲಿಗಿಡುತ್ತಾ, ಸಿಮೆಂಟ್ ಖದೀಮರನ್ನು ಮಟ್ಟ ಹಾಕುವ ಯತ್ನ ನಡೆಸಿದರು. ಇವರ ತನಿಖೆಯ ಬಗ್ಗೆ ಖುಷಿಗೊಂಡ ಜನ ರಾಮಯ್ಯನವರನ್ನು ಹಾರೆ-ಪಿಕಾಸಿಯೊಡನೆ ಬರುವ ಅಧ್ಯಕ್ಷ ಎಂದು ಪ್ರೀತಿಯಿಂದ ಕರೆದರು. **ಬೆಳಗಾಂನಲ್ಲಿ ಬಹಳಷ್ಟು ಕಾಲದಿಂದ ಶೋಷಣೆಗೊಳಗಾಗಿದ್ದ ಗೃಹಮಂಡಳಿ ಕಾಲೋನಿಯ ಜನರ ಪಾಲಿಗೆ ಆತ್ಮೀಯ ಬಂಧುವಂತೆ ಕಂಡುಬಂದು, ವಂಚನೆ, ಮೋಸಗಳನ್ನು ದೂರ ಮಾಡಿದರೆಂಬ ಸಂತೋಷದಲ್ಲಿ ಅಲ್ಲಿನ ಜನ ತಮ್ಮ ಸಮೀಪದ ಪಾರ್ಕಿಗೆ ರಾಮಯ್ಯನವರ ಹೆಸರಿಟ್ಟರು.**

1984ರ ಡಿಸೆಂಬರ್‌ನಲ್ಲಿ ಲೋಕಸಭಾ ಚುನಾವಣೆ ನಡೆಯುವ ವೇಳೆಗೆ ವೈ.ಕೆ. ರಾಮಯ್ಯ ಜನರ ಹತ್ತಿರಕ್ಕೆ ಹೋಗಿದ್ದರು. **ಭ್ರಷ್ಟತೆಯ ಬೆನ್ನಟ್ಟಿ ಅದರ ನಿರ್ಮೂಲನೆಗೆ ಪಣ ತೊಟ್ಟು ಹೊರಟ ನಮ್ಮವ** ಎಂದು ರಾಮಯ್ಯರನ್ನು ಕುರಿತು ಕುಣಿಗಲ್ ಕ್ಷೇತ್ರದ ಜನ ಹೆಮ್ಮೆ ತಾಳಿದರು.

ಇವರು ಚುನಾವಣೆಗಳಲ್ಲಿ ಕ್ಷೇತ್ರದ ಜನಕ್ಕೆ ಭರವಸೆಯನ್ನೇನೂ ನೀಡಿರದಿದ್ದರೂ ಬೇಡಿಕೆಗಳನ್ನು ಪೂರೈಸುತ್ತಿದ್ದರು. ಇದರಿಂದಾಗಿ ಲೋಕಸಭಾ ಚುನಾವಣೆಯಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಅಭ್ಯರ್ಥಿ ಆಯ್ಕೆ ಬಗ್ಗೆ ವಿವಾದ, ಚರ್ಚೆ ನಡೆದಿದ್ದರೆ, ತುಮಕೂರು ಲೋಕ ಸಭಾಕ್ಷೇತ್ರದಲ್ಲಿ ರಾಮಯ್ಯನವರೇ ನಮ್ಮ ಅಭ್ಯರ್ಥಿ ಎಂದು ಪಕ್ಷ ಒಮ್ಮತದಿಂದ ನಿರ್ಧರಿಸಿತ್ತು.

1985ರ ವಿಧಾನಸಭಾ ಚುನಾವಣೆಯಲ್ಲಿ ಪಕ್ಷದ ಒತ್ತಾಯಕ್ಕೆ ಮಣಿದು ಸ್ಪರ್ಧಿಸಿದರು. ಪಕ್ಷದವರೇ ಚುನಾವಣಾ ಖರ್ಚು-ವೆಚ್ಚ ನಿರ್ವಹಿಸಿದರು. ಕೊನೆಗೆ ಅತಿ ಹೆಚ್ಚಿನ ಬಹುಮತದಿಂದ ಆಯ್ಕೆಯಾಗಿ ಮಂತ್ರಿಯೂ ಆದರು. ರಾಜ್ಯ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದ ರಾಮಯ್ಯ, ರೇಷ್ಮೆ ಬೆಳೆಗಾರರನ್ನು ಹಿಂಸಿಸುತ್ತಿದ್ದ ದಳ್ಳಾಳಿಗಳು, ಅಧಿಕಾರಿಗಳನ್ನು ಮಟ್ಟ ಹಾಕ ತೊಡಗಿದರು.

ತಾವು ಶಾಸಕರಾಗಿದ್ದಾಗ ಜನತಾ ಸರ್ಕಾರದ ಮೇಲೆ ಒತ್ತಡ ತಂದು ಮೈಸೂರು ಬಿತ್ತನೆ ತಳಿ ಬೆಳೆಯುವ ಕೃಷಿಕರಿಗೆ ಬಿತ್ತನೆ ಪಡೆಯದೆ, ಪ್ರತಿ ಕೆಜಿ ಅರ್ಹ ಗೂಡಿಗೂ 5 ರೂ. ಬೋನಸ್ ಕೊಡುವ ಯೋಜನೆಯನ್ನು ಜಾರಿಗೊಳಿಸಿದರು. ತಾವು ರೇಷ್ಮೆ ಸಚಿವರಾದ ಮೇಲೆ ಸದರಿ ಬೋನಸ್‌ನ್ನು ಕೆ.ಜಿ. ಗೆ 5 ರೂ. ನಿಂದ 10 ರೂ. ಗೆ ಹೆಚ್ಚಿಸಿದರು. ಹೀಗಾಗಿ ಬಿತ್ತನೆ ರೇಷ್ಮೆ

ವಲಯದ ಬೆಳೆಗಾರರಿಗೆ ವಾರ್ಷಿಕವಾಗಿ ಒಟ್ಟಾರೆ ನಿರಂತರವಾಗಿ ಸುಮಾರು 120 ಲಕ್ಷ ರೂಗಳಷ್ಟು ಹಣ ಸಿಗುವಂತೆ ಮಾಡಿದರು.

ಇವರ ಅಧಿಕಾರವಧಿಯಲ್ಲಿ ಬರದ ಬೇಗೆಯ ನಡುವೆಯೂ ರಾಜ್ಯ ರೇಷ್ಮೆ ಕ್ಷೇತ್ರದ ಸಾಧನೆ ದಾಖಲೆ ಸ್ಥಾಪಿಸಿತು. ಇದರಿಂದಾಗಿ ವಿಶ್ವದಲ್ಲಿ ಭಾರತ ಪ್ರಥಮ ಬಾರಿಗೆ ದ್ವಿತೀಯ ಸ್ಥಾನ ( ಚೀನಾ ಪ್ರಥಮ ಸ್ಥಾನ) ಪಡೆಯುವಂತಾಯಿತು. ಭಾರತದ ರೇಷ್ಮೆ ಉದ್ದಿಮೆಗೆ ಮಾರಕವಾದ ಚೀನಾದ ಕಚ್ಚಾ ರೇಷ್ಮೆ ಆಮದು ವಿರುದ್ಧ, ರಾಮಯ್ಯ ಪ್ರಬಲ ವಿರೋಧ ಮಾಡುತ್ತಲೇ ಬಂದಿದ್ದಾರೆ.

1985-86ರಲ್ಲಿ ಮೈಸೂರು ರೇಷ್ಮೆ ಬಿತ್ತನೆ ಕ್ಷೇತ್ರಕ್ಕೆ ದಾಖಲೆಯ 1 ಕೋಟಿ ರೂ. ಮೊತ್ತವನ್ನು ಒದಗಿಸಿ ಮಾರುಕಟ್ಟೆ ನಿರ್ಮಾಣ, ಚಾಕಿ ಸಾಕಾಣಿಕಾ ಕೇಂದ್ರ, ಮೌಟಿಂಗ್ ಹಾಲ್‌ನಿರ್ಮಾಣ ಇತ್ಯಾದಿಗಳನ್ನು ಮಾಡಿ, ವಲಯದ ರೇಷ್ಮೆ ಕೃಷಿಕರ ಅಭ್ಯುದಯಕ್ಕೆ ಕಾರಣರಾಗಿದ್ದಾರೆ. ಜಿಲ್ಲಾ ಮಂತ್ರಿಯೂ ಆಗಿದ್ದ ವೈ.ಕೆ. ರಾಮಯ್ಯನವರು 1985-86ರ ಬಜೆಟ್‌ನಲ್ಲಿ ಹೆಚ್ಚಿನ ಹಣ ಹಾಗೂ ಕಾಮಗಾರಿಗಳನ್ನು ಜಿಲ್ಲೆಗೆ ದೊರಕಿಸಿಕೊಡುವಲ್ಲಿ ಯಶ ಸಾಧಿಸಿದರು. ಹೇಮಾವತಿ ಯೋಜನೆಯ ವಿಳಂಬ ಗಮನಿಸಿದರು. ಸುರಂಗ ಕಾರ್ಯದ ಅಡೆತಡೆ ನಿವಾರಿಸುವಲ್ಲಿ ಶ್ರಮವಹಿಸಿದರು. ನಾಲಾ ಕಾರ್ಯಕ್ಕೆ ಲೋಕೋಪಯೋಗಿ ವಿಭಾಗ ಪ್ರಾರಂಭಿಸುವಲ್ಲಿ ಒತ್ತಡ ತಂದು ಯಶ ಸಾಧಿಸಿದರು. ಹೀಗಾಗಿ ಸುರಂಗ ಕಾಮಗಾರಿ ಶೇ.90 ರಷ್ಟು ಮುಗಿದೆ.

ಜೂನ್. 25ರಿಂದ ವಿದೇಶ ಪ್ರವಾಸ ಹೊರಟಿದ್ದ ರಾಮಯ್ಯ ಸಚಿವ ಸಂಪುಟ ಪುನರ್ರಚನೆ ಹಿನ್ನಲೆಯಲ್ಲಿ ಪ್ರವಾಸ ಹೊರಡುವ ಮುನ್ನವೇ ಸಚಿವ ಸ್ಥಾನಕ್ಕೆ ರಾಜಿನಾಮೆ ಪತ್ರ ಸಲ್ಲಿಸಿಬಿಟ್ಟಿದ್ದರು. ಸಮರ್ಥನಾಯಕತ್ವದತ್ತ ಜಿಲ್ಲೆಯ ( ರಾಜ್ಯದ) ಒಂದು ಪ್ರಮುಖ ಕೋಮಿಗೆ ಸೇರಿದ ರಾಮಯ್ಯ, ಜನತೆಯ ಇಂದಿನ ಹಸಿವು, ಸಂಕಟಗಳಿಗೆ, ದುಃಖ-ದುಮ್ಮಾನಗಳಿಗೆ ಕಾರಣವಾದ, ಮೂರು ಅಂಶಗಳು ಅವರ ಪಾದಯಾತ್ರೆಯ ಮೂಲ ಉದ್ದೇಶ. ಅವು, ಇಂದಿನ ಬರಕ್ಕೆ ಕಾರಣವಾದ, ಪರಿಹಾರ ದೊರಕಿಸಬಲ್ಲ ಗಿಡ ನೆಡುವುದು; ಹಲವು ಕೊರತೆಗಳಿಗೆ ಕಾರಣವಾದ, ಹೆಚ್ಚುತ್ತಿರುವ ಜನಸಂಖ್ಯೆ ನಿಯಂತ್ರಿಸಲು ಕುಟುಂಬಯೋಜನೆ ಮತ್ತು ಅಜ್ಞಾನದ ಅರಿವಿನಿಂದ ಶೋಷಣೆಗೊಳಗಾಗಿರುವ ಶೋಷಿತ ಸಮಾಜವನ್ನು ಎಚ್ಚರಿಸುವುದು.

○

(ತುಮಕೂರುವಾರ್ತೆ : 7-8-1986)

# ಸಮಾಜಮುಖಿ ರಾಜಕಾರಣಿ

**ತಿಮ್ಮಪ್ಪ ಎಸ್. ಗೌಡ**

ಎಲ್ಲರ ಅಗಣಿತ ಪ್ರಿತ್ಯಾದರಗಳಿಗೆ ಪಾತ್ರರಾಗಿ, ಶ್ರೇಷ್ಠ ರಾಜಕಾರಣಿಯಾಗಿ ಜನಪರ ಜನಪ್ರಿಯ ರಾಜಕಾರಣಿಯಾಗಿ ಕಂಗೊಳಿಸುವ ಶ್ರೀ ವೈ.ಕೆ. ರಾಮಯ್ಯರವರಿಗೆ ಅರವತ್ತರ ಪರ್ವದಲ್ಲಿ, ಸತ್ಕರಿಸಿ ಅವರ ಸೇವಾ ಕೈಂಕರ್ಯವನ್ನು ನೆನೆಯಬೇಕಾದದ್ದು ಅವರ ಅಭಿಮಾನಿಗಳೆಲ್ಲರ ಪರಮ ಕರ್ತವ್ಯಗಳಲ್ಲೊಂದು. ಈ ನಿಟ್ಟಿನಲ್ಲಿ ಅಭಿನಂದನಾ ಗ್ರಂಥದ ಸಮರ್ಪಣೆ ನಾಡಿನ ಉದ್ದಗಲಕ್ಕೂ ಇರುವ ಅವರ ಅಭಿಮಾನಿಗಳಿಗೆ ಸಂತಸ ತರುವ ಹೆಮ್ಮೆಯ ಸಂಗತಿಯಾಗಿದೆ.

ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಎಲೆಕಡಕಲು ಗ್ರಾಮದಲ್ಲಿ ಬಡರೈತ ಕುಟುಂಬದಲ್ಲಿ ಜನಿಸಿದ ಶ್ರೀ ವೈ.ಕೆ. ರಾಮಯ್ಯನವರು, ರೇಷ್ಮೆಯ ಸಿರಿಯ ಕಣಜದಲ್ಲಿ ಬೆಳೆದು ರೇಷ್ಮೆಯ ರಾಜ ಎಂಬ ಬಿರುದಾಂಕಿತ ಪಡೆಯಲು ಅವರು ಹುಟ್ಟಿದ ಹೆಮ್ಮೆಯ ಊರೇ ಕಾರಣವೆಂಬುದು ಸರ್ವವಿಧಿತ ಅಭಿಪ್ರಾಯವಾಗಿದೆ.

ವೈ.ಕೆ. ಆರ್‌ರವರು ಬಾಲ್ಯದಲ್ಲಿ ಪಡೆಯಬೇಕಾದ ವಿದ್ಯೆ ಅವರಿಗೊಂದು ಆಕಸ್ಮಿಕ. ತಮ್ಮ ಸ್ವಪ್ರತಿಭೆ, ಕಠಿಣ ಪರಿಶ್ರಮದಿಂದ ಎಮ್.ಎ, ಎಲ್.ಎಲ್.ಬಿ ಪದವಿಗಳನ್ನು ಪಡೆದು ತನ್ನ ಊರಿಗೆ ಪ್ರಪ್ರಥಮ ಪದವೀಧರರೆಂದು ಗುರುತಿಸಿಕೊಂಡು ಬೆಳೆದು ನಿಂತ ವೈ.ಕೆ. ಆರ್ ರವರು ಕಷ್ಟ ಕಾರ್ಪಣ್ಯಗಳ - ಬವಣೆಗಳ ಕುಂಡದಿಂದ ಎದ್ದುಬಂದವರು. ವಿದ್ಯಾಭ್ಯಾಸದ ನಂತರ ವಕೀಲಿ ವೃತ್ತಿ ಆರಂಭಿಸಿದ ಅವರು ಉತ್ತಮ ವಾಗ್ಮಿತ್ವವನ್ನು ಮತ್ತು ಕಾನೂನು ಶಾಸ್ತ್ರದ ಬಗ್ಗೆ ಪಾಂಡಿತ್ಯವನ್ನು ಗಳಿಸಿದ್ದರಿಂದ, ಅವರ ವಕೀಲಿವೃತ್ತಿ ಜನರಿಂದ ಒಳ್ಳೆಯ ಪ್ರತಿಕ್ರಿಯೆಯನ್ನು ಪಡೆಯಿತಲ್ಲದೆ, ಬಡವರ ಬಗ್ಗೆ ಅವರು ಸಹಜವಾಗಿ ಆಸಕ್ತಿ ಹೊಂದಿದ್ದರಿಂದ, ಬಡವರಿಗೆ ಅನ್ಯಾಯವಾದಾಗ ಹೆಚ್ಚು ಮುತುವರ್ಜಿವಹಿಸಿ, ಅವರ ಮೊಕದ್ದಮೆಗಳನ್ನು ನಡೆಸಿ ಕೊಡುತ್ತಿದ್ದರು.

ವೈ.ಕೆ.ಆರ್‌ರವರ ವಕೀಲಿ ವೃತ್ತಿಯಲ್ಲಿ ಕಕ್ಷಿಗಾರನೊಬ್ಬನ ಸಂಕಷ್ಟದ ಘಟನೆ ಅವರಲ್ಲಿ ಸುಪ್ತವಾಗಿ ಅಡಗಿದ್ದ ಸಾಮಾಜಿಕ ಪ್ರಜ್ಞೆಗೆ ತಿರುವು ಕೊಟ್ಟು, ಸಮಾಜದ ಬಡವರ, ನಿರ್ಗತಿಕರ, ತುಳಿತಕ್ಕೊಳಗಾದವರ ಪರವಾಗಿ ಹೋರಾಡುವ ಮನೋಭಾವವನ್ನುಂಟುಮಾಡಿತು.

ಅನ್ಯಾಯಗಳ ವಿರುದ್ಧ ಹೋರಾಡಿ, ನಮ್ಮ ರಾಜಕೀಯ ಚಿಂತಕರಲ್ಲಿ ಒಬ್ಬರಾಗಿ, ರಾಜನೀತಿ ನಿಪುಣರಾಗಿ, ನ್ಯಾಯಕ್ಕಾಗಿ ಹೋರಾಡಿ, ಸಂಘಟನೆಗಳನ್ನು ಕಟ್ಟಿ ಬೆಳೆಸುವುದರಲ್ಲಿ ಮಹತ್ತರವಾದ ಪಾತ್ರವಹಿಸಿದ್ದಾರೆ.

ರೇಷ್ಮೆ ವೈ.ಕೆ.ಆರ್‌ರವರ ಬದುಕಿನ ಅವಿಭಾಜ್ಯ ಅಂಗ. ರೇಷ್ಮೆಯ ನೆರಳಲ್ಲೇ ಬೆಳೆದ ಅವರು ಸ್ವತಃ ಹಿಪ್ಪುನೇರಳೆ ಸೊಪ್ಪು ಕಿತ್ತು, ರೇಷ್ಮೆ ಹುಳ ಸಾಕಿ, ಗೂಡುಹೊತ್ತು ಬೆವರು ಹರಿಸುವ ಮೂಲಕ ರಾಜ್ಯದ ರೇಷ್ಮೆ ಬೆಳೆಗಾರರ ದುಃಖದುಮ್ಮಾನಗಳನ್ನು ಅರಿತವರು. ತಮ್ಮ ಅಪಾರ ಸಂಘಟನಾಶಕ್ತಿ ಮತ್ತು ಕ್ರಿಯಾಶೀಲ ಕಾಳಜಿಗಳ ಮೂಲಕ ಕರ್ನಾಟಕ ರಾಜ್ಯ ರೇಷ್ಮೆ ಬೆಳೆಗಾರರ ಸಂಘವನ್ನು ಹುಟ್ಟು ಹಾಕಿದರು. ಸಂಘದ ಅಧ್ಯಕ್ಷರೂ ಆದರು. ಅಲ್ಲದೆ ಅವರ ಸುತ್ತಮುತ್ತಲಿನ ಪ್ರದೇಶದ ಜನತೆಯ ಹೊಟ್ಟೆ, ಬಟ್ಟೆ-ಬರೆಗಳಿಗೆ ಆಧಾರವಾದ ರೇಷ್ಮೆಯ ಉನ್ನತಿಗೆ ಶ್ರಮಿಸಿದರು. ಸತತ ಹೋರಾಟದ ಫಲವಾಗಿ ರೇಷ್ಮೆ ಕೃಷಿಕರಿಗೆ ಬೋನಸ್ ಕೊಡಿಸಿದರು. ಹಳ್ಳಿ, ನಗರ ಹಾಗೂ ರಾಜಕೀಯ ವ್ಯವಸ್ಥೆಯ ಎಲ್ಲಾ ಪರಿಸರದಲ್ಲೂ ಹೋರಾಟವನ್ನೇ ಮುಖ್ಯವಾಗಿಟ್ಟುಕೊಂಡು ನಡೆಸಿದ ಪ್ರಯತ್ನದಲ್ಲಿ, ರಾಜಕೀಯವಾಗಿ ಹೆಚ್ಚು ಪ್ರವರ್ಧಮಾನಕ್ಕೆ ಬರಲು ಅವರಿಗೆ ರೇಷ್ಮೆ ನೆರವಾಯಿತು. ಅಧಿಕಾರ ಬೇಕೆಬೇಕು ಆದರೆ ಅದು ಜನರ ಸೇವೆಗಾಗಿಯೇ ಹೊರತು ಸ್ವಾರ್ಥ ಸಾಧನೆಗಾಗಿಯಲ್ಲವೆಂಬ ನಂಬಿಕೆಯುಳ್ಳ ಅವರಿಗೆ ಶಾಸಕ ಸ್ಥಾನದ ಬಲ ಒಂದು ಸಿಂಹ ಬಲವಾಯಿತು. ಕರ್ನಾಟಕ ವಿಧಾನಸಭೆಯಲ್ಲಿ ರೇಷ್ಮೆ ಉದ್ಯಮದ ಆಗು ಹೋಗುಗಳನ್ನು ಪರಿಣಾಮಕಾರಿಯಾಗಿ ಪ್ರತಿನಿಧಿಸಲು ವೈ.ಕೆ.ಆರ್ ಶಾಸಕರಾಗಿ ಆರಿಸಿಬಂದಿದ್ದು ರೇಷ್ಮೆ ಬೆಳೆಗಾರರ ಅಭಿವೃದ್ಧಿಗೆ ನಾಂದಿಯಾಯಿತು. ಕರ್ನಾಟಕ ರೇಷ್ಮೆಸಂಘದ ಅಧ್ಯಕ್ಷರಾಗಿದ್ದ ವೈ.ಕೆ.ಆರ್ ಅವರೇ ಸ್ವತಃ ರೇಷ್ಮೆ ಖಾತೆಯ ಸಚಿವರಾದುದು ಹೆಮ್ಮೆ ಪಡುವ ವಿಚಾರ. ರೇಷ್ಮೆ ಉದ್ಯಮದ ಬಗ್ಗೆ ಮಾಡಿದ ಹೋರಾಟ, ದುಡಿದ ದುಡಿಮೆ ಇದರಿಂದ ಪಡೆದ ಅನುಭವಗಳನ್ನು ಆಧಾರವಾಗಿಟ್ಟುಕೊಂಡು ಸಮರ್ಪಕವಾಗಿಯೇ ಖಾತೆಯನ್ನು ನಿರ್ವಹಿಸಿದರು. ಜಪಾನ್, ಕೊರಿಯಾ ದೇಶಗಳಲ್ಲಿ ರೇಷ್ಮೆ ಅಧ್ಯಯನದ ಪ್ರವಾಸ ಮಾಡಿ ಅನೇಕ ಹೊಸ ಅವಿಷ್ಕಾರಗಳನ್ನು ರೇಷ್ಮೆ ಉದ್ಯಮದಲ್ಲಿ ಅಳವಡಿಸುವಲ್ಲಿ ಸಫಲರಾಗಿದ್ದಾರೆ. ಭಾರತದ ರೇಷ್ಮೆಯಲ್ಲಿ ಸಿಂಹಪಾಲು ಕರ್ನಾಟಕದ್ದೇ ಆಗಿದ್ದು, ಶೇಕಡಾ 15- 20 ಇದ್ದ ಇಳುವರಿ, ಅವರ ಅಧಿಕಾರವಧಿಯಲ್ಲಿ 30-35ಕ್ಕೆ ಹೆಚ್ಚಾದುದು ಅವರ ಸಾಧನೆ. ಕೇಂದ್ರ ಸರ್ಕಾರದ ರೇಷ್ಮೆ ಆಮದು ನೀತಿಯನ್ನು ಪ್ರತಿಭಟಿಸಿದ್ದಾರೆ. **"ನಾನು ಮತ್ತು ರೇಷ್ಮೆ"** ಅವರ ಕೃತಿ ಬದುಕಿದಂತೆ ಬರೆದ, ಬರೆದಂತೆ ಬದುಕುತ್ತಿರುವ ಇವರ ಸಾಧನೆ, ಇಂದಿನ ಹಾಗೂ ಮುಂದಿನ ಜನಾಂಗಕ್ಕೆ ಮಾರ್ಗದರ್ಶಕವಾಗಬಲ್ಲದು.

ಕನ್ನಡನಾಡಿನ ಜನ, ನೆಲ, ಜಲ ಎಲ್ಲದರ ಸಂಪೂರ್ಣ ಜ್ಞಾನವನ್ನು ಹೊಂದಿರುವ ಅವರು, ಕರ್ನಾಟಕದ ನೀರಾವರಿ ಕ್ಷೇತ್ರದಲ್ಲಿ ನಡೆದುಬಂದ ಅನ್ಯಾಯದ ಪರಂಪರೆ ಬಗ್ಗೆ ಅಂಕಿ ಅಂಶಗಳ ಆಧಾರದ ಮೇಲೆ, ಎಲ್ಲಾ ಸಂದರ್ಭಗಳಲ್ಲಿಯೂ ಸಿಂಹಘರ್ಜನೆ ಮಾಡಿದ್ದಾರೆ. ಅವರು

ಕಾವೇರಿ ಮತ್ತು ಹೇಮಾವತಿ ನೀರಿನ ಹೋರಾಟಕ್ಕೆ ಒಂದು ಹೊಸ ಆಯಾಮ ತಂದುಕೊಟ್ಟರು. ಕೆರೆ-ಕಟ್ಟೆಗಳ, ಮಳೆಯಾಧಾರಿತ ತುಮಕೂರು ಜಿಲ್ಲೆಯ ಸರಿಸುಮಾರು ಆರು ಲಕ್ಷ ಎಕರೆ ಬರಪೀಡಿತ ಪ್ರದೇಶದ ಒಣಭೂಮಿಗೆ ನೀರು ಒದಗಿಸಲು ಕಾರ್ಯಗತವಾಗಬೇಕಿದ್ದ ಹೇಮಾವತಿ ನೀರಾವರಿ ಯೋಜನೆಯೂ ಅನಾಥವಾಗಿತ್ತು. ಹೇಮಾವತಿ ನದಿಪಾತ್ರದ ಗೊರೂರು ಅಣೆಕಟ್ಟೆಯಿಂದ ಶಿಂಷಾನದಿ ಪಾತ್ರಕ್ಕೆ ನೀರು ಬರುವ ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡರು. ವಿರೋಧಪಕ್ಷದ ಶಾಸಕ ನಾಗಿಯೂ, ಆಗಿನ ಆಡಳಿತಪಕ್ಷದ ಸಹಕಾರ ಹಾಗೂ ಅಂದು ಕೆಲಸ ಮಾಡುತ್ತಿದ್ದ ಅಧಿಕಾರಿಗಳ ಉತ್ಸಾಹ, ಅನೇಕ ಜನರ ದುಡಿಮೆ, ಶ್ರಮ, ಆಸಕ್ತಿ ಅಭಿಲಾಷೆಗಳ ಫಲವಾಗಿ ಹೇಮಾವತಿ ಯೋಜನೆಯನ್ನು ಪೂರ್ಣವಾಗಿ ಅನುಷ್ಠಾನಗೊಳಿಸುವ ಎರಡು ದಶಕಗಳಿಗೂ ಹೆಚ್ಚು ಕಾಲದ ಅವರ ಬದುಕಿನ ಆಸೆ ನೆರವೇರಿತು. ತತ್ಪರಿಣಾಮವಾಗಿ 1994ರಲ್ಲಿ ಹೇಮಾವತಿಯ ನೀರು ತುಮಕೂರು ಜಿಲ್ಲೆಗೆ ಹರಿದು ಬರುವಂತಾಯಿತು. ಗೊರೂರಿನಿಂದ ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಹರಿದು ಬರಲು ನಡೆದ ಘಟನೆಗಳು, ಬಂದ ಸಮಸ್ಯೆಗಳು, ಅಷ್ಟೇ ಏಕೆ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಅವರಿಗೆ ಎದುರಾದಂತ ಅಡ್ಡಿ-ಆತಂಕಗಳು ಅಪಾರ. ಒಂದು ಸಲ ಅವರ ಮನಸ್ಸಿಗೆ ಸರಿ ಎಂದು ತಿಳಿದರೆ ಏನೇ ಕಷ್ಟ ಬಂದರೂ ಅದರಿಂದ ಅವರು ವಿಚಲಿತರಾಗುತ್ತಿರಲಿಲ್ಲ ಎಂಬುದಕ್ಕೆ ಅನೇಕ ನಿದರ್ಶನಗಳಿವೆ.

ಕರ್ನಾಟಕ ಕಂಡ ಸಂಸದೀಯ ಪಟುಗಳಲ್ಲಿ ವೈ.ಕೆ.ಆರ್‌ರವರು ಅಗ್ರಪಂಕ್ತಿಗೆ ಸೇರಿದ್ದಾರೆ. ಶಾಸನಸಭೆಯಲ್ಲಿ ಹರಿತವಾಗಿ, ವಿಚಾರಪೂರಿತವಾಗಿ ಮಹತ್ವಪೂರ್ಣ ವಿಷಯದ ಬಗ್ಗೆ ತಮ್ಮ ಮಾತಿನ ಶೈಲಿಯಿಂದ ಎಲ್ಲರನ್ನೂ ನಿಬ್ಬೆರಗುಗೊಳಿಸುತ್ತಾರೆ. ಅವರ ಮಾತಿನಲ್ಲಿ ಕಾನೂನಿನ ಎಳೆಗಳು ಹಾಸುಹೊಕ್ಕಾಗಿ ಮೂಡಿಬರುತ್ತವೆ, ತಪ್ಪಿತಸ್ಥ ಅಧಿಕಾರಸ್ಥರನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುವಲ್ಲಿ ಅವರ ಪಾತ್ರ ಮುಖ್ಯವಾಗಿದೆ. ಭ್ರಷ್ಟತೆಯನ್ನು ವಿರೋಧಿಸಿ, ಉನ್ನತ ಮೌಲ್ಯಗಳನ್ನು ಪ್ರತಿಪಾದಿಸುತ್ತಾರೆ. ಸಾಧನೆಯ ಮಾರ್ಗದಲ್ಲಿ ಹಾದುಹೋಗುವಾಗ ಮಗ್ಗುಲಿನಲ್ಲಿ ಕಾಡುವ ಕಲ್ಲು - ಮುಳ್ಳುಗಳಿಗೆ ಬಗ್ಗೆ ಯಾವತ್ತೂ ಅವರು ಗಮನಹರಿಸಿಲ್ಲ. ಅವರಲ್ಲಿ ತತ್ವನಿಷ್ಠೆ ಹಾಗೂ ಆದರ್ಶಗಳು ಸೂರ್ಯಕಿರಣದಷ್ಟೇ ಸ್ಪಷ್ಟ, ತಾವು ಅಲಂಕರಿಸಿದ ಸ್ಥಾನಗಳಿಗೆಲ್ಲಾ ಗೌರವ ಮತ್ತು ಘನತೆಯನ್ನು ತಂದಿದ್ದಾರೆ. ಅವರ ನಿರರ್ಗಳ ಭಾಷಣ ಮತ್ತು ಅಭಿಪ್ರಾಯೋಕ್ತಿಯಲ್ಲಿ ಅವರ ಮನೋನಿಶ್ಚಯ, ಪಾಂಡಿತ್ಯದ ಪ್ರತಿಭೆ, ವಿವೇಕ ಎಲ್ಲಕ್ಕಿಂತ ಹೆಚ್ಚಾಗಿ ರಾಜ್ಯದ ಬಗ್ಗೆ ಅವರಿಗಿರುವ ಕಳಕಳಿ ಎದ್ದು ಕಾಣುತ್ತದೆ. ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡು ಬದುಕುವುದು ಅವರ ಜಾಯಮಾನವಲ್ಲ! ಎಂದೂ ತಮ್ಮ ಸಿದ್ಧಾಂತದಿಂದ ದೂರ ಸರಿದವರಲ್ಲ. ಅವರ ಕೋಪವೂ ನ್ಯಾಯಯುತವಾಗಿ, ತ್ವರಿತವಾಗಿ, ಸುಗಮವಾಗಿ ಕೆಲಸ ನಡೆಯಬೇಕೆಂಬ ಉದ್ದೇಶಕ್ಕಾಗಿಯೋ ಹೊರತು ದ್ವೇಷ ಅಸೂಯೆಗಳಿಂದಲ್ಲ.

ರಾಜ್ಯದ ಅನೇಕ ಜಿಲ್ಲೆಗಳೊಂದಿಗೆ ಅತ್ಯಂತ ನಿಕಟ ಬಾಂಧವ್ಯವನ್ನು ಹೊಂದಿರುವ ಅವರಿಗೆ; ಸಹ್ಯಾದ್ರಿ, ಕಡಲು, ಹೊಳೆ, ಭತ್ತ, ಕಬ್ಬು, ಬಾಳೆ, ಅಡಿಕೆ, ತೆಂಗುಗಳ ಮಡಿಲಾದ ಉತ್ತರ ಕನ್ನಡ ಜಿಲ್ಲೆ ಅಚ್ಚುಮೆಚ್ಚು. ಜಿಲ್ಲೆಯ ನಿಸರ್ಗದ ಮಡಿಲಲ್ಲಿ ವಾಸಿಸುವ ಪ್ರೇಮ ಸ್ವಭಾವದವರೂ, ಶಾಂತ ಶ್ರಮಜೀವಿಗಳೂ ಆಗಿರುವ, ಸರಳ ಹೃದಯದ ಒಕ್ಕಲು ಮಕ್ಕಳು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಮುಂದೆ ಬರಬೇಕೆಂಬುದು ಅವರ ಬಹುದಿನದ ಹಂಬಲ. ಗ್ರಾಮೀಣ ಮಟ್ಟದಿಂದ ರಾಷ್ಟ್ರೀಯ ಮಟ್ಟದವರೆಗೆ ಎಲ್ಲಾ ರಾಜಕೀಯ ಹಂತಗಳನ್ನು ದಾಟಿ, ಅಧಿಕಾರದ ಆಳ-ಅಂತರಾಳಗಳನ್ನು ಅರಿತು ಯಶಸ್ವಿ ರಾಜಕಾರಣಿಯಾಗಿ ರಾಜ್ಯದ ಮುಖ್ಯಮಂತ್ರಿಯಾಗಿ, ರಾಷ್ಟ್ರದ ಪ್ರಧಾನಿಯಾಗಿ ರಾಜಕಾರಣದಲ್ಲಿ ಮುನ್ನಡೆದಿರುವ ಶ್ರೀ ಎಚ್.ಡಿ. ದೇವೇಗೌಡರೊಂದಿಗೆ ಜನತಾಪಕ್ಷದಲ್ಲಿದ್ದ ಕಾಲದಲ್ಲಿ ಮಿಂಚಿನ ಸಂಚಾರ ಕೈಗೊಂಡು ನಮ್ಮ ಜಿಲ್ಲೆಯ ಒಕ್ಕಲು ಮಕ್ಕಳ ಬಗ್ಗೆ ಅಭಿಮಾನ, ಕಾಳಜಿ ತೋರ್ಪಡಿಸಿದ್ದಾರೆ. ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಸಾನಿಧ್ಯದಿಂದ ಉತ್ತರ ಕನ್ನಡದ ಒಕ್ಕಲು ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಜಿಲ್ಲೆಯ ಒಕ್ಕಲುಮಕ್ಕಳು ಮುಂದೆ ಬರಲು ಸಹಕಾರಿಯಾಗಿದ್ದಾರೆ. ವೈ.ಕೆ.ಆರ್ ಎಂದೇ ಪರಿಚಿತರಾಗಿರುವ ಅವರ ದನಿಗೆ ಜಿಲ್ಲೆಯ ಒಕ್ಕಲು ಬಾಂಧವರು ದನಿಗೂಡಿಸುತ್ತಾರೆ.

ಜನಜಾಗೃತಿ, ಸಮಾಜ ಸೇವೆ, ಕಾರ್ಮಿಕ ಸಂಘಟನೆ, ಸ್ಕೌಟ್ ಮತ್ತು ಗೈಡ್ಸ್, ರೋಟರಿ ಸಂಸ್ಥೆ, ಕೃಷಿ, ರೇಷ್ಮೆ, ನೀರಾವರಿ ಹೀಗೆ ಹತ್ತು - ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಅಂಥ ಕಾರ್ಯಗಳನ್ನು ಯಶಸ್ವಿಯಾಗಿ ಪೂರ್ತಿಮಾಡಿ, ತಮ್ಮ ವೈಯಕ್ತಿಕ ಉದ್ಧಾರದ ಕಡೆ ಹೆಚ್ಚು ಗಮನ ಹರಿಸದೆ, ಸಮಾಜಮುಖಿಯಾಗಿ, ಸಮುದಾಯದ ಹಿತಚಿಂತನೆಯಲ್ಲಿ ಹಲವಾರು ಕಾರ್ಯಕ್ರಮಗಳು ವೈ.ಕೆ.ಆರ್‌ರವರಿಂದ ಸಾಂಗವಾಗಿ ನೆರವೇರಿದೆ. ಹಳ್ಳಿಗಳು ಪ್ರಗತಿಕಂಡರೆ ದೇಶದ ಉದ್ಧಾರ ಸಾಧ್ಯವೆಂಬುದು ಅವರ ಧ್ಯೇಯವಾಗಿದೆ.

ಪಾರದರ್ಶಕ ವ್ಯಕ್ತಿತ್ವ ಹೊಂದಿರುವ ವೈ.ಕೆ.ಆರ್‌ರವರು ಕಟ್ಟುನಿಟ್ಟಿನ ವ್ಯಕ್ತಿ. ಪಾದರಸದಂತೆ ಕ್ರಿಯಾಶೀಲರು, ನಿಷ್ಕಳಂಕ ಮನಸ್ಸುಳ್ಳವರು. ನಿಖರವಾದ ಧೋರಣೆ ಹೊಂದಿದವರು; ಶ್ರೀ ವೈ.ಕೆ. ಆರ್‌ರವರ ಉತ್ಕೃಷ್ಟ ಸೇವೆಯು ರಾಜ್ಯದ ಎಲ್ಲೆಯನ್ನು ಮೀರಿ, ದೇಶದ ಜನತೆಗೆ ದೊರಕುವಂತಾಗಲಿ, ಅದಕ್ಕೆ ಬೇಕಾದ ಶಕ್ತಿ, ಸಾಮರ್ಥ್ಯಗಳನ್ನೂ, ಆರೋಗ್ಯ ಆಯುಷ್ಯಗಳನ್ನೂ ಅವರು ಹೊಂದಲಿ.

೦

## ಕನಸುಗಾರ ರಾಜಕಾರಣಿ

**ಟಿ. ಎಚ್. ಗುರುಚರಣ್ ಸಿಂಗ್**

ಮನುಷ್ಯನ ಹುಟ್ಟು ಆಕಸ್ಮಿಕ, ಸಾವು ಅನಿವಾರ್ಯ ಹಾಗೆ ಹುಟ್ಟಿದ ಮನುಷ್ಯ ಸಾರ್ಥಕ ಜೀವನ ನಡೆಸಬೇಕಿದೆ. ಈ ಹಾದಿ ಸುಗಮವೇನಲ್ಲ ಅದರಲ್ಲೂ ರಾಜಕಾರಣಿಗಳಿಗೆ ಇನ್ನೂ ಕಷ್ಟ.

ವೈ.ಕೆ. ರಾಮಯ್ಯನವರಂತಹ ರಾಜಕಾರಣಿಗಳು ತಮ್ಮ ಜೀವನದಲ್ಲಿ ಸಾಧನೆ ಶಿಖರಗಳನ್ನೇರಿ ಜೀವನದಲ್ಲಿ ಸಾರ್ಥಕತೆ ಪಡೆಯುತ್ತಿರುವುದನ್ನು ನೋಡಿದಾಗ, ಇವರು ಮುಂದಿನ ಪೀಳಿಗೆಯವರಿಗೆ ಎಲ್ಲಾ ವಿಚಾರಗಳಲ್ಲೂ ಮಾರ್ಗದರ್ಶಕರಾಗಿದ್ದಾರೆ.

ತಮ್ಮ ಕ್ಷೇತ್ರದ ಬಗ್ಗೆ ಸುಂದರವಾದ ಕನಸನ್ನು ಕಾಣುವ ರಾಜಕಾರಣಿಯಾಗಿದ್ದು ಅದನ್ನು ನನಸು ಮಾಡಿ ತೋರಿಸುವ ಧೀಮಂತ ಪ್ರವೃತ್ತಿಯ ರಾಜಕಾರಣಿಯಾಗಿದ್ದಾರೆ. ಇಂದು ಅವರು ನೀರಿನ ಮಹತ್ವ, ಪರಿಸರ ಸಮತೋಲನೆ, ಕೋಮುಸೌಹಾರ್ದ ವಿಷಯಗಳನ್ನು ಇಂದಿನ ಯುವಜನಾಂಗಕ್ಕೆ ಹೆಚ್ಚು ಹೆಚ್ಚು ಮನವರಿಕೆ ಮಾಡಿಕೊಡಬೇಕಾಗಿದೆ.

ಇವರ ಸೇವಾಕಾರ್ಯಗಳನ್ನು ಮೆಚ್ಚಿ ಜನತೆಯು ನೀಡಿದ ಬಿರುದುಗಳು ಇವರನ್ನು ಇನ್ನೂ ಹೆಚ್ಚು ಜವಾಬ್ದಾರಿ ಹೊತ್ತು ಸೇವಾಕಾರ್ಯ ವಿಸ್ತರಿಸಲು ಪ್ರೇರಕಶಕ್ತಿಯಾಗಿ ಪರಿಣಮಿಸಿದೆ. ಅದರಲ್ಲೂ **''ಜನಪರ ರಾಜಕಾರಣಿ''** ಪ್ರಶಸ್ತಿ ಪಡೆದ ಮೇಲಂತೂ ಜನಪರ ಕಾರ್ಯವನ್ನು ಇನ್ನೂ ಹೆಚ್ಚಿನ ರೀತಿಯಾಗಿ ಮಾಡುತ್ತಿರುವುದನ್ನು ನಾವೆಲ್ಲಾ ನೋಡುತ್ತಿದ್ದೇವೆ.

ಯಾವುದೇ ಕಾರ್ಯ ಜನಪರವಾಗಿದೆ ಎಂಬ ಅಂಶ ಗಮನಕ್ಕೆ ಬಂದ ಕೂಡಲೇ, ಅದನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವುದು ರಾಮಯ್ಯನವರ ಪ್ರವೃತ್ತಿಯಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಪತ್ರಕರ್ತನಾದ ನಾನು ಕುಣಿಗಲ್ ಪಟ್ಟಣದ ಕುವೆಂಪು ನಗರದಲ್ಲಿ ಉದ್ಯಾನವನಕ್ಕಾಗಿ ಮೀಸಲಿಟ್ಟ ಜಾಗವು ಅನಾಥವಾಗಿರುವುದನ್ನು ಗಮನಕ್ಕೆ ತಂದಾಗ ಕೂಡಲೇ ಪ್ರವೃತ್ತರಾದ ರಾಮಯ್ಯನವರು, ಕೇವಲ 3 ತಿಂಗಳಲ್ಲೇ ಪುಟ್ಟದಾದ ಅತೀ ಸುಂದರವಾದ ಉದ್ಯಾನವನ ನಿರ್ಮಾಣ ಮಾಡಿಸಿದರು! ಇಂದು ಆ ಉದ್ಯಾನವನ ಹಚ್ಚ ಹಸುರಿನಿಂದ ಕಂಗೊಳಿಸುತ್ತಿರುವುದನ್ನು ಕಾಣಬಹುದುದಾಗಿದೆ.

ವೈ.ಕೆ. ರಾಮಯ್ಯನವರು ಅಸಮಾನತೆಯ ವಿರುದ್ಧ ಹೋರಾಡಿದ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಕುವೆಂಪುರವರ ಬಗ್ಗೆ ಮಾತನಾಡುವಾಗ ಕಾಲದ ಪರಿವೇ ಇರುವುದಿಲ್ಲ. ಮಂಕುತಿಮ್ಮನ ಕಗ್ಗದ ಬಗ್ಗೆ ಮಾತನಾಡುವಾಗಂತೂ ಮಾನವೀಯ ಮೌಲ್ಯಗಳ ಮೇರು ಪರ್ವತದಂತೆ ಕಂಡು ಬರುತ್ತಾರೆ.

ಯಾವುದೇ ಗೊಂದಲಗಳಿಗೆ ಒಳಗಾಗದೆ ಮಾನವೀಯ ಮೌಲ್ಯ, ಕೋಮು ಸೌಹಾರ್ದತೆ, ಪರಿಸರ ಸಮತೋಲನಗಳ ಬಗ್ಗೆ ಸಾರ್ವಜನಿಕರಿಗೆ ಇನ್ನೂ ಹೆಚ್ಚಿನ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ''ವಿಭಿನ್ನ ರಾಜಕಾರಣಿ'' ರಾಮಯ್ಯನವರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಿ ಎಂದು ಆಶಿಸುತ್ತೇನೆ.

60 ವರ್ಷಗಳ ಜೀವನದಲ್ಲಿ ನೋವು-ನಲಿವುಗಳನ್ನು ಕಂಡಿರುವ ರಾಮಯ್ಯನವರು ಮುಂದಿನ ದಿನಗಳಲ್ಲಿ ಆದರ್ಶ ಜನಪರ ರಾಜಕಾರಣಿಯಾಗಲೆಂದು ಶುಭ ಹಾರೈಸುತ್ತೇನೆ.

○



# ಸಾಂಸ್ಕೃತಿಕ ಒಡನಾಟ

**ಪ್ರೊ. ಎ ಕೆ ಹಂಪಣ್ಣ**

ದಿಟ್ಟ ರಾಜಕಾರಣಿಯಾದ ವೈ.ಕೆ.ಆರ್ ಅವರಿಗೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಒಡನಾಟ ಬಂದದ್ದು, ಸಾಹಿತಿಗಳ ಪ್ರಭಾವ ಅದರ ಬಗೆಗೆ ಅವರೊಂದಿಗೆ ಪುಟ್ಟ ಚರ್ಚೆಯನ್ನು ವೈಯಕ್ತಿಕ ನೆಲೆಯಲ್ಲಿ ಮಾಡಿದಾಗ ಅವರಿಂದ ಬಂದ ಕೆಲವು ಸಾಹಿತ್ಯಕ ಚಿಂತನೆಗಳು ಈ ರೀತಿ ಇವೆ.

''ಕುವೆಂಪು, ಲಂಕೇಶ್ ಮುಂತಾದವರ ಕೃತಿಗಳ ಅಧ್ಯಯನದ ಮೂಲಕ ನಾನೊಬ್ಬ ಸಾಹಿತ್ಯದ ಪ್ರೇಮಿಯಾಗಿದ್ದೇನೆ. ಶತಮಾನದ ಕವಿ ಕುವೆಂಪು ಅವರ 'ನೂರು ದೇವರನೆಲ್ಲ ನೂಕಾಚೆ ದೂರ', 'ಶ್ರೀ ಸಾಮಾನ್ಯನೆ ಭಗವನ್‌ಮಾನ್ಯನ್' ಮುಂತಾದ ಸಮುದಾಯಕ್ಕೆ ಹತ್ತಿರವಾದ ಮಾತುಗಳು ನನಗೆ ಹೆಚ್ಚು ಪ್ರಿಯವಾದವು. ಕುವೆಂಪು - ಲಂಕೇಶ್ ಅವರಂತಹ ಸತ್ಯನಿಷ್ಠ ಲೇಖಕರ ಬರವಣಿಗೆಯು ನನಗೆ ತುಂಬಾ ಹಿಡಿಸಿತು. ಸಾಹಿತಿ ಸದಾ ಪರಿವರ್ತನಾ ಶೀಲವಾದ ನಡೆಯಲ್ಲಿ ಮುನ್ನಡೆಯಬೇಕಾದರೆ, ಮನುಷ್ಯನ ಅಂತಃಕರಣದ ಒಳಗನ್ನು ಸಾಹಿತಿಯೊಬ್ಬ ಅರಿಯಬಲ್ಲ, ಆ ಮುಖೇನ ಸಮಾಜದೊಂದಿಗೆ ಸ್ಪಂದಿಸಬಲ್ಲ. ನಂಬಿಕೆ, ಸಿದ್ಧಾಂತ ಮತ್ತು ಬದ್ಧತೆಗಳು ಸಾಹಿತ್ಯಕ್ಕೆ ಪೂರಕವಾಗಿ ಮೂಡಬೇಕಾಗಿದ್ದು, ಪೂರ್ಣಚಂದ್ರ ತೇಜಸ್ವಿ, ಲಂಕೇಶ್, ಚಂದ್ರಶೇಖರ ಪಾಟೀಲರಂತಹ ಸಾಹಿತಿಗಳ ಬದ್ಧತೆ, ಮಾನವತೆಯೇ ತುಳುಕುವ ಅವರ ಸಾಹಿತ್ಯ ರಚನೆ ಇವೆಲ್ಲವೂ ನಮ್ಮಂತಹವರ ಮೇಲೆ ಪ್ರಭಾವ ಬೀರಿದವು. ಅಸಮಾನತೆ ಹೋಗಲಾಡಿಸಲು, ಸಾಮಾಜಿಕ ಅನಿಷ್ಟಗಳನ್ನು ನಿವಾರಿಸಲು ಸಾಹಿತಿಗಳ ಕೊಡುಗೆಯು ಅನನ್ಯವಾದದ್ದು. ಈ ದಿಸೆಯಲ್ಲಿ ಬುದ್ಧ, ಬಸವಣ್ಣ ಮತ್ತು ಕುವೆಂಪು ನನಗೆ ಆದರ್ಶ'' ಎಂದು ಎದೆ ತುಂಬಿ ಹೇಳಿದರು.

''ಆಧುನಿಕ ಭಾರತದ ಸಂದರ್ಭದಲ್ಲಿ ಗಾಂಧೀಜಿ ಮತ್ತು ಅಂಬೇಡ್ಕರರು ಪ್ರಸ್ತುತರಾಗುತ್ತಾರೆ. ಪ್ರಬಲ ವಿರೋಧದ ನಡುವೆಯು ಮನುಕುಲಕ್ಕೆ ಕಳಂಕಪ್ರಾಯ ವಾಗಿರುವ ಮನುಧರ್ಮಶಾಸ್ತ್ರವನ್ನು ಅಂಬೇಡ್ಕರರು ಬಹಿರಂಗವಾಗಿ ಸುಟ್ಟುಹಾಕಿದ್ದು ನನ್ನಂತಹವನಿಗೆ 'ಸಂವಿಧಾನ' ರಚನೆಗಿಂತಲೂ ಮಹತ್ವದ್ದು.

ಕ್ರಿ.ಪೂ. 6ನೇ ಶತಮಾನದ ಬುದ್ಧನ ಚಿಂತನಗಳು ಸ್ವರ್ಗ -ನರಕಗಳಿಲ್ಲದ, ಮಧ್ಯಮ ಜಗತ್ತೊಂದನ್ನು ಕುರಿತು ಚಿಂತಿಸಿದವರು - ಆ ಮೂಲಕ 'ದೇವರು' ಅದರ ಇರುವಿಕೆಯ ಬಗೆಗೆ

ಪ್ರಸ್ತಾಪವೇ ಮಾಡದೆ, 'ನೈತಿಕತೆಯ' ಜೀವನವು ಆದರ್ಶವಾಗಬೇಕೆಂದ ಬುದ್ಧನ ಮಾರ್ಗ ನಮಗಿಂದು ಅಗತ್ಯ, ಬುದ್ಧನ ಪಂಚಶೀಲತತ್ವ, ಅಷ್ಟಾಂಗ ಮಾರ್ಗಗಳು ಯಾವುದೇ ಕಾಲಕ್ಕೂ ಪ್ರಸ್ತುತವಾಗಬಲ್ಲುದು.

ಕುವೆಂಪು ಅವರು ಯುವಕರಿಗೆ ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿರೆಂದು ಕರೆ ನೀಡಿದ್ದು, ಸರ್ವರಿಗೂ ಸಮಬಾಳು - ಸರ್ವರಿಗೂ ಸಮಪಾಲು - ಇಂತಹ ಸರಳ ಚಿಂತನೆಗಳು ಇಂದಿಗೂ ನಮಗೆ ಅಗತ್ಯ, ಬದ್ಧತೆಯಿಲ್ಲದ ಸಾಹಿತ್ಯ ಆತ್ಮವಿಲ್ಲದ ದೇಹದಂತೆ'' ಎಂದು ತತ್ವಜ್ಞಾನಿಯಂತೆ ವೈ.ಕೆ.ಆರ್ ಹೇಳಿದರು.

ಬರಗಾಲದ ಬವಣೆ ನೀಗಲು ಮಳೆಗಾಲದ ಹನಿ ನೀರು ಸಾಕು, ಸಾಹಿತಿ-ಚಿಂತಕರಿಗೆ ಈ ಬಗೆಯಲ್ಲಿ ಹನಿ ನೀರು ಸಿಂಪಡಿಸುವ ಅದಮ್ಯ ಉತ್ಸಾಹ - ಕುತೂಹಲಗಳಿರಬೇಕಾಗಿದ್ದು, ಬುದ್ಧನಿಂದ ಕುವೆಂಪುವರೆಗೆ ಈ ಬಗೆಯ ಚಿಂತನೆಗಳು ನಡೆಯುತ್ತಿದ್ದು, ಆದರೂ ಎಲ್ಲಾ ಕ್ಷೇತ್ರಗಳೂ ಕಲುಷಿತಗೊಂಡಿವೆ. ಯಾರನ್ನೂ ದೂಷಿಸುವಂತಿಲ್ಲ. ನಾನೊಬ್ಬ ಆಶಾವಾದಿ, ಎಂದಾದರೂ ಒಂದು ದಿನ ಸಮಾಜ ಸರಿ ಹೋಗುತ್ತದೆ.

ಈ ಹಿನ್ನೆಲೆಯಲ್ಲಿ ಡಿ.ವಿ.ಜಿ ಅವರ 'ಮಂಕುತಿಮ್ಮನ ಕಗ್ಗ' ನನಗೆ ಹೆಚ್ಚು ಪ್ರಿಯವಾದ ಗ್ರಂಥವೆಂದು ಪ್ರಸ್ತಾಪಿಸಿದ ವೈ.ಕೆ.ಆರ್ ಸಂತಸದ - ದುಃಖದ ಕ್ಷಣಗಳಲ್ಲಿ ಸಾಹಿತ್ಯದ ಅಧ್ಯಯನ ನನಗೆ ಹೆಚ್ಚು ಆಪ್ಯಾಯಮಾನವೆಂದು ಹೇಳಿದರು.

ಜನಪರ ಚಳವಳಿಗಳಲ್ಲಿ ಆರಂಭದ ಹಂತದಲ್ಲಿ ಬಂಡಾಯ ಹಾಗೂ ದಲಿತ ಚಳುವಳಿಗಳು ಮೈಕೊಡವಿ ಬಂದದ್ದೊಂದು ಅಪೂರ್ವ ಸನ್ನಿವೇಶ. ಜನಸಮುದಾಯದ ಚಿಂತನೆಗಳು ಬಂಡಾಯದವರು - ದಲಿತರು - ಕೂಲಿಕಾರ್ಮಿಕರು, ರೈತರು ಹೋರಾಟದ ಮೂಲಕ ಏನನ್ನಾದರೂ ಸಾಧಿಸಬಹುದೆಂದು ಅರಿತುಕೊಂಡಿದ್ದರು. ಹಾಗಾಗಿ ಈ ಬಗೆಯ ಹೋರಾಟ ನನಗಂತೂ ಹೆಚ್ಚು ಪ್ರಸ್ತುತವಾಗಿದ್ದು, ಆ ಬಗೆಯ ಪರಂಪರೆ ಮತ್ತೊಮ್ಮೆ ಮುಂದುವರೆಯಬೇಕು.'' ಎಂದು ಅದಮ್ಯ ಆಶಾವಾದದಿಂದ ಹೇಳಿದರು.

ಕೆಲವು ಹೊತ್ತು ಮಾತ್ರ ವೈ.ಕೆ.ಆರ್ ಅವರೊಂದಿಗೆ ಚರ್ಚೆ ನಡೆಸಿದ್ದಕ್ಕೆ ಅವರು ಸಾಹಿತ್ಯ-ಸಾಂಸ್ಕೃತಿಕ ಸನ್ನಿವೇಶಗಳ ನಡುವೆ ಕಂಡುಕೊಂಡ ಸತ್ಯಗಳನ್ನು ಬಿಚ್ಚುಮನಸ್ಸಿನಿಂದ ಮಾತನಾಡಿದರು. ಬುದ್ಧನ ಚಿಂತನೆಗಳು, 20ನೇ ಶತಮಾನದ ನಾಡಿನ ಮಹಾಕವಿ - ಚಿಂತಕ - ಶ್ರೀ ಕುವೆಂಪು ಅವರ ಬಗೆಗಂತೂ ಅಪೂರ್ವ ಅಭಿಮಾನ. ಈ ಅಭಿಮಾನ ಅವರ ಕೃತಿಗಳ ಅಧ್ಯಯನದ ಮೂಲಕ ಬಂದದ್ದು.

''ಚಳವಳಿಗಳ ಮೂಲಕ ಸೃಷ್ಟಿಯಾದ ಸಾಹಿತ್ಯಕ್ಕೆ ಅದರದೇ ವೈವಿಧ್ಯತೆ ಇರುತ್ತದೆ. ಹಾಗೂ ಅದು ನಿಜದ ಅರ್ಥದಲ್ಲಿ ಜನಪರವಾಗಿರುತ್ತದೆ'' ಎಂದು ನಂಬಿದವರು.

ಹನ್ನೆರಡನೇ ಶತಮಾನದ ಸಮಗ್ರ ಬದುಕನ್ನು ಪಲ್ಲಟಿಸಿದ ವಚನ ಚಳವಳಿಯ ಮಾದರಿಯಲ್ಲಿ 20ನೇ ಶತಮಾನದ ಕೊನೆಯ ದಶಕಗಳಲ್ಲಿ ದಲಿತ, ಬಂಡಾಯ, ರೈತ ಚಳುವಳಿಗಳಿಗೆ ಐತಿಹಾಸಿಕ ಮಹತ್ವವಿರುವುದು ಆ ಕಾರಣವಾಗಿಯೇ. ಸಮಕಾಲೀನ ಸಂದರ್ಭದಲ್ಲಿ ವೈ.ಕೆ.ಆರ್ ಅವರಂತಹ ರಾಜಕಾರಣಿಯ ಚಿಂತನೆಗಳು ನಮ್ಮ ಸಮಾಜಕ್ಕೆ ಅತ್ಯಗತ್ಯವಾದುವುಗಳು.

○



# ಸಾಹಸಶೀಲ

ಎಂ ವೀರಪ್ಪಮೊಯ್ಲಿ

ಮಿತ್ರರಾದ ವೈ.ಕೆ. ರಾಮಯ್ಯ ಅವರನ್ನು ಜ್ಞಾಪಿಸಿಕೊಂಡಾಗೆಲ್ಲಾ ಅವರ ಹೋರಾಟದ ಗುಣ ಎದ್ದು ಕಾಣುತ್ತದೆ. ಯಾರನ್ನೂ ಲೆಕ್ಕಿಸದೆ ತನಗೆ ಸರಿಕಂಡ ಸತ್ಯನುಡಿಯಲು ಎಂಟೆದೆ ಬೇಕು. ಯಾವುದಾದರೂ ಒಂದು ಕೆಲಸವಾಗಬೇಕಾದರೆ, ಯಾವುದಾದರೂ ಒಂದು ಹುಚ್ಚು ಹತ್ತಿಸಿಕೊಳ್ಳಬೇಕು. ನಿಂತರೆ, ಕೂತರೆ ಆ ಹುಚ್ಚು ನಿಮ್ಮನ್ನು ಕಾಡದಿದ್ದರೆ ಅದರಲ್ಲಿ ನೀವು ಪರಿಣತಿ ಪಡೆಯಲಾರಿರಿ. 'ವಾಲ್ಮೀಕಿ' ಎಂದರೇನು? ತನ್ನ ದೇಹದ ಸುತ್ತ ಹುತ್ತ ಬೆಳೆಸಿಕೊಂಡವನು. ಹೀಗೆ ತನ್ನ ಕನಸು ಮನಸಿನಲ್ಲೂ ರಾಮಕಥೆ ಚಿಂತಿಸಿದ. ಆ ಕಾರಣಕ್ಕಾಗಿ ಜಗತ್ತಿಗೆ ಶ್ರೀ ರಾಮಾಯಣದಂತಹ ಮಹಾಕಾವ್ಯ ದೊರೆಯಿತು. ''ಶ್ರೀ ರಾಮಾಯಣ ದರ್ಶನಂ'' ರಚನಾ ಕಾಲದಲ್ಲಿ ರಾಷ್ಟ್ರಕವಿ ಕುವೆಂಪು ಸಹ ಈ ಮಾತನ್ನೇ ಹೇಳುತ್ತಿದ್ದರು.

ತುಮಕೂರು ಜಿಲ್ಲೆಗೆ ಹೇಮಾವತಿ ನೀರು ತರುವ ಹುಚ್ಚನ್ನು ವೈ.ಕೆ. ರಾಮಯ್ಯ ಅವರು ತಮ್ಮ ತಲೆಗೆ ಹಚ್ಚಿಕೊಂಡರು. ಕೂತರೆ, ನಿಂತರೆ ಹೇಮಾವತಿಯೇ ಅವರ ಜಪವಾಯಿತು. ನಾನು ಮುಖ್ಯಮಂತ್ರಿಯಾಗಿದ್ದಾಗ, ಸದನದಲ್ಲಿ ''ಹೇಮಾವತಿ ನೀರು ನಮ್ಮ ಜಿಲ್ಲೆಗೆ ಬರುತ್ತಿಲ್ಲವೆಂದು'' ವೈ.ಕೆ.ಆರ್ ಭಾವೋದ್ವೇಗದಿಂದ ನುಡಿದರು. ''ಹದಿನೆಂಟು ವರ್ಷದಿಂದ ಕೆಲಸ ಆಗಿಲ್ಲವೆಂದರೆ ನೀವು ಕೂಡ ಅಧಿಕಾರದಲ್ಲಿದ್ದಿರಲ್ಲ'' ಎಂದು ತಮಾಷೆಗೆ ಹೇಳಿದೆ. ಇಂತಹುದಕ್ಕೆಲ್ಲಾ ರಾಮಯ್ಯ ಜಗ್ಗುವವರೇ ಅಲ್ಲ. 'ಒಮ್ಮೆ ಬನ್ನಿ ಅಲ್ಲಿಗೆ' ಎಂದು ಆಗ್ರಹಪೂರ್ವಕವಾಗಿ ಒತ್ತಾಯ ಮಾಡಿದರು. ಮೂರು ಜಿಲ್ಲೆಯ ಲಕ್ಷಾಂತರ ರೈತರ ಜೀವನ ಪ್ರಶ್ನೆಯಾಗಿತ್ತು. ಐದು ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರುಣಿಸುವ ಕೆಲಸ ಸಣ್ಣದಲ್ಲ. ಒಂದು ಅಧಿಕೃತ ಕಾರ್ಯಕ್ರಮ ಹಾಕಿಕೊಂಡೆ. ಬಾಗೂರು-ನವಿಲೆ ಸುರಂಗ ಮಾರ್ಗಕ್ಕೆ ಇದ್ದ ಹಲವು ಕಂಟಕಗಳನ್ನು ಪರಿಹರಿಸಬೇಕಾಗಿತ್ತು. ಗುತ್ತಿಗೆದಾರರಿಗೆ ಬಹಳ ವರ್ಷದಿಂದ ಹಣ ಬಿಡುಗಡೆಯಾಗಿರಲಿಲ್ಲ. ಈ ನಾಲೆಯ ಕೆಲಸಕ್ಕೆ ಜಮೀನು ಕಳೆದುಕೊಳ್ಳುವವರಿಗೆ ಸೂಕ್ತ ಪರಿಹಾರ ಕೊಡಬೇಕಾಗಿತ್ತು. ಅವರು ನ್ಯಾಯಾಲಯಕ್ಕೆ ಹೋಗಿದ್ದರೆ ಪ್ರತಿಯೊಂದು ಪ್ರಕರಣಕ್ಕೆ ವರ್ಷಗಟ್ಟಲೆ ಹಿಡಿಯುತ್ತಿತ್ತು. ನಾನು ಕಾನೂನು ಸಚಿವನಾಗಿದ್ದಾಗಲೇ ಇದಕ್ಕೆ ಪರಿಹಾರ ಒದಗಿಸಿದ್ದೆ. ''ಲೋಕ ಅದಾಲತ್'' ನಿಂದಲೇ ಬೇಗ ರೈತರ ಪ್ರಕರಣಗಳನ್ನು ಇತ್ಯರ್ಥ ಮಾಡಬೇಕೆಂದು ತೀರ್ಮಾನಿಸಿದೆ.

ಪ್ರತಿ ತಿಂಗಳು ಸಭೆ ನಡೆಸಿ ಆಗಿರುವಷ್ಟು ಕೆಲಸಕ್ಕೆ ಹಣ ಬಿಡುಗಡೆ ಮಾಡುವಂತೆ ಆರ್ಥಿಕ ಇಲಾಖೆಗೆ ಸೂಚಿಸಿದೆ. ಹಣ ಕಾಮಗಾರಿಗೆ ಅಡ್ಡಿ ಬರಬಾರದೆಂದು ಕಟ್ಟಾಜ್ಞೆ ನೀಡಿದೆ. ನೀರಾವರಿ ಇಲಾಖೆಯ ಅಧಿಕಾರಿಗಳಿಗೆ 'ಕಾಲನಿಗದಿತ' ಸಮಯದಲ್ಲಿ ಹೇಮಾವತಿ ನಾಲಾ ಮುಗಿಸುವಂತೆ ತಾಕೀತು ಮಾಡಿದೆ. ವೈ.ಕೆ. ರಾಮಯ್ಯನವರಿಗೆ ಈ ಕೆಲಸದಲ್ಲಿನ ಬದ್ಧತೆ ಇದಕ್ಕೆಲ್ಲಾ ಮೂಲ ಕಾರಣ. ಸರ್ಕಾರದ ವತಿಯಿಂದ ಶೀಘ್ರವಾಗಿ ಕೆಲಸವಾಗಬೇಕಾದರೆ ರಾಮಯ್ಯನವರಂತೆ ಬೆನ್ನು ಹತ್ತುವವರೊಬ್ಬರು ಇರಬೇಕು. ರಾಮಯ್ಯನವರ ಮತ್ತೊಂದು ಆಸಕ್ತಿಕ್ಷೇತ್ರ ರೇಷ್ಮೆ. ರೇಷ್ಮೆ ಕೃಷಿಯ ಬಗ್ಗೆ ವ್ಯಾಪಕವಾಗಿ ಚಿಂತಿಸಿ ಸೂಕ್ತ ಸಲಹೆಗಳನ್ನು ಕೊಡುವ ಪಾಂಡಿತ್ಯ ರಾಮಯ್ಯ ಅವರಲ್ಲಿದೆ.

ರಾಮಯ್ಯ ಅವರು ಕುವೆಂಪು, ಡಿವಿಜಿ ಹಾಗೂ ಇತರ ಸಾಹಿತಿಗಳ ಕೃತಿಗಳನ್ನು ಚೆನ್ನಾಗಿ ಓದಿಕೊಂಡಿದ್ದಾರೆ. ಭಾಷಣಗಳಲ್ಲಿ ಈ ಸಾಹಿತಿಗಳ ಅಭಿಪ್ರಾಯವನ್ನು ಉಲ್ಲೇಖಿಸುತ್ತಾರೆ. ಇದಕ್ಕೆ ಆಳವಾದ ಅವರ ಅಧ್ಯಯನ ಸಹಾಯಕವಾಗಿದೆ.

ಮೂಲತಃ ವಕೀಲರಾದ ರಾಮಯ್ಯ ಯಾವುದೇ ವಿಚಾರವನ್ನು ಸಮರ್ಥವಾಗಿ ಪ್ರತಿಪಾದಿಸಬಲ್ಲ ಸಾಮರ್ಥ್ಯ ಪಡೆದಿದ್ದಾರೆ. ಇಂತಹವರು ನಮ್ಮ ಶಾಸನ ಸಭೆಗಳಲ್ಲಿರಬೇಕು. ಅವರ ಅನುಭವ ಹಾಗೂ ಜ್ಞಾನವನ್ನು ನಮ್ಮ ಜನತೆ ಸದುಪಯೋಗಪಡಿಸಿಕೊಳ್ಳಬೇಕು. ಅರವತ್ತು ವರ್ಷಗಳನ್ನ ಕಂಡಿರುವ ವೈ.ಕೆ. ರಾಮಯ್ಯ ಅವರು ತಮ್ಮ ಕ್ರಿಯಾಶೀಲತೆಯನ್ನು ಉಳಿಸಿಕೊಳ್ಳಲಿ. ಅವರಿಂದ ರಾಜ್ಯ ಸಾಕಷ್ಟು ಪ್ರಯೋಜನ ಪಡೆಯಲೆಂದು ಆಶಿಸುತ್ತೇನೆ.



# ಅಭಿವೃದ್ಧಿಯೇ ರಾಜಕೀಯ

ಕೊನೆಗೂ ತುಮಕೂರಿನ ಕುಣಿಗಲ್‌ವರೆಗಿನ ಹೇಮಾವತಿ ಮುಖ್ಯ ನಾಲೆಯ ಕಾಮಗಾರಿ ಮುಗಿದಿದೆ. 72 ಕಿ.ಮಿ. ಉದ್ದದ ಈ ನಾಲೆಯ ಮೂಲಕ 50 ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಒದಗಿಸಲು ಮೊದಲು ನಿರ್ಧರಿಸಿದ್ದರೂ ಈಗ ಆರಂಭಿಕ ನಾಲೆಯನ್ನು ವಿಸ್ತರಿಸುವ ಹಾಗೂ ಅಗಲಗೊಳಿಸುವ ಮೂಲಕ ಮೂರು ಜಿಲ್ಲೆಗಳ ಸುಮಾರು 5 ಲಕ್ಷ ಎಕರೆ ಪ್ರದೇಶಕ್ಕೆ ನೀರಾವರಿ ಒದಗಿಸಲು ನಿರ್ಧರಿಸಿರುವುದು ನಿಜಕ್ಕೂ ಸ್ವಾಗತಾರ್ಹ. ಆರಂಭದಲ್ಲಿ ಶಿಂಷಾ ಕೊಳ್ಳಕ್ಕೆ ನೀರು ಹರಿಸಲೆಂದು ಆರಂಭವಾದ ಕಾಮಗಾರಿ, 1994ರಲ್ಲಿ ಈ ಉದ್ದೇಶ ಸಾಧನೆಯಾದ ಬಳಿಕ ಹೊಸ ದಾರಿ ಹಿಡಿದಿದ್ದು ಸರಕಾರದ ಹಾಗೂ ಜನರ ಸಂಕಲ್ಪ ಶಕ್ತಿಗೆ ಸಾಕ್ಷಿ. **ರಾಜ್ಯ ಸರಕಾರದ ಮೇಲೆ ಒತ್ತಡ ಹೇರಿ ಕಾಮಗಾರಿಗೆ ಹೆಚ್ಚುವರಿ ಹಣ ದೊರಕಿಸುವಲ್ಲಿ ಶಾಸಕ ವೈ.ಕೆ. ರಾಮಯ್ಯ ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದು ಶ್ಲಾಘನೀಯ. ನೀರಾವರಿ ಯೋಜನೆಗಳಿಂದ ವಂಚಿತವಾಗಿರುವ ಬೇರೆ ಜಿಲ್ಲೆಗಳ ಶಾಸಕರೂ ಇವರಿಂದ ಕಲಿಯಬೇಕಾದ ಪಾಠಗಳಿವೆ.**

ಯೋಜನೆಯ ಕುರಿತು ಪತ್ರಿಕಾಗೋಷ್ಠಿಯಲ್ಲಿ ವಿವರ ನೀಡಿದ ಶಾಸಕ ವೈ.ಕೆ. ರಾಮಯ್ಯ ಅವರು, ಇದೇ ವೇಳೆ ರಾಜಕೀಯ ಮತ್ತು ಅಭಿವೃದ್ಧಿ ಕಾರ್ಯಗಳ ಕುರಿತು ಮಾಡಿರುವ ವಾದ ಮಾತ್ರ ಅಸಂಗತ ಎನ್ನದೇ ವಿಧಿಯಿಲ್ಲ. ಕುಣಿಗಲ್ ಕೆರೆಗೆ ಹೇಮಾವತಿ ನೀರು ಹರಿಸುವ ಕಾಮಗಾರಿ ಮುಗಿಯುವರೆಗೆ ರಾಜಕೀಯದಿಂದ ದೂರ ಇದ್ದೆ, ಪೂರ್ಣಾವಧಿ ರಾಜಕೀಯವನ್ನೇ ಮಾಡುವ ಜನಪ್ರತಿನಿಧಿ ತನ್ನ ಕ್ಷೇತ್ರದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಸಮರ್ಪಕವಾಗಿ ಮಾಡಲು ಆಗುವುದಿಲ್ಲ. ಎಂದು ರಾಮಯ್ಯ ಅವರು ಹೇಳಿರುವುದು ತುಮಕೂರು ಮಾತ್ರವಲ್ಲ; ಇತರ ಹಲವು ಜಿಲ್ಲೆಗಳ ರಾಜಕೀಯ ತಲುಪಿರುವ ಅಧಃಪತನಕ್ಕೂ ಸಾಕ್ಷಿಯಾಗಿದೆ. **ಅಭಿವೃದ್ಧಿ ಕಾರ್ಯ ಬೇರೆ, ರಾಜಕೀಯ ಬೇರೆ** ಎಂಬ ಕಲ್ಪನೆಯೇ ಮೂಲತಃ ತಪ್ಪು. ಬಹಳಷ್ಟು ಕಡೆ ಶಾಸಕರಾದವರು ಚಿಲ್ಲರೆ ವರ್ಗಾವಣೆ, ಬೆಂಬಲಿಗರ ನೇಮಕಾತಿ ಮುಂತಾದ ರಾಜಕೀಯ ಮೇಲಾಟಗಳಲ್ಲಿ ಮಾತ್ರ ನಿರತರಾಗಿದ್ದರಿಂದಲೇ ಈ ತಪ್ಪು ಕಲ್ಪನೆ ಉಂಟಾಗಿದೆ. **ರಾಮಯ್ಯ ಅವರು ಈಗ ಹೇಮಾವತಿ ಕಾಮಗಾರಿಗಾಗಿ ನಡೆಸಿದ ಭಗೀರಥ ಯತ್ನವೇ ತಮ್ಮ ರಾಜಕೀಯ ಎಂದು ತಿಳಿದುಕೊಳ್ಳಬೇಕು. ಅವರು ಹಾಕಿರುವ ರಾಜಕೀಯ ರಜೆ ಹೀಗೆಯೇ ಮುಂದುವರಿದು ಜಿಲ್ಲೆಗೆ ಇನ್ನಷ್ಟು ಅಭಿವೃದ್ಧಿ ಕೆಲಸಗಳು ನಡೆಯಲಿ** ಎನ್ನುವುದು ಅಲ್ಲಿನ ಮತದಾರರ ಅಭಿಲಾಷೆ ಕೂಡಾ. ಅಭಿವೃದ್ಧಿ ಕೆಲಸಗಳನ್ನೇ ರಾಜಕೀಯ ಎಂದು ಶಾಸಕರು ತಿಳಿದುಕೊಂಡರೆ. ಬಹಳಷ್ಟು ಕ್ಷೇತ್ರಗಳ ಸಮಸ್ಯೆಗಳು ಹೂವೆತ್ತುವಷ್ಟು ಸರಾಗವಾಗಿ ನಿವಾರಣೆ ಆದೀತು.

O

(**ಪ್ರಜಾವಾಣಿ ಸಂಪಾದಕೀಯ** : 9-1-2002)

# ಜನಮನದ ಹಂಬಲ

ಕರ್ನಾಟಕದ ಮೂಲೆಯಲ್ಲಿಹುದು ನಿಮ್ಮ ಹಳ್ಳಿ
ಜನಿಸಿದರೆ ನೀವು ಆ ಎಲೆಕಡಕಲೆಂಬ ಹಳ್ಳಿಯಲ್ಲಿ
ತಂದೆ ತಾಯಿಯ ಪ್ರೀತಿಯ ಕಿರಿಯ ಪುತ್ರರಾಗಿ ಆ ಹಳ್ಳಿಯಲ್ಲಿ
ಜನರ ಮೆಚ್ಚುಗೆ ಪಾತ್ರರಾದಿರಿ ಎಲ್ಲರ ಬಾಯಲ್ಲಿ
ಆಟ, ಪಾಠ, ಓಟ ಎಲ್ಲವಾಯಿತು ಆ ಹಳ್ಳಿಯಲ್ಲಿ
ಪದವಿಯನು ಪಡೆದಿರಿ ತುಮಕೂರಿನಲ್ಲಿ
ಕಬ್ಬಿನ ಆಲೆಮನೆಯ ಬೆಳಕ ಕಾಯಿಸುತ್ತ ಓದುವಲ್ಲಿ
ರೇಷ್ಮೆ ಹುಳುಗಳ ಸಾಕಿ ಅದರ ಜೊತೆಯಲ್ಲಿ ಬೆಳೆಯುವಲ್ಲಿ
ಫಲವಿತ್ತು ನಿಮ್ಮ ಓದಿಗೆ ಕಾನೂನು ಪದವಿ ಪಡೆಯುವಲ್ಲಿ
ರೈತಾಪಿ ಜನರ ಬವಣೆಯ ನೋಡಿ ನಿಮ್ಮ ನೋಟದಲ್ಲಿ
ವಕೀಲಿ ವೃತ್ತಿಯಲ್ಲಿ ಜನಮನದ ಹಂಬಲದ ದನಿಯಲ್ಲಿ
ಕೋಪದ ಗತ್ತಿನಲ್ಲಿ ಜನಮನದ ಹಂಬಲದ ದನಿಯಲ್ಲಿ
ಕೋಪದ ಗತ್ತಿನಲ್ಲಿ ಎಲ್ಲ ಜನರು ನಿಮ್ಮ ಮೆಚ್ಚುವಲ್ಲಿ
ಗೆದ್ದಿರಿ ಎಲ್ಲರ ಮನವನ್ನು ಜನರ ದುಃಖ ದುಮ್ಮಾನದಲ್ಲಿ
ಕಷ್ಟನಷ್ಟಗಳ ಬವಣೆ ಕಿರುಕುಳಗಳ ಸ್ವಂತ ಅನುಭವದಲ್ಲಿ
ಸಂಘ ಕಟ್ಟಿ ಹೋರಾಟ ಮಾಡಿ ಜನರ ಮೆಚ್ಚುಗೆ ಪಡೆಯುವಲ್ಲಿ
ಜನರ ಸೇವೆಯೆಂದು ನೀವು ಭಾವಿಸಿದರಲ್ಲಿ
ರೈತಾಪಿ ಜನರು, ನಾಡಾಡಿಗಳು. ಕಷ್ಟನಷ್ಟಗಳ ಲೆಕ್ಕಾಚಾರದಲ್ಲಿ
ದೇಶ ಸುತ್ತಿ ಜನರ ಸ್ನೇಹ ಬೆಳೆಸಿ ರೇಷ್ಮೆಗೆ ರೂಪ ಕೊಡುವಲ್ಲಿ
ಸಾಲು ಮರ ನಡೆಸಿ ಜನರಿಗೆ ನೆರಳು ನೀಡುವಲ್ಲಿ
ಭಗೀರಥರಾದಿರಿ ತುಮಕೂರಿಗೆ ಹೇಮಾವತಿ ನೀರು ತರುವಲ್ಲಿ
ಶಾಸಕರಾಗಿ ಎಲ್ಲರಿಗೂ ಮಾದರಿಯಾಗಿ ಜನ ಸೇವೆಯಲ್ಲಿ
ಆದರ್ಶ ಶಾಸಕರಾಗಿ ರೇಷ್ಮೆ ಮಂತ್ರಿಯಾಗಿ ನಮ್ಮ ನಾಡಲ್ಲಿ
ಜನಪರ ರಾಜಕಾರಣಿ ನೀವೆಂದು ಜನ ಬಿರುದು ನೀಡುವಲ್ಲಿ
ನಿಮ್ಮ ಬದುಕು - ನಿಮ್ಮ ಶೈಲಿ

○

- ಟಿ. ವೆಂಕಟರಮಣ

.... ರಾಮಣ್ಣ ನನ್ನ ಕಿರಿಯ ತಮ್ಮ. ಅವನು ಐದು ವರ್ಷದ ಹುಡುಗನಾಗಿದ್ದಾಗಲೇ ನಮ್ಮ ಅಪ್ಪ ತೀರಿಕೊಂಡರು. ನನ್ನನ್ನ ನಿಡಸಾಲೆಗೆ ಕೊಟ್ಟು ಮದ್ವೆ ಮಾಡಿದ್ರು. ನಿಡಸಾಲೆ ನಮ್ಮವ್ವನ ತೌರುಮನೆ. ಇದರಿಂದಾಗಿ ಎಲೆಕಡಕಲು ಮತ್ತು ನಿಡಸಾಲೆಗೆ ಶಾನೆ ಸಂಬಂಧ ಐತೆ. ರಾಮಣ್ಣ ನಿಡಸಾಲೆಲೂ ಓದಿದ. ನಮ್ಮ ಹಿರೇ ಅಣ್ಣ ಕಂಬಯ್ಯ ಅಂತ. ಶಾನೆ ಸಿಟ್ಟು ಮತ್ತು ಕಟ್ಟುನಿಟ್ಟಿನ ಮನುಷ್ಯ. ನಮ್ಮ ಅತ್ತಿಗೆ ದೇವರಂಥವಳು. ಅವಳೇ ನಮ್ಮ ರಾಮಣ್ಣನ್ನ ಸಾಕಿದ್ದು. ನಮ್ಮ ಹಿರಿ ಅಣ್ಣನ ಗುಣವೇ ರಾಮಣ್ಣನಲ್ಲೂ ಐತೆ.

ರಾಮಣ್ಣ ಉಜ್ಜನಿಯಲ್ಲಿ ಓದುತ್ತಿರಬೇಕಾದರೆ; ಒಂದಿನ ಇಸ್ಕೂಲಿಗೆ ಚಕ್ಕರ್ ಹಾಕಿ ಈಜಾಡಕ್ಕೆ ಹೋಗಿದ್ದ. ಆಗ ನಮ್ಮ ಅಣ್ಣ ಕಂಬಯ್ಯ, ಮೈಯೆಲ್ಲಾ ಬಾಸುಂಡೆ ಬರಂಗೆ ಹೊಡೆದಿದ್ದನ್ನ ನಾನೇ ಕಂಡಿದ್ದೆ. ರಾಮಣ್ಣ ಓದೋದರಲ್ಲಿ ಹೆಂಗೋ; ಅಂಗೇ ಬೇಸಾಯ ಕೆಲ್ಸದಲ್ಲೂ ಮುಂದು. ಆಡಿಗೆ ಸೊಪ್ಪು ಕಟ್ಟೋನು, ಗೊಬ್ಬರ ಹೊಡಿಸೋನು, ಮಣ್ಣು ಹೊಡಿಸೋನು. ಬಹಳಾ ಕೋಪಿ, ಆದರೂ ಅವನ ಮನಸ್ಸು ಮಗುವಿನಂತಹದ್ದು. ಯಾರದ್ದೂ ಮುಲಾಜಿಗೆ ಒಳಗಾಗನಲ್ಲ ನನ್ನ ತಮ್ಮ.

ರಾಮಣ್ಣ ಎಂ.ಎಲ್.ಎ ನೂ ಆಗಿದ್ದ. ಮಂತ್ರಿನೂ ಆಗಿದ್ದ. ಆದರೂ ನಾನ್ಯಾವತ್ತೂ ಅದುಕೊಡು - ಇದುಕೊಡು ಅಂತ ಕೇಳಿದವಳಲ್ಲ. ಹಾಗೊಂದು ವೇಳೆ ಕೇಳಿದರೂ ಅವನು 'ನಿನಗ್ಯಾಕೆ? ನಿನಗೆ ಎರಡು ಹೊತ್ತಿಗೂ ಹೊಟ್ಟೆ-ಬಟ್ಟೆಗೆ ನೇರೂಪಾಗೈತೆ! ಏನೂ ಇಲ್ಲದ ಬಡವರಿಗೆ ಏನಾದ್ರೂ ಮಾಡೋಣ! ಅಂತ ಹೇಳ್ತಿದ್ದ. ಅವನು ಅಂಬೋದೆ ಸರಿ. ನನ್ನ ಮಕ್ಕಳು ನನ್ನ ಚೆನ್ನಾಗಿ ನೋಡಿಕೋತಾವರೆ. ನಾನು ಚೆನ್ನಾಗಿದ್ದೀನಿ.

ಅವನ ಬಗ್ಗೆ ಜನ ಒಳ್ಳೇದನ್ನ ಮಾತಾಡೋದನ್ನ ಕೇಳಿದ್ರೆ ಸಂತೋಷ ಆಗ್ತದೆ. ನಮ್ ತಂದೆ-ತಾಯಿಗೆ, ನಮ್ಮ ಹಿರಿಯಣ್ಣನಿಗೆ ಒಳ್ಳೆ ಹೆಸ್ರು ತಂದ ನಮ್ಮ ರಾಮಣ್ಣ. ಹಳ್ಳಿಯಲ್ಲಿ ಬೆಳೆದು ಒಳ್ಳೆ ಹೆಸ್ರು ಪಡೆದವನೆ. ನಮ್ಮ ಎಲೆಕಡಕಲು-ನಿಡಸಾಲೆಗೆಲ್ಲಾ ಮರ ಹಾಕವನೆ. ಅವೆಲ್ಲಾ ಈಗ ದೊಡ್ಡವಾಗಿವೆ. ಅವನ್ನ ನೋಡಿದ್ರೆ ರಾಮಣ್ಣನ್ನು ನೋಡದಂಗೇ ಆಗ್ತದೆ. ಅವನು ನೂರು ವರ್ಷ ಚೆಂದಾಗಿ ಬದುಕ್ಲಿ.

**– ಕರಿಯಮ್ಮ**, ನಿಡಸಾಲೆ

ರಾಮಯ್ಯನವರು ಕುಣಿಗಲ್ ಕ್ಷೇತ್ರ ಬಿಟ್ಟು ಹುಲಿಯೂರು ದುರ್ಗಕ್ಕೆ ಹೋದರು. ಜೊತೆಗೆ ನಮ್ಮ ಹೆಬ್ಬೂರು ರೇಷ್ಮೆಲಕ್ಷ್ಮಿಯನ್ನೂ ಕರೆದುಕೊಂಡು ಹೋದರು! ಈಗ ನಮ್ಮ ಹೆಬ್ಬೂರು ರೇಷ್ಮೆ ಕೇಂದ್ರ ಅನಾಥವಾಗಿದೆ.

**-ಶಿವರಾಮಯ್ಯ**, ಹೆಬ್ಬೂರು



ನಾವೆಲ್ಲ ರಾಮಣ್ಣ ಅಂತಾಲೆ ಕರಿತಿದ್ದು. ನಾನು ರಾಮಣ್ಣನಿಗಿಂತ ಮೂರು ವರ್ಷ ಹಿರಿಯೋಳು. ಕೆಂಪಮ್ಮ ಅಂತ ನನ್ನ ಹೆಸ್ರು. ಹಿತ್ತಲಪುರಕ್ಕೆ ನನ್ನ ಕೊಟ್ಟು ಮದ್ವೆ ಮಾಡಿದ್ದಾರೆ. ನಮ್ಮ ತಂದೆ ತೀರಿಕೊಂಡಾಗ ನಾನು ಒಂದು ಮಗುವಿನ ಬಿಮನ್ಸೆ ಆಗಿದ್ದೆ. ರಾಮಣ್ಣ ಐದು ವರ್ಷದೋನು. ಆಗ ಎಲೆಕಡಕಲುನಲ್ಲಿ ಇಸ್ಕೂಲು ಇರ್ಲಿಲ್ಲ. ಇಲ್ಲೇ ಉಜ್ಜನಿಯಲ್ಲಿ ರಾಮಣ್ಣ ಓದಿದ. ಇಲ್ಲಿಂದ ನಿಡಸಾಲೆಯಲ್ಲೂ ಓದಿದ. ಅವನು ಚಿಕ್ಕದ್ರಿಂದಲೂ ಜಗಳ ಸಿಟ್ಟು. ನಾವು ಕೂಡ ಅವನ ಸಿಟ್ಟಿಗೆ ಹೆದರುತ್ತಿದ್ದೋ.

ನಮ್ಮ ತಾಯಿ ಕಂಡ್ರೆ ಬಾಳ ಪ್ರೀತಿ ರಾಮಣ್ಣಂಗೆ. ನಮ್ಮ ಅತ್ತಿಗೆ ಕಂಡ್ರೂ ಅಷ್ಟೇಯಾ. ಅದೇ ಪ್ರೀತಿ ತೋರ್ನ್ಸೋನು. ನಮ್ಮ ಅತ್ತಿಗೆ ನಮ್ಮ ರಾಮಣ್ಣನ್ನ ಬೋ ಚೆನ್ನಾಗಿ ಸಾಕಿದ್ರು. ಅವ್ನ ಓದಿಸ್ತೋರು ಅವ್ರೆ. ಅವನು ಎಳೇದ್ರಿಂದಲೂ ಹಾಗೆಯಾ. ಒಂದು ಹೂವಿನ ಗಿಡ ನೆಡೋದು, ಮರ ನಡೋದು, ಆಡು ಕಾಯೋದು. ಇವೆಲ್ಲ ಚಂದಾಗಿ ಮಾಡೋನು. ಬಾಳ ಗುಣಸ್ತ. ಇವತ್ತಿಗೂ ನಮ್ಮನ್ನೆಲ್ಲಾ ಚೆಂದಾಗಿ ಕಾಣುತ್ತಾನೆ. ಬಂಧು-ಬಳಗ ಅಂದ್ರೂ ಅಷ್ಟೇಯಾ. ರಾಮಣ್ಣಂಗೆ ಈಗ ಇರೋ ಬುದ್ಧಿಯೆಲ್ಲಾ ನಮ್ಮ ಹಿರಿ ಅಣ್ಣನಿಂದ ಬಳುವಳಿ ಆಗಿ ಬಂದಿರೋದು. ನಿಡಸಾಲೆಯಿಂದ ಎಲೆಕಡಕಲುವರೆಗೂ ಈಗ ಇರೋ ಮರಗಳನ್ನು ಹಾಕಿದ್ದು ರಾಮಣ್ಣನೇ. ಪಾದಯಾತ್ರೆ ಮಾಡಿ ಹಾಕಿದ್ರು. ಅವುಕ್ಕೆಲ್ಲಾ ನೀರು ಹುಯ್ದು ಬೆಳೆಸ್ತೋರು ನಮ್ಮ ಹಿರಿ ಅಣ್ಣ. ಊರಿನ ಕೆಲ್ಸ ಅಂದ್ರೆ ಇಬ್ಬರಿಗೂ ಮುತುವರ್ಜಿ.

ನಮ್ಮ ರಾಮಣ್ಣಂಗೆ ಈಗ ಜನವೆಲ್ಲಾ ಹೊಗುಳ್ತಾರೆ. ಅದ ಕೇಳಿದ್ರೆ ಇನ್ನೂ ಕೇಳಾಣ ಅನ್ನಿಸ್ತತೆ. ಹಿಂದೆ ನಮ್ಮ ಊರಿಗೆ ಬಸ್ ಇರ್ಲಿಲ್ಲ. ಕುಡಿಯೋ ನೀರು ಇರ್ಲಿಲ್ಲ. ಈಗ ನಮ್ಮೂರಿಗೆ ಬಸ್ ಬರ್ತದೆ; ಕುಡಿಯೋ ನೀರು ಮನೆ ಮುಂದಕೆ ಬಂದಿದೆ. ಇದೆಲ್ಲಾ ಅವನೆ ಮಾಡಿಸಿದ್ದು. ನಮ್ಮ ರಾಮಣ್ಣ ಚೆಂದಾಗಿ ಇರ್ಲಿ. ಇಷ್ಟನ್ನೇ ನಾವು ದೇವ್ರಲ್ಲಿ ಕೇಳೋದು.

**– ಕೆಂಪಮ್ಮ, ಹಿತ್ತಲಪುರ**

.... ಕುಣಿಗಲ್ ಜನತೆಯ ಪುಣ್ಯವೋ ಏನೋ, ವೈ.ಕೆ. ರಾಮಯ್ಯನವರಿಂದಾಗಿ ಹೇಮಾವತಿ ನೀರು ಕುಣಿಗಲ್ ಮತ್ತು ಮಾರ್ಕೋನಹಳ್ಳಿ ಅಣೆಗೂ ಬಂದಿತು. ನೀರಿಲ್ಲದಿದ್ದರಿಂದ ನನ್ನ ತೋಟವನ್ನು ಬೀಳುಬಿಟ್ಟಿದ್ದೆ. ಹೇಮಾವತಿ ನೀರು ನಮ್ಮ ತಾಲ್ಲೂಕಿಗೆ ಬಂದದ್ದರಿಂದ ನನ್ನ ತೋಟ ಈಗ ಹಚ್ಚ ಹಸುರಾಗಿದೆ. ಇದಕ್ಕೆಲ್ಲಾ ಕಾರಣ ವೈ.ಕೆ. ರಾಮಯ್ಯನವರು. ಆದ್ದರಿಂದಲೇ ನನ್ನ ತೋಟಕ್ಕೆ 'ವೈ.ಕೆ.ಆರ್ ತೋಟ' ಎಂದು ನಾನು ಹೆಸರಿಟ್ಟಿದ್ದೇನೆ. ನನ್ನ ಜೀವಮಾನದಲ್ಲಿ ಇದನ್ನೆಲ್ಲಾ ಕಂಡದ್ದು ನನ್ನ ಭಾಗ್ಯ.

**- ಒಬ್ಬ ರೈತ, ವಳಗೇರಪುರ**

..... ಕಳೆದ ಇಪ್ಪತ್ತು ವರ್ಷಗಳಿಂದ ವೈ.ಕೆ. ರಾಮಯ್ಯನವರ ಜೊತೆ ರಾಜಕಾರಣಕ್ಕೆ ಬಿದ್ದು ನಾವೆಲ್ಲ ಹಾಳಾಗಿಹೋದೆವು. ಆದರೆ ಹೀಗೆ ಹಾಳಾಗುವುದರಲ್ಲೇ ಸಂತೋಷವನ್ನು ಕಂಡಿದ್ದೇವೆ. ಹಳ್ಳಿಗರ ಬಗೆಗೆ ಆ ಮನುಷ್ಯನಿಗಿರುವ ಅಭಿಮಾನ, ಪ್ರೀತಿಯನ್ನು ಕಂಡು ನಾವೆಲ್ಲ ಅವರ ಅಭಿಮಾನಿಗಳಾಗಿದ್ದೇವೆ. ಪ್ರಾಮಾಣಿಕವಾಗಿ ಮತ್ತು ನಿರ್ದಾಕ್ಷಿಣ್ಯವಾಗಿ ಜೀವಿಸುವುದು ಈ ಎಲ್ಲವನ್ನು ಆ ಮನುಷ್ಯನಿಂದಲೇ ಕಲಿತಿದ್ದು. ನಾವು ಬದುಕಲಿ-ಕೆಡಲಿ; ಅವರ ಜೊತೆಯಲ್ಲಿಯೇ ಇರುತ್ತೇವೆ.

**- ಗಂಗಯ್ಯ, ಬಂಡಿತಿಮ್ಮೇಗೌಡನ ಪಾಳ್ಯ**

... ಎಸ್. ಎಂ. ಕೃಷ್ಣ ಕರ್ನಾಟಕದ ನಂಬರ್ ಒನ್ ಮುಖ್ಯಮಂತ್ರಿಯಾದರೆ, ನಮ್ಮ ವೈ.ಕೆ. ರಾಮಯ್ಯ ನಂಬರ್ ಒನ್ ಎಂ.ಎಲ್.ಎ.

**- ಮಾಗಡಿ ತಾಲ್ಲೂಕಿನ ಒಬ್ಬ ರೈತ**

(ಕನಕಪುರ ಚುನಾವಣೆಯ ಪ್ರಚಾರ ಸಭೆಯಲ್ಲಿ)

.... ನಮ್ಮ ಊರಿಗೆ ಕೆರೆಕಟ್ಟಿಸುವವರೆಗೂ ನಾನು ಗಡ್ಡ ಬೋಳಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆ. ವೈ.ಕೆ. ರಾಮಯ್ಯನವರು ನಮ್ಮ ಬೇಡಿಕೆಯಂತೆ ನಮ್ಮೂರಿಗೆ ಕೆರೆ ಕಟ್ಟಿಸಿದರು. ಆಗ ನಾನು ಗಡ್ಡ ಬೋಳಿಸಿಕೊಂಡೆ.

**- ಒಬ್ಬ ಗ್ರಾಮಸ್ಥ, ಪೊನ್ನಸಂದ್ರ**

... ಇವರ ಸಭೆಗಳು ಅಂದರೆ, ಅದು ಜನಸಾಮಾನ್ಯರಲ್ಲಿ ರಾಜಕೀಯ ಪ್ರಜ್ಞೆಯನ್ನು, ನೈತಿಕ ಜವಾಬ್ದಾರಿಗಳನ್ನು ಉಂಟುಮಾಡುವ ಸಭೆಗಳು. ಸರ್ಕಾರದ ಸವಲತ್ತುಗಳನ್ನು ಪಕ್ಷಾತೀತವಾಗಿ, ಜಾತ್ಯತೀತವಾಗಿ ಕೊಡಿಸುತ್ತಾರೆ. ಮುಂದಿನ ಜನಾಂಗಕ್ಕೆ ವೈ.ಕೆ.ಆರ್ ಒಂದು ಮಾದರಿ.

**- ಕೆಂಪಲಿಂಗಯ್ಯ**

... ಬೇಸಿಗೆ ಬಂತಂದ್ರೆ ನಮ್ಮೂರ್ರೂರೆಲ್ಲ ಕುಡಿಯುವ ನೀರಿಗಾಗಿ ದೂರ ಹೋಗಬೇಕಿತ್ತು. ಒಂದು ಬಿಂದಿಗೆ ನೀರು ತಂದು, ಅದನ್ನೇ ಇಡೀ ದಿನ ತೀರ್ಥ ಬಳಸಿದಂಗೆ ಬಳಸ್ತಾ ಇದ್ದೀವಿ! ರಾಮಯ್ಯನವರು ಎಂ.ಎಲ್.ಎ ಆಗಿ ಬಂದಮೇಲೆ, ನಮ್ಮೂರಿಗೆ ಕುಡಿಯುವ ನೀರು ತಂದ್ರು. ಈಗ ನಮ್ಮ ಹೆಣ್ಣುಮಕ್ಕಳು ನೀರಿಗೆ ದೂರ ಹೋಗಂಗಿಲ್ಲ! ಆ ಮಾರಾಯನ್ನ ತಂಪೊತ್ತಿನಲ್ಲಿ ನೆನೀಬೇಕು.

**– ಕಳಸಮ್ಮ, ಹೆಡ್ಡಿಗೆರೆ**

ಹದಿನೈದು ದಿನಕ್ಕೋ
ತಿಂಗಳಿಗೋ ಊರಿಗೆ ಬರ್ತಾರೆ.
ಕಷ್ಟ-ಸುಖ ವಿಚಾರಿಸ್ತಾರೆ.
ಸ್ಕೂಲ್ ಬಿಲ್ಡಿಂಗ್ ಕೊಟ್ರು
ಮುಖ್ಯವಾಗಿ ಕುಡಿಯೋ ನೀರು ಕೊಟ್ರು!
ನಮಗೆ ಇಷ್ಟು ಸಾಕು.

**– ಬೋರಲಿಂಗಯ್ಯ, ಹೆಡ್ಡಿಗೆರೆ**

ವೈ.ಕೆ. ರಾಮಯ್ಯನವರು ನನಗೆ ಮೊದಲಿನಿಂದಲೂ ಗೊತ್ತು. ಅವರು ಹಳ್ಳಿಗೆ ಬಂದ್ರೆ, ಅವರ ಹಿಂದೆ ಸರ್ಕಾರಿ ಅಧಿಕಾರಿಗಳೆಲ್ಲ ಸಾಲಾಗಿ ಬಂದು ನಿಂತ್ಕೋತಾರೆ. ಊರಿಗೆ ಆಗಬೇಕಿರೋ ಕೆಲ್ಸನ್ನೆಲ್ಲಾ ಪಟ್ಟಿ ಮಾಡಿಸ್ತಾರೆ. ಮೂರು ತಿಂಗಳು - ಆರು ತಿಂಗಳೊಳಗೆ ಕೆಲಸ ಆಗಬೇಕು ಅಂತ ತಾಕೀತು ಮಾಡ್ತಾರೆ. ಕೆಲಸ ಮಾಡದೆ ಇರೋ ಅಧಿಕಾರಿಗಳನ್ನ ಕಂಡ್ರೆ ಉರಿದುಬೀಳ್ತಾರೆ. ನಾವೇನಾದ್ರೂ ಕೆಲಸದಲ್ಲಿ ಉದಾಸೀನ ತೋರುದ್ರೆ ನಮ್ಮನ್ನು ಬಿಡಾಕಿಲ್ಲ. ಅವರ ಮಾತು ಕಹಿ. ಆದ್ರೆ ಮನಸ್ಸು ಮಾತ್ರ ಮಗುವಿನ ತರಹದ್ದು. ಊರಿನ ಕೆರೆ ರಿಪೇರಿ ಮಾಡಿಸಿದ್ರು. ಅವರ ಜೊತೇಲಿ ಇರೋದೆ ನಮ್ಮ ಭಾಗ್ಯ.

**– ಹುಚ್ಚೇಗೌಡ, ಹುಲಿವಾನ**

.... ನೀರಿಗಾಗಿ ನಾವು ಪಡುತ್ತಿದ್ದ ಕಷ್ಟ ಆ ದೇವರಿಗೇ ಗೊತ್ತು. ಸ್ವಾಮೇರು (ವೈ.ಕೆ.ಆರ್) ಖುದ್ದಾಗಿ ಬಂದ್ರು. ನಮ್ಮೂರಿಗೆ ನೀರು ಬರೋ ಹಂಗೆ ಮಾಡಿದ್ರು. ಊರಿನ ಸುತ್ತ ಗಿಡ-ಮರ ಹಾಕಿಸಿದ್ರು. ಊರಿನಲ್ಲಿ ಗಂಡಸ್ರು ವ್ಯಾಜ್ಯ ಮಾಡದಂಗೆ ತಾಕೀತು ಮಾಡಿದ್ರು. ಈಗ ಊರು ನೆಮ್ಮದಿಯಾಗಿ ಇದೆ. ಜಾತಿ-ಭೇದ ಇಲ್ಲದ ಮನುಷ್ಯ. ಇಂತೋರ್ನ ನಾನು ಮುಂದೆ ನೋಡುತ್ತೀನೋ ಹೆಂಗೋ! ಬಿಸಿಲು ಹೊತ್ತಿನಲ್ಲಿ ಅವರ್ನ ನೆನೀಬೇಕು.

**– ತಾಯಮ್ಮ, ಮಂಟ್ಯ**

... ಅವರೇ ನಮಗೆ ನಾಯಕರು, ಮಾರ್ಗದರ್ಶಕರು. ಅವರು ನಮ್ಮ ಕ್ಷೇತ್ರದ ಶಾಸಕರು ಆಗಿರುವುದರಿಂದ ನಮಗೆಲ್ಲಾ ಕೆಲ್ಸವೇ ಇಲ್ಲ. ಎಲ್ಲಾ ಕೆಲ್ಸನೂ ಅವರೇ ಮಾಡ್ತಾರೆ. ಕ್ಷೇತ್ರದ ಜನದ ಜೊತೆಯಲ್ಲಿ ನೇರವಾಗಿ ಸಂಬಂಧ ಇಟ್ಕೊಂಡವರೆ. ಈಗಂತೂ ಮೂರ್ನೆಯವರ ಹಾವಳಿ ಇಲ್ಲ. ಊರಿಗೆ ಹಿತ ಆಗುವ ಕೆಲ್ಸಾನ ಹಗಲೂ-ರಾತ್ರಿ ನಿಂತು ಮಾಡಿಸ್ತಾರೆ. ಲಂಚ-ರುಷುವತ್ತು ಅವರ ಬಳಿ ಸುಳಿಯೋ ಹಾಂಗಿಲ್ಲ. ನಮ್ಮ ಊರಿಗೆ ಈ ಮೂರು ವರುಷದಲ್ಲಿ ಆಗಿರುವ ಕೆಲ್ಸ, ಈ ಹಿಂದೆ ಯಾರ ಅವಧಿಯಲ್ಲೂ ಆಗಿರ್ಲಿಲ್ಲ. ಮುಂದಕ್ಕೂ ಅವರೇ ನಮ್ಮ ನಾಯಕರು.

**– ಜಯಮ್ಮ, ಮಾರ್ಕೋನಹಳ್ಳಿ**<br>ಗ್ರಾಮ ಪಂಚಾಯತ್ ಅಧ್ಯಕ್ಷೆ

.... ಕುಡಿಯೋ ನೀರಿಗೆ ನಾವು ಪ್ರತಿ ವರ್ಷ ಪಡುತ್ತಿದ್ದ ಕಷ್ಟ ಹೊಸದೇನಲ್ಲ! ನಾವು ಯಾರೂ ಹೋಗಿ ಹೇಳದಿದ್ದರೂ ಕೂಡ ಎಂ.ಎಲ್.ಎ ರಾಮಯ್ಯನವರು ತಾವಾಗಿ ಊರಿಗೆ ಬಂದು, ಅಧಿಕಾರಿಗಳು-ಕಂಟ್ರಾಟರನ್ನ ಕರೆಸಿದರು. ಪೈಪ್ ಹಾಕ್ಸಿ, ಮಿನಿ ಟ್ಯಾಂಕಿ ಕಟ್ಸಿ, ನೀರು ಕೊಟ್ಟರು. ಈಗ ನಮ್ಮ ಊರಿನವರೆಲ್ಲಾ ರಾಮಯ್ಯನವರನ್ನ ದಿನಾಲೂ ನೆನಿತೀವಿ. ಹಿಂದೆಲ್ಲಾ ಇದ್ದ ಎಂ.ಎಲ್.ಎ ಗಳನ್ನ ನಾವು ನೋಡೇ ಇರ್ಲಿಲ್ಲ. ಎಂ.ಎಲ್.ಎ. ಅಂದ್ರೆ ರಾಮಯ್ಯನವರಂಗೆ ಇರಬೇಕು.

**– ಗಂಗಮ್ಮ, ಕೆ.ಟಿ. ಪಾಳ್ಯ**

ನಮ್ಮ ಮೇಲೆ ದೌರ್ಜನ್ಯ ನಡೆದು, ಊರನ್ನೇ ಬಿಡುವ ಪರಿಸ್ಥಿತಿ ಒದಗಿ ಬಂದಿತ್ತು. ಆಗ ನಮ್ಮಗಳಿಗೆಲ್ಲಾ ಧೈರ್ಯತುಂಬಿ, ನಮ್ಮ ಹಿತಕ್ಕಾಗಿ ಹೆಣಗಾಡಿದ ವೈ.ಕೆ.ಆರ್ ಅವರೇ ನಮ್ಮ ನಾಯಕರು. ನಮ್ಮ ಬಂಧುಗಳು. ನಮ್ಮ ಜನಾಂಗದವರು ಯಾವಾಗಲೂ ಅವರನ್ನೇ ಬೆಂಬಲಿಸುತ್ತೇವೆ.

**– ಅಲೀಂ ಪಾಷ, ಕುಣಿಗಲ್**

ಹೋದ ಸಲ ರಾಮಯ್ಯನವರಿಗೆ ಓಟು ಕೊಟ್ಟಿದ್ದೆವು. ನಮ್ಮ ಊರಿಗೆ ಆಸ್ಪತ್ರೆ, ಹೈಸ್ಕೂಲು ಬೇಕು ಎಂದು ಕೇಳಿದ್ದೆವು. ಮಾತುಕೊಟ್ಟಂತೆ ಮಾಡಿಸಿಕೊಟ್ಟರು. ಹೇಳಿದ ಹಾಗೆ ನಡೆದುಕೊಳ್ಳುತ್ತಾರೆ. ನಮ್ಮ ಊರಿನವರೆಲ್ಲ ರಾಮಯ್ಯನವರಿಗೇ ಯಾವಾಗಲೂ ಓಟು ಹಾಕೋದು.

**– ಲಕ್ಷ್ಮಿದೇವಮ್ಮ, ಸಿರಿವರ**



.... ಒಂದು ಬಿಂದಿಗೆ ನೀರಿಗೆ ನಮ್ಮೂರಿನ ಹೆಣ್ಣು ಮಕ್ಕಳು ಎರಡು - ಮೂರು ಫರ್ಲಾಂಗ್ ಹೋಗಬೇಕಿತ್ತು. ಈ ನಮ್ಮ ಎಂ.ಎಲ್.ಎ. ರಾಮಯ್ಯನವರು, ನಮ್ಮ ಊರಿಗೆ ದೊಡ್ಡ ಟ್ಯಾಂಕ್ ಕಟ್ಟಿಸಿದ್ದಾರೆ. ಇದರಿಂದಾಗಿ ನಮಗಿದ್ದ ನೀರಿನ ಬರ ಹರೀತು! ಜೊತೆಗೆ ನಮ್ಮ ಊರಿನಲ್ಲಿ ಎರಡು ಪಾರ್ಟಿ ಇತ್ತು. ಮಾತೆತ್ತಿದ್ದರೆ ಜಗಳ ಆಗ್ತಿತ್ತು. ರಾಮಯ್ಯನವರು ಎರಡೂ ಪಾರ್ಟಿನವರಿಗೂ ಬಯ್ದು ಒಂದುಮಾಡಿದ್ರು. ಈಗ ನಮ್ಮೂರಿನವರು ಪೊಲೀಸ್ ಸ್ಟೇಷನ್‌ಗೆ ಹೋಗಲ್ಲ. ಅಧಿಕಾರಿಗಳಿಗೆ ನಿಂತಲ್ಲೇ ಆರ್ಡರ್ ಮಾಡ್ತಾರೆ. ಕೆಲ್ಸ ತಡ ಆದ್ರೆ, ನಮ್ಮ ಕೈಲೇ ಛೀಮಾರಿ ಹಾಕಿಸ್ತಾರೆ. ಹಿಡಿದ ಕೆಲ್ಸ ಆಗೋವರೆಗೂ ಬಿಡಲ್ಲ. ಅವರ ಮಾತು ಕೇಳೋದೆ ಒಂದು ಚೆಂದ! ಗತ್ತು- ಗರ್ವ ಇಲ್ಲದ ಮನುಷ್ಯ. ಇವರು ಮಂತ್ರೀನೂ ಆಗಬೇಕು.

**- ಯಾಲಕ್ಕಯ್ಯ, ಬೆಟ್ಟಹಳ್ಳಿ**

ಪ್ರತಿವರ್ಷದ ಬೇಸಿಗೆಯಲ್ಲಿ ನಮ್ಮೂರಿಗೆ ಕುಡಿಯೋ ನೀರಿನ ತೊಂದ್ರೆ ಇದ್ದದ್ದೆ! ಹಿಂದೆ ಇದ್ದ ಯಾವ ಎಂ.ಎಲ್.ಎ ಗಳೂ ನಮ್ಮ ಗೋಳನ್ನ ಕಿವಿಮ್ಯಾಲೆ ಹಾಕಿಕೊಂಡಿರಲಿಲ್ಲ ! ರಾಮಯ್ಯನವರು ನಮ್ಮ ಎಂ.ಎಲ್.ಎ ಆದ ಮೇಲೆ, ನೀರಿನ ಟ್ಯಾಂಕ್ ಕಟ್ಸಿ ಊರಿಗೆ ಉಪಕಾರ ಮಾಡಿದ್ರು.

ನೀರು, ಸ್ಕೂಲು ಅಂದ್ರೆ ನಿಂತ ಜಾಗದಲ್ಲೇ ಅಧಿಕಾರಿಗಳಿಂದ ಕೆಲ್ಸ ಮಾಡಿಸ್ತಾರೆ.

**- ಕರಿಯಮ್ಮ, ಕಾಡಶೆಟ್ಟಿಹಳ್ಳಿ**

.... ವೈ.ಕೆ. ರಾಮಯ್ಯನವರು ಹಿಂದೆ ಲಾಯರ್ ಆಗಿದ್ದ ಕಾಲದಿಂದಲೂ ನಾನು ಅವರ್ನ ಬಲ್ಲೆ. ಅವರು ಮೊದಲು ಚುನಾವಣೆಗೆ ನಿಂತಾಗ ಅವರ ಪರವಾಗಿ ಕ್ಯಾನ್‌ವಾಸ್ ಮಾಡಿದ್ದೀನಿ. ಈಗ ನನಗೆ ವಯಸ್ಸಾಗಿದೆ. ಇಂದಿಗೂ ಅವರ ಜೊತೆಯಲ್ಲೇ ಇದ್ದೇನೆ.

ಅವರ ಪ್ರಾಮಾಣಿಕತೆ, ಕೆಲ್ಸ ಮಾಡೋ ವೈಖರಿ, ಶುದ್ಧವಾದ ಮಾತು, ಈ ಎಲ್ಲ ಅವರಲ್ಲಿ ಕಂಡಿದ್ದೀನಿ. ಆದ್ದರಿಂದಲೇ ನಾನು ಅವರ ಜೊತೆಗಿದ್ದೀನಿ. ವೈಯಕ್ತಿಕವಾದ ಕೆಲ್ಸ ಮಾಡಿಕೊಡೋದಕ್ಕೆ ರಾಮಯ್ಯನವರು ಹಿಂದೇಟು ಹಾಕ್ತಾರೆ. ಆದರೆ ಊರಿನ ಕೆಲ್ಸ ಅಂದ್ರೆ ಅನ್ನ-ನೀರು ಬಿಟ್ಟು ಕೆಲ್ಸ ಮಾಡ್ತಾರೆ. ಅವರಿಂದ ನಮಗೆ ಇಷ್ಟು ಸಾಕು.

**– ಪಟೇಲ್ ನರಸೇಗೌಡ,** ಬಿಸಿನೆಲೆ

ನಮ್ಮ ಕುಣಿಗಲ್‌ನಲ್ಲಿರುವ ಎಲ್ಲ ಅಧಿಕಾರಿಗಳಿಗೂ ಈಗ ವೈ.ಕೆ. ರಾಮಯ್ಯನವರ ಗುಣ ಚೆನ್ನಾಗಿ ಗೊತ್ತಾಗಿದೆ. ಅಭಿವೃದ್ಧಿ ಕೆಲಸಗಳನ್ನೆಲ್ಲಾ ರಾಮಯ್ಯನವರು ಹೇಳೂಕ್ಕಿಂತ ಮುಂಚಿತವಾಗಿ ಮಾಡಿಬಿಡ್ತಾರೆ. ರಾಮಯ್ಯನವರು ಪ್ರಾಮಾಣಿಕವಾಗಿ ಕೆಲ್ಸ ಮಾಡೋ ಅಧಿಕಾರಿಗಳನ್ನ ತುಂಬಾ ಗೌರವಿಸ್ತಾರೆ. ಅವರು ನಮ್ಮ ಹುಲಿಯೂರುದುರ್ಗದ ಎಂ.ಎಲ್.ಎ ಆದ ಮೇಲೆ ನಮಗಿದ್ದ ನೀರಿನ ಬರ ಹರಿದಿದೆ. ರಾಮಯ್ಯನವರು ಮಹಾ ನಿಷ್ಠುರವಾದಿ- ಖಂಡಿತವಾದಿ. ಪುಡಾರಿಗಳಿಗೆ ಅವರ ಬಳಿ ಜಾಗ ಇಲ್ಲ! ಹಿಡಿದ ಕೆಲಸ ಮಾಡಿಸೋದರಲ್ಲಿ ಇವರಿಗೆ ಸಾಟಿ ಯಾರೂ ಇಲ್ಲ. ನಮ್ಮ ಕ್ಷೇತ್ರದಲ್ಲಿಯೇ ಎಲ್ಲ ಹಳ್ಳಿಗಳ ಮಾಹಿತಿಯನ್ನು ಅವರಷ್ಟು ಚೆನ್ನಾಗಿ ಬಲ್ಲೋರು ಯಾರೂ ಇಲ್ಲ.

**– ತಿಮ್ಮಯ್ಯ,** ತಿಪ್ಪೂರು

ರೇಷ್ಮೆ ಬೆಳೆಗಾರರಾದ ನಮಗೆ ರಾಮಯ್ಯನವರು ಮಾಡಿಕೊಟ್ಟಿರುವ ಸವಲತ್ತುಗಳನ್ನು ಮರೆಯುವಂತಿಲ್ಲ ! ಅದರ ಋಣವನ್ನು ತೀರಿಸಲಿಕ್ಕಾಗಿಯೇ ನಾವುಗಳೆಲ್ಲರೂ ಅವರಿಗೆ ಮತ ಹಾಕುತ್ತೇವೆ.

**– ಚೌಡಯ್ಯ,** ರೇಷ್ಮೆ ಬೆಳೆಗಾರ

ರಾಮಯ್ಯನವರು ಎರಡು ಸಲ ನಮ್ಮ ಕುಣಿಗಲ್ ಕ್ಷೇತ್ರದಿಂದ ಎಂ.ಎಲ್.ಎ. ಆಗಿದ್ದರು. ಇವರ ಕಾಲದಲ್ಲೇ ನಮ್ಮ ಊರಿಗೆ ಗ್ರಾಮೀಣ ಬ್ಯಾಂಕ್ ಬಂತು. ನಮ್ಮ ಊರಿನವರೆಲ್ಲ ಆಸ್ಪತ್ರೆಗಾಗಿ ನಾಗವಲ್ಲಿಗೆ ಹೋಗಬೇಕಾಗಿತ್ತು! ರಾಮಯ್ಯನವರಿಗೆ ಊರಿನವರೆಲ್ಲಾ ಹೇಳಿದ್ವಿ. ಆಗ ಊರಿಗೆ ಆಸ್ಪತ್ರೇನೂ ಬಂತು. ಸರ್ಕಾರಿ ಬಸ್ ಬರುವ ಹಾಗೆ ಮಾಡಿದ್ರು. ಎಲ್ಲಕ್ಕಿಂತ ಮುಖ್ಯವಾಗಿ ಕುಡಿಯುವ ನೀರನ್ನು ಒದಗಿಸಿದರು. ಬೇರೆಯವರು ಎಂ.ಎಲ್.ಎ ಆಗಿದ್ದಾಗ ಐದು ವರ್ಷಕ್ಕೊಂದು ಸಲ ಊರಿಗೆ ಬರುತ್ತಿದ್ದರು. ಆದರೆ ರಾಮಯ್ಯನವರು ನಮ್ಮಲ್ಲಿಗೇ ಬಂದು ಊರಿಗೆ ಏನಾಗಬೇಕು ಅಂತ ಕೇಳಿ ತಿಳ್ಕಂಡು ಕೆಲ್ಸ ಮಾಡಿಸುತ್ತಿದ್ದರು.

ಈಗ ಅವ್ರು ಹುಲಿಯೂರುದುರ್ಗಕ್ಕೆ ಹೋಗಿ ಗೆದ್ರು. ಈಗ ನಮ್ಮನ್ನ ಕೇಳೋರು ಯಾರು ಇಲ್ಲ! ರಾಮಯ್ಯನವರು ಮತ್ತೆ ನಮ್ಮ ಕುಣಿಗಲ್ ಕ್ಷೇತ್ರಕ್ಕೇ ಬರ್ಲಿ ಅಂತ ದೇವರಿಗೆ ಕೈಮುಗಿತೀವಿ.

**-ಸೀನಪ್ಪ**
ಸಿರಿವರ (ಕುಣಿಗಲ್ ಕ್ಷೇತ್ರ)

ಇವರು ನಮ್ಮ ಕುಣಿಗಲ್ ಕ್ಷೇತ್ರದ ಶಾಸಕರಾದ ಮೇಲೆ ನಮ್ಮೂರಿಗೆ ಕುಡಿಯುವ ನೀರು ಬಂದಿದ್ದು. ಅದಕ್ಕೂ ಮುಂಚೆ ಇದ್ದ ಎಂ.ಎಲ್.ಎ ಗಳನ್ನು ನಾವು ನೋಡಿಯೂ ಇರಲಿಲ್ಲ! ಇವರು ಇಲ್ಲಿ ಗೆದ್ದ ಮೇಲೆ ನಮ್ಮ ಊರಿಗೆ ರಸ್ತೆ, ಬೀದಿ ದೀಪ, ಸ್ಕೂಲು ಎಲ್ಲಾ ಬಂತು. ಮೊದಲು ನಮ್ಮ ಊರಿಗೆ ಯಾವ ಮೇಸ್ಟ್ರೂ ಬರ್ತಿರಲಿಲ್ಲ. ಆದರೆ ಈಗ ಏಳು ಜನ ಮೇಸ್ಟ್ರು ಬರುತ್ತಾರೆ. ಇದೆಲ್ಲಾ ರಾಮಯ್ಯನವರ ಕಾಲದಲ್ಲೇ ಆದದ್ದು.

ಶ್ರೀಮಂತರ ಮನೆ ಬಾಗಿಲಿಗೆ ಎಂದೂ ಹೋದವರಲ್ಲ! ಬಡವರ ಮನೆ ಬಾಗಿಲಿಗೆ ತಾವೇ ಬರೋರು. ವರ್ಗ ಮಾಡ್ಸಿ ಅಂತ ಯಾರೂ ಅವರತ್ರ ಸುಳಿಯೋ ಹಂಗಿಲ್ಲ. ಕೆಂಡ ಆಗುಬುಡ್ತಾರೆ. ಆದರೆ ಊರಿನ ಕೆಲಸ ಅನ್ನಿ; ಅರ್ಧ ಹೊತ್ತಿನಲ್ಲಿ ಎದ್ದು ಬಂದು ತಾವೇ ಮಾಡುತ್ತಾರೆ. **'ಮತ್ತೀಪುರ ಮಗ ಆಗಿದ್ರೂ, ಕೇರ್ ಮಾಡೋಲ್ಲ!'** ಅಂಥಾ ಆಳು ! ನಮ್ಮ ಕುಣಿಗಲ್ ಬಗ್ಗೆ ಮಾತ್ರವೇ ಅಲ್ಲ ಇಡೀ ಜಿಲ್ಲೆ ಬಗ್ಗೆನೇ ಮಾತಾಡ್ತಾರೆ. ಗಿಡ - ಮರ ನೆಟ್ರು. ಮೊದ್ಲಿಗೆ ಕುಣುಗುಲು ಅಂದ್ರ ಬಟಾಬಯಲಂಗೆ ಇತ್ತು. ಈಗ ವಸಿ ಹಸಿರು ಕಾಣಂಗಾಗೈತಿ. ಎಲ್ಲಾ ಇವರ ದೆಸೆಯಿಂದ.

ಇವರು ನಮ್ಮ ಕ್ಷೇತ್ರ ಬಿಟ್ರು. ನಾವೆಲ್ಲಾ ತಬ್ಬಲಿ ಆದ್ವಿ. ರಾಜಕೀಯ ಮಾಡೋದೂ ಬಿಟ್ವಿ.

**- ಮುರುಡಯ್ಯ**
ದೊಡ್ಡಮಳಲವಾಡಿ (ಕುಣಿಗಲ್ ಕ್ಷೇತ್ರ)

- ... ನಾನು ಎಂಟು ವರ್ಷದ ಹುಡುಗನಾಗಿದ್ದಾಗಲಿಂದಲೂ ವೈ.ಕೆ.ಆರ್ ಸಾಹೇಬರ ಜೊತೆಯಲ್ಲಿದ್ದು, ಅವರು ಜನರ ಕೆಲಸ ಮಾಡೋದನ್ನ ಕಣ್ಣಾರ ಕಂಡಿದ್ದೇನೆ. ಅಧಿಕಾರಿಗಳನ್ನು ಹಿಡಿದು ಕೆಲಸ ಮಾಡಿಸೋದರಲ್ಲಿ ಇವರಿಗೆ ಸಾಟಿಯಾಗುವವರು ಯಾರೂ ಇಲ್ಲ!

ನಮ್ಮ ಹುಲಿಯೂರುದುರ್ಗ ಕ್ಷೇತ್ರಕ್ಕೆ ಇದುವರೆಗೂ ಆಗದೆ ಇರೋ ಕೆಲಸಾನೆಲ್ಲ ಮಾಡಿಸಿದ್ದಾರೆ. ರಸ್ತೆ, ನೀರು, ಗಿಡ-ಮರ, ಸ್ಕೂಲು, ಆಸ್ಪತ್ರೆ, ದೀಪ, ಕೆರೆ - ಕಟ್ಟೆ ಈ ಎಲ್ಲವೂ ನಮ್ಮ ಸಾಹೇಬರ ಕಾಲದಲ್ಲೇ ಆಗಿದ್ದು! ನಾನು ಅವರ ಜೊತೆಲಿ ಇರೋದೆ ನನ್ನ ಪುಣ್ಯ.

**- ಜಯರಾಮ, ಟಿ. ಹೊಸಹಳ್ಳಿ**

.... ಅವರಿಂದಾಗಿ ನಮ್ಗೆಸ್ಕೂಲು ಬಂತು. ಲೈಟ್ ಬಂತು, ಎಲ್ಲಕ್ಕಿಂತ ಹೆಚ್ಚಾಗಿ ನೀರು ಕೊಟ್ರು. ಇವರನ್ನ ನಮ್ಮ ಊರು ಎಂದೂ ಮರೆಯೋ ಹಾಗಿಲ್ಲ! ಲಂಚ-ರುಷವತ್ತಿಗೆ ಎಂದೂ ಕೈ ನೀಡಿದ ಮನುಷ್ಯ ಅಲ್ಲ! ಅವರಿಂದ ನಾವು ರಾಜಕಾರಣ ಕಲಿತ್ವಿ. ಅವರು ನಮ್ಮ ಕ್ಷೇತ್ರ ಬಿಟ್ಟು, ಹುಲಿಯೂರು ದುರ್ಗ ಕ್ಷೇತ್ರಕ್ಕೆ ಹೋದ ದಿನ ನಾವೆಲ್ಲ ಅನ್ನ - ನೀರು ಬಿಟ್ಟು ತಬ್ಬಲಿಗಳಂತೆ ಅತ್ತೆವು. ಆವತ್ತಿನಿಂದ ನಾವು ತಟಸ್ಥವಾಗಿದ್ದೀವಿ. ಇವತ್ತಿಗೂ ಅವರೇ ನಮ್ಮ ನಾಯಕರು. ಅವ್ರು ಹೇಳಿದ್ರೆ ಯಾವ ಕೆಲಸನಾದ್ರೂ ಮಾಡ್ತೀವಿ !

**- ಕೆ.ಎಚ್. ಚವಳಯ್ಯ**
ತಾಲ್ಲೂಕು ಪಂಚಾಯತ್ ಸದಸ್ಯ, ಕೋಡಿಹಳ್ಳಿ

ಸುಮಾರು 1945ರಿಂದ ನಮ್ಮ ಕ್ಷೇತ್ರಕ್ಕೆ ಆಗದೇ ಇದ್ದಂತಹ ಕಾಮಗಾರಿಗಳು, ವೈ.ಕೆ.ಆರ್ ಸಾಹೇಬ್ರು ನಮ್ಮ ಕ್ಷೇತ್ರದ ಎಂ.ಎಲ್.ಎ ಆದ ಮೇಲೆ ನಡೆದ್ವು. ಸುಮಾರು 60 ಕೋಟಿ ರೂಪಾಯಿಗಳಷ್ಟು ಅಭಿವೃದ್ಧಿಕಾರ್ಯ ಇಲ್ಲಿ ನಡೆದಿದೆ. ಕುಡಿಯುವ ನೀರು, ಗಿಡ-ಮರ, ಇವರ ಮೊದಲ ಆದ್ಯತೆ. ನಮ್ಮ ಕ್ಷೇತ್ರದಲ್ಲಿ ಅಧಿಕಾರಿಗಳೆಲ್ಲ ಭಾನುವಾರವೂ ಬಂದು ಗ್ರಾಮಸ್ಥರ ಕೆಲಸ ಮಾಡಿಕೊಡುತ್ತಾರೆ.

**- ಜಯರಾಮಯ್ಯ**
ಗ್ರಾಮಪಂಚಾಯಿತಿ ಸದಸ್ಯರು, ಚಲಮಾಸಂದ್ರ

.... ವೈ.ಕೆ.ಆರ್ ಅವರಿಗೆ ಸಾಟಿಯಾಗೋ ರಾಜಕಾರಣಿ ನಮ್ಮ ಸುತ್ತಿನಲ್ಲೇ ಇಲ್ಲ! ಊರಿನ ಕೆಲಸ ಅಂದ್ರೆ ಹಗಲೂ-ರಾತ್ರಿ ಅನ್ನದೆ ಅಲ್ಲೇ ನಿಂತು ಕೆಲ್ಸ ಮಾಡಿಸ್ತಾರೆ. ಕೆಲ್ಸ ಆಗೋವರ್ಗೆ ಬಿಡಲ್ಲ. ಅವರ್‍ನ್ನ ಮರೆತರೆ ನಾವು ಮನುಷ್ಯರಲ್ಲ!

**- ತಮ್ಮಯ್ಯ, ಪಡುವುಗೆರೆ**

ನಮ್ಮೂರ್ಗೆ ನೀರಿಲ್ಲ ಅಂದ್ವಿ. ನೀರು ಕೊಡಿಸಿದ್ರು. ರಸ್ತೆ ಇಲ್ಲ ಅಂದ್ವಿ ರಸ್ತೆ ಮಾಡಿಸಿದ್ರು. ಇಂಥ ಎಂ.ಎಲ್.ಎ ನ್ನ ನಾವು ಕಂಡೇ ಇಲ್ಲ! ಅವ್ರು ಎಲ್ಲೇ ಇರ್‍ಲಿ, ನಾವು ಮಾತ್ರ ಅವರ ಹಿಂದೇನೆ.

**- ವೆಂಕಟಪ್ಪ,** ಕಗ್ಗೆರೆ

ವೈ.ಕೆ.ಆರ್ ನಮ್ಮ ಊರಿಗೆ ಬರ್ತಾರೆ ಅಂದ ದಿವಸ, ಎಲ್ಲ ಅಧಿಕಾರಿಗಳೂ ಬಂದು ನಡಕಟ್ಟಿ ಕೆಲ್ಸ ಮಾಡುತ್ತಾರೆ. ಅಧಿಕಾರಿಗಳ ಮೇಲೆ ಅಷ್ಟು ಭಯ ಇಟ್ಟವರೆ !

**- ಹುಚ್ಚಮ್ಮ,** ತೂಬಿನಕೆರೆ

...ಆ ನಮ್ಮಪ್ಪ ಎಲೆಕಡಕಲು ಕಂಬೇಗೌಡ್ರು ನಮ್ಮೂರಿನ ಸಾಲುಮರಕ್ಕೆಲ್ಲಾ ನೀರೂದಿ ಬೆಳಸಿದ್ರು. ರಾಮಯ್ಯನವರು ನಮ್ಮೂರಿಗೆ ಘನಂದಾರಿ ರಸ್ತೆ ಮಾಡ್ಸಿದ್ರು. ಇವ್ರು ನಮಗೆ ಎಂ.ಎಲ್.ಎ. ಆದ ಮೇಲೆ, ವಿಧವಾ ವೇತನದ ದುಡು ನನ್ನ ಮನೆಬಾಗಿಲಿಗೇ ಬತ್ತದೆ. ಈ ಮಾರಾಯ್ರನ್ನು ಉಜ್ಜನಿ ಚೌಡಮ್ಮ ಚೆಂದಾಗಿಟ್ಟರಲಿ !

**– ಚಿಕ್ಕಮ್ಮ**, ಉಜ್ಜನಿ

ಇಂದು ಮೈಸೂರಿನಲ್ಲಿ ನಾಡಿನ ನೀರಾವರಿ ಯೋಜನೆಗಳನ್ನು ಕುರಿತು ವೈ.ಕೆ. ರಾಮಯ್ಯನವರ ವಿದ್ವತ್‌ಪೂರ್ಣ ಭಾಷಣವನ್ನು ಕೇಳಿದೆ. ಅವರ ಮಾತುಗಳನ್ನು ಕೇಳಿದ ಮೇಲೆ, ಕರ್ನಾಟಕದಲ್ಲಿ ನಿಜವಾಗಿಯೂ ನೀರಾವರಿ ತಜ್ಞರು ಇಲ್ಲವೇ ಇಲ್ಲ ಎನಿಸಿತು. ಇದ್ದರೆ ಅದು ವೈ.ಕೆ. ರಾಮಯ್ಯ ಮಾತ್ರ. ಯೋಜನೆಗಳನ್ನು ಕುರಿತು ಮಾತನಾಡುವಾಗ, ರಾಜಕೀಯ ಮುತ್ಸದ್ದಿಗೆ ಇರಬೇಕಾದ ಒಳನೋಟ, ಸೂಕ್ಷ್ಮಜ್ಞತೆ, ಸಂಯಮ ಹಾಗೂ ಭವಿಷ್ಯದ ಬಗೆಗಿನ ಮುನ್ನೋಟ, ಇವೆಲ್ಲವನ್ನೂ ರಾಮಯ್ಯನವರಲ್ಲಿ ಕಂಡು ಸಂತೋಷಪಟ್ಟೆ.

–ಜೆ.ಎಚ್. ಪಟೇಲ್
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ, (ಮೈಸೂರಿನ ಸಭೆಯೊಂದರಲ್ಲಿ)

ವೈ.ಕೆ. ರಾಮಯ್ಯನವರು ಶಾಸನಸಭೆಯಲ್ಲಿ ಮಾತನಾಡಿದರೆ, ಎಲ್ಲರ ಹಾಗೆ ಗಂಟಲಿನಿಂದ ಮಾತನಾಡುವವರಲ್ಲ! ಅಂತರಾಳದಿಂದ ಮಾತನಾಡುವ ಅಪರೂಪದ ವ್ಯಕ್ತಿ. ನಿಜವಾದ ಹೋರಾಟಗಾರ.

**– ಬಿ.ಜಿ. ಬಣಕಾರ್**
ವಿಧಾನಸಭೆಯ ಮಾಜಿ ಸ್ಪೀಕರ್

..... ಕೆ.ಪಿ.ಟಿ.ಸಿ.ಎಲ್ ತನ್ನ ಸುಮಾರು 62 ಕೋಟಿ ರೂಪಾಯಿಗಳ ಕಾಮಗಾರಿಯನ್ನು ವೈ.ಕೆ. ರಾಮಯ್ಯನವರ ಹುಲಿಯೂರುದುರ್ಗ ಕ್ಷೇತ್ರವೊಂದರಲ್ಲೇ, ಕಳೆದ ಎರಡೂವರೆ ವರ್ಷಗಳಲ್ಲಿ ಮಾಡಿದೆ. ನನಗೆ ತಿಳಿದ ಹಾಗೆ, ರಾಜ್ಯದ ಯಾವುದೇ ವಿಧಾನಸಭಾ ಕ್ಷೇತ್ರದಲ್ಲಿ ಕೆ.ಪಿ.ಟಿ.ಸಿ.ಎಲ್ ಇಷ್ಟೊಂದು ಮೊತ್ತದ ಕಾರ್ಯವನ್ನು ಮಾಡಿಲ್ಲ! ನಿಜ ಹೇಳಬೇಕೆಂದರೆ ನನ್ನ ಕ್ಷೇತ್ರದಲ್ಲಿಯೂ ಆಗಿಲ್ಲ. ಈ ಅರ್ಥದಲ್ಲಿ ಹಿರಿಯರಾದ ಶ್ರೀ ವೈ.ಕೆ. ರಾಮಯ್ಯನವರು ನಮಗೆಲ್ಲಾ ಮಾದರಿಯಾಗಿದ್ದಾರೆ.

**– ವೀರಕುಮಾರ್ ಎ. ಪಾಟೀಲ್**
ಇಂಧನ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ



ಮರ-ಗಿಡಗಳನ್ನು ನೆಡುವ ಈ ಪಾದಯಾತ್ರೆಯಲ್ಲಿ ಶ್ರೀ ವೈ.ಕೆ.ಆರ್ ಅವರು ಇಟ್ಟ ಪ್ರತಿ ಹೆಜ್ಜೆಯಲ್ಲೂ ಒಂದೊಂದು ಮರ ಬೆಳೆಯಲಿ, ಒಂದೊಂದು ಮರದಲ್ಲೂ ಹೂ ಹಣ್ಣು ಬಿಡಲಿ. ರಾಮಯ್ಯನವರು ಮಾಡುವ ಈ ಕಾರ್ಯಕ್ರಮ ದೇಶಕ್ಕೆ ಆದರ್ಶವಾದದ್ದು.

**- ಪಿ.ಡಿ. ಗಾಂವಕರ್**
ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿಗಳು

..... ನಮ್ಮ ಸಮಕಾಲೀನ ರಾಜಕಾರಣದ ಸನ್ನಿವೇಶದಲ್ಲಿ ವೈ.ಕೆ. ರಾಮಯ್ಯನವರು ನಡೆದಾಡುವ ಶಾಂತವೇರಿ ಗೋಪಾಲಗೌಡರಂತೆ.

**- ಹರಿಹರ ಪ್ರಿಯ, ಬೆಂಗಳೂರು**

ಕುಣಿಗಲ್ ಕುದುರೆಯ ಕಾಠಿಣ್ಯ ಮತ್ತು ರೇಷ್ಮೆಯ ಮೃದುತ್ವ ಈವೆರಡೂ ವೈ.ಕೆ.ಆರ್ ವ್ಯಕ್ತಿತ್ವದಲ್ಲಿ ಮೈಗೂಡಿವೆ. ರಾಮಯ್ಯನವರು ನಮ್ಮೆಲ್ಲರ ಗೌರವಕ್ಕೆ ಪಾತ್ರವಾಗಿರುವ ಅಪೂರ್ವ ರಾಜಕಾರಣಿ.

**- ಡಾ. ಸಿದ್ಧಲಿಂಗಯ್ಯ**

"ಖಂಡಿತವಾದಿ ಲೋಕವಿರೋಧಿ" ಎನ್ನುವ ಮಾತು ನಮ್ಮ ಹಳ್ಳಿಗಾಡಿನಲ್ಲಿ ಬಳಕೆಯಲ್ಲಿದೆ. ಈ ಮಾತು ನೂರಕ್ಕೆ ನೂರರಷ್ಟು ವೈ.ಕೆ. ರಾಮಯ್ಯನವರಿಗೆ ಅನ್ವಯ ವಾಗುತ್ತದೆ. 1962ನೇ ಇಸವಿಯಿಂದಲೂ ನಾನು ಅವರ ಹೆಸರನ್ನು ಸಾರ್ವಜನಿಕ ಜೀವನದಲ್ಲಿ ಕೇಳಿದ್ದೇನೆ. ಅವರ ನಿಷ್ಠುರ ನಡೆ-ನುಡಿ, ಅಧಿಕಾರಶಾಹಿಯನ್ನು ಜನತೆಯ ಕಾರ್ಯಗಳಿಗಾಗಿ ತೊಡಗಿಸುವ ಶೈಲಿ, ಸ್ವಚ್ಛ ಜೀವನ ಇವೆಲ್ಲವೂ ಇಂದು ದಂತಕಥೆಗಳಾಗಿವೆ. ಅಭಿವೃದ್ಧಿ ಕಾರ್ಯಗಳನ್ನು ಜನತೆಗಾಗಿ ಅನುಷ್ಠಾನಗೊಳಿಸುವ ವಿಚಾರದಲ್ಲಿ, ರಾಮಯ್ಯನವರು ರಾಜ್ಯದ ಎಲ್ಲ ಶಾಸಕರಿಗೂ ಮಾದರಿಯಾಗಿದ್ದಾರೆ. ರಾಜಕೀಯ ನಾಯಕತ್ವವಿಲ್ಲದೆ ಬಳಲುತ್ತಿರುವ ತುಮಕೂರು ಜಿಲ್ಲೆಗೆ ಅವರೇ ಇಂದು ಆಧಾರ. ಮಂಡ್ಯಕ್ಕೆ ವಿಶ್ವೇಶ್ವರಯ್ಯನವರು ಹೇಗೋ, ಹಾಗೆಯೇ ತುಮಕೂರು ಜಿಲ್ಲೆಯ ಅಭಿವೃದ್ಧಿಗಳ ಕಾರ್ಯಗಳಿಗೆಲ್ಲ ವೈ.ಕೆ. ರಾಮಯ್ಯನವರು ವರವಾಗಿದ್ದಾರೆ.

**- ಪ್ರೊ. ಎಸ್. ಕೃಷ್ಣಯ್ಯ, ಕೊರಟಗೆರೆ**

ವೈ.ಕೆ. ರಾಮಯ್ಯನವರನ್ನು ನಾನು ಹಲವಾರು ವರ್ಷಗಳಿಂದ ಬಲ್ಲೆ. ಅವರು ಸಭ್ಯರು. ಅನ್ಯಾಯದ ವಿರುದ್ಧವಾಗಿ ಸತತವಾಗಿ ಹೋರಾಟಮಾಡಿಕೊಂಡು ಬಂದಿದ್ದಾರೆ. ಅಸತ್ಯದೊಂದಿಗೆ ರಾಜಿಮಾಡಿಕೊಳ್ಳುವ ಸ್ವಭಾವದವರಲ್ಲ. ಅವರು ಸತ್ಯಾಗ್ರಹಿಗಳು. ಎಂದೂ ಅಗ್ಗದ ಜನಪ್ರಿಯತೆಗಳಿಸಲು ಹೋಗಿಲ್ಲ.. ಅವರ ಹೋರಾಟ ಬಡವರ, ನತದೃಷ್ಟರ ಬಾಳಿಗೆ ನಂದಾದೀಪವಾಗಲಿ ಎಂದು ಹಾರೈಸುತೇನೆ.

**- ಡಾ. ಎಚ್. ನರಸಿಂಹಯ್ಯ, ಬೆಂಗಳೂರು**

ವೈ.ಕೆ.ಆರ್. ನಾನು ಕಂಡ ರಾಜಕಾರಣಿಗಳಲ್ಲೇ ಅತ್ಯಂತ ವಿಶಿಷ್ಟರಾದವರು. ಸರ್ಕಾರಿ ಅಧಿಕಾರಿಗಳ ಸಣ್ಣ ಲೋಪವನ್ನೂ ಅವರು ಸಹಿಸುವುದಿಲ್ಲ. ಸರಳತೆ ಹಾಗೂ ಪ್ರಾಮಾಣಿಕತೆಯಲ್ಲಿ ಅವರನ್ನು ಸರಿಗಟ್ಟುವವರು ಬಹಳ ಕಡಿಮೆ. ಪ್ರೀತಿ, ವಿಶ್ವಾಸ, ಗೆಳೆತನಗಳನ್ನು ಅಪಾರವಾಗಿ ಗೌರವಿಸುವ ವೈ.ಕೆ.ಆರ್. ಅವರೇ ನನ್ನ ಆದರ್ಶ. ನಾವೆಲ್ಲ ಪ್ರಾಮಾಣಿಕವಾಗಿ ಸಮಾಜದ ಪರವಾಗಿರುವುದನ್ನು ಅವರಿಂದಲೇ ಕಲಿತಿದ್ದು.

**- ಕೆ.ಎಸ್. ಕುಮಾರಸ್ವಾಮಿ, ತುಮಕೂರು**

ವೈ.ಕೆ.ಆರ್. ಅವರು ನನ್ನ ರಾಜಕೀಯ ಗುರು. ಅವರ ಮಾರ್ಗದರ್ಶನದಲ್ಲೇ ನಾನು ರಾಜಕೀಯದಲ್ಲಿದ್ದೇನೆ. ಜನತೆಗಾಗಿ ಹೇಗೆ ಕೆಲಸಮಾಡಬೇಕು ಎಂಬುದನ್ನು ವೈ.ಕೆ.ಆರ್ ಅವರನ್ನು ನೋಡಿ ಕಲಿಯಬೇಕು. ಸರ್ಕಾರದ ಸವಲತ್ತುಗಳನ್ನು ಜನತೆಯ ಬಳಿಗೆ ತಲುಪಿಸುವ ರೀತಿಯನ್ನು ಅವರಿಂದ ಕಲಿತಿದ್ದೇನೆ. ಅವರ ಬಳಿ ಇದ್ದವರು ಸೋಮಾರಿಯಾಗಿರಲು ಸಾಧ್ಯವಿಲ್ಲ. ನಂಬಿದವರನ್ನು, ವಿಶ್ವಾಸವಿಟ್ಟವರನ್ನು ಎಂದೂ ಕೈಬಿಡುವವರಲ್ಲ ವೈ.ಕೆ.ಆರ್ ನನ್ನ ಕಷ್ಟ-

ಸುಖಗಳಲ್ಲಿ ಆಸರೆಯಾಗಿ ನಿಂತರು. ನನ್ನ ಮತ್ತು ವೈ.ಕೆ.ಆರ್ ಅವರ ಸಂಬಂಧ ಕೇವಲ ರಾಜಕಾರಣಕಷ್ಟೇ ಸೀಮಿತವಾಗಿಲ್ಲ, ಅದರಾಚೆಗೂ ಇರುವಂತಹದ್ದು. ಅವರ ಕೋಪ-ತಾಪ ಗಳನ್ನು ಕಂಡಿರುವಂತೆಯೇ, ಅವರ ಪ್ರೀತಿ-ವಿಶ್ವಾಸಗಳನ್ನೂ ಅನುಭವಿಸಿದ್ದೇನೆ. ಸಮಾಜದ ಅಭಿವೃದ್ಧಿಯಲ್ಲಿ, ತನ್ನ ಜೊತೆಯಲ್ಲಿರುವವರ ಬೆಳವಣಿಗೆಯಲ್ಲಿಯೇ ಸಂತೋಷವನ್ನು ಕಾಣುವ ತಾಯಿ ಜೀವ ಅದು. ತಮ್ಮ ಜೊತೆಯಲ್ಲಿದ್ದವರು ಯಾರಾದರೂ ಅಪ್ರಮಾಣಿಕರಾದರೆ ತಮ್ಮೊಳಗೆ ಅಪಾರವಾಗಿ ನೋವು ಅನುಭವಿಸುತ್ತಾರೆ.

**-ವೈ.ಎಚ್.ಹುಚ್ಚಯ್ಯ, ಕುಣಿಗಲ್**

.... ವೈ.ಕೆ. ರಾಮಯ್ಯನವರು ಹಳ್ಳಿಗಳಲ್ಲಿ ಮಾಡುವ ಅಭಿವೃದ್ಧಿ ಕಾರ್ಯಗಳ ಕಾರ್ಯಕ್ರಮಗಳು ಸರಳವೂ ಮತ್ತು ಅನುಕರಣೀಯವೂ ಆಗಿರುತ್ತವೆ. ಅವರ ಕಾರ್ಯಕ್ರಮ ಗಳಲ್ಲಿ ಅದ್ದೂರಿತನ ಇರಲ್ಲ; ಸ್ವಾಗತ ಭಾಷಣ, ಹಾರ-ತುರಾಯಿ, ವಂದನಾರ್ಪಣೆ ಒಂದೂ ಇರೋಲ್ಲ! ರಾಮಯ್ಯನವರು ಹೇಳಿದ್ದ ವೇಳೆಗೆ ಸರಿಯಾಗಿ ಬರ್ತಾರೆ. ಹಳ್ಳಿಯಲ್ಲಿರುವ ಯಾರಾದರೂ ಒಬ್ಬ ಹಿರಿಯರಿಂದ ಕಾರ್ಯಕ್ರಮ ಉದ್ಘಾಟನೆ ಮಾಡಿಸ್ತಾರೆ. ಆನಂತರ ಮುಂದಲ ಊರಿಗೆ ಹೋಗ್ತಾರೆ. ಇದರಿಂದಾಗಿ ಸಮಯ ಮತ್ತು ಪೋಲಾಗುವ ಹಣವನ್ನು ಉಳಿಸ್ತಾರೆ.

ನಮ್ಮ ಎಲ್ಲ ಎಂ.ಎಲ್.ಎ ಗಳೂ ಇವರ ಹಾಗೆ ನಡೆದುಕೊಂಡರೆ, ನಮ್ಮ ಸರ್ಕಾರಕ್ಕೆ ಒಳ್ಳೆಯದಾಗುತ್ತೆ.

**- ಒಬ್ಬ ಹಿರಿಯ ಅಧಿಕಾರಿ, ಕುಣಿಗಲ್**

ರಾಮಯ್ಯನವರು ಈಗ ಎಂ.ಎಲ್.ಎ ಆಗಿರೋ ಹುಲಿಯೂರುದುರ್ಗ ಕ್ಷೇತ್ರದ ಪೊಲೀಸ್ ಸ್ಟೇಷನ್‌ಗಳಲ್ಲಿ, ಮೊದಲಿನ ಹಾಗೆ ಗಲಾಟೆ, ಹೊಡೆದಾಟ, ಕಳ್ಳತನ, ಊರಿನ ಗಲಭೆಗಳಿಗೆ ಸಂಬಂಧಿಸಿದ ಕೇಸ್‌ಗಳು ದಾಖಲಾಗೋದು ಕಡಿಮೆ ಆಗಿದೆ. ಕಡಿಮೆ ಅಂದ್ರೆ ಇಲ್ಲವೇ ಇಲ್ಲ ಅಂತಲೂ ಹೇಳಬಹುದು.

ಆದರಿಂದಾಗಿ ನಾವು ಪೊಲೀಸರೆಲ್ಲಾ ಈ ಅವರ ಕ್ಷೇತ್ರದ ಅಭಿವೃದ್ಧಿ ಕಾರ್ಯಗಳಿಗೆ ತೊಡಗಿಸಿಕೊಂಡಿದ್ದೇವೆ. ಇದರಿಂದ ನಮಗೆ ತೃಪ್ತಿ ದೊರಕಿದೆ. ಕಳೆದ ಮೂರು ವರ್ಷಗಳಲ್ಲಿ ಇಲ್ಲಿ ಆಗಿರೋವಷ್ಟು ಅಭಿವೃದ್ಧಿ ಕಾರ್ಯಗಳು, ಸ್ವಾತಂತ್ರ ಬಂದ ಕಾಲದಿಂದ ಮೊದಲುಗೊಂಡು, ಇಂದಿನವರೆಗು ಆಗಿರಲಿಲ್ಲ. ವೈ.ಕೆ.ಆರ್ ಇರೋದ್ರಿಂದ ನಮೆಲ್ಲ ಕೆಲಸಗಳೂ ಹಗುರವಾಗಿವೆ.

**- ಒಬ್ಬ ಪೊಲೀಸ್ ಅಧಿಕಾರಿ, ಕುಣಿಗಲ್**

ಸರ್ಕಾರಿ ನೌಕರರಿಗೆ ವೈ.ಕೆ. ರಾಮಯ್ಯನವರು ಸಿಂಹಸ್ವಪ್ನ ಅಂತ ಜನ ಹೇಳುತ್ತಾರೆ. ಈ ಮಾತು ಅಕ್ಷರಶಃ ನಿಜ. ಕೆಲಸ ಮಾಡದೇ ಇರೋರಿಗೆ, ಕಚೇರಿಗೆ ಬರದೇ ಇರೋರಿಗೆ, ಲಂಚ-ರುಷುವತ್ತು ಪಡೆಯೋರಿಗೆ ರಾಮಯ್ಯನವರು ಖಂಡಿತವಾಗಿಯು ಸಿಂಹಸ್ವಪ್ನವೇ! ಆದರೆ ಅದೇ ಸತ್ಯವಂತರು ಮತ್ತು ಪ್ರಾಮಾಣಿಕ ಅಧಿಕಾರಿಗಳನ್ನು ತುಂಬು ಗೌರವದಿಂದಲೂ ಕಾಣುತ್ತಾರೆ. ಅಂತಹ ವ್ಯಕ್ತಿತ್ವ ಇವರದು. ಕಾನೂನನ್ನು ಉಲ್ಲಂಘನೆ ಕೆಲಸ ಮಾಡಿ ಅಂತ ಅವರು ಯಾವತ್ತು ಹೇಳಿಲ್ಲ. ಹಾಗೆಯೇ ಜನರನ್ನು ಕಚೇರಿಗೆ ವೃಥಾ ಅಲೆಸುವ ನೌಕರರನ್ನು ಸುಮ್ಮನೆ ಬಿಡುವವರೂ ಅಲ್ಲ!

ಆದ್ದರಿಂದಲೇ ಭ್ರಷ್ಟ ಅಧಿಕಾರಿಗಳು ಇವರ ಕ್ಷೇತ್ರಕ್ಕೆ ಹೋಗಲು ಹಿಂಜರಿಯುತ್ತಾರೆ. ಆದರೆ ಪ್ರಾಮಾಣಿಕ ಅಧಿಕಾರಿಗಳು ಸಂತೋಷದಿಂದ ಕೆಲಸ ಮಾಡುತ್ತಾರೆ. ನಮ್ಮ ಕರ್ನಾಟಕದ ಎಲ್ಲ ಶಾಸಕರೂ ವೈ.ಕೆ.ಆರ್ ತರಹವೇ ಆದರೆ ಈ ಅಧಿಕಾರಶಾಹಿ ಸರಿಹೋಗುತ್ತದೆ.

**– ಒಬ್ಬ ಸರ್ಕಾರಿ ಅಧಿಕಾರಿ, ಕುಣಿಗಲ್**

..... ದೇವೇಗೌಡರು ಮಂತ್ರಿಮಂಡಲಕ್ಕೆ ಆರಿಸಿಕೊಂಡ ಗುಂಪಿನ ಪೈಕಿ ಇಬ್ಬರೇ ಇಬ್ಬರು ಯೋಗ್ಯರಲ್ಲಿ ರಾಮಯ್ಯನವರೂ ಒಬ್ಬರು! ಯಾರ ಮುಲಾಜೂ ಇಲ್ಲದೆ, ಯಾವ ಭ್ರಷ್ಟ ಅಧಿಕಾರಿಗೂ ಕೇರ್ ಮಾಡದೆ; ಕೆಲಸ ಮಾಡಬಲ್ಲ ಈತ ನಮ್ಮ ಸಚಿವ ಸಂಪುಟದ ಅತ್ಯಂತ ಪ್ರಾಮಾಣಿಕ ಮಂತ್ರಿಗಳಲ್ಲೊಬ್ಬ. ಈತನ ಕೈ ಎಷ್ಟು ಶುದ್ಧವೆಂದರೆ, ಪೊಲೀಸ್ ಡಿಪಾರ್ಟ್‌ಮೆಂಟಿಗೂ ನಾಲಾಯಕ್ಕು ಎಂದು ಕುಣಿಗಲ್ ಪ್ರಜೆಯೊಬ್ಬರು ಅರ್ಧ ಅಭಿಮಾನ, ಅರ್ಧ ಕೋಪದಿಂದ ಹೇಳುತ್ತಾರೆ.

ಇತರ ವ್ಯಕ್ತಿಗಳಂತೆ ಈತನಿಗೆ ಹಾಸ್ಯಪ್ರಜ್ಞೆ ಇಲ್ಲವಾದರೂ, ದೇವೇಗೌಡರ ಬುಡಕಟ್ಟಿನಿಂದ ದೂರ ನಿಲ್ಲಬಲ್ಲ ಕೆಲವು ವಿಶಿಷ್ಟ ಗುಣಗಳು ಈತನಲ್ಲಿವೆ. ದೇವೇಗೌಡರ ಗುಂಪಿನ ಸಂಸ್ಥಾ ಕಾಂಗ್ರೆಸ್ಸಿನ ನಿದ್ರಾಶೈಲಿ ಈತನಲ್ಲಿಲ್ಲ. ಬದಲಿಗೆ ಎಲ್ಲ ಕೆಲಸಗಳನ್ನೂ ಚಟುವಟಿಕೆಯಿಂದ, ಚೊಕ್ಕವಾಗಿ ಮಾಡಬಲ್ಲ ಆಸಾಮಿ ರಾಮಯ್ಯ. ದೇವೇಗೌಡರ ಗುಂಪಿನಲ್ಲಿ, ಯಾರೂ ಕೇಳರಿಯದ ಸಾಹಿತ್ಯದ ಬಗ್ಗೆ ಸಾಕಷ್ಟು ಆಳವಾಗಿ ಯೋಚಿಸಬಲ್ಲ ವ್ಯಕ್ತಿ ಈ ರಾಮಯ್ಯ. ಎಲ್ಲಕ್ಕಿಂತ ಈತ ಜಾಸ್ತಿ ಕುವೆಂಪು ಸಾಹಿತ್ಯವನ್ನು ಅಧ್ಯಯನ ಮಾಡಿರುವುದು, ಕುವೆಂಪು ಒಕ್ಕಲಿಗರು ಎಂಬ ಕಾರಣದಿಂದ ಇರಲಾರದು. ಈತ ಜಾತಿವಾದಿಯಲ್ಲ. ರೂಲ್ಸ್‌ನಿಂದಾಚೆ ಇರಬಲ್ಲ ಮಾನವೀಯತೆಯನ್ನು ಗುರುತಿಸಬಲ್ಲ ಮನುಷ್ಯ.

**– ಲಂಕೇಶ್ ಪತ್ರಿಕೆ**

ಸರ್ಕಾರಿ ಅಧಿಕಾರಿಗಳನ್ನು ಕಂಡರೆ ವೈ.ಕೆ. ರಾಮಯ್ಯನವರು ಬಯ್ಯುತ್ತಾರೆ, ರೇಗ್ತಾರೆ ಅನ್ನೋ ಮಾತು ಜನರ ನಡುವೆ ಜನಜನಿತವಾಗಿದೆ. ಆದರೆ ವಾಸ್ತವವಾಗಿ ಹಾಗಿಲ್ಲ! ಪ್ರಾಮಾಣಿಕ ಅಧಿಕಾರಿಗಳನ್ನು ಅವರೆಷ್ಟು ಗೌರವಿಸುತ್ತಾರೆ ಅನ್ನೋದು ಬಹಳ ಜನಕ್ಕೆ ಗೊತ್ತಿಲ್ಲ!

ನಾನು ಕೆಮ್ಮಣ್ಣುಗುಂಡಿಯಲ್ಲಿ ತೋಟಗಾರಿಕೆ ಅಭಿವೃದ್ಧಿ ಅಧಿಕಾರಿಯಾಗಿ ಸುಮಾರು ಇಪ್ಪತ್ತಮೂರು ವರ್ಷ ಅಲ್ಲಿದ್ದೆ. ಆಗ ವೈ.ಕೆ. ರಾಮಯ್ಯನವರು ತಮ್ಮ ಸ್ನೇಹಿತರೊಂದಿಗೆ ಆಗಾಗ್ಗೆ ಕೆಮ್ಮಣ್ಣುಗುಂಡಿಗೆ ಬರೋರು. ಅಲ್ಲಿಗೆ ಬಂದಾಗ ರಾಮಯ್ಯನವರು ಅವರ ಸ್ನೇಹಿತರನ್ನೆಲ್ಲಾ ಬಿಟ್ಟು, ಹೂಗಿಡಗಳ ಬಳಿ ಕೆಲ್ಸ ಮಾಡುತ್ತಿದ್ದ ನನ್ನ ಬಳಿಗೆ ಬರೋರು. ನನ್ನ ಜೊತೇಲಿ ಪಾತಿ ಮಾಡೋರು, ನೆಲ ಕುಕ್ಕೋರು. ಗಿಡ-ಮರಗಳನ್ನು ಕಂಡರೆ ಅಂಥ ಪ್ರೀತಿ ಆ ಮನುಷ್ಯನಿಗೆ. ಆ ಹೊತ್ತಿಗೆ ನಾನು ಕೆಮ್ಮಣ್ಣುಗುಂಡಿಯನ್ನ ಚೆನ್ನಾಗಿ ರೂಪಿಸಿದ್ದೆ. ನಾನು ಮೊದಲು ಅಲ್ಲಿಗೆ ಬಂದಾಗ, ಅಲ್ಲಿನ ವಾರ್ಷಿಕ ವರಮಾನ ಮೂರು ಸಾವಿರದಿಂದ - ಐದು ಸಾವಿರದವರೆಗೆ ಇತ್ತು! ಆನಂತರದಲ್ಲಿ ನಾನು ಅಲ್ಲಿನ ವರಮಾನವನ್ನು ಹದಿಮೂರು ಲಕ್ಷದವರೆಗೂ ಬೆಳೆಸಿದೆ. ಹೀಗಾಗಿ ನನ್ನ ವಿಚಾರ ವೈ.ಕೆ.ಆರ್ ಅವರಿಗೆ ಚೆನ್ನಾಗಿ ಗೊತ್ತಿತ್ತು. ನಮ್ಮ ಹಳ್ಳಿಯವರಂತೆ ತುಂಬಾ ಸರಳವಾದ ಮನುಷ್ಯ ವೈ.ಕೆ.ಆರ್.

ನನ್ನ ಸೇವೆಯ ಕೊನೆಯ ವರ್ಷಗಳಲ್ಲಿ ಸರ್ಕಾರ ನನ್ನನ್ನು ನಂದಿಬೆಟ್ಟಕ್ಕೆ ಅಧಿಕಾರಿಯನ್ನಾಗಿ ನೇಮಿಸಿತು. ಅಷ್ಟು ಹೊತ್ತಿಗೆ ವೈ.ಕೆ. ರಾಮಯ್ಯನವರು ತೋಟಗಾರಿಕೆ ಮಂತ್ರಿಯೇ ಆಗಿದ್ದರು. ಅಂದರೆ ನನ್ನ ಇಲಾಖೆಯ ಮಂತ್ರಿ. ಅಂಥ ದಕ್ಷ ಮತ್ತು ಕಳಕಳಿ ಇರುವ ವ್ಯಕ್ತಿ ನನ್ನ ಇಲಾಖೆಯ ಮಂತ್ರಿ ಆಗಿ ಬಂದಿದ್ದು ನನಗೆ ಹೆಚ್ಚು ಸಂತೋಷ ಆಗಿತ್ತು.

ನಾನು ನಂದಿಬೆಟ್ಟದಲ್ಲಿದ್ದಾಗ ಅನೇಕರು ತಮ್ಮ ಶಾಸಕರ-ಮಂತ್ರಿಗಳ ಹೆಸರು ಹೇಳಿಕೊಂಡು ಅಲ್ಲಿಗೆ ಮೋಜಿಗಾಗಿ ಬರುತ್ತಿದ್ದರು. ರೂಂಗಳನ್ನು ಕೇಳುತ್ತಿದ್ದರು. ಆದರೆ ನಾನು ನಿರ್ಧಾಕ್ಷಿಣ್ಯವಾಗಿ ಯಾರಿಗೂ ಕೊಡುತ್ತಿರಲಿಲ್ಲ. ಇದರಿಂದಾಗಿ ಅವರಿಗೆಲ್ಲಾ ನನ್ನ ಮೇಲೆ ಅಸಮಾಧಾನ ಇತ್ತು. ಆದರೂ ನನ್ನ ಪ್ರಾಮಾಣಿಕತೆಯೇ ನನಗೆ ශ್ರೀರಕ್ಷೆಯಾಗಿತ್ತು. ಅದರಿಂದಾಗಿ ಧೈರ್ಯದಿಂದ ಇದ್ದೆ. ಒಂದು ಸಲ ಮಂತ್ರಿ ಆಗಿದ್ದ ರಾಮಯ್ಯನವರು ನಂದಿಬೆಟ್ಟಕ್ಕೆ ಬಂದರು. ಅವರು ಬಂದಾಗ, ಅವರ ಪಕ್ಷದ ಅನೇಕ ಕಾರ್ಯಕರ್ತರೂ ಅಲ್ಲಿಗೆ ಬಂದು, ವೈ.ಕೆ.ಆರ್ ಅವರಿಗೆ ಹಾರ ಹಾಕಿ ಬರಮಾಡಿಕೊಂಡರು. ನಾನೂ ಅಲ್ಲೇ ಇದ್ದೆ.

ಆ ಕಾರ್ಯಕ್ರಮದಲ್ಲಿ ಕೆಲವು ಜನ ವೈ.ಕೆ.ಆರ್ ಬಳಿ ನನ್ನ ವಿರುದ್ಧ ಇಲ್ಲದ ದೂರು ಹೇಳಿದರು. ಅವರು ಬಹಳ ಕುಡುಕ, ಲಂಚ ತೆಗೆದುಕೊಳ್ಳುತ್ತಾನೆ. ಸಂಜೆ ಆದರೆ ಕುಡಿದು ಬೀಳ್ತಾನೆ... ಅಂತ ನನ್ನ ವ್ಯಕ್ತಿತ್ವದಲ್ಲಿ ಇಲ್ಲದ ಹತ್ತಾರು ವಿಚಾರಗಳನ್ನು ರಾಮಯ್ಯನವರಿಗೆ ಹೇಳುತ್ತಿದ್ದರು. ಆಗ ರಾಮಯ್ಯನವರು ಕೂಡಲೇ ಆ ಕಾರ್ಯಕರ್ತರು ಹಾಕಿದ್ದ ಹಾರ-ತುರಾಯಿಗಳನ್ನು ಕಿತ್ತು ಆಚೆ ಎಸೆದು, **"ಕಂಬಯ್ಯನವರನ್ನು ಕುರಿತು ಈ ರೀತಿ ಸುಳ್ಳು ಹೇಳೋದಕ್ಕೆ**

**ನಿಮಗೆಷ್ಟು ಧೈರ್ಯ? ಗೆಟ್ ಔಟ್''** ಎಂದು ಕೋಪಾವೇಶದಿಂದ ಬಂದಿದ್ದವರೆಲ್ಲರನ್ನೂ ಆಚೆಗೆ ಕಳಿಸಿದರು. ಕೂಡಲೇ ನನ್ನ ಬಳಿ ಬಂದು, ತಮ್ಮ ಕಾರಿನಲ್ಲಿ ನನ್ನನ್ನು ಕುಳ್ಳಿರಿಸಿಕೊಂಡು ಎಲ್ಲರ ಮುಂದೆಯೇ ಹೋದರು. ಆಗ ಅಲ್ಲಿಗೆ ಬಂದಿದ್ದವರಿಗೆಲ್ಲಾ ನಾಚಿಕೆಯಾಯಿತು. ಸುಮ್ಮನೆ ಹೋದರು. ಇದನ್ನೆಲ್ಲಾ ನೋಡಿದ ನನಗೆ ಮಾತೇ ನಿಂತು ಹೋಯಿತು. ಅಂಥ ಪ್ರಾಮಾಣಿಕ ಮಂತ್ರಿ ಆಗಿದ್ದರು. ಈವೊತ್ತಿನ ಸರ್ಕಾರದಲ್ಲಿ ವೈ.ಕೆ.ಆರ್ ಮಂತ್ರಿ ಆಗಿದ್ದರೆ, ಸರ್ಕಾರಕ್ಕೆ ಘನತೆ ಬರೋದು. ಅವರು ಮಂತ್ರಿ ಆಗಿಲ್ಲದಿರುವುದು ಜನತೆಯ ದೌರ್ಭಾಗ್ಯ.

**-ಟಿ.ಕೆ. ಕಂಬಯ್ಯ**, ನಿವೃತ್ತ ವಿಶೇಷಾಧಿಕಾರಿ<br>ತೋಟಗಾರಿಕಾ ಇಲಾಖೆ, ಬೆಂಗಳೂರು

ಎರಡು ವರ್ಷಗಳ ಹಿಂದೆ ಕುಣಿಗಲ್ ತಾಲ್ಲೂಕಿನ ಕೊಡವತ್ತಿ ಸರ್ಕಾರಿ ಪ್ರೌಢಶಾಲೆ ಎಸ್.ಎಸ್.ಎಲ್.ಸಿ.ಯಲ್ಲಿ ಶೂನ್ಯ ಫಲಿತಾಂಶ ಪಡೆದಿತ್ತು. ಆದರೆ ಈ ಬಾರಿ ಶೇಕಡ 100ರಷ್ಟು ಫಲಿತಾಂಶ ಪಡೆಯುವ ಮೂಲಕ ಹಳ್ಳಿಯ ಶಾಲೆ ಅಚ್ಚರಿ ಮೂಡಿಸಿದೆ.

ಇದು ಒಂದು ನಿದರ್ಶನ. ಅಂತೆಯೇ ತಾಲ್ಲೂಕಿನ ದೊಡ್ಡ ಮಧುರೆ (ಶೇ. 91.52), ಸಂತೇಮಾವತ್ತೂರು (ಶೇ.96) ಮತ್ತು ತರೇದಕುಪ್ಪೆ (ಶೇ.96.66) ಸರ್ಕಾರಿ ಶಾಲೆಗಳು ಉತ್ತಮ ಫಲಿತಾಂಶ ಪಡೆದಿವೆ. ಕಳೆದ ಬಾರಿ ಶೇ.35.8ರಷ್ಟಿದ್ದ ತಾಲ್ಲೂಕಿನ ಫಲಿತಾಂಶ ಈ ಬಾರಿ ಶೇ.61.1ಕ್ಕೆ ಏರಿದೆ. ಇದ್ದಕ್ಕಿದ್ದಂತೆ ಈ ಪವಾಡ ಸಾಧ್ಯವಾದದ್ದು ಹೇಗೆ ಎಂದು ಅಚ್ಚರಿಯೇ?

ಹುಲಿಯೂರುದುರ್ಗ ಶಾಸಕ ವೈ.ಕೆ. ರಾಮಯ್ಯ ಇವೆಲ್ಲಕ್ಕೆ ಮೂಲ ಪ್ರೇರಣೆ. ತಿಂಗಳಿಗೊಂದು ಬಾರಿ ಮುಖ್ಯ ಶಿಕ್ಷಕರ ಸಭೆ ಕರೆದು ಮಾರ್ಗದರ್ಶನ, ವಿದ್ಯಾರ್ಥಿಗಳಿಗೆ ಮತ್ತು ಪೋಷಕರಿಗೆ ಶಾಸಕರೇ ವೈಯಕ್ತಿಕವಾಗಿ ಐದು ಸಾವಿರಕ್ಕೂ ಹೆಚ್ಚು ಪತ್ರ ಬರೆದು ಪರೀಕ್ಷೆಯ ಮಹತ್ವ ವಿವರಿಸಿದ್ದು, ಶಾಲೆಗಳಲ್ಲಿ ಚಟುವಟಿಕೆ, ಐದು ವರ್ಷದ ಪ್ರಶ್ನೆಪತ್ರಿಕೆಗಳಿಗೆ ಉತ್ತರ ಬರೆಸಿದ್ದು, ಹೀಗೆ ಗಣನೀಯ ಸಾಧನೆಯ ಹಿಂದೆ ಅಪಾರ ಪರಿಶ್ರಮವಿದೆ. ಇದು ರಾಜ್ಯದ ಇತರ ಸರ್ಕಾರಿ ಶಾಲೆಗಳಿಗೂ ಮಾದರಿಯಾದಿತೇ?

**ಪ್ರಜಾವಾಣಿ :** 3.6.2002

ಹೇಳಬೇಕಾಗಿರುವುದನ್ನು ಅತ್ಯಂತ ವಿನಯವಾಗಿ, ವ್ಯಂಗ್ಯವೇ ಆಗಿದ್ದರೂ, ಅದು ಹಾಗಲ್ಲ ಎನ್ನುವಂತೆ ಮಂಡಿಸುವ ಛಾತಿ ಹೊಂದಿರುವವರಲ್ಲಿ ಹುಲಿಯೂರುದುರ್ಗದ ಶಾಸಕ ವೈ.ಕೆ. ರಾಮಯ್ಯ ಮೊದಲಿಗರು. ನ್ಯಾಯಾಲಯದ ಹೊಸ ಕಟ್ಟಡದ ಉದ್ಘಾಟನೆಗೆ ತಮ್ಮನ್ನು ಕರೆಯದೇ ಅಪಮಾನಗೊಳಿಸಿದ್ದನ್ನು ಸೋಮವಾರ ವಿಧಾನಸಭೆಯಲ್ಲಿ ಪ್ರಸ್ತಾಪಿಸಿದ್ದೇ ತಡ, ಇಡೀ ಸದನ ಅವರ ಬೆಂಬಲಕ್ಕೆ ನಿಂತಿತು.

ಇದರಿಂದ, ವಿಧಾನಸಭಾ ಕ್ಷೇತ್ರಗಳ ಪ್ರಥಮ ಪ್ರಜೆಗಳಾದ ತಮ್ಮ ಹಕ್ಕಿಗೆ ಚ್ಯುತಿಯಾಗಿದೆ ಎಂಬುದರ ಬಗ್ಗೆ ಆಡಳಿತ ಮತ್ತು ವಿರೋಧ ಪಕ್ಷವೆನ್ನದೆ ಎಲ್ಲರೂ ಗಂಭೀರ ಚರ್ಚೆಯಲ್ಲಿ ಪಾಲ್ಗೊಳ್ಳುವಂತಾಗಲು ರಾಮಯ್ಯ ಕಾರಣರಾದರು. ಪಟ್ಟು ಹಿಡಿಯುತ್ತಲೇ ಎಲ್ಲರ ಬಣ್ಣ ಬಯಲು ಮಾಡಿದ ವೈ.ಕೆ. ಆರ್ ಆಡಳಿತ ಪಕ್ಷದವರಾದರೂ, ವಿಪಕ್ಷ ಸದಸ್ಯರು ಮೇಜು ಗುದ್ದಿ ಸ್ವಾಗತಿಸುವಂತೆ ವಿಶಿಷ್ಟ ಸನ್ನಿವೇಶ ಸೃಷ್ಟಿಮಾಡಿದರು.

**- ಜನವಾಹಿನಿ** (13-3-2001)

ಹೇಮಾವತಿ ನೀರಿಗಾಗಿ ಕಳೆದವಾರ ಜಿಲ್ಲಾದ್ಯಂತ ವ್ಯಾಪಿಸಿದ ಹೋರಾಟ ಅಭೂತಪೂರ್ವ ಎನಿಸಿದೆ. ಈ ಹೋರಾಟಕ್ಕೆ ನಾಂದಿ ಹಾಕಿದ್ದೇ, **ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆಯ ಅಧ್ಯಕ್ಷ ವೈ.ಕೆ. ರಾಮಯ್ಯ ಅವರು.** ಚಳವಳಿಯುದ್ದಕ್ಕೂ ಇತರೆಲ್ಲ ಅಧಿಕಾರಸ್ಥ ರಾಜಕಾರಣಿಗಳಿಗಿಂತಲೂ ಮಾಜಿ ಸಚಿವ ವೈ.ಕೆ. ರಾಮಯ್ಯ ಮಿಗಿಲಾಗಿಯೇ ಕಾಣಿಸಿಕೊಂಡಿದ್ದು ಒಂದು ವಿಶೇಷ. ರಾಮಯ್ಯ ಮತ್ತು ಅವರ ವೇದಿಕೆಯನ್ನು ಇದುವರೆಗೂ ಗೇಲಿ ಮಾಡುತ್ತಿದ್ದವರು, ಟೀಕಿಸುತ್ತಿದ್ದವರು, 'ರಾಜಕೀಯ' ಎಂದು ಮೂದಲಿಸುತ್ತಿದ್ದ ಮಂದಿಯೇ ''**ರಾಮಯ್ಯ ಸ್ಟೈಲ್ ಹೋರಾಟ**''ವನ್ನು ಅನುಸರಿಸಿದ್ದು ಗಮನಾರ್ಹವಾದ ಅಂಶ.

**- ತುಮಕೂರು ವಾರ್ತೆ** (25-7-1998)

ಹಿರಿಯರಾದ ಶ್ರೀ ವೈ.ಕೆ. ರಾಮಯ್ಯನವರು ಮಾತನಾಡಿದರೆ, ಅದನ್ನು ನಮ್ಮಂಥ ಯುವಕರು ಗಮನವಿಟ್ಟು ಕೇಳಬೇಕಾಗುತ್ತದೆ. ಅವರು ಆಡುವ ಮಾತುಗಳು ನಮ್ಮ ಯುವಜನತೆಗೆ ಮಾರ್ಗದರ್ಶನವಾಗಿರುತ್ತವೆಯೇ ಹೊರತು; ಯಾವುದೇ ಕಾರಣಕ್ಕೂ ಅದು ಕಾಲಹರಣವಲ್ಲ. ಅವರ ಅನುಭವದ ವಿಚಾರಗಳನ್ನು ನಮಗೆ ಕೊಟ್ಟಿದ್ದಾರೆ. ಅದಕ್ಕಾಗಿ ಅವರಿಗೆ ಹೃದಯಪೂರ್ವಕವಾಗಿ ಅಭಿನಂದನೆಯನ್ನು ಸಲ್ಲಿಸುತ್ತೇನೆ. ಶ್ರೀ ವೈ.ಕೆ. ರಾಮಯ್ಯನವರು ನಮಗೆ ಇನ್ನೂ ಹೆಚ್ಚು ಮಾರ್ಗದರ್ಶನ ನೀಡಬೇಕು.

**- ಕುಮಾರ ಬಂಗಾರಪ್ಪ**, ಸಣ್ಣ ನೀರಾವರಿ ಸಚಿವರು
(ಶಾಸನ ಸಭೆಯಲ್ಲಿ: 13-3-2001)

ವೈ.ಕೆ.ಆರ್ ಮಾತನಾಡಿದಾಗೆಲ್ಲಾ ಅವರು ನೀರಿನ ರಾಜಕೀಯ ಮಾಡುತ್ತಿದ್ದಾರೆಂದು ಆರೋಪಿಸುವ ವಿರೋಧಿಗಳು, ಉಳಿದೆಲ್ಲಾ ರಾಜಕೀಯದ ಜೊತೆ ಅದನ್ನೂ ಮಾಡಿದ್ದರೆ ತುಮಕೂರು ಜಿಲ್ಲೆ ಇಷ್ಟು ನಿರ್ಲಕ್ಷ್ಯಕ್ಕೆ ಈಡಾಗುತ್ತಿರಲಿಲ್ಲ.

**- ಪ್ರಜಾವಾಣಿ** (19-6-1998)

There was no other person who deserved to be a minister that Mr. Y.K. Ramaiah. He must be a minister in the S.M. Krishna Government. The government needs such a dedicated and experienced politician.

**- H. Vishwanath**
Primary Education Minister
(Deccan Herald : 28-5-2001)

ಇದೀಗ ಚುನಾವಣೆಯಲ್ಲಿ ಗೆದ್ದು ಬೆಂಗಳೂರಿನ ಶಾಸಕರ ಭವನದಲ್ಲಿ ಪಟ್ಟಾಗಿ ತಳವೂರಿರುವ ಅನೇಕಾನೇಕ ಶಾಸಕರು, ತಮಗೆ ಸಿಗಬಹುದಾದ ಅಧಿಕಾರಗಳಿಗೆ ಹಲ್ಲುಗಿಂಜುತ್ತಾ ಓಡಾಡುತ್ತಿರುವ ಈ ಸಂದರ್ಭದಲ್ಲಿ, ಇದಾವುದನ್ನೂ ತಲೆಗೆ ಹಚ್ಚಿಕೊಳ್ಳದ **ಕುಣಿಗಲ್‌ನ ಶಾಸಕ ವೈ.ಕೆ. ರಾಮಯ್ಯ ಕುಣಿಗಲ್‌ನ ತಮ್ಮ ಮನೆಯಲ್ಲಿ ತಮ್ಮ ಕ್ಷೇತ್ರದ ಜನಗಳ ಜೊತೆ ಕುಂತು ಅವರ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಿದ್ದರು.**

**- ಲಂಕೇಶ್ ಪತ್ರಿಕೆ**
(ಶಾಸಕರಾಗಿ ಆಯ್ಕೆಯಾದ ಸಂದರ್ಭದಲ್ಲಿ)

ರಾಜ್ಯ ಗೃಹನಿರ್ಮಾಣ ಮಂಡಳಿಯಲ್ಲಿ ಬೇರೂರಿರುವ ನಿಸ್ಸೀಮ ನಿಷ್ಕ್ರಿಯತೆ, ಅಪ್ಪಪಹಾರ, ಅಸಡ್ಡೆಗಳನ್ನು ತೊಡದುಹಾಕಿ, ವಸತಿಹೀನರಿಗೆ ಬೇಗನೆ ಸ್ವಂತ ನೆಲೆಯನ್ನು ಕಲ್ಪಿಸುವ ಕಾರ್ಯಕ್ಕೆ ಹೊಸ ಚುರುಕು ವೇಗಗಳನ್ನು ತಂದುಕೊಡಲು ನೂತನ ಅಧ್ಯಕ್ಷ ವೈ.ಕೆ. ರಾಮಯ್ಯನವರು ಸಂಕಲ್ಪಿಸಿರುವುದು ಸ್ವಾಗತಾರ್ಹ ವಿಚಾರ.

**- ಪ್ರಜಾವಾಣಿ, ಸಂಪಾದಕೀಯ**

ಆಮೆ ನಡಿಗೆಯಲ್ಲಿ ಹೊರಟಿದ್ದ ಗೃಹ ನಿರ್ಮಾಣ ಮಂಡಳಿಯು ಕಳೆದ ಒಂದು ವರ್ಷದಿಂದೀಚೆಗೆ ಚುರುಕುಗೊಂಡಿದ್ದು, ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿದೆ. ಮಂಡಳಿಗೆ ಈ ಹೊಸ ಚಾಲನೆಯನ್ನು ತಂದುಕೊಟ್ಟವರು ಶ್ರೀ ವೈ.ಕೆ. ರಾಮಯ್ಯನವರು. ಕುಣಿಗಲ್‌ನ ಶಾಸಕರೂ ಆಗಿರುವ **ರಾಮಯ್ಯನವರು ಜನರಿಗೆ ದೊರೆಯಬೇಕಾದ ಸೌಲಭ್ಯಗಳನ್ನು** ಸರಕಾರದ **ಮುಂಗೈ ಹಿಡಿದು ಕೇಳುವ ಎದೆಗಾರಿಕೆಯನ್ನು ಪಡೆದಿದ್ದಾರೆ. ಶ್ರೀ ರಾಮಯ್ಯನವರ ರಾಜಕೀಯ ಆಗಮನ ಅಮಾಯಕ ಜನರಲ್ಲಿ ದೊಡ್ಡ ಆಸೆ ಮತ್ತು ವಿಶ್ವಾಸವನ್ನು ಹುಟ್ಟಿಸಿದೆ.**

**- ಪೃಥ್ವಿ**
(ವಿಜಾಪುರ ವಾರಪತ್ರಿಕೆ : 14-8-1984)

ತುಮಕೂರು ಜಿಲ್ಲೆಯಲ್ಲಿ ಸಾಕಷ್ಟು ಜನಪ್ರಿಯತೆಯಿಂದ ಕೆಲಸ ಮಾಡುತ್ತಾ, ಅಡ್ಡಿಬಂದ ಅಧಿಕಾರಿಗಳನ್ನು ತನ್ನ ಬಿಸಿಯಾದ ಮಾತು, ಪಟ್ಟುಬಿಡದ ಹಠದಿಂದ ಚಚ್ಚುತ್ತಾ ಕ್ಷೇತ್ರದ ಜನತೆಯ ಪ್ರೀತಿಗೆ ಆತ್ಮೀಯ ಮಿತ್ರನಾಗಿರುವ ಒಬ್ಬರೇ ಶಾಸಕರೆಂದರೆ ರಾಜ್ಯ ಗೃಹ ನಿರ್ಮಾಣ ಮಂಡಳಿ ಅಧ್ಯಕ್ಷರೂ ಆಗಿರುವ ವೈ.ಕೆ. ರಾಮಯ್ಯ. ಬೇಸಿಗೆಯ ಬೇಗೆಯಲ್ಲಿ ಜಿಲ್ಲಾಧಿಕಾರಿಗಳ ಬಳಿ ಜನರಿಗೆ ಕೊಳವೆಬಾವಿ ಕೇಳಿ, ಅವರು ಮೇಲಿಂದ ಆಜ್ಞೆ ಬರುವವರೆಗೆ ಕಾಯಬೇಕೆಂದಾಗ, ಸಿಡಿದೆದ್ದು ಕೊಳವೆ ಬಾವಿ ಕೊರೆಸಿ ಜನರನ್ನು ತಣಿಸಿದರು. ತಾಲ್ಲೋಕಿನ ಅಧಿಕಾರಿಗಳಿಗೆ ಲಂಚದ ಭೂತ ಬಿಡಿಸಿದ ಜಿಲ್ಲೆಯ ಏಕೈಕ ಶಾಸಕ ವೈ.ಕೆ. ರಾಮಯ್ಯ.

**-ಲಂಕೇಶ್ ಪತ್ರಿಕೆ** (6-11-1984)

ಕುಣಿಗಲ್‌ನ ಜನತಾ ಪಾರ್ಟಿಯ ಶಾಸಕ ರಾಮಯ್ಯನವರು ಶುದ್ಧ ಹಸ್ತ ಎನ್ನುತ್ತಾರೆ ಮಂದಿ. ಅಧಿಕಾರಿ ವರ್ಗಕ್ಕೆ ಸಿಂಹ ಸ್ವಪ್ನವಾಗಿರುವ ಇವರು ಊರಿನ ಸರ್ಕಾರಿ ಕಛೇರಿಗಳಲ್ಲಿ ಚುರುಕುತನ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

**-ತುಮಕೂರು ವಾರ್ತೆ** (1985)

ಶ್ರೀ ವೈ.ಕೆ. ರಾಮಯ್ಯನವರನ್ನು ನಿಮ್ಮ ಶಾಸಕರನ್ನಾಗಿ ಪಡೆದಿದ್ದು ನಿಮ್ಮ ಸುದೈವ.

**- ರಾಮಕೃಷ್ಣ ಹೆಗಡೆ** (6-8-1984)

ಕುಣಿಗಲ್ ವಿಧಾನಸಭಾ ಶಾಸಕ ವೈ.ಕೆ. ರಾಮಯ್ಯನವರು ಉತ್ಸಾಹಿ ತರುಣರಾಗಿದ್ದು ಜಿಲ್ಲೆಯ ಮುಖಂಡತ್ವಕ್ಕೆ ಅರ್ಹತೆ ಪಡೆದಿದ್ದಾರೆ.

**- ಎಚ್.ಡಿ. ದೇವೇಗೌಡ** (6-8-1984)

ನೀವು ಯಾವುದೇ ಪಕ್ಷದಲ್ಲಿದ್ದರೂ ನಮ್ಮ ಜಿಲ್ಲೆಯ ಪ್ರಗತಿಗೆ ನೀವೇ ಸಾಂಸ್ಕೃತಿಕ ನಾಯಕರು ಎಂಬುದು ನನ್ನ ತಿಳುವಳಿಕೆ. ನನ್ನದೊಂದು ಕಥೆ ನಿಮ್ಮ ಮನಸ್ಸನ್ನು ಪ್ರಭಾವಿಸಿದ್ದರ ಬಗ್ಗೆ ನೀವು ಹೇಳಿದಾಗ ನಾನು ತುಂಬಾ ಹೆಮ್ಮೆಪಟ್ಟೆ. ಆದರೆ ಬಡವಾಗಿರುವ ನಮ್ಮ ಹುಲಿಯೂರುದುರ್ಗ ಕ್ಷೇತ್ರದ ಸಾಂಸ್ಕೃತಿಕ ಕೊರತೆಯನ್ನು ಮತ್ತು ಸಾಮಾಜಿಕ ಕಾರ್ಯಗಳನ್ನು ತುಂಬುವ ನಾಯಕ ಇನ್ನೂ ಯಾಕೆ ಬರಲಿಲ್ಲ ಎಂಬ ಪ್ರಶ್ನೆ ಮತ್ತು ವ್ಯಥೆ ನನಗಿದೆ. ನಮ್ಮ ಮಣ್ಣಿನಲ್ಲೇ ಹುಟ್ಟಿದ ನೀವಾದರೂ ಯಾಕೆ ಈ ಕ್ಷೇತ್ರದ ನಾಯಕತ್ವ ವಹಿಸಬಾರದು?

**- ಡಾ. ಕರಿಗೌಡ ಬೀಚನಹಳ್ಳಿ**

ರಾಜ್ಯದ ಮೂರು ವಿಧಾನಸಭಾ ಕ್ಷೇತ್ರಗಳಿಗೆ ನಡೆದ ಮರುಚುನಾವಣೆಯ ಫಲಿತಾಂಶ ಗಮನಿಸಿದರೆ, ಮತದಾರರು ರಾಜಕೀಯ ಪಕ್ಷಗಳಿಗಿಂತ ವ್ಯಕ್ತಿಗಳ ವರ್ಚಸ್ಸಿಗೆ ಹೆಚ್ಚು ಮನ್ನಣೆ ನೀಡಿದ್ದಾರೆ ಎಂಬುದು ಸ್ಪಷ್ಟ. ನಮ್ಮ ಜನ ಒಮ್ಮೊಮ್ಮೆ ಕೇವಲ ಆಸೆ - ಆಮಿಷಗಳು ಹಾಗೂ ಅಬ್ಬರದ ಪ್ರಚಾರಕ್ಕೆ ಮಾರು ಹೋಗದೆ ಸ್ಪರ್ಧಿಗಳ ಜನಪ್ರಿಯತೆ, ದಕ್ಷತೆ ಹಾಗೂ ಪ್ರಾಮಾಣಿಕತೆಯನ್ನು ಗುರ್ತಿಸುತ್ತಾರೆ ಎಂಬುದಕ್ಕೆ ಈ ಫಲಿತಾಂಶವೇ ಸಾಕ್ಷಿ.

ಈ ಚುನಾವಣೆ ರಾಮಯ್ಯನವರ ಪಾಲಿಗೆ ರಾಜಕೀಯ ಜೀವನದ ಅಳಿವು-ಉಳಿವಿನ ಅಗ್ನಿಪರೀಕ್ಷೆಯಾಗಿತ್ತು ! ಅಲ್ಲದೇ ತಮ್ಮ ರಾಜಕೀಯ ಪಟ್ಟು ಬಲ್ಲವರಾಗಿದ್ದ ಹಳೆಯ ಶಿಷ್ಯರೇ ಎದುರಾಳಿಗಳಾಗಿದ್ದರು. ಇಷ್ಟೆಲ್ಲಾ ವಿಚಿತ್ರಗಳ ನಡುವೆಯೂ ರಾಮಯ್ಯ ಗೆದ್ದಿರುವುದು ಅವರ ವೈಯಕ್ತಿಕ ಸಾಧನೆ. ಕಳೆದ ಚುನಾವಣೆಯಲ್ಲಿ ಸೋತು ರಾಜಕೀಯವಾಗಿ 'ತಬ್ಬಲಿ'ಯಾಗಿದ್ದ ರಾಮಯ್ಯನವರಿಗೆ ಅದೇ ಕ್ಷೇತ್ರದ ಜನ 'ಪುನರ್‌ಜನ್ಮ' ನೀಡಿದ್ದಾರೆ. ಅವರ ಹರಿತ ನಾಲಿಗೆಗೆ ತಕ್ಕ ವೇದಿಕೆ (ವಿಧಾನ ಸಭೆ) ಕಲ್ಪಿಸಿಕೊಟ್ಟಿದ್ದಾರೆ. ವೈಯಕ್ತಿಕವಾಗಿ ಈ ಕ್ಷೇತ್ರದಲ್ಲಿ ಜನಪ್ರಿಯರಾಗಿದ್ದ ವೈ.ಕೆ.ರಾಮಯ್ಯ ತಮ್ಮ ಯಶಸ್ಸಿಗಾಗಿ ಅಭಿನಂದನಾರ್ಹರು.

**- ಆರ್.ಪಿ.ಜಗದೀಶ್**
(ಸುಧಾ ವಾರಪತ್ರಿಕೆ)

ವೈ.ಕೆ.ಆರ್ ಅವರು ವಿಧಾನಸಭೆಯಲ್ಲಿ ಮಾತನಾಡಲು ಎದ್ದುನಿಂತರೆ, ಅಲ್ಲಿರತಕ್ಕಂಥ ಇನ್ನೂರ ಇಪ್ಪತ್ನಾಲ್ಕು ಜನಕ್ಕೂ, ಇವರು ಸತ್ಯವನ್ನೇ ಮಾತಾಡ್ತಾರೆ ಅಂತ ಖಾಯಂ ಆಗಿ ಗೊತ್ತಿರುತ್ತದೆ.

**- ಎಂ.ವಿ.ವೆಂಕಟಪ್ಪ**
ವಿಧಾನ ಸಭೆ ಅಧ್ಯಕ್ಷರು

ಕುಣಿಗಲ್‌ನಿಂದ ವಿಧಾನಸಭೆಗೆ ಮತ್ತೆ ಆಯ್ಕೆಯಾಗಿ ಬಂದಿರುವ ವೈ.ಕೆ. ರಾಮಯ್ಯನವರು ಸೋಮವಾರ ಸದನದಲ್ಲಿ ಮಾಡಿದ ಭಾಷಣ ಎಷ್ಟು ಚೇತೋಹಾರಿಯಾಗಿತ್ತೋ, ಅಷ್ಟೇ ಅರ್ಥಗರ್ಭಿತವೂ ಆಗಿತ್ತು. ವಿಧಾನ ಸಭೆಯಲ್ಲಿ ಇಂತಹ ಅಪ್ಪಟ ಭಾಷಣವನ್ನು ಕೇಳಿ ಕೆಲವು ವರ್ಷಗಳೇ ಕಳೆದಿದ್ದವೇನೋ ! ನಿಖರವಾದ ವಿಷಯ ಸಂಗ್ರಹಣೆ, ಪರಿಶುದ್ಧವಾದ ಭಾಷೆ ಮತ್ತು ಸಂಸದೀಯ ಸಂಪ್ರದಾಯಗಳ ಮೂಸೆಯಿಂದ ಪಾಕ ಇಳಿದು ಬಂದಂಥ ಅತ್ಯಂತ ಪರಿಣಾಮಕಾರಿ ಭಾಷಣ ಇದು. ಆದರೆ ಯಾರ ಮನಸ್ಸಿಗೂ ಘಾಸಿಯನುಂಟು ಮಾಡದ ವ್ಯಂಗ್ಯ ಇವು ಅಂದು ರಾಮಯ್ಯನವರ ಭಾಷಣದ ಹೆಗ್ಗಳಿಕೆಗಳು.

**- ವಿ.ಎನ್.ಸುಬ್ಬರಾವ್**
(ಕನ್ನಡ ಪ್ರಭ)

ವೈ.ಕೆ.ರಾಮಯ್ಯ ಅವರು ಅಪರೂಪದ ರಾಜಕಾರಣಿಯಾಗಿದ್ದು, ಕೃಷ್ಣ ಅವರ

ಸರ್ಕಾರದಲ್ಲಿ ಅವರು ಮಂತ್ರಿಯಾಗಲೇಬೇಕು. ಸರ್ಕಾರಕ್ಕೆ ಇವರ ಅನುಭವದ ಅವಶ್ಯಕತೆ ಇದೆ. **ತುಮಕೂರಿಗೆ ಹೇಮಾವತಿ ನದಿನೀರು ಪೂರೈಕೆಯಾಗಲು ರಾಮಯ್ಯ ಅವರೇ ಕಾರಣ.** ಅವರು ಜನಪರ ಕಾಳಜಿಯುಳ್ಳ ವ್ಯಕ್ತಿ. ಅವರ ಸೇವೆ ಕೇವಲ ತುಮಕೂರು ಜಿಲ್ಲೆಗೆ ಮಾತ್ರ ಸೀಮಿತವಾಗದೆ ರಾಜ್ಯದ ಜನರೆಲ್ಲರಿಗೆ ದೊರಕುವಂತಾಗಬೇಕು.

**- ಎಚ್.ವಿಶ್ವನಾಥ್**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು
ಕರ್ನಾಟಕ ಸರ್ಕಾರ. (27-5-2001)

ವೈ.ಕೆ.ಆರ್ ಅವರ ಆಲೋಚನೆ, ಮಾತು ಮತ್ತು ಕೃತಿಯಲ್ಲಿ ಹೊಂದಾಣಿಕೆ ಕಾಣುತ್ತಿದ್ದು, ಇಂದಿನ ಜಗತ್ತಿನಲ್ಲಿ ಈ ಗುಣ ಅಪರೂಪದ್ದು.

**- ಡಾ. ಎಸ್.ಎಸ್.ರಾಮೇಗೌಡ**
ಕುಲಪತಿ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ

ಇದು ಚಿನ್ನ ಕಣ್ರಯ್ಯಾ ! ಇದನ್ನ ಉಳಿಸಿಕೊಳ್ರಿ, ವೈ.ಕೆ.ರಾಮಯ್ಯನವರನ್ನು ಸೋಲಿಸಿದ್ರೆ ನೀವು ಮನುಷ್ಯರಾಗಲ್ಲ! ಅವರಿಗೆ ನನ್ನಂಥ ನೂರು ಜನರನ್ನು ಗೆಲ್ಲಿಸೋ ಶಕ್ತಿ ಇದೆ.

**- ಅಂಬರೀಷ್**
ಲೋಕಸಭಾ ಸದಸ್ಯ, ಮಂಡ್ಯ
(ಹುಲಿಯೂರುದುರ್ಗದ ಚುನಾವಣಾ ಪ್ರಚಾರದಲ್ಲಿ)

ನಾನು ಕೆಲವಾರು ವರ್ಷ ನಿಮ್ಮ ಜೊತೆ ಜೂನಿಯರ್ ಆಗಿ ಕೆಲಸ ಮಾಡಬೇಕು ಅವಕಾಶ ಕೊಡಿ.

**- ಪ್ರಕಾಶ್ ಹುಕ್ಕೇರಿ**
ವಿಧಾನಸಭಾ ಸದಸ್ಯರು

ಕರ್ನಾಟಕದ ಜನಪರ ಕಾಳಜಿಗಳ "ಹುಚ್ಚು ರಾಜಕಾರಣಿ" ಗಳ ಪಟ್ಟಿಯಲ್ಲಿ ವೈ.ಕೆ.ಆರ್ ಕೂಡ ಇದ್ದಾರೆ. ಜನಪರ ಹೋರಾಟದ ಹಿನ್ನೆಲೆಯಿಂದ ಬಂದಂಥ ವೈ.ಕೆ. ರಾಮಯ್ಯ ಅವರು ರಾಜ್ಯದ ಹಿತದೃಷ್ಟಿಯಿಂದ ಮತ್ತೆ ಅಧಿಕಾರಕ್ಕೆ ಬರುವುದು ಅತ್ಯಗತ್ಯ.

**- ರಮೇಶ್ ಕುಮಾರ್**
ವಿಧಾನ ಸಭೆಯ ಮಾಜಿ ಅಧ್ಯಕ್ಷರು
(ಪ್ರಜಾವಾಣಿ : 8-2-1999)

ಕುಣಿಗಲ್‌ನಲ್ಲಿ ಕೊನೆಗೂ ಕಾಳಗ ಮುಗಿದಿದೆ; ಒಬ್ಬ ವ್ಯಕ್ತಿ ಮತ್ತು ಒಂದು ಆಡಳಿತ ಪಕ್ಷದ ವಿರುದ್ಧ ನಡೆದ ಕಾಳಗದಲ್ಲಿ ವ್ಯಕ್ತಿಗೇ ಜಯ ದೊರೆತಿದೆ. ನಿರೀಕ್ಷೆಯಂತೆ ಮಾಜಿ ಸಚಿವ, ಸಮಾಜವಾದಿ ಜನತಾಪಕ್ಷದ ಅಭ್ಯರ್ಥಿ ವೈ.ಕೆ. ರಾಮಯ್ಯನವರು ಅಳಿವು-ಉಳಿವಿನ ಹೋರಾಟದಲ್ಲಿ ಗೆದ್ದಿದ್ದಾರೆ. ರಾಜಕೀಯ ಪುನರ್ಜನ್ಮ ಪಡೆದಿದ್ದಾರೆ.

ಹಿಂದೆ ಸಚಿವರಾಗಿ ಕುಣಿಗಲ್‌ನಲ್ಲಿ ಹಲವಾರು ಉತ್ತಮ ಕೆಲಸಗಳನ್ನು ಮಾಡಿರುವ ವೈ.ಕೆ. ರಾಮಯ್ಯನವರಿಗೆ ವೈಯಕ್ತಿಕ ವರ್ಚಸ್ಸಿದೆ. ಹಿರಿಯ ರಾಜಕಾರಣಿಯಾಗಿ ಹಲವಾರು ಉತ್ತಮ ಯೋಜನೆಗಳನ್ನು ಮಾಡಬಲ್ಲವರಾಗಿದ್ದಾರೆ. ಅವರ ಎದುರು ಕಾಂಗ್ರೆಸ್ ಆದಿಯಾಗಿ ನಿಂತ ಎಲ್ಲ ಪಕ್ಷದ ಅಭ್ಯರ್ಥಿಗಳೂ ತುಂಬಾ ಕಿರಿಯರು. ಕಾಂಗ್ರೆಸ್, ಜನತಾದಳ ಹಾಗೂ ಬಿ.ಜೆ.ಪಿಯ ಮೂವರು ಅಭ್ಯರ್ಥಿಗಳೂ ಕಿರಿಯರು. ಹೀಗಾಗಿ ಯಾರಿಗೆ ಮತ ಹಾಕಬೇಕೆಂಬ ಪ್ರಶ್ನೆ ಬಂದಾಗ, ಮತದಾರ ವೈ.ಕೆ. ರಾಮಯ್ಯನವರನ್ನು ತಕ್ಕಡಿಯ ಒಂದು ತಟ್ಟೆಗೆ, ಇತರ ಮೂವರನ್ನೂ ಒಂದು ತಟ್ಟೆಗೆ ಹಾಕಿ ತೂಗಿ ನೋಡುವಂತಾಯಿತು! **ವೈ.ಕೆ. ರಾಮಯ್ಯನವರ ಮುಂದೆ ಉಳಿದ ಅಭ್ಯರ್ಥಿಗಳು ತರಗೆಲೆಗಳಂತೆ ಉದುರಿ ಹೋದರು.**



**– ಗಂಗಾಧರ ಮೊದಲಿಯಾರ್**

(ಪ್ರಜಾವಾಣಿ)

ವೈ.ಕೆ. ರಾಮಯ್ಯ ಅವರು ಅಪರೂಪದ ರಾಜಕಾರಣಿ. ಸಕ್ರಿಯ ರಾಜಕಾರಣದ ಮಧ್ಯೆಯೂ ರಾಜಕೀಯೇತರವಾಗಿ ಸಾಹಿತ್ಯ ಮತ್ತಿತರ ಚಟುವಟಿಕೆಗಳಲ್ಲಿ ತಲ್ಲೀನರಾಗಿ ಅಧ್ಯಯನಶೀಲತೆ ಬೆಳಸಿಕೊಂಡಿದ್ದ ಕೆಂಗಲ್ ಹನುಮಂತಯ್ಯ, ಎಸ್. ನಿಜಲಿಂಗಪ್ಪನವರಂಥ ವಿರಳ ರಾಜಕಾರಣಿಗಳ ಸಾಲಿನಲ್ಲಿ ವೈ.ಕೆ.ಆರ್ ಅವರನ್ನು ಗುರುತಿಸಬಹುದು. ನಮ್ಮಲ್ಲಿ ಸುಸಂಸ್ಕೃತ ರಾಜಕಾರಣಿಗಳ ಪರಂಪರೆಯೇ ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ವೈ.ಕೆ.ಆರ್ ಅವರ ಅನುಭವ ಎಲ್ಲರಿಗೂ ದೊರಕಬೇಕು. ವೈ.ಕೆ.ಆರ್ ಅವರಲ್ಲಿ ನಿಷ್ಠುರತನ, ಮುಂಗೋಪ, ಛಲ ಇರುವುದು ತಪ್ಪಲ್ಲ! ಭ್ರಷ್ಟಾಚಾರ ತಡೆಯಲು ಇವುಗಳ ಅಗತ್ಯತೆ ಅವರಿಗಿರಬಹುದು!

**– ದೇಜಗೌ**

(27.5.2001)

ನಮ್ಮ ದೇಶದಲ್ಲಿ ಎಲ್ಲಾ ರಾಜಕಾರಣಿಗಳು ಭಾಷಣದಲ್ಲಿ ಪ್ರಾಮಾಣಿಕರೇ ಆಗಿದ್ದಾರೆ; ಆದರೆ ಜನರಿಗೆ ಗೊತ್ತು, ಭ್ರಷ್ಟಾಚಾರ ಮಾಡದ ರಾಜಕಾರಣಿಗಳು ಮಾತ್ರ ಯಾರೂ ಇಲ್ಲ. ಅತ್ಯಂತ ಕಡಿಮೆ ಪ್ರಮಾಣದಲ್ಲಿ ಎಲ್ಲೋ ಒಬ್ಬಿಬ್ಬರು ಪ್ರಾಮಾಣಿಕ ರಾಜಕಾರಣಿಗಳು ಇದ್ದರೂ ಇವರಿಗೆ ಬಹುಶಃ ''ಜನಸೇವೆ'' ಮಾಡುವ ಉಳಿದ ಭ್ರಷ್ಟ ರಾಜಕಾರಣಿಗಳಿಂದ ಯಾವ ಅವಕಾಶವೂ ದೊರೆಯುತ್ತಿಲ್ಲ.

ನಮ್ಮ ರಾಜಕಾರಣಿಗಳು ಸಭೆಯಲ್ಲಿ ಮೈಕ್ ಮುಂದೆ ನಿಂತು ನಾನು ಪೈಸೆ ದುಡ್ಡು ತಿಂದಿಲ್ಲ,

ಹಣ ಹಂಚಿಲ್ಲ ಎಂದೆಲ್ಲ ಘೋಷಣೆ ಮಾಡುವ ಬದಲು, ಕಾನೂನು ಪ್ರಕಾರ ಸ್ಟಾಂಪ್ ಪೇಪರಿನಲ್ಲಿ ತಮ್ಮ ಆಸ್ತಿ ಘೋಷಣೆ ಮಾಡಿ ಹಿಂದಿನ ಆಸ್ತಿಗೂ ಈಗಿನ ಆಸ್ತಿಗೂ ಹೋಲಿಸಲು ಜನರಿಗೆ ಅವಕಾಶ ಮಾಡಿಕೊಡಲಿ.

ಕರ್ನಾಟಕದಲ್ಲಿ ಜನತಾ ಸರಕಾರ ಬಂದ ಹೊಸದರಲ್ಲಿ ಪ್ರತಿಯೊಬ್ಬ ಮಂತ್ರಿಗಳು, ಶಾಸಕರು, ಅಧಿಕಾರಿಗಳು ತಮ್ಮ ಆಸ್ತಿಯನ್ನು ಕಾಲ ಕಾಲಕ್ಕೆ ಘೋಷಣೆ ಮಾಡುತ್ತಾರೆಂದು ಜನರಿಗೆ ತಿಳಿಸಲಾಗಿತ್ತು. ನಂತರ ಈ ಬಗ್ಗೆ ಸಾಕಷ್ಟು ಪ್ರಚಾರವನ್ನೂ ಪಡೆಯಲಾಯಿತು. ಆದರೆ ಆಸ್ತಿಯನ್ನು ಘೋಷಿಸಿದ ಒಬ್ಬನೇ ಒಬ್ಬ ಜನತಾ(ದಳ) ಮಂತ್ರಿಯಾಗಲೀ, ಶಾಸಕನಾಗಲೀ ಸಿಗಲಿಲ್ಲ. ಮಂತ್ರಿಮಂಡಳ ಬಿಟ್ಟಮೇಲೆ, ಜನತಾದಳ ತೊರೆದು ಜನತಾಪಕ್ಷದಲ್ಲಿ ಉಳಿದುಕೊಂಡ ವೈ.ಕೆ. ರಾಮಯ್ಯ ಮಾತ್ರ ತಮ್ಮ ಆಸ್ತಿಯನ್ನು ಘೋಷಿಸಿಕೊಂಡಿದ್ದಾರೆ. ಇದೊಂದು ಅನುಕರಣೀಯ ಕೆಲಸ.

**-ಜನ ಮಾಧ್ಯಮ**

ಸಂಪಾದಕೀಯ (12-5-1989)

ತರಕಾರಿ ಮತ್ತು ಹಣ್ಣುಗಳ ಬೆಳೆಗಾರರಿಗೆ ಯೋಗ್ಯ ಬೆಲೆ ಸಿಗುತ್ತಿಲ್ಲ. ಅವುಗಳ ಬೆಲೆ ಬಳಕೆದಾರರ ಕೈಗೆ ಎಟುಕುವಂತೆಯೂ ಇಲ್ಲ ಮಧ್ಯವರ್ತಿಗಳು ಇಡೀ ಮಾರುಕಟ್ಟೆಯನ್ನು ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಂಡು ಕೃಷಿಕ ಹಾಗೂ ಬಳಕೆದಾರ ಇವರಿಬ್ಬರನ್ನೂ ಶೋಷಿಸುತ್ತಿದ್ದಾರೆ. ಮಧ್ಯವರ್ತಿಗಳು ಎಷ್ಟು ಪ್ರಬಲರಾಗಿ ಬೆಳೆದಿದ್ದಾರೆಂದರೆ, ಇತ್ತೀಚೆಗೆ ಅವರು ಸರಕಾರದ ವಿರುದ್ಧ ಸಡ್ಡು ಹೊಡೆದುನಿಂತರು. ನಿಯಂತ್ರಿತ ಮಾರುಕಟ್ಟೆ ನಿಯಮಗಳನ್ನು ಅಧಿಕಾರಿಗಳು ಕಟ್ಟುನಿಟ್ಟಾಗಿ ಜಾರಿಗೆ ತಂದು ಅವ್ಯವಹಾರಗಳನ್ನು ನಿಯಂತ್ರಿಸಲು ಯತ್ನಿಸಿದಾಗ ಮಧ್ಯವರ್ತಿಗಳು ಹಣ್ಣು ಮತ್ತು ತರಕಾರಿಗಳ ವ್ಯಾಪಾರವನ್ನು ನಿಲ್ಲಿಸಿ ಮುಷ್ಕರ ಹೂಡಿದರು. ಆದರೆ ಆಗ ಸಹಕಾರ ಸಚಿವರಾಗಿದ್ದ ಜಾಲಪ್ಪ ಅವರ ಬಿಗಿ ನಿಲುವು, ಮುಷ್ಕರ ಹೂಡಿದ ಸಗಟು ವ್ಯಾಪಾರಿಗಳನ್ನು ಧೃತಿಗೆಡಿಸಿತು. ತೋಟಗಾರಿಕೆ ಬೆಳೆಗಾರರ ಸಹಕಾರ ಸಂಘ, ಬೆಂಗಳೂರು ಪೇಟೆಗೆ ಬೆಳೆಗಾರರು ತಂದ ಎಲ್ಲ ಬೆಳೆಯನ್ನೂ ಕೊಂಡಿತು. ಅದರ ಮಾರಾಟಕ್ಕೆ ವಿಶೇಷ ವ್ಯವಸ್ಥೆ ಮಾಡುವ ಮೂಲಕ ಬೆಳೆಗಾರರ ಹಾಗೂ ಬಳಕೆದಾರರ ಹಿತ ಕಾಪಾಡಿತು. ಬೆಂಗಳೂರಿನಲ್ಲಿ ನಡೆದ ಪ್ರಯೋಗ ರಾಜ್ಯಾದ್ಯಂತ ಏಕೆ ನಡೆಯಬಾರದು? **ಬೆಳೆಗಾರನಿಗೆ ಅವರ ಬೆಳೆಗೆ, ಶ್ರಮಕ್ಕೆ ಯೋಗ್ಯ ಬೆಲೆ ದೊರೆಯಬೇಕು. ಈ ಗುರಿಸಾಧನೆಗಾಗಿ ಹಾಲು ಉತ್ಪಾದಕರ ಒಕ್ಕೂಟದ ಮಾದರಿಯಲ್ಲಿ ರಾಜ್ಯಮಟ್ಟದಲ್ಲಿ ಹಣ್ಣು ತರಕಾರಿ ಮಾರಾಟ ಮಂಡಲಿಯನ್ನು ರೂಪಿಸುವ ಆಶಯವನ್ನು ತೋಟಗಾರಿಕೆ ಸಚಿವ ವೈ.ಕೆ. ರಾಮಯ್ಯ ಅವರು ವ್ಯಕ್ತಪಡಿಸಿದ್ದಾರೆ.**

**- ಪ್ರಜಾವಾಣಿ**

ಸಂಪಾದಕೀಯ (14-5-1989)

ಅಪರೂಪದ ರಾಜಕಾರಣಿಯಾಗಿರುವ ಶ್ರೀ ವೈ.ಕೆ.ಆರ್ ಅತ್ಯಂತ ಪ್ರಾಮಾಣಿಕ ಮನುಷ್ಯ. ಇಲ್ಲಿ ಬೆಳಗಾವಿಯಲ್ಲಿ ಹುಡ್ಕೋ ಕಾಲನಿಯ ಜನ ಅವರ ಫೋಟೋ ಇಟ್ಟು ಪೂಜಿಸುವಷ್ಟರಮಟ್ಟಿಗೆ ಕೆಲಸ ಮಾಡಿದ್ದಾರೆ. ಹುಡ್ಕೋ ಕಾಲೋನಿಯಲ್ಲಿ ಅನ್ಯಾಯವಾದಾಗ ವೈ.ಕೆ.ಆರ್ ತೆಗೆದುಕೊಂಡ ದಿಟ್ಟ ನಿಲುವು ಅವರ ಜನಪರ ಧೋರಣೆಗೆ ಕನ್ನಡಿಯಾಗಿದೆ. ಭ್ರಷ್ಟ ಅಧಿಕಾರಿಗಳನ್ನು ಅವರು ದಂಡಿಸಿದ ರೀತಿ ಅವರ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ.

ಅವರ ಸಂಪರ್ಕ ನನಗೆ ಬಂದದ್ದೇ, ಭಾಗ್ಯವೆಂದು ಭಾವಿಸಿದ್ದೇನೆ.

**– ಡಾ. ಸರಜೂ ಕಾಟ್ಕರ್** , ಬೆಳಗಾವಿ

ಶ್ರೀ ವೈ.ಕೆ. ಆರ್ ಅವರ ಒಳಗೆ ಬಡತನದಿಂದ ಮೇಲೆದ್ದು ಬಂದ ಛಲಗಾರ, ಕೃಷಿಕ, ಗ್ರಾಮೀಣ ಬದುಕಿನ ಅನುಭವಿ, ವಿದ್ಯಾವಂತ, ನ್ಯಾಯವಾದಿ, ಅನ್ಯಾಯ ಸಹಿಸದ ಬಂಡಾಯಗಾರ, ದಕ್ಷ ಆಡಳಿತಗಾರ, ಸಾಹಿತಿ, ವಿಚಾರವಾದಿ, ತರ್ಕಬದ್ಧ ನಿಷ್ಠುರ ಮಾತುಗಾರ, ಓದುಗ ಮುಂತಾದವರೂ ಒಂದೇ ವ್ಯಕ್ತಿತ್ವದಲ್ಲಿ ಏಕೀಭವಿಸಿದ್ದಾರೆ.

ಮಿತಿಮೀರಿದ ದೌರ್ಬಲ್ಯಗಳ ಮತ್ತು ಕರ್ತವ್ಯಚ್ಯುತಿಯ ಸೋಮಾರಿಗಳ ಬಗೆಗೆ ಇವರ ಸಿಟ್ಟು. ಇದ್ದುದ್ದರಲ್ಲಿ ಉತ್ತಮವಾಗಿ ಸೇವೆಸಲ್ಲಿಸುವ ಸರ್ಕಾರಿ ನೌಕರರ ಬಗೆಗೆ ಒಳಗೊಳಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಅವರ ರಾಜಕಾರಣ ಪುಡಾರಿಯ ಹಂತವನ್ನು ಮೀರಿದ್ದು! ಎಲ್ಲರನ್ನೂ ಮೆಚ್ಚಿಸುವ ಜಾಯಮಾನ ಇವರದ್ದಲ್ಲ! ಹೊಗಳಿಕೆಗೆ ಹಿಗ್ಗುವುದಿಲ್ಲ; ತೆಗಳಿಗೆಕೆ ಕುಗ್ಗುವುದಿಲ್ಲ!

ಇವರ ದಕ್ಷತೆ ವ್ಯರ್ಥವಾಗದಂತೆ, ಇವರಿಗೆ ಅಧಿಕಾರ ಸಿಕ್ಕರೆ ನಾಡಿಗೆ, ಸಮಾಜಕ್ಕೆ ಏನಾದರೂ ಒಳ್ಳೆಯದಾಗುತ್ತದೆ. ಇದು ನನ್ನಂಥವರ ಅಭಿಲಾಷೆ. ರಾಜಕೀಯದಲ್ಲಿ ಇವರದ್ದು ಬಂದು ವಿಶಿಷ್ಟ ಛಾಪು.

**– ಎಂ. ಆಂಜನೇಯ, ತುಮಕೂರು**

**ಸಿಡಿಲು – ಗುಡುಗು – ಕೋಲ್ಮಿಂಚುಗಳ ಸಮ್ಮಿಶ್ರ ರೂಪ**

**ಕತ್ತಲು ಕವಿದಿರುವೆಡೆಕೈ ದೀವಿಗೆ ಹಚ್ಚುವ ಭೂಪ**

**ನಡೆ–ನುಡಿಯಲ್ಲಿ ಅವಿನಾಭಾವ ಬಾಂಧವ್ಯದ ದೀಪ**

**ಸೋಲು – ಗೆಲುವಿನಲ್ಲಿ ಸ್ಥಿತಪ್ರಜ್ಞ ಭಾವದ ಸ್ವರೂಪ**

ಪರಿಪಕ್ವ ರಾಜಕಾರಣಿ ವೈ.ಕೆ. ರಾಮಯ್ಯನವರು ರಾಷ್ಟ್ರಕವಿ ಕುವೆಂಪು ಅವರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದಾರೆ. ವಿಚಾರಕ್ರಾಂತಿಗೆ ಸದಾ ಸ್ಪಂದಿಸುವ ಅವರ ಮನೋಧರ್ಮ ಬೆರಗಾಗಿಸುವಂತಹದ್ದು.

ಅವರ ಮಾಗಿದ ಬದುಕಿನ ರಾಜಕೀಯ ಹೊತ್ತಗೆಯ ಪುಟ-ಪುಟಗಳನ್ನು ತಿರುವಿ ನೋಡಿದಾಗ, ಅವರ ಅಂತರಂಗದಲ್ಲಿ ಕ್ರಾಂತಿಕಾರಿಯೂ ಇದ್ದಾನೆ; ಶಾಂತಿ ಮಂತ್ರದ ಗಾಂಧಿಯೂ ಇದ್ದಾನೆ. ಈ ರಾಜಕೀಯ ಮುತ್ಸುದ್ದಿಯ ಸೇವೆ ತುಮಕೂರು ಜಿಲ್ಲೆಗೆ, ರಾಜ್ಯಕ್ಕೆ ಅತ್ಯವಶ್ಯವಾಗಿದೆ.

**-ಕವಿತಾ ಕೃಷ್ಣ**, ತುಮಕೂರು

... ವೈ.ಕೆ.ಆರ್ ತಮ್ಮ ಜೀವಿತದುದ್ದಕ್ಕೂ ನಿರ್ಧಾಕ್ಷಿಣ್ಯ ಪ್ರವೃತ್ತಿಯಿಂದ ಬದುಕುತ್ತಿರುವವರು. ಅವರ ಕ್ಷೇತ್ರದಲ್ಲಿ **ವನಸಂವರ್ಧನಾ ಟ್ರಸ್ಟ್** ವತಿಯಿಂದ ಗಿಡ- ಮರಗಳನ್ನು ಹಾಕಿಸಲು ಮುಂದೆ ಬಂದ ಅಪರೂಪದ ರಾಜಕಾರಣಿ. ವೈ.ಕೆ.ಆರ್ ಅವರಂಥ ನಾಯಕರನ್ನು ಪಡೆದ ಹುಲಿಯೂರುದುರ್ಗ ಕ್ಷೇತ್ರದ ಜನತೆ ಪುಣ್ಯವಂತರು.

**- ಬಾಲಗಂಗಾಧರನಾಥ ಸ್ವಾಮೀಜಿ**
ಆದಿಚುಂಚನಗಿರಿ ಮಠ

.... ನಾನು ಇಲ್ಲಿಗೆ ಬಂದ ಹೊಸತು. ದಿನವೊಂದಕ್ಕೆ ಸುಮಾರು ಮುನ್ನೂರು ಲಾರಿಗಳಷ್ಟು ಶಿಂಷಾ ನದಿಯ ಮರಳನ್ನು ಬೆಂಗಳೂರಿಗೆ ಸಾಗಿಸುತ್ತಿದ್ದರು. ಆಗ ವೈ.ಕೆ.ಆರ್ ಅವರು ನನ್ನನ್ನು ಕರೆದು **ಮರ ಕಡಿಯುವವರಿಗೆ ಮತ್ತು ಮರಳು ಸಾಗಿಸುವವರಿಗೆ ನನ್ನಲ್ಲಿ ಕ್ಷಮೆ ಇಲ್ಲ! ಹೇಗಾದರೂ ಮಾಡಿ ಮರಳು ಸಾಗಿಸೋದನ್ನ ತಡೆಯಿರಿ; ಅವರು ಎಷ್ಟೇ ದೊಡ್ಡವರಾಗಿರಲಿ ಕೇರ್ ಮಾಡಬೇಡಿ** ಅಂತ ಹೇಳಿದರು. ನಾನು ಅದರಂತೆ ಮಾಡಿದೆ. ಇವತ್ತು ಶಿಂಷಾದಿಂದ ಒಂದು ಗಾಡಿ ಮರಳೂ ಆಚೆ ಹೋಗುತ್ತಿಲ್ಲ. ನಾನು ವೈ.ಕೆ.ಆರ್ ಅವರ ಪ್ರಾಮಾಣಿಕತೆಯಿಂದ ಸಾಕಷ್ಟು ಕಲಿತಿದ್ದೀನಿ. ಜನರಿಗಾಗಿ ಕೆಲಸ ಮಾಡೋದರಲ್ಲಿ ಅವರನ್ನ ಬಿಟ್ಟರೆ ಇನ್ನೊಬ್ಬರು ಸಿಗುವುದು ಕಷ್ಟ.

**- ಟಿ.ಆರ್. ಕೃಷ್ಣಮೂರ್ತಿ, ಕುಣಿಗಲ್**

... ಲೋಹಿಯಾವಾದ ನಿಮಗಿಷ್ಟ. ಜಯಪ್ರಕಾಶ್ ನಾರಾಯಣ್ ನಿಮ್ಮ ಆದರ್ಶ. ಶಾಂತವೇರಿ ಗೋಪಾಲಗೌಡರ ಸಮಾಜವಾದಿ ಸಿದ್ಧಾಂತ ನಿಮ್ಮ ಅಧ್ಯಯನ. ತತ್ವನಿಷ್ಟ ರಾಜಕಾರಣ ನಿಮ್ಮ ಕ್ಷಣ ಕ್ಷಣದ ಇಂಗಿತ. ನೇರ ನಡೆನುಡಿಯ ನಿಮ್ಮ ಸಾಚಾತನ, ಕನ್ನಡ ಜನ ಇಷ್ಟಪಟ್ಟ ಇತ್ಯಾತ್ಮಕ ಸತ್ಯ. ಕತ್ತಲೆಯ ಕೂಪದಲ್ಲಿದ್ದ ಕುಣಿಗಲ್ ತಾಲ್ಲೂಕಿನ ಹಳ್ಳಿ-ಹಳ್ಳಿಗೆ ಬೆಳಕು ಮೂಡಿಸಿದ ಮಹನೀಯರು ನೀವು. ನಿಮ್ಮನ್ನು ಬೆಂಬಲಿಸುವುದರಲ್ಲಿದೆ ನಮ್ಮ ಹಳ್ಳಿಗಳ ಉಳಿವು.

ರೈತರ ಪಾಲಿನ ರೇಷ್ಮೆ ರಾಜರೆ, ತುಮಕೂರು ಜಿಲ್ಲೆಗೆ ಹೇಮಾವತಿ ಹರಿಸಿದ ಭಗೀರಥರೆ; ನಮ್ಮ ನಾಡಿನ ಜನಕ್ಕೆ ಸದಾ ಒಳ್ಳೆಯದಾಗಬೇಕೆಂದು ಸದಾ ಹಂಬಲಿಸುವ ಶುದ್ಧಹಸ್ತದ ರಾಜಕಾರಣಿ ನೀವು.

ವಿಧಾನ ಸಭೆಯ ಘನತೆಯನ್ನು ಹೆಚ್ಚಿಸಿದವರು ನೀವು. ನಿಮ್ಮ ಚಾಟ ಪಟನಂಥ ಮಾತಿನಲ್ಲೂ ಕರ್ನಾಟಕದ ಜನಸಾಮಾನ್ಯರ ಬದುಕು ಹಸನಾಗಬೇಕೆಂಬ ಅರ್ಹನಿಶಿ ಅಭೀಪ್ಸೆಯೇ ಅಡಗಿದೆ. ನಿಮ್ಮ ಒಳ್ಳೆಯ ಕಾರ್ಯಗಳು ಒಂದೇ ? ಎರಡೇ ? ನೀವು ಬಡವರ ಬಗೆಗೆ ಚಿಂತಿಸದ ದಿನವಿಲ್ಲ! ಕ್ಷಣವಿಲ್ಲ! ಈ ನಾಡಿನ ಲಕ್ಷೋಪಲಕ್ಷ ಮಣ್ಣಿನ ಮಕ್ಕಳ ಬಗೆಗೆ ಅಪಾರ ಕಾಳಜಿ ವಹಿಸಿದ ನಿಮಗೆ ಇದೋ ಕೋಟಿ, ಕೋಟಿ ವಂದನೆಗಳು. ನೀವು ನೂರುಕಾಲ ಬಾಳಿ ಬದುಕುವಂತಾಲಿ.

**– ವೈ ಕೆ ಆರ್. ಅಭಿಮಾನಿ ಬಳಗ**
ಬೆಂಗಳೂರು (5-5-2000)

ವೈ ಕೆ ರಾಮಯ್ಯನವರು ತುಮಕೂರು ಜಿಲ್ಲೆ ಕಂಡ ಕ್ರಿಯಾಶೀಲ ನಡವಳಿಕೆವುಳ್ಳ ಸಜ್ಜನ ರಾಜಕಾರಣಿ. ದಕ್ಷತೆ, ಉನ್ನತ ಚಿಂತನೆಯುಳ್ಳ ಪರಿಸರ ಪ್ರೇಮಿಯಾಗಿ, ಬುದ್ದಿಜೀವಿಗಳ ಒಡನಾಡಿಯಾಗಿ, ರೈತಕಾರ್ಮಿಕರ ಹಿತಕ್ಕಾಗಿ ಹೋರಾಡುತ್ತಾ ರಾಜ್ಯದ ಜನಮನದಲ್ಲಿ ಸದಾ ಹಸಿರಾಗಿರುವ ವೈ.ಕೆ. ರಾಮಯ್ಯನವರು ಈ ನಾಡುಕಂಡ ಅಪರೂಪದ ಹೆಂಗರುಳುಳ್ಳ ಬಡವರ ಒಡನಾಡಿ. ಹೇಮಾವತಿ ಜಲಾಶಯದ ನೀರನ್ನು ತುಮಕೂರು ಜಿಲ್ಲೆಗೆ ಹರಿಸಲು, ಕುಣಿಗಲ್ ದೊಡ್ಡಕೆರೆಯಿಂದ ಹಲವು ಕೆರೆಗಳಿಗೆ ಫೀಡರಚಾನಲ್ ರೂಪಿಸಿ ನೀರು ಹರಿಸಿದವರು, ಮಾರ್ಕೋನಹಳ್ಳಿ ಜಲಾಶಯಕ್ಕಾಗಿ ನೀರಾವರಿ ಕಲ್ಪಿಸಲು ಭಗೀರಥ ಪ್ರಯತ್ನ ನಡೆಸಿ ಯಶಸ್ವಿಯಾದ ಕ್ರೀಯಾಶೀಲ ರಾಜಕಾರಣಿ.

1984ರ ವರ್ಷ ನಾನು ಕೋಲಾರ ಜಿಲ್ಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿದ್ದಾಗ ಇವರ ನಿಕಟ ಪರಿಚಯವಾಗಿ, ನಂತರ ನಮ್ಮ ಪಕ್ಕದ ಗ್ರಾಮ ಮಾಗಡಿ ತಾಲ್ಲೂಕಿನ ಹನುಮಂತಪುರ, ತೂರೆಪಾಳ್ಯ ಗ್ರಾಮದಲ್ಲಿ ವಿದ್ಯುತ್‌ಸಂಪರ್ಕ ಕಾರ್ಯಕ್ರಮ ಹಾಗೂ ಗ್ರಾಮೀಣ ಜನರ ಕುಂದುಕೊರತೆ ವಿಚಾರ ಸಂಕಿರಣ ಕಾರ್ಯಕ್ರಮಕ್ಕೆ ವೈ ಕೆ ಆರ್ ಅವರು ಬಂದರು. ಮಾಗಡಿ ತಾಲ್ಲೂಕು ಹಿಂದುಳಿದಿರುವಿಕೆಗೆ ಹಲವು ಪರಿಹಾರ ಸೂಚಿಸಿ, ಸ್ಥಳದಲ್ಲೇ ರೇಷ್ಮೆ ಬೆಳೆಗಾರರಿಗೆ ಜಿತ್ತನೆಗೆ ಹೋಗದ ರೀಲಿಂಗ್‌ಗೆ ಹೋಗುವ ರೇಷ್ಮೆ ಗೂಡಿಗೆ ರೂ.30, ಬೋನಸ್ ಹೆಚ್ಚಿಸಲು ಆದೇಶ ನೀಡಿದ ಕೀರ್ತಿ ಇವರದು.

**– ಎನ್. ಕೃಷ್ಣಪ್ಪ, ಕೋಡಿಪಾಳ್ಯ**

ಕುಣಿಕಲ್ ತಾಲ್ಲೂಕಿನ ಹಿಂದುಳಿದ ಗ್ರಾಮವಾದ ಕೊಡವತ್ತಿ ಈ ಬಾರಿ ರಾಜ್ಯದಲ್ಲೇ ವಿಶಿಷ್ಟ ಸಾಧನೆ ಮಾಡಿದೆ. ಇಲ್ಲಿನ ಸರ್ಕಾರಿ ಪ್ರೌಢಶಾಲೆ ಎರಡು ವರ್ಷಗಳ ಹಿಂದೆ ಶೂನ್ಯ ಫಲಿತಾಂಶ ಸಾಧಿಸಿದ್ದರೆ, ಈ ಬಾರಿ ಶೇಕಡ 100ರಷ್ಟು ಫಲಿತಾಂಶ ಪಡೆದು ಹಲವರು ಹುಬ್ಬೇರಿಸಲು ಕಾರಣವಾಗಿದೆ. ಅಂತೆಯೇ ಇಡೀ ತಾಲ್ಲೂಕಿನಲ್ಲಿ ಕಳೆದ ವರ್ಷ ಶೇಕಡ 36ರಷ್ಟಿದ್ದ ಫಲಿತಾಂಶ ಈ

ಬಾರಿ 68ಕ್ಕೇರಿದೆ. ಮುಂದಿನ ವರ್ಷದ ಗುರಿ ಶೇಕಡ 80 ಎನ್ನುತ್ತಾರೆ ಹುಲಿಯೂರುದುರ್ಗ ಶಾಸಕ ವೈ.ಕೆ.ರಾಮಯ್ಯ.

**ಕೇವಲ ರಾಜಕೀಯ ಅಥವಾ ಅಭಿವೃದ್ಧಿ ಕಾರ್ಯಗಳಷ್ಟೇ ಅಲ್ಲದೆ ಜನತೆಯ ಗುಣಾತ್ಮಕ ಬದಲಾವಣೆಗೆ ಪ್ರೇರಣೆ ನೀಡುವುದೂ ಜನಪ್ರತಿನಿಧಿಗಳ ಕರ್ತವ್ಯ ಎಂದು ರಾಜಕೀಯ ದೆಸೆಗೆ ಹೊಸವ್ಯಾಖ್ಯೆ ನೀಡಿ, ಸಾಧಿಸಿ ತೋರಿಸಿದ ಕೀರ್ತಿ ರಾಮಯ್ಯನವರಿಗೆ ಸಲ್ಲುತ್ತದೆ.**

ತಮ್ಮ ಕನಸಿನ ಮೊದಲ ಹಂತವಾಗಿ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಎಲ್ಲ ಎಸ್.ಎಸ್.ಎಲ್.ಸಿ ಮತ್ತು ಪಿಯುಸಿ ವಿದ್ಯಾರ್ಥಿಗಳ ಪೋಷಕರಿಗೆ ವೈಯಕ್ತಿಕವಾಗಿ ಮೂರು ಸಾವಿರಕ್ಕೂ ಹೆಚ್ಚು ಪತ್ರ ಬರೆದು, ಓದಿನ ಬಗ್ಗೆ ನಿಗಾ ಇಡುವಂತೆ ಜಾಗೃತಿ ಮೂಡಿಸಿದರು. ಜೊತೆಗೆ ಶಿಕ್ಷಕರು ಮತ್ತು ಸಂಬಂಧಪಟ್ಟ ಅಧಿಕಾರಿಗಳ ಸಭೆಯನ್ನು ನಿಯತವಾಗಿ ನಡೆಸಿದ್ದು, ವಿದ್ಯಾರ್ಥಿಗಳಿಗೆ ಗುಂಪು ಚರ್ಚೆ ಏರ್ಪಡಿಸಿದ್ದು, ಶಿಕ್ಷಕರು ಪ್ರಾಮಾಣಿಕವಾಗಿ ಬೋಧಿಸುವಂತೆ ಸೂಚಿಸಿದರ ಫಲ ಶೂನ್ಯದಿಂದ ಸಾಧನೆ. ರಾಜ್ಯದ ಪ್ರತಿಯೊಬ್ಬ ಶಾಸಕರಿಗೂ ಇದು ಮಾದರಿಯಾದರೆ ಸಾಮಾಜಿಕ ಬದಲಾವಣೆಗೆ ಪ್ರೇರಣೆಯಾದೀತು.

○

**(ಪ್ರಜಾವಾಣಿ : 21-6-2002)**

ಕರ್ನಾಟಕದ ರಾಜಕೀಯ ರಂಗದಲ್ಲಿ ಜನಮನದ ಸಂಕಷ್ಟಗಳಿಗೆ ಮಿಡಿಯುವ ದಿಟ್ಟ ಜನಪ್ರತಿನಿಧಿ ಎಂದೇ ಹೆಸರಾಗಿರುವ ಎಲೆಕಡಕಲು ಕಂಬೇಗೌಡ ರಾಮಯ್ಯನವರು, ನಾಡಿನ ಭವಿಷ್ಯದ ಬಗ್ಗೆ ಖಚಿತವಾದ ಮುನ್ನೋಟವನ್ನು ಇಟ್ಟುಕೊಂಡಿರುವ ಮಹಾನ್ ಚೇತನ. ಅರವತ್ತು ವರ್ಷಗಳನ್ನು ಪೂರೈಸುತ್ತಿರುವ ಸಂದರ್ಭದಲ್ಲಿ ಶುಭಕೋರುವ ಸಮಾರಂಭವನ್ನು ಹಮ್ಮಿಕೊಂಡಿರುವುದು ಸಂದರ್ಭೋಚಿತವಾಗಿದೆ.

**- ಹೆಚ್.ಸಿ. ಶ್ರೀಕಂಠಯ್ಯ**<br>
ಕಂದಾಯ ಸಚಿವರು,<br>
ಕರ್ನಾಟಕ ಸರ್ಕಾರ

ಶ್ರೀಯುತ ವೈ.ಕೆ. ರಾಮಯ್ಯನವರ ಬಗ್ಗೆ ಯೋಚಿಸಿದಾಗಲೆಲ್ಲಾ ನನಗೆ ನನ್ನ ಮೆಚ್ಚಿನ ಗುರುಗಳೂ, ಪ್ರಖ್ಯಾತ ಕವಿಗಳೂ ಆಗಿದ್ದ ವಿ. ಸೀತಾರಾಮಯ್ಯನವರ ಪದ್ಯದ ಸಾಲುಗಳು ನೆನಪಾಗುತ್ತವೆ :

**ಮಣಿಯದಿಹ ಮನವೊಂದು, ಸಾಧಿಸುವ ಹಟವೊಂದು**
**ನಿಜದ ನೇರಕೆ ನಡೆವ ನಿಶ್ಚಲತೆಯೊಂದು**
**ಅನ್ಯಾಯಕೆಂದೆಂದು ತಲೆಬಾಗದೆಚ್ಚರವೊಂದು**
**ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು**

ಈ ಎಲ್ಲಾ ಗುಣಗಳನ್ನೂ ಅಂತರ್ಗತವಾಗಿ ಮೈಗೂಡಿಸಿಕೊಂಡಿರುವ ನಿಜದರ್ಥದ ಜನಪರ ರಾಜಕಾರಣಿ. ಅಧಿಕಾರದಲ್ಲಿರಲಿ, ಇಲ್ಲದಿರಲಿ, ಜನಸೇವೆ ಇವರ ಆದರ್ಶ. ಜನಪರ ಹೋರಾಟಗಳ ಗಟ್ಟಿದನಿ ಇವರು. ಒಮ್ಮೊಮ್ಮೆ ಅದು ಒಂಟಿದನಿ ಆದದ್ದೂ ಉಂಟು. ಆದರೂ ಇವರು ವಿಚಲಿತರಾದವರಲ್ಲ. ಒಂಟಿ ಸಲಗದಂತೆ ಧೈರ್ಯದಿಂದ ಮುನ್ನುಗ್ಗಿದವರು. ''ಆನೆ ನಡದದ್ದೇ ದಾರಿ''. ಮಹಾವ್ಯಕ್ತಿಗಳು ಹಾಕಿಕೊಟ್ಟದ್ದೇ ಮಾರ್ಗ. ಇಂತಹ ಅಪರೂಪದ ವ್ಯಕ್ತಿ-ಸಾಧಕ ವೈ.ಕೆ. ರಾಮಯ್ಯನವರು.

**– ಟಿ. ಎಸ್. ವೆಂಕಟನಂಜಪ್ಪ**

## ಅಧಿಕಾರದ ಕನಸು ಕಂಡಿಲ್ಲ

ಪ್ರಾಯಶಃ ತುಮಕೂರು ಜಿಲ್ಲೆಯ ಶಾಸಕರುಗಳ ಪೈಕಿ ನೇರವಾದಿ ನಿಷ್ಠುರವಾದಿ ಎಂದರೆ ಸಚಿವ ವೈ.ಕೆ. ರಾಮಯ್ಯ ಎಂದೇ ಹೇಳಬಹುದು. 'ಭಾರಿ ಸಿಡುಕ' ಸೋಮಾರಿ ಗಳನ್ನು ಕಂಡರೆ ಆಗದು. 'ಸೋಮಾರಿ ಅಧಿಕಾರಿಗಳು ವರ್ಗಾವಣೆಗೇನಾದರೂ ರಾಮಯ್ಯನವರ ಬಳಿ ಹೋದರಂತೂ ಮುಗಿದೇ ಹೋಯಿತು ಮೇಲಿಂದ ಕೆಳಕ್ಕೆ ನೀರಿಳಿಸುತ್ತಾರೆ, ಎನ್ನುತ್ತಾರೆ ಅಧಿಕಾರಿಗಳು. ಆದರೆ ಅವರನ್ನೇ ಈ ಬಗ್ಗೆ ಪ್ರಶ್ನಿಸಿದರೆ, ನಾನು ಕೆಲವರನ್ನು ಆ ರೀತಿ ನೋಡಿರಬಹುದು. ಆದರೆ ಯಾರೂ ನನ್ನ ಶತ್ರುಗಳಲ್ಲ. ಕೇವಲ ಸಾಮಾಜಿಕ ಕಳಕಳಿ ಅದರ ಹಿನ್ನೆಲೆ ಆಗಿರುತ್ತದಷ್ಟೆ.

ಇತ್ತೀಚೆಗೆ ವೈ.ಕೆ.ಆರ್. ಭೇಟಿ ಅಪರೂಪವೂ ಆಗಿತ್ತು. ಬಹಳ ದಿನಗಳಿಂದ ಪತ್ರಿಕೆ ಅವರನ್ನು ಸಂಪರ್ಕಿಸಬೇಕೆಂದುಕೊಂಡಿತ್ತು. ಇತ್ತೀಚಿನ ತಿಪಟೂರು ಪ್ರವಾಸ ಸಂದರ್ಭದಲ್ಲಿ ಅವರೊಂದಿಗೆ ಮುಕ್ತವಾಗಿ ಚರ್ಚಿಸಲು ಅನುವಾಯಿತು.

'ಏರ್‌ಬಸ್' ಮಾದರಿ ಸಚಿವ ಸಂಪುಟದಿಂದ ವೈ.ಕೆ.ಆರ್‌ರನ್ನು ಬಿಡಲಾಗುವುದೆಂಬ ಸುದ್ದಿಯೊಂದಿಗೇ ಅವರನ್ನು ಪಕ್ಷದ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡುತ್ತಾರೆ ಎಂಬ ಸುದ್ದಿಸಹ ಹಬ್ಬಿತ್ತು. ತುಮಕೂರು ಜಿಲ್ಲೆಯ ಕನಸಾಗಿರುವ ಹೇಮಾವತಿ ಬಗ್ಗೆ ಹಲವು ಹತ್ತು ಶಂಕೆ ಮೂಡಿತ್ತು. ಜಿಲ್ಲೆಯ ಅಭಿವೃದ್ಧಿ 'ಜಿಲ್ಲಾ ಪರಿಷತ್'ಗಳ ಬಗ್ಗೆ ಪ್ರಶ್ನಿಸಿದಾಗ ನೇರವಾಗಿ ಉತ್ತರಿಸಿ ತಮ್ಮ ನಿಷ್ಠುರತನವನ್ನು ಪ್ರತಿಪಾದಿಸಿದರು.

- **ತಮ್ಮನ್ನು ಸಚಿವ ಸಂಪುಟದಿಂದ ಕೈಬಿಡುತ್ತಾರಂತಲ್ಲಾ ?**

ಅದರ ಬಗ್ಗೆ ಏನೂ ಗೊತ್ತಿಲ್ಲ. ತಲೆ ಕೆಡಿಸಿಕೊಳ್ಳುವ ಗೋಜಿಗೂ ಹೋಗಲ್ಲ.

- **ತಮ್ಮನ್ನು ಪಕ್ಷದ ಪ್ರಧಾನ ಕಾರ್ಯದರ್ಶಿಗಳನ್ನಾಗಿ ನೇಮಕ ಮಾಡುತ್ತಾರೆಂದೂ ಸುದ್ದಿಯಾಗಿದೆಯಲ್ಲ?**

ನನ್ನನ್ನಂತೂ ಯಾರೂ ಬಂದು ಕೇಳಿಲ್ಲ.

- **ಆಕಸ್ಮಿಕವಾಗಿ ಆ ಅವಕಾಶ ದೊರೆತರೆ?**

ಪಾಲಿಗೆ ಬಂದದ್ದು ಪಂಚಾಮೃತ. ಆದರೆ ಒಂದಂತೂ ನಿಜ. 15-20 ವರ್ಷಗಳಿಂದ ಹೋರಾಟ ನಡೆಸುತ್ತಲೇ ಬಂದಿದ್ದೇನೆ. ಎಂದೂ ಅಧಿಕಾರದ ಕನಸನ್ನು ಕಂಡಿಲ್ಲ. ಆದರೆ ಆಕಸ್ಮಿಕವಾಗಿ

ಅಧಿಕಾರ ದೂರತಿದೆ. ಇರುವಷ್ಟು ಕಾಲ ಒಳ್ಳೇದೂ ಮಾಡ್ಬೇಕು, ನನಗಂತೂ ಅಧಿಕಾರಕ್ಕೇ ಅಂಟಿಕೊಂಡು ಬದುಕಬೇಕೆಂಬ ಮಹದಾಕಾಂಕ್ಷೆಯಂತೂ ಇಲ್ಲ. ಸಾಕಷ್ಟು ತೋಟ ಇದೆ. ನನ್ನದೇ ವೃತ್ತಿ ಇದೆ. ಅದೇ ಸ್ಥಿರ ಎನ್ನುವುದು ನನ್ನ ಭಾವನೆ.

● **ಜಿಲ್ಲೆಗೆ ಹೇಮಾವತಿ ಹರಿಯುವುದು ಖಚಿತವೇ ?**

ಖಂಡಿತವಾಗಿ, ಸ್ವಲ್ಪ ಎಡರು - ತೊಡರು ಉಂಟಾಗಿರಬಹುದು.

● **ಜಿಲ್ಲಾ ಪರಿಷತ್, ಮಂಡಲ್ ಪಂಚಾಯಿತ್ತಿಗಳೆಂಬ ಹೊಸ ವ್ಯವಸ್ಥೆ ಬಗ್ಗೆ ನಿಮ್ಮ ಅಭಿಪ್ರಾಯ?**

ಜಿಲ್ಲಾ ಪರಿಷತ್, ಮಂಡಲಗಳಲ್ಲಿ ಏನಾದರೂ ಹೊಸತನ್ನು ಕಾಣಬೇಕಾದ್ರೆ ಸಮಯ ಬೇಕು. ವ್ಯವಸ್ಥೆ ಇಂಟ್ರಡ್ಯೂಸ್ ಆಗಬೇಕು.

● **ತುಮಕೂರು ಜಿಲ್ಲಾ ಪರಿಷತ್ ಬಗ್ಗೆ ಏನ್ಹೇಳ್ತಿರಾ?**

ಬೇರೆ ಜಿಲ್ಲೆಗಳಿಗೆ ಹೋಲಿಸಿದಾಗ ಚೆನ್ನಾಗಿದೆ. ಏಕೆಂದರೆ ಯಾವುದೇ ವ್ಯವಸ್ಥೆ ಗಮನಿಸುವಾಗ, ಆ ವ್ಯವಸ್ಥೆಯ ಹಿಂದಿನ ವ್ಯಕ್ತಿಯನ್ನು ಗಮನಿಸಬೇಕಲ್ಲವೇ?

● **ಜಿಲ್ಲಾ ಜನತಾ ಪಕ್ಷದ ಅನಾಯಕತ್ವದ ಬಗ್ಗೆ ತಾವೇನೋ ಅಸಮಾಧಾನಗೊಂಡಂತೆ ಇತ್ತಲ್ಲ ?**

ಹಾಗೇನಿಲ್ಲ. ಒಂದು ಸಭೆ ಕರೀಲಿಕ್ಕೆ ಹೇಳಿದೆ. ಲೆಟರ್ ಸಹ ಬರ್ದಿದ್ದೆ. ಈವರ್ಗೆ ಕರ್ದಿಲ್ಲ. ಆದ್ರೆ ನೀವೇ ಕೇಳಬಹುದು. ನೀವೇ ಯಾಕ್ ಕರೀಬಾರ್ದು ಅಂತ ಅಲ್ಲವಾ ಎಂದ ಅವರು 'ಒಂದೇ ವೇದಿಕೆ' ನಿರ್ಮಾಣದ ಎಡರು ತೊಡರುಗಳನ್ನು ವಿವರಿಸಿದರು.

● **ಇತ್ತೀಚೆಗೆ ಜಿಲ್ಲೆಯ ಕೆಲ ಶಾಸಕರು 'ಟ್ರಾನ್ಸ್‌ಫರ್' ಎಂಬ ಮಹಾ ಉದ್ಯೋಗದಲ್ಲೆ ತೊಡಗಿದ್ದಾರೆಂಬ ಆರೋಪ ಕೇಳಿ ಬರುತ್ತಿದೆಯಲ್ಲ ?**

ಬೇರೆಯವರ ಬಗ್ಗೆ ನನಗಂತೂ ಗೊತ್ತಿಲ್ಲ. ಆದರೆ ಯಾವುದೇ ಅಧಿಕಾರಿಗಳ ವರ್ಗಾವರ್ಗಿಗಳಲ್ಲಿ ನಾನು ಯಾವತ್ತೂ ಕೈ ಹಾಕಿಲ್ಲ. ನನ್ನ ಕ್ಷೇತ್ರದಲ್ಲೂ ಅಷ್ಟೆ, ಐ ಹ್ಯಾವ್ ಗಾಟ್ ಎ ಗುಡ್ ಟೀಮ್, ಯಾವ್ ಅಧಿಕಾರಿ ಇದ್ರೆ ನನಗೇನು. ತಾಲ್ಲೂಕಿನ ಕೆಲ್ಸ ಆಗ್ಬೇಕು. ವೈ.ಕೆ.ಆರ್ ಬಯ್ತಾನೇ, ಗಲಾಟೆ ಮಾಡ್ತಾನೆ ಅಂತ ಬೈಕೋತಾರೆ. ಆದರೆ ನನ್ನ ಕಾರ್ಯ ಶೈಲಿ ಅರಿತವರಾರೂ ಹಾಗೆ ತಿಳಿದಿರಲಾರರು.

● **ಕುಣಿಗಲ್ ಸ್ಟಡ್ ಫಾರ್ಮ್ ಅವ್ಯವಹಾರದ ಬಗ್ಗೆ ನೀವೇನು ಕ್ರಮ ಕೈಗೊಂಡಿರುವಿರಿ ?**

ಬೇಗೂರು ರಾಮಣ್ಣ ಎಂಬುವವರು ಅರ್ಜಿ ಕೊಟ್ರು. ಮರಗಳನ್ನು ಇಟ್ಟಿರೋ ಜಾಗಾನೂ

ಹೇಳಿದ್ರು. ನಾನೇ ನೇರವಾಗಿ ಡಿ.ಎಫ್.ಓ ಗೆ ಹೇಳಿ ಎಲ್ಲಾ ಸೀಜ್ ಮಾಡ್ಸಿ ಕ್ರಮ ಕೈಗೊಳ್ಳಲಿಕ್ಕೆ ಹೇಳಿದ್ದೇನೆ.

- **ಹೇಮಾವತಿ ಯೋಜನೆ ಕಾರ್ಯ ಹೇಗೆ ಸಾಗಿದೆ ?**

ನಿರೀಕ್ಷೆಯ ಮಟ್ಟದಲ್ಲಿ ಈ ವರ್ಷ ಕಾರ್ಯ ನಡೆದಿಲ್ಲ. ಒಂದೆಡೆ ಹಣಕಾಸಿನ ಕೊರತೆ, ಭೂಮಿಗಳನ್ನು ಸ್ವಾಧೀನ ಪಡಿಸಿಕೊಳ್ಳುವಲ್ಲಿ ಉಂಟಾಗಿರುವ ವಿಳಂಬ ಜೊತೆಗೆ ಸುರಂಗ ಮತ್ತೆ ಕುಸಿದಿದೆ.

○

**- ತುಮಕೂರು ಮಾಧ್ಯಮ**

(7-12-1987)



# ಭ್ರಷ್ಟ ರಾಜಕೀಯ ನೀತಿಯ ವಿರುದ್ಧ ಹೋರಾಟ

**● ನೀವು ದೇವೇಗೌಡರ ಪರವೋ ಅಥವಾ ಹೆಗಡೆಯವರ ರಾಜಕೀಯ ನೀತಿಯ ವಿರುದ್ಧವೋ?**

ಎರಡೂ ಹೌದು. ಹಾಗೆಂದ ಮಾತ್ರಕ್ಕೆ ದೇವೇಗೌಡರು ಹೇಳಿದ್ದನ್ನೆಲ್ಲಾ ಶಿರಸಾವಹಿಸಿ ಮಾಡುತ್ತೇನೆಂದಲ್ಲ. 20 ವರ್ಷಗಳಿಂದ ಅವರು ನನ್ನ ರಾಜಕೀಯ ಗುರು. ಆದರೂ ನನ್ನ ನಿರ್ಧಾರದ ಮಟ್ಟಿಗೆ ನಾನು ಸ್ವತಂತ್ರ. ಹೆಗಡೆಯವರ ರಾಜಕೀಯ ನೀತಿಯನ್ನಂತೂ ನಾನು ಸುತರಾಂ ವಿರೋಧಿಸುತ್ತೇನೆ. ಆ ಭ್ರಷ್ಟರ ಸಂಪುಟದಲ್ಲಿ ಮಂತ್ರಿಯಾಗಿದ್ದಕ್ಕೆ ಇಂದೂ ಪಶ್ಚಾತ್ತಾಪ ಪಡುತ್ತಿದ್ದೇನೆ.

**● ನೀವು ಜನತಾದಳ ಸೇರುವುದಕ್ಕೆ ಯಾವುದಾದರೂ ಷರತ್ತುಗಳನ್ನು ಹಾಕುತ್ತೀರಾ?**

ಸೇರುವ ಪ್ರಶ್ನೆಯೇ ಇಲ್ಲವೆಂದ ಮೇಲೆ ಷರತ್ತು ಹಾಕುವುದು ಎಲ್ಲಿಂದ ಬಂತು. ಅಲ್ಲದೆ ಯಾವ ಪುರುಷಾರ್ಥಕ್ಕಾಗಿ ''ದಳ'' ಸೇರಬೇಕು ಹೇಳಿ? ಕರ್ನಾಟಕದಲ್ಲಿ ಹೆಗಡೆ ಕೊಳ್ಳೆ ಹೊಡೆದ ಪಾಪದ ಹಣದಿಂದ ಕಟ್ಟಿದ ಈ ಜನತಾದಳಕ್ಕೆ ಅಂತದೇ ಮತ್ತೊಬ್ಬ ಪಾಪಿಯ ವಿರುದ್ಧ ಹೋರಾಡಲು ನೈತಿಕ ಬೆನ್ನೆಲುಬಿದೆಯೇ? ಇವರೆಲ್ಲ ಸೇರಿ ರಾಜೀವರನ್ನು ಎದುರಿಸಲು ಹೊರಟಿದ್ದಾರೆ! ಒಂದು ಪಕ್ಷ ಇವರು ಇಡೀ ಕಾಂಗ್ರೆಸ್ ವ್ಯವಸ್ಥೆಯನ್ನೇ ವಿರೋಧಿಸುವುದೇ ಆದರೆ, ಅದಕ್ಕೆ ಜನತಾದಳವೇ ಆಗಬೇಕಿಲ್ಲ. ಆ ಕೆಲಸವನ್ನ ಜನತಾ ಪಕ್ಷದಲ್ಲಿದ್ದುಕೊಂಡೇ ಮಾಡಬಹುದು.

**● ಒಂದು ಪಕ್ಷ ಗೌಡರು ಜನತಾದಳ ಸೇರಿದರೆ ನಿಮ್ಮ ಮುಂದಿನ ನಿಲುವು ?**

ನಾನು ಮೊದಲೇ ಹೇಳಿದ್ದೇನೆ. ನನ್ನ ನಿರ್ಧಾರದ ಬಗ್ಗೆ ಸ್ವತಂತ್ರನೆಂದು. ದೇವೇಗೌಡ ರಾದಿಯಾಗಿ ಎಲ್ಲರೂ ಹೋದರೂ ನಾನು ಒಬ್ಬಂಟಿಯಾಗಿಯಾದರೂ ಜನತಾ ಪಕ್ಷದಲ್ಲೇ ಇರುತ್ತೇನೆ.

**● ದೇವೇಗೌಡರು ಹೋದ ನಂತರವೂ ನಿಮ್ಮೊಡನೆ ಎಷ್ಟು ಮಂದಿ ಶಾಸಕರು ಉಳಿಯಬಹುದು? ಯಾರ್‍ಯಾರು ?**

ಯಾರ್‍ಯಾರು ಎಂದು ಹೇಳಲಾರೆ. ಆದರೆ ಕನಿಷ್ಠ 20-22 ಮಂದಿಯಂತೂ ಜನತಾಪಕ್ಷದಲ್ಲೇ ಖಂಡಿತಾ ಇರುತ್ತಾರೆ. ಅಲ್ಲದೆ ದೇವೇಗೌಡರು ಎಂದೂ ಜನತಾದಳ ಸೇರುವುದಿಲ್ಲವೆಂದೂ ನನಗೆ ಖಚಿತ ನಂಬಿಕೆ ಇದೆ. ಮೊನ್ನೆ ಗೌಡರನ್ನ ಚಂದ್ರಶೇಖರ್‌ರವರು ಫೋನಿನಲ್ಲಿ ಸಂಪರ್ಕಿಸಿದಾಗ ಗೌಡರು ಹೇಳಿದರು ''ನಾನು ಜನತಾದಳ ಸೇರುವ ಬಗ್ಗೆ ನೀವು ನನ್ನನ್ನು ಮಾತುಕತೆಗೆ

ಆಹ್ವಾನಿಸುವುದಾದರೆ ನಾನು ದೆಹಲಿಗೆ ಬರುವುದಿಲ್ಲ. ನೀವೂ ಜನತಾಪಕ್ಷದಲ್ಲೇ ಉಳಿದುಕೊಳ್ಳುವ ಬಗ್ಗೆ ಮಾತನಾಡುವುದಾದರೆ ಮಾತ್ರ ನಾನು ಬರುತ್ತೇನೆ'' ಎಂದು. ಆ ವಿಷಯವಾಗಿಯೇ ಅವರು ಈಗ ದೆಹಲಿಗೆ ಹೋಗಿರುವುದು.

- **ನೀವು ಜನತಾ ಪಕ್ಷದಲ್ಲೇ ಉಳಿದುಕೊಳ್ಳುವುದಾದರೆ ರಾಜ್ಯದಲ್ಲಿ ನಿಮ್ಮ ಭವಿಷ್ಯದ ಬಗ್ಗೆ ಆಲೋಚಿಸಿದ್ದೀರಾ ?**

(ಸ್ವಲ್ಪಹೊತ್ತುಸುಮ್ಮನಿದ್ದು...) ಖಂಡಿತ ಆಲೋಚಿಸಿದ್ದೇನೆ. ಜನರಲ್ಲಿ ನಿಜಕ್ಕೂ ಬೇಸರವಿರುವುದು ಹೆಗಡೆ ಬಗ್ಗೆಯೇ ಹೊರತು ಜನತಾ ಪಕ್ಷದ ಮೇಲಲ್ಲ.

- **ಜನತಾಪಕ್ಷ ಮತ್ತು ಜನತಾದಳದ ಹುಟ್ಟಿನ ಸಂದರ್ಭದ ಬಗ್ಗೆ ಸಾಮ್ಯತೆ ಕಲ್ಪಿಸಲಾಗುತ್ತಿದೆಯಲ್ಲ ?**

ಹೇಗೆ ಸಾಧ್ಯ ! ಜನತಾಪಕ್ಷ ಇಡೀ ಒಂದು ವ್ಯವಸ್ಥೆಯನ್ನ ವಿರೋಧಿಸಿ ರಾಷ್ಟ್ರ ವ್ಯಾಪ್ತಿಯ ಬದಲಾವಣೆಯ ಗುರಿ ಇಟ್ಟುಕೊಂಡು ಹುಟ್ಟಿಕೊಂಡದ್ದು. ಜನತಾದಳದಂತೆ ಹಲವು ತೇಪೆಗಳಿಂದ ಕೂಡಿದ್ದು ಯಾವನೋ ಒಬ್ಬ ಭ್ರಷ್ಟನನ್ನು ಎದುರಿಸಲು ಹುಟ್ಟಿಕೊಂಡಿದ್ದಲ್ಲ.

ತುರ್ತು ಪರಿಸ್ಥಿತಿಯಲ್ಲಿ ಇದೇ ವಿ.ಪಿ.ಸಿಂಗ್ ಕಾಂಗ್ರೆಸ್ಸಿನಲ್ಲಿದ್ದುಕೊಂಡು ನಮ್ಮನ್ನೆಲ್ಲ ಜೈಲಿಗೆ ತಳ್ಳಿಸಿದರು. ಈಗ ಅದೇ ಕಾಂಗ್ರೆಸ್ಸಿನ ವಿರುದ್ಧ ಹೋರಾಟಕ್ಕೆ ನಿಂತಿದ್ದಾರೆ. ನಾನು ವಿ.ಪಿ.ಸಿಂಗ್‌ರಿಂದ ಪಕ್ಷಾತೀತವಾದ ಜನಜಾಗೃತಿಯ ಕಾರ್ಯಕ್ರಮವನ್ನು ನಿರೀಕ್ಷಿಸಿದ್ದೆ. ನಾಳೆ ಅರ್ಜುನ್‌ಸಿಂಗ್ ಹೊರಬಂದು ನಾನೂ ರಾಜೀವ್‌ಗಾಂಧಿಯನ್ನು ವಿರೋಧಿಸುತ್ತೇನೆಂದು ಹೇಳಿಕೊಂಡು ಅವರೂ ಒಂದು ಪಕ್ಷವನ್ನು ಕಟ್ಟಿದರೆ, ಈ 'ದಳ'ದವರು ಅದರಲ್ಲೂ ವಿಲೀನವಾಗುವುದಿಲ್ಲವೆಂದು ಏನು ಗ್ಯಾರಂಟಿ?

- **ಈ ಉಪಚುನಾವಣೆಯ ಸೋಲನ್ನು ಜನತಾಪಕ್ಷದ ಅವನತಿಯ ಎರಡನೇ ಹಂತವೆಂದು (ಮೊದಲ ಹಂತ ಆಂತರಿಕ ಬಿರುಕು) ಕಾಂಗ್ರೆ ನಾಯಕರು ಹೇಳುತ್ತಿದ್ದಾರಲ್ಲ ?**

ಹಾಗೇನಿಲ್ಲ. ಎರಡು ಸ್ಥಾನಗಳನ್ನು ಗೆದ್ದ ಮಾತ್ರಕ್ಕೆ, ಕಾಂಗ್ರೆಸ್ ಬೀಗುವ ಅಗತ್ಯವಿಲ್ಲ. ಅಲ್ಲಿ ನಮ್ಮ ಅಭ್ಯರ್ಥಿಗಳು ಸೋತಿದ್ದು, ನಮ್ಮೊಳಗಿನ ಭಿನ್ನಾಭಿಪ್ರಾಯದಿಂದ. ನಮ್ಮ ಮೇಲೆ ಮುಯ್ಯಿ ತೀರಿಸುವಂತೆ ನಿಷ್ಠಾವಂತರು ಅಸಮರ್ಥ ಅಭ್ಯರ್ಥಿಗಳಿಗೆ ಸೀಟು ಕೊಟ್ಟಿದ್ದು, ಹೆಚ್ಚಾಗಿ ಹೆಗಡೆಯವರು ಎಸಗಿದ ಪಾಪದ ಗುಟ್ಟುಗಳು ಹಳ್ಳಿಗಳನ್ನು ತಲುಪಿರುವುದು ಈ ಸೋಲಿಗೆ ಕಾರಣ. ನಾವ್ಯಾರೂ ಚುನಾವಣಾ ಪ್ರಚಾರಕ್ಕೆ ಹೋಗಿಲ್ಲದಿದ್ದುದೂ ಕಾರಣವಿರಬಹುದು.

- **ಹೆಗಡೆ ನಾಯಕತ್ವದಲ್ಲಿ 2-3 ವರ್ಷ ಸಚಿವರಾಗಿದ್ದ ನಿಮ್ಮ ವಿಶೇಷ ಅನುಭವಗಳೇನು ?**

ಹೆಗಡೆಗೆ ಮಂತ್ರಿಯಾಗಿ ನನ್ನ ಮೇಲೆ ವಿಶ್ವಾಸವಿತ್ತು. ನಾನು ಹೇಳಿದ ಯೋಜನೆಗಳನ್ನು

ಕಾರ್ಯಗತಗೊಳಿಸಲು ಪ್ರಯತ್ನಿಸುತ್ತಿದ್ದರು. ವಿಧಾನಸಭೆಯಲ್ಲಿ ಸಹ ನನ್ನ ಸೂಚನೆ ಆಪಾದನೆಗಳಿಗೆ ಪ್ರಾಧಾನ್ಯತೆ ಕೊಡುತ್ತಿದ್ದರು. (ರಾಮಯ್ಯನವರು ಕೆಲವು ವಿಶೇಷವಾದ ಸಂಕೀರ್ಣ ಅನುಭವಗಳನ್ನು ಹೇಳಿದರಾದರೂ ಕೊನೆಯಲ್ಲಿ Off record ಎಂದ ಕಾರಣ ಇಲ್ಲಿ ದಾಖಲಿಸಲು ಸಾಧ್ಯವಾಗುತ್ತಿಲ್ಲ.)

ಅಲ್ಲದೆ ನಾನೆಂದೂ ಹೆಗಡೆಯವರನ್ನು ವೈಯಕ್ತಿಕವಾಗಿ ದ್ವೇಷಿಸಿದವನಲ್ಲ. ಉದಾಹರಣೆಗೆ ನೋಡಿ, ಎರಡನೆ ಸಂಪುಟ ಪುನರ್‌ರಚನೆಯಾದ ಸಂದರ್ಭದಲ್ಲಿ ಗೌಡರ ಕಾರಿನಲ್ಲಿ ಗೌಡರೊಡನೆ ಸಿಂಧ್ಯ ಮತ್ತು ನಾನು ಹೋಗುತ್ತಿದ್ದೆವು. ಹಿಂದಿನ ಸೀಟಿನಲ್ಲಿ ಕುಂತಿದ್ದ ಸಿಂಧ್ಯ... "ಆ ಹೆಗಡೆ ನನ್ನನ್ನು ನೋಡಿ ನನಗೆ ಮಂತ್ರಿಗಿರಿ ಕೊಟ್ಟಿಲ್ಲ. ಗೌಡರಿಗೆ ಹೆದರಿಕೊಂಡು ಕೊಟ್ಟಿದ್ದಾರೆ. ನಾನು ಎಂದೆಂದೂ ಗೌಡರ ಶಿಷ್ಯ. ನನಗೆ ಬೆಂಬಲ ನೀಡಿದ ಗೌಡರನ್ನ ನಾನೆಂದೂ ಮರೆಯುವುದಿಲ್ಲ" ಎಂದು ಗೌಡರನ್ನು ಹೊಗಳಿ ಹೆಗಡೆಯವರನ್ನ ಅಸಹ್ಯವಾಗಿ ಬೈಯ್ದರು. ಇಂದು ಅದೇ ಸಿಂಧ್ಯ ಹೆಗಡೆಯ ಪರಮಾಪ್ತರು; ಅಂದು ಸಿಂಧ್ಯನನ್ನು ನಾನು ಗದರಿಕೊಂಡಿದ್ದೆ. ಇಂಥಾ ಧೋರಣೆಗಳು ನನಗೆ ಹಿಡಿಸುವುದಿಲ್ಲ.

**ಈ ನಡುವೆ "ಪತ್ರಿಕೆ"ಯಲ್ಲಿ ಪ್ರಕಟವಾಗಿದ್ದ 'ಅನಿವಾಸಿ' ಭಾರತೀಯರ ಹೆಸರಿನಲ್ಲಿ 'ಹೆಗಡೆ - ರೆಡ್ಡಿಯ ಕೊಳ್ಳೆ'ಯ ವರದಿಗೆ ಪ್ರಕಾಶರ ಪ್ರತಿಕ್ರಿಯೆಯನ್ನು ಪ್ರಸ್ತಾಪಿಸಿ "ಈ ಅವ್ಯವಹಾರ ಪೂರ್ತಿಗೊಳ್ಳದಂತೆ ತಡೆಯೊಡ್ಡಿದವನು ನಾನೊಬ್ಬನೇ ಅನ್ನೋದನ್ನ ದಾಖಲಿಸ್ತೀರಾ" ಎಂದು ಹೇಳಿದ್ದರತ್ತ ಅವರ ಗಮನ ಸೆಳೆದಾಗ ...**

"ಇವೆಲ್ಲ ನಂಬಬೇಡಿ, ಪ್ರಕಾಶರಿಗೆ ಅಷ್ಟೊಂದು ಪಾಪಪ್ರಜ್ಞೆ ಇದ್ದರೆ, ಈ ಭ್ರಷ್ಟತೆಯನ್ನು ಸಂಪೂರ್ಣವಾಗಿ ತಡೆಯಬಹುದಿತ್ತು. ಒಂದುಪಕ್ಷ ಸಾಧ್ಯವಾಗಿಲ್ಲದಿದ್ದರೆ ಇಂದು ದೊಡ್ಡದಾಗಿ ಹೇಳಿಕೊಳ್ಳುವ ಬದಲು ಅಂದೇ ರಾಜಿನಾಮೆ ಕೊಟ್ಟು ಪ್ರತಿಭಟಿಸಬಹುದಿತ್ತಲ್ಲವಾ?" ಎಂದರು.

**ನಾವು ಮತ್ತಷ್ಟು ಕೆಣಕಿದೆವು.**

"ಈ ಪ್ರಕಾಶ್ ಎಷ್ಟು ಸಾಚಾ ಮನುಷ್ಯನೆಂದರೆ... ನಮ್ಮಲ್ಲಿ ಭಿನ್ನಾಭಿಪ್ರಾಯ ಹುಟ್ಟಿಕೊಂಡ ಹೊಸದು, ಸಂಪುಟಕ್ಕೆ ನಾನು ರಾಜೀನಾಮೆ ಕೊಟ್ಟು ಮೂರುದಿನವಾಗಿತ್ತು. ಎಂ. ಚಂದ್ರಶೇಖರ್‌ರವರ ಮನೆಯಲ್ಲಿ ರಾಜಿಯ ಬಗ್ಗೆ ಮಾತುಕತೆಯಾಡಲು, ಪ್ರಕಾಶ್ ನನ್ನನ್ನೂ ಸಿದ್ದರಾಮಯ್ಯನವರನ್ನೂ ಕರೆಸಿದ್ದರು... ಅಲ್ಲಿ ನಾನು ಭಿನ್ನಮತೀಯರಾಗಬೇಕಾದ ಕಾರಣ ವಿವರಿಸುತ್ತಿದ್ದೆ. ಇಲ್ಲಿ ಪ್ರಕಾಶರು ಹಾಜರಿದ್ದ ಕಾರಣ ಅವರ ಮೂಗಿನ ನೇರದಲ್ಲೇ ಅವರ ಸಹಿಯ ಬಲದ ಮೇಲೆಯೇ ಶ್ರೀಮಂತ ಹೋಟೆಲ್ ಮಾಲಿಕರಿಗೆ ಬಿ.ಡಿ.ಎ. 60 ಎಕರೆ ಜಮೀನು ಮಂಜೂರಿ ಮಾಡಿದ್ದರ ಬಗ್ಗೆ ಪ್ರಸ್ತಾಪಿಸಿ. ... ಹೇಳಿ ಲಕ್ಷಾಂತರ ಮಂದಿ ನಿರ್ವಸತಿಕರಿರುವ ಈ ನಾಡಿನಲ್ಲಿ, ನೀವು ಒಬ್ಬ ಹೋಟೆಲ್ ಮಾಲಿಕರಿಗೆ ಅಷ್ಟೊಂದು ಜಮೀನು ಕೊಟ್ಟಿದ್ದು

ಮೌಲ್ಯಾಧಾರಿತ ರಾಜಕಾರಣವೇ? ನಿಮ್ಮ ಜೊತೆ ಹೇಗೆ ರಾಜಿ ಮಾಡಿಕೊಳ್ಳುವುದು ಹೇಳಿ ಪ್ರಕಾಶರೇ?'' ಎಂದೆ. ತಕ್ಷಣ ಪ್ರಕಾಶರು ಉರಿದುಬಿದ್ದರು. ಸಿಟ್ಟಿನಿಂದ ಮಾತುಗಳನ್ನಾಡಿ ಆಪಾದನೆಯನ್ನುನಿರಾಕರಿಸಿದರು.

''ಅನಂತರ ಹೊರಬಂದ ನಾನು ಈ ಸುದ್ದಿ ತಿಳಿಸಿದ್ದ ಅಧಿಕಾರಿಯನ್ನು ಕರೆದು ಪ್ರಶ್ನಿಸಿದೆ. ಅವರು ಹೇಳಿದರು ... ''ನೀವೇಕೆ ಯೋಚಿಸುತ್ತೀರಿ ಸಾರ್... ನಾನು ರೆಜಿಲೇಷನ್ ಕಾಪಿ, ಸ್ಯಾಂಕ್ಷನ್ ಕಾಪಿಗಳನ್ನು ಬೇಕಾದರೆ ತಂದು ಕೊಡುತ್ತೇನೆಂದು. ಒಂದೆರಡು ದಿನಗಳಲ್ಲಿ ಅವನ್ನು ತಂದುಕೊಟ್ಟರು. ಆ ದಾಖಲೆಗಳ ಪ್ರತಿಗಳನ್ನು ಲಗತ್ತಿಸಿ, ''ಈ ದಾಖಲೆಗಳು ನಿಜವೋ? ಸುಳ್ಳೋ? ಪ್ರಕಾಶರೇ?'' ಎಂದು ಪತ್ರ ಬರೆದು ಸುಮಾರು ತಿಂಗಳುಗಳೇ ಆಗಿವೆ. ಈವರೆಗೂ ಅವರಿಂದ ಉತ್ತರವಿಲ್ಲ. ಈಗ ನೀವೇ ಯೋಚಿಸಿ. ಪ್ರಕಾಶ್, ರೆಡ್ಡಿಯ ಭ್ರಷ್ಟತೆಯನ್ನು ಯಾವ ಉದ್ದೇಶದಿಂದ ವಿರೋಧಿಸುತ್ತಿದ್ದಾರೆಂದು? ಎಂದು ನಮ್ಮನ್ನೇ ಪ್ರಶ್ನಿಸಿದರು. ಮುಂದುವರಿದು,

ಈ ಇಡೀ ನಿಷ್ಠಾವಂತರ ಗುಂಪು ಇಂತಹ ಅವ್ಯವಹಾರಗಳಲ್ಲೆಷ್ಟೊಂದು ಶಾಮೀಲಾಗಿದೆ ಎಂದರೆ, ಅದಕ್ಕೆ ಬೊಮ್ಮಾಯಿಯವರೂ ಹೊರತೇನಲ್ಲ. ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಎನ್.ಆರ್.ಐ ಹಗರಣ ಮತ್ತು ಪ್ರಕಾಶ್ ಹೇಳಿಕೆಯನ್ನು ಆಧಾರ ವಾಗಿಟ್ಟುಕೊಂಡು ಈ ತಕ್ಷಣ ಹೆಚ್.ಜಿ.ವಿ.ರೆಡ್ಡಿಯವರನ್ನು ವಜಾ ಮಾಡಿ, ಕೊನೆಯ ಕ್ಷಣದಲ್ಲಿ ಯಾದರೂ ಸರ್ಕಾರದ ಮರ್ಯಾದೆ ಉಳಿಸಿಕೊಳ್ಳಬೇಕೆಂದು ಕೋರಿ ಪತ್ರ ಬರೆದೆ. ಅದಾದ ಕೆಲವು ದಿನಗಳಲ್ಲಿ ಆಕಸ್ಮಿಕವಾಗಿ ಮುಖ್ಯಮಂತ್ರಿಯವರನ್ನು ಭೇಟಿಯಾದಾಗ ಅವರಾಗಿಯೇ ಈ ವಿಷಯವನ್ನು ಪ್ರಸ್ತಾಪಿಸಿ ''ರೆಡ್ಡಿ ರಾಜೀನಾಮೆ ಕೊಟ್ರು ರಾಮಯ್ಯನವರೇ... ಅದಕ್ಕೆ ದೇಶಪಾಂಡೆ ವಿರೋಧಿಸಿದ್ರು... ಆದ್ರೂ ನಾನು ಬಿಡಲಿಲ್ಲ'' ಎಂದರು. ನಾನು ಹೌದೇನೋ ಎಂದುಕೊಂಡೆ. But till today Mr. Reddy is BDA Chairman. ಹೇಳಿ ಇವರುಗಳಿಗೆಲ್ಲ ಮಾನಮರ್ಯಾದೆ ಇದೆಯಾ? ಬೊಮ್ಮಾಯಿಯವರು ಈ ಸಣ್ಣ ವಿಷಯಕ್ಕೆ ನನಗೆ ಸುಳ್ಳನ್ಯಾಕೆ ಹೇಳಬೇಕಿತ್ತು? ನಿಮಗೆ ಗೊತ್ತಾ, ರೆಡ್ಡಿಯವರನ್ನು ಅಲ್ಲಿಂದ ಕದಲಿಸುವ ಧೈರ್ಯ ಅವರಾರಿಗೂ ಇಲ್ಲ. ರೆಡ್ಡಿಯ ಮಡಿಲಲ್ಲಿ ನಿಷ್ಠಾವಂತರ ಇನ್ನೆಷ್ಟು ರಹಸ್ಯಗಳಿವೆಯೋ?

**ಅನಂತರ ಜನತಾಪಕ್ಷದ ಹುಟ್ಟು, ಇಂದಿನ ದುಃಸ್ಥಿತಿಯ ಬಗ್ಗೆ 15-20 ನಿಮಿಷ ಮಾತನಾಡಿದ ರಾಮಯ್ಯ ಗದ್ಗದಿತರಾಗಿದ್ದರು.**

ಇದೇ ತಿಂಗಳ 30ನೇ ತಾರೀಖಿನ ನಂತರ ನೋಡಿ ಈ ನಿಷ್ಠಾವಂತರ ಹಗರಣಗಳನ್ನು ಹೇಗೆ ಬಯಲು ಮಾಡುತ್ತೇನೆಂದು ಹೇಳಿ ಆತ್ಮ ವಿಶ್ವಾಸ ವ್ಯಕ್ತಪಡಿಸಿ ಬೀಳ್ಕೊಟ್ಟರು.

○

**– ಟಿ. ಎಸ್. ವಿವೇಕ್**

(ಲಂಕೇಶ್ ಪತ್ರಿಕೆ : 22-1-1989)

## ದೇವೇಗೌಡರಿಗೆ ಸರಿಸಾಟಿ ಆಗಬಲ್ಲವರು ಯಾರಿದ್ದಾರೆ?

- **ರಾಜ್ಯದಲ್ಲಿ ಜನತಾಪಕ್ಷಕ್ಕೆ ಜನತೆ ನೀಡಿದ ಬೆಂಬಲ ನಿಮಗೆ ತೃಪ್ತಿ ನೀಡಿದೆಯೆ ?**

ಜನತಾಪಕ್ಷಕ್ಕೆ ಜನರು ನೀಡಿದ ಬೆಂಬಲ ನನಗೆ ತೃಪ್ತಿ ನೀಡಿದೆ. ಜನತಾಪಕ್ಷ ಉಳಿಸಿಕೊಳ್ಳಲೇಬೇಕಾದಂತಹ ತೀರ್ಮಾನ ತೆಗೆದುಕೊಂಡಿರುವುದು ನನ್ನ ಮನೆಯಲ್ಲಿಯೇ. ಆವಾಗ ದೇವೇಗೌಡರು ವಿದೇಶದಲ್ಲಿದ್ದಾಗ ನಾನೊಂದು ಪತ್ರಿಕಾಗೋಷ್ಠಿ ಕರೆದು, ನಾನು ಜನತಾದಳ ಸೇರುವುದಿಲ್ಲ, ಹಾಗೂ ಬೊಮ್ಮಾಯಿಯವರ ಮಂತ್ರಿಮಂಡಲವೂ ಸೇರುವುದಿಲ್ಲ ಎಂದು ಸ್ಪಷ್ಟ ಪಡಿಸಿದೆ. ಆ ಸಂದರ್ಭದಲ್ಲಿ ಒಬ್ಬ ವರದಿಗಾರ ದೇವೇಗೌಡರು ಜನತಾದಳ ಸೇರಿದರೆ ಏನೂ ಮಾಡುತ್ತೀರಿ ಎಂದು ಪ್ರಶ್ನಿಸಿದ. ನಾನು ಆವಾಗ ದೇವೇಗೌಡರು ಜನತಾಪಕ್ಷ ತೊರೆದರೂ ನಾನು ಜನತಾಪಕ್ಷ ಉಳಿಸಿಕೊಳ್ಳುತ್ತೇನೆ ಎಂದು ಹೇಳಿದ್ದೆ. ಈ ಉತ್ತರದಿಂದ ಕೆಲ ಜನ ಮುಸಿ ಮುಸಿ ನಕ್ಕರು. ಬಹುಶಃ ಅವರು ಜನತಾಪಕ್ಷ ಉಳಿಯುವುದಿಲ್ಲ ಎಂಬ ಭಾವನೆಯವರು. ನಾನು ಅಂದು ತಗೆದುಕೊಂಡ ತೀರ್ಮಾನಕ್ಕೆ ರಾಜ್ಯದ ಲಕ್ಷ ಲಕ್ಷ ಜನ ಸ್ಪಂದಿಸಿದರಲ್ಲ. ಇದಕ್ಕಿಂತ ಸಂತೋಷ, ತೃಪ್ತಿಯ ವಿಷಯ ನನಗೆ ಮತ್ತೊಂದಿಲ್ಲ.

- **ಜನತಾಪಕ್ಷ ಉಳಿಸಿಕೊಳ್ಳುವಾಗ ಬಂದಂತಹ ಅನಿರೀಕ್ಷಿತ ಘಟನೆಗಳಾವುವು?**

ನಾನು ವೈಯಕ್ತಿಕವಾಗಿ ಬಹಳಷ್ಟು ಮೆಚ್ಚುವಂತಹ ಸಿದ್ಧರಾಮಯ್ಯ ಹಾಗೂ ಎ. ಕೃಷ್ಣ ಅವರು ಜನತಾದಿಂದ ಜನತಾದಳಕ್ಕೆ ಪಕ್ಷಾಂತರ ಮಾಡಿದ್ದು ನನಗೆ ಆಘಾತ ನೀಡಿತು. ಅಂದು ನಾನು ಈ ಇಬ್ಬರೂ ಇಷ್ಟೊಂದು ತಪ್ಪು ದಾರಿಯಲ್ಲಿ ಹೋಗಲು ತೀರ್ಮಾನಿಸುತ್ತಾರೆ ಎಂದು ವಿಚಾರ ಮಾಡಲು ನಿಲುಕಲಾರದಂತಹ ವಿಷಯವಾಗಿತ್ತು. ಪಾಪದ ಹಣದಿಂದ ಬದುಕಿದ ಜನತಾದಳದಲ್ಲಿ ಈ ಇಬ್ಬರೂ ಮಿತ್ರರೂ ಏಕೆ ಹೋದರು? ಎಂಬ ಪ್ರಶ್ನೆಗೆ ಇದುವರೆಗೂ ಉತ್ತರವೇ ಇಲ್ಲ.

ಸಿದ್ಧರಾಮಯ್ಯನವರನ್ನು ಜನತಾಪಕ್ಷದ ಅಧ್ಯಕ್ಷರನ್ನಾಗಿ ಮಾಡಬೇಕೆಂಬ ಆಂತರಿಕ ಯುದ್ಧ ಒಂದೂವರೆ ವರ್ಷಗಳವರೆಗೆ ಪಕ್ಷದೊಳಗೆ ನಡೆದೇ ಇತ್ತು. ಬಳಿಕ ದೇವೇಗೌಡರು ಹೋದಲ್ಲೆಲ್ಲಾ ಬಹಿರಂಗವಾಗಿ ಸಿದ್ಧರಾಮಯ್ಯನವರನ್ನು ಅಧ್ಯಕ್ಷರನ್ನಾಗಿ ಮಾಡಬೇಕು ಎಂದು ಒತ್ತಾಯಿಸುತ್ತಿದ್ದರು. ಇದರ ಸಂಪೂರ್ಣ ಅರಿವು ಇದ್ದು ಕೂಡ ಅವರು ಜನತಾದಳ ಸೇರಿದ್ದು ನಮಗೆ ಅಂದು ಸಹಜವಾಗಿ ಆಘಾತ ನೀಡಿತ್ತು. ಅಂದು ಎದುರಾದ ಆಘಾತ ಇಂದು ಜನತೆ ಅಪಾರ ಬೆಂಬಲ ನೀಡುವ ಮೂಲಕ ಮರೆಸಿದ್ದಾರೆ.

● **ಜನತಾದಳ ಹಾಗೂ ಜನತಾ ಪಕ್ಷಗಳ ನಡುವೆ ನೇಗಿಲು ಹೊತ್ತ ರೈತನ ಚಿಹ್ನೆ ಯಾರಿಗೆ ದೊರಕುತ್ತದೆ ?**

ಏಕೆ, ಜನತಾಪಕ್ಷಕ್ಕೆ ನೇಗಿಲು ಹೊತ್ತ ರೈತನ ಚಿಹ್ನೆ ದೊರಕುವ ಬಗ್ಗೆ ನಿಮಗೂ ಅನುಮಾನವಿದೆ ಏನು? ನಾನು ಕೂಡ ಒಬ್ಬ ನ್ಯಾಯವಾದಿಯಾಗಿ ಹೇಳುವುದೇನೆಂದರೆ, ಪ್ರಪಂಚದ ಯಾವುದೇ ಮೂಲೆಯಲ್ಲಿ ಅಸ್ತಿತ್ವದಲ್ಲಿರುವ ಒಂದು ಪಕ್ಷದ ಚಿಹ್ನೆಯನ್ನು ಪಕ್ಷ ಎಂದು ಈವರೆಗೆ ಕರೆಸಿಕೊಳ್ಳಲಾರದ ಒಂದು ಗುಂಪಿಗೆ ನೀಡಿದ ಉದಾಹರಣೆ ಇಲ್ಲ.

1975ರಷ್ಟು ಹಿಂದೆಯೇ ಹಿಮಾಚಲ ಪ್ರದೇಶದ ಡಾ. ಸಂಗ್ಮಾ ಅವರ ಮೊಕದ್ದಮೆಗೆ ಸಂಬಂಧಿಸಿದಂತೆ, ಸುಪ್ರೀಂಕೋರ್ಟ್ ಒಂದು ಪಕ್ಷ ಮತ್ತೊಂದು ಪಕ್ಷದಲ್ಲಿ ವಿಲೀನವಾಗುವಾಗ ಯಾವುದಾದರೂ ಒಂದು ಗುಂಪು ಪಕ್ಷ ಉಳಿಸಿಕೊಳ್ಳುವ ತೀರ್ಮಾನ ತೆಗೆದುಕೊಂಡರೆ, ಅದರ ಚಿಹ್ನೆ, ಬಾವುಟ, ಸಂವಿಧಾನ ಮತ್ತೊಂದು ಪಕ್ಷ ಪಡೆಯುವ ಹಾಗಿಲ್ಲ. ಪಕ್ಷ ಉಳಿಸಿಕೊಳ್ಳುವ ಗುಂಪೇ ಇವೆಲ್ಲವನ್ನು ಪಡೆಯಲಿದೆ ಎಂದು ತೀರ್ಮಾನ ನೀಡಿದೆ.

ನನಗೆ ಹೀಗೆ ಅನಿಸುತ್ತದೆ. ಕಾಂಗ್ರೆಸ್‌ನವರು ಚುನಾವಣೆ ಆಯೋಗದ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡದೆ ಹೋದರೆ ನಿಸ್ಸಂಶಯವಾಗಿ ''**ನೇಗಿಲು ಹೊತ್ತರೈತ**'' ಜನತಾದಳಕ್ಕೆ ಹೋಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

● **ಇದು ಯಾವಾಗ ತೀರ್ಮಾನವಾಗಬಹುದು ?**

ಈಗಾಗಲೇ ಜನತಾದಳ ಎಂದು ಹೇಳಿಕೊಳ್ಳುವ ಗುಂಪಿನವರು ಹಾಜರಾಗಿ ಚುನಾವಣೆ ಆಯೋಗದ ಮುಂದೆ ತಮ್ಮ ಹೇಳಿಕೆ ನೀಡಿದ್ದಾರೆ. ನಮ್ಮವರ ಹೇಳಿಕೆ ಪ್ರಾರಂಭವಾಗಿದೆ. ಒಂದೆರಡು ವಾರದಲ್ಲೇ ಈ ಕುರಿತು ತೀರ್ಮಾನವಾಗಬಹುದು.

● **ಜನತಾಪಕ್ಷ ಅಸ್ತಿತ್ವ ಇಡೀ ಭಾರತದಲ್ಲಿ ಇದೆಯೇ ?**

ಇದರಲ್ಲಿ ಯಾವ ಅನುಮಾನ ಬೇಡ. ಆದರೆ ಜನತಾಪಕ್ಷದ ಹೃದಯ ಕರ್ನಾಟಕದಲ್ಲಿದೆ ಎನ್ನಬಹುದು. ರಾಜ್ಯದಲ್ಲಿ ಚುನಾವಣೆ ಇನ್ನೇನು ಬಂದೇ ಬಿಟ್ಟಿತು ಎಂಬ ಕಾರಣಕ್ಕಾಗಿ ನಮ್ಮ ಶಕ್ತಿ ಎಲ್ಲವೂ ಇಲ್ಲಿ ಕೇಂದ್ರೀಕರಿಸಿದ್ದೇವೆ. ವಿಶೇಷವಾಗಿ ಜನತಾ ಪಕ್ಷದ ಅಗ್ನಿಪರೀಕ್ಷೆಯೂ ಕೂಡ ರಾಜ್ಯದಲ್ಲಿಯೇ ಆಗಲಿದೆ.

ಇಡೀ ದೇಶದಲ್ಲೇ ಕಾಂಗ್ರೆಸ್‌ಗೆ ಈಗಲೂ ಜನತಾಪಕ್ಷ ಒಂದೇ ಪರ್ಯಾಯ ಪಕ್ಷ. ಜನತಾದಳ ಪಕ್ಷವೇ ಅಲ್ಲ. ವಿ.ಪಿ. ಸಿಂಗ್, ದೇವಿಲಾಲ್, ಹೆಗಡೆ ಜನತಾದಳ ಎಂದು ಹೇಳಿಕೊಂಡು ಅಡ್ಡಾಡಿದರೆ ಅದು ಪಕ್ಷವಾಗಿ ಬಿಡುತ್ತದೆಯೆ?

● **ಜನತಾದಳದ ಬಗ್ಗೆ ನಿಮ್ಮ ಅಭಿಪ್ರಾಯ ಏನು ?**

ಯಾವ ಪುರುಷಾರ್ಥಕ್ಕಾಗಿ ಇವರು ಜನತಾದಳ ರಚಿಸಿಕೊಂಡರು? ರಾಜೀವರನ್ನು ಕೆಳಗಿಳಿಸಿ ತಾವು ಆ ಗಾದಿಗೆ ಹತ್ತಬೇಕು ಎಂದು ತಾನೆ? ಇವರ ಗುಂಪು ಯಾವ ಹೋರಾಟ ದಡಿಯಲ್ಲಿ ರಚನೆಯಾಗಿದೆ? ಜನತಾಪಕ್ಷ ಹೋರಾಟದ ಹಿನ್ನೆಲೆಯಲ್ಲಾದರೂ ಉದಯ ವಾಗಿತ್ತು. ಒಂದು ಮಾತು ಮಾತ್ರ ಸತ್ಯ. ಕಾಂಗ್ರೆಸ್ ಹಾಗೂ ಜನತಾಪಕ್ಷ ಈ ಎರಡು ಪಕ್ಷಗಳಿಗೆ ಯಾರು ಬಂದರೂ ಮುಗಿಸಲಿಕ್ಕೆ ಆಗುವುದಿಲ್ಲ. ಸ್ವಾತಂತ್ರ್ಯ ಪಡೆಯುವ ಮಹದಾಸೆಯಿಂದ ಕಾಂಗ್ರೆಸ್ ಸ್ಥಾಪಿತವಾಯಿತು. ಹಾಗೂ 1975ರಲ್ಲಿ ಪಸರಿಸಿದ ತುರ್ತು ಪರಿಸ್ಥಿತಿಯ ಕರಾಳ ಛಾಯೆಯನ್ನು ಕಿತ್ತೊಗೆಯಲು ಜನತಾಪಕ್ಷ ಉದಯವಾಯಿತು. ಈ ಎರಡೂ ಪಕ್ಷಗಳಿಂದ ಎಷ್ಟು ಘಟಾನುಘಟಗಳು ಸಿಡಿದು ಹೋಗಲಿಲ್ಲ? ಜನತಾಪಕ್ಷದಿಂದಲೇ ಬಿ.ಜೆ.ಪಿ. ಮುಖಂಡರಾದ ವಾಜಪೇಯಿ, ಚರಣಸಿಂಗ್, ಜಗಜೀವನ್‌ರಾಂ ಈಗ ಹೆಗಡೆ, ಅಜಿತ್‌ಸಿಂಗ್ ಬಿಟ್ಟು ಹೋದರು. ಆದರೆ ಜನತಾಪಕ್ಷವನ್ನು ಜನರ ಹೃದಯದಿಂದ ಕಿತ್ತೊಗೆಯಲು ಆಯಿತೆ? ಒಟ್ಟಾರೆ ಜನತಾದಳ ಪ್ರಧಾನಿ ಹುದ್ದೆಯ ಮೇಲೆ ಕಣ್ಣಿರಿಸಿ ಕುಳಿತಿರುವ ಹತಾಶ ನಾಯಕರ ಗೊಂಚಲು. ಕಾರ್ಯಕರ್ತರೆ ಇಲ್ಲದಂತಹ ಕೆಲ ನಾಯಕರ ಗುಂಪು.

● **ಕಾಂಗ್ರೆಸ್ ಪಕ್ಷವನ್ನು ಸಮರ್ಥವಾಗಿ ಎದುರಿಸಬೇಕು ಎಂಬ ಹಿನ್ನೆಲೆಯಲ್ಲಿಯೇ ಜನತಾದಳ ರಚನೆಯಾಯಿತಲ್ಲ ?**

ನಮ್ಮ ಉದ್ದೇಶವೂ ಕೂಡ ಕಾಂಗ್ರೆಸ್ ಪಕ್ಷವನ್ನು ಸಮರ್ಥವಾಗಿ ಎದುರಿಸುವುದೇ ಆಗಿತ್ತು. ಆದರೆ ಜನತಾಪಕ್ಷ ವಿಸರ್ಜಿಸಿ ಹೊಸ ಗುಂಪು ಸೃಷ್ಟಿಸುವುದಲ್ಲ. ಜನತಾಪಕ್ಷ ಅಸ್ತಿತ್ವದಲ್ಲಿರಿಸಿಕೊಂಡೇ ರಾಷ್ಟ್ರೀಯ ರಂಗದಡಿಯಲ್ಲಿ ಸ್ಥಾನ ಹೊಂದಾಣಿಕೆ ಮಾಡಿಕೊಂಡಿದ್ದರೆ ಆಗುತ್ತಿರಲಿಲ್ಲವೇ?

● **ವೀರೇಂದ್ರ ಪಾಟೀಲರ ನೇತೃತ್ವದ ಕಾಂಗ್ರೆಸ್ ಎದುರಿಸಲು ಜನತಾಪಕ್ಷ ಸಾಮರ್ಥ್ಯ ಹೊಂದಿದೆಯೆ ?**

ವೀರೇಂದ್ರ ಪಾಟೀಲರ ನೇತೃತ್ವದ ಕಾಂಗ್ರೆಸ್ ನಮಗೆ ವರದಾನವಾಗಿದೆ. ಯಾವ ವ್ಯಕ್ತಿ ಹತ್ತಾರು ವರ್ಷಗಳವರೆಗೆ ಇಂದಿರಾರ ವಿರುದ್ಧ ರಾಜಕೀಯ ಹೋರಾಟದಲ್ಲಿ ಭಾಗಿಯಾಗಿದ್ದರೋ, ಅಂತಹವರ ನೇತೃತ್ವದಲ್ಲಿಯೇ ಇಂದಿರಾ ಕಾಂಗ್ರೆಸ್‌ಗೆ ಮತ ಯಾಚಿಸುವ ದುರದೃಷ್ಟಕರ ಪ್ರಸಂಗ ಕಾಂಗ್ರೆಸ್‌ಗೆ ಇಂದು ಬಂದಿದೆ. ನನ್ನಂತಹ ವಿಚಾರವುಳ್ಳ ಸಭಿಕನಿಗೆ ಮುಂದೆ ಕೂಡಿಸಿಕೊಂಡು ಕಾಂಗ್ರೆಸ್‌ಗೆ ಮತ ಕೊಡಿ ಎಂದು ಕೇಳುವ ನೈತಿಕ ಹಕ್ಕು ಅವರಿಗಿಲ್ಲ.

ಚಿಕ್ಕಮಗಳೂರು ಚುನಾವಣೆಯಲ್ಲಿ ಜಿದ್ದಾಜಿದ್ದಿಗೆ ಸೆಣಸಾಡಿ, ಕಾಂಗ್ರೆಸ್ ಪಕ್ಷಕ್ಕೆ ಹಾಗೂ

ಇಂದಿರಾಗಾಂಧಿಗೆ ವಾಚಾಮಗೋಚರವಾಗಿ ಹೀಯಾಳಿಸಿ, ಜನತಾಪಕ್ಷದ ತತ್ವ ಹಾಗೂ ಸಿದ್ಧಾಂತಗಳನ್ನು ನೂರಾರು ಸಲ ಪ್ರತಿಪಾದಿಸಿದ ಅವರು, ಈಗ ಕಾಂಗ್ರೆಸ್ ಪಕ್ಷದಲ್ಲಿ ಎಂತಹ ಬದಲಾವಣೆ ಕಂಡಿದ್ದಾರೆ? ಅವರು ವಿರೋಧ ಪಕ್ಷದವರನ್ನು ನಿಂದಿಸುವ ನೈತಿಕ ಧೈರ್ಯವೆ ಪಡೆದಿಲ್ಲ. ಇಷ್ಟಾದರೂ ಅವರು ಮಾತನಾಡುತ್ತಾರೆ ಎಂದರೆ ಅವರು ಭಂಡ ವ್ಯಕ್ತಿಯೇ ಆಗಿರಬೇಕು. ಅವರ ಪಕ್ಷದಲ್ಲಿರುವ ಅನೈಕ್ಯತೆ ಕೂಡ ನಮ್ಮ ಪಕ್ಷವನ್ನು ಗೆಲುವಿನ ಹಾದಿಗೆ ದೂಡಬಹುದು.

- **ಡಾ. ಸುಬ್ರಮಣ್ಯಸ್ವಾಮಿಯ ಹಿನ್ನೆಲೆ ನೋಡಿದಾಗ ಅವರೊಬ್ಬ ನಂಬಿಕೆಗೆ ಅರ್ಹನಾದ ವ್ಯಕ್ತಿ ಎಂದು ನಿಮಗೆ ಅನಿಸುವುದೇ ?**

ಡಾ. ಸುಬ್ರಮಣ್ಯಸ್ವಾಮಿಯವರು ನಂಬಿಕೆಗೆ ಅರ್ಹ, ಅನರ್ಹ ಎಂದು ವಿಶ್ಲೇಷಣೆ ಮಾಡಲು ನಾನು ಹೋಗಲಾರೆ. ಎಲ್ಲರಂತೆ ಅವರೂ ಒಬ್ಬ ರಾಜಕಾರಣಿ, ಜನತಾಪಕ್ಷ ಉಳಿಸಿಕೊಳ್ಳುವ ಈ ದಿನಗಳಲ್ಲಿ ಅವರ ದೇಣಿಗೆಯೂ ಬೇಕಾದಷ್ಟಿದೆ.

- **ಮುಂಬರುವ ಚುನಾವಣೆಯಲ್ಲಿ ಜನತಾಪಕ್ಷಕ್ಕೆ ಯಾರು ಪ್ರಬಲರಾಗಿ ಪೈಪೋಟಿ ನೀಡಬಲ್ಲರು?**

ಕಾಂಗ್ರೆಸ್ ಪಕ್ಷವೊಂದೇ ನಮಗೆ ಎದುರಾಳಿ ಎಂದು ಭಾವಿಸಿದ್ದೇವೆ. ಜನತಾದಳ ನಮಗೆ ಲೆಕ್ಕಕ್ಕಿಲ್ಲ. ಜನತಾದಳದವರು ಚುನಾವಣೆಗೆ ನಿಲ್ಲುವ ಪ್ರಯತ್ನ ಮಾಡಲಾರರು ಎಂದು ಭಾವಿಸುತ್ತೇನೆ. ಮೊಂಡು ಧೈರ್ಯ ಮಾಡಿ ಚುನಾವಣೆಗೆ ಇಳಿದರೆ ಠೇವಣಿ ಕಳೆದುಕೊಳ್ಳುತ್ತಾರೆ ಅಷ್ಟೇ.

- **ಜನತಾಪಕ್ಷವು ಚುನಾವಣಾ ಸಂದರ್ಭದಲ್ಲಿ ದಲಿತ ಸಂಘರ್ಷ ಸಮಿತಿ, ಕನ್ನಡದೇಶ, ಪ್ರಗತಿರಂಗದ ಜೊತೆ ಸ್ಥಾನ ಹೊಂದಾಣಿಕೆ ಮಾಡಿಕೊಳ್ಳುವ ಲಕ್ಷಣ ಇವೆಯೆ ?**

ಜನತೆ ಮೂರನೇಯ ಶಕ್ತಿಗೆ ಎಂದೂ ಒಲವು ತೋರಿಸಿಲ್ಲ. ಆದರೂ ಕೂಡ ನಮ್ಮ ಪಕ್ಷದ ಸಿದ್ಧಾಂತಗಳು ಹಾಗೂ ಇನ್ನುಳಿದ ಪಕ್ಷಗಳ ಸಿದ್ಧಾಂತಗಳು ಒಂದೇಯಾದರೆ ಜನತಾದಳ, ಬಿಜೆಪಿ, ಕಾಂಗ್ರೆಸ್ ಹೊರತಾಗಿ ಉಳಿದ ಪಕ್ಷದವರು ಬಂದರೆ ಅವರ ಜೊತೆ ಈ ದಿಸೆಯಲ್ಲಿ ಮಾತನಾಡಬಹುದು.

- **ಜನತಾ ಪಕ್ಷದಲ್ಲಿ ಉಳಿದುಕೊಂಡ ವಿಸರ್ಜಿತ ವಿಧಾನಸಭೆಯ ಸದಸ್ಯರಲ್ಲಿ ಬಹಳಷ್ಟು ಜನ ಮರಳಿ ಗೆಲ್ಲುವುದಿಲ್ಲ ಎಂಬ ಅಭಿಪ್ರಾಯ ಇದೆಯಲ್ಲ?**

ಯಾವ ಪಾಪ ಮಾಡಿದರು ಎಂದು ಇವರನ್ನು ಜನರು ಸೋಲಿಸಬೇಕು?

ಮಂತ್ರಿಗಿರಿಯ ಸವಲತ್ತಿಗಾಗಿ, ಹಣಕ್ಕಾಗಿ, ಹೆಂಡಕ್ಕೆ ಮರುಳಾಗಿ ಜನತಾದಳ ಸೇರಲಿಲ್ಲ ಎಂಬ ತಪ್ಪಿಗಾಗಿ ಜನರು ಶಿಕ್ಷಿಸುವವರೆ? ಖಂಡಿತ ಇಲ್ಲ. ಏನೆಲ್ಲವನ್ನು ಧಿಕ್ಕರಿಸಿ ಕಟ್ಟಿದ ಪಕ್ಷಕ್ಕೆ ದ್ರೋಹ ಮಾಡಿದ, ಲಕ್ಷ ಲಕ್ಷ ಹಣ ಚೆಲ್ಲಿದಾಗಲೂ ಅದಕ್ಕೆ ಮರುಳಾಗದೇ ಜನತಾಪಕ್ಷಕ್ಕೇ ಅಂಟಿಕೊಂಡ ಇಪ್ಪತ್ತೇಳು ಜನರಿಗೆ ಮತದಾರರು ಸನ್ಮಾನಿಸಬೇಕು.

ಡಾ. ತಿಪ್ಪೇಸ್ವಾಮಿಯವರಿಗೆ ದಾವಣಗೆರೆಯಿಂದ ಬೆಂಗಳೂರಿಗೆ ಬರಲು ಬಸ್ಸಿಗೆ ಹಣವಿಲ್ಲ. ಕಾರವಾರದ ಎಸ್.ಎಚ್. ಗೌಡರು ಆದರ್ಶ ಶಾಸಕರಾಗಿ ನಮ್ಮ ಮುಂದಿದ್ದಾರೆ. ಅವರು ಉದರದ ಪೋಷಣೆಗಾಗಿ ಮರಳಿ ಶಿಕ್ಷಕ ಹುದ್ದೆಗೆ ತೆರಳಿದರು. ರವಿವಾರದ ಹೊರತು ಪಡಿಸಿ ನಾನು ರಾಜಕೀಯ ಮಾಡಲು ಆಗುವುದಿಲ್ಲ ಎಂದು ನನಗೆ ನೇರವಾಗಿ ಹೇಳಿದ್ದಾರೆ. ಎಂ.ಎಸ್. ನಾರಾಯಣರಾವ್, ಚಳ್ಳಕೆರೆ ತಿಪ್ಪೇಸ್ವಾಮಿ ಮುಂತಾದ ಮಾಜಿ ಶಾಸಕರು ನಮ್ಮಲ್ಲಿದ್ದಾರೆ. ಈ ಇಪ್ಪತ್ತೇಳು ಜನರಲ್ಲಿ ಯಾರ ಮೇಲಾದರೂ ಭ್ರಷ್ಟಾಚಾರದ ಆಪಾದನೆ ಇದ್ದರೆ ನಾನೇ ಜನತಾ ಪಕ್ಷದಿಂದ ದೂರ ಸರಿಯುತ್ತೇನೆ, ಆದರೆ ಅದೇ ಜನತಾದಳದಲ್ಲಿರುವವರ ಕತೆಯೆಲ್ಲಾ ಜನತೆಗೆ ಗೊತ್ತಿದೆ.

- **ದೇವೇಗೌಡರ ರಾಜಕೀಯ ಜೀವನದ ಬಗ್ಗೆ ನಿಮ್ಮ ಅನಿಸಿಕೆ ಏನು ?**

ದೇವೇಗೌಡರೇನೂ ದೇವರಲ್ಲ. ಎಲ್ಲ ಮನುಷ್ಯರಂತೆ ಅವರೂ ಒಬ್ಬರು. ಆದರೆ ಅವರ ಸಾರ್ವಜನಿಕ ಜೀವನದಲ್ಲಿ ಮಾಡಿದ ತಪಸ್ಸು, ಸಾಧಿಸಿದ ಶಕ್ತಿಗೆ ಯಾರೂ ಸಮನಾಗಲಾರರು. ಅವರ ವ್ಯಕ್ತಿತ್ವವೇ ಜನತಾಪಕ್ಷಕ್ಕೆ ದೊಡ್ಡ ಶಕ್ತಿ. ಅವರ ದುಡಿಮೆ, ಚಿಂತನೆ, ನಡೆದು ಬಂದ ದಾರಿ ಎಲ್ಲವೂ ಸ್ವಚ್ಛ ಹಾಗೂ ನೇರ. ವಿರೋಧ ಪಕ್ಷದ ನಾಯಕರಾಗಿ ಸರ್ಕಾರದ ಸವಲತ್ತುಗಳನ್ನು ನಿರಾಕರಿಸಿದ ಅಪರೂಪದ ವ್ಯಕ್ತಿ. ಎಂತಹ ಕಷ್ಟದ ಪರಿಸ್ಥಿತಿಯಲ್ಲಿಯೂ ಪಕ್ಷ ತ್ಯಜಿಸದ ವ್ಯಕ್ತಿ.

ಹೆಗಡೆಯವರು 1985ರ ನಂತರದ ದಿ[illegible] ಪ್ರತಿಸ್ಪರ್ಧಿ ಎಂದು ಅರಿತು ಗೌಡರನ್ನು ರಾಜಕೀಯವಾಗಿ ವೈಯಕ್ತಿಕ[illegible] ಹಿಂಸೆ ಕೊಟ್ಟಾಗಲೂ ಸ್ಥಿಮಿತ ಕಳೆದುಕೊಳ್ಳಲಿಲ್ಲ. 1983ರ ಚುನಾವಣೆಯ ನಂತರ ಕಂಡ ಕನಸುಗಳು ಮುಂದಿನ ದಿನ ನನಸಾಗಲಿಲ್ಲವಲ್ಲ. ಅಧಿಕಾರಾವಧಿಯಲ್ಲಿ ವಿದ್ಯುತ್, ಶಿಕ್ಷಣ, ಆರೋಗ್ಯ ಮುಂತಾದ ರಂಗದಲ್ಲಿ ಮಾಡಿದ ಸಾಧನೆ ಕಡಿಮೆ ಆಯಿತಲ್ಲ ಎಂಬ ನೋವು ಅವರಲ್ಲಿ ಇದೆ. ರಾಜ್ಯದ ಚತುಷ್ಕೋಟಿ ಜನತೆ ದೇವೇಗೌಡರಿಗೆ ಹಾಗೂ ಜನತಾಪಕ್ಷಕ್ಕೆ ಆಶೀರ್ವಾದ ಮಾಡಬೇಕು. ಒಟ್ಟಾರೆ ಹೆಗಡೆಯವರು ರಾಷ್ಟ್ರ ರಾಜಕಾರಣಿಯಾಗಲೂ ಹೋಗಿ ಜೋಗ ಜಲಪಾತದ ಪ್ರಪಾತಕ್ಕೆ ಬಿದ್ದರು. ಜನತಾಪಕ್ಷ ಉಳಿಸಿಕೊಳ್ಳುವ ತೀರ್ಮಾನ ತೆಗೆದುಕೊಂಡು ದೇವೇಗೌಡರು ರಾಷ್ಟ್ರನಾಯಕರಾದರು.

● **ಜನತಾಪಕ್ಷದಲ್ಲಿ ಏಕೆ ಅನೈಕ್ಯತೆ ಇಲ್ಲ?**

ಜನತಾ ಪಕ್ಷದಲ್ಲಿ ಎಲ್ಲವೂ ಕಾರ್ಯಕರ್ತರ ಇಚ್ಛೆಯಂತೆ ನಡೆಯುತ್ತದೆ. ನಮ್ಮೆಲ್ಲರ ನಾಯಕ ದೇವೇಗೌಡರು ಮಾತ್ರ ಎಂದು ಬೀದರದಿಂದ ಹಿಡಿದು ಗುಂಡ್ಲು ಪೇಟೆಯವರೆಗಿನ ಜನತಾ ಕಾರ್ಯಕರ್ತನಿಗೆ ಗೊತ್ತು. ಹೀಗಾಗಿ ಜನತಾ ಪಕ್ಷದಲ್ಲಿ ಗೊಂದಲವಾಗಲೀ, ಅನೈಕ್ಯತೆ ಆಗಲೀ ಇಲ್ಲ.

● **ಜನತಾದಳದ ನಾಯಕ ಚಂದ್ರಶೇಖರ್ ಜನತಾ ಉಳಿಸಿಕೊಂಡ ಬಗ್ಗೆ ನಿಮಗೆ ಹಿಂಬಾಗಿಲಿನಿಂದ ಶಹಭಾಸ್‌ಗಿರಿ ಕೊಡುತ್ತಿದ್ದಾರೆ ಎಂಬ ಗುಲ್ಲು ಇದೆಯಲ್ಲ?**

ಇದು ಸರಿಯಲ್ಲ. ಚಂದ್ರಶೇಖರ್ ಮೊದಲಿನಿಂದಲೂ ನಮ್ಮ ನಾಯಕರು. ಜನತಾಪಕ್ಷ ಉಳಿಸಿಕೊಂಡ ಬಗ್ಗೆ ನಮ್ಮ ಮೇಲೆ ಅವರ ಪ್ರೀತಿ ಇರುವುದು ಸಹಜ. ದೆಹಲಿಯ ರಾಜಕೀಯ ವಲಯದಲ್ಲಿ ಒಂದು ಮಾತು ಬಹಳವಾಗಿ ಕೇಳಿ ಬರುತ್ತಿದೆ. ಅದೇನೆಂದರೆ, ಅವರ ಸುತ್ತ ಇರುವ ಉತ್ತಮ ಗೆಳೆಯರು ಅವರಿಂದ ಬಹುದೂರ ನಡೆದರು. ಶತ್ರುಗಳೆಲ್ಲಾ ಸುತ್ತಮುತ್ತಲೂ ಸುಳಿದಾಡುತ್ತಿದ್ದಾರೆ. ಅವರನ್ನು ಯಾವಾಗ ಮುಗಿಸುವರೋ ಗೊತ್ತಿಲ್ಲ ಎಂದು ಅವರ ಹಿತೈಷಿಗಳೇ ಹೇಳುತ್ತಿದ್ದಾರೆ. ಒಟ್ಟಾರೆ ಚಂದ್ರಶೇಖರ್‌ರವರು ಜನತಾದಳದ ಬೆಳವಣಿಗೆ ಬಗ್ಗೆ ಅಸಮಾಧಾನ ಹೊಂದಿದ್ದಾರೆ. ಅವರು ಮರಳಿ ಜನತಾಪಕ್ಷದ ನಾಯಕತ್ವ ವಹಿಸಿಕೊಳ್ಳ ಬೇಕೆಂಬ ಆಸೆ ನನ್ನದು.

● **ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತದ ಬಗ್ಗೆ ನಿಮ್ಮ ಅಭಿಪ್ರಾಯ ಏನು?**

ರಾಷ್ಟ್ರಪತಿ ಆಡಳಿತದ ಅವಧಿಯಲ್ಲಿ ವರ್ಗಾವರ್ಗಿ ಬಿಟ್ಟರೆ ಬೇರೆ ಏನೂ ಆಗುತ್ತಿಲ್ಲ. ರಾಜ್ಯಪಾಲರು ರಾಜ್ಯದ ಸುವ್ಯವಸ್ಥೆ ಕಾಪಾಡುವಲ್ಲಿ ಜನರ ಆಶೋತ್ತರಗಳನ್ನು ಈಡೇರಿಸುವಲ್ಲಿ ವಿಫಲರಾಗಿದ್ದಾರೆ. ಜನತೆಯನ್ನು ತಮ್ಮ ಅಧಿಕಾರಾವಧಿಯಲ್ಲಿ ಖುಷಿ ಪಡಿಸುವ ಕೆಲಸದಲ್ಲಿ ತೊಡಗಿದ್ದಾರೆ. ಉದಾಹರಣೆಗೆ ತುಮಕೂರು ಜಿಲ್ಲಾಧಿಕಾರಿ ಕಛೇರಿ ಕಟ್ಟಡದ ಕೆಲಸ ಅರ್ಧ ಆಗಿದೆ. [illegible] ಮುಂಭಾಗಕ್ಕೆ ಸುಣ್ಣ ಹಚ್ಚಿ, ಅದನ್ನು ಅನಾವರಣ ಮಾಡುವ ಕೆಲಸಕ್ಕೆ ಕೈ ಹಾಕಿದ್ದಾರೆ. ಒಟ್ಟಾರೆ ರಾಷ್ಟ್ರಪತಿ ಆಡಳಿತ ಹಸಿಬಿಸಿಯಾಗಿದೆ ಎಂದು ಅರ್ಥೈಸಬಹುದು.

● **ಹೆಗಡೆಯವರ ಸಂಪುಟದಲ್ಲಿ ಈ ಮೊದಲು ಮಂತ್ರಿಯಾಗಿದ್ದಿರಲ್ಲ ಆಗ ನಿಮ್ಮ ಹಾಗೂ ಅವರ ಸಂಬಂಧ ಹೇಗಿತ್ತು?**

ಹೆಗಡೆಯವರನ್ನು 1969ರಿಂದಲೂ ಬಲ್ಲೆ. ಆಗ ಅವರಲ್ಲಿರುವ ಸದ್ಗುಣಗಳನ್ನು ಕೂಡ ಬಲ್ಲೆ. ಆದರೆ 1983ರಲ್ಲಿ ಅವರು ಹೊಸ ಹೆಗಡೆಯಾಗಿದ್ದಾರೆ ಎಂದು ಭ್ರಮಿಸಿದ್ದೆ. ಏಕೆಂದರೆ ತುರ್ತುಪರಿಸ್ಥಿತಿಯ ವೇಳೆಯಲ್ಲಿ ಜೈಲಿಗೆ ಹೋದ ಅವರಲ್ಲಿ ಬಹಳಷ್ಟು ಬದಲಾವಣೆ ಆಗಿದೆ ಎಂದು

ಕೇಳಿದ್ದೆ. ಆದರೆ 1988ರಲ್ಲಿ ನಾನು ಮೋಸಹೋದೆ; ಅವರು ಮೊದಲಿನ ಹೆಗಡೆಯ ಅವತಾರವೇ ಎಂದು ತಡವಾಗಿ ನಾನು ಅರಿತುಕೊಂಡೆ.

ಆದರೆ ನನ್ನನ್ನು ಅವರೆಂದೂ ಅಗೌರವದಿಂದ ನಡೆಸಿಕೊಂಡಿಲ್ಲ. ನನ್ನ ಬಗ್ಗೆ ಅವರಲ್ಲಿ ಭಯಮಿಶ್ರಿತವಾದ ಗೌರವವಿತ್ತು. ನನ್ನ ಕ್ಷೇತ್ರದ ಕೆಲಸ ಮಾಡುವಾಗಿನ ಅವರ ಸಹಕಾರ ಬಹಳವಿರುತ್ತಿತ್ತು. ಇಲಾಖೆಯಲ್ಲಿ ಹಸ್ತಕ್ಷೇಪ ಮಾಡಲು ಹಿಂದೇಟು ಹಾಕುತ್ತಿದ್ದರು. ಒಟ್ಟಾರೆ ನಮ್ಮಿಬ್ಬರ ಸಂಬಂಧ ಚೆನ್ನಾಗಿತ್ತು.

- **ನೀವು ಅಧಿಕಾರದಲ್ಲಿದ್ದಾಗ ರೇಷ್ಮೆ ಹಾಗೂ ತೋಟಗಾರಿಕೆ ಇಲಾಖೆಯಲ್ಲಿ ಯಾವುದಾದರು ಭ್ರಷ್ಟಾಚಾರ ನಡೆಸುವ ಸನ್ನಾಹ ನಡೆದಿತ್ತೆ ?**

ರೇಷ್ಮೆ ಇಲಾಖೆಗೆ ರೇಷ್ಮೆ ಬಿತ್ತನೆ ಕೋರಿಗಳಿಗಾಗಿ ಶೀತಗೃಹ ಮಾಡಲು ಯಂತ್ರ ಬೇಕಾಗಿದ್ದವು. ಈ ಯಂತ್ರಗಳ ವ್ಯವಹಾರ ಹನ್ನೊಂದು ಕೋಟಿ ರೂಪಾಯಿ ಆಗಿತ್ತು. ಯಂತ್ರ ಪೂರೈಸಲು ಕೊರಿಯ ದೇಶದ ಲಕ್ಕಿ ಗೋಲ್ಡ್ ಸ್ಟಾರ್ ಹಾಗೂ ಜಪಾನಿನ ಮಾರ್ಬನಿ ಕಂಪನಿಗಳು ಮುಂದೆ ಬಂದಿದ್ದವು. ಈ ವ್ಯವಹಾರದಲ್ಲಿ 30 ಲಕ್ಷ ರೂಪಾಯಿ ಕಮೀಷನ್ ಕೊಡುವ ಆಸೆಯೂ ಆಯಾ ಕಂಪನಿಗಳು ನನಗೆ ತೋರಿಸಿದ್ದವು. ಕಮೀಷನ್ ಕೊಡುವ ವಿಚಾರ ಬಂದಾಗ ನನ್ನ ಮನಸ್ಸಿನಲ್ಲಿ ಈ ಯಂತ್ರಗಳ ಸಮರ್ಥತೆ ಬಗ್ಗೆ ಶಂಕೆ ಪ್ರಾರಂಭವಾಯಿತು. ಈ ವ್ಯವಹಾರದ ಫೈಲು ಅಲ್ಲಿಯೇ ಮುಚ್ಚಿ ಇಟ್ಟುಬಿಟ್ಟೆ.

ನಾನು ಯಂತ್ರಗಳ ಸಾಚಾತನದ ಬಗ್ಗೆ ಸ್ವತಃ ಖರ್ಚಿನಲ್ಲಿ ಜಪಾನ್ ದೇಶದ ಪ್ರವಾಸಕ್ಕೆ ಹೋದಾಗ, ಹೆಗಡೆಯವರು ಮಂತ್ರಿಸ್ಥಾನದಿಂದ ತೆಗೆದುಹಾಕಿದ್ದರು. ನಾನು ಮಂತ್ರಿಸ್ಥಾನದಿಂದ ನಿರ್ಗಮಿಸಿದ ಬಳಿಕ ಯಾವ ಯಂತ್ರಗಳು 11 ಕೋಟಿಗೆ ಖರೀದಿಸ ಬಹುದಿತ್ತೋ ಅದನ್ನೇ ವರ್ಷ ತುಂಬುವುದರೊಳಗಾಗಿ 26 ಕೋಟಿ ರೂಪಾಯಿಗೆ ಮಾರ್ಬನಿ ಯಂತ್ರ ಕೊಳ್ಳಲು ಹೆಗಡೆಯವರು ತೀರ್ಮಾನ ತೆಗೆದುಕೊಂಡರು.

ಇದರಲ್ಲಿ ಭಾರಿ ಪ್ರಮಾಣದ ಭ್ರಷ್ಟಾಚಾರವಾಗಿದೆ. ನಾನು ಅಂದು 30 ಲಕ್ಷ ಪಡೆದು ಈ ಖರೀದಿಗೆ ಸಹಿ ಹಾಕಿದ್ದರೆ 11 ಕೊಟಿಗೆ ಶೀತಗೃಹ ಯಂತ್ರ ಖರೀದಿಯಾಗುತ್ತಿದ್ದವು, ನಾನು ಪ್ರಾಮಾಣಿಕವಾಗಿ ಈ ಖರೀದಿ ವ್ಯವಹಾರವೇ ತಟಸ್ಥಗೊಳಿಸಲು ಯತ್ನಿಸಿದ ಫಲವಾಗಿ ಈ ರಾಜ್ಯದ ಜನರಿಗೆ 15 ಕೋಟಿ ರೂಪಾಯಿ ಹೆಚ್ಚಿನ ಹಣದ ಹೊರೆಯಾಯಿತು. ನಾನು ಸಾಚಾತನದಿಂದ ನಡೆದುದರ ಪ್ರತಿಯಾಗಿ ಹೆಗಡೆಯವರು ಇಲಾಖೆಗೆ ಹಾಗೂ ಜನರಿಗೆ ನೀಡಿದ ಬಳುವಳಿ ಇದು.

ಈ ಖರೀದಿಯ ವೇಳೆಯಲ್ಲಿ ಹೆಗಡೆಯವರು ವಿಪರೀತ ಆಸಕ್ತಿ ವಹಿಸಿದ್ದರು. ರೇಷ್ಮೆ ಇಲಾಖೆಯ ನಿರ್ದೇಶಕರಾದ ದಾಸ್ ಅವರಿಗೆ ನೇರವಾಗಿ ಫೋನ್ ಮಾಡಿ ಮೇಲಿಂದ ಮೇಲೆ ಖರೀದಿ ವ್ಯವಹಾರದ ಫೈಲಿನ ಬೆಳವಣಿಗೆಯ ಬಗ್ಗೆ ವಿಚಾರಿಸುತ್ತಿದ್ದರು. ಏಕೆ ಹೆಗಡೆಯವರು ನನ್ನ ಜೊತೆ ಇದರ ಬಗ್ಗೆ ಚರ್ಚಿಸಲಿಲ್ಲ? ತಾಂತ್ರಿಕ ಸಮಿತಿ ಹಾಗೂ ಆಡಳಿತ್ಮಕ ಸಮಿತಿ ವರದಿಯ ಹಲವಾರು ಅಂಶಗಳನ್ನು ಬದಿಗೊತ್ತಿ ಈ ವ್ಯವಹಾರ ಕುದುರಿಸಲಾಯಿತು.

- **ಲಾಲ್‌ಬಾಗ್‌ನಲ್ಲಿ "ರಾಕ್ ಗಾರ್ಡನ್" ಮಾಡುವ ವ್ಯವಹಾದರದಲ್ಲಿಯೂ ಹೆಗಡೆ ಭಾರಿ ಆಸಕ್ತಿ ವಹಿಸಿದ್ದ ಬಗ್ಗೆ ವರದಿ ಇದೆಯಲ್ಲ?**

ನಾನು ತೋಟಗಾರಿಕೆಯ ಮಂತ್ರಿಯಾಗಿದ್ದಾಗ ಲಾಲ್‌ಬಾಗ್‌ನಲ್ಲಿ ಜಪಾನ್ ಮಾದರಿಯ **"ರಾಕ್ ಗಾರ್ಡನ್"** ಮಾಡುವಂತೆ ಹೆಗಡೆಯವರು ಸೂಚಿಸಿದ್ದರು. ಈ ಯೋಜನೆಯ ಬಗ್ಗೆ ಸರ್ಕಾರದ ಹತ್ತಿರ ಯಾವುದೇ ರೀತಿಯ ಅಂದಾಜು ಇಲ್ಲ. ಟೆಂಡರು ಇಲ್ಲ, ಅನುಭವ ಇಲ್ಲ, ಏನೂ ಇಲ್ಲ. ಆದರೂ ಒಂದು ದಿನ ಇದ್ದಕ್ಕಿದ್ದಂತೆ 20 ಲಕ್ಷ ರೂ. ಅಂದಾಜಿನ ಈ ಯೋಜನೆಯನ್ನು ಬೊಂಬಾಯಿಯ ಮಿಸ್ ರಾಜಕುಮಾರಿ ನಿರ್ವಹಿಸಲು ಸಿದ್ದರಿದ್ದಾರೆ, ಅವರಿಗೆ ಕೆಲಸದ ಮುಂಗಡ ಹಣವಾಗಿ ಮೂರು ಲಕ್ಷ ನೀಡುವಂತೆ ಸೂಚಿಸಿ ಹೆಗಡೆಯವರಿಂದ ಪತ್ರ ಬಂದಿತು. ಇದರಲ್ಲಿ ಹೆಗಡೆಯವರ ವೈಯಕ್ತಿಕ ಹಸಿವು ಅಡಗಿದೆ ಎಂದು ಭಾವಿಸಿ ಅನೇಕ ಸಬೂಬು ಹೇಳಿ ಈ ಯೋಜನೆಯನ್ನು ಕೈ ಬಿಟ್ಟೆ.

20 ಲಕ್ಷ ರೂಪಾಯಿಯ **ರಾಕ್ ಗಾರ್ಡನ್** ಮಾಡಲು ಸಿದ್ದರಿಂದ ಹೆಗಡೆಯವರು, ತೆಂಗಿನಕಾಯಿ ಬೀಜಕ್ಕಾಗಿ 5 ಲಕ್ಷ ರೂ. ಹಣ ಮಂಜೂರು ಮಾಡಲು ಒಂದು ಸಂದರ್ಭದಲ್ಲಿ ಒಪ್ಪಲಿಲ್ಲ. ಇಂತಹ ಅನೇಕ ಘಟನೆ ನಡೆದಿವೆ. ಸಮಯ ಬರಲಿ ಎಲ್ಲ ಹಗರಣಗಳನ್ನು ಬಯಲಿಗೆ ಎಳೆಯುವೆ, ನೋಡೋಣ ಅವರು ಉತ್ತರಿಸಲಿ. ○

**- ಅಭಿಮಾನಿ ಪತ್ರಿಕೆ**

(4-10-1989)

## ನೀರಿನ ರಾಜಕೀಯದ ವಿರುದ್ಧ ಹೋರಾಟ

**ನೀರಿನ ಸಂಬಂಧದಲ್ಲಿ ಕೇಂದ್ರ ಕಾರಾಗೃಹದಲ್ಲಿಯೇ ಅವರನ್ನು ಪತ್ರಿಕೆಗಾಗಿ ಸಂದರ್ಶನ ನಡೆಸಿದೆ. ನೋಡಲು ಹಣ್ಣಾಗುತ್ತಿರುವಂತೆ ಕಂಡುಬಂದರೂ ರಾಮಯ್ಯನವರು ಗಟ್ಟಿತನ ಹೊಂದಿದ್ದಾರೆ. ಜೋರು ಮಾತಾಡುವ ಅದೇ ಗತ್ತನ್ನು ಉಳಿಸಿಕೊಂಡಿದ್ದಾರೆನಿಸಿತು.**

● **ಹೇಮಾವತಿ ನೀರಿನ ವಿವಾದ ನಿಮ್ಮ ಮತ್ತು ದೇವೇಗೌಡರ ನಡುವಿನ ಕಾದಾಟವಾಗಿರುವಂತಿದೆಯೇ ?**

- ಅಲ್ಲವೇ ಅಲ್ಲ. ಅವರನ್ನು ನನ್ನಷ್ಟು ಪ್ರೀತಿಸಿದವರು ಬೇರಾರು ಇರಲಾರರು. ಇದೇ ಬಗೆಯ ನೀರಾವರಿ ಯೋಜನೆಗಳಿಗಾಗಿಯೇ ಹಣ ಕೊಡಲಿಲ್ಲವೆಂದು ಹೆಗಡೆ ಜೊತೆ ಕಾದಾಡಿ ಸಂಪುಟದಿಂದ ಹೊರಬಂದು, ಮಣ್ಣಿನಮಗ ಪಟ್ಟಕ್ಕೆ ಬರಬೇಕೆಂದು ಹೇಳಿಕೊಂಡು ಮುಖ್ಯಮಂತ್ರಿ ಸಿಂಹಾಸನ ಸಿಕ್ಕಿದ್ದೇ ತಡ, ಮಣ್ಣಿನ ಮಕ್ಕಳಿಗೆ ಅನ್ಯಾಯ ಮಾಡುವ ದಿಕ್ಕಿನಲ್ಲಿ ಸಾಗಿದ್ದನ್ನು ಕಂಡು ವ್ಯಥೆಯಾಗುತ್ತಿದೆ. ಮೊಯ್ಲಿ ಮುಖ್ಯಮಂತ್ರಿಯಾಗಿದ್ದಾಗ ಇದೇ ಗೌಡರು ನನ್ನನ್ನು ಮುಖ್ಯಮಂತ್ರಿ ಮನೆಮುಂದೆ ಹೋಗಿ ಧರಣಿ ನಡೆಸಿ ಎಂದು ಹುಕುಂ ಕೊಡಿಸಿದ್ದರು. ಆದರೆ ಇಂದು ಮುಖ್ಯಮಂತ್ರಿ ಮನೆ ಮುಂದೆ ತುಮಕೂರು ಜಿಲ್ಲೆ ಜನರ ನೀರಿನ ಬವಣೆ ತಪ್ಪಿಸಿ ಎಂದು ಧರಣಿ ನಡೆಸಿದರೆ ಜೈಲಿಗಟ್ಟುತ್ತಾರೆ. ನಮಗೆ ಏನೆಲ್ಲವನ್ನೂ ಕೊಟ್ಟ ಜನತೆಗಾಗಿ ಇಷ್ಟನ್ನೂ ನಾವು ಮಾಡದಿದ್ದರೆ ಹೇಗೆ? ಇದು ನಮ್ಮ ವೈಯಕ್ತಿಕ ಪ್ರತಿಷ್ಠೆಯ ಪ್ರಶ್ನೆ ಅಲ್ಲ.

● **ನಿಮ್ಮ ಪರವಾಗಿ ಸದನದಲ್ಲಿ ಯಾರೂ ಚಕಾರವೆತ್ತದಿರಲು ಕಾರಣ ?**

- ಅದೇ ನನಗೂ ಆಶ್ಚರ್ಯ! ಗೌಡರು ಎಲ್ಲರನ್ನೂ ಬಾಯಿ ಮುಚ್ಚಿಸುವ ದುಷ್ಟಸಾಹಸ ಮಾಡಿದ್ದರೆ ಅದು ಅವರಿಗೇ ಮುಳುವಾಗುತ್ತದೆ.

● **ಕನಿಷ್ಟ ಜಿಲ್ಲೆಯ ಶಾಸಕರಾದರೂ ಉಸಿರೆತ್ತಬಹುದಿತ್ತಲ್ಲವೇ ?**

- ಖಂಡಿತಾ. ಆದರೆ ಯಾರ್‍ಯಾರಿಗೆ ಯಾವ್ಯಾವ ಕಾರಣಕ್ಕೆ ದೇವೇಗೌಡರೇ ಬೇಕಾಗಿದೆಯೊ?

● **ಹೇಮಾವತಿ ವಿಚಾರವಾಗಿ ಸ್ವಾಮಿಗಳನ್ನು ಸಂಪರ್ಕ ಮಾಡಿದ್ದಿರಾ ?**

- ಅವರ ಬಳಿಯೂ ಮಾತಾಡಿದೆ. ಈ ನೀರಿಗಾಗಿ ನಾನು ಯಾರ ಕಾಲಿಗೆ ಬೇಕಾದರೂ ಬೀಳುತ್ತೇನೆ. ಯಾರ ಜೊತೆಯಾದರೂ ಮೈತ್ರಿಯಿಂದ ವರ್ತಿಸಬಲ್ಲೆ. ಅನ್ಯಾಯವಾದರೆ ಶತ್ರುವೂ ಆಗಬಲ್ಲೆ. ದಯಮಾಡಿ ಗೌಡರಿಗೆ ಹೇಳಿ, ನಮ್ಮ ಜನರಿಗೆ ನೀರು ಕೊಡಿಸಿ ಎಂದು

ಬೇಡಿದೆ. ಕೆಲಸ ಗೆಲ್ಲೋವರೆಗೆ ಸ್ವಾಮಿಗಳು ಬೇಕಾಗಿತ್ತೇನೋ ಅಂಥವರಿಗೆ 'ನಂಗೊಂತ್ತು ಬುದ್ಧಿ... ನೀವು ಸುಮ್ನಿರಿ ....' ಅಂತಾರಂತೆ ಈ ಮುಖ್ಯಮಂತ್ರಿ.

ರಾಜ್ಯದ ಮುಖ್ಯಮಂತ್ರಿಯಾಗಿ ರಾಜ್ಯದ ಒಂದು ಜಿಲ್ಲೆಯಾದ ತುಮಕೂರಿಗೆ ನೀರು ಕೊಡಲು ರಾಜಕೀಯ ಯಾಕೆ ಮಾಡುತ್ತಿದ್ದಾರೆ? ನಂಗಂತೂ ಅರ್ಥವಾಗುತ್ತಿಲ್ಲ. ಅದೇನು ಇವರು ಬರೀ ಹಾಸನದ ಮುಖ್ಯಮಂತ್ರಿಯೋ, ರಾಜ್ಯದ ಮುಖ್ಯಮಂತ್ರಿಯೋ ಅನ್ನಿಸುತ್ತೆ. ಈ ವಿಚಾರದಲ್ಲಿ ದೇವೇಗೌಡ, ಶ್ರೀಕಂಠಯ್ಯ, ನಂಜೇಗೌಡರೆಲ್ಲಾ ಒಂದಾಗಿದ್ದಾರೇನೋ ಎಂಬ ಅನುಮಾನ ಶುರುವಾಗುವ ಅಪಾಯವಿದೆ. ದೇವೇಗೌಡ, ನಂಜೇಗೌಡರ ನಡುವೆ ಈ ಬಗ್ಗೆ ಗುಟ್ಟಾದ ಒಪ್ಪಂದವೇನೋ ನಡೆದಿದೆ ಎಂಬುದು ಗುಲ್ಲೆದ್ದಿದೆ.

● **ಹಾಸನ ಜಿಲ್ಲೆಯಲ್ಲಿ ಹೇಮಾವತಿ ನಾಲೆಯಲ್ಲಿಯೇ ಏತ ನೀರಾವರಿಗೂ ಕಾಮಗಾರಿ ಭರದಿಂದ ಸಾಗುತ್ತಿವೆಯೆಂಬ ವಿಚಾರವಿದೆಯಲ್ಲಾ ?**

- ಮಂಡ್ಯದ ನಾಗಮಂಗಲ, ತುಮಕೂರಿನ ಅನೇಕ ತಾಲ್ಲೂಕುಗಳಲ್ಲಿನ ಬೆಳೆಗಳು ನೀರಿಲ್ಲದೆ ಬತ್ತಿ ಹೋಗುತ್ತಿವೆ. ಕುಡಿಯುವ ನೀರಿಗೂ ಪರದಾಡುವಂತಾಗಿದೆ. ಬಹುತೇಕ ಕೆರೆಗಳು ಬತ್ತಿ ಹೋಗಿವೆ. ಇಂತಹ ಭೀಕರ ಸಂದರ್ಭದಲ್ಲಿಯೂ ಈ ಮಣ್ಣಿನಮಗನಿಗೆ ಕರುಣೆ ಬರುತ್ತಿಲ್ಲವೆಂದರೆ ಹೇಗೆ? ಇದೇ ಸಂದರ್ಭದಲ್ಲಿ ಹಾಸನ ಜಿಲ್ಲೆಯಲ್ಲಿ ಏತ ನೀರಾವರಿ ಕೆಲಸ ನಡೆದಿದೆಯೆಂದು ಗೊತ್ತಾಗಿದೆ. ಇದಕ್ಕೇನನ್ನೋಣ?

● **ಈ ಹಿಂದಿನ ಮುಖ್ಯಮಂತ್ರಿಗಳು ಹೇಮಾವತಿ ವಿಚಾರವಾಗಿ ಹೇಗೆ ವರ್ತಿಸಿದ್ದರು ?**

- ನಿಮಗೆ ಆಶ್ಚರ್ಯವಾಗಬಹುದು. ಬಂಗಾರಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ತುಮಕೂರಿನಲ್ಲಿ ನಾವು ಧರಣಿ ನಡೆಸುತ್ತಿದ್ದ ಸ್ಥಳಕ್ಕೇ ನೀರಾವರಿ ಮಂತ್ರಿ ಮಲ್ಲಾರಿಗೌಡ ಪಾಟೀಲರನ್ನು ಖುದ್ದು ಕಳಿಸಿದ್ದರು. ಅವರು ಕೊಟ್ಟ ಭರವಸೆಯಂತೆ ತಿಂಗಳಲ್ಲಿ ಕೆಲಸ ಪ್ರಾರಂಭಿಸಿದರು. 1 ತಿಂಗಳಲ್ಲೇ 9 ಮೈಲು ಕಾಲುವೆ ಕೆಲಸ ಮಾಡಿಸಿದರು. ನೀರಾವರಿಗೆ ಸಂಬಂಧಿಸಿದಂತೆ ಸಮಿತಿಯೊಂದನ್ನು ಮಾಡಿಸಿದ್ರು. ಮೊಯ್ಲಿಯವರು ಅಧಿಕಾರದಲ್ಲಿದ್ದಾಗ ಮೂರು ಗಂಟೆ ಸತತವಾಗಿ ಸಮಿತಿ ಸಭೆ ಸೇರಿ ಚರ್ಚೆ ನಡೆಸಿದ್ದರು. 4 ತಿಂಗಳ ಅವಧಿಯಲ್ಲಿ 36 ಕೋಟಿ ಹಣವನ್ನು ನೀರಾವರಿ ಕಾಮಗಾರಿಗೆ ಖರ್ಚು ಮಾಡಿದ್ದರು. ಆದರೆ ಈ ದೇವೇಗೌಡರು 4 ತಿಂಗಳಲ್ಲಿ 8 ಕೋಟಿ ಮಾತ್ರ ನೀಡಿದ್ದಾರೆ. 25 ಕೋಟಿಯಷ್ಟು ಗುತ್ತಿಗೆದಾರರ ಬಾಕಿ ಹಣ ಕೊಡದೆ ಕಾಮಗಾರಿ ಕೆಲಸ ನಿಲ್ಲಿಸಿ ಎಲ್ಲರನ್ನೂ ಓಡಿಸಿದ್ದಾರೆ.

**ಹೇಮಾವತಿ ನದಿ ನೀರಿನ ವಿಚಾರ ವೈ.ಕೆ.ಆರ್. ಮತ್ತು ದೇವೇಗೌಡರ ನಡುವಿನ ಜಿದ್ದಿನ ವಿವಾದ ಆದದ್ದು ದುರದೃಷ್ಟಕರ. ಹೇಮಾವತಿ ಜಲಾಶಯದಲ್ಲಿ ಸಾಕಷ್ಟು ನೀರಿದೆ. ಆದರೆ**

ತುಮಕೂರು ಜಿಲ್ಲೆಯ ಬಹುತೇಕ ಭಾಗ ಬೆಂಗಾಡಿನಂತೆ ಈ ಬೇಸಿಗೆಯಲ್ಲಿ ತತ್ತರಗುಡುತ್ತಿದೆ. ಅದರಲ್ಲೂ ಶಿಂಷಾ ನದಿಯ ಪಾತ್ರದಲ್ಲಿರುವ ಗಂಗನಘಟ್ಟ, ಮಲ್ಲಾಘಟ್ಟ, ಸೋಣವಿನ ಕೆರೆ, ತುರುವೇಕೆರೆ, ಮಾರ್ಕೋನಹಳ್ಳಿಯ ಜಲಾಶಯಗಳಿಗೆ ಹರಿದು ಬರುತ್ತಿದ್ದ ನೀರನ್ನು ಏಕಾಏಕಿ ನಿಲ್ಲಿಸಲಾಗಿದೆ. ಅದಲ್ಲದೆ ಕಾಮಗಾರಿ ಕೆಲಸ ಕೂಡಾ ನಿಂತು ಹೋಯಿತು. ಈ ಕುರಿತಂತೆ ದೇವೇಗೌಡರಿಗೆ ರಾಮಯ್ಯನವರು ಜನವರಿಯಿಂದ ಅನೇಕ ಪತ್ರಗಳನ್ನು ಬರೆದು ಒತ್ತಾಯಿಸಿದ್ದಾರೆ. ಒಂದಕ್ಕೂ ಉತ್ತರವಾಗಲಿ, ಕೆಲಸವಾಗಲಿ ಆಗಲಿಲ್ಲ. ತುಮಕೂರು ಗೇಟ್‌ಗೆ 4 ಕಿ.ಮೀಟರ್ ದೂರದವರೆಗೂ ಆಳವಾದ ಕಾಲುವೆ ಕಾಮಗಾರಿ ನಡೆದಿದೆ. ಇದು ಮೊಯ್ಲಿ ಕಾಲದಲ್ಲಿ ಆದದ್ದು. ದೇವೇಗೌಡರು ಬಂದೊಡನೆ ನಿಲ್ಲಿಸಿದ ದುಷ್ಟ ಆಲೋಚನೆಯಾದರೂ ಯಾವುದು?

ಈ ಬಗ್ಗೆ ಆಳ ಕೆದಕುತ್ತಾ ಹೋದಷ್ಟು ರಾಜ್ಯದ ಜನರ ನಡುವೆಯೇ ವೈಷಮ್ಯ ಬೆಳೆದೀತು. ದೇವೇಗೌಡರು ಇಷ್ಟೊಂದು ಸಣ್ಣತನವನ್ನು ಪ್ರದರ್ಶಿಸುವ ಅಗತ್ಯವಿರಲಿಲ್ಲ. ರಾಮಯ್ಯನವರ ವಾದದಲ್ಲಿ, ಹೋರಾಟದಲ್ಲಿ ಹುರುಳಿದೆ. ಶಾಸಕರಾಗಿಲ್ಲ, ಆದರೂ ಹೋರಾಟ ನಡೆಸುವ ಎದೆಗಾರಿಕೆ, ಕಳಕಳಿಯನ್ನು ಉಳಿಸಿಕೊಂಡಿರುವುದು ಸಮಾಧಾನಕರ ಸಂಗತಿ. ಪ್ರತಿನಿಧಿಗಳಾಗಿ ಆಯ್ಕೆಗೊಂಡ ಜಿಲ್ಲೆಯವರೇ ತೆಪ್ಪಗೆ ಕೂತ ಸಂದರ್ಭದಲ್ಲೇ ಇಷ್ಟಾದರೂ ಮಾತಾಡಿದ್ದು ಒಳ್ಳೇ ಬೆಳವಣಿಗೆ. ಈಗೀಗ ಜಿಲ್ಲೆಯ ಜನರೇ ಬೀದಿಗೆ ಬಂದು ಪ್ರತಿಭಟನೆ ನಡೆಸಲು ಮುಂದಾಗಿರುವುದು ಪ್ರತಿನಿಧಿಗಳಿಗೆ ಇರಿಸುಮುರಿಸು ತಂದಿಕ್ಕಿದೆ.

1983, 1985, 1992ರಲ್ಲಿ ವಿಧಾನಸಭೆಗೆ ಆಯ್ಕೆಯಾಗುವಾಗಲೆಲ್ಲಾ ರಾಮಯ್ಯನವರು ದೇವೇಗೌಡರ ಜೊತೆಗಿದ್ದವರೇ. ಈಗ ಅವರಿಂದ ಸಿಡಿದು ದೂರವಾಗಿ ಸಮಾಜವಾದಿ ಪಕ್ಷದ ರಾಜ್ಯಾಧ್ಯಕ್ಷರಾಗಿದ್ದಾರೆ. 1989ರ ಚುನಾವಣೆ ನಂತರವೇ ದೇವೇಗೌಡರಿಂದ ದೂರಾಗಿದ್ದರು. 1992ರ ಚುನಾವಣೆಯಲ್ಲಿ ಹತ್ತಿರವಾಗಿ ಅವರ ಗೆಲುವಿಗಾಗಿ ದೇವೇಗೌಡ ಶ್ರಮಿಸಿದ್ದುಂಟು. ನಂತರ ಇದ್ದಕ್ಕಿದ್ದಂತೆ ಇಬ್ಬರ ನಡುವೆ ಭಾರೀ ಬಿರುಕು ಕಂಡುಬಂತು. ಅದು ಈಗಲೂ ತಣ್ಣಗಾಗಿಲ್ಲ. ತಣ್ಣಗಾಗುವ ಸೂಚನೆಯೂ ಇಲ್ಲ. 'ಸ್ವಲ್ಪ ಹೊಂದಿಕೊಂಡಿದ್ದರೆ ಈಗ ಮಂತ್ರಿಯಾಗಬಹುದಿತ್ತು ಎಂದು ರಾಮಯ್ಯನವರನ್ನು ಕುರಿತಂತೆ ಆಡಿಕೊಳ್ಳುವುದುಂಟು. ಅದನ್ನವರು ಒಪ್ಪುವುದಿಲ್ಲ. ಹೊಂದಿಕೊಂಡು ಬಾಳುವುದು ಅಂದರೆ ಏನು? ಅಂದರೆ ಎಲ್ಲವನ್ನೂ ಸಹಿಸಿಕೊಳ್ಳಬೇಕೆಂಬುದೇ ಇದರ ಅರ್ಥವೆ? ಹಂಗಿನರಮನೆ ಯಾರಿಗೆ ಬೇಕು? ಈ ಸಹವಾಸದಲ್ಲಿ ಸಾಕಷ್ಟು ನೊಂದಿರುವೆ... ಎಂದು ವಿಷಾದಿಸುತ್ತಾರೆ.

● ಮುಂದೆ ಎಂದಾದರೂ ನಿಮ್ಮಿಬ್ಬರ ನಡುವೆ ಹೊಂದಾಣಿಕೆ ಅಥವಾ ಮೈತ್ರಿ ಉಂಟಾಗಲು ಸಾಧ್ಯವಿಲ್ಲವೆ ?

- ರಾಜಕೀಯವಾಗಿ ಮುಂದೆ ಬೆಳವಣಿಗೆಗಳು ಆದಾವೋ ಎಂದು ಯಾರು ನಿರೀಕ್ಷಿಸಲು ಸಾಧ್ಯ? ಆದರೆ ಎಲ್ಲಕ್ಕೂ ಹೊಂದಾಣಿಕೆ ಮಾಡಿಕೊಳ್ಳುವ, ಅದರಿಂದ ಬದುಕಬೇಕಾದ ಜಾಯಮಾನ

ಅಥವಾ ಹಣೆಬರಹ ನನ್ನದಲ್ಲ. ನನ್ನ ಜನರಿಗಾಗಿ, ಅವರ ಒಳಿತಿಗಾಗಿ ಯಾರೊಡನೆ ಬೇಕಾದರೂ ತಲೆಬಾಗಬಲ್ಲೆ. ಮೈತ್ರಿಗೆ ಮುಂದಾಗಬಲ್ಲೆ. ಆದರೆ ಜನರ ಒಳಿತಿಗೆ ಧಕ್ಕೆ ಬಂದರೆ ಯಾರೊಡನೆ ಬೇಕಾದರೂ ಕಾದಾಡುತ್ತೇನೆ ....!

ಒಣಗಿದ ಹೊಲಕ್ಕೆ, ದಣಿದ ಬಾಯಿಗೆ ನೀರುಣಿಸಿ ಎಂದು ಕೇಳಿದರೆ ಮಣ್ಣಿನ ಮಗನ ಸರ್ಕಾರ ಜೈಲಿಗೆ ಕಳಿಸುತ್ತದೆ ಎಂದು ರೋಷಗೊಂಡ ವೈ.ಕೆ.ಆರ್ **'ನಾವೇನೂ ಜೈಲು ಕಾಣದವರೇ? ಜನರ ಋಣ ತೀರಿಸುವ ಕಾರಣಕ್ಕಾಗಿ ನೇಣುಗಂಭಕ್ಕೂ ಸಿದ್ಧ!'** ಎಂದು ಘೋಷಿಸಿದರು.

ಏನೇ ಆಗಲಿ, ಇವರಿಬ್ಬರ ನಡುವೆ ಯಾವುದೇ ದೊಡ್ಡ ಒಡಕು, ವಿವಾದಗಳೇ ಇರಲಿ, ವ್ಯಕ್ತಿ ಪ್ರತಿಷ್ಠೆಗಳೇ ಇರಲಿ, ಅವನ್ನೆಲ್ಲಾ ಬದಿಗೊತ್ತಿ ದೇವೇಗೌಡರು ಮುತ್ಸದ್ದಿತನದಿಂದ ವರ್ತಿಸಿ, ಸದನದಲ್ಲಿ ಮಾತುಕೊಟ್ಟಿರುವ ಪ್ರಕಾರ ಕಾಮಗಾರಿಗಳನ್ನು ಕೂಡಲೇ ನಡೆಸಲಿ. ಇದರಿಂದ ಅವರ ಅಧಿಕಾರ ಮತ್ತು ವ್ಯಕ್ತಿತ್ವಕ್ಕೆ ಒಳ್ಳೆಯದು. ○

**- ಜಾವೆಂ.**

(ಮಾರ್ದನಿ : 16-4-1995)

ಜೆ.ಎಚ್. ಪಟೇಲ್
ಮುಖ್ಯಮಂತ್ರಿ

ಬೆಂಗಳೂರು - 560 001

ನಂ.ಸಿ ಎಂ / ಡಿ ಓ 17/96 21-6-1996

ಪ್ರಿಯ ಶ್ರೀ ರಾಮಯ್ಯನವರಿಗೆ,

ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿ ನಾನು ಅಧಿಕಾರ ವಹಿಸಿಕೊಂಡಿರುವ ಈ ಸಂದರ್ಭದಲ್ಲಿ ನೀವು ದಿನಾಂಕ 14-6-1996ರಂದು ಕಳುಹಿಸಿದ ಅಭಿನಂದನ ಪತ್ರ ತಲುಪಿದೆ. ಧನ್ಯವಾದಗಳು.

ನಿಮ್ಮ ಪತ್ರದಲ್ಲಿ ತಿಳಿಸಿರುವ ಹಾಗೆ, ಯಾವ ವರ್ಷವೂ ಆಯವ್ಯಯದಲ್ಲಿ ನೀರಾವರಿಗಾಗಿ ಒದಗಿಸಿದ ಹಣವನ್ನು ಪೂರ್ಣವಾಗಿ ವ್ಯಯಮಾಡಲು ಸಾಧ್ಯವಾಗಿಲ್ಲ ಎಂಬುದು ನಿಜ. ಈ ಬಗ್ಗೆ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕೆಂದು ನಾನು ಸಂಬಂಧಪಟ್ಟ ಮಂತ್ರಿಗಳಿಗೆ ತಿಳಿಸುತ್ತೇನೆ. ಹಾಗೆಯೇ, ಹೇಮಾವತಿ ಅಣೆಕಟ್ಟಿನಿಂದ ತುಮಕೂರು ಜಿಲ್ಲೆಯ ಶಿಂಷಾ ನದಿ ಪಾತ್ರದಲ್ಲಿ ಬರುವ ಕೆರೆಗಳಿಗೆ ನೀರು ಬಿಡುವ ಬಗ್ಗೆ ತುಮಕೂರು-ಕುಣಿಗಲ್‌ನ ಮಧ್ಯೆ 125 ಕಿ.ಮೀ. ನಂತರದ ಕಾಲುವೆಯ ಕೆಲಸವನ್ನು ಮುಗಿಸುವ ಬಗ್ಗೆ ಹಾಗೂ ಬುಗುಡನಹಳ್ಳಿಯ ಕೆರೆಯಿಂದ ತುಮಕೂರಿಗೆ ಕುಡಿಯುವ ನೀರನ್ನು ಒದಗಿಸುವ ಬಗ್ಗೆ ತಕ್ಷಣ ಕ್ರಮ ಕೈಗೊಳ್ಳಬೇಕೆಂದು ಸಂಬಂಧಪಟ್ಟ ಮಂತ್ರಿಗಳಿಗೆ ಸೂಚನೆ ನಿಡುತ್ತೇನೆ. ಈ ಸಂದರ್ಭದಲ್ಲಿ ವಾತಾವರಣವನ್ನು ಹದಗೆಡಿಸುವ ಯಾವ ಹೆಜ್ಜೆಯನ್ನೂ ಇಡಬಾರದೆಂದು ಕೋರುತ್ತೇನೆ.

ವಂದನೆಗಳೊಂದಿಗೆ,

ಜೆ.ಎಚ್. ಪಟೇಲ್
ಮುಖ್ಯ ಮಂತ್ರಿಗಳು

ಗೆ:
**ವೈ.ಕೆ. ರಾಮಯ್ಯ** ಎಂ. ಎ., ಎಲ್.ಎಲ್.ಬಿ.,
ಕುಣಿಗಲ್ - 572 130
ತುಮಕೂರು ಜಿಲ್ಲೆ.

ವಿಜಯ ಸಾಸನೂರ, ಐ.ಪಿ.ಎಸ್
ಪೊಲೀಸ್ ಮಹಾನಿರೀಕ್ಷಕರು ಮತ್ತು
ಕಾರಾಗೃಹ ಮಹಾನಿರೀಕ್ಷಕರು

ನಂ.4, ಶೇಷಾದ್ರಿ ರಸ್ತೆ,
ಬೆಂಗಳೂರು - 5600 009

ದಿನಾಂಕ : 16-2-1999

ಇವರಿಗೆ :
**ಶ್ರೀ ವೈ.ಕೆ. ರಾಮಯ್ಯ**
ಮಾನ್ಯ ವಿಧಾನಸಭಾ ಸದಸ್ಯರು
ಕುಣಿಗಲ್ ಕ್ಷೇತ್ರ
ತುಮಕೂರು ಜಿಲ್ಲೆ.

ಮಾನ್ಯರೇ,

ತಮ್ಮ ಕೃತಿ "**ನಾನು ಮತ್ತು ರೇಷ್ಮೆ**" ಇದರ ಬಿಡುಗಡೆಯ ಸಮಾರಂಭದ ಬಗ್ಗೆ ವಿಚಾರವಾದಿಗಳಾದ ಶ್ರೀ ಹರಿಹರಪ್ರಿಯರವರು ತುಂಬಾ ಪ್ರಶಂಸೆ ಮಾಡಿದರು. ಸಕ್ರಿಯ ರಾಜಕಾರಣಿಯಾಗಿಯೂ ಇಂತಹ ಕೃತಿಯನ್ನು ರಚಿಸಿದಕ್ಕಾಗಿ ಅಭಿನಂದನೆಗಳು. ಇಂಥ ಕೃತಿಗಳು ತಮ್ಮಿಂದ ಇನ್ನೂ ಹೆಚ್ಚಾಗಿ ಮೂಡಿ ಬರಲೆಂದು ಹಾರೈಸುವೆ.

ವಂದನೆಗಳು,

ತಮ್ಮ ನಂಬುಗೆಯ
**ವಿಜಯ ಸಾಸನೂರ**

**ಪ್ರಿಯ ವೈ.ಕೆ. ರಾಮಯ್ಯ**

ಚುನಾವಣೆಯಲ್ಲಿ ನಿಮಗೆ ಜಯ ಹಾರೈಸುವೆ. ನೀವು ಆರಿಸಿ ಬಂದರೆ ಲೋಕಸಭೆಗೊಬ್ಬ ಸ್ವಚ್ಛ ಮನಸ್ಸಿನ ಮತ್ತು ಸೈದ್ಧಾಂತಿಕ ಜಿಗುಟುತನದ ಸದಸ್ಯನ ಲಾಭ ಆದಂತಾಗುತ್ತದೆ.

ಇಂತಿ

ಚಂಪಾ

**ಡಾ. ಡಿ.ಕೆ. ರಾಜೇಂದ್ರ**

ಪ್ರಾಧ್ಯಾಪಕ

ಸನ್ಮಾನ್ಯ ವೈ.ಕೆ. ರಾಮಯ್ಯ ಅವರಿಗೆ

ರಾಜ್ಯ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾದ ಈ ಶುಭ ಸಂದರ್ಭದಲ್ಲಿ ತಮಗೆ ಹಾರ್ದಿಕ ಅಭಿನಂದನೆಗಳು

ಹಿಂದೆ ಈ ರಾಜ್ಯದ ಚುಕ್ಕಾಣಿ ಹಿಡಿದು, ತಾವು ಮಾಡಿದ ಕಾರ್ಯಗಳನ್ನು ಯಾರೂ ಮರೆತಿಲ್ಲ. ಅಧಿಕಾರ ಕಳೆದುಕೊಂಡಾಗಲೂ ತಾವು ಮಾಡಿದ ಹೋರಾಟ ಹಲವು ಗೆಲವುಗಳನ್ನು ತಂದುಕೊಟ್ಟಿವೆ.

ಭಾವೀ ಮಂತ್ರಿಗಳಾದ ತಮ್ಮಿಂದ ಇನ್ನೂ ಹೆಚ್ಚಿನದನ್ನು ನಿರೀಕ್ಷಿಸಿ, ಅದು ಕೈಗೂಡಲಿ ಎಂದು ಆಶಿಸಿ ಮತ್ತೊಮ್ಮೆ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ವಂದನೆಗಳೊಡನೆ,

ತಮ್ಮ ವಿಶ್ವಾಸಿ

ಡಿ.ಕೆ. ರಾಜೇಂದ್ರ

ಜಿ.ವಿ. ಆನಂದಮೂರ್ತಿ
ಅಕ್ಟೋಬರ್ 2001
ತುಮಕೂರು

ಹಿರಿಯರಾದ ಶ್ರೀ ವೈ. ಕೆ. ರಾಮಯ್ಯನವರಿಗೆ ನಮಸ್ಕಾರಗಳು,

ಮೊನ್ನೆ ರಾತ್ರಿಯಿಡೀ ಎಡೆಬಿಡದೆ ಮಳೆ ಸುರಿಯಿತು. ಕೆಲವು ತಿಂಗಳಿಂದ ಆ ಭಾಗದಲ್ಲಿ ನೀವು ತುಂಬು ಆಸಕ್ತಿಯಿಂದ ನೆಡಿಸಿದ್ದ ಲಕ್ಷಾಂತರ ಗಿಡಗಳು ಒಂದು ಹನಿ ಜೀವ ಜಲಕ್ಕಾಗಿ ಅಂಗೈಯಲ್ಲಿ ಜೀವಹಿಡಿದು ನಿಂತಿದ್ದವು. ಈ ಎಳೆಗೂಸಿನಂಥ ಸಸಿಗಳೆಲ್ಲ ಹಗಲು- ರಾತ್ರಿ ಮಳೆ ಮೋಡಗಳಿಗೆ ಮೊರೆಯಿಡುತ್ತಿದ್ದವು. ಅಪರೂಪಕ್ಕೆ ಅತಿಥಿಯಂತೆ ಉತ್ತರೆಮಳೆ ಬಂದ ಈ ದಿನ ನೀವು ಕೂಡಲೇ ನೆನಪಾದಿರಿ.

ಭವಿಷ್ಯದ ದಿನಗಳನ್ನು ಆಲೋಚಿಸಿ ಕ್ರಿಯಾಶೀಲರಾಗುವ ವಿರಳ ರಾಜಕಾರಣಿಗಳ ಪೈಕಿ ನೀವೂ ಒಬ್ಬರು. ಮರ-ಗಿಡಗಳ ಸಂಬಂಧದಲ್ಲಿ ಕಳೆದ ಕೆಲವು ವರ್ಷಗಳಿಂದ ನೀವು ತೋರುತ್ತಿರುವ ಆಸಕ್ತಿ, ಶ್ರದ್ಧೆ, ಪ್ರೀತಿ ಅನುಕರಣೀಯವಾಗಿದೆ. ಒಂದು ಸಮರ್ಥ ರಾಜಕೀಯ ನಾಯಕತ್ವವಿಲ್ಲದೆ ನಮ್ಮ ಜಿಲ್ಲೆ ಅಕ್ಷರಶಃ ದಿಕ್ಕು ತಪ್ಪಿದೆ. ಈ ಹೊತ್ತಿನಲ್ಲಿ ನಿರ್ಭೀತಿಯ ವ್ಯಕ್ತಿತ್ವದ, ಜಾತ್ಯತೀತ ಮನಸ್ಸಿನ, ಅಸಾಧಾರಣ ರಾಜಕೀಯ ಸಂಕಲ್ಪಶಕ್ತಿಯಿರುವ ಹಾಗೂ ಅಭದ್ರತೆಯಿಂದ ನಲುಗುತ್ತಿರುವ ತಬ್ಬಲಿ ಜಾತಿಗಳ ಪರವಾದ ಅಕ್ಕರೆಯುಳ್ಳ, ನೀವೇ ಈಗ ನಮಗುಳಿದಿರುವ ಏಕೈಕ ಭರವಸೆ. ನೀವು ಈಗ ಕೈಗೆತ್ತಿಕೊಂಡಿರುವ ಗ್ರಾಮಗಳ ಪುನರುತ್ಥಾನಕ್ಕೆ ಪೂರಕವಾದ ಗಿಡ-ಮರಗಳನ್ನು ಬೆಳೆಸುವುದು ಮತ್ತು ಹೇಮಾವತಿ ಜಲವನ್ನು ನಮ್ಮ ಜಿಲ್ಲೆಗೆ ಹರಿಸುವ ಕಾರ್ಯ ಚಾರಿತ್ರಿಕ ಮಹತ್ವದ್ದು. ನಮ್ಮ ಜಿಲ್ಲೆಯ ಭವಿಷ್ಯವನ್ನು ರೂಪಿಸುವ ಈ ಬಗೆಯ ನಿರ್ಲಕ್ಷಿತರ ಪರವಾದ ಕಾರ್ಯಯೋಜನೆಗಳು ಮುಂದಿನ ಹತ್ತು-ಹದಿನೈದು ವರ್ಷಗಳಲ್ಲಿ ಫಲ ನೀಡುತ್ತವೆ. ಆಗ ನಮ್ಮ ಜಿಲ್ಲೆಯ ಇತಿಹಾಸ ಹೆಮ್ಮೆಯಿಂದ ನಿಮ್ಮನ್ನು ನೆನೆಯುತ್ತದೆ. ಇದಕ್ಕಾಗಿ ದಿನದ ಎಲ್ಲ ಸಮಯವನ್ನೂ ಮೀಸಲಾಗಿರಿಸಿರುವ ನಿಮ್ಮ ಬದ್ಧತೆಗೆ ಕೃತಜ್ಞತೆಗಳು.

ಇದರೊಡನೆ ನಮ್ಮ ಗ್ರಾಮಗಳು ಕಳೆದುಕೊಂಡಿರುವ ಇನ್ನಷ್ಟು ವಿವರಗಳಿವೆ. ತೋಪು, ಗೋಮಾಳ, ಕೆರೆ, ಗೋಕಟ್ಟೆಗಳೂ ಕೂಡ ನಮ್ಮ ಗ್ರಾಮಾಭಿವೃದ್ಧಿಯ ಯೋಜನೆಯಡಿಯಲ್ಲಿಯೇ ಬರಬೇಕು, ಇವುಗಳ ಪುನರುಜ್ಜೀವನವೂ ಕೂಡ ಗ್ರಾಮಗಳ ನೈತಿಕ ಸ್ಥೈರ್ಯವನ್ನು ಹೆಚ್ಚು ಮಾಡುತ್ತದೆ. ಒಂದು ಕಾಲಕ್ಕೆ ನಮ್ಮ ಹಳ್ಳಿಗಳ ಜಾತ್ಯತೀತ ಮತ್ತು ಐಕ್ಯತೆಯ ಕೇಂದ್ರಗಳಂತಿದ್ದ **'ಚಾವಡಿ'** ಮತ್ತು **'ಭಜನಾ ಮಂದಿರ'**ಗಳ ಪುನರುಜ್ಜೀವನವೂ ಕೂಡ ಊರೊಟ್ಟಿನ ಕೆಲಸಕ್ಕೆ, ಇಂದಿನ ಬದಲಾಗಿರುವ ಕಾಲಘಟ್ಟದಲ್ಲಿ ಅತ್ಯಾವಶ್ಯ ಎಂದು ಆ ಕ್ಷೇತ್ರದ ಅನುಭವಿಗಳಾದ ನಿಮಗೆ ವಿವರಿಸಿ ಹೇಳಬೇಕಾಗಿಲ್ಲ! ಇವುಗಳ ಬೆನ್ನಲ್ಲೇ ನೀವು ರೂಪಿಸಿರುವ **'ಹಸಿರು ಸಸಿಗಳ ಸಂತೆ'**

ಯೋಜನೆಯೂ ಅರ್ಥಪೂರ್ಣವಾದದ್ದು. ಇದರ ಜೊತೆಗೆ ಇಂದು ಕಣ್ಮರೆಯಾಗಿರುವ ಬೇಸಾಯದ ನಾಟಿ ತಳಿಗಳು - ಬೀಜಗಳೂ ಕೂಡ ನಮ್ಮ ಗ್ರಾಮೀಣ ಬದುಕಿನಲ್ಲಿ ಪುನರುಜ್ಜೀವನಗೊಳ್ಳಬೇಕಿದೆ. ಏಕೆಂದರೆ, ಕುಲಾಂತರಿ ಬೀಜಗಳು, ರಾಸಾಯನಿಕ ಗೊಬ್ಬರಗಳು, ನಮ್ಮ ಪಾರಂಪರಿಕ ಕೃಷಿ ವ್ಯವಸ್ಥೆಯನ್ನು ಬುಡಮೇಲು ಮಾಡಿವೆ. ಅಭಿವೃದ್ಧಿ ಸಕಾಶೆಯ ಶಿಖರದಲ್ಲಿ ನಗರ ಮತ್ತು ಸುಶಿಕ್ಷಿತರನ್ನು ಇರಿಸಿ; ತಳದಲ್ಲಿ ರೈತರು ಮತ್ತು ಅನಕ್ಷರಸ್ಥರನ್ನು ಇರಿಸಿವೆ. ಇದರಿಂದಾಗಿ ನಮ್ಮ ರೈತ ಸಮುದಾಯ ಆಧುನಿಕತೆ ಹಾಗೂ ನಗರಗಳ ಮೇಲೆ ಸಂಪೂರ್ಣವಾಗಿ ಅವಲಂಬಿತವಾಗಿದೆ. ಇವುಗಳಿಂದ ಬಿಡುಗಡೆ ಪಡೆಯಲು ಈ ಬಗೆಯ ಸಮುದಾಯ ಕೇಂದ್ರಿತ ಕಾರ್ಯಚಟುವಟಿಕೆಗಳೇ ನಮಗೆ ಕಿರು ಬೆಳಕುಗಳಾಗಿವೆ. ನಮ್ಮ ಹಳ್ಳಿಗಳ ನಾಡಿಯನ್ನು ಬಲ್ಲ, ಈಗಾಗಲೇ ಆ ದಾರಿಯನ್ನು ಕ್ರಮಿಸುತ್ತಿರುವ ನಿಮ್ಮಂತಹವರಿಂದ ಇದು ಸಾಧ್ಯವಾಗಬಹುದು! ಆದ್ದರಿಂದ ನೀವೀಗ ಏಕಾಂಗಿಯಲ್ಲ. ನಮ್ಮ ಜಿಲ್ಲೆಯನ್ನೂ ಒಳಗೊಂಡಂತೆ ನಾಡಿನ ಅನೇಕ ಭಾಗಗಳಲ್ಲಿ ನಿಮ್ಮನ್ನು ಗುಪ್ತವಾಗಿ ಪ್ರೀತಿಯಿಂದ ಗೌರವಿಸುವ ವ್ಯಕ್ತಿಗಳಿದ್ದಾರೆ.

ಇದೆಲ್ಲ ಈಡೇರಲು ನಿಮ್ಮ ಆರೋಗ್ಯ ಬಹಳ ಮುಖ್ಯ. ನೀವೀಗ ಖಾಸಗೀ ವ್ಯಕ್ತಿಯಲ್ಲ! ಒಂದು ಸಮಾಜವೇ ನಿಮ್ಮಂತಹವರನ್ನು ಬಹುದಿನಗಳಿಂದ ಹಾರೈಸಿ - ಹರಸಿ ಪಡೆದಿರುತ್ತದೆ. ಆದ್ದರಿಂದ ನೀವು ಬಹುಕಾಲ ಸಮಾಜದ ನಡುವೆ ತುಂಬು ಜೀವನ ನಡೆಸುವಂತಾಗಬೇಕು. ಜನತೆಯ ನಡುವೆ ಬಹುಕಾಲದಿಂದಲೂ ಇರುವ ನಿಮಗೆ ಇವೆಲ್ಲವೂ ತಿಳಿದಿರುವಂತದ್ದೇ.

ಮತ್ತೊಮ್ಮೆ ನಿಮಗೆ ತುಂಬು ಹೃದಯದ ನಮಸ್ಕಾರಗಳು.

ವಿಶ್ವಾಸಪೂರ್ವಕವಾಗಿ

**ಜಿ.ವಿ. ಆನಂದಮೂರ್ತಿ.**



**ರಾಮಕೃಷ್ಣ ಹೆಗಡೆ**
ಮುಖ್ಯಮಂತ್ರಿ

ಬೆಂಗಳೂರು
ದಿನಾಂಕ 29-4-1988

ಪ್ರಿಯ ರಾಮಯ್ಯ ಅವರಿಗೆ,

ವಂದನೆಗಳು,

ನೀವು ನಿನ್ನೆ ಬೆಳಿಗ್ಗೆ ಸ್ವತಹ ಕೊಟ್ಟ, ಪತ್ರವನ್ನು ನೋಡಿದೆ. ನಿಮ್ಮ ಪತ್ರದ ಒಕ್ಕಣೆ ಯನ್ನು ನೋಡಿದರೆ, ನೀವು ನನ್ನ ಪತ್ರವನ್ನು ಸರಿಯಾಗಿ ಓದಿ ಅರ್ಥ ಮಾಡಿಕೊಂಡಿಲ್ಲವೆಂದೆನಿಸುತ್ತದೆ. ನಾನು ನಿಮ್ಮ ವಿಶ್ವಾಸದ ಬಗ್ಗೆ ಸಂಶಯವನ್ನು ವ್ಯಕ್ತಪಡಿಸಿರಲಿಲ್ಲ. ಅದು ಹೇಗೂ ಇರಲಿ, ನನ್ನ ಸಚಿವ ಸಂಪುಟದ ಸದಸ್ಯರಾಗಿ ಮುಂದುವರಿಯುವ ಇಚ್ಛೆ ನಿಮಗೆ ಇಲ್ಲದಿದ್ದರೆ ನಾನು ಬಲವಂತ ಮಾಡಲಾರೆ. ಆದುದರಿಂದ ನಿಮ್ಮ ರಾಜೀನಾಮೆಯನ್ನು ಅಂಗೀಕರಿಸುವಂತೆ ಮಾನ್ಯ ರಾಜ್ಯಪಾಲರಿಗೆ ಶಿಫಾರಸು ಮಾಡಿದ್ದೇನೆ.

ಆದರಗಳೊಡನೆ,

ತಮ್ಮ ವಿಶ್ವಾಸಿ
ರಾಮಕೃಷ್ಣ ಹೆಗಡೆ

ಶ್ರೀ ವೈ.ಕೆ. ರಾಮಯ್ಯ
ತೋಟಗಾರಿಕೆ ರಾಜ್ಯ ಸಚಿವರು
ವಿಧಾನಸೌಧ, ಬೆಂಗಳೂರು.

**ರಾಮಕೃಷ್ಣ ಹೆಗಡೆ**
ಮುಖ್ಯಮಂತ್ರಿ

ಬೆಂಗಳೂರು
ದಿನಾಂಕ : 16-4-1988

ಪ್ರಿಯ ಸಹೋದ್ಯೋಗಿ,

ಕಳೆದ ತಾ.8ರಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ, ಕೆಲವು ದಿನಗಳಿಂದ ಪತ್ರಿಕೆಗಳಲ್ಲಿ ಬಂದ ವರದಿಯಿಂದ, ಉಂಟಾದ ಸಂದೇಹದ ನಿವಾರಣೆಗಾಗಿ ನಾನು ಸಂಪುಟದ ಎಲ್ಲ ಸದಸ್ಯರನ್ನು ನನ್ನ ನಾಯಕತ್ವದಲ್ಲಿ ವಿಶ್ವಾಸ ಇದೆಯೇ ಎಂದು ಕೇಳಿದಾಗ ''ನಿಮ್ಮಲ್ಲಿ ಸಂಪೂರ್ಣ ವಿಶ್ವಾಸ ಇದೆ'' ಎಂದು ನೀವು ಹೇಳಿದಿರಿ. ನಾನು ನಿಮ್ಮ ಮಾತನ್ನು ನಂಬಿದೆ. ಪತ್ರಿಕೆಗಳೂ ಈ ವಿಷಯವನ್ನು ಪ್ರಕಟಿಸಿದವು.

ಆದರೆ, ಕಳೆದ ಕೆಲವು ದಿನಗಳಿಂದ ಪತ್ರಿಕೆಗಳಲ್ಲಿ ಪ್ರಕಟವಾಗುವ ವರದಿಗಳು, ಭಿನ್ನಮತೀಯರ ಚಟುವಟಿಕೆಗಳಲ್ಲಿ ನೀವು ಸಕ್ರಿಯವಾಗಿ ಭಾಗವಹಿಸಿದ ವಿಚಾರವನ್ನು ಹೇಳುತ್ತಿವೆ. ಭಿನ್ನಮತೀಯ ಮಂತ್ರಿಗಳು ಒಂದು ಗುಂಪಾಗಿ, ಜನತಾ ಪಕ್ಷದ ಅಧ್ಯಕ್ಷರಾದ ಮಾನ್ಯ ಶ್ರೀ ಚಂದ್ರಶೇಖರ್ ಅವರನ್ನು ಭೇಟಿಯಾದ ಸುದ್ದಿಯೂ ಪತ್ರಿಕೆಗಳಲ್ಲಿ ಪ್ರಕಟವಾಗಿದೆ ಮತ್ತು ಆ ಗುಂಪಿನಲ್ಲಿ ನೀವು ಇದ್ದಿರಿ ಎಂದು ಹೇಳಲಾಗಿದೆ. ನನ್ನಲ್ಲಿ ಸಂಪೂರ್ಣ ವಿಶ್ವಾಸ ಇಟ್ಟಿರುವುದು ಮತ್ತು ಭಿನ್ನಮತೀಯರ ಚಟುವಟಿಕೆಗಳಲ್ಲಿ ಭಾಗವಹಿಸುವುದು ಪರಸ್ಪರ ವಿರೋಧವಾದ ನಿಲುವು. ನೀವು ಸಂಪುಟದ ಅಧ್ಯಕ್ಷನಾದ ನನ್ನಲ್ಲಿ ವಿಶ್ವಾಸ ಇದೆಯೆಂದು ಹೇಳಿ, ಭಿನ್ನಮತೀಯರ ಚಟುವಟಿಕೆಗಳಲ್ಲಿ ನಿರತವಾಗುವುದು ಅಥವಾ ಭಾಗವಹಿಸುವುದು ಎಷ್ಟರ ಮಟ್ಟಿಗೆ ಉಚಿತ ಎನ್ನುವುದನ್ನು ನೀವೇ ಯೋಚಿಸಬೇಕು. ಸಂಪುಟದ ಸದಸ್ಯರಾಗಿ ಉಳಿಯುವುದು, ಇಲ್ಲವೇ ಭಿನ್ನಮತೀಯರೊಡನೆ ಸೇರುವುದು, ಇವೆರಡರಲ್ಲಿ ಒಂದನ್ನು ಆರಿಸಿಕೊಳ್ಳುವುದು ಯೋಗ್ಯವೆಂದು ನಿಮಗೆ ಅನಿಸುವುದಿಲ್ಲವೆ?

ಆದರಗಳೊಡನೆ,

ತಮ್ಮ ವಿಶ್ವಾಸಿ
ರಾಮಕೃಷ್ಣ ಹೆಗಡೆ

**ಶ್ರೀ ವೈ.ಕೆ. ರಾಮಯ್ಯ,**
ತೋಟಗಾರಿಕೆ ರಾಜ್ಯ ಮಂತ್ರಿಗಳು
ವಿಧಾನಸೌಧ, ಬೆಂಗಳೂರು.

ಡಾ. ಕಾಳೇಗೌಡ ನಾಗವಾರ

ರೀಡರ್-ಕನ್ನಡ
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು - 570 006

ಆಗಸ್ಟ್ 19, 1987

ಅವರಿಗೆ,
ಸನ್ಮಾನ್ಯ ಶ್ರೀ ವೈ.ಕೆ. ರಾಮಯ್ಯ ಅವರು
ತೋಟಗಾರಿಕೆ ಸಚಿವರು
ಕರ್ನಾಟಕ ಸರ್ಕಾರ

ಮಾನ್ಯರೆ,

ನೀವು ಈಚೆಗೆ ಪಾದಯಾತ್ರೆಯ ಮೂಲಕ ಕುಣಿಗಲ್ ಮತ್ತು ಮದ್ದೂರು ನಡುವಣ ದಾರಿಯುದ್ದಕ್ಕೂ ಗಿಡನೆಡುವಿಕೆ, ಸಾಕ್ಷರತೆ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣದಂತಹ ಪವಿತ್ರವೂ, ಶ್ರೇಷ್ಠವೂ ಆದ ಕಾರ್ಯಗಳ ಬಗ್ಗೆ ಅತೀವ ಶ್ರದ್ಧೆ, ನಿಷ್ಠೆಗಳನ್ನು ಪ್ರಕಟಿಸಿರುವುದನ್ನು ಕಂಡು ನನಗೆ ಇನ್ನಿಲ್ಲದಷ್ಟು ಆನಂದವಾಗಿದೆ. ಅದಕ್ಕಾಗಿ ನಿಮಗೆ ಹೃತ್ಪೂರ್ವಕವಾದ ಅಭಿನಂದನೆಗಳು.

ತಮಗೆ ಕಾಲಾವಕಾಶವಾದಾಗ, ನನ್ನಂತೆಯೇ ತಾವೂ ಸಹ ತಮ್ಮ ಬಾಲ್ಯ ಹಾಗೂ ಹದಿಹರೆಯದ ದಿನಗಳಲ್ಲಿ ಕಾಲ್ನಡಿಗೆಯಲ್ಲಿ ಅಡ್ಡಾಡಿರುವ ಪ್ರದೇಶಗಳಾದ ಹುಲಿಯೂರು ದುರ್ಗ ಮತ್ತು ಚನ್ನಪಟ್ಟಣಗಳ ನಡುವೆ (ಉಜ್ಜನಿ, ಎಲೆಕಡಕಲು, ಮಾಕಳಿ, ದಶವಾರ, ಅಬ್ಬೂರು ಮುಂತಾದ ಗ್ರಾಮಗಳ ಮೂಲಕ) ನಮ್ಮ ಭಾಗದ ಶಾಸಕರ ಸಹಕಾರದೊಡನೆ ದಯಮಾಡಿ ಇದೇ ಬಗೆಯ ಕಾರ್ಯಕ್ರಮವೊಂದನ್ನು ಮತ್ತೊಮ್ಮೆ ಹಮ್ಮಿಕೊಳ್ಳಬೇಕಾಗಿ ಕೇಳಿಕೊಳ್ಳುತ್ತೇನೆ. ಅಂತಹ ಕಾರ್ಯಕ್ರಮದಲ್ಲಿ ನಾನೂ ಸಹ ನಮ್ಮೆಲ್ಲ ಗೆಳೆಯರೊಡನೆ ಭಾಗವಹಿಸಲು ಸಂತೋಷಪಡುತ್ತೇನೆ.

ತಮ್ಮ ಪ್ರವಾಸ ಕಥನದ ಹಸ್ತಪ್ರತಿ ತಲುಪಿದೆ; ಓದಿ ತುಂಬಾ ಸಂತೋಷವಾಯಿತು. ದಿನಾಂಕ 6-9-1987 ರಂದು ಬೆಂಗಳೂರಲ್ಲಿ ತಮ್ಮನ್ನು ಕಾಣುತ್ತೇನೆ.

ವಂದನೆಗಳೊಡನೆ,

ನಿಮ್ಮ ನಂಬುಗೆಯ
ಡಾ. ಕಾಳೇಗೌಡ ನಾಗವಾರ

ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು ದೂರವಾಣಿ : 38827, 35599
ಶ್ರೀ ತೋಂಟದಾರ್ಯ ಮಠ, ಡಂಬಳ - ಗದಗ
ಗದಗ - 582 101

ದಿನಾಂಕ : 20-5-2001

ಕರ್ನಾಟಕದ ಹೆಮ್ಮೆಯ ಪುತ್ರರು, ಗಾಂಧಿವಾದಿಗಳು. ಅಪ್ರತಿಮ ಹೋರಾಟ ಗಾರರು, ನ್ಯಾಯನಿಷ್ಠುರಿಗಳು ಆದ ಶ್ರೀ ವೈ.ಕೆ. ರಾಮಯ್ಯರವರನ್ನು ಮೈಸೂರಿನ ಜನತೆ ಅಭಿನಂದಿಸುತ್ತಿರುವುದು ನಮಗೆ ಅಪಾರವಾದ ಸಂತೋಷವನ್ನುಂಟು ಮಾಡಿದೆ. ಮಾನ್ಯ ಶ್ರೀ ರಾಮಯ್ಯನವರು ತಮ್ಮ ಜೀವಿತ ಕಾಲದಲ್ಲಿ ತಮ್ಮ ನಿಷ್ಕಳಂಕ ಮತ್ತು ನಿಸ್ವಾರ್ಥ ಮತ್ತು ಆದರ್ಶ ನಡೆ ನುಡಿಯಿಂದಾಗಿ ಜನಮಾನಸದಲ್ಲಿ ದಂತಕಥೆಯಾಗಿದ್ದಾರೆ. ಇಂತಹ ಧೀಮಂತ ವ್ಯಕ್ತಿಯನ್ನು ಸತ್ಕರಿಸುತ್ತಿರುವುದು ನ್ಯಾಯವನ್ನು, ನಿಷ್ಠುರತೆಯನ್ನು ಸತ್ಕರಿಸಿದಂತೆ. ಸಮಾರಂಭ ಯಶಸ್ವಿ ಯಾಗಲಿ. ವೈ.ಕೆ.ಆರ್ ನೂರು ಕಾಲ ಬಾಳಿ ಬದುಕಲಿ. ಅವರಿಂದ ಈ ನಾಡು-ನುಡಿಗೆ ಇನ್ನು ಹೆಚ್ಚಿನ ಸೇವೆ ಸಲ್ಲಲಿ ಎಂದು ಹಾರೈಸುತ್ತೇನೆ.

ಇತಿ ಶರಣು

ಶ್ರೀ ತೋಂಟದಾಚಾರ್ಯ ಸ್ವಾಮಿಗಳು

**ಕೆ. ಜೈರಾಜ್**, ಐ.ಎ.ಎಸ್
ಆಯುಕ್ತರು

ಬೆಂಗಳೂರು ಮಹಾನಗರ ಪಾಲಿಕೆ
ನರಸಿಂಹರಾಜ ಚೌಕ, ಬೆಂಗಳುರು - 560 002

ದಿನಾಂಕ 8.5.2000

ಮಾನ್ಯರೆ,

ತಮಗೆ ಇತ್ತೀಚೆಗಷ್ಟೆ ಸ್ಥಾಪಿಸಲ್ಪಟ್ಟ **ಜನಪರ ರಾಜಕಾರಣಿ** ಎಂಬ ಪ್ರತಿಷ್ಠಿತ ಪ್ರಶಸ್ತಿಯು ಪ್ರಾಪ್ತವಾದ ವಿಚಾರ ತಿಳಿದು ಸಂತೋಷವಾಯಿತು. ಈ ಸಂಬಂಧವಾಗಿ ತಮಗೆ ದಿನಾಂಕ 5.5.2000ರಂದು ವಿಶೇಷವಾಗಿ ಏರ್ಪಡಿಸಲಾಗಿರುವ ಸನ್ಮಾನ ಸಮಾರಂಭಕ್ಕೆ ಬರಲೇಬೇಕೆಂಬ ಅಪೇಕ್ಷೆ ಇದ್ದರೂ ಕಾರ್ಯಭಾರದ ಸಲುವಾಗಿ ಬರಲು ಸಾಧ್ಯವಾಗಲಿಲ್ಲ.

ಕಳೆದ 20 ವರ್ಷಗಳಿಂದಲೂ ನಾನು ತಮ್ಮನ್ನು ಬಲ್ಲವನಾಗಿದ್ದೇನೆ. ಅದರಲ್ಲೂ ನಾನು ತುಮಕೂರು ಜಿಲ್ಲೆ ಡೆಪ್ಯೂಟಿ ಕಮೀಷನರ್ ಆಗಿದ್ದಾಗ ತಾವು ಜಿಲ್ಲಾ ಉಸ್ತುವಾರಿ ಸಚಿವರಾಗಿದ್ದುದನ್ನು ನಾನಿಲ್ಲಿ ಸ್ಮರಿಸಿಕೊಳ್ಳುತ್ತೇನೆ.

**ತಮ್ಮ ಜನಪರವಾದ ಅವಿಶ್ರಾಂತ ದುಡಿಮೆ, ಪ್ರಾಮಾಣಿಕ ಬದುಕು ಹಾಗೂ ಅರ್ಪಣಾ ಮನೋಭಾವಗಳು ನನ್ನೊಳಗೆ ಅಚ್ಚೊತ್ತಿವೆ.** ನಾನಂತು ತಮ್ಮೊಳಗಿನ ಚಿರಂತನವಾದ ಕರ್ಮಯೋಗಿತ್ವದ ಗುಣವನ್ನು ಬಹಳವಾಗಿ ಮೆಚ್ಚುವೆನು.

ಈ ಸುಸಂದರ್ಭದಲ್ಲಿ ತಮಗೆ ಶುಭಾಶಯಗಳನ್ನು ಕೋರುತ್ತಾ, ತಮ್ಮ ಮುಂದಿನ ಭವಿಷ್ಯವು ಹರ್ಷದಾಯಕವಾಗಿರಲೆಂದು ಹಾರೈಸುತ್ತೇನೆ.

ಶುಭಾಶಯಗಳೊಂದಿಗೆ,

ತಮ್ಮ ವಿಶ್ವಾಸಿ
ಕೆ. ಜೈರಾಜ್

**ಶ್ರೀ ವೆ.ಕೆ. ರಾಮಯ್ಯ**, ಎಂ.ಎಲ್.ಎ.
ವಿಧಾನಸಭಾ ಸದಸ್ಯರು, ಕುಣಿಗಲ್
ಕುಣಿಗಲ್ (ಅಂಚೆ), ತುಮಕೂರು ಜಿಲ್ಲೆ

ಹೆಚ್.ಸಿ. ರುದ್ರಪ್ಪ
ಕರ್ನಾಟಕ ವಿಧಾನ ಪರಿಷತ್ತು

ವಿಧಾನಸೌಧ,
ಬೆಂಗಳೂರು - 1.

ದಿನಾಂಕ : 22-5-2001

ಸನ್ಮಾನ್ಯರೆ,

ತಾವು ಜನಪರ ರಾಜಕಾರಣಿ ಪ್ರಶಸ್ತಿ ಪಡೆದ ನೆನಪಿಗಾಗಿ ತಮಗೆ ಮೈಸೂರಿನಲ್ಲಿ ಹಮ್ಮಿಕೊಂಡಿರುವ ಅಭಿನಂದನಾ ಸಮಾರಂಭದ ಆಹ್ವಾನ ಪತ್ರಿಕೆ ತಲುಪಿದೆ. ತಮಗೆ ಅನಂತ ವಂದನೆಗಳು.

ಗ್ರಾಮೀಣ ಪ್ರದೇಶದ ಬಡ ಜನತೆಯ ದುಃಖ ದುಮ್ಮಾನಗಳಿಗೆ ಸ್ಪಂದಿಸಿ, ಅವರ ಸೇವೆಗೆ ತಮ್ಮ ಜೀವನವನ್ನು ಮುಡಿಪಾಗಿಟ್ಟು, ನಿಸ್ವಾರ್ಥ, ನಿರ್ಭೀತಿಯಿಂದ ದುಡಿದು, ತಮ್ಮ ಮತಕ್ಷೇತ್ರವನ್ನು ಮಾದರಿ ಕ್ಷೇತ್ರವನ್ನಾಗಿ ಬೆಳೆಸಿರುವ ತಮಗೆ ಜನಪರ ರಾಜಕಾರಣಿ ಪ್ರಶಸ್ತಿ ನೀಡಿ ಗೌರವಿಸಿರುವುದು ಅಭಿನಂದನಾರ್ಹವಾದುದಾಗಿದೆ.

ಈ ಶುಭ ಸಂದರ್ಭದಲ್ಲಿ ತಮಗೆ ದಿನಾಂಕ 27-5-2001ನೇ ಭಾನುವಾರದಂದು ಮೈಸೂರು ನಗರದಲ್ಲಿ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿರುವುದು ಮತ್ತಷ್ಟು ಸಂತೋಷಕರವಾದ ವಿಷಯವಾಗಿದೆ. ಸಮಾರಂಭವು ಅತ್ಯಂತ ಯಶಸ್ವಿಯಾಗಿ ಜರುಗಲೆಂದು ಹಾರೈಸುತ್ತೇನೆ.

ಗೌರವಗಳೊಂದಿಗೆ,

ತಮ್ಮ ವಿಶ್ವಾಸಿ
ಹೆಚ್.ಸಿ. ರುದ್ರಪ್ಪ

ಶ್ರೀ ವೈ.ಕೆ. ರಾಮಯ್ಯನವರು
ಸನ್ಮಾನ್ಯ ಶಾಸಕರು
ಹುಲಿಯೂರು ದುರ್ಗ ಮತಕ್ಷೇತ್ರ
ತುಮಕೂರು ಜಿಲ್ಲೆ.

ಸಿದ್ದವನಹಳ್ಳಿ ನಿಜಲಿಂಗಪ್ಪ
'ವಿನಯ' ವಿ.ಪಿ. ಬಡಾವಣೆ
ಚಿತ್ರದುರ್ಗ - 577501
23-5-1989

ಶ್ರೀ ವೈ.ಕೆ. ರಾಮಯ್ಯನವರಿಗೆ ನಮಸ್ಕಾರಗಳು,

ನೀವು ನನ್ನನ್ನು ತುಮಕೂರಿನಲ್ಲಿ 9ನೇ ದಿನಾಂಕ ನೋಡಿ ಮಾತನಾಡಿದಾಗ **ಯುವ ಚಿಂತನ ದತ್ತಿ** ಪ್ರತಿಯೊಂದನ್ನು ಕೊಟ್ಟು ನನ್ನ ಅಭಿಪ್ರಾಯ ಬರೆಯಬೇಕೆಂದು ಹೇಳಿದಿರಿ. ನನ್ನ ಆರೋಗ್ಯದ ಅನಾನುಕೂಲತೆಯಿಂದ ಬರೆಯವುದು ತಡವಾಯಿತು. ಕ್ಷಮಿಸಿ. ಓದಿದೆ. ಓದಿ ಸಂತೋಷವೂ, ಸಮಾಧಾನವೂ ಆಯಿತು. ಈಗಿನ ರಾಜಕೀಯ, ಸಾಮಾಜಿಕದ ನೈತಿಕತೆಯ ಬಗ್ಗೆ ನಿಮಗಿರುವ ಅಸಮಾಧಾನ, ಅತೃಪ್ತಿ ಕೊರಗುಗಳನ್ನು ಬಿಚ್ಚುಮನಸ್ಸಿನಿಂದ ಹೇಳಿದ್ದೀರಿ. ಅದು ಸರಿ. ನಿಮ್ಮ ನಿಷ್ಠೆ ಹಾಗೂ ಪ್ರಾಮಾಣಿಕತೆಯ ಗುರುತು. ನಿಮಗೆ ಅಭಿನಂದನೆಗಳು.

ನೀವು ಸಲ್ಲಿಸಬೇಕಾದ ನಿಸ್ವಾರ್ಥ ಸೇವೆಯ ಬಗ್ಗೆ ಹೇಳಿ, ಅದನ್ನು ಕಾರ್ಯಗತ ಮಾಡಲು ಯುವಕರ ಚಿಂತನೆ ಮತ್ತು ಕ್ರಿಯಾಶೀಲತೆಯನ್ನು ಮೂಲಧನವನ್ನಾಗಿ ಮಾಡಿದ್ದೀರಿ, ಅದೂ ಸರಿ. ನಿಮ್ಮ ದತ್ತಿಯ ಧ್ಯೇಯ ಮತ್ತು ಉದ್ದೇಶಗಳು ಯಶಸ್ವಿ ಆಗಲೆಂದು ಮನಸಾರಾ ಹಾರೈಸುತ್ತೇನೆ. ನಿಮ್ಮ ರಾಷ್ಟ್ರ ಹಾಗೂ ಸಮಾಜಸೇವೆ ಸದಾ ಮುಂದವರೆಯಿಲಿ.

ನಿಮ್ಮ ವಿಶ್ವಾಸಿ
**ಸಿ. ನಿಜಲಿಂಗಪ್ಪ**

ಧಾರವಾಡ
5-9-1988

ಪ್ರಿಯ ಶ್ರೀ ರಾಮಯ್ಯ

ನಿಮ್ಮ ಕಾಲ್ನಡಿಗೆ ಕಾರ್ಯಕ್ರಮದ ವಿವರ ನೋಡಿದೆ. ನಿಮ್ಮ ಸ್ವಭಾವಕ್ಕೆ, ವ್ಯಕ್ತಿತ್ವಕ್ಕೆ ತಕ್ಕಂತೆ ಮಾಡುತ್ತಿದ್ದೀರಿ. ಅಧಿಕಾರ ಇರಲಿ, ಬಿಡಲಿ-ಜನರ ನಡುವೆ ಕ್ರಿಯಾಶೀಲವಾಗಿ ಇರಬೇಕು. ಹಾಕಿಕೊಂಡ ಕಾರ್ಯಕ್ರಮ ನಮ್ಮ ರಾಜಕಾರಣಿಗಳಿಗೆ ಮಾದರಿಯಾಗಬೇಕು. ಅವರು ಅನುಸರಿಸಲಿ, ಬಿಡಲಿ, ನಿಮಗಂತೂ ಸಾರ್ಥಕ, ಆನಂದ ಉಂಟಾಗುತ್ತದೆ ಅಲ್ಲವೇ? ನಿಮಗೆ ಶುಭ ಕೋರುವೆ.

ನಿಮ್ಮ
**ಚಂಪಾ**

ಸಿದ್ಧವನಹಳ್ಳಿ ನಿಜಲಿಂಗಪ್ಪ
"ವಿನಯ", ವಿ.ಪಿ. ಬಡಾವಣೆ
ಚಿತ್ರದುರ್ಗ - 577501
6-6-1989

ಶ್ರೀ ರಾಮಯ್ಯನವರಿಗೆ ನಮಸ್ಕಾರಗಳು,

ನಿಮ್ಮ ಕಾಗದ ಬಂದಿದೆ. ಅದರೊಂದಿಗೆ ನಿಮ್ಮ ಆಸ್ತಿಪಟ್ಟಿಯೂ ಬಂದಿದೆ. ನಿಮ್ಮ ಪ್ರಾಮಾಣಿಕತೆ, ನಿಷ್ಠೆ, ಸತ್ಯಸಂಧತೆ ಬಗೆ ಯಾರಿಗೂ ಕಿಂಚಿತ್ತು ಸಂಶಯವಿಲ್ಲ. ನಾನು ಕೆಲವು ವರ್ಷಗಳಿಂದಲೂ ಚೆನ್ನಾಗಿ ಬಲ್ಲೆ. ನಿಮ್ಮ ಆಸ್ತಿಗಳ ಪಟ್ಟಿಯನ್ನು ಬಹುಶಃ ವಿಧಾನ ಸಭಾಧ್ಯಕ್ಷರಿಗೆ ಕಳಿಸಿರಬೇಕು. ಅದನ್ನು ವೃತ್ತಪತ್ರಿಕೆಗಳಿಗೆ ಕಳುಹಿಸಿದರೆ ಪ್ರಸಿದ್ಧಿಸುವುದಿಲ್ಲ. ಆದರೆ ಈ ರೀತಿ ಕಳಿಸಿರುವುದಾಗಿ ಪತ್ರಿಕೆಗಳಿಗೆ ತಿಳಿಸಿರಿ ನಾನು ವೃತ್ತ ಪತ್ರಿಕೆಗಳವರ ಜೊತೆ ಮುಂದಿನ ಸಲ ಮಾತನಾಡುವುದಾಗಿ ತಿಳಿಸಿ. ಎಲ್ಲರೂ ಹಾಗೆ ಮಾಡಬೇಕೆಂದು ತಿಳಿಸುತ್ತೇನೆ.

ಈಗಿನ ಹೊಲಸು ಭ್ರಷ್ಟಾಚಾರದ ವಾತಾವರಣದಲ್ಲಿ ಈ ವಿಚಾರವನ್ನು ಜನಸಾಮಾನ್ಯರಿಗೆ ತಿಳಿಸುವುದು ಅಮರ ಕರ್ತವ್ಯವೆಂದು ತಿಳಿಯಹೇಳುವುದು ಒಂದು ಮುಖ್ಯಕಾರ್ಯ. ಅದಕ್ಕೆ ನೀವು ಯುವಕರನ್ನು ತಯಾರು ಮಾಡುತ್ತಿದ್ದೀರಿ. ಸದ್ಯಕ್ಕಂತೂ ಬೇರೆ ಮಾರ್ಗ ನನಗೆ ಕಾಣಿಸುವುದಿಲ್ಲ! ನೀವು ಹಮ್ಮಿಕೊಂಡಿರುವ ಕಾರ್ಯ ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ನಿಮ್ಮ ವಿಶ್ವಾಸದ
**ಸಿ. ನಿಜಲಿಂಗಪ್ಪ**

K. Prabhakar Reddy
(Former Home & Finance Minister)
Govt. of Andhra Pradesh
Chairman
ANDHRA PRADESH KRISHAK SAMAJ
Hyderabad - 500 028

Dated : 02-04-1995

My Dear Mr. Y.K. Ramaiahgaru,

I congratulate you for having **'Indefinite Fast'** as a mark of Protest and Anti people policy undertaken by Janata Dal, Government of Karnataka. But the attitude of the Government for a peaceful and Gandhian protest, is highly condamnable. I convey our support to your noble cause and we equally share the concern regarding your deteriorting Health condition. We pray God for your good health and success of your genuine demands.

We remain,

Yours sincerely

**K. PRABHAKAR REDDY**
Ex. President E.C.C. Samajwadi Party
Member NATIONAL EXECUTIVE S.P.

To,
Sri Y.K. Ramaiah
President, S.P. Karnataka

Copy to:
Shri G. Ramanand
General Secretary
Samajwadi Party, Karnataka.

ಪ್ರಿಯ ಮಾನ್ಯ ಶ್ರೀ ವೈ.ಕೆ. ರಾಮಯ್ಯ,

ನಾನು ಎರಡು ವಾರಗಳ ಹಿಂದೆ ತುಮಕೂರಿಗೆ ಬಂದಾಗ ನೀವು ವಿಶ್ವಾಸದಿಂದ ಕೊಟ್ಟ ನಿಮ್ಮ ಪುಸ್ತಕ **'ನಾನು ಮತ್ತು ರೇಷ್ಮೆ'**ಯ ಎರಡನೆಯ ಆವೃತ್ತಿಯನ್ನು ಓದಿದೆ. ಆ ಓದನ್ನು ತುಂಬಾ ಲಾಭದಾಯಕವೆಂದು ನಾನು ಪರಿಗಣಿಸುತ್ತೇನೆ. ನಿಮ್ಮ ಅನುಭವ ಈ ಪುಸ್ತಕದಲ್ಲಿ ಕೆನೆಗಟ್ಟಿದೆ. ಅದರಲ್ಲಿ ಆತ್ಮಕಥೆಯ ಸತ್ಯನಿಷ್ಠೆಯೂ, ಲಲಿತ ಪ್ರಬಂಧದ ಸೊಗಸೂ ಮೇಳವಿಸಿವೆ. ನೀವು ರಾಜಕಾರಣಿಗಳು ಮನಸ್ಸು ಮಾಡಿದರೆ ಎಷ್ಟು ಸೊಗಸಾಗಿ ಬರೆಯಬಲ್ಲಿರಿ ಎಂಬುದನ್ನು ಈ ಪುಸ್ತಕ ತೋರಿಸುತ್ತದೆ. ಕೆಲವು ಭಾಗಗಳಿಂದ ಇದೊಂದು ಉತ್ತಮ ಕಲೆ ಎನ್ನುವುದು ಭಾಸವಾಗುತ್ತದೆ. ಇತ್ಯಾದಿ... ನೆನಪಿಸುವಷ್ಟು ಮಟ್ಟಿಗೆ ಮರೆಯುವಂತಿಲ್ಲ! ನಿಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**- ಡಾ. ಹಾ.ಮಾ. ನಾಯಕ** (3-2-1999)

ಹಿರಿಯರಾದ ವೈ.ಕೆ.ಆರ್ ಅವರಿಗೆ ನಮಸ್ಕಾರಗಳು,

ಗಿಡ ನೆಡುವ ಕಾರ್ಯಕ್ರಮದಲ್ಲಿ ನಿಮ್ಮೊಂದಿಗೆ ಪಾಲ್ಗೊಂಡದ್ದು ಒಂದು ಅಪೂರ್ವ ಅನುಭವ. ನಮ್ಮ ದೇಶದ ಎಷ್ಟು ರಾಜಕಾರಣಿಗಳು ಪರಿಸರದ ಬಗ್ಗೆ ಆಲೋಚಿಸುತ್ತಾರೆ? ನಾನು ಸ್ವಾತಂತ್ರ್ಯನಂತರ ಹುಟ್ಟಿದವನು. **ಗಾಂಧೀಜಿಯವರ ದಂಡಿನ ಸತ್ಯಾಗ್ರಹವನ್ನು ನಾನು ಕಂಡಿಲ್ಲ. ಆದರೆ ನಿಮ್ಮ ಜೊತೆಗಿನ ಕಾಲ್ನಡಿಗೆ ಪ್ರವಾಸ ಅಂಥ ಒಂದು ಸುಮಧುರ ಅನುಭವವನ್ನು ತಂದುಕೊಟ್ಟಿತು.** ಜನರ ಒಳಿತಿಗಾಗಿ ಸದಾ ತುಡಿಯುವ ನಿಮ್ಮಂಥವರು ಈ ರಾಜ್ಯದ ಮುಖ್ಯಮಂತ್ರಿಗಳಾಗಬೇಕು. ಕನ್ನಡನಾಡಿನ ತುಂಬಾ ಮರಗಿಡಗಳು ಕಂಗೊಳಿಸಬೇಕು.

**- ಹಿ.ಚಿ. ಬೋರಲಿಂಗಯ್ಯ**

2-7-200

ಆದರಣೀಯರಾದ ಶ್ರೀ ವೈ.ಕೆ. ರಾಮಯ್ಯ ಅವರಿಗೆ,

ಸಾದರಶರಣು

ತಮ್ಮ ಪತ್ರ ಬಂದು ಬಹಳ ದಿನಗಳಾದರೂ ಕಾರ್ಯ ಒತ್ತಡದಿಂದ ಉತ್ತರಿಸುವಲ್ಲಿ ವಿಳಂಬವಾಯಿತು. ಪತ್ರ ಮುಖೇನ ತಾವು ವ್ಯಕ್ತಪಡಿಸಿದ ನೈತಿಕ ಬೆಂಬಲ, ತೋರಿದ ಪ್ರೀತಿ ವಿಶ್ವಾಸಕ್ಕೆ ಕೃತಜ್ಞತೆಗಳು.

ನಮ್ಮ ಬಹುತೇಕ ರಾಜಕಾರಣಿಗಳು ಮತಾಂಧತೆಯ ದಳ್ಳುರಿಯಲ್ಲಿ ತಮ್ಮ ಮಹತ್ವಾಕಾಂಕ್ಷೆಯ ಬೇಳೆ ಬೇಯಿಸಿಕೊಳ್ಳುತ್ತಿರುವಾಗ, ಎಲ್ಲೋ ಕೆಲ ಜನ ನಿಮ್ಮಂಥ, ಅಪರೂಪದ ರಾಜಕಾರಣಿಗಳು ಮಾನವತೆಯ ಪರವಾಗಿ ಧ್ವನಿ ಎತ್ತುತ್ತೀರಿ. ಈಗಾಗಲೇ ಧ್ವನಿ ಎತ್ತಿದ ವ್ಯಕ್ತಿಗಳಿಗೆ ''ನಾವೂ ಜೊತೆಗಿದ್ದೇವೆ'' ಎಂದು ಬೆಂಬಲಿಸುವ ಮೂಲಕ ಅವರ ಆತ್ಮಸ್ಥೈರ್ಯವನ್ನು ಹೆಚ್ಚಿಸುತ್ತೀರಿ. ಪ್ರಕ್ಷುಬ್ಧಗೊಂಡಿರುವ ದೇಶಕ್ಕೆ ತಮ್ಮಂಥವರ ಅಗತ್ಯ ಇಂದು ಹಿಂದೆಂದಿಗಿಂತಲೂ ಹೆಚ್ಚಾಗಿದೆ.

ಕೋಮುವಾದಿ ಶಕ್ತಿಗಳು ಮನಕ್ಕೆ ನೂರೆಂಟು ರೀತಿಯಿಂದ ಘಾಸಿ ಮಾಡುತ್ತಿರುವಾಗ ತಮ್ಮ ಪತ್ರ ಮಮತೆಯ ಮದ್ದಾಗಿ ಪರಿಣಮಿಸಿ ಸಮಾಧಾನ ತಂದಿದೆ. ನಾವು-ನೀವು ನಡೆಯುತ್ತಿರುವುದು-ಸರ್ವಜನರೂ ಈ ದೇಶದಲ್ಲಿ ಸಮಾನವಾಗಿ, ಸಮಾಧಾನ, ಸುಖ, ಶಾಂತಿಯಿಂದ ಸಹೋದರರಂತೆ ಬಾಳಲಿ ಎಂಬ ಆಶಯದ ಬೆಳಕಿನ ಹಾದಿ. ಸಂದರ್ಭ ಹುಟ್ಟುಹಾಕಿದ ಸಂಘರ್ಷದಲ್ಲಿ ಮನಸ್ಸಿಗೆ ಕ್ಲೇಷ- ತಾಪಗಳು ಉಂಟಾಗುವುದು ಸಹಜವಾದರೂ ನಾವು ನಮ್ಮ ನಿಲುವಿನಿಂದ ವಿಚಲಿತರಾಗಬೇಕಿಲ್ಲ. **'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ'** ಮಾನವತಾವಾದಿ ಬಸವಣ್ಣನವರು ಬೋಧಿಸಿದ ದಾರಿಯಲ್ಲಿ ನಡೆಯುವಾಗ ಮತಾಂಧರು ಚೆಲ್ಲಿದ ಮುಳ್ಳುಗಳು ಕಾಲಿಗೊತ್ತುವುದು ಸಹಜ. ಹಚ್ಚುವ ಬೆಂಕಿ ತಾಪವನ್ನೊಡ್ಡುವುದೂ ನಿಜ. ಇದನ್ನೆಲ್ಲ ಸಹಿಸಿ, ದಾಟಿ ಮುನ್ನಡೆಯಲೇಬೇಕು. ಕೊನೆಗೂ ಗೆಲುವು ಸತ್ಯಕ್ಕೆ; ಪ್ರೀತಿಗೆ ಇದೆಯೆ ವಿನಃ ಸುಳ್ಳಿಗೆ, ದ್ವೇಷಕ್ಕೆ ಇಲ್ಲ. ನಿಮ್ಮ ಪ್ರೀತಿ - ವಿಶ್ವಾಸಗಳು ಹೀಗೇ ಇರಲಿ ಎಂದು ಹಾರೈಸುವೆವು.

ಜಯಬಸವ

**ಶ್ರೀ ತೋಂಟದಾರ್ಯ ಸ್ವಾಮೀಜಿ**

ಶ್ರೀಯುತ ವೈ ಕೆ ರಾಮಯ್ಯ ಅವರಲ್ಲಿ

ಹೆಚ್.ಎಲ್.ಕೇಶವಮೂರ್ತಿಯ ನಮಸ್ಕಾರಗಳು

ಇತ್ತೀಚೆಗೆ ಪ್ರಜಾವಾಣಿ ಪತ್ರಿಕೆಯಲ್ಲಿ ನೀವು ನಿಮ್ಮ ಕ್ಷೇತ್ರದಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ನೀಡುತ್ತಿರುವ ಪ್ರೋತ್ಸಾಹ ಗಮನದ ಬಗ್ಗೆ ಓದಿ ಹೆಮ್ಮೆ ಎನಿಸಿತು. ಒಬ್ಬ ಪ್ರಾಮಾಣಿಕ ಶಾಸಕ ಮಾಡಬೇಕಾದ್ದೇ ಇದು. ಸಾಮಾನ್ಯವಾಗಿ ಶೈಕ್ಷಣಿಕ ಪ್ರಗತಿ ಬಗ್ಗೆ ತಲೆಕೆಡಿಸಿಕೊಳ್ಳದಿರುವ ಶಾಸಕರೇ ತುಂಬಿರುವಾಗ, ನಿಮ್ಮ ಈ ಜಾಗೃತಿ ಕ್ರಮ ಹೆಮ್ಮೆ ಮೂಡಿಸಿವಂತದ್ದು.

ಎರಡು ವರ್ಷಗಳ ಹಿಂದೆ ಸೊನ್ನೆ ಫಲಿತಾಂಶ ಬಂದಿದ್ದ ಪ್ರೌಢಶಾಲೆಯಲ್ಲಿ ಇಂದು ಶೇಕಡ ಐವತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ ಎಂಬುದು ಸಾಮನ್ಯ ಸಂಗತಿ ಅಲ್ಲ. ಈ ಶ್ಲಾಘನೀಯ ಕಾರ್ಯಕ್ಕಾಗಿ ನಿಮ್ಮನ್ನು ಅಭಿನಂದಿಸಲೇ ಬೇಕಾಗಿದೆ. ಇದಕ್ಕಾಗಿ ಈ ಪತ್ರ.

**ಗಂಗಾ-ಕಾವೇರಿ ಯೋಜನೆ ಎಲ್ಲಿವರೆಗೆ ಬಂದಿದೆ?**
**ಇದನ್ನು ಆಗುವಂತೆ ಮಾಡಿ. ಕರ್ನಾಟಕದ ಭಗೀರಥ ಆಗಿರೆಂಬುದು ನನ್ನ ಆಶಯ.**

ವಂದನೆಗಳೊಡನೆ,

ಇಂತಿ ನಿಮ್ಮವ
**ಎಚ್.ಎಲ್. ಕೇಶವಮೂರ್ತಿ**

ಅಮೃತೂರು
19-4-2002

ನಮ್ಮ ಕ್ಷೇತ್ರದ ಹೆಮ್ಮೆಯ ಶಾಸಕರಾದ ಶ್ರೀ ವೈ.ಕೆ. ರಾಮಯ್ಯನವರಿಗೆ ಅಮೃತೂರು ರಾಮಚಂದ್ರನು ಮಾಡುವ ನಮಸ್ಕಾರಗಳು.

ಹುಲಿಯೂರುದುರ್ಗದಲ್ಲಿ ಕಳೆದ ಎರಡು-ಮೂರು ದಿನಗಳ ಹಿಂದೆ, ಕೆಲವು ಕಾರ್ಯಕರ್ತರು ಸಭೆ ಸೇರಿ, ನಿಮ್ಮನ್ನು ಉಚ್ಚಾಟಿಸಬೇಕೆಂಬ ನಿರ್ಧಾರ ಕೈಗೊಂಡರಂತೆ! ಈ ಸುದ್ದಿ ತಿಳಿದು ನಿಮಗೆ ಪತ್ರ ಬರೆಯುತ್ತಿದ್ದೇನೆ.

ನಿಮ್ಮ ಮೇಲೆ ಅಪಾರ ನಂಬಿಕೆಯಿಟ್ಟು, ನಮ್ಮ ಹುಲಿಯೂರುದುರ್ಗ ಕ್ಷೇತ್ರದ ಮತದಾರರು ನಿಮ್ಮನ್ನು ತಮ್ಮ ಪ್ರತಿನಿಧಿಯನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಇದುವರೆವಿಗೆ ನೆನೆಗುದಿಗೆ ಬಿದ್ದಿರುವ ಸಾರ್ವಜನಿಕ ಕೆಲಸಗಳನ್ನು ತ್ವರಿತವಾಗಿ ಮುಗಿಸುತ್ತೀರಿ, ಹಾಗೂ ಭ್ರಷ್ಟ ಮಧ್ಯವರ್ತಿ ರಾಜಕಾರಣಿಗಳಿಗೆ ತಕ್ಕ ಶಾಸ್ತಿ ಮಾಡುತ್ತೀರೆಂದು, ನಮ್ಮ ಜನ ನಿಮ್ಮನ್ನು ಶಾಸಕರನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ.

ಮೊನ್ನೆ ಸೇರಿದ್ದ ಆ ಪುಡಿ ರಾಜಕಾರಣಿಗಳು, ನಿಮ್ಮ ವಿರುದ್ಧ ಕಿಡಿ ಕಾರಲು ಕಾರಣಗಳೂ ಇವೆ :

1. ನೀವು ತುಂಬಾ ಪ್ರಾಮಾಣಿಕರಾಗಿದ್ದು, ನಿರ್ದಾಕ್ಷಿಣ್ಯ ಪ್ರವೃತ್ತಿಯವರಾಗಿರುವುದೂ ಒಂದು ಕಾರಣ ...

2. ಅನೇಕ ಮರಿ ಪುಢಾರಿಗಳು, ನಿಮ್ಮ ಹೆಸರು ಹೇಳಿಕೊಂಡು ಅಧಿಕಾರಿಗಳಿಂದ, ಮಂತ್ರಿಗಳಿಂದ ಸ್ವಾರ್ಥಕ್ಕಾಗಿ ಕೆಲಸ ಮಾಡಿಸಿಕೊಳ್ಳಬೇಕೆಂದು ಪ್ರಯತ್ನಪಟ್ಟು ನಿರಾಶರಾಗಿರುವುದು ಇನ್ನೊಂದು ಕಾರಣ ...

3. ನೀವು ದೊಡ್ಡವರು - ಚಿಕ್ಕವರು ಅನ್ನದೆ; ಇವರು ಬಡವರು - ಶ್ರೀಮಂತರು ಎನ್ನುವುದನ್ನು ನೋಡದೆ, ಈ ಜಾತಿ - ಆ ಜಾತಿಯವರೆಂದು ಲೆಕ್ಕಿಸದೆ ಜನಪರ ಕಾರ್ಯದಲ್ಲಿ ತೊಡಗಿಕೊಂಡಿರುವುದು ಮತ್ತೊಂದು ಕಾರಣ ...

4. ಜನತೆಯ ಮೂಲಭೂತ ಸಮಸ್ಯೆಗಳನ್ನು ಅರ್ಥಮಾಡಿಕೊಂಡು, ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಗೆ ಕಂಕಣಬದ್ಧರಾಗಿ ದುಡಿಯುತ್ತಿರುವುದು...

ಈ ಎಲ್ಲಾ ಕಾರಣಗಳಿಂದಾಗಿ ನಿಮ್ಮನ್ನು ಅವರು ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ! ಚುನಾವಣೆಯಲ್ಲಿ ಜನತೆಯಿಂದ ಆಯ್ಕೆಯಾದ ನೀವು, ನಿಮ್ಮ ವಿರುದ್ಧ ಬಂಡಾಯ ಬಾವುಟ ಹಾರಿಸಲು ನಿಂತಿರುವ ಕೆಲವೇ ಜನ ಕಾರ್ಯಕರ್ತರಿಗೆ ಶಾಸಕರಾಗಬೇಕಿತ್ತು! (ಹಿಂದೆಲ್ಲಾ ಇದೇ ರೀತಿ ಆಗಿತ್ತು. ಈಗಲೂ ಅವರು ಅದನ್ನೇ ಅಪೇಕ್ಷಿಸುತ್ತಿದ್ದಾರೆ). ಆದರೆ ನೀವು ಹಾಗೆ ಮಾಡದೆ, ಸಮಸ್ತ ಮತದಾರರಿಗೆ ಶಾಸಕರಾಗಿದ್ದು, ಇವರಿಗೆಲ್ಲಾ ಸಹಿಸಿಕೊಳ್ಳಲಾರದಷ್ಟು ಅಸಹನೆ, ಹೊಟ್ಟೆಕಿಚ್ಚು ಉಂಟಾಗಿದೆ.



ನಾನು ನಿಮ್ಮ ಅಭಿಮಾನಿಯಾಗಿ ಒಂದು ಮಾತು ಹೇಳಲು ಇಚ್ಛಿಸುತ್ತೇನೆ. ನಿಮ್ಮ ವಯಸ್ಸು ಅರವತ್ತಾಯಿತು! ದೇಹಶಕ್ತಿ ಕುಗ್ಗಿರಬಹುದು. ಆದರೆ ನಿಮ್ಮಲ್ಲಿರುವ ಧೀ ಶಕ್ತಿ ಖಂಡಿತ ಕುಗ್ಗಿಲ್ಲ! ಕುಳಿತ ಕಡೆಯೇ ಹೇಳಿ ಕೆಲಸ ಮಾಡಿಸುವ ಹಿರಿತನ ಹಾಗೂ ನೈತಿಕ ಶಕ್ತಿ ನಿಮ್ಮಲ್ಲಿದೆ. ಯಾವುದೇ ದಾಕ್ಷಿಣ್ಯಕ್ಕೂ ಒಳಗಾಗದೇ, ಜನತೆಯಲ್ಲಿ ತಪ್ಪು ತಿಳುವಳಿಕೆ ಮೂಡಿಸಿ, ಸಾರ್ವಜನಿಕ ಕ್ಷೇತ್ರವನ್ನು ಹೊಲಸು ಮಾಡುವ, ಈ 'ಅಲ್ಪ'ರಿಗೆ ಸೊಪ್ಪುಹಾಕದೆ, ನೀವು ಹಾಕಿಕೊಂಡಿರುವ ರಚನಾತ್ಮಕ ಕಾರ್ಯಗಳನ್ನು ಇನ್ನೂ ಹೆಚ್ಚಿನ ಹುಮ್ಮಸ್ಸಿನಿಂದ ಮಾಡಿ. ನಿಮ್ಮ ಕ್ಷೇತ್ರದ ಮತದಾರರ ಋಣ ತೀರಿಸುತ್ತಿದ್ದೀರಿ.

- ನಿಮ್ಮ ಅಭಿಮಾನಿ

**ಅಮೃತೂರು ರಾಮಚಂದ್ರ**

**ವೈ.ಕೆ. ರಾಮಯ್ಯ**
**ಶಾಸಕರು**

ಮಾನ್ಯರೇ,

ತುಮಕೂರು ಜಿಲ್ಲೆಗೆ ನೀರು ಹರಿದು ಬರುವ ಹೇಮಾವತಿ ಎಡದಂಡೆ ನಾಲೆಯನ್ನು ಹಾಸನ ಜಿಲ್ಲೆಯ ಕೆಲವು ರೈತರು ಮುಚ್ಚಿ ನೀರು ಬರದಂತೆ ಸುಮಾರು ಎರಡು-ಮೂರು ತಿಂಗಳಿಂದ ತಡೆ ಮಾಡಿರುತ್ತಾರೆ. ರೈತರ ಈ ನಡವಳಿಕೆಯಿಂದ ತುಮಕೂರು ಜಿಲ್ಲೆಗೆ ಹರಿದು ಬರುತ್ತಿದ್ದ ನೀರು ನಿಂತಿರುತ್ತದೆ. ಇದರಿಂದಾಗಿ ತಿಪಟೂರು ಮತ್ತು ತುಮಕೂರಿನಲ್ಲಿ ಕುಡಿಯುವ ನೀರಿಗೆ ತೊಂದರೆಯಾಗಿರುತ್ತದೆ. ಈಗಾಗಲೇ ಬೇಸಾಯ ಪ್ರಾರಂಭ ಮಾಡಬೇಕಾದ್ದರಿಂದ ರೈತರಿಗೂ ತುಂಬಾ ತೊಂದರೆಯಾಗಿದೆ. ಈ ವಿಷಯದಲ್ಲಿ ಈಗಾಗಲೇ ನಾನು ಸರ್ಕಾರಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳಲು ಮನವಿ ಮಾಡಿರುತ್ತೇನೆ. ಆದರೆ ಈವರೆಗೆ ಈ ವಿಷಯದಲ್ಲಿ ಸರ್ಕಾರ ಗಮನಹರಿಸದೆ ಇರುವುದು ಸರಿಯಾದ ನಡವಳಿಕೆಯಲ್ಲ. ಸರ್ಕಾರವು ಅಲ್ಲಿಯ ರೈತರಿಗೆ ನ್ಯಾಯವಾಗಿ ಸಲ್ಲಬೇಕಾದ ಪರಿಹಾರವನ್ನು ಸಂದಾಯ ಮಾಡಿ ಕಾಲುವೆಯನ್ನು ತೆರವು ಮಾಡಿಸಿ ತುಮಕೂರು ಜಿಲ್ಲೆಗೆ ನೀರು ಒದಗಿಸದೆ ಇದ್ದರೆ ದಿನಾಂಕ 23-6-1998ರಂದು ತುಮಕೂರಿನಲ್ಲಿ ಕರೆದಿರುವ ಸಭೆಯ ನಂತರ, ಸರ್ಕಾರದ ವಿರುದ್ಧ ಪ್ರತಿಭಟಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲೇ ಬೇಕಾಗುತ್ತದೆ. **''ಚರ್ಚೆ ಮಾಡುವುದರ ಮುಖಾಂತರ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳ ಬಹುದು''** ಎನ್ನುವ ನಿಮ್ಮ ಹಿಂದಿನ ಮಾತಿಗೆ ಕಿಮ್ಮತ್ತು ಇದ್ದರೆ, ದಯಮಾಡಿ ಸಂಬಂಧಪಟ್ಟವರೆಲ್ಲರನ್ನು ಕರೆಸಿ, ಚರ್ಚಿಸಿ, ಸಮಸ್ಯೆಗೆ ಪರಿಹಾರ ಒದಗಿಸಿ, ನಡೆಯಲಿರುವ ಸಂಘರ್ಷಕ್ಕೆ ಅವಕಾಶ ಮಾಡಿಕೊಡದೇ ಇರಲೆಂದು ಹಾರೈಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ಶ್ರೀ ಜೆ.ಎಚ್. ಪಟೇಲ್‌ರವರು
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ
ವಿಧಾನಸೌಧ, ಬೆಂಗಳೂರು.

ವೈ.ಕೆ. ರಾಮಯ್ಯ
ಎಂ.ಎ., ಎಲ್.ಎಲ್.ಬಿ.,
ಶಾಸಕರು
ಕುಣಿಗಲ್ - 572 130
ತುಮಕೂರು ಜಿಲ್ಲೆ

ದೂರವಾಣಿ :
ಕುಣಿಗಲ್ : 08132/230
ಬೆಂಗಳೂರು ಮನೆ : 335656
ಶಾಸಕರ ಭವನ : 209254

ದಿನಾಂಕ: 21-7-1993

ತಮಿಳುನಾಡಿನ ಮುಖ್ಯಮಂತ್ರಿಗಳಾದ ಕುಮಾರಿ ಜಯಲಲಿತಾರವರು ಕರ್ನಾಟಕದ ಜಲಾಶಯಗಳಿಂದ ನೀರನ್ನು ಬಿಡಲು ಕರ್ನಾಟಕ ಸರ್ಕಾರದ ಮೇಲೆ ಒತ್ತಡ ತರಬೇಕೆಂದು ಕೈಗೊಂಡಿದ್ದ ಉಪವಾಸ ಸತ್ಯಾಗ್ರಹವನ್ನು ಕೈಬಿಟ್ಟಿರುತ್ತಾರೆ. ಆದ್ದರಿಂದ ನಾನು ಮತ್ತು ನನ್ನ ಸ್ನೇಹಿತರು ಉಪವಾಸ ಸತ್ಯಾಗ್ರಹವನ್ನು ನಿಲ್ಲಿಸಲು ತೀರ್ಮಾನಿಸಿರುತ್ತೇವೆ.

ಕುಮಾರಿ ಜಯಲಲಿತಾರವರು ಉಪವಾಸವನ್ನು ಹಿಂದಕ್ಕೆ ತೆಗೆದುಕೊಂಡಿರುವುದರಿಂದ ನಮಗೆ ಏನೂ ಅನ್ನಿಸುವುದಿಲ್ಲ. ಏಕೆಂದರೆ ಅವರು ಮಾಡಿದ ಸತ್ಯಾಗ್ರಹ ರಾಜಕೀಯ ಲಾಭಕ್ಕಾಗಿ ಮಾಡಿದ ಸತ್ಯಾಗ್ರಹವೇ ಹೊರತು, ನೀರಿಗಾಗಿ ಅಲ್ಲ. ಅಲ್ಲದೆ ಈ ಮುಷ್ಕರವನ್ನು ನಿಲ್ಲಿಸಿರುವುದರಿಂದ ನಮ್ಮ ಯಾವ ಸಮಸ್ಯೆಗಳಿಗೂ ಪರಿಹಾರ ಕಾಣುವುದಿಲ್ಲ.

ಈ ದಿನ ಜಯಲಲಿತಾ ಅವರ ಉಪವಾಸಕ್ಕೆ ಪ್ರತಿಯಾಗಿ ನಾವು ಕೈಗೊಂಡಿದ್ದ ಉಪವಾಸ ಮುಷ್ಕರವನ್ನು ಕೈಬಿಟ್ಟರೂ, ನೀರಿಗಾಗಿ ನಮ್ಮ ಹೋರಾಟ ನಿಲ್ಲುವುದಿಲ್ಲ. ಅದು ಮುಂದುವರಿಯುತ್ತದೆ. ಕಾರಣ ಕರ್ನಾಟಕ ಮಾತೆಯ ಎರಡು ಕಣ್ಣಿನಂತಿರುವ ಕೃಷ್ಣಾ ಮತ್ತು ಕಾವೇರಿ ನದಿಗಳ ನೀರಿನ ಬಳಕೆಯ ವಿಷಯದಲ್ಲಿ ''ವಿಶೇಷ'' ಸಂದರ್ಭ ಇದ್ದಾಗ್ಯೂ, ರಾಜ್ಯ ಸರ್ಕಾರ ಈ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ವಿಶೇಷ ಗಮನವನ್ನು ಹರಿಸುತ್ತಿಲ್ಲ ಮತ್ತು ಗಂಭೀರ ಪ್ರಯತ್ನಗಳನ್ನು ಮಾಡುತ್ತಿಲ್ಲ. ಇದರಿಂದಾಗಿ ತುಮಕೂರು ಜಿಲ್ಲೆಯಲ್ಲಿ ಹೇಮಾವತಿ ಯೋಜನೆಯ ಅನುಷ್ಠಾನವನ್ನು ತ್ವರಿತಗೊಳಿಸಲು ನಮ್ಮ ಹೋರಾಟವನ್ನು ಮುಂದುವರಿಸುತ್ತೇವೆ.

ಈ ನೆಲದ ಜಲವನ್ನು ರಕ್ಷಿಸುವ, ಈ ಕರ್ತವ್ಯ ಪಾಲನೆಯಲ್ಲಿ, ಅಂದರೆ ಈ ದಿವಸದ ಕಾರ್ಯಕ್ರಮದಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನನಗೆ ಸಹಾಯ, ಸಹಕಾರ ಮತ್ತು ಬೆಂಬಲವನ್ನು ನೀಡಿದ ಎಲ್ಲಾ ನನ್ನ ಬಾಂಧವರಿಗೆ, ಸಂಘ-ಸಂಸ್ಥೆಗಳಿಗೆ ಹಾಗೂ ಜಿಲ್ಲಾಧಿಕಾರಿಗಳೂ ಸೇರಿದಂತೆ ಎಲ್ಲಾ ಅಧಿಕಾರಿ ಬಂಧುಗಳಿಗೆ ನಾನು ಕೃತಜ್ಞನಾಗಿದ್ದೇನೆ.

ವೈ.ಕೆ. ರಾಮಯ್ಯ

**ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀಯುತ ವೀರಪ್ಪ ಮೊಯ್ಲಿ ರವರಿಗೆ,**

ಮಾನ್ಯರೆ,

ಸಾಮಾನ್ಯ ಕುಟುಂಬ ಒಂದರಲ್ಲಿ ಜನಿಸಿ, ಜನಸಾಮಾನ್ಯರ ಮಧ್ಯದಲ್ಲಿ ಕೆಲಸ ನಿರ್ವಹಿಸುತ್ತ ಬೆಳೆದ ನೀವು, ಈ ರಾಜ್ಯದ ಆಡಳಿತದ ಚುಕ್ಕಾಣಿಯನ್ನು ಹಿಡಿದಾಗ ಜನರ ಸಮಸ್ಯೆಗಳಿಗೆ ಸ್ಪಂದಿಸಿ, ನ್ಯಾಯವಾದ ಬೇಡಿಕೆಗಳಿಗೆ ಪರಿಹಾರ ಒದಗಿಸುವ ಪ್ರಯತ್ನ ಮಾಡುತ್ತೀರ ಎಂದು ನಾನು ಪ್ರಾಮಾಣಿಕವಾಗಿ ನಂಬಿಕೊಂಡಿದ್ದೆ.

ನೀವು ಅಧಿಕಾರಕ್ಕೆ ಬಂದ ಆರಂಭದ ದಿನಗಳು ಒಳ್ಳೆಯ ಆಡಳಿತವನ್ನು ಕೊಡುವ ಭರವಸೆಯನ್ನು ಮೂಡಿಸುವಂತಹ ಸೂಚನೆಗಳು ಇದ್ದವು. ಆದರೆ ದುರದೃಷ್ಟವಶಾತ್ ನಿಮ್ಮ ಪಕ್ಷದಲ್ಲಿ, ರಾಷ್ಟ್ರಮಟ್ಟ ಹಾಗೂ ರಾಜ್ಯ ಮಟ್ಟದಲ್ಲಿ ಉಂಟಾದ ಪರಿಸ್ಥಿತಿಯಿಂದಾಗಿ ಹಿಂದೆ ಈ ರಾಷ್ಟ್ರ ಎಂದೂ ಕಾಣದಂತಹ ದುರ್ಬಲವಾದ ಪ್ರಧಾನಮಂತ್ರಿಯನ್ನು ಹಾಗೂ ರಾಜ್ಯದಲ್ಲಿ ಅಷ್ಟೇ ದುರ್ಬಲವಾದ ಒಬ್ಬ ಮುಖ್ಯಮಂತ್ರಿಯನ್ನು ಕಾಣುವಂತಾಯಿತು.

ನಿಮ್ಮ ಪಕ್ಷದ ಆಂತರಿಕ ವಿಷಯಗಳ ಬಗ್ಗೆ ನನಗೆ ಆಸಕ್ತಿಯೂ ಇಲ್ಲ ಹಾಗೂ ಆ ವಿಷಯದಲ್ಲಿ ನಾನು ಮೂಗು ತೂರಿಸುವ ಅವಶ್ಯಕತೆಯು ಇಲ್ಲ. ಆದರೆ, ಆಡಳಿತ ಪಕ್ಷದಲ್ಲಿ ಉಂಟಾಗಿರುವ ಎಂದೂ ಕಾಣದಂಥ ಕೆಟ್ಟ ಪರಿಸ್ಥಿತಿಯಿಂದಾಗಿ, ಈ ರಾಜ್ಯದ ಆಡಳಿತ ಕೆಟ್ಟಿರುವಾಗ ಅಭಿವೃದ್ಧಿ ಕೆಲಸಗಳು ಸ್ಥಗಿತಗೊಂಡಿರುವಾಗ, ಒಬ್ಬ ಶಾಸಕನಾಗಿ ಈ ವಿಷಯದ ಬಗ್ಗೆ ನಿಮ್ಮ ಗಮನ ಸೆಳೆದು ಎಚ್ಚರಿಸುವುದು ನನ್ನ ಕರ್ತವ್ಯವೆಂದು ಈ ಪತ್ರವನ್ನು ಬರೆಯುತ್ತಿದ್ದೇನೆ.

ಇತ್ತೀಚೆಗೆ ತಾವು ಬಳ್ಳಾರಿಯಲ್ಲಿ ಪತ್ರಕರ್ತರೊಡನೆ ಮಾತನಾಡುತ್ತ ''ರಾಜ್ಯದಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಶೇಕಡ 20ರಷ್ಟು ಅಧಿಕ ಹಣ ಬಿಡುಗಡೆ ಮಾಡಲಾಗಿದೆ. ಅಭಿವೃದ್ಧಿ ಕಾಮಗಾರಿಗಳ ಪ್ರಗತಿಯಲ್ಲಿ ರಾಜ್ಯ ಸರ್ಕಾರ ವಾರ್ಷಿಕ ಯೋಜನೆಯ ಒಟ್ಟು ಮೊತ್ತದಲ್ಲಿ ಈಗಾಗಲೇ ಶೇಕಡ 45ರಷ್ಟು ಹಣ ವಿನಿಯೋಗಿಸಿ, ರಾಷ್ಟ್ರದಲ್ಲಿ ಅಧಿಕ ಪ್ರಗತಿ ಸಾಧಿಸಿ ಕರ್ನಾಟಕ ಮೊದಲ ಸ್ಥಾನದಲ್ಲಿ ಇದೆ. ಇದು ರಾಜ್ಯಕ್ಕೆ ಹೆಮ್ಮೆ ತರುವ ವಿಷಯ'' ಎಂದು ಹೇಳಿದ್ದೀರ.

ಈ ತಮ್ಮ ಹೇಳಿಕೆಯನ್ನು ಓದಿದ ನನ್ನನ್ನೂ ಸೇರಿದಂತೆ ಈ ರಾಜ್ಯದ ಜನ ನಿಮ್ಮ ಮಾತನ್ನು ನಂಬಬೇಕು; ಎಂದು ನೀವು ಬಯಸಿದ್ದರೆ ಅಥವಾ ನಿರೀಕ್ಷಿಸಿದ್ದರೆ ಇದು ನಿಮ್ಮ ಮೌಢ್ಯವಲ್ಲದೆ ಬೇರೇನು ಅಲ್ಲ. ಮುಂಗೈ ಮೇಲಿನ ಹುಣ್ಣನ್ನು ನೋಡಲು ಕನ್ನಡಿಯ ಅವಶ್ಯಕತೆ ಇಲ್ಲ ಎಂಬ ನಾಣ್ಣುಡಿಯು ಕವಿಯಾದ ನಿಮಗೆ ತಿಳಿದಿರುವಂತೆ, ನಿಮ್ಮ ಆಡಳಿತದಲ್ಲಿ ರಾಜ್ಯದ ಆರ್ಥಿಕ ಪರಿಸ್ಥಿತಿ ಯಾವತ್ತೂ ಇಲ್ಲದಷ್ಟು ಕುಲಗೆಟ್ಟಿರುವ ಈ ಸಂದರ್ಭದಲ್ಲಿ, ಮೇಲೆ ಹೇಳಿರುವ ನಿಮ್ಮ ಮಾತುಗಳನ್ನು ಈ ರಾಜ್ಯದ ಜನರು ನಂಬಿ ಮೋಸ ಹೋಗುವಷ್ಟು ದಡ್ಡರಲ್ಲ. ಅದನ್ನು ನೀವು ತಿಳಿದುಕೊಂಡು

ಮುಂದಾದರೂ ವಸ್ತುಸ್ಥಿತಿಯನ್ನು ನಮ್ಮ - ನಿಮ್ಮೆಲ್ಲರ ಪ್ರಭುಗಳಾದ ಜನಗಳ ಮುಂದೆ ಇಡುವ ಪ್ರಯತ್ನಮಾಡಬೇಕೆಂದು ತಮ್ಮಲ್ಲಿ ಕೋರಿಕೊಳ್ಳುತ್ತೇನೆ.

ನಿಮ್ಮ ಪಕ್ಷದಲ್ಲಿ ಉಂಟಾಗಿರುವ ಹೀನ ಪರಿಸ್ಥಿತಿಯಿಂದಾಗಿ, ಈ ರಾಜ್ಯದ ಆಡಳಿತವನ್ನು ನೀವು ನಡೆಸಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಉಂಟಾಗಿದೆ. ಇಂತಹ ಪರಿಸ್ಥಿತಿ ಉಂಟಾಗಲು ನೀವು, ನಿಮ್ಮ ಸಚಿವರುಗಳು ಮತ್ತು ನಿಮ್ಮ ಪಕ್ಷದ ಶಾಸಕರುಗಳೇ ಕಾರಣರಾಗಿರುತ್ತೀರ. ಇದಕ್ಕೆ ಈ ರಾಜ್ಯದ ಜನರಾಗಲೀ, ವಿರೋಧಪಕ್ಷದವರಾಗಲಿ ಕಾರಣವಲ್ಲ ಎನ್ನುವುದು ನಿರ್ವಿವಾದ. ಆಡಳಿತ ಪಕ್ಷದಲ್ಲಿನ ಒಳಜಗಳದಿಂದಾಗಿ ಉಂಟಾಗಿರುವ ಪರಿಸ್ಥಿತಿ ಯಿಂದ ಈ ರಾಜ್ಯದ ಅಭಿವೃದ್ಧಿ ಕೆಲಸಗಳು ಎಲ್ಲಾ ಕ್ಷೇತ್ರದಲ್ಲಿಯೂ ಕುಂಟಿತವಾಗಿವೆ ಎನ್ನುವುದು ಎಲ್ಲರಿಗೂ ತಿಳಿದಿರುವ ವಿಷಯ. ಇದಕ್ಕೆ ಅತಿ ಮುಖ್ಯವಾದ ಕಾರಣ ಹಣದ ಕೊರತೆ.

ಸನ್ಮಾನ್ಯ ಮುಖ್ಯಮಂತ್ರಿಗಳೇ, ಎಲ್ಲಾ ವಿಷಯಗಳಲ್ಲಿ, ಎಲ್ಲಾ ಕಾಲಕ್ಕೂ ಎಲ್ಲರನ್ನೂ ಮೋಸಗೊಳಿಸಲು ಸಾಧ್ಯವಿಲ್ಲ ಎನ್ನುವುದನ್ನು ತಾವು ಆದಷ್ಟು ಬೇಗ ಅರಿತುಕೊಂಡು, ನೀವು ಬದುಕುತ್ತಿರುವ ಭ್ರಮಾಲೋಕದಿಂದ ಕೆಳಗೆ ಬಂದು ನಿಜವಾದ ಪರಿಸ್ಥಿತಿಯನ್ನು ಅರಿತು ಕೊಳ್ಳುವುದು ಅವಶ್ಯಕವೆಂದು ನಿಮಗೆ ತಿಳಿಸಲು ಬಯಸುತ್ತೇನೆ.

ಈ ರಾಜ್ಯ ಎರಡು ಪ್ರಮುಖ ನೀರಾವರಿ ಯೋಜನೆಗಳಾದ ಕೃಷ್ಣಾ ಮತ್ತು ಕಾವೇರಿ ನೀರಿನ ಬಳಕೆಯ ಬಗ್ಗೆ ಉಂಟಾಗಿರುವ ''ವಿಶೇಷ ಪರಿಸ್ಥಿತಿ'' ತಮಗೆ ಗೊತ್ತಿದೆ. ಈ ವಿಶೇಷ ಪರಿಸ್ಥಿತಿಯನ್ನು ನಿಭಾಯಿಸಲು ತಮ್ಮ ಸರ್ಕಾರ ವಿಶೇಷ ಕಾರ್ಯಕ್ರಮವನ್ನು ರೂಪಿಸಿಲ್ಲ ಮತ್ತು ಆಸಕ್ತಿಯನ್ನು ತೋರಿಲ್ಲ ಎಂದು ಹೇಳಲೇಬೇಕಾಗಿದೆ. **ಸಮುದ್ರದ ಉಪ್ಪು ನೀರಿನ ಬಗ್ಗೆ ನಿಮಗೆ ಇರುವಷ್ಟು ಆಸಕ್ತಿ ಬಯಲು ಸೀಮೆಯ ನದಿಗಳ ನೀರಿನ ಬಳಕೆಯ ಬಗ್ಗೆ ನಿಮಗೆ ಇಲ್ಲವೆಂದು ಹೇಳಿದರೆ ತಪ್ಪಾಗಲಾರದು.**

ಇತ್ತೀಚಿನ ದಿನಗಳಲ್ಲಿ ನೀವು, ರಾಜ್ಯದ ನೀರಾವರಿ ಯೋಜನೆಗಳಿಗೆ ಹಣ ಒದಗಿಸದೇ ಈ ಯೋಜನೆಗಳ ಅನುಷ್ಠಾನ ಕುಂಠಿತವಾಗಿದೆ. ಕಾರಣ ವಾರ್ಷಿಕ ಯೋಜನೆಯ ಮೊತ್ತದಲ್ಲಿ ಯೋಜನೇತರ ವೆಚ್ಚಗಳನ್ನು ಕಳೆದರೆ, ಯೋಜನಾ ಕಾರ್ಯವೆಚ್ಚಕ್ಕೆ ನಿಮಗೆ ಉಳಿಯುವ ಹಣ ಕೇವಲ ಸುಮಾರು ಒಂದುಸಾವಿರದ ಒಂಭತ್ತು ಕೋಟಿಗಳು ಮಾತ್ರ. ಇದಲ್ಲದೆ ನಿಮ್ಮ ಒಳಜಗಳದಿಂದಾಗಿ, ರಾಜ್ಯದಲ್ಲಿ ಸಂಪನ್ಮೂಲ ಕ್ರೋಢೀಕರಣ ಮಾಡುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತೀರ. ಈ ಹಿನ್ನೆಲೆಯಲ್ಲಿ ರಾಜ್ಯದ ನೀರಾವರಿ ಮತ್ತು ವಿದ್ಯುಚ್ಛಕ್ತಿ ಯೋಜನೆಗಳಿಗೆ ಒಂದುಸಾವಿರದ ಐದುನೂರು ಕೋಟಿ ರೂಪಾಯಿಗಳನ್ನು ನಿಗದಿ ಮಾಡಿದ್ದೇವೆ. ಇದರಲ್ಲಿ ಶೇಕಡ 45 ಭಾಗ ಈಗಾಗಲೇ ವಿನಿಯೋಗ ಮಾಡಿದ್ದೇವೆ ಎಂದು ತಾವು ತಿಳಿಸಿದರೆ, ಈ ರಾಜ್ಯದ ಜನ ಇದನ್ನು ನಂಬಿಕೊಳ್ಳಬೇಕು ಎಂದು ನೀವು ಬಯಸುವಿರಾ? ನಿಮ್ಮ ಮಂತ್ರಿಮಂಡಲದ ನೀರಾವರಿ

ಸಚಿವರಾದ ಉಪಮುಖ್ಯಮಂತ್ರಿಗಳು, ಇತ್ತೀಚೆಗೆ ನೀಡಿರುವ ಹೇಳಿಕೆಯ ಪ್ರಕಾರ ''ನೀರಾವರಿ ಇಲಾಖೆಯಲ್ಲಿ ಕೆಲಸ ಮಾಡಿದ ಗುತ್ತಿಗೆದಾರರಿಗೆ ಸುಮಾರು ನೂರುಕೋಟಿ ರೂಪಾಯಿಗಳಿಗಿಂತಲೂ ಹೆಚ್ಚಾಗಿ ಬಾಕಿ ಕೊಡಬೇಕಾಗಿದೆ. ಈವರೆವಿಗೆ ನೀರಾವರಿ ಕಾಮಗಾರಿಗಳಿಗೆ ಸುಮಾರು ಎಂಟುನೂರು ಕೋಟಿ ರೂಪಾಯಿಗಳು ಬಿಡುಗಡೆ ಆಗಬೇಕಾಗಿದ್ದು, ಕೇವಲ ಇನ್ನೂರು ಕೋಟಿ ರೂಪಾಯಿಗಳು ಮಾತ್ರ ಬಿಡುಗಡೆ ಆಗಿದೆ'' ಎಂದು ಹೇಳಿರುವುದನ್ನು ಗಮನಿಸಿದರೆ, ಈ ರಾಜ್ಯದ ಆಡಳಿತದ ಚುಕ್ಕಾಣಿ ಹಿಡಿದಿರುವ ನೀವು ಮತ್ತು ನಿಮ್ಮ ಮಂತ್ರಿಗಳು, ಈ ರಾಜ್ಯದ ಜನರಿಗೆ ಅದರಲ್ಲೂ ರೈತರ ಭೂಮಿಗೆ ನೀರು ಕೊಡುವ ಯೋಜನೆಗಳ ಅನುಷ್ಠಾನದ ವಿಷಯದಲ್ಲಿ ಎಂತಹ ದ್ರೋಹ ಬಗೆಯುತ್ತಿದ್ದೀರಾ ಎನ್ನುವುದು ಅರ್ಥವಾಗುತ್ತದೆ.

ನಿರ್ದಿಷ್ಟವಾಗಿ ಒಂದು ನೀರಾವರಿ ಯೋಜನೆಯ ಬಗ್ಗೆ ಹೇಳಬೇಕೆಂದರೆ, ತುಮಕೂರು ಜಿಲ್ಲೆ ಮತ್ತು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿಗೆ ನೀರನ್ನು ಒದಗಿಸಲು ರೂಪಿಸಿರುವ ಹೇಮಾವತಿ ಕಾಲುವೆ ಯೋಜನೆಗಳಿಗಾಗಿ ನಿಮ್ಮ ಕಾರ್ಯಕ್ರಮದಲ್ಲಿ ರೂಪಿಸಿರುವಷ್ಟು ಹಣವನ್ನು ಬಿಡುಗಡೆ ಮಾಡದೆ, ಕೆಲಸಗಳು ನಿಂತು ಹೋಗುತ್ತಿವೆ. ಗುತ್ತಿಗೆದಾರರು ತಾವು ಕೆಲಸ ಮಾಡುತ್ತಿದ್ದ ಸ್ಥಳದಿಂದ ಕಾಲು ತೆಗೆಯುತ್ತಿದ್ದಾರೆ. ಅಧಿಕಾರಿಗಳು ಅಸಹಾಯಕರಾಗಿದ್ದಾರೆ. ನೀರಿಗಾಗಿ ಕಾದುಕುಳಿತ ಈ ಜಿಲ್ಲೆಯ ರೈತರು ಕಂಗಾಲಾಗಿದ್ದಾರೆ. ಈ ಯೋಜನೆಗೆ ಆಗಿರುವ ಕೆಲಸಗಳಿಗಾಗಿಯೇ ಸುಮಾರು ಮೂವತ್ತು ಕೋಟಿ ರೂಪಾಯಿಗಳ ಹಣ ಬಾಕಿ ಇರುತ್ತದೆ. ಈ ಯೋಜನೆ ಅನುಷ್ಠಾನದ ಬಗ್ಗೆ ನನಗಿರುವ ಆಸಕ್ತಿ ನಿಮಗೆ ತಿಳಿಯದೆ ಇರುವ ವಿಷಯವೇನಲ್ಲ. ಈ ಹಿನ್ನೆಲೆಯಲ್ಲಿ ತಾವು ಮುಖ್ಯಮಂತ್ರಿಗಳಾದ ದಿನದಿಂದಲೂ ವಿಧಾನಸಭೆಯ ಹೊರಗೆ ಮತ್ತು ಒಳಗೆ ಈ ಕೆಲಸಕ್ಕೆ ಸಾಕಷ್ಟು ಹಣ ಒದಗಿಸಬೇಕು. ಕೆಲಸದ ಪ್ರಗತಿ ಚುರುಕುಗೊಳಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ತಾವು ಸೂಚನೆ ನೀಡಬೇಕು. ಕೆಲಸ ನಡೆಯುತ್ತಿರುವ ಸ್ಥಳಕ್ಕೆ ಭೇಟಿ ಕೊಟ್ಟು ಕೆಲಸಗಳನ್ನು ಪರಿಶೀಲಿಸಬೇಕು ಎಂದು ನಾನು ತಮ್ಮನ್ನು ಒಂದಲ್ಲ ಹತ್ತಾರು ಬಾರಿ ಒತ್ತಾಯಿಸಿದ್ದೇನೆ. ವಿನಯದಿಂದ ಬೇಡಿಕೊಂಡಿದ್ದೇನೆ. ಇಷ್ಟಲ್ಲದೆ ಸಾಕಷ್ಟು ಸಲ ಪತ್ರ ಬರೆದು ವಿನಂತಿಸಿಕೊಂಡಿದ್ದೇನೆ. ಆದರೆ ಈ ವಿಷಯದಲ್ಲಿ ತಾವು ಚರ್ಚೆ ಮಾಡಲು ಏರ್ಪಾಡು ಮಾಡಲಿಲ್ಲ. ಸ್ಥಳಕ್ಕೆ ಭೇಟಿ ನೀಡಿ ಪ್ರಗತಿಯನ್ನಾಗಲೀ ಪರಿಶೀಲಿಸುವ ಕೃಪೆ ಮಾಡಲಿಲ್ಲ. ಅಲ್ಲದೆ ಹಣವನ್ನು ಒದಗಿಸಿಕೊಡುವ ಪ್ರಯತ್ನ ಮಾಡಲಿಲ್ಲ. ಈ ನಿಮ್ಮ ವಿಫಲತೆಗೆ ನಾನು ಎಷ್ಟು ಯೋಚಿಸಿದರೂ ಕಾರಣ ತಿಳಿಯುತ್ತಿಲ್ಲ.

ಸನ್ಮಾನ್ಯ ಮುಖ್ಯಮಂತ್ರಿಗಳೆ, ಅಧಿಕಾರ ಶಾಶ್ವತ ಅಲ್ಲ ಎನ್ನುವುದು ಅತ್ಯಂತ ಸಾಮಾನ್ಯರಾದ ನಮ್ಮೆಲ್ಲರ ತಿಳುವಳಿಕೆ. ಈ ಅಶಾಶ್ವತ ಸ್ಥಾನದಲ್ಲಿ ಕುಳಿತು, ಕೆಲಸ ಮಾಡುತ್ತಿರುವ ನೀವು ಲಕ್ಷಾಂತರ ಬಡ ರೈತರ ಬದುಕಿನಲ್ಲಿ ಬದಲಾವಣೆ ತಂದು ಅವರ ಅನ್ನಕ್ಕೆ ಮಾರ್ಗವಾಗುವ ಯೋಜನೆ ಒಂದನ್ನು ಕಾರ್ಯರೂಪಕ್ಕೆ ತಂದು ಪುಣ್ಯ ಪಡೆದುಕೊಳ್ಳುವ ಕೆಲಸವನ್ನು ಮಾಡದೆ,

ರೈತರ ಶಾಪಕ್ಕೆ ಗುರಿಯಾಗುತ್ತಿದ್ದೀರಾ ಎನ್ನುವುದನ್ನು ವಿಧಿಯಿಲ್ಲದೆ ನಿಮಗೆ ನಾನು ಅತ್ಯಂತ ನೋವಿನಿಂದ ತಿಳಿಸಬೇಕಾಗಿದೆ.

ನಿಮ್ಮನ್ನು ಮತ್ತು ನಿಮ್ಮ ಸರ್ಕಾರವನ್ನು ಈ ವಿಷಯದಲ್ಲಿ ಗಮನ ಸೆಳೆಯಲು ಎಚ್ಚರಿಸಿ ಕ್ರಿಯಾಶೀಲರನ್ನಾಗಿ ಮಾಡುವಲ್ಲಿ ಸಂಪೂರ್ಣವಾಗಿ ನಾನು ಸೋತಿಲ್ಲವಾದರೂ, ಸ್ವಲ್ಪ ಮಟ್ಟಿಗೆ ವಿಫಲನಾಗಿರುವ ನಾನು, ಈ ಯೋಜನೆಯ ಫಲಾನುಭವಿಗಳನ್ನು ಅಂದರೆ ತುಮಕೂರು ಜಿಲ್ಲೆ ಮತ್ತು ನಾಗಮಂಗಲ ತಾಲ್ಲೂಕಿನ ಹೇಮಾವತಿ ನಾಲಾ ಅಚ್ಚುಕಟ್ಟುದಾರರ ಒಂದು ದಿನದ ಸಮಾವೇಶವನ್ನು ದಿನಾಂಕ 18-10-1993ನೇ ಸೋಮವಾರ ಬೆಳಿಗ್ಗೆ 10-00 ಗಂಟೆಗೆ ತುಮಕೂರು ಜಿಲ್ಲೆ ಗುಬ್ಬಿ ಪಟ್ಟಣದ ಜೂನಿಯರ್ ಕಾಲೇಜು ಮೈದಾನದಲ್ಲಿ ಏರ್ಪಾಟು ಮಾಡಿರುತ್ತೇನೆ. ಈ ವಿಷಯದ ಬಗ್ಗೆ ತಮ್ಮ ಮತ್ತು ತಮ್ಮ ಸರ್ಕಾರದ ಗಮನ ಸೆಳೆಯುವ ಉದ್ದೇಶದಿಂದ ಸಭೆಯನ್ನು ಕರೆಯಲಾಗಿದೆ. ಇಷ್ಟೆಲ್ಲಾ ಆದಾಗ್ಯೂ ತಾವು, ಈ ವಿಷಯದ ಕಡೆ ಗಮನ ಹರಿಸಿ ಸಾಕಷ್ಟು ಹಣ ಬಿಡುಗಡೆ ಮಾಡಿ ಕೆಲಸಗಳನ್ನು ಚುರುಕುಗೊಳಿಸಲು ಪ್ರಯತ್ನ ಮಾಡುವುದರಲ್ಲಿ ವಿಫಲವಾದರೆ, ಈ ಭಾಗದ ರೈತರು ನಿಮ್ಮ ಸರ್ಕಾರದ ವಿರುದ್ಧ ಅತ್ಯಂತ ಗಂಭೀರವಾರ ಹಾಗೂ ಕಠಿಣವಾದ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ಪರಿಸ್ಥಿತಿಗೆ ತಾವು ನಮ್ಮನ್ನು ದೂಡುವುದಿಲ್ಲ ಎಂದು ಭಾವಿಸಿಕೊಳ್ಳುತ್ತೇನೆ.

ವಂದನೆಗಳೊಂದಿಗೆ,

**ವೈ.ಕೆ. ರಾಮಯ್ಯ**

ಸನ್ಮಾನ್ಯ ಉಪಮುಖ್ಯಮಂತ್ರಿಗಳು
ಕರ್ನಾಟಕಸರ್ಕಾರ
ವಿಧಾನಸೌಧ, ಬೆಂಗಳೂರು - 560 001.

ಬೆಂಗಳೂರು
3-12-1993

ಮಾನ್ಯರೇ,

ತಾರೀಖು 2-11-1983ರಂದು ಕರ್ನಾಟಕ ಸರ್ಕಾರದ ನೀರಾವರಿ ಇಲಾಖೆ ಕಾರ್ಯದರ್ಶಿಯವರ ನೇತೃತ್ವದಲ್ಲಿ ನಡೆದ, ಇಲಾಖೆಯ ಹಿರಿಯ ಅಧಿಕಾರಿಗಳ ಸಭೆಯಲ್ಲಿ, ಕರ್ನಾಟಕ ರಾಜ್ಯದ ನೀರಾವರಿ ಇಲಾಖೆಯ 1993-94ರ ನೀರಾವರಿ ಕಾರ್ಯಕ್ರಮಗಳ ಅನುಷ್ಠಾನದ ಬಗ್ಗೆ ಹಾಗೂ ಲಭ್ಯವಿರುವ ಅನುದಾನದ ಬಗ್ಗೆ ಚರ್ಚೆ ನಡೆಯಿತೆಂದು ತಿಳಿದು ಬಂದಿದೆ. ಚರ್ಚೆಯ ನಂತರ ಹಣದ ಕೊರತೆಯಿಂದಾಗಿ ಚಾಲ್ತಿ ವರ್ಷದಲ್ಲಿ ರೂಪಿಸಿರುವ ನೀರಾವರಿ ಯೋಜನಾ ಕಾರ್ಯಕ್ರಮಗಳ ವೆಚ್ಚವನ್ನು ಶೇಕಡ 67ಕ್ಕೆ ಸೀಮಿತಗೊಳಿಸಬೇಕೆಂದು ತೀರ್ಮಾನಿಸಲಾಯಿತೆಂದು ತಿಳಿದು ಬಂದಿದೆ. ಅಂದರೆ 1993-94ರ ಆಯವ್ಯಯದಲ್ಲಿ ಕರ್ನಾಟಕ ರಾಜ್ಯದ ನೀರಾವರಿ ಕಾರ್ಯಕ್ರಮಗಳಿಗೆ ನಿಯೋಜಿಸಿರುವ ಅನುದಾನದಲ್ಲಿ ಶೇಕಡ 33ರಷ್ಟು ಕಡಿತ ಮಾಡಬೇಕೆಂದು ತೀರ್ಮಾನಿಸಿದೆ. ಈ ತೀರ್ಮಾನಕ್ಕೆ ಕಾವೇರಿ ಜಲಾನಯನ ಪ್ರದೇಶದ ನೀರಾವರಿ ಯೋಜನೆಗಳ ಅನುಷ್ಠಾನ ಮಾಡುವ ಎಲ್ಲಾ ಅಧಿಕಾರಿಗಳು ವೆಚ್ಚವನ್ನು ಶೇಕರ 67ಕ್ಕೆ (ಹಾಲಿ ಇರುವ ಬಿಲ್ಲುಗಳೂ ಸೇರಿದಂತೆ) ಸೀಮಿತಗೊಳಿಸಲು ಕಟಿಬದ್ಧರಾಗಬೇಕು. ಇದನ್ನು ಮೀರಿದರೆ ಅಂತವರ ಮೇಲೆ ಕ್ರಮ ತೆಗೆದುಕೊಳ್ಳಲಾಗುವುದೆಂದು ತಿಳಿಸಿ, ಹಿರಿಯ ಅಧಿಕಾರಿಗಳ ಮುಖಾಂತರ ಸರ್ಕಾರ ಸಂಬಂಧಪಟ್ಟ ಅಧಿಕಾರಿಗಳಿಗೆ ''ರಹಸ್ಯ'' ಪತ್ರ ಬರೆಯಿಸಲಾಗಿದೆ ಎಂದು ತಿಳಿದು ಬಂದಿದೆ.

ರಾಜ್ಯದ ಆಯವ್ಯಯದಲ್ಲಿ ನಿಗದಿ ಮಾಡಿರುವ ಅನುದಾನದಲ್ಲಿ ಶೇಕಡ 33ರಷ್ಟು ಕಡಿತ ಮಾಡಿರುವುದು ನಿಜವಾಗಿದ್ದಲ್ಲಿ, ಕರ್ನಾಟಕ ರಾಜ್ಯದ ರೈತರಿಗೆ ನೀವು ದೊಡ್ಡ ದ್ರೋಹ ಬಗೆಯುತ್ತಿದ್ದೀರ ಎಂದು ಹೇಳಬೇಕಾಗುತ್ತದೆ. ಕರ್ನಾಟಕ ರಾಜ್ಯದ ಎರಡೂ ಬೃಹತ್ ನೀರಾವರಿ ಯೋಜನೆಗಳ ಅನುಷ್ಠಾನದ ಬಗ್ಗೆ ಇರುವ ವಿಶೇಷ ಪರಿಸ್ಥಿತಿಯ ಹಿನ್ನೆಲೆಯಲ್ಲಿ, ಒದಗಿಸಿರುವ ಅನುದಾನವನ್ನು ಕಡಿತ ಮಾಡುತ್ತಿರುವುದು, ಈ ಸರ್ಕಾರ ಮಾಡುತ್ತಿರುವ ಅತ್ಯಂತ ದ್ರೋಹದ ನಡವಳಿಕೆ ಆಗಿರುತ್ತದೆ. ಆದ್ದರಿಂದ, ಈ ತೀರ್ಮಾನವನ್ನು ಬದಲಿಸಿ, ಆಯವ್ಯಯಕ್ಕೆ ಅಪಚಾರ ಮಾಡದ ರೀತಿಯಲ್ಲಿ ಹಣ ಒದಗಿಸಿಕೊಟ್ಟು, ನೀರಾವರಿ ಯೋಜನೆಗಳ ಕಾರ್ಯಗಳು ಪ್ರಗತಿ ಹೊಂದುವಂತೆ ನೋಡಿಕೊಳ್ಳುವಿರೆಂದು ಭಾವಿಸುತ್ತೇನೆ.

ನನಗೆ ತಿಳಿದು ಬಂದಿರುವ ಸಂಗತಿ ನಿಜವಾಗಿದ್ದಲ್ಲಿ, ನಿಮ್ಮಿಂದ ಉತ್ತರ ಬಂದ ಮೇಲೆ ಮುಂದಿನ ಕ್ರಮವನ್ನು ರೂಪಿಸಿಕೊಳ್ಳಲು ಇಚ್ಛಿಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

18-12-1993

ಮಾನ್ಯರೇ,

ರಾಜ್ಯ ಸರ್ಕಾರವು 1993-94ನೇ ಸಾಲಿನಸಲ್ಲಿ, ಮೂರು ಸಾವಿರದ ಇಪ್ಪತ್ತೈದು ಕೋಟಿ ರೂಪಾಯಿ ಮೊತ್ತದ ಯೋಜನಾ ಕಾರ್ಯಕ್ರಮವನ್ನು ರೂಪಿಸಿದ್ದುದು ಸರಿಯಷ್ಟೆ. ಸಂಬಲರ್ಹವಾದ ಎಲ್ಲಾ ಮೂಲಗಳಿಂದ ನಮಗೆ ಒದಗಿಸಿರುವ ಮಾಹಿತಿ ಪ್ರಕಾರ ಈ ಯೋಜನಾ ಗಾತ್ರದಲ್ಲಿ ರಾಜ್ಯ ಸರ್ಕಾರ ಕೊನೆಯಪಕ್ಷ ಎಂಟುನೂರು ಕೋಟಿ ರೂಪಾಯಿಗಳ ಕಡಿತ ಮಾಡುವುದು ಅನಿವಾರ್ಯವಾಗಿದೆ. ನೀರಾವರಿ ಹಾಗೂ ವಿದ್ಯುತ್ ಯೋಜನೆಗಳ ಅನುಷ್ಠಾನದಲ್ಲಿಯೂ ತಾನು ನಿಗದಿಪಡಿಸಿದ ಗುರಿಯನ್ನು ತಲುಪುವುದು ಅಸಾಧ್ಯವಾಗಿದೆ. ಈಗಾಗಲೇ ಅನುಷ್ಠಾನವಾಗಿರುವ ಕೆಲಸಗಳಿಗೆ ಸುಮಾರು ಇನ್ನೂರು ಕೋಟಿಯಷ್ಟು ಬಾಕಿ ಉಳಿದಿರುವ ಬಿಲ್ಲುಗಳನ್ನು ಪಾವತಿ ಮಾಡಬೇಕಾದಂಥಹ ಪರಿಸ್ಥಿತಿ ಇದ್ದಾಗ್ಯೂ, ರಾಜ್ಯದ ಮುಖ್ಯಮಂತ್ರಿಗಳು ಇದನ್ನು ಮುಚ್ಚಿಟ್ಟು ಹಣದ ಕೊರತೆ ಇಲ್ಲವೆಂದು ಹಾಗೂ ಯೋಜನಾ ಗಾತ್ರವನ್ನು ಕಡಿತ ಮಾಡಿಲ್ಲವೆಂದು ಹೇಳಿಕೆ ಕೊಡುವುದರ ಮೂಲಕ ಈ ರಾಜ್ಯದ ಜನರನ್ನು ಮೋಸಗೊಳಿಸುತ್ತಿದ್ದಾರೆ.

ರಾಜ್ಯದ ಎರಡು ಬೃಹತ್ ನೀರಾವರಿ ಯೋಜನೆಗಳ ವಿಷಯದಲ್ಲಿ ಇರುವ ''ವಿಶೇಷ ಪರಿಸ್ಥಿತಿ''ಯನ್ನು ಸರ್ಕಾರ ಗಮನಕ್ಕೆ ತೆಗೆದುಕೊಂಡಿಲ್ಲ. ಎರಡು ಸಾವಿರದ ಇಸವಿಯ ಒಳಗಾಗಿ ಕೃಷ್ಣಾ ನದಿ ನೀರನ್ನು ಉಪಯೋಗಿಸಿಕೊಳ್ಳಬೇಕಾದ ''ವಿಶೇಷ ಪರಿಸ್ಥಿತಿ'' ಹಾಗೂ ನ್ಯಾಯ ಮಂಡಳಿಯ ಮಧ್ಯಂತರ ತೀರ್ಪಿನ ಹಿನ್ನೆಲೆಯಲ್ಲಿ ಕಾವೇರಿ ನದಿಯ ನೀರನ್ನು ಬಳಸಿ ಕೊಳ್ಳುವುದರ ಬಗ್ಗೆ ಇರುವ ವಿಶೇಷ ಅನಿವಾರ್ಯತೆ ಇದ್ದಾಗ್ಯೂ, ಈ ವಿಶೇಷ ಪರಿಸ್ಥಿತಿಯನ್ನು ನಿಭಾಯಿಸಲು ಈ ಸರ್ಕಾರ ಯಾವುದೇ ಕಾರ್ಯಕ್ರಮವನ್ನು ಹಾಕಿಕೊಂಡಿಲ್ಲ. ಎಷ್ಟೇ ಒತ್ತಾಯ ತಂದಾಗ್ಯೂ ಈ ಸರ್ಕಾರ ಅದರಲ್ಲಿಯೂ ಮುಖ್ಯಮಂತ್ರಿಗಳು, ಈ ರಾಜ್ಯದ ನೀರಾವರಿ ಕಾಮಗಾರಿಗಳ ಅನುಷ್ಠಾನದ ಬಗ್ಗೆ ದಿವ್ಯ ನಿರ್ಲಕ್ಷ್ಯ ತಾಳಿದ್ದಾರೆ. ಅನೇಕ ಸಲ ಒತ್ತಾಯ ಮಾಡಿದಾಗ್ಯೂ, ಈ ಪ್ರದೇಶದ ಶಾಸಕರುಗಳನ್ನು ಕರೆದು ಚರ್ಚೆ ಮಾಡುವಷ್ಟು ಕನಿಷ್ಠ ಸೌಜನ್ಯವನ್ನು ಇವರು ತೋರುತ್ತಿಲ್ಲ.

ಈಗಾಗಲೇ ನಾನೂ ಸೇರಿದಂತೆ ಅನೇಕ ವಿರೋಧ ಪಕ್ಷದವರು ಹಾಗೂ ಪತ್ರಿಕೆಗಳು ''ಹಣದ ಕೊರತೆಯಿಂದಾಗಿ ಸರ್ಕಾರ ಯೋಜನಾ ಗಾತ್ರವನ್ನು ಕಡಿತ ಮಾಡಿದೆ'' ಎಂದು, ಕೊನೆಯ ಪಕ್ಷ ನೀರಾವರಿ ಯೋಜನೆಗಳಿಗಾದರೂ ಕಡಿತ ಮಾಡಬಾರದೆಂದು ಕೇಳಿಕೊಂಡಾಗ್ಯೂ, ಸರ್ಕಾರ ಇದರ ಬಗ್ಗೆ ಗಂಭೀರವಾಗಿ ಯೋಚನೆ ಮಾಡುತ್ತಿಲ್ಲ.

ಆಡಳಿತ ಪಕ್ಷದ ಒಳಜಗಳದಿಂದಾಗಿ ಸಂಪನ್ಮೂಲ ಕ್ರೋಢೀಕರಣದಲ್ಲಿನ ವಿಫಲತೆ ಹಾಗೂ ಹದಗೆಟ್ಟ ಆಡಳಿತದಿಂದಾಗಿ ರಾಜ್ಯದ ಹಣಕಾಸಿನ ಪರಿಸ್ಥಿತಿ ತುಂಬಾ ದುರ್ಬಲವಾಗಿ

ಹಿಂದೆ ಎಂದೂ ಇಲ್ಲದಷ್ಟು ಕುಲಗೆಟ್ಟಿದೆ. ಆದರೆ ಸುಳ್ಳು ಹೇಳುವುದರಲ್ಲಿ ನಿಸ್ಸೀಮರಾದ ನಮ್ಮ ಮುಖ್ಯಮಂತ್ರಿಗಳು, ಇತ್ತೀಚೆಗೆ ಬಳ್ಳಾರಿಯಲ್ಲಿ ಪತ್ರಕರ್ತರೊಡನೆ ಮಾತನಾಡುತ್ತ ''ರಾಜ್ಯದಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಶೇಕಡ ಇಪ್ಪತ್ತರಷ್ಟು ಅಧಿಕ ಹಣ ಬಿಡುಗಡೆ ಮಾಡಲಾಗಿದೆ. ಅಭಿವೃದ್ಧಿ ಕಾಮಗಾರಿಗಳ ಪ್ರಗತಿಯಲ್ಲಿ, ರಾಜ್ಯ ಸರ್ಕಾರ ವಾರ್ಷಿಕ ಯೋಜನೆಯ ಒಟ್ಟು ಮೊತ್ತದಲ್ಲಿ ಈಗಾಗಲೇ ಶೇಕಡ 45ರಷ್ಟು ಹಣ ವಿನಿಯೋಗಿಸಿ ರಾಷ್ಟ್ರದೆಲ್ಲೇ ಅಧಿಕ ಪ್ರಗತಿ ಸಾಧಿಸಿ ಮೊದಲ ಸ್ಥಾನದಲ್ಲಿದೆ. ಇದು ರಾಜ್ಯಕ್ಕೆ ಹೆಮ್ಮೆ ತರುವ ವಿಷಯ'' ಎಂದು ಹೇಳಿಕೆ ನೀಡಿದ್ದಾರೆ. ಯೋಜನಾಗಾತ್ರದಲ್ಲಿ ಅದರಲ್ಲಿಯೂ ನೀರಾವರಿ ಯೋಜನೆಗಳಿಗೆ ಕಡಿತ ಮಾಡಿರುವದು ನಿಜವೇ ಎಂದು ನಾನು ಮುಖ್ಯಮಂತ್ರಿಗಳಿಗೆ ಒಂದಲ್ಲ ಎರಡು ಪತ್ರಗಳನ್ನು ಬರೆದಾಗ್ಯೂ, ಈ ಪತ್ರಗಳಿಗೆ ಒಂದು ಪತ್ರಕ್ಕಾದರೂ ಉತ್ತರ ಕೊಡುವ ಸೌಜನ್ಯ ತೋರಿರುವುದಿಲ್ಲ.

ತಾರೀಖು : 30-12-1993ನೇ ದಿನಾಂಕದಿಂದ ಪ್ರಾರಂಭವಾಗುತ್ತಿರುವ ವಿಧಾನ ಸಭೆಯಲ್ಲಿ ರಾಜ್ಯ ಸರ್ಕಾರದ ಆಡಳಿತ ವಿಫಲತೆಯಿಂದಾಗಿ ಉಂಟಾಗಿರುವ ಆರ್ಥಿಕ ದಿವಾಳಿತನ ಹಾಗೂ ಇದರ ಪರಿಣಾಮವಾಗಿ ''ರಾಜ್ಯದ ಯೋಜನಾ ಗಾತ್ರವನ್ನು ಕಡಿತ ಮಾಡುವ ಅನಿವಾರ್ಯತೆಯ'' ಬಗ್ಗೆ ಗಂಭೀರವಾಗಿ ಚರ್ಚೆ ಮಾಡುವುದು ಅವಶ್ಯಕವೆಂದು ನಾನು ಭಾವಿಸುತ್ತೇನೆ. ಆದ್ದರಿಂದ ದಯಮಾಡಿ ಸದನ ಸೇರುವ ಮೊದಲೇ ಪೂರ್ವ ಭಾವಿಯಾಗಿ ಎಲ್ಲ ವಿರೋಧಪಕ್ಷದ ಪ್ರಮುಖರ ಹಾಗೂ ಆಸಕ್ತರ ಸಭೆಯೊಂದನ್ನು ಕರೆದು ನಾವು ತೆಗೆದು ಕೊಳ್ಳಬೇಕಾದ ನಿಲುವಿನ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳಬೇಕೆಂದು ಕೋರುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ಶ್ರೀಯುತ ಆರ್.ವಿ. ದೇಶಪಾಂಡೆರವರು
ವಿರೋಧ ಪಕ್ಷದ ನಾಯಕರು
ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು.

ಪ್ರತಿಯನ್ನು :

1. ಶ್ರೀ ಯಡಿಯೂರಪ್ಪನವರು , ಶಾಸಕರು, ಶಾಸಕರ ಭವನ, ಬೆಂಗಳೂರು
2. ಪ್ರೊ. ನಂಜುಂಡಸ್ವಾಮಿ, ಶಾಸಕರು, ಶಾಸಕರ ಭವನ, ಬೆಂಗಳೂರು
3. ಶ್ರೀ ವಾಟಳ್ ನಾಗರಾಜ್, ಶಾಸಕರು, ಶಾಸಕರ ಭವನ, ಬೆಂಗಳೂರು
4. ಅಧ್ಯಕ್ಷರು, ರಾಜ್ಯ ಜನತಾದಳ, ಪ್ರದೇಶ ಜನತಾದಳ ಕಛೇರಿ,
   ರೇಸ್ ಕೋರ್ಸ್ ರಸ್ತೆ, ಬೆಂಗಳೂರು

**ವೈ.ಕೆ. ರಾಮಯ್ಯ**
ಅಧ್ಯಕ್ಷರು,
ಸಮಾಜವಾದಿ ಪಕ್ಷ, ಕರ್ನಾಟಕ

ಕರ್ನಾಟಕ ರಾಜ್ಯದ ಹಾಸನ ಜಿಲ್ಲೆಯ ಗೊರೂರಿನಲ್ಲಿ ಹೇಮಾವತಿ ನದಿಗೆ ಅಡ್ಡಲಾಗಿ ಒಂದು ಜಲಾಶಯವನ್ನು ಕಟ್ಟಲಾಗಿದೆ. ಈ ಜಲಾಶಯ ಕಟ್ಟಿ ಒಂದು ದಶಕಕ್ಕಿಂತಲೂ ಹೆಚ್ಚಿನ ದಿನಗಳಾದರೂ, ಜಲಾಶಯದಲ್ಲಿ ಲಕ್ಷಾಂತರ ಎಕರೆಗೆ ಆಗುವಷ್ಟು ನೀರು ತುಂಬಿದ್ದರೂ, ಆ ನೀರನ್ನು ರೈತರ ಭೂಮಿಗೆ ಬಿಡಲು ಕಾಲುವೆಗಳನ್ನು ಮಾಡುವ ಕೆಲಸವನ್ನು ಮುಗಿಸಲಾಗಿಲ್ಲ. ಬಾಗೂರು - ನವಿಲೆ ಮುಖಾಂತರ ಹಾದು ಬರುವ ಹೇಮಾವತಿ ಎಡದಂಡೆ ನಾಲೆಯಿಂದ ತುಮಕೂರು ಜಿಲ್ಲೆ ಹಾಗೂ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಸುಮಾರು 4 ಲಕ್ಷ ಎಕರೆಗೆ ನೀರು ಕೊಡಲು ಹಾಗೂ ಈ ಪ್ರದೇಶದ ಅನೇಕ ಪಟ್ಟಣಗಳಿಗೆ ಕುಡಿಯುವ ನೀರು ಒದಗಿಸುವ ಈ ಯೋಜನೆ ರಾಜ್ಯ ಸರ್ಕಾರದ ಅಲಕ್ಷ್ಯ ಧೋರಣೆಯಿಂದಾಗಿ ಮುಗಿಯದೇ ನೆನೆಗುದಿಗೆ ಬಿದ್ದಿದೆ. ಕಳೆದ ವರ್ಷ ಅನೇಕ ಜನರ ಶ್ರಮದಿಂದ ಈ ಯೋಜನೆಯ ಕೆಲಸ ತ್ವರಿತಗೊಂಡು ಸ್ವಲ್ಪ ಪ್ರಗತಿ ಆಯಿತು. ಆದರೆ ಇತ್ತೀಚೆಗೆ ಅಧಿಕಾರಕ್ಕೆ ಬಂದ ಜನತಾ ದಳದ ಸರ್ಕಾರ, ಅನೇಕ ಕುಂಟು ನೆಪಗಳನ್ನು ಮುಂದೆ ಮಾಡಿ, ಶೇಕಡ 80ರಷ್ಟು ಕೆಲಸವನ್ನು ನಿಲ್ಲಿಸಿದೆ. ತುಮಕೂರು ಜಿಲ್ಲೆಯ ಶಿಂಷಾ ನದಿಪಾತ್ರಕ್ಕೆ ಹರಿದು ಬರುತ್ತಿದ್ದ ನೀರನ್ನು ನಿಲ್ಲಿಸಲಾಗಿದೆ. ಕಳೆದ ವರ್ಷ ಅಂದರೆ 1993 ನವೆಂಬರ್‌ನಿಂದ 1994ರ ಮಾರ್ಚ್ ಅಂತ್ಯದವರೆಗೆ, ಈ ಯೋಜನೆಯ ಕೆಲಸಗಳಿಗೆ 34 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿದ್ದರೆ, ಈಗ ಅಧಿಕಾರಕ್ಕೆ ಬಂದಿರುವ ಸರ್ಕಾರ ಇದೇ ಅವಧಿಗೆ ಅಂದರೆ ನವಂಬರ್ 1994ರಿಂದ ಮಾರ್ಚ್ 1995ರವರೆಗೆ ಕೇವಲ 8 ಕೋಟಿ ರೂ.ಗಳನ್ನು ಮಾತ್ರ ಬಿಡುಗಡೆ ಮಾಡಿದೆ.

ಏಪ್ರಿಲ್ 1994ರಿಂದ ಮಾರ್ಚ್ 1995ರ ಅಂತ್ಯದವರೆಗೆ 30 ಸಾವಿರ ಹೆಕ್ಟೇರ್‌ಗಳಿಗೆ ನೀರನ್ನು ಒದಗಿಸುವ ಗುರಿ ಇದ್ದಾಗ್ಯೂ, ಒಂದು ಎಕರೆಗೂ ಈ ಸರ್ಕಾರ ನೀರನ್ನು ಒದಗಿಸಿರುವುದಿಲ್ಲ. ಇದನ್ನು ಗಮನಿಸಿದರೆ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಯಾವ ಪಕ್ಷದ ಸರ್ಕಾರವೂ ಆಯವ್ಯಯದಲ್ಲಿ ನೀರಾವರಿಗಾಗಿ ಒದಗಿಸಿದ ಹಣವನ್ನು ಪೂರ್ಣವಾಗಿ ಖರ್ಚು ಮಾಡದೆ, ಈ ರಾಜ್ಯದ ರೈತರಿಗೆ ಮೋಸದ ಪರಂಪರೆಯನ್ನೇ ಅನುಸರಿಸಿಕೊಂಡು ಬಂದಿರುವುದನ್ನು, ಈಗಿನ ಸರ್ಕಾರವೂ ಮುಂದುವರೆಸುತ್ತಿರುವುದು ನಿಚ್ಚಳವಾಗಿ ಗೋಚರಿಸುತ್ತಿದೆ.

ಇಡೀ ರಾಜಕೀಯ ಜೀವನದಲ್ಲಿ ನೀರಾವರಿ ಯೋಜನೆಗಳ ಅನುಷ್ಠಾನಕ್ಕಾಗಿ, ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ. ದೇವೇಗೌಡರು ತಾಳಿದ ನಿಲುವು, ಮಾಡಿದ ಪ್ರತಿಪಾದನೆಗಳನ್ನು ಕಂಡ ರಾಜ್ಯದ ಜನತೆ, ಇವರು ಮುಖ್ಯಮಂತ್ರಿಗಳಾದ ಮೇಲೆ ನೀರಾವರಿ

ಯೋಜನೆಗಳ ಅನುಷ್ಠಾನ ಯುದ್ಧೋಪಾದಿಯಲ್ಲಿ ಕಾರ್ಯಗತಗೊಳ್ಳುತ್ತವೆ ಎಂದು ಸಹಜವಾಗಿ ನಿರೀಕ್ಷಿಸಿದ್ದರು. ಆದರೆ ಅಧಿಕಾರಕ್ಕೆ ಬಂದ ಮೇಲೆ ನೀರಾವರಿಯ ಬಗ್ಗೆ ಈ ಸರ್ಕಾರದ ಆಸಕ್ತಿಯನ್ನು ಗಮನಿಸಿದರೆ, ರಾಜ್ಯದ ನೀರಾವರಿ ಯೋಜನೆಗಳ ಅನುಷ್ಠಾನದ ವಿಷಯದಲ್ಲಿ ಹಿಂದಿನ ಸರ್ಕಾರಗಳು ಸೃಷ್ಟಿಸಿದ ಪರಂಪರೆಯನ್ನೇ ಈ ಸರ್ಕಾರವೂ ಮುಂದುವರಿಸಿಕೊಂಡು ಹೋಗುತ್ತಿರುವುದು ನಮಗೆ ಅರಿವಾಗುತ್ತಿದೆ.

ತುಮಕೂರು ಜಿಲ್ಲೆ ಹಾಗೂ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಲಕ್ಷಾಂತರ ರೈತರ ಭೂಮಿಗೆ, ನೀರನ್ನು ಒದಗಿಸುವ ಈ ಯೋಜನೆಯ ಅನುಷ್ಠಾನಕ್ಕಾಗಿ ನಾನು ಸುಮಾರು ಎರಡು ದಶಕಗಳಿಂದಲೂ ಹೆಚ್ಚಿನ ಕಾಲ ಅತ್ಯಂತ ಆಸಕ್ತಿಯಿಂದ ಶ್ರಮಿಸಿದ್ದೇನೆ. ಅನೇಕ ಜನರ ಆಸಕ್ತಿ, ಶ್ರಮ ಹಾಗೂ ದುಡಿಮೆಯಿಂದಾಗಿ ಹೇಮಾವತಿ ನೀರು ಶಿಂಷಾ ನದಿಪಾತ್ರಕ್ಕೆ ಹರಿದು ಬರುವ ಕಾರ್ಯ ಯಶಸ್ವಿಯಾಯಿತು. ಆದರೆ ಈ ನೀರನ್ನು, ಕಾಲುವೆಗಳ ಮೂಲಕ ರೈತನ ಭೂಮಿಗೆ ಹರಿಸುವ ಕೆಲಸ ಆಗಬೇಕಾಗಿದೆ. ಆದರೆ ಇತ್ತೀಚೆಗೆ ಅಧಿಕಾರಕ್ಕೆ ಬಂದ ಈ ಸರ್ಕಾರ ನೂರಕ್ಕೆ ಎಂಭತ್ತರಷ್ಟು ಕೆಲಸಗಳನ್ನು ನಿಲ್ಲಿಸಿದೆ. ಆಗಿರುವ ಕೆಲಸಗಳಿಗೆ ಬಿಡುಗಡೆ ಮಾಡಬೇಕಾಗಿರುವ ಸುಮಾರು 25 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿಲ್ಲ. ಜಲಾಶಯದಲ್ಲಿ ನೀರು ತುಂಬಿದ್ದಾಗ್ಯೂ ಶಿಂಷಾ ನದಿಯ ಪಾತ್ರಕ್ಕೆ ಹರಿದು ಬರುತಿದ್ದ ನೀರನ್ನು ನಿಲ್ಲಿಸಲಾಗಿದೆ.

ಇದನ್ನು ಗಮನಿಸಿದ ನಾನು ವೈಯಕ್ತಿಕವಾಗಿ ಹಾಗೂ ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ, ತುಮಕೂರು ಜಿಲ್ಲೆ ಇದರ ಮೂಲಕ

**ಅ) ನಿಲ್ಲಿಸಿರುವ ಎಲ್ಲಾ ಕೆಲಸಗಳನ್ನು ಮೊದಲು ಮಾಡಬೇಕು.**

**ಆ) ಆಗಿರುವ ಕೆಲಸಗಳಿಗೆ ಗುತ್ತಿಗೆದಾರರಿಗೆ ಕೊಡಬೇಕಾಗಿರುವ ಹಣ ಬಿಡುಗಡೆ ಮಾಡಬೇಕು,**

**ಇ) ಶಿಂಷಾ ನದಿಪಾತ್ರಕ್ಕೆ ಹರಿದು ಬರುತ್ತಿದ್ದ ನೀರನ್ನು ಮುಂದುವರೆಸಬೇಕು.**

ಈ ಬೇಡಿಕೆಗಳನ್ನ ಅನೇಕಸಲ ಬರವಣಿಗೆ ಹಾಗೂ ಪತ್ರಿಕಾ ಹೇಳಿಕೆ ಮೂಲಕ ಸರ್ಕಾರದ ಗಮನಕ್ಕೆ ತಂದದ್ದಾಯಿತು.

"**ಮಣ್ಣಿನ ಮಗ**"ನೆಂದು ಹೇಳಿಕೊಂಡು ಅಧಿಕಾರಕ್ಕೆ ಬಂದ ಮಾನ್ಯ ಮುಖ್ಯ ಮಂತ್ರಿಗಳು, ರಾಜ್ಯದ ಬೃಹತ್ ಕೈಗಾರಿಕೋದ್ಯಮಿಗಳ ಹಿತಸಾಧನೆಗಾಗಿ ದಾವೂಸ್‌ಗೆ ದೌಡಾಯಿಸಿದರೆ ಹೊರತು, ಈ ರಾಜ್ಯದ ಎರಡು ಪ್ರಮುಖ ನೀರಾವರಿ ಯೋಜನೆಗಳ

ಅನುಷ್ಠಾನ ಕಾರ್ಯಕ್ರಮಗಳನ್ನು ಪರಿಶೀಲಿಸಲು ದೌಡಾಯಿಸಲಿಲ್ಲ. ಈ ವಿಷಯದಲ್ಲಿ ನಾವು ಬರೆದ ಮೂರು ಪತ್ರಗಳಿಗೂ ಉತ್ತರಿಸುವಷ್ಟು ಸೌಜನ್ಯ ತೋರಲಿಲ್ಲ. ತಾರೀಖು 25-3-1995ರ ಒಳಗಾಗಿ ನಾವು ಈಗಾಗಲೇ ಸರ್ಕಾರದ ಗಮನಕ್ಕೆ ತಂದಿರುವ ಈ ಮೇಲ್ಕಂಡ ಮೂರು ಬೇಡಿಕೆಗಳನ್ನು ಈಡೇರಿಸದಿದ್ದರೆ, ತಾರೀಖು 26-3-1995ರಂದು ಭಾನುವಾರ ಬೆಳಗ್ಗಿನಿಂದ ಬೆಂಗಳೂರಿನ ವಿಧಾನಸೌಧದ ಮುಂದೆ **"ನಾನು ಮತ್ತು ನನ್ನ ಅಭಿಮಾನಿಗಳು" "ಉಪವಾಸ ಸತ್ಯಾಗ್ರಹ"** ಕೈಗೊಳ್ಳಲು ತೀರ್ಮಾನಿಸಿದ್ದೇವೆ. ರಾಜ್ಯದ ಜನರಿಗೆ ಪತ್ರಿಕೆಗಳ ಮೂಲಕ ನಾವು ಸರ್ಕಾರಕ್ಕೆ ಮಾಡಿರುವ ಮನವಿಗಳ ಅರಿವು ಮಾಡಿಕೊಡುವ ದೃಷ್ಟಿಯಿಂದ ಸರ್ಕಾರಕ್ಕೆ ಈ ವಿಷಯದಲ್ಲಿ ಬರೆದಿರುವ ಪತ್ರಗಳ ನಕಲುಗಳನ್ನು ಲಗತ್ತಿಸಿರುತ್ತೇವೆ.

ಅಧಿಕಾರದ ಆಸೆಗಾಗಿ ನೀರಾವರಿಯ ಬಗ್ಗೆ "ಬೂಟಾಟಿಕೆಯ" ಪ್ರದರ್ಶನ ಮಾಡದೇ, ರೈತನ ಭೂಮಿಗೆ ನೀರು ಒದಗಿಸುವ ವಿಷಯದಲ್ಲಿ ಪ್ರಾಮಾಣಿಕವಾದ ಆಸಕ್ತಿಯುಳ್ಳ ಎಲ್ಲರೂ ಪಕ್ಷಭೇದ ಮರೆತು, ನಮಗೆ ಬೆಂಬಲ ನೀಡಬೇಕೆಂದು ಈ ಮೂಲಕ ಪ್ರಾರ್ಥಿಸುತ್ತೇನೆ.

ವೈ.ಕೆ. ರಾಮಯ್ಯ
ಅಧ್ಯಕ್ಷರು
ಸಮಾಜವಾದಿ ಪಕ್ಷ, ಕರ್ನಾಟಕ



**ವೈ.ಕೆ. ರಾಮಯ್ಯ, ಎಂ.ಎ., ಎಲ್.ಎಲ್.ಬಿ.,**

ಕುಣಿಗಲ್ - 572130

ತುಮಕೂರು ಜಿಲ್ಲೆ

ಇವರಿಗೆ

**ಶ್ರೀ ಜೆ.ಎಚ್. ಪಟೇಲ್ ಅವರು**
**ಮಾನ್ಯ ಮುಖ್ಯಮಂತ್ರಿಗಳು**
**ಕರ್ನಾಟಕ ಸರ್ಕಾರ**
**ವಿಧಾನಸೌಧ, ಬೆಂಗಳೂರು - 560 001.**

ಮಾನ್ಯರೆ,

ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡಿರುವ ಈ ಸಂದರ್ಭದಲ್ಲಿ ಮತ್ತೊಮ್ಮೆ ತಮ್ಮನ್ನು ಅಭಿನಂದಿಸುತ್ತಾ ಈ ಕಾಗದ ಬರೆಯುತ್ತಿದ್ದೇನೆ.

ನನ್ನ ಇಡೀ ಬದುಕಿನಲ್ಲಿ ಈ ರಾಜ್ಯದ ನೀರಾವರಿ ಯೋಜನೆಗಳ ಅನುಷ್ಠಾನದ ಬಗ್ಗೆ, ನಾನು ಸತತವಾಗಿ ಸರ್ಕಾರದ ಮೇಲೆ ಎಲ್ಲಾ ವಿಧವಾದ ಒತ್ತಡ ತಂದಿರುವುದು ತಮಗೆ ತಿಳಿದ ವಿಷಯವೇ ಆಗಿದೆ. ಮಣ್ಣಿನ ಮಗನೆಂದು ತಾವು, ಬಿರುದಾಂಕಿತರಲ್ಲದಿದ್ದರೂ ಅಪಾರ ಭೂ ಹಿಡುವಳಿಯ ಮಾಲೀಕರ ಮಗನಾದ ತಾವು ನಿಜವಾಗಿಯೂ ರೈತನ ಬವಣೆಯ ಬಗ್ಗೆ ಅರಿವುಳ್ಳವರು ಎಂದು ನಂಬಿರುತ್ತೇನೆ. ಈ ರಾಜ್ಯದ ನೀರಾವರಿ ಯೋಜನೆಗಳ ಅನುಷ್ಠಾನ ಚುರುಕುಗೊಳಿಸಿ ಮುಗಿಸಬೇಕಾದ್ದು, ನಮ್ಮೆಲ್ಲರ ಕರ್ತವ್ಯವಾಗಿದೆ. ಅದು ಅನಿವಾರ್ಯ ಕೂಡ. ಏಕೆಂದರೆ : ಕೃಷ್ಣಾ, ಕಾವೇರಿ ನದಿಗಳು ಕರ್ನಾಟಕದ ಎರಡು ಕಣ್ಣುಗಳಿದ್ದ ಹಾಗೆ. ಈ ಎರಡು ಕಣ್ಣುಗಳಲ್ಲೂ ಆನಂದಬಾಷ್ಪ ಸುರಿದು, ಭೂಮಿ ತೊಯ್ದು ಸಮೃದ್ಧವಾದ ಬೆಳೆ ಈ ನಾಡಿನ ರೈತರಿಗೆ ದೊರೆಯಬೇಕೆಂಬುದು ನಮ್ಮೆಲ್ಲರ ಉತ್ಕಟ ಆಸೆ. ಆದರೆ ದುರಾದೃಷ್ಟವಶಾತ್, ಆನಂದ ಭಾಷ್ಪ ಸುರಿಯಬೇಕಾದ ಕಾವೇರಿ ಮಾತೆಯ ಎರಡು ಕಣ್ಣುಗಳಲ್ಲಿ ನೋವಿನ ಕಣ್ಣೀರು ಸುರಿಯುವುದನ್ನೇ ನೋಡಬೇಕಾದ್ದು ನಮ್ಮ ದೌರ್ಭಾಗ್ಯ. ಈ ಎರಡೂ ನದಿಗಳ ನೀರನ್ನು ಬಳಸಿಕೊಳ್ಳುವುದರಲ್ಲಿ ಅಧಿಕಾರಕ್ಕೆ ಬಂದ ಎಲ್ಲಾ ಪಕ್ಷದ ಸರ್ಕಾರಗಳು ವಿಫಲವಾಗಿವೆ ಎಂಬುದು ನನ್ನ ದೃಢ ನಂಬಿಕೆ.

ಈ ಎರಡೂ ನದಿಪಾತ್ರಗಳಲ್ಲಿ ಬರುವ ಯೋಜನೆಗಳನ್ನು ಆದಷ್ಟು ಬೇಗ ಮುಗಿಸಲೇ ಬೇಕಾದ ವಿಶೇಷ ಪರಿಸ್ಥಿತಿ ನಮ್ಮ ಮುಂದಿದೆ. ಕೃಷ್ಣಾ ನದಿಯ ಯೋಜನೆಗಳನ್ನು ಮುಗಿಸಿ, 2000ನೆಯ ಇಸವಿಯೊಳಗಾಗಿ ನಮ್ಮ ಪಾಲಿನ ನೀರನ್ನು ಬಳಸಿಕೊಳ್ಳಬೇಕಾಗಿದೆ. ಅದೇರೀತಿ ಕಾವೇರಿ ನದಿಯ ನೀರಿನ ಯೋಜನೆಯ ಅನುಷ್ಠಾನದ ಬಗ್ಗೆ ತಮಿಳುನಾಡು ಕೋರ್ಟ್‌ನಲ್ಲಿ ಹೂಡಿರುವ ಕಟ್ಟಲೆ ಮತ್ತು ನ್ಯಾಯಾಲಯ ನೀಡಿರುವ ಮಧ್ಯಂತರ ತೀರ್ಪು ನಮ್ಮ ತಲೆಯ ಮೇಲೆ

ಕತ್ತಿಯಂತೆ ತೂಗಾಡುತ್ತಿದೆ. ಇಂತಹ ಗಂಭೀರವಾದ ಪರಿಸ್ಥಿತಿ ಇದ್ದಾಗ್ಯೂ ಗಹನವಾಗಿ ಚಿಂತಿಸಿ, ವಿಶೇಷ ಕಾರ್ಯಕ್ರಮವನ್ನು ಇದುವರೆಗಿನ ಯಾವ ಸರ್ಕಾರವೂ ಹಮ್ಮಿಕೊಳ್ಳಲಿಲ್ಲ ಎನ್ನುವುದು ಸತ್ಯಸಂಗತಿ. ಯಾವ ವರ್ಷವೂ ಆಯ-ವ್ಯಯದಲ್ಲಿ ನೀರಾವರಿಗಾಗಿ ಒದಗಿಸಿದ ಹಣವನ್ನು ಯಾವ ಸರ್ಕಾರವೂ ಪೂರ್ಣವಾಗಿ ವ್ಯಯಮಾಡದೆ, ಈ ರಾಜ್ಯದ ರೈತರಿಗೆ ನಾವು ದ್ರೋಹ ಬಗೆದಿದ್ದೇವೆ. ಈ ಅನ್ಯಾಯವನ್ನು ತಮ್ಮ ಸರ್ಕಾರವಾದರೂ ಸರಿ ಮಾಡಬಹುದು ಎನ್ನುವ ಆಸೆಯಿಂದ ಈ ಪತ್ರ ಬರೆಯುತ್ತಿದ್ದೇನೆ.

ಇಡೀ ರಾಜ್ಯದ ನೀರಾವರಿ ಯೋಜನೆಯ ಸಭೆ ಇದಾದರೆ, ಹಾಸನ ಜಿಲ್ಲೆ, ಗೊರೂರಿನಲ್ಲಿ ಹೇಮಾವತಿ ನದಿಗೆ ಕಟ್ಟಿರುವ ಅಣೆಕಟ್ಟು ಸುಮಾರು ಇಪ್ಪತ್ತು ವರ್ಷಗಳ ಹಿಂದೆಯೇ ಪೂರ್ಣಗೊಂಡಿದೆ. ಈ ಯೋಜನೆಯ ಪ್ರಕಾರ ಹಾಸನ ಜಿಲ್ಲೆಯ ಪೂರ್ವ ಭಾಗಕ್ಕೆ, ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಸುಮಾರು 3 ಲಕ್ಷ ಎಕರೆಗೆ ಒದಗಿಸಬೇಕಾದ ನೀರನ್ನು ಅಣೆಕಟ್ಟೆಯಲ್ಲಿ ನೀರು ತುಂಬಿದ್ದರೂ ಒದಗಿಸಲು ಸಾಧ್ಯವಾಗಿಲ್ಲ. ಈ ನೀರನ್ನು ಪಡೆದುಕೊಳ್ಳಲು ವಿಧಾನಸಭೆಯ ಒಳಗೆ ಮತ್ತು ಹೊರಗೆ ಸುಮಾರು ಎರಡು ದಶಕಗಳಿಂದ ನಾನು ಮತ್ತು ನನ್ನ ಸ್ನೇಹಿತರು ಪಟ್ಟ ಪಾಡಿನ ಬಗ್ಗೆ ಬರೆದರೆ ಒಂದು ಬೃಹತ್ ಗ್ರಂಥವಾಗುತ್ತದೆ. ಸ್ವಲ್ಪ ಪ್ರಯತ್ನದಿಂದ ಆಗಬೇಕಾದ ಈ ಕೆಲಸ ಆಗದೆ ಇರುವುದಕ್ಕೆ ಕಾರಣಗಳು ಹಲವಾರು. ಅವುಗಳನ್ನು ಚರ್ಚಿಸುವುದರಿಂದ, ವಿಶ್ಲೇಷಿಸುವುದರಿಂದ ಈಗ ಪ್ರಯೋಜನವಿಲ್ಲವೆಂದು ನನ್ನ ನಂಬಿಕೆ.

ಅನೇಕ ಜನರ ಶ್ರಮದ ಫಲವಾಗಿ ಹೇಮಾವತಿ ಅಣೆಕಟ್ಟೆಯಿಂದ ತುಮಕೂರು ಜಿಲ್ಲೆಯ ಶಿಂಷಾ ನದಿ ಪಾತ್ರದಲ್ಲಿ ಬರುವ ಕೆರೆಗಳಿಗೆ ನೀರನ್ನು ಬಿಡುವ ಮುಖಾಂತರ, ಸುಮಾರು 50 ಸಾವಿರ ಎಕರೆ ಜಮೀನಿಗೆ ಬೇಸಾಯಕ್ಕೆ ಶ್ರೀ ವೀರಪ್ಪ ಮೊಯಿಲಿಯವರ ಸರ್ಕಾರ ಇದ್ದಾಗ ನೀರು ಬಿಡಲಾಯಿತು. ಜನತಾದಳದ ಸರ್ಕಾರ ಅಧಿಕಾರಕ್ಕೆ ಬಂದ ಕೂಡಲೇ, ತುಮಕೂರು ಜಿಲ್ಲೆ ಹೇಮಾವತಿ ಯೋಜನೆಯ ಎಲ್ಲಾ ಕೆಲಸಗಳನ್ನೂ ಪ್ರಾರಂಭಿಸಬೇಕು ಎಂಬ ಬೇಡಿಕೆಯನ್ನು ಮುಂದಿಟ್ಟು, ಸರ್ಕಾರಕ್ಕೆ ಅನೇಕ ಸಲ ಪತ್ರ ಬರೆದಾಗ್ಯು, ಅಂದಿನ ನೀರಾವರಿ ಸಚಿವರೂ ಆಗಿದ್ದ ಮುಖ್ಯ ಮಂತ್ರಿಗಳು, ನನ್ನ ಪತ್ರಗಳಿಗೆ ಉತ್ತರವನ್ನೂ ಕೊಡುವ ಸೌಜನ್ಯ ತೋರಲಿಲ್ಲ. ಈ ನಮ್ಮ ಬೇಡಿಕೆಗಾಗಿ ವಿಧಿ ಇಲ್ಲದೆ ನಾವು ಸತ್ಯಾಗ್ರಹ, ಧರಣೆ, ಪ್ರತಿಭಟನೆ ಮಾಡಬೇಕಾಯಿತು. ಅಷ್ಟೇ ಅಲ್ಲ, ಇದಕ್ಕಾಗಿ ನಾನು ಮತ್ತು ನನ್ನ ಸ್ನೇಹಿತರು ಕಾರಾಗೃಹವನ್ನು ಸೇರಬೇಕಾಯಿತು. ಇದೆಲ್ಲಾ ತಮಗೆ ತಿಳಿದಿರುವ ವಿಚಾರ.

ಇಷ್ಟೆಲ್ಲಾ ಆದ ಮೇಲೆ ನಿಮ್ಮ ಹಿಂದಿನ ಮುಖ್ಯಮಂತ್ರಿಗಳು ''30-6-1996ನೆಯ ತಾರೀಖಿನೊಳಗಾಗಿ ತುಮಕೂರು - ಕುಣಿಗಲ್‌ನ ಮಧ್ಯೆ 125 ಕಿ.ಮೀ ನಂತರದ ಕಾಲುವೆ ಕೆಲಸವನ್ನೂ ಮುಗಿಸಲಾಗುವುದು ಎಂದು 27-2-1996ರಂದು ವಿಧಾನಸಭೆಯಲ್ಲಿ ಆಶ್ವಾಸನೆ ನೀಡಿರುತ್ತಾರೆ.'' ಅದೇ ರೀತಿ ಕಳೆದ ಲೋಕಸಭಾ ಚುನಾವಣೆಯ ಪ್ರಚಾರಕ್ಕೆ ತುಮಕೂರಿಗೆ

ಆಗಮಿಸಿದ್ದ ಮುಖ್ಯಮಂತ್ರಿಗಳು ತಾ.27-4-1996ನೆಯ ಭಾನುವಾರ ತುಮಕೂರಿನಲ್ಲಿ ''ಈ ವರ್ಷದ ಜೂನ್ ಅಂತ್ಯದೊಳಗೆ ಹೇಮಾವತಿ ನೀರು ಬುಗುಡನಹಳ್ಳಿ ಕೆರೆಗೆ ಹರಿಯಲಿದ್ದು, ಅಲ್ಲಿಂದ ತುಮಕೂರಿಗೆ ಕುಡಿಯುವ ನೀರನ್ನು ಒದಗಿಸಲಾಗುವುದು. ಇದರಲ್ಲಿ ಯಾವ ಅನುಮಾನವೂ ಬೇಡ'' ಎಂದೂ ಘೋಷಿಸಿದ್ದಾರೆ. ತಮ್ಮ ಮುಖ್ಯಮಂತ್ರಿಗಳ ಮಾತನ್ನು ನಂಬಿ ಆ ಭಾಗದ ಜನರು, ನಿಮ್ಮ ಪಕ್ಷದ ಅಭ್ಯರ್ಥಿಗೆ ಮತ ಹಾಕಿ ಗೆಲ್ಲಿಸಿ, ಒಣಗಿದ ಭೂಮಿಗೆ, ದಣಿದ ಬಾಯಿಗೆ ಜೂನ್ 30ರಂದು ನೀರು ದೊರೆಯುವುದೆಂದು ತಿಪಟೂರಿನಿಂದ ಕುಣಿಗಲ್‌ವರೆಗಿನ ಜನ ಕಾದು ಕುಳಿತಿದ್ದಾರೆ.

ನಿಮಗೆ ನೀರು ಕೊಡುತ್ತೇವೆ ಎಂದು ಜನರಿಗೆ ಹೇಳಿ, ಓಟು ಪಡೆದುಕೊಂಡ ಅಂದಿನ ಮುಖ್ಯಮಂತ್ರಿಗಳು ಮತ್ತು ಅವರ ರಾಗಕ್ಕೆ ತಾಳ ಹಾಕಿದ ಈ ಜಿಲ್ಲೆಯ ಜಿಲ್ಲಾ ಮಂತ್ರಿಗಳು ಈಗ ಇಲ್ಲವಾಗಿದ್ದಾರೆ. ತಮ್ಮ ಹಿಂದಿನ ಸರ್ಕಾರ ಈ ಜಿಲ್ಲೆಯ ಜನರಿಗೆ ಕೊಟ್ಟ ಭರವಸೆಯ ಪ್ರಕಾರ ಈಗ ತಮ್ಮ ಸರ್ಕಾರ ಈ ತಿಂಗಳ 30ನೆಯ ತಾರೀಖಿನೊಳಗಾಗಿ, ಕುಣಿಗಲ್‌ವರೆಗಿನ ಕಾಲುವೆ ಕೆಲಸವನ್ನೂ ಮಾಡಿ ಮುಗಿಸಬೇಕಾಗಿದೆ. ಹಾಗೂ ತುಮಕೂರಿನ ಬುಗುಡನಹಳ್ಳಿ ಕೆರೆಗೆ ನೀರು ಹರಿಸಿ, ಅಲ್ಲಿಂದ ತುಮಕೂರು ಪಟ್ಟಣಕ್ಕೆ ಕುಡಿಯುವ ನೀರು ಒದಗಿಸಬೇಕಾಗಿದೆ. ಈ ಭರವಸೆಗಳನ್ನು ಈಡೇರಿಸುವಂತೆ ನಮ್ಮ ಹಿಂದಿನ ಮುಖ್ಯಮಂತ್ರಿಗಳಿಗೆ ತಾ.20-5-1996ರಂದು ನಾನು ಈಗಾಗಲೇ ಪತ್ರ ಬರೆದಿದ್ದೇನೆ. ಆಡಿದ ಮಾತಿನ ಪ್ರಕಾರ ನಡೆದುಕೊಂಡು, ಈ ಎರಡು ಬೇಡಿಕೆಗಳನ್ನೂ ಈಡೇರಿಸದೇ ಇದ್ದಲ್ಲಿ ತಾ. 30-6-1996ರ ನಂತರ 'ಓಟಿಗಾಗಿ ಸುಳ್ಳು ಭರವಸೆ ನೀಡಿದ ಸರ್ಕಾರದ ವಿರುದ್ಧ ಈ ಜಿಲ್ಲೆಯ ಜನ ಏನು ಮಾಡಬೇಕು ಎನ್ನುವುದನ್ನು ನಿರ್ಧರಿಸಲಿದ್ದಾರೆ, ಎಂದೂ ಸಹ ನನ್ನ ಪತ್ರದಲ್ಲಿ ಸ್ಪಷ್ಟವಾಗಿ ಬರೆದು ತಿಳಿಸಿದ್ದೇನೆ.

ಈಗ ಸರ್ಕಾರ ಬದಲಾಗಿದೆ. ಮಾತು ಕೊಟ್ಟವರು ಈಗ ಇಲ್ಲ. ನಾನು ಏನು ಮಾಡಲಿ? ಯಾವುದೇ ಬೇಡಿಕೆ ಈಡೇರಿಸಿಕೊಳ್ಳಲು ಸಂಘರ್ಷವೇ ಸಹಜ ಮಾರ್ಗವಲ್ಲ ಎನ್ನುವ ಅರಿವು ನನಗೆ ಉಂಟು. **ಆದರೆ ಸಾರ್ವಜನಿಕ ಕೆಲಸಗಳ ಬಗ್ಗೆ ಅಧಿಕಾರದಲ್ಲಿರುವವರಿಗೆ ಪತ್ರ ಬರೆದರೆ ಅದಕ್ಕೆ ಉತ್ತರ ಬರೆದು ಸ್ಪಂದಿಸಿ, ಸಹಕಾರ ನೀಡದೆ ಇರುವ ಅನಾಗರೀಕ ವ್ಯವಸ್ಥೆ ಇರುವಾಗ, ಸಂಘರ್ಷ ಮತ್ತು ಹೋರಾಟ ನನ್ನಂತಹವರಿಗೆ ಅನಿವಾರ್ಯವಾಗಿದೆ.** ಜನರು ತಮ್ಮ ನ್ಯಾಯಯುತವಾದ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು, ಸಹಜವಾಗಿ ದಕ್ಕಬೇಕಾದ ಸವಲತ್ತುಗಳನ್ನು ಪಡೆದುಕೊಳ್ಳಲು ಕಾನೂನಿನ ಚೌಕಟ್ಟಿನಲ್ಲಿ ಸಾಧ್ಯವಾಗದೆ ಇದ್ದಲ್ಲಿ ಸಂಘರ್ಷ ಮತ್ತು ಹೋರಾಟ ಅನಿವಾರ್ಯ ಎನ್ನುವುದನ್ನು ತಾವು ಬಲ್ಲಿರಿ.

ಅನೇಕ ವರ್ಷಗಳಿಂದ ತಮ್ಮನ್ನು ಬಲ್ಲ ನನಗೆ ನಿಮ್ಮ ಸರ್ಕಾರದಲ್ಲಿ ನ್ಯಾಯುತವಾದ ಸಾರ್ವಜನಿಕ ಬೇಡಿಕೆಗಳ ಈಡೇರಿಕೆಗೆ ಸಂಘರ್ಷದ ಅವಶ್ಯಕತೆ ಇಲ್ಲ ಎಂದು ನಂಬಿರುತ್ತೇನೆ. **ಶ್ರೀಮಾನ್ ಜೆ. ಎಚ್. ಪಟೇಲ್‌ರವರು ಮುಖ್ಯ ಮಂತ್ರಿಗಳು ಹಾಗೂ ಶ್ರೀಮಾನ್**

**ಕೆ.ಎಸ್. ನಾಗೇಗೌಡರು ನೀರಾವರಿ ಸಚಿವರಾಗಿರುವಾಗಲೂ "ಕೆರೆಯಲ್ಲಿ ತುಂಬಿರುವ ನೀರನ್ನು ಒಣಗಿದ ಭೂಮಿಗೆ, ದಣಿದ ಬಾಯಿಗೆ ಬಿಡಿ"** ಎಂಬ ಸಹಜ ಬೇಡಿಕೆಯನ್ನು ಈಡೇರಿಸಿಕೊಳ್ಳಲು ನಾನು ಮತ್ತೆ ಜೈಲಿಗೆ ಹೋಗುವ ಅವಶ್ಯಕತೆ ಬರಲಾರದೆಂದು ಪ್ರಾಮಾಣಿಕವಾಗಿ ನಂಬಿರುತ್ತೇನೆ. ಈ ನನ್ನ ನಂಬಿಕೆಯನ್ನು ಸುಳ್ಳು ಮಾಡದೆ ತಮ್ಮ ಹಿಂದಿನ ಸರ್ಕಾರ ಭರವಸೆ ನೀಡಿರುವ ಪ್ರಕಾರ ತಾ.30-6-1996ರೊಳಗೆ ಈ ನಮ್ಮ ಬೇಡಿಕೆಯನ್ನು ಈಡೇರಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಕೋರುತ್ತೇನೆ.

ವಂದನೆಗಳು,

**ವೈ.ಕೆ. ರಾಮಯ್ಯ**

## ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ (ರಿ)

## ತುಮಕೂರು ಜಿಲ್ಲೆ, ತುಮಕೂರು

ಮಾನ್ಯರೇ,

ಹೇಮಾವತಿ ಅಣೆಕಟ್ಟೆಯಿಂದ ತುಮಕೂರು ಜಿಲ್ಲೆಗೆ ನೀರು ಕೊಡಲು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ, ಬಾಗೂರು-ನವಿಲೆ ಗ್ರಾಮಗಳ ಪ್ರದೇಶದಲ್ಲಿ ಸುಮಾರು 10 ಕಿಮೀ. ನಷ್ಟು ಸುರಂಗ ನಿರ್ಮಾಣ ಮಾಡಲಾಗಿದೆ. ಈ ಸುರಂಗದ ಕೆಲಸ ಮುಗಿದು ಈಗಾಗಲೇ ಅನೇಕ ವರ್ಷಗಳಿಂದ ಸುರಂಗದ ಮೂಲಕ ತುಮಕೂರು ಮತ್ತು ಮಂಡ್ಯ ಜಿಲ್ಲೆಯ ಕೆಲವು ಭಾಗಗಳಿಗೆ ವ್ಯವಸಾಯ ಮತ್ತು ಕುಡಿಯುವ ನೀರು ಪೂರೈಸಲಾಗುತ್ತಿದೆ. ಈ ಸುರಂಗ ನಿರ್ಮಾಣದಿಂದ, ಆ ಪ್ರದೇಶದಲ್ಲಿ ಅಂತರ್ಜಲ ಬತ್ತಿ ಹೋಗಿರುತ್ತದೆ ಮತ್ತು ಈ ಪ್ರದೇಶದ ತೋಟದ ಬೆಳೆಗಳು ನಾಶವಾಗಿದೆ. ಅದಕ್ಕಾಗಿ ಪರಿಹಾರ ಕೊಡಬೇಕೆಂದು ಮತ್ತು ಏತ ನೀರಾವರಿ ಮೂಲಕ ಈ ಪ್ರದೇಶಕ್ಕೆ ನೀರು ಒದಗಿಸಲು ವ್ಯವಸ್ಥೆ ಮಾಡಬೇಕೆಂದು ಸರ್ಕಾರಕ್ಕೆ ಒತ್ತಾಯಿಸುತ್ತಾ ಬಂದಿದ್ದಾರೆ. ಈ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಈ ಭಾಗದ ರೈತರು ತುಮಕೂರು ಮತ್ತು ಮಂಡ್ಯ ಜಿಲ್ಲೆಗೆ ನೀರು ಬರುವ ಕಾಲುವೆಗೆ ಅಡ್ಡಲಾಗಿ ಮಣ್ಣು ತುಂಬಿ ನೀರು ಹರಿಯದಂತೆ ಅಡ್ಡಿ ಮಾಡಿರುತ್ತಾರೆ.

ಎಲ್ಲಾ ಭಾಗದ ರೈತರ ಸಮಸ್ಯೆಗಳ ಬಗ್ಗೆಯೂ ನಮಗೆ ಕಳಕಳಿ ಮತ್ತು ಅನುಕಂಪ ಇದೆ. ಆದುದರಿಂದ ಸರ್ಕಾರ ರೈತರಿಗೆ ಕೊಡಬೇಕಾದ ಪರಿಹಾರವನ್ನು ಕೂಡಲೇ ಪಾವತಿ ಮಾಡಿ, ಕಾಲುವೆಗೆ ತುಂಬಿರುವ ಮಣ್ಣನ್ನು ತೆಗೆದು ಈ ಭಾಗಕ್ಕೆ ನೀರು ಹರಿಯುವಂತೆ ವ್ಯವಸ್ಥೆ ಮಾಡಬೇಕಾಗಿದೆ. ಈ ವಿಷಯದಲ್ಲಿ ರೈತರ ಹೋರಾಟ ಅನೇಕ ದಿನಗಳಿಂದ ನಡೆಯುತ್ತಿದ್ದಾಗ್ಯೂ, ಸಂಬಂಧಪಟ್ಟ ಅಧಿಕಾರಿಗಳಾಗಲಿ, ಜನಪ್ರತಿನಿಧಿಗಳಾಗಲಿ, ಗಂಭೀರ ವಾದ ಯಾವುದೇ ಕ್ರಮ ತೆಗೆದುಕೊಳ್ಳುವ ಆಲೋಚನೆ ಮಾಡಿದಂತೆ ಕಂಡುಬರುತ್ತಿಲ್ಲ. ಮಳೆ ಅಭಾವದಿಂದಾಗಿ ತುಮಕೂರು ಜಿಲ್ಲೆಯಲ್ಲಿ ಬರದ ಪರಿಸ್ಥಿತಿ ಸೃಷ್ಟಿಯಾಗಿದೆ. ಬೇಸಾಯಕ್ಕೆ ಮತ್ತು ಕುಡಿಯುವ ನೀರಿನ ಕೊರತೆ ತೀವ್ರವಾಗಿದೆ. ತುಮಕೂರು ಮತ್ತು ತಿಪಟೂರು ನಗರಕ್ಕೆ ಕುಡಿಯುವ ನೀರು ಈ ಕಾಲುವೆ ಮೂಲಕವೇ ಹರಿದು ಬರಬೇಕಾಗಿದೆ. ಹೀಗಿದ್ದಾಗ್ಯೂ, ಈ ವಿಷಯದಲ್ಲಿ ಜಿಲ್ಲೆಯ ಆಳುವಪಕ್ಷದ ಜನಪ್ರತಿನಿಧಿಗಳ ದಿವ್ಯ ನಿರ್ಲಕ್ಷ್ಯ ನಿಜಕ್ಕೂ ವಿಷಾದನೀಯ ಮತ್ತು ಆಶ್ಚರ್ಯಕರ.

ಬರದ ಛಾಯೆಯಲ್ಲಿ ತುಮಕೂರು ಜಿಲ್ಲೆಯ ರೈತರು ಕಂಗಾಲಾಗಿರುವ ಈ ಪರಿಸ್ಥಿತಿಯಲ್ಲಿ, ಸರ್ಕಾರ ತಕ್ಷಣ ಜನಪ್ರತಿನಿಧಿಗಳ ಸಭೆ ಕರೆದು, ಸಮಸ್ಯೆಯ ಪರಿಹಾರಕ್ಕೆ ಕ್ರಮ ಕೈಗೊಂಡು, ತುಮಕೂರು ಜಿಲ್ಲೆಯ ಪ್ರಾಂತ್ಯಕ್ಕೆ ನೀರು ಬಿಡುವ ಬಗ್ಗೆ ಕ್ರಮ ಕೈಗೊಳ್ಳಬೇಕೆಂದು

ಕೋರುತ್ತೇವೆ. ಇದನ್ನು ಬಿಟ್ಟು ಎರಡು ಜಿಲ್ಲೆಗಳ ರೈತರ ಮಧ್ಯೆ ರಾಜಕೀಯ ಬೆರೆಸಿ, ವಿವಾದ ಸೃಷ್ಟಿಸಿ, ಏನೂ ಅರಿಯದಂತೆ ಸರ್ಕಾರ ನಿರ್ಲಕ್ಷ್ಯ ಮನೋಭಾವ ತೋರಿದರೆ, ತುಮಕೂರು ಜಿಲ್ಲೆಯ ರೈತರು ನೀರಿಗಾಗಿ ತೀವ್ರವಾದ ಪ್ರತಿಭಟನೆಯ ಮಾರ್ಗ ಹಿಡಿಯಬೇಕಾಗುತ್ತದೆ ಎಂಬುದನ್ನು ಸರ್ಕಾರ ಮನಗಾಣಬೇಕಾಗುತ್ತದೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ರವರಿಗೆ,
ಸನ್ಮಾನ್ಯ ಶ್ರೀ ಜೆ.ಎಚ್. ಪಟೇಲ್‌ರವರು
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ, ಬೆಂಗಳೂರು.

ಗೆ,

ಶ್ರೀಯುತ ಹೆಚ್.ಡಿ. ದೇವೇಗೌಡರು
ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ
ವಿಧಾನ ಸೌಧ, ಬೆಂಗಳೂರು - 1.

1-8-1996

ಮಾನ್ಯರೆ,

ಹೇಮಾವತಿ ಯೋಜನೆಯ ತುಮಕೂರು ಕಾಲುವೆಯ ಮುಖಾಂತರ ಜೂನ್ 3-ನೆಯ ತಾರೀಖಿನಿಂದ, ತುಮಕೂರಿನವರೆವಿಗೆ ಕಾಲುವೆಯಲ್ಲಿ ನೀರನ್ನು ಹರಿಸಲು ಸರ್ಕಾರ ತೀರ್ಮಾನಿಸಿ ಕ್ರಮ ತೆಗೆದುಕೊಂಡಿರುವುದಕ್ಕೆ ತಮ್ಮನ್ನು ಅಭಿನಂದಿಸುತ್ತೇನೆ. ತುಮಕೂರು ಪಟ್ಟಣಕ್ಕೆ ಕುಡಿಯುವ ನೀರನ್ನು ಸರಬರಾಜು ಮಾಡಲು ನಿಯೋಜಿಸಿರುವ ಬುಗುಡನಹಳ್ಳಿ ಕೆರೆಯವರೆವಿಗೂ ಇದುವರೆಗೆ ನೀರು ಹರಿದು ಬರಲಿಲ್ಲ. ಕಾರಣ, ಮಾರ್ಗ ಮಧ್ಯದಲ್ಲಿ ಇರುವ ವಿತರಣಾ ಕಾಲುವೆಗಳ ಮೂಲಕ ರೈತರುಗಳು ತಾವಾಗಿಯೇ ಕೆರೆಗಳಿಗೆ ನೀರನ್ನು ತಿರುಗಿಸಿಕೊಂಡಿರುವುದರಿಂದ, ಮುಂದೆ ನೀರು ಹರಿದು ಬರಲು ಸಾಧ್ಯವಾಗಿಲ್ಲ. ದಶಕಗಳಿಂದ ನೀರಿಗಾಗಿ ಕಾದು ಕುಳಿತಿದ್ದ ರೈತ ಸಮೂಹ, ಆ ನೀರು ತಮ್ಮಲ್ಲಿ ಹರಿದು ಬಂದಾಗ ಸಹಜವಾಗಿ ಅದನ್ನು ಉಪಯೋಗಿಸಿಕೊಳ್ಳಲು ಪ್ರಯತ್ನ ಮಾಡಿದ್ದಾರೆ. ಈ ನಮ್ಮ ರೈತರ ನಡವಳಿಕೆ ಅಪರಾಧ ಅಲ್ಲ. ಇದರಿಂದ ಯಾರಿಗೂ ಅನಾನುಕೂಲವೂ ಇಲ್ಲ.

ಬುಗುಡನಹಳ್ಳಿ ಕೆರೆಗೆ ನೀರು ಹರಿಸಿದರೂ, ಆ ನೀರನ್ನು ತುಮಕೂರು ಪಟ್ಟಣಕ್ಕೆ ಒದಗಿಸಲು ನಗರಸಭೆ ಮತ್ತು ಪೌರಾಡಳಿತ ಇಲಾಖೆ ಇದುವರೆವಿಗೆ ವ್ಯವಸ್ಥೆ ಮಾಡಿರುವುದಿಲ್ಲ. ಆದ್ದರಿಂದ ಬುಗುಡನಹಳ್ಳಿ ಕೆರೆಗೆ ನೀರು ಹರಿದು ಬರುವುದು ಸ್ವಲ್ಪ ನಿಧಾನವಾದರೂ ಯಾರಿಗೂ ತೊಂದರೆ ಇಲ್ಲ. ಹರಿದು ಬರುತ್ತಿರುವ ನೀರನ್ನು ಉಪಯೋಗಿಸಿಕೊಳ್ಳುತ್ತಿರುವ ರೈತರ ವಿರುದ್ಧ ಪೊಲೀಸರಿಗೆ ದೂರು ನೀಡುವುದು ಮತ್ತು ಇತರೆ ಕ್ರಮ ತೆಗೆದುಕೊಳ್ಳುವುದು ಸಮಂಜಸವಲ್ಲವೆಂದು ನನ್ನ ಅಭಿಪ್ರಾಯ. **ಈ ಜಿಲ್ಲೆಗೆ ಆದಷ್ಟು ಬೇಗ ನೀರನ್ನು ಹರಿಸಬೇಕು ಎಂದು ಸರ್ಕಾರದ ಮೇಲೆ ಒತ್ತಡ ತರಲು ಪ್ರಯತ್ನಿಸಿದ ಅಪರಾಧಕ್ಕಾಗಿ ನನ್ನ ಮೇಲೆ ಎರಡು ಸಲ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಿ ಜೈಲಿಗೆ ನನ್ನನ್ನು ಮತ್ತು ನನ್ನ ಸ್ನೇಹಿತರನ್ನು ಕಳುಹಿಸಿದ ಸರ್ಕಾರ** ಮತ್ತೆ ನೀರನ್ನು ಉಪಯೋಗಿಸಿಕೊಳ್ಳುತ್ತಿರುವ ರೈತರ ವಿರುದ್ಧ ಇಂತಹ ಹೊಣೆಗೇಡಿತನಕ್ಕೆ ಮುಂದಾದರೆ, ಕೆಟ್ಟ ಪರಿಣಾಮವನ್ನು ಎದುರಿಸಬೇಕಾಗುತ್ತದೆ. ಯಾವ ನೀರು ಈ ಜಿಲ್ಲೆಯ ಭೂಮಿಯ ಮೇಲೆ ಹರಿಯಬೇಕೆಂದು ನಾವು ಆಸೆ ಪಟ್ಟು, ಶ್ರಮಿಸಿದೆವೋ, ಆ ನೀರು ಹರಿದುಬಂದಾಗ ಜನರು ಅದನ್ನು ಉಪಯೋಗಿಸಿಕೊಳ್ಳಲು ಪ್ರಯತ್ನಪಡುತ್ತಿರುವುದು ನಿಜವಾಗಿಯೂ ಸಂತಸದ ವಿಷಯ.

ಆದ್ದರಿಂದ ಸರ್ಕಾರ ಮತ್ತು ಅಧಿಕಾರಿಗಳು ಈ ವಿಷಯದಲ್ಲಿ ಅತ್ಯಂತ ಎಚ್ಚರಿಕೆಯಿಂದ ನಡೆದುಕೊಳ್ಳಲು ಕೋರುತ್ತೇನೆ.

ಬುಗುಡನಹಳ್ಳಿಯ ಕೆರೆಗೆ ನೀರು ಹರಿದು ಬಂದರೂ, ಆ ನೀರನ್ನು ತುಮಕೂರು ನಗರದ ಜನರಿಗೆ ಕುಡಿಯಲು ಒದಗಿಸಲು ಸಧ್ಯದಲ್ಲಿ ಸಾಧ್ಯವಿಲ್ಲ ಎನ್ನುವುದು ನಿಜ. ಆದರೆ ಇಲ್ಲಿಯವರೆವಿಗೂ ನಿರ್ಮಿಸಿರುವ ಕಾಲುವೆಯ ಭದ್ರತೆ ಮತ್ತು ಪರಿಸ್ಥಿತಿಯನ್ನು ಪರಿಶೀಲಿಸಲು ನೀರನ್ನು ಹರಿಸುವ ಅವಶ್ಯಕತೆ ಇದೆ. ಅನೇಕ ದಶಕಗಳ ಕಾಲ ನೀರಿಗಾಗಿ ಕಾದ ನಾವು, ಕೆಲವು ದಿನಗಳು ಕಾಯಬೇಕಾಗುತ್ತದೆ. ಆದ್ದರಿಂದ ಈಗ ಮಾರ್ಗ ಮಧ್ಯದಲ್ಲಿ ನೀರನ್ನು ಉಪಯೋಗಿಸಿ ಕೊಳ್ಳುತ್ತಿರುವ ನಮ್ಮ ರೈತರು, ನೀರನ್ನು ತುಮಕೂರಿನವರೆಗೆ ಹರಿಸಲು ಸರ್ಕಾರದ ಅಧಿಕಾರಿಗಳಿಗೆ ಸಹಕಾರ ಕೊಡಬೇಕೆಂದು ನನ್ನ ಕೋರಿಕೆ. ಅಣೆಕಟ್ಟೆಯಲ್ಲಿ ಈಗಾಗಲೇ ಸಾಕಷ್ಟು ನೀರು ಸಂಗ್ರಹಣೆ ಆಗಿರುವುದರಿಂದ, ಈ ಜಿಲ್ಲೆಯ ಕೆರೆಗಳಿಗೆ ಹಾಗೂ ಅಚ್ಚುಕಟ್ಟಿಗೆ ನೀರು ಬರುವುದನ್ನು ಇನ್ನು ಮುಂದೆ ಯಾವ ಶಕ್ತಿಯೂ ತಡೆದು ನಿಲ್ಲಿಸಲು ಸಾಧ್ಯವಿಲ್ಲ. ಆದ್ದರಿಂದ ಈ ವಿಷಯದಲ್ಲಿ ನಮ್ಮ ಜನರು ಹತಾಶರಾಗುವುದಾಗಲೀ, ಗೊಂದಲಕ್ಕೆ ಒಳಗಾಗುವುದಾಗಲೀ ಅವಶ್ಯಕತೆ ಇಲ್ಲ.

**ಈವರೆವಿಗೆ ನೀರು ಬರಲೆಂದು ಹೋರಾಡಿದ್ದಾಯಿತು. ಈಗ ಬಂದಿರುವ ನೀರಿನ ವಿತರಣೆಯ ವಿವಾದಗಳ ಅಧ್ಯಾಯ ಪ್ರಾರಂಭವಾಗಿದೆ.** ಈ ಪರಿಸ್ಥಿತಿ ಈ ಯೋಜನೆಯ ಅಚ್ಚುಕಟ್ಟು ಪ್ರದೇಶಕ್ಕೆ ಸೀಮಿತವಾದುದಲ್ಲ. ಎಲ್ಲಾ ನೀರಾವರಿ ಯೋಜನೆಗಳ ಪ್ರದೇಶಗಳಲ್ಲಿಯೂ ಇರುವಂತಹದ್ದು. ಇಂತಹ ಪರಿಸ್ಥಿತಿಯನ್ನು ನಿಭಾಯಿಸಲಿಕ್ಕಾಗಿಯೇ ಸರ್ಕಾರದ ಎಲ್ಲಾ ನೀರಾವರಿ ಯೋಜನೆಗಳಿಗೆ ಸಂಬಂಧಿಸಿದಂತೆ ''ನೀರಾವರಿ ಸಲಹಾ ಸಮಿತಿಗಳನ್ನು'' ರಚಿಸಿದೆ. ಅದೇ ರೀತಿ ಹೇಮಾವತಿ ಯೋಜನೆಯ ಬಗ್ಗೆಯೂ ಸಮಿತಿ (ಇರಿಗೇಷನ್ ಕನ್ಸಲ್‌ಟೇಷನ್ ಕಮಿಟಿ) ಇದೆ. ಈ ಸಮಿತಿಯಲ್ಲಿ ನನಗೆ ತಿಳಿದಿರುವ ಪ್ರಕಾರ ತುಮಕೂರು ಜಿಲ್ಲೆಯಿಂದ ಯಾವ ಪ್ರತಿನಿಧಿಗಳೂ ಇರುವುದಿಲ್ಲ.

ಆದ್ದರಿಂದ ದಯಮಾಡಿ, ತುಮಕೂರು ಜಿಲ್ಲೆಯ ಯೋಜನಾ ಪ್ರದೇಶದಲ್ಲಿ ಬರುವ ಎಲ್ಲಾ ಶಾಸಕರುಗಳನ್ನು ಪದ ನಿಮಿತ್ತ ಸದಸ್ಯರುಗಳನ್ನಾಗಿಯೂ, ಮತ್ತು ಇನ್ನೂ ಕೆಲವರು ಆಸಕ್ತ ಸಾರ್ವಜನಿಕರನ್ನು ಸದಸ್ಯರುಗಳನ್ನಾಗಿಯೂ, ಒಳಗೊಂಡ **ಹೇಮಾವತಿ ನೀರಾವರಿ ಯೋಜನೆಯ ಸಲಹಾ ಸಮಿತಿಯನ್ನು** ಕೂಡಲೇ ಪುನರ್ ರಚಿಸಬೇಕೆಂದು ಕೋರಿಕೆ. ಇದರಿಂದ ಈಗ ನಮ್ಮ ಮುಂದೆ ಇರುವಂತಹ ಸಮಸ್ಯೆಗಳನ್ನು ಚರ್ಚಿಸಿ ಬಗೆಹರಿಸಲು ಅನುಕೂಲವಾಗುತ್ತದೆ.

ಆದರಗಳೊಡನೆ,

ತಮ್ಮ ವಿಶ್ವಾಸಿ
ವೈ.ಕೆ. ರಾಮಯ್ಯ
ಅಧ್ಯಕ್ಷರು, ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ
ತುಮಕೂರು

ಇವರಿಗೆ,

ಶ್ರೀ ಕೆ.ಎನ್. ನಾಗೇಗೌಡರು

ಭಾರೀ ನೀರಾವರಿ ಸಚಿವರು

ಕರ್ನಾಟಕ ಸರ್ಕಾರ

ವಿಧಾನಸೌಧ, ಬೆಂಗಳೂರು.

14-8-1996

ಮಾನ್ಯರೆ,

ತಾ. 4, 5 ಮತ್ತು 12, 13ನೆಯ ತಾರೀಖಿನಂದು ತುಮಕೂರು ಜಿಲ್ಲೆಯ ಹೇಮಾವತಿ ಯೋಜನೆಯ ಅನುಷ್ಠಾನ ಪ್ರದೇಶಗಳಲ್ಲಿ ಪ್ರವಾಸ ಮಾಡಿ ತಮಗೆ ಈ ಪತ್ರ ಬರೆಯುತ್ತಿದ್ದೇನೆ.

ತುಮಕೂರು ಜಿಲ್ಲೆಗೆ ಯೋಜನೆಯ ಪ್ರಕಾರ ಸುಮಾರು 3 (ಮೂರು) ಲಕ್ಷ ಎಕರೆಗೆ ಎರಡು ಸಾವಿರದ ಐದುನೂರು ಕ್ಯೂಸೆಕ್ಸ್ ನೀರು ಹರಿದು ಬರಬೇಕಾಗುತ್ತದೆ.

ಹಾಸನ ಜಿಲ್ಲೆಯ ರಾಮದೇವರ ಅಣೆಕಟ್ಟೆ ಹತ್ತಿರ ಮಾವಿನಕೆರೆಯ ಹೆಚ್ಚುವರಿ ಮೇಲುಗಾಲುವೆಯ ಕೆಲಸ ಮುಗಿದಿರುತ್ತದೆ. ಈ ಹೆಚ್ಚುವರಿ ಮೇಲುಗಾಲುವೆಯ ಮೂಲಕ ನೀರನ್ನು ಹರಿಸಲು ಸಂಬಂಧ ಪಟ್ಟ ಅಧಿಕಾರಿಗಳಿಗೆ ದಯಮಾಡಿ ಸೂಚನೆ ನೀಡಲು ಕೋರಿಕೆ. ಈ ಮೇಲುಗಾಲುವೆಯಿಂದ, 70ನೆಯ ಕಿ.ಮೀ.ವರೆವಿಗೆ ಆಗಬೇಕಾಗಿರುವ ಕಾಲುವೆಯ ಆಳ ಮತ್ತು ಅಗಲದ ಕೆಲಸ ಹತ್ತಾರು ವರ್ಷಗಳಿಂದ ಅಂದಾಜು ತಯಾರಾಗಿದ್ದಾಗ್ಯೂ, ತಾಂತ್ರಿಕ ಪರಿಣಿತರ ಅಭಿಪ್ರಾಯ ಲಭ್ಯವಿದ್ದಾಗ್ಯೂ ಪೂರ್ಣಗೊಂಡಿರುವುದಿಲ್ಲ. ಈ ಕೆಲಸವನ್ನು ಕೈಗೆತ್ತಿಕೊಂಡು ಸಂಪೂರ್ಣಗೊಳಿಸಲು ಗೊರೂರು ಭಾಗದ ಮುಖ್ಯ ಅಭಿಯಂತರರವರಿಗೆ ಸೂಚನೆ ಕೊಡಬೇಕೆಂದು ಕೋರಿಕೆ.

ಬಾಗೂರು - ನವಿಲೆ ಸುರಂಗದ ಹಿಂದಿನ ಸುಮಾರು 6 ಕಿ.ಮೀ. ಆಗಮನ ಆಳ ಕಾಲುವೆಗೆ ಮತ್ತು ಸುರಂಗದ ನಂತರದ ನಿರ್ಗಮನದ ಆಳ ಕಾಲುವೆಗೆ ಲೈನಿಂಗ್ ಕೆಲಸ ತುರ್ತಾಗಿ ಆಗಬೇಕಾಗಿದೆ.

ಇನ್ನು ಪ್ರಮುಖವಾಗಿ ತುಮಕೂರಿನಿಂದ ಅಂದರೆ 130ನೆಯ ಕಿ.ಮೀ.ನಿಂದ ಕುಣಿಗಲ್‌ವರೆವಿಗಿನ ಅಂದರೆ, 240ನೆಯ ಕಿ.ಮೀ. ವರೆವಿಗೆ ಪ್ರಮುಖ ನಾಲೆಯ ಕೆಲಸ ಆಗಬೇಕಾಗಿದೆ. ಈ ಕೆಲಸವನ್ನು 15 ತಿಂಗಳುಗಳಲ್ಲಿ ಪೂರ್ಣಗೊಳಿಸಿ ನೀರನ್ನು ಒದಗಿಸುತ್ತೇನೆ ಎಂದು ತಾವು ಈಗಾಗಲೇ ನಮಗೆ ಆಶ್ವಾಸನೆ ನೀಡಿರುತ್ತೀರಿ. ಇದರಲ್ಲಿ ಈಗಾಗಲೇ ಎರಡು ತಿಂಗಳುಗಳು ಕಳೆದಿದೆ. 130ನೆಯ ಕಿ.ಮೀ.ನಿಂದ ಮುಂದೆ ಕೆಲಸವನ್ನು ಮುಗಿಸಿ, ನಿಮ್ಮ ಆಶ್ವಾಸನೆಯ

ಪ್ರಕಾರ ನೀರನ್ನು ಒದಗಿಸಲು ಸಾಧ್ಯವಾಗಲಾರದು ಎಂಬುದು ನನ್ನ ಪ್ರಾಮಾಣಿಕ ಅನಿಸಿಕೆ. ಏಕೆಂದರೆ ಈ ಕಾಲುವೆಯ ಮಾರ್ಗಪಥ ಪೂರ್ಣವಾಗಿ ನಿರ್ಧಾರವಾಗಿಲ್ಲ. ಮಂಜೂರಾಗಿರುವ ಕಾಮಗಾರಿಗಳು ಪ್ರಾರಂಭವಾಗಿಲ್ಲ. ಪ್ರಾರಂಭವಾಗಿರುವ ಕೆಲಸಗಳು ತ್ವರಿತವಾಗಿ ನಡೆಯುತ್ತಿಲ್ಲ. ಕಿ.ಮಿ. 165ರಿಂದ ಮುಂದಿನ ಕಾಲುವೆ ಕೆಲಸಕ್ಕೆ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಇನ್ನೂ ಕಳುಹಿಸಿಕೊಟ್ಟಿಲ್ಲ. ಸರ್ಕಾರ ಈ ಕೆಲಸಕ್ಕೆ ಮಂಜೂರಾತಿಯನ್ನು ನೀಡಿರುವುದಿಲ್ಲ. ಈ ಕೆಲಸಕ್ಕೆ ಸಂಬಂಧಿಸಿದ ಮುಖ್ಯ ಅಭಿಯಂತರರು, ತುಮಕೂರು, ಅಧೀಕ್ಷಕ ಅಭಿಯಂತರರು ತುಮಕೂರು ಮತ್ತು ಕಾರ್ಯಪಾಲಕ ಅಭಿಯಂತರರು ತುಮಕೂರು, ಈ ಹುದ್ದೆಗಳು ಖಾಲಿ ಇದ್ದು, ಈ ಸ್ಥಾನಗಳಿಗೆ ಪೂರ್ಣಾವಧಿ ಅಧಿಕಾರಿಗಳನ್ನು ನೇಮಿಸಲಾಗಿಲ್ಲ. ಪರಿಸ್ಥಿತಿ ಹೀಗೆ ಇರುವಾಗ ತಮ್ಮ ಆಶ್ವಾಸನೆಯ ಪ್ರಕಾರ 1997ನೆಯ ಅಕ್ಟೋಬರ್ ಒಳಗೆ 130ನೆಯ ಕಿ.ಮೀ.ನಿಂದ 140ನೆಯ ಕಿ.ಮೀ.ವರೆವಿಗೆ ಕಾಲುವೆಯ ಕೆಲಸಗಳನ್ನು ಮುಗಿಸಿ, ನೀರನ್ನು ಹರಿಸಲು ಸಾಧ್ಯ ಆಗದೆ, ಕೊಟ್ಟಮಾತಿಗೆ ತಪ್ಪಿನಡೆಯುವ ಪರಿಸ್ಥಿತಿಗೆ ತಾವು ಗುರಿ ಆಗುವುದನ್ನು ತಪ್ಪಿಸಿಕೊಳ್ಳಲು, ಈ ಕೆಲಸವನ್ನು ಆದ್ಯತೆಯ ಮೇಲೆ ತೆಗೆದುಕೊಂಡು ಮುಗಿಸಲು ಈಗಿನಿಂದಲೇ ಕಾರ್ಯಪ್ರವೃತ್ತರಾಗುವುದು ಅವಶ್ಯಕವಾಗಿದೆ.

ನಾಗಮಂಗಲ ಭಾಗದ ಕಾಲುವೆಯ ಕೆಲಸ 40ನೆಯ ಕಿ.ಮೀ.ವರೆವಿಗೆ ನೀರನ್ನು ಹರಿಸಲು ಸಾಧ್ಯವಾಗುವಷ್ಟು ಸಿದ್ಧವಾಗಿದೆ. ಆದಾಗ್ಯೂ ಈವರೆವಿಗೆ ಈ ಕಾಲುವೆಯಲ್ಲಿ ನೀರನ್ನು ಹರಿಸಿರುವುದಿಲ್ಲ. ಈ ಕೆಲಸವನ್ನು ಮುಗಿಸಿ 1996 ಜೂನ್ ವೇಳೆಗೆ ತುರುವೇಕರೆ ತಾಲ್ಲೂಕಿನ ಮಾಯಸಂದ್ರ ಕೆರೆಯವರೆಗೆ ನೀರನ್ನು ಹರಿಸಲಾಗುವುದು ಎಂದು ನಿಮ್ಮ ಹಿಂದಿನ ಸರ್ಕಾರ ಆಶ್ವಾಸನೆ ನೀಡಿತ್ತು. ಈ ಭಾಗದಲ್ಲಿ 9ನೆಯ ವಿತರಣಾ ನಾಲೆಯವರೆಗೆ ಕೆಲಸ ಮುಗಿದಿರುವುದರಿಂದ, ಈ ತಿಂಗಳ ಒಳಗಾಗಿ ಮಾಯಸಂದ್ರದ ಕೆರೆಯವರೆಗೆ ನೀರನ್ನು ಹರಿಸಲಾಗುವುದು ಎಂದು ನನ್ನ ಪ್ರವಾಸದ ಸಮಯದಲ್ಲಿ ಸಂಬಂಧಪಟ್ಟ ಅಧಿಕಾರಿಗಳು ತಿಳಿಸಿರುತ್ತಾರೆ. ಇದನ್ನು ಕಾರ್ಯರೂಪಕ್ಕೆ ತರಲು ತಾವು ಕ್ರಮ ತೆಗೆದುಕೊಳ್ಳಬೇಕೆಂದು ಕೋರಿಕೆ. ಈ ಪ್ರಮುಖ ಕಾಲುವೆಯ 41ನೆಯ ಕಿ.ಮೀ.ನಲ್ಲಿ ಬರುವ ಸುರಂಗದ ಅಗೆತದ ಕೆಲಸ ಈಗ ತಾನೆ ಪೂರ್ಣಗೊಂಡಿದೆ. ಈ ಸುರಂಗಕ್ಕೆ ಲೈನಿಂಗ್ ಮಾಡಿ ಮುಂದಿನ 30 ಕಿ.ಮಿ. ಕಾಲುವೆಯ ಕೆಲಸವನ್ನು ಮುಗಿಸಿದರೆ ಮಾತ್ರ ಆದಿಚುಂಚನಗಿರಿ ಕ್ಷೇತ್ರಕ್ಕೆ ಮತ್ತು ಉಳಿದ ನಾಗಮಂಗಲ ತಾಲ್ಲೂಕಿನ ಅಚ್ಚುಕಟ್ಟಿಗೆ ನೀರನ್ನು ಒದಗಿಸಲು ಸಾಧ್ಯ. ಮಂಡ್ಯ ಜಿಲ್ಲೆಯವರೇ ಆದ ತಾವು, ಆದಷ್ಟು ಬೇಗ ಮುಗಿಸಿ ಈ ಪ್ರದೇಶಕ್ಕೆ ನೀರನ್ನು ಒದಗಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಕೋರಿಕೆ.

ತಾ.7.7.1996ರಂದು ನಡೆದ ಹೇಮಾವತಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿ ಸಭೆಯಲ್ಲಿ, ತೆಗೆದುಕೊಂಡಿರುವ ತೀರ್ಮಾನದ ಪ್ರಕಾರ 16.11.1996ರ ವರೆಗೆ ಹೇಮಾವತಿ ಎಡದಂಡೆ ನಾಲೆಯ ತುಮಕೂರು ಶಾಖಾ ನಾಲೆ ಮತ್ತು ನಾಗಮಂಗಲ ಶಾಖಾ ನಾಲೆಗಳಲ್ಲಿ ನೀರನ್ನು ಬಿಡುವಂತೆ ಸಂಬಂಧ ಪಟ್ಟ ಅಧಿಕಾರಿಗಳಿಗೆ ಸೂಚನೆ ನೀಡಬೇಕಾಗಿ ಕೋರಿಕೆ.

ಮಾನ್ಯರೆ, ಸರ್ಕಾರಗಳು ಬರುತ್ತವೆ, ಹೋಗುತ್ತವೆ. ರಾಜಕಾರಣಿಗಳು ಬರುತ್ತಾರೆ, ಹೋಗುತ್ತಾರೆ. ಆದರೆ ಜನತೆ ಮತ್ತು ಜನರಿಂದ ಕೂಡಿದ ವ್ಯವಸ್ಥೆ ಶಾಶ್ವತವಾಗಿರುತ್ತದೆ. ಆ ವ್ಯವಸ್ಥೆಯ ಅವಿಭಾಜ್ಯ ಅಂಗವಾದ ನಾವು ಕ್ಷುಲ್ಲಕ ಕಾರಣಗಳಿಂದಾಗಿ ವ್ಯವಸ್ಥೆಯನ್ನು ವಿಕೃತ ಗೊಳಿಸುವುದು ಸರ್ವಥಾ ಸಲ್ಲದು.

ಬಲದಂಡೆ ನಾಲೆಯ ವಿತರಣಾ ಭಾಗದಿಂದ ತುಮಕೂರು ವರೆವಿಗಿನ 125 ಕಿ.ಮೀ. ಉದ್ದದ ಮುಖ್ಯನಾಲೆಯ ಕೆಲಸ ನೀರನ್ನು ಹರಿಸಲು ಸಾಧ್ಯವಾಗುವಷ್ಟರ ಮಟ್ಟಿಗೆ ಸಿದ್ಧವಾಗಿದೆ. ತುಮಕೂರಿನವರೆವಿಗೆ ನೀರನ್ನು ಹರಿಸುವ ಗುರಿಯನ್ನು ಇಟ್ಟುಕೊಂಡು ಕಾಲುವೆಯ ಮುಖಾಂತರ ನೀರನ್ನು ಬಿಡಲಾಗಿದೆ. ಮಾರ್ಗ ಮಧ್ಯದಲ್ಲಿ ನೀರಿಗಾಗಿ ಕಾದು ಕುಳಿತಿದ್ದ ರೈತರು ನೀರನ್ನು ತಡೆದು ಉಪಯೋಗಿಸಿಕೊಳ್ಳುತ್ತಿರುವುದರಿಂದ ಇದುವರೆವಿಗೆ ತುಮಕೂರಿನ ಬುಗುಡನಹಳ್ಳಿ ಕೆರೆಯವರೆಗೆ ನೀರು ಹರಿಯಲು ಸಾಧ್ಯವಾಗಿಲ್ಲ. ನೀರಿನ ಪ್ರಮಾಣವನ್ನು ಹೆಚ್ಚಿಸಿದರೆ ಇನ್ನು ಕೆಲವೇ ದಿನಗಳಲ್ಲಿ ಈ ಗುರಿಯನ್ನು ಮುಟ್ಟಲು ಸಾಧ್ಯ. ತುಮಕೂರುವರೆಗಿನ ಪ್ರಮುಖ ನಾಲೆಯ ಅಗೆತದ ಕೆಲಸ ಪೂರ್ಣವಾಗಿದ್ದಾಗ್ಯೂ, ಈ ಕಾಲುವೆಗೆ ಪೂರಕವಾಗಿ ಹೊಂದಿಕೊಂಡಿರುವ ವಿತರಣಾ ನಾಲೆಗಳ ಕೆಲಸ ಪೂರ್ಣಗೊಂಡಿರುವುದಿಲ್ಲ. ಲಭ್ಯವಿರುವ ನೀರಿನ ಗರಿಷ್ಠ ಉಪಯುಕ್ತತೆಯನ್ನು ರೈತನಿಗೆ ಒದಗಿಸಬೇಕಾದರೆ, ಈ ಎಲ್ಲಾ ವಿತರಣಾ ನಾಲೆಯ ಕೆಲಸವನ್ನು ಮಾಡಿ ಮುಗಿಸುವುದು ಅತ್ಯಂತ ಅವಶ್ಯಕವಾಗಿದೆ.

ನನಗೆ ತಿಳಿದಿದೆ. ತಾವು ದೆಹಲಿಯಲ್ಲಿ ಕೃಷ್ಣಾ ನೀರಿನ ವಿವಾದ, ತಮಿಳುನಾಡಿನಲ್ಲಿ ಕಾವೇರಿ ನೀರಿನ ವಿವಾದ, ಜೊತೆಗೆ ನಡೆಯುತ್ತಿರುವ ವಿಧಾನ ಮಂಡಲದ ಕಲಾಪಗಳಲ್ಲಿ ತೊಡಗಿಸಿಕೊಂಡಿದ್ದೀರಿ ಎನ್ನುವುದು. ನನ್ನ ಹೋರಾಟ, ಬದುಕಿನ ಬಹುಭಾಗವನ್ನು ಇದಕ್ಕಾಗಿಯೇ ಮುಡುಪಾಗಿ ಇಟ್ಟಿರುವ ನನಗೆ ಈ ಗುರಿಯನ್ನು ಮುಟ್ಟಲೇ ಬೇಕಾಗಿದೆ. ಅದಕ್ಕಾಗಿ ಯಾವುದೇ ತ್ಯಾಗಕ್ಕೆ ಸಿದ್ಧವಾಗಬೇಕಾಗುತ್ತದೆ. ಅದೇರೀತಿ ತೊಂದರೆಗಳನ್ನೂ ಅನುಭವಿಸಬೇಕಾಗಿದೆ. ತಮ್ಮಲ್ಲಿ, ತಮ್ಮ ಮುಖ್ಯಮಂತ್ರಿಗಳಲ್ಲಿ ನಾನು ನಂಬಿಕೆವುಳ್ಳವನಾಗಿದ್ದೇನೆ. ಎಲ್ಲವೂ ಕೂಡಿ ಬಂದಿರುವ ಈ ಸಂದರ್ಭದಲ್ಲಿ, ತಮ್ಮ ಸಹಕಾರ, ಅಧಿಕಾರಿಗಳ ಶ್ರಮ, ಆಸಕ್ತರ ಹೋರಾಟದಿಂದಾಗಿ ಈ ಮಹತ್ಕಾರ್ಯ ನಡೆಯಬೇಕಾಗಿದೆ. ಆದ್ದರಿಂದ ತಮಗೆ ಏನೇ ತೊಂದರೆ ಇದ್ದರೂ ಈ ವಿಷಯದಲ್ಲಿ ವೈಯಕ್ತಿಕ ಆಸಕ್ತಿ ತೋರಿಸಿ, ನೆರವಾಗಬೇಕೆಂದು ಕೋರಿಕೆ.

ಆದರಗಳೊಂದಿಗೆ,

ತಮ್ಮ ವಿಶ್ವಾಸಿ

**ವೈ.ಕೆ. ರಾಮಯ್ಯ**

ಶ್ರೀ ರಾಮಕೃಷ್ಣ ಹೆಗಡೆ
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

ದಿನಾಂಕ : 28-4-1988

ಮಾನ್ಯ ನಾಯಕರೆ,

ತಾವು ನನಗೆ ಬರೆದಿರುವ ಪತ್ರದಲ್ಲಿ ನನಗೆ ನಿಮ್ಮಲ್ಲಿ ಇರುವ ವಿಶ್ವಾಸದ ಬಗ್ಗೆ ಸಂಶಯ ಮುಕ್ತ ಮಾಡಿದ್ದಿರಾ ಮತ್ತು ನನ್ನ ನಡವಳಿಕೆಯ ಔಚಿತ್ಯವನ್ನು ಇದು ಎಷ್ಟರಮಟ್ಟಿಗೆ ಉಚಿತ? ಎಂದು ಪ್ರಶ್ನಿಸಿದ್ದೀರಾ.

ನಿಮ್ಮಲ್ಲಿ ನನಗೆ ಇರುವ ವಿಶ್ವಾಸದ ಬಗ್ಗೆ ತಮಗೆ ಸಂಶಯ ಇರುವಾಗ ನಾನು ಸಂಪುಟದ ಸದಸ್ಯನಾಗಿ ಮುಂದುವರಿಯಲು ಇಚ್ಛೆ ಇಲ್ಲ.

ಆದ್ದರಿಂದ ನನ್ನ ಸಚಿವಸ್ಥಾನಕ್ಕೆ ರಾಜೀನಾಮೆ ನೀಡುತ್ತಿದ್ದೇನೆ. ದಯಮಾಡಿ ಅಂಗೀಕರಿಸಲು ಕೋರಿಕೆ.

ಸಾರ್ವಜನಿಕ ಜೀವನದಲ್ಲಿ ನನ್ನ ನಡವಳಿಕೆಯ ಔಚಿತ್ಯವನ್ನು ಪ್ರಶ್ನಿಸುವ ನಿಮ್ಮ ಪ್ರಶ್ನೆಗೆ ಒಂದೆರಡು ದಿನಗಳಲ್ಲಿ ಪೂರ್ಣ ಮಾಹಿತಿಯೊಡನೆ ಉತ್ತರ ಬರೆಯುತ್ತೇನೆ.

ಇಂತಿ ನಮಸ್ಕಾರಗಳು
ವೈ.ಕೆ. ರಾಮಯ್ಯ

ದಿನಾಂಕ : 24-10-1992

ಕುಣಿಗಲ್‌ನಲ್ಲಿ ಇರುವ ಕುದುರೆ ಫಾರಂ ಅನ್ನು ಬೆಂಗಳೂರು ಟರ್ಫ್ ಕ್ಲಬ್‌ರವರಿಂದ ವಾಪಸ್ಸು ಪಡೆದು ಸರಕಾರ ಬೇರೆಯವರಿಗೆ ಪರಭಾರೆ ಮಾಡುತ್ತಿದೆ ಎಂದು ತಿಳಿದ ಮೇಲೆ, ನಾನು ಮತ್ತು ಕುಣಿಗಲ್‌ನ ಇತರೆ ಪ್ರಮುಖರು ಈ ವಿಷಯದಲ್ಲಿ ಸರ್ಕಾರ ನಮ್ಮನ್ನು ಕರೆದು ಚರ್ಚಿಸಲೇಬೇಕೆಂದು, ಮಾನ್ಯ ಮುಖ್ಯಮಂತ್ರಿಗಳು, ಪಶುಸಂಗೋಪನಾ ಸಚಿವರು, ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಹಾಗೂ ಪಶುಸಂಗೋಪನಾ ಇಲಾಖೆ ನಿರ್ದೇಶಕರು ಗಳಿಗೆ ಪತ್ರ ಬರೆದು ಕೇಳಿಕೊಂಡೆವು. ಆದರೆ ಜನಪ್ರತಿನಿಧಿಯಾದ ನನಗೆ ಮತ್ತು ನನ್ನ ಸ್ನೇಹಿತರುಗಳಿಗೆ ಈ ವಿಷಯದಲ್ಲಿ ಯಾರಿಂದಲೂ ಉತ್ತರ ಬರಲಿಲ್ಲ. ನಮ್ಮನ್ನು ಸಂಪೂರ್ಣವಾಗಿ ಕಡೆಗಣಿಸಿದ ಸರ್ಕಾರ ಹಾಗೂ ಬಿ.ಟಿ.ಸಿಯವರು ತರಾತುರಿಯಲ್ಲಿ ಈ ಆಸ್ತಿಯನ್ನು ಯಾವುದೇ ವಿಧಿ ವಿಧಾನಗಳನ್ನು ಪಾಲಿಸದೇ, ಬೇರೆಯವರಿಗೆ ಸ್ವಾಧೀನ ಕೊಡುತ್ತಿದ್ದಾರೆ ಎಂದು ತಿಳಿದುಬಂತು. ಹಾಗೇನಾದರೂ ಆದರೆ, ನಾನು ಮತ್ತು ನಮ್ಮ ಜನರು ಇದನ್ನು ತಡೆಯುತ್ತೇವೆ ಎಂದು ತಿಳಿಸಿದೆವು. ಇಷ್ಟಾದರೂ ಸರಕಾರ ದಿವ್ಯ ಮೌನ ತಾಳಲಾಗಿ, ಯಾರ ಸ್ವಾಧೀನ ದಲ್ಲಿಯೂ ಈ ಆಸ್ತಿ ಇಲ್ಲದೆ ಇರುವಂತಹ ಪರಿಸ್ಥಿತಿ ಒದಗಿದಾಗ ನಾನು ಮತ್ತು ನನ್ನ ಬೆಂಬಲಿಗರು ವಿಧಿ ಇಲ್ಲದೆ ದಿನಾಂಕ 5-10-1992ರ ಸಂಜೆಯಿಂದ ಫಾರಂಗೆ ಪ್ರವೇಶಿಸಿ, ಮುಷ್ಕರ ಮಾಡಬೇಕಾಯಿತು.

ಇದಾದ ಮೇಲೆ ಸರಕಾರದ ಸಚಿವರುಗಳೂ, ಪ್ರತಿನಿಧಿಗಳೂ, ಬಿ.ಟಿ.ಸಿ ಪ್ರತಿನಿಧಿಗಳೂ ಹಾಗು ಶ್ರೀ ವಿಜಯ ಮಲ್ಯರವರೂ ಮತ್ತು ಅವರ ಪ್ರತಿನಿಧಿಗಳೂ ನಮ್ಮೊಡನೆ ಅನೇಕ ಬಾರಿ ಈ ವಿಷಯದಲ್ಲಿ ಚರ್ಚೆ ಮಾಡಲಾಗಿ, ನಾವು ಈ ಕೆಳಕಂಡ ವಿಯಷಗಳ ಬಗ್ಗೆ ಸರಕಾರಕ್ಕೆ ಸಂಬಂಧ ಪಟ್ಟವರೆಲ್ಲರನ್ನೂ ಆಹ್ವಾನಿಸಿ ಚರ್ಚೆ ಮಾಡಬೇಕೆಂದು ಹೇಳಿದೆವು.

1. **ಸರಕಾರ ಅವರಿಗೆ ಮೊದಲು ಗುತ್ತಿಗೆಯನ್ನು ರದ್ದು ಮಾಡಿ ಬಿ.ಟಿ.ಸಿ ಯವರಿಂದ ಈ ಆಸ್ತಿಯನ್ನು ಹಿಂದಕ್ಕೆ ತೆಗೆದುಕೊಳ್ಳಲು ಕಾರಣವನೇನು?**
2. **ತೆಗೆದೊಂಡ ಈ ಆಸ್ತಿಯನ್ನು ಸರಕಾರ ತಾನೇ ನಿರ್ವಹಿಸದೇ, ಬೇರೆಯವರಿಗೆ ಪರಭಾರೆ ಮಾಡಲು ಕಾರಣವೇನು?**
3. **ಪರಭಾರೆ ಮಾಡುವುದಾದರೆ ಆವಶ್ಯಕವಿರುವ ಎಲ್ಲಾ ವಿಧಿ-ವಿಧಾನಗಳನ್ನು ಪಾಲಿಸ ಲಾಗಿದೆಯೇ?**
4. **ಬಿ.ಟಿ.ಸಿ ಯವರಿಂದ ಸರಕಾರಕ್ಕೆ ಬರಬೇಕಾದ ಹಣ ಎಷ್ಟು?**
5. **ಆ ಹಣ ಸರಕಾರಕ್ಕೆ ಪಾವತಿಯಾಗಿದೆಯೇ? ಈಗ ಗುತ್ತಿಗೆಗೆ ಕೊಡುತ್ತಿರುವ ಗುತ್ತಿಗೆ ಪತ್ರದ ನಿಬಂಧನೆಗಳು ಯಾವುವು?**

ಈ ವಿಷಯಗಳನ್ನು ಚರ್ಚಿಸಲು ಮತ್ತು ಸಮಂಜಸವಾದ ಉತ್ತರ ಕೊಡಲು ಸಭೆ ಕರೆಯ ಬೇಕೆಂಬುವ ನಮ್ಮ ಬೇಡಿಕೆಯನ್ನು ಸರ್ಕಾರ ಈಡೇರಿಸದೇ ಇದ್ದುದರಿಂದ ಬೇರೆ ದಾರಿಯಿಲ್ಲದೆ ಮುಷ್ಕರವನ್ನು ಮುಂದುವರಿಸಬೇಕಾಯಿತು.

ದಿನಾಂಕ 23-10-1992ರಂದು ಸಂಜೆ 6-00 ಗಂಟೆಗೆ ಸರಕಾರವು ಬಿ.ಟಿ.ಸಿ ಪ್ರತಿನಿಧಿಗಳೂ ಶ್ರೀ ವಿಜಯ ಮಲ್ಯರವರ ಸಂಸ್ಥೆಯ ಪ್ರತಿನಿಧಿಗಳೂ ಹಾಗೂ ಸಂಬಂಧಪಟ್ಟ ಸರ್ಕಾರಿ ಅಧಿಕಾರಿಗಳ ಸಭೆಯನ್ನು ಕರೆದು, ಈ ಸಭೆಯಲ್ಲಿ ಭಾಗವಹಿಸಲು ನನಗೆ ಮತ್ತು ನನ್ನ ಸ್ನೇಹಿತರಿಗೆ ಆಹ್ವಾನ ಕಳುಹಿಸಿದ್ದರು.

ದಿನಾಂಕ 23-10-1992ರಂದು ಸಂಜೆ 6-00 ಗಂಟೆಗೆ ವಿಧಾನಸೌಧದಲ್ಲಿ ಪಶುಸಂಗೋಪನಾ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ನಾನು ಮತ್ತು ನನ್ನ ಸ್ನೇಹಿತರು ಭಾಗವಹಿಸಿದ್ದೆವು. ಚರ್ಚೆಯ ಸಮಯದಲ್ಲಿ ನಮಗೆ ಈ ವಿಷಯಗಳ ಬಗ್ಗೆ ವಿವರಣೆ ನೀಡಿದರು :

(1) ಸತತವಾಗಿ ನಷ್ಟವಾಗುತ್ತಿರುವುದರಿಂದ, ನಮಗೆ ಈ ಫಾರಂ ಅನ್ನು ನಡೆಸಲು ಸಾಧ್ಯವಿಲ್ಲವೆಂದು ಬಿ.ಟಿ.ಸಿಯವರು ತಮ್ಮ ಅಸಹಾಯಕತೆಯನ್ನು ತೋಡಿಕೊಂಡರು.

(2) ಸರಕಾರದವರು ಈ ಫಾರಂ ಅನ್ನು ನಡೆಸಲು ನಮ್ಮಿಂದ ಸಾಧ್ಯವೇ ಇಲ್ಲ. ಖಾಸಗಿಯವರಿಗೆ ಗುತ್ತಿಗೆ ಕೊಡುವುದು, ತಪ್ಪಿದರೆ ಸರಕಾರ ಈ ಫಾರಂ ಅನ್ನು ಮುಚ್ಚಬೇಕಾಗುತ್ತದೆ. ಆದ್ದರಿಂದ ಬೇರೆ ದಾರಿಯಿಲ್ಲದೆ ಈ ಆಸ್ತಿಯನ್ನು ಸರಕಾರ ಗುತ್ತಿಗೆಗೆ ಕೊಡಬೇಕಾಗಿದೆ ಎಂದು ವಿವರಿಸಿದರು.

(3) ಇತಿಹಾಸ ಪ್ರಸಿದ್ಧವಾದ ಈ ಸಂಸ್ಥೆಯ ಹೆಸರು ಮತ್ತು ಇದರ ಪರಂಪರೆಯನ್ನು ಉಳಿಸಿಕೊಳ್ಳಬೇಕಾಗಿರುವ ದೃಷ್ಟಿಯಿಂದ ಸರಕಾರ ಈ ತೀರ್ಮಾನವನ್ನು ತೆಗೆದು ಕೊಂಡಿದೆ ಎಂದು ನಮಗೆ ತಿಳಿಸಿ, ಗುತ್ತಿಗೆ ಪತ್ರದ ನಕಲನ್ನು ಒದಗಿಸಿಕೊಟ್ಟರು.

(4) ಗುತ್ತಿಗೆ ಕೊಡಲು ಅನುಸರಿಸಬೇಕಾದ ವಿಧಿ-ವಿಧಾನಗಳನ್ನು ಪಾಲನೆ ಮಾಡಿರುವುದನ್ನು ನಮ್ಮ ಗಮನಕ್ಕೆ ತಂದರು.

(5) ಬಿ.ಟಿ.ಸಿಯವರು ಸರಕಾರಕ್ಕೆ ಕೊಡಬೇಕಾಗಿರುವ ಆಸ್ತಿ ಅಥವಾ ಅದರ ಬೆಲೆಯ ಬಗ್ಗೆ ಲೆಕ್ಕ-ಪತ್ರ ತನಿಖೆ ಮಾಡಿಸಿ, ಹಣ ಏನಾದರೂ ಬರಬೇಕಾಗಿದ್ದರೆ ಅದನ್ನು ವಸೂಲಿ ಮಾಡುವುದಾಗಿ ಆಶ್ವಾಸನೆ ನೀಡಿದರು.

(6) ಈ ಫಾರಂನ ಯಾವುದಾದರೂ ಪ್ರದೇಶ, ಸಾರ್ವಜನಿಕ ಉಪಯೋಗಕ್ಕೆ ಬೇಕಾದಲ್ಲಿ ಗುತ್ತಿಗೆದಾರರಿಗೆ ಅನಾನುಕೂಲ ಆಗದ ರೀತಿಯಲ್ಲಿ ಸ್ವಾಧೀನ ಪಡಿಸಿಕೊಳ್ಳುವ ಹಕ್ಕನ್ನು

ಸರಕಾರ ಹೊಂದಿರುತ್ತದೆ ಎನ್ನುವ ನಿಬಂಧನೆಯನ್ನು ಗುತ್ತಿಗೆ ಪತ್ರದಲ್ಲಿ ಅಳವಡಿಸಲು ಸರಕಾರ ಮತ್ತು ಗುತ್ತಿಗೆದಾರರು ಸಮ್ಮತಿಸಿದರು.

(7) ಕುದುರೆ ಸಾಕಾಣಿಕೆ ಮತ್ತು ಅದಕ್ಕೆ ಸಂಬಂಧಪಟ್ಟ ಚಟುವಟಿಕೆಗಳಿಗೆ ಮಾತ್ರ ಈ ಫಾರಂ ಅನ್ನು ಉಪಯೋಗಿಸಬೇಕು ಎನ್ನುವ ನಿಬಂಧನೆಯನ್ನು ಗುತ್ತಿಗೆ ಪತ್ರದಲ್ಲಿ ಅಳವಡಿಸಲು ಸಮ್ಮತಿಸಿದರು.

''ಇಂತಹ ಪ್ರಮುಖ ವಿಷಯಗಳಲ್ಲಿ ಸರಕಾರ ಸ್ಥಳೀಯ ಶಾಸಕರ ಜೊತೆ ಚರ್ಚೆ ಮಾಡಬೇಕು'' ಎನ್ನುವ ನನ್ನ ಅಭಿಪ್ರಾಯಕ್ಕೆ ಸರಕಾರ ಮಣಿದು, ಸಭೆ ಕರೆದು ಚರ್ಚೆ ಮಾಡಿ ನಮ್ಮೆಲ್ಲಾ ಪ್ರಶ್ನೆಗಳಿಗೆ ಸಮಂಜಸ ವಿವರಣೆ ಕೊಟ್ಟು ನಮ್ಮ ನಿಬಂಧನೆಗಳಿಗೆ ಒಪ್ಪಿಗೆ ನೀಡಿರುವುದರಿಂದ, ದಿನಾಂಕ 5-10-1992ರ ಸಂಜೆಯಿಂದ ನಾನು ಮತ್ತು ನನ್ನ ಸ್ನೇಹಿತರು ಕುಣಿಗಲ್ ಕುದುರೆ ಫಾರಂನಲ್ಲಿ ಕೈಗೊಂಡಿದ್ದ ಮುಷ್ಕರವನ್ನು ನಿಲ್ಲಿಸಲು ತೀರ್ಮಾನಿಸಿದ್ದೇವೆ. ಸರಕಾರವು ಇನ್ನು ಮುಂದೆ ಇಂತಹ ಪ್ರಮುಖ ವಿಷಯಗಳಲ್ಲಿ ಸ್ಥಳೀಯ ಶಾಸಕರನ್ನು ಕಡೆಗಣಿಸುವ ಹಠಮಾರಿತನ ಮಾಡದೇ ಇರಲೆಂದು ಹಾರೈಸುತ್ತೇನೆ. ಗುತ್ತಿಗೆ ತೆಗೆದು ಕೊಳ್ಳುತ್ತಿರುವ ಸಂಸ್ಥೆಯವರು ಸ್ಥಳೀಯ ಜನರನ್ನು ನಂಬಿಕೆಗೆ ತೆಗೆದುಕೊಂಡು ಈ ಫಾರಂ ಅನ್ನು ಉತ್ತಮವಾಗಿ ಅಭಿವೃದ್ಧಿ ಪಡಿಸುವರೆಂದು ಆಶಿಸುತ್ತೇನೆ. ಈ ನನ್ನ ನಿಲುವಿಗೆ ಮತ್ತು ಹೋರಾಟಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಬೆಂಬಲ ನೀಡಿ, ಸಹಕರಿಸಿದ ಎಲ್ಲರಿಗೂ ನಾನು ಋಣಿಯಾಗಿದ್ದೇನೆ.

**ವೈ.ಕೆ. ರಾಮಯ್ಯ**
ಶಾಸಕರು, ಕುಣಿಗಲ್ ಕ್ಷೇತ್ರ
ತುಮಕೂರು ಜಿಲ್ಲೆ

ಬೆಂಗಳೂರು
ದಿನಾಂಕ 24-10-1992

**ವೈ.ಕೆ. ರಾಮಯ್ಯ**
ಕುಣಿಗಲ್ ಕ್ಷೇತ್ರ
ತುಮಕೂರು ಜಿಲ್ಲೆ

ನವೆಂಬರ್ 22, 1988

ಮಾನ್ಯರೆ,

"Sell not virtue to purchase the wealth, nor the liberty to purchase the power" ಎಂದೋ ಹಿಂದೆ ನನ್ನ ದಿನಚರಿ ಪುಸ್ತಕದಲ್ಲಿ ಬರೆದ ಇಂಗ್ಲೀಷ್ ಬರಹಗಾರ ಬೆಂಜಮಿನ್ ಫ್ರಾಂಕ್ಲಿನ್ ಅವರ ಅಭಿಪ್ರಾಯವನ್ನು ಓದಿದ ಮೇಲೆ ತಮಗೆ ಈ ಕಾಗದ ಬರೆಯುತ್ತಿದ್ದೇನೆ.

ಕಳೆದ ಇಪ್ಪತ್ತು ವರ್ಷಗಳಲ್ಲಿ ನಿಮ್ಮ ಜೊತೆ, ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡಿಕೊಂಡು ಬರುವಾಗ ನಡೆದ ಘಟನೆಗಳು, ಒದಗಿದ ಸಂದರ್ಭಗಳ ಬಗ್ಗೆ ವಿಶ್ಲೇಷಣೆ ಮಾಡಲು ನನಗೆ ಇಚ್ಛೆ ಇಲ್ಲ ಮತ್ತು ಅದರ ಅಗತ್ಯವೂ ಇಲ್ಲ.

ಸಾರ್ವಜನಿಕ ಕ್ಷೇತ್ರದಲ್ಲಿ ನಿರ್ಧಿಷ್ಟ ದಾರಿಯಲ್ಲಿ ನಡೆದುಕೊಳ್ಳುವ ನಿರ್ಧಾರ ಮಾಡಿ ನಡೆದುಕೊಳ್ಳುತ್ತಿರುವ ನನಗೆ ಯಾವುದೇ ಹೊಗಳಿಕೆ-ತೆಗಳಿಕೆಗಳ ಬಗ್ಗೆ ಅರಿವಿಲ್ಲ. ಯಾವುದಕ್ಕೂ ಅಂಟಿಕೊಳ್ಳಬೇಕು ಎನ್ನುವ ವ್ಯಾಮೋಹವಿಲ್ಲ. ಯಾರನ್ನಾದರೂ ಮೆಚ್ಚಿಸಬೇಕು ಎಂಬ ಇಚ್ಛೆ ಇಲ್ಲ.

ಈ ರಾಜ್ಯದ ಜನರಿಗೆ ಮತ್ತು ನಾವೇ ಕಟ್ಟಿ ಬೆಳೆಸಿದ ಪಕ್ಷಕ್ಕೆ ಒಳ್ಳೆಯದು ಆಗುವುದಾದರೆ, ಯಾವುದೇ ತ್ಯಾಗಕ್ಕೂ ನಾನು ಯಾವಾಗಲೂ ಸಿದ್ಧನಿದ್ದೇನೆ. ಆದರೆ ಆತ್ಮ ಗೌರವ ಒಂದನ್ನು ಬಿಟ್ಟು. ಇತ್ತೀಚಿನ ಬೆಳವಣಿಗೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದೇನೆ. ತಮಗೆ ತಿಳಿದಿರುವ ಕಾರಣಗಳಿಂದಾಗಿ ನನ್ನ ಬಗ್ಗೆ ಅನಾದಾರಣೆ ಮತ್ತು ಅಪನಂಬಿಕೆ ಹೆಚ್ಚಾಗುತ್ತಿರುವುದು ನನಗೆ ಅರಿವಾಗಿದೆ. ಆದುದರಿಂದ ಈ ಪತ್ರ ಬರೆಯುತ್ತಿದ್ದೇನೆ.

ಮಾನ್ಯರೆ, ಪತ್ರಿಕೆಗಳಲ್ಲಿ ಆಗಿರುವ ವರದಿಯ ಪ್ರಕಾರ ಮತ್ತು ಜನತೆ ಮಾತನಾಡಿಕೊಳ್ಳುವ ಮಾತಿನ ಪ್ರಕಾರ, ತಾವು ಮಂತ್ರಿಮಂಡಲವನ್ನು ಪುನರ್‌ರಚನೆ ಮಾಡುವ ಸಂದರ್ಭದಲ್ಲಿ ನನ್ನನ್ನು ಒಬ್ಬ ಮಂತ್ರಿಯಾಗಿ ಮಾಡುತ್ತಾರೆ, ಮಾಡುವುದಿಲ್ಲ, ಮಾಡಬಹುದು ಎನ್ನುವ ಊಹಾಪೋಹಗಳು ನನ್ನ ಗಮನಕ್ಕೆ ಬಂದಿದೆ. ಈಗಾಗಲೇ ಮೇಲೆ ತಿಳಿಸಿರುವಂತೆ, ಯಾವುದೇ ಸಂದರ್ಭದಲ್ಲೂ ಆತ್ಮಗೌರವಕ್ಕೆ ಚ್ಯುತಿ ಬರುವುದನ್ನು ಸಹಿಸದ ನಾನು ಈ ವಿಷಯವನ್ನು ತಮ್ಮ ಅವಗಾಹನೆಗೆ ತರಲು ನಿರ್ಧರಿಸಿ ಈ ಪತ್ರ ಬರೆಯುತ್ತಿದ್ದೇನೆ.

**ಬೆಂಜಮಿನ್ ಅವರು ಹೇಳಿರುವಂತೆ, ಮೌಲ್ಯಗಳ ಬೆಲೆ ತೆತ್ತು ಸಂಪತ್ತನ್ನು ಕೊಳ್ಳಲು ಹಾಗೂ ಸ್ವಾತಂತ್ರ್ಯ ಮತ್ತು ಸ್ವಾಭಿಮಾನದ ಬೆಲೆ ತೆತ್ತು ಅಧಿಕಾರವನ್ನು ಕೊಳ್ಳಲು ನನಗೆ ಇಚ್ಛೆ ಇಲ್ಲ.**

ಆದುದರಿಂದ, ತಮ್ಮ ಮಂತ್ರಿಮಂಡಲವನ್ನು ವಿಸ್ತರಣೆ ಮಾಡುವಾಗ ನನ್ನ ಜಿಲ್ಲೆಯಿಂದ ತಾವು ಯಾರನ್ನು ಬೇಕಾದರೂ ಮಂತ್ರಿಯಾಗಿ ಆರಿಸಿಕೊಳ್ಳಬಹುದು. ಆದರೆ, ನನ್ನನ್ನು ತಾವು ಮಂತ್ರಿಯಾಗಿ ಮಾಡುವುದು ಬೇಡ. ಈ ಮಂತ್ರಿ ಪದವಿಗೆ ಬದಲಾಗಿ, ಪಕ್ಷದ ಮತ್ತು ಸರ್ಕಾರದ ಕಾರ್ಯ ವೈಖರಿಯನ್ನು ಪ್ರಶ್ನೆ ಮಾಡುವ ಸ್ವಾತಂತ್ರ್ಯ ಒಂದನ್ನು ನನಗೆ ತಾವು ಒದಗಿಸಿ ಉಪಕಾರ ಮಾಡಬೇಕೆಂದು ಕೋರುತ್ತೇನೆ. ಏಕೆಂದರೆ, ವಿರೋಧಪಕ್ಷದಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ನಾವು ಅಧಿಕಾರಕ್ಕೆ ಬಂದರೆ, ನಮ್ಮ ಆಡಳಿತ ವೈಖರಿ, ಆಡಳಿತ ವ್ಯವಸ್ಥೆ ಮತ್ತು ನಮ್ಮ ನಡವಳಿಕೆ ಹೇಗೆ ಇರಬೇಕು ಮತ್ತು ಹೇಗೆ ಇರಬಾರದು ಎನ್ನುವ ಬಗ್ಗೆ ಚಿಂತಿಸಿ ಕನಸು ಕಂಡ ದಡ್ಡರಲ್ಲಿ ನಾನೂ ಒಬ್ಬ. ಕಳೆದ ಐದು ವರ್ಷಗಳ ಆಡಳಿತವನ್ನು ನೋಡಿದ ನನಗೆ ಇದ್ದ ಆಸೆಗಳು, ಕಂಡ ಕನಸುಗಳು, ನಂಬಿದ ನೀತಿ ಸಿದ್ಧಾಂತಗಳು ಬಿಸಿಲ್ಗುದುರೆ ಎನ್ನುವುದು ಸಂಪೂರ್ಣವಾಗಿ ಮನವರಿಕೆಯಾಗಿದೆ.

ನನ್ನ ಈ ಕೋರಿಕೆಯನ್ನು ತಾವು ದಯಮಾಡಿ ಯಾವುದಾದರೂ ಸಂದರ್ಭದಲ್ಲಿ ಸಾರ್ವಜನಿಕರ ಗಮನಕ್ಕೆ ತರಬೇಕೆಂಬುದು ನನ್ನ ಅಭಿಲಾಷೆಯಾಗಿದೆ. ಈ ವಿಷಯದಲ್ಲಿ ಸಾರ್ವಜನಿಕರಲ್ಲಿ ಅನೇಕ ಊಹಾಪೋಹಗಳು ಮೂಡುವ ಅವಕಾಶವಿದೆ. ಇದು ತಮಗೆ ಸಾಧ್ಯವಾಗದಿದ್ದಲ್ಲಿ, ಈ ನನ್ನ ಬೇಡಿಕೆಯನ್ನು ಪತ್ರಿಕೆಗಳಿಗೆ ತಿಳಿಸಲು ನನಗೆ ಅವಕಾಶ ಒದಗಿಸಿ ಕೊಡಬೇಕಾಗಿ ಕೋರುತ್ತೇನೆ.

ಗೌರವಾದರಗಳೊಡನೆ,

ತಮ್ಮ ವಿಶ್ವಾಸಿ
ವೈ.ಕೆ. ರಾಮಯ್ಯ

ಶ್ರೀ ಎಸ್.ಆರ್. ಬೊಮ್ಮಾಯಿ
ಸನ್ಮಾನ್ಯ ಮುಖ್ಯಮಂತ್ರಿಗಳು

ದಿನಾಂಕ 28.2.1993

ಮಾನ್ಯರೇ,

ತಾವು ದಿನಾಂಕ 27-2-1993ರಂದು ತುಮಕೂರು ಜಿಲ್ಲೆಗೆ ಮತ್ತು ಮಂಡ್ಯ ಜಿಲ್ಲೆಗೆ ನೀರು ಒದಗಿಸಬೇಕಾಗಿರುವ ಹೇಮಾವತಿ ಯೋಜನೆಯ ಕೆಲಸಗಳ ಪ್ರಗತಿಯನ್ನು ಪರಿಶೀಲಿಸಲು ತುಮಕೂರು ಮತ್ತು ಹಾಸನ ಜಿಲ್ಲೆಯಲ್ಲಿ ದೀರ್ಘವಾಗಿ ಪ್ರವಾಸ ಮಾಡಿದ್ದಕ್ಕಾಗಿ ವೈಯಕ್ತಿಕವಾಗಿ ಹಾಗೂ ತುಮಕೂರು ಮತ್ತು ಮಂಡ್ಯ ಜಿಲ್ಲೆಯ ಹೇಮಾವತಿ ಅಚ್ಚುಕಟ್ಟಿನ ರೈತರ ಪರವಾಗಿ, ತಮಗೆ ಕೃತಜ್ಞತೆ ಬಯಸುತ್ತೇನೆ.

ತಾವು ಕೆಲಸದ ಪ್ರಗತಿಯನ್ನು ಪರಿಶೀಲಿಸಿ ಅಧಿಕಾರಿಗಳು ಮತ್ತು ಶಾಸಕರುಗಳ ಜೊತೆ ಚರ್ಚೆ ಮಾಡುವಾಗ ಈ ಭಾಗದ ರೈತರಿಗೆ ನೀರು ಬರಬೇಕಾದರೆ ಪ್ರಮುಖವಾಗಿ :

(ಅ) ಮಾವಿನಕೆರೆ ಹತ್ತಿರ ನಿರ್ಮಾಣವಾಗುತ್ತಿರುವ ಮೇಲುಕಾಲುವೆ ಕೆಲಸ (ಕಮ್‌ಪ್ಲೀಷನ್ ಆಫ್ ದಿ ಮಾವಿನಕೆರೆ ಅಕ್ವಡಿಟ್)

(ಆ) ಈ ಮೇಲುಕಾಲುವೆಯಿಂದ ತುಮಕೂರು ಕಾಲುವೆಯ ಗೇಟಿನವರೆಗೆ ಹಾಲಿ ಇರುವ ಸಿ.ಡಿ. ಕೆಲಸಗಳನ್ನು ಬದಲಾವಣೆಮಾಡುವುದು (ರೀ ಮಾಡಲಿಂಗ್ ಆಫ್ ದಿ ಸಿ.ಡಿ. ವರ್ಕ್ಸ್ ಫ್ರಮ್ ಮಾವಿನಕೆರೆ ಅಕ್ವಿಟಡ್, ಅಪ್ ಟೂ ತುಮಕೂರು ಚಾನಲ್ ಗೇಟ್)

(ಇ) ತುಮಕೂರು ಕಾಲುವೆಯ ಗೇಟಿನಿಂದ ಬಾಗೂರು ಸುರಂಗದವರೆಗೆ ಆಳಕಾಲುವೆಯ ಕೆಲಸ ಪೂರ್ಣಗೊಳ್ಳಬೇಕಾಗಿದೆ (ಕಂಪ್ಲೀಷನ್ ಆಫ್ ಅಪ್‌ರೋಚ್ ಡೀಪ್ ಕಟ್)

(ಈ) ನವಿಲೆಯ ಸುರಂಗದಿಂದ ಮುಂದಕ್ಕೆ ಆಗಬೇಕಾಗಿರುವ ಸುಮಾರು ಆರು ಕಿ.ಮೀ. ಆಳದ ಕಾಲುವೆ ಪೂರ್ಣಗೊಳ್ಳಬೇಕಾಗಿದೆ.

ಈ ಎಲ್ಲಾ ಕೆಲಸಗಳು ಪೂರ್ಣಗೊಂಡರೆ ಹೇಮಾವತಿಯ ನೀರು ಶಿಂಷಾ ವ್ಯಾಲಿಗೆ ಬರಲು ಸಾಧ್ಯವಾಗುತ್ತದೆ. ತಾವು ಸ್ವತಃ ನೋಡಿರುವ ಪ್ರಕಾರ ಈ ಕೆಲಸಗಳನ್ನು ತ್ವರಿತವಾಗಿ ಮಾಡಲು ಬೇಸಿಗೆಯ ಕಾಲ ಅತ್ಯಂತ ಅನುಕೂಲವಾದ ಕಾಲವಾಗಿರುತ್ತದೆ. ಮಳೆಗಾಲದಲ್ಲಿ ಈ ಪ್ರದೇಶದಲ್ಲಿ ಅದರಲ್ಲಿಯೂ ಸುರಂಗದ ಮೊದಲು ಮತ್ತು ಸುರಂಗ ಆದಮೇಲೆ ಮಾಡ ಬೇಕಾಗಿರುವ ಹಾಲಿ ಕಾಲುವೆಯ ಕೆಲಸ ಮಳೆಗಾಲದಲ್ಲಿ ಮಾಡುವುದು ಅಸಾಧ್ಯವೆಂದೇ ಹೇಳ ಬೇಕಾಗುತ್ತದೆ. ಆದ್ದರಿಂದ ಈ ಬೇಸಿಗೆಯ ಋತುವಿನಲ್ಲಿ ಈ ಕೆಲಸಗಳ ಪ್ರಗತಿಯನ್ನು ಆದಷ್ಟು ವೇಗವಾಗಿ ಮಾಡುವುದು ಅನಿವಾರ್ಯವಾಗಿದೆ. ಅಷ್ಟೇ ಅಲ್ಲದೆ ರಾಷ್ಟ್ರದ ಸರ್ವೋಚ್ಚ ನ್ಯಾಯಾಲಯದ ಆದೇಶದ ಮೇಲೆ, ಕಾವೇರಿ ನೀರಿನ ಹಂಚಿಕೆಯ ಬಗ್ಗೆ ನೇಮಕವಾಗಿರುವ

ನ್ಯಾಯ ಮಂಡಲಿಯ ಇತ್ತೀಚಿನ ವಿವಾದತ್ಮಕ ತೀರ್ಮಾನದ ದೃಷ್ಟಿಯಿಂದ, ಈ ಕೆಲಸವನ್ನು ಆದಷ್ಟು ಬೇಗನೆ ಮುಗಿಸುವುದು ಅತ್ಯಂತ ಅವಶ್ಯಕವಾಗಿದೆ. ಈ ಯೋಜನೆಯ ಅನುಷ್ಠಾನದ ಯಾವುದೇ ಹಂತದಲ್ಲಿ ನಿರ್ಲಕ್ಷತೆ ಅಥವಾ ಹೊಣೆಗೇಡಿತನ ತೋರಿದರೆ, ಈ ಭಾಗದ ರೈತರ ಭೂಮಿಗೆ ನೀರು ಕೊಡುವುದರಲ್ಲಿನ ವಿಫಲತೆಯಿಂದ ಸೃಷ್ಟಿಯಾದ ಪಾಪದ ಅಧ್ಯಾಯ ನಿರ್ಮಾಣವಾಗುತ್ತದೆ. ಇದರಲ್ಲಿ ನಾವೆಲ್ಲರೂ ಭಾಗಸ್ತರಾಗಬೇಕಾಗುತ್ತದೆ.

ತಾವು, ಸರ್ಕಾರದ ನೀರಾವರಿ ಇಲಾಖೆಯ ಕಾರ್ಯದರ್ಶಿಯವರು, ನೀರಾವರಿ ಖಾತೆಯ ರಾಜ್ಯ ಸಚಿವರು, ಶಾಸಕರುಗಳು, ಹಾಗೂ ಈ ಯೋಜನೆಯ ಹಿರಿಯ ಅಧಿಕಾರಿಗಳ ಸಮ್ಮುಖದಲ್ಲಿ ಕಾರೇಹಳ್ಳಿ ಅತಿಥಿ ಗೃಹದಲ್ಲಿ ನಡೆದ ಚರ್ಚೆಯ ಸಮಯದಲ್ಲಿ, ತುಮಕೂರು ಮತ್ತು ಗೊರೂರಿನ ವೃತ್ತಗಳ ಮುಖ್ಯ ಅಭಿಯಂತರುಗಳು ಮಾವಿನಕೆರೆ ಮೇಲುಕಾಲುವೆಯ ಕೆಲಸವನ್ನು ನವೆಂಬರ್ 1993ಕ್ಕೂ, ಸಿ.ಡಿ. ಕೆಲಸಗಳನ್ನು ಮಾರ್ಪಾಟು ಮಾಡುವ ಕೆಲಸವನ್ನು ಮೇ 1993ಕ್ಕೂ ಮುಂದುಗಡೆಯ ಆಳಕಾಲುವೆಯನ್ನು ನವೆಂಬರ್ 1993ಕ್ಕೂ ಮತ್ತು ಹಿಂದುಗಡೆಯ ಆಳಕಾಲುವೆಯನ್ನು ಡಿಸೆಂಬರ್ 1993ಕ್ಕು ಮಾಡಿ ಮುಗಿಸುವ ಭರವಸೆ ಕೊಟ್ಟಿರುತ್ತಾರೆ.

ಇತ್ತೀಚಿನ ದಿನಗಳಲ್ಲಿ ನಡೆದಿರುವ ಪ್ರಗತಿಯನ್ನು ಗಮನಿಸಿದರೆ, ಅಧಿಕಾರಿಗಳು ನೀಡಿರುವ ಭರವಸೆ ನಂಬಲು ಅರ್ಹವಾದುದೆಂದು ಭಾವಿಸುತ್ತೇನೆ.

ಈ ಭರವಸೆಯಲ್ಲಿ ಪೂರ್ಣ ನಂಬಿಕೆ ಇದ್ದಾಗ್ಯೂ, ಆತಂಕದ ಸಂಗತಿ ಎಂದರೆ, ಇಂತಹ ಪ್ರಮುಖ ಯೋಜನೆಗಳಿಗೂ ಸರ್ಕಾರವು ಹಣ ಒದಗಿಸದೆ ಇದ್ದಲ್ಲಿ, ಅಧಿಕಾರಿಗಳು ನೀಡಿದ ಭರವಸೆ ಮತ್ತು ನಮ್ಮ ನಂಬಿಕೆಗಳು ಹುಸಿಯಾಗುವ ಅಪಾಯ ಇಲ್ಲದೆ ಇಲ್ಲ. ಆದ್ದರಿಂದ ತಾವು ಈ ಯೋಜನೆಯ ಅನುಷ್ಠಾನದಲ್ಲಿ ವೈಯಕ್ತಿಕವಾದ ಆಸಕ್ತಿ ವಹಿಸುವ ಮೂಲಕ ಈ ಕೆಲಸ ಗಳನ್ನು ಪೂರ್ಣಗೊಳಿಸಲು ಕ್ರಮ ತೆಗೆದುಕೊಳ್ಳಬೇಕಾಗಿ ಕೋರಿಕೆ.

ವಂದನೆಗಳೊಂದಿಗೆ,

ವೈ.ಕೆ. ರಾಮಯ್ಯ

ಇವರಿಗೆ,
ಸನ್ಮಾನ್ಯ ಉಪಮುಖ್ಯ ಮಂತ್ರಿಗಳು
ಮತ್ತು ಭಾರಿ ನೀರಾವರಿ ಸಚಿವರು
ಕರ್ನಾಟಕ ಸರ್ಕಾರ, ವಿಧಾನ ಸೌಧ,
ಬೆಂಗಳೂರು.

ದಿನಾಂಕ 29-10-1993

**ಹಿರಿಯರಾದ ಶ್ರೀಯುತ ದೇವೇಗೌಡ** ಅವರಿಗೆ ವಂದನೆಗಳು,

ಮಾನ್ಯರೆ,

ತಾವು ಆದಿಚುಂಚನಗಿರಿ ಕ್ಷೇತ್ರದ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಅವರಲ್ಲಿ ''ರಾಮಯ್ಯ ಹೇಮಾವತಿಯಲ್ಲಿ ಕೆಲಸ ಮಾಡುವ ಗುತ್ತಿಗೆದಾರ ಶ್ರೀ ರೆಡ್ಡಿ ಅವರಿಗೆ ಬಿಲ್ಲು ಕೊಡಿಸಿದರು. ಅದಕ್ಕೆ ಪ್ರತಿಯಾಗಿ ಶ್ರೀ ರೆಡ್ಡಿ ಅವರು ಇವರಿಗೆ ಒಂದು ಕಾರು ಕೊಡಿಸಿದ್ದಾರೆ'' ಎಂದು ತಿಳಿಸಿರುತ್ತೀರ. ಇದು ಸತ್ಯವಲ್ಲ. ದಯಮಾಡಿ ತಾವು ನಾನು ಬಿಲ್ಲು ಕೊಡಿಸಿದ ಆ ರೆಡ್ಡಿ ಯಾರು? ಯಾರಿಂದ ಬಿಲ್ಲು ಕೊಡಿಸಿದೆ? ಕೊಡಿಸಿದ ಮೊಬಲಗು ಎಷ್ಟು? ಹಾಗು ನನಗೆ ಕಾರು ಕೊಡಿಸಿರುವ ಶ್ರೀ ರೆಡ್ಡಿ ಯಾರು? ಎನ್ನುವುದನ್ನು ದಯಮಾಡಿ ತಿಳಿಸಬೇಕಾಗಿ ಕೋರಿಕೆ. ತಾವು ಆದಷ್ಟು ಬೇಗ ಈ ಮಾಹಿತಿಯನ್ನು ಒದಗಿಸಿ ಕೊಟ್ಟರೆ ತುಂಬಾ ಉಪಕಾರವಾಗುತ್ತದೆ.

ಇಂತಿ ನಮಸ್ಕಾರಗಳು
ವೈ.ಕೆ. ರಾಮಯ್ಯ

ಮಾನ್ಯ ಶ್ರೀ ಎಚ್.ಡಿ. ದೇವೇಗೌಡರು
ಅಧ್ಯಕ್ಷರು, ಜನತಾದಳ, ಬೆಂಗಳೂರು

ನಕಲು : **ಪರಮಪೂಜ್ಯ ಸ್ವಾಮೀಜಿ ಅವರ ಸನ್ನಿಧಾನಕ್ಕೆ**



ದಿನಾಂಕ 1-6-1994

ಶ್ರೀ ಎಸ್.ಎಂ. ಕೃಷ್ಣ ಅವರು
ಮಾನ್ಯ ಉಪಮುಖ್ಯಮಂತ್ರಿಗಳು

ತುಮಕೂರು ಮತ್ತು ನಾಗಮಂಗಲ ತಾಲ್ಲೂಕಿಗೆ ನೀರನ್ನು ಒದಗಿಸಲು ನಿರ್ಮಾಣವಾಗುತ್ತಿರುವ, ಹೇಮಾವತಿ ಕಾಲುವೆಯ ಕೆಲಸಗಳನ್ನು ವೀಕ್ಷಿಸಲು ತಾವು ಸ್ಥಳಕ್ಕೆ ಭೇಟಿಕೊಟ್ಟ ಮೇಲೆ, ಈ ಕೆಲಸದ ಅನಿವಾರ್ಯತೆ ತಮ್ಮ ಗಮನಕ್ಕೆ ಬಂದಿದೆ ಎಂದು ನಾನು ಭಾವಿಸಿಕೊಂಡಿದ್ದೇನೆ. ಇದರಿಂದಾಗಿಯೇ ತಾವು ಇತ್ತೀಚೆಗೆ ಈ ಕೆಲಸಕ್ಕೆ ಸಾಕಷ್ಟು ಹಣವನ್ನು ಒದಗಿಸಿಕೊಟ್ಟಿರುತ್ತೀರಿ. ಅದಕ್ಕಾಗಿ ತಮಗೆ ವಂದನೆಗಳು.

ಮಾವಿನಕೆರೆಯ ಮೇಲುಗಾಲುವೆ ಕೆಲಸ, ಅಲ್ಲಿಂದ ತುಮಕೂರಿಗೆ ಕಾಲುವೆ ತಿರುಗುವವರೆಗೆ ಆಗಬೇಕಾಗಿರುವ ಕಾಲುವೆಯ ಅಗಲ ಮತ್ತು ಆಳದ ಕೆಲಸ. ಅಲ್ಲಿಂದ ಸುರಂಗದವರೆಗಿನ ಆಗಮನ ಕಾಲುವೆಯ ಕೆಲಸ. ಬಾಗೂರು-ನವಿಲೆ ಸುರಂಗದ ಮುಂದಕ್ಕೆ ನಿರ್ಗಮನ ಕಾಲುವೆಯ ಕೆಲಸಗಳು ಮುಗಿದರೆ, ಹೇಮಾವತಿ ನೀರು ಶಿಂಷಾ ಕಣಿವೆಗೆ ಬೀಳಲು ಎಲ್ಲಾ ಕೆಲಸಗಳು ಮುಗಿದಂತಾಗುತ್ತದೆ. ತಾವು ಖುದ್ದಾಗಿ ನೋಡಿರುವಂತೆ, ಈ ಎಲ್ಲಾ ಕೆಲಸಗಳು ಮುಗಿಯುವ ಹಂತದಲ್ಲಿವೆ. ನಮ್ಮೆಲ್ಲರ ನಿರೀಕ್ಷೆಯ ಪ್ರಕಾರ, ಈ ಎಲ್ಲಾ ಕೆಲಸಗಳು ಮುಗಿದು ಜುಲೈ ಮೊದಲನೇ ವಾರದಲ್ಲಿ, ಹೇಮಾವತಿ ತಾಯಿ ತುಮಕೂರು ಜಿಲ್ಲೆಗೆ ಹರಿದು ಬರುವಳೆಂದು ನಾವೆಲ್ಲರೂ ಕಾತುರದಿಂದ ಕಾಯುತ್ತಿದ್ದೇವೆ. ಈ ಆಸೆ ಮತ್ತು ಕಾತುರತೆಯ ಮಧ್ಯದಲ್ಲಿಯೂ ನನಗಿರುವ ಆತಂಕ ಏನೆಂದರೆ, ಮುಂಗಾರು ಮಳೆ ಏನಾದರೂ ಮುಂದಾಗಿ ಬಿದ್ದರೆ, ಆಳ ಕಾಲುವೆಯ ಕೆಲಸ ಸ್ಥಗಿತಗೊಂಡು ನೀರು ಬರುತ್ತದೆ ಎಂದು ಕಾತುರತೆಯಿಂದ ಕಾಯುತ್ತಿರುವ ನಮ್ಮ ಆಸೆ ಕಮರಿ ಹೋಗುವುದೇನೋ ಎಂಬುದು.

ಈ ಕೆಲಸಕ್ಕಾಗಿ ನೀವು ತೋರಿದ ಆಸಕ್ತಿ ಮತ್ತು ಆರ್ಥಿಕ ಬಿಕ್ಕಟ್ಟಿದ್ದಾಗಿಯೂ ಹಣ ಒದಗಿಸಿದಕ್ಕಾಗಿ ಈಗಾಗಲೇ ತಮ್ಮನ್ನು ಅಭಿನಂದಿಸಿದ್ದೇನೆ.

ಅನಾರೋಗ್ಯದಿಂದ ಆಸ್ಪತ್ರೆಯಲ್ಲಿದ್ದಾಗಲೂ ತಮಗೆ ಈಗಾಗಲೇ ಒಂದು ಪತ್ರವನ್ನು ಬರೆದಿದ್ದೇನೆ. ನಾನು ಸಕ್ರಿಯ ರಾಜಕೀಯದಲ್ಲಿ ಉಳಿದಿರುವುದೇ ಈ ಕೆಲಸದ ಸಾಧನೆಗಾಗಿ. ಆದ್ದರಿಂದಲೇ ಮತ್ತೆತಾವು ವೈಯಕ್ತಿಕವಾಗಿ ಈ ಪತ್ರವನ್ನು ಓದುವ ಷ್ಯವಧಾನ ಮಾಡಿ ಕೊಳ್ಳುತ್ತೀರ ಎಂದು ನಂಬಿ, ಆಸ್ಪತ್ರೆಯಿಂದಲೇ ಈ ಸುದೀರ್ಘ ಪತ್ರವನ್ನು ಬರೆಯುತ್ತಿದ್ದೇನೆ.

ಈಗಾಗಲೇ ನಾನು ತಿಳಿಸಿರುವಂತೆ ಮುಂಗಾರು ಮಳೆ ಮುಂದಾಗಿ ಬಂದರೆ, ಈ ಕೆಲಸಗಳು ನಿಂತು ಹೋಗುವ ಅಪಾಯವಿರುವುದರಿಂದ, ದಯಮಾಡಿ ಕೂಡಲೇ ಸಂಬಂಧಪಟ್ಟ

ಅಧಿಕಾರಿಗಳಿಗೆ ಈ ಮಾಹೆಯ ಕೊನೆಯ ಒಳಗಾಗಿ, ಉಳಿದಿರುವ ಕೆಲಸಗಳನ್ನು ಈಗಾಗಲೇ ತಿರ್ಮಾನಿಸಿರುವಂತೆ ಮಾಡಿ ಮುಗಿಸುವಂತೆ ಸೂಕ್ತ ನಿರ್ದೇಶನ ನೀಡುವುದು ಮತ್ತು ಸರ್ಕಾರಕ್ಕೆ ಏನೇ ತೊಂದರೆ ಇದ್ದರೂ, ಈ ಕೆಲಸಕ್ಕೆ ಕೊನೇ ಪಕ್ಷ ಇನ್ನೂ ಇಪ್ಪತ್ತು ಕೋಟಿ ರೂಪಾಯಿಯನ್ನಾದರೂ ಒದಗಿಸಿ ಕೊಟ್ಟು, ಸುಮಾರು ನಾಲ್ಕು ಲಕ್ಷ ಎಕರೆಗೆ ನೀರು ಕೊಡುವ ಪುಣ್ಯದ ಕೆಲಸದಲ್ಲಿ ನೆರವಾಗುವಿರೆಂದು ಭಾವಿಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

**ವೈ.ಕೆ. ರಾಮಯ್ಯ**

ಇವರಿಗೆ
ಸನ್ಮಾನ್ಯ ಶ್ರೀ ಎಸ್.ಆರ್. ಬೊಮ್ಮಾಯಿಯವರು
ಅಧ್ಯಕ್ಷರು,
ರಾಷ್ಟ್ರೀಯ ಜನತಾದಳ

ದಿನಾಂಕ 31-8-1994
ಮೊಕ್ಕಾಂ ಬೆಂಗಳೂರು.

ಮಾನ್ಯರೆ,

1969ರಲ್ಲಿ ಕಾಂಗ್ರೆಸ್ ಪಕ್ಷ ಹೊಡೆದಾಗ ನಾನು ಕಾಂಗ್ರೆಸ್ (ಓ)ನಲ್ಲಿ ಉಳಿದುಕೊಂಡೆ. 1977ರಲ್ಲಿ ದಿವಂಗತ ಜಯಪ್ರಕಾಶ್ ನಾರಾಯಣ್‌ರವರ ಆದೇಶದ ಮೇಲೆ ಎಲ್ಲಾ ವಿರೋಧ ಪಕ್ಷಗಳೂ ಒಂದಾಗಿ **"ಜನತಾ ಪಕ್ಷ"** ಉದಯಿಸಿದಾಗ ನಾನು ನನ್ನ ಸ್ನೇಹಿತರೊಡನೆ ಜನತಾ ಪಕ್ಷ ಸೇರಿದೆ. ಈ ಪಕ್ಷಕ್ಕೆ ಮತ್ತು ಪಕ್ಷದ ನಾಯಕತ್ವಕ್ಕೆ ನನ್ನಿಂದ ಎಷ್ಟರ ಮಟ್ಟಿಗೆ ಸೇವೆ ದೊರೆತಿದೆಯೋ ನನಗೆ ಗೊತ್ತಿಲ್ಲ. ಆದರೆ ಈ ಪಕ್ಷದಿಂದ, ಪಕ್ಷದ ನಾಯಕತ್ವದಿಂದ ನಾನು ಪಡೆದದ್ದು ಅಪಾರ. ಒಂದು ರಾಜಕೀಯ ಪಕ್ಷವನ್ನು ಸೇರುವುದು, ಬಿಡುವುದು ನನಗೆ ಸ್ವಲ್ಪ ಕಷ್ಟದ ಕೆಲಸ. ಹೀಗಾಗಿ ಆ ಪಕ್ಷದಲ್ಲಿಯೇ ಉಳಿದೆ. ಆದರೆ 1992ನೆಯ ಇಸವಿಯಲ್ಲಿ ನನ್ನನ್ನು ಜನತಾಪಕ್ಷದಿಂದ ತೆಗೆದುಹಾಕಿದಮೇಲೆ ಸ್ವಲ್ಪದಿನ ಏಕಾಂಗಿಯಾಗಿ ಉಳಿದೆ. ಆದರೆ ಒಂದು ವರ್ಷದ ಹಿಂದೆ ಮುಖ್ಯವಾಹಿನಿಯಲ್ಲಿ ಸೇರಿ ಒಂದಾಗಬೇಕೆಂಬ ಹೆಬ್ಬಯಕೆಯಿಂದ ನಾನು ಮತ್ತು ನನ್ನ ಸ್ನೇಹಿತರು ಜನತಾದಳ ಸೇರಿದೆವು.

ಆದರೆ ಈ ಪಕ್ಷಕ್ಕೆ ಸೇರಿದ ದಿನದಿಂದಲೂ, ಈ ಪಕ್ಷದಲ್ಲಿ ನನ್ನನ್ನು ಮತ್ತು ನನ್ನ ಸ್ನೇಹಿತರನ್ನು ಕಡೆಗಣಿಸುವ, ಕೆಲವು ಸಾರಿ ಮಾನಸಿಕವಾಗಿ ಹಿಂಸಿಸುವ, ಅಪಮಾನಮಾಡುವ ಕೆಲಸ ಮೊದಲಾಯಿತು. ಇವರ ಸೇಡಿನ ಮನೋಭಾವ, ದ್ವೇಷ-ಜ್ವಾಲೆ ಹಾಗೂ ನಿರಂಕುಶ ಪ್ರವೃತ್ತಿಯಿಂದ ಒಂದು ವರ್ಷಕಾಲ ನರಳಬೇಕಾಯಿತು. ಇದು ಎಂದಾದರೂ ಸರಿಹೋಗ ಬಹುದೆಂದು ಸಹಿಸಿದೆ. ಕೊನೆಗೆ ಇವರು ನನ್ನ ವೈಯಕ್ತಿಕ ವಿಷಯಗಳಲ್ಲಿ ಮತ್ತು ನನ್ನ ಬಗ್ಗೆ ಅಪಪ್ರಚಾರ ಮಾಡಿ, ನನ್ನನ್ನು ರಾಜಕೀಯವಾಗಿ ಮುಗಿಸಲು ವ್ಯವಸ್ಥಿತವಾಗಿ ಪ್ರಯತ್ನಪಟ್ಟರು. ಪಕ್ಷದ ಇತರೆ ನಾಯಕರುಗಳಲ್ಲಿ ಅನೇಕಸಾರಿ ಇದನ್ನು ಸರಿಮಾಡಲು ನಿವೇದಿಸಿಕೊಂಡರೂ ಪ್ರಯೋಜನವಾಗಲಿಲ್ಲ.

ನನ್ನಲ್ಲಿ ಪ್ರೀತಿ, ವಿಶ್ವಾಸ, ನಂಬಿಕೆ, ಅಭಿಮಾನ, ಗೌರವ ಇದ್ದಾಗ್ಯೂ ಸಹ ನನಗೆ ಸಹಾಯ ಮಾಡಲಾಗದ ಅಸಹಾಯಕತೆ ಅವರದ್ದಾಯಿತು. ಈ ಪರಿಸ್ಥಿತಿಯಲ್ಲಿ ಅವರೂ ಸಹ ಏನನ್ನೂ ಮೊಡಲಾಗದ ಸ್ಥಿತಿಯಲ್ಲಿದ್ದಾರೆಂದು ನನಗೆ ತಿಳಿದಿದೆ. ಪಕ್ಷದ ವತಿಯಿಂದ ಟಿಕೆಟ್ (ಬಿ-ಫಾರಂ) ಬೇಡ. ಮುಂದೆ ಬರುವ ಸರ್ಕಾರದಲ್ಲಿ ನನಗೆ ಮಂತ್ರಿ ಪದವಿ ಬೇಡ. ನನಗೆ ಪಕ್ಷದಲ್ಲಿ ಗೌರವ ಕೊಡಿ ಎಂದು ಬೇಡಿದರೂ ಅದು ಫಲಕಾರಿಯಾಗಲಿಲ್ಲ. ಅಂತಿಮವಾಗಿ ನನ್ನನ್ನು

ರಾಜಕೀಯವಾಗಿ ಮುಗಿಸಲು ಸನ್ನಾಹ ಮಾಡಿದರು. ನಾನೊಬ್ಬ ಭ್ರಷ್ಟ ರಾಜಕಾರಣಿ ಎಂದು ಪ್ರಚಾರ ಪಡಿಸಿ ಅದನ್ನು ಜನರಿಗೆ ಹೇಳಲು, ಭ್ರಷ್ಟತನದಿಂದ ನಾನು ಹಣವನ್ನು ಬಚ್ಚಿಟ್ಟಿದ್ದೇನೆಂದು ಭ್ರಮಿಸಿ ನನ್ನ ಸ್ನೇಹಿತರ ಮನೆಯನ್ನು ದಾಳಿ ಮಾಡಿಸಿದರು. ಈ ನಾಯಕರ ಕಾರ್ಯ ಶೈಲಿಯಿಂದಾಗಿ ನನ್ನೆಲ್ಲಾ ಆಸೆಗಳು ಸತ್ತಿವೆ. ನಂಬಿಕೆಗಳು ನುಚ್ಚುನೂರಾಗಿವೆ. **ಆತ್ಮಗೌರವಕ್ಕೆ ಧಕ್ಕೆ ಬಂದಾಗ, ನಾನು ರಾಜೀ ಮಾಡಿಕೊಳ್ಳುವ ಜಾಯಮಾನದವನಲ್ಲ. ಆದ್ದರಿಂದ ಜನತಾದಳ ಪಕ್ಷದಿಂದ ಹೊರಬರಲು ನಿರ್ಧರಿಸಿದ್ದೇನೆ.** ಈ ತೀರ್ಮಾನ ತೆಗೆದುಕೊಳ್ಳುವಾಗ ನನ್ನೆಲ್ಲಾ ಸ್ನೇಹಿತರ ಅಭಿಪ್ರಾಯ ಪಡೆದಿದ್ದೇನೆ. ಇಂತಹ ಪರಿಸ್ಥಿತಿಯಲ್ಲಿ ಅನೇಕ ವರ್ಷಗಳಿಂದ ನನ್ನ ಜೊತೆಯಲ್ಲಿ ಕೆಲಸ ಮಾಡಿದ, ಹೋರಾಡಿದ ಅನೇಕ ಹಿರಿಯರನ್ನು ಹಾಗೂ ನನ್ನ ಬಗ್ಗೆ ಈಗಲೂ ಅಪಾರವಾದ ಪ್ರೀತಿ, ವಿಶ್ವಾಸ ನಂಬಿಕೆ ಇಟ್ಟಿರುವ ಇತರೆ ಸ್ನೇಹಿತರನ್ನು ಬಿಟ್ಟುಬರಲು ನನಗೆ ನೋವಿದೆ. ಆದರೆ ವಿಧಿ ಇಲ್ಲ. ಒಂದು ರಾಜಕೀಯ ಪಕ್ಷ ಯಾರಿಗಾದರೂ ನೆರವಾಗ ಬೇಕೇ ಹೊರತು, ಹೊರೆ ಆಗಬಾರದು.

ಪಕ್ಷದಲ್ಲಿ ಇರುವಷ್ಟು ದಿನ ಗೌರವಿಸಿದ ನನ್ನೆಲ್ಲಾ ಗೆಳೆಯರಿಗೂ ವಂದನೆಗಳು. ಸಲಹೆ, ಸಹಕಾರ ನೀಡಿ, ಮಾರ್ಗದರ್ಶನ ಮಾಡಿದ ತಮಗೆ ವಂದನೆಗಳು. ದಯಮಾಡಿ ಈ ಕಾಗದವನ್ನು ಜನತಾದಳ ಪಕ್ಷಕ್ಕೆ ನಾನು ನೀಡುವ ರಾಜೀನಾಮೆ ಎಂದು ಪರಿಗಣಿಸಬೇಕಾಗಿ ಕೋರಿದೆ.

ಗೌರವಗಳೊಂದಿಗೆ,

ತಮ್ಮವ

**ವೈ.ಕೆ. ರಾಮಯ್ಯ**

ದಿನಾಂಕ 2.1.1995

ಶ್ರೀಯುತ ಸುಬ್ಬಯ್ಯನವರೆ,

ತಾ. 8.6.1992ರಂದು ಕುಣಿಗಲ್‌ನಲ್ಲಿ ನಡೆದದ್ದು ಗಂಗಯ್ಯನ ಕೊಲೆ. ಈ ಕೊಲೆ ಮಾಡಿದವರು ಅಂದು ಸಚಿವರಾಗಿದ್ದ ಶ್ರೀಯುತ ಎಸ್. ರಮೇಶ್‌ರವರು ಎಂಬುದು ನಮ್ಮ ವಾದ. ಈ ನೆಲದ ಕಾನೂನಿನ ಐ.ಪಿ.ಸಿ 302ರ ಪ್ರಕಾರ ಕೊಲೆ ಮಾಡಿದ ಶ್ರೀ ಎಸ್. ರಮೇಶ್‌ರವರ ಮೇಲೆ ಕುಣಿಗಲ್ ಪೊಲೀಸ್ ಠಾಣೆಯಲ್ಲಿ ಅದೇ ದಿನ ಮೊಕದ್ದಮೆ ನೊಂದಾಯಿಸಿಕೊಂಡಿದ್ದಾರೆ.

ಈ ಹಂತದಲ್ಲಿ ನಾನೂ ಹಾಗೂ ಶ್ರೀಯುತ ದೇವೇಗೌಡರು ಮತ್ತು ಇತರರು ''ಕೊಲೆ ಮಾಡಿರುವ ಶ್ರೀಯುತ ಎಸ್. ರಮೇಶ್ ಅವರನ್ನು ಸಚಿವ ಪದವಿಯಿಂದ ಕೈಬಿಡಬೇಕು ಹಾಗೂ ಅವರನ್ನು ಕಾನೂನಿನ ಪ್ರಕಾರ ಬಂಧಿಸಿ ವಿಚಾರಣೆ ನಡೆಸಬೇಕು'' ಎಂದು ಸರಕಾರದ ಮೇಲೆ ಸದನದ ಒಳಗೆ ಹಾಗೂ ಹೊರಗೆ ಒತ್ತಾಯ ಮಾಡಿದ್ದೆವು.

ಆದರೆ ತಮ್ಮ ಪಕ್ಷದವರೇ ಆದ ಶ್ರೀ ಎಸ್. ರಮೇಶ್‌ರವರನ್ನು ರಕ್ಷಿಸುವ ಉದ್ದೇಶದಿಂದ ಅವರನ್ನು ಬಂಧಿಸದೆ, ತನಿಖೆ ಮಾಡುವ ನಾಟಕಮಾಡಿ ಈ ಪ್ರಕರಣದಲ್ಲಿ ಸರ್ಕಾರ ಪೊಲೀಸರ ಮೇಲೆ ಒತ್ತಡ ತಂದು, ನ್ಯಾಯಾಲಯಕ್ಕೆ 'ಬಿ' ವರದಿ ಸಲ್ಲಿಸುವಂತೆ ಮಾಡಿದರು. ಈ ವರದಿಯನ್ನು ಕುಣಿಗಲ್ ಪ್ರಥಮ ದರ್ಜೆ ನ್ಯಾಯಾಲಯವು ಅಂಗೀಕರಿಸದಂತೆ ವಾದ ಮಾಡಿದಾಗ್ಯೂ 'ಬಿ' ವರದಿಯನ್ನು ಅಂಗೀಕರಿಸಿದ ತೀರ್ಮಾನದ ವಿರುದ್ಧ ತುಮಕೂರಿನ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರ ನ್ಯಾಯಾಲಯದಲ್ಲಿ ''ರಿವಿಷನ್ ಪಿಟಿಷನ್'' ಅನ್ನು ಹಾಕಲಾಗಿದೆ. ನಾನೇ ಪಿರ್‍ಯಾದಿ ಆಗಿ ಹಾಕಿದ್ದೇನೆ. (ಸಿ.ಆರ್. ಸಂ.39/93 ವೈ.ಕೆ. ರಾಮಯ್ಯ ಸ್ಟೇಟ್ ಹೆಚ್.ಜಿ. 8.6.94) ಕೊಲೆ ಮಾಡಿದ ವ್ಯಕ್ತಿಯ ಮೇಲೆ ಈ ನೆಲದ ಕಾನೂನಿನ ಪ್ರಕಾರ ತನಿಖೆ ಮಾಡಿ ಶಿಕ್ಷೆ ವಿಧಿಸಬೇಕೆಂಬ ನಮ್ಮ ಬೇಡಿಕೆಯ ಹೋರಾಟ ನಿರಂತರವಾಗಿ ನಡೆಯುತ್ತಿದೆ.

ಕೊಲೆ ಮಾಡಿದ ಅಪರಾಧಿ ಎಂದು ತನಿಖೆ ನಡೆಸಿ, ಕಾನೂನಿನ ಪ್ರಕಾರ ವಿಚಾರಣೆಗೆ ಗುರಿಮಾಡುವ ಸಹಜ ನಿಯಮಕ್ಕೆ ತಿಲಾಂಜಲಿ ಇತ್ತು, ಸರಕಾರ ತಾ. 8.6.1992ರಂದು ನಡೆದ ಕೊಲೆಯನ್ನು ''ಪೊಲೀಸ್ ಫೈರಿಂಗ್'' ಎಂದು ತಾನೇ ತೀರ್ಮಾನಕ್ಕೆ ಬಂದು, ಈ ಪೊಲೀಸ್ ಫೈರಿಂಗ್ ಬಗ್ಗೆ ವಿಚಾರಣೆ ನಡೆಸಲು ಆಯೋಗವನ್ನು ರಚಿಸಿದೆ. ಈ ಬೇಡಿಕೆಯನ್ನು ಯಾರೂ ಮಾಡಿರಲಿಲ್ಲ. ಆದರೂ ಸರಕಾರ ತನ್ನ ಪಕ್ಷದ ವ್ಯಕ್ತಿಯೊಬ್ಬರನ್ನು ಕಾನೂನಿನ ಹಿಡಿತದಿಂದ ತಪ್ಪಿಸಲು ಸಾರ್ವಜನಿಕರ ಕಣ್ಣಿಗೆ ಮಣ್ಣೆರಚಲು ಈ ಆಯೋಗವನ್ನು ರಚಿಸಿದೆ. ಈ ವಿಚಾರಣೆಯಿಂದ ಯಾವ ಪುರುಷಾರ್ಥವೂ ಸಾಧನೆಯಾಗುವುದಿಲ್ಲ. ನಾನೂ ಒಬ್ಬ ವಕೀಲ. ಇದರ ಅರಿವು ನನಗಿದೆ.

ಆದ್ದರಿಂದಲೇ ನಾನು ಪ್ರಮಾಣ ಪತ್ರ ಹಾಕಲಿಲ್ಲ. ಹಾಗೂ ಆಯೋಗದ ಮುಂದೆ ಹಾಜರಾಗಲು ನಿರಾಕರಿಸಿದ್ದೇನೆ.

ಇದು ಇರುವ ನಿಜಸ್ಥಿತಿ. ತಾವು ಒಂದು ಸಾರಿ ಪತ್ರಿಕೆಯವರ ಮುಂದೆ ''ಶ್ರೀ ವೈ.ಕೆ. ರಾಮಯ್ಯ, ಶ್ರೀ ಎಸ್. ರಮೇಶ್‌ರವರೊಡನೆ ಹೊಂದಿಕೊಂಡು ಆಯೋಗದ ಮುಂದೆ ಹಾಜರಾಗಿಲ್ಲ'' ಎಂದು ಆಪಾದನೆ ಮಾಡಿದ್ದೀರ. ಅದಕ್ಕಿಂತಲೂ ನನಗೆ ನೋವು ತರುವ ಸಂಗತಿ ಎಂದರೆ, ಶ್ರೀ ರಾಮಯ್ಯನವರು ಬೆಂಗಳೂರಿನ ಅರಮನೆಯ ಅಂಗಳದಲ್ಲಿ ತಮ್ಮ ಮಗಳ ಮದುವೆಯನ್ನು ಮಾಡಿದ ಖರ್ಚನ್ನು ಶ್ರೀ ಎಸ್. ರಮೇಶ್‌ರವರೇ ನಿರ್ವಹಿಸಿದ್ದಾರೆ ಎಂದು ಹೇಳಿದ್ದೀರ.''

ಶ್ರೀಮಾನ್ ಸುಬ್ಬಯ್ಯನವರೆ, ಸಾರ್ವಜನಿಕ ಕ್ಷೇತ್ರದಲ್ಲಿ ಸುಮಾರು ಒಂದು ದಶಕಕ್ಕಿಂತಲೂ ಹೆಚ್ಚಿನ ಸಮಯ ಮಂತ್ರಿ ಪದವಿಯಿಂದ ಹಿಡಿದು ಹೌಸಿಂಗ್ ಬೋರ್ಡ್ ಅಧ್ಯಕ್ಷನಾಗಿ, ಶಾಸಕನಾಗಿ ಕೆಲಸ ಮಾಡಿದ್ದೇನೆ. ಒಂದು ಮಾತನ್ನು ಹಿರಿಯರಾದ ತಮಗೆ ಧೈರ್ಯವಾಗಿ ಹೇಳಬಲ್ಲೆ. ನಿಮಗಿಂತ ಹೆಚ್ಚಿಗೆ ಪ್ರಾಮಾಣಿಕನಲ್ಲದಿದ್ದರೂ, ನಿಮಗಿಂತ ಪ್ರಾಮಾಣಿಕತೆಯಲ್ಲಿ ಕಡಿಮೆಯವನಲ್ಲ.
ನನ್ನ ಮಗಳ ಮದುವೆಯ ಖರ್ಚನ್ನು ಯಾರು ನಿರ್ವಹಿಸಿದರು ಎಂಬುದನ್ನು ಶ್ರೀಯುತ ರಾಮಚಂದ್ರಯ್ಯ (ದೂರವಾಣಿ ಸಂಖ್ಯೆ : 3355012) ಹೋಟೆಲ್ ಮಾಲೀಕರು ಇದರನ್ನು ಸಂಪರ್ಕಿಸಿ ತಿಳಿದುಕೊಳ್ಳಿ. ಕೋಮುವಾದಿ ಪಕ್ಷದಿಂದ ಕೇವಲ ಒಂದು ಎಂ.ಎಲ್.ಸಿ ಸ್ಥಾನಕ್ಕಾಗಿ ಕಾಂಗ್ರೆಸ್ ಸೇರಿದ ನೀವು ನನಗೆ ನೀತಿ ಪಾಠ ಹೇಳುವಿರಾ.. ?

1983ರಲ್ಲಿ ನಾನು ಶಾಸಕನಾಗಿ ಆರಿಸಿ ಬಂದಾಗ, ನನಗೆ ಇದ್ದ ಆಸ್ತಿ ಎಷ್ಟು? ಸಾಲ ಎಷ್ಟು? ಈಗ ಇರುವ ಆಸ್ತಿ ಎಷ್ಟು? ಸಾಲ ಎಷ್ಟು? ಎಂಬುದನ್ನು ಸುಮಾರು ಐವತ್ತು ದಿನಗಳ ಹಿಂದೆ ನಾನು ಪತ್ರಿಕೆಗಳ ಮೂಲಕ ಸಾರ್ವಜನಿಕರ ಮುಂದೆ ಇಟ್ಟಿದ್ದೇನೆ. ಪ್ರತಿಗಳನ್ನು ಲಗತ್ತಿಸಿರುತ್ತೇನೆ. ದಯಮಾಡಿ ತಾವು ಈ ಕೆಲಸವನ್ನು ಮಾಡುವಿರಾ? ನೀವು ರಾಜಕೀಯಕ್ಕೆ ಬಂದಾಗ ಏನಿತ್ತು ? ಈಗ ಏನಿದೆ? ತಿಳಿಸುವಿರಾ? ಈ ರಾಜ್ಯದ ಜನ ಚರ್ಚೆ ಮಾಡಲಿ, ಹಾಗು ತೀರ್ಮಾನಕ್ಕೆ ಬರಲಿ.

ಹಿರಿಯರೆ, ನಾನೂ ಒಬ್ಬ ವಕೀಲ. ಕೇವಲ ಲಗ್ನಪತ್ರಿಕೆಗಳಲ್ಲಿ, ಇತರೆ ಕರಪತ್ರಗಳಲ್ಲಿ ಮುದ್ರಿಸಿ ಕೊಳ್ಳುವಂತಹ ವಕೀಲನಾಗಿರಲಿಲ್ಲ; ಒಂದು ಬಂಗಲೆ, ಒಂದು ಅಂಬಾಸಿಡರ್ ಕಾರು, ಮುವ್ವತ್ತು ಎಕರೆ ತೋಟ, ಫೋನು, ಫ್ಯಾನು ಎಲ್ಲವನ್ನೂ ಸಂಪಾದಿಸುವಷ್ಟು ಹಣಗಳಿಸಿದ ಪ್ರಸಿದ್ಧ ವಕೀಲನಾಗಿದ್ದೆ. ಇದರ ಜೊತೆಗೆ ನನ್ನ ಪಿತ್ರಾರ್ಜಿತ ಆಸ್ತಿಯೂ ಕೂಡ ಇದೆ. ಆದ್ದರಿಂದ ಅನ್ಯಾಯದ ಮಾರ್ಗದಲ್ಲಿ ಭ್ರಷ್ಟತೆಯಿಂದ ಗಳಿಸಿ ಬದುಕುವ ಅವಶ್ಯಕತೆಯೂ ಇಲ್ಲ. ಅದರ ಅನಿವಾರ್ಯತೆ ನನಗೆ ಬೇಕಿಲ್ಲ. ನಿಮಗೆ ತಿಳಿದಿದೆಯೇ? ''Sell not the virtues to purchase the wealth nor the liberty to purchase the power'' ಇದನ್ನು ನಾನು ನನ್ನ

ದಿನಚರಿಯ ಪುಸ್ತಕದಲ್ಲಿ ಬರೆದಿಟ್ಟಿದ್ದು, ಹಾಗೂ ಈ ಮಾತಿನಲ್ಲಿ ನಂಬಿಕೆ ಇಟ್ಟುಕೊಂಡು ಬಂದಿರುವುದು.

ಇದಾದ ಮೇಲೆ ತಾವು ಜನತಾಪಕ್ಷದಲ್ಲಿ ನಮ್ಮೊಡನೆ ಇದ್ದಾಗ ತಾವು ಕಾಂಗ್ರೆಸ್ಸಿನ ಬಗ್ಗೆ ಆಡುತ್ತಿದ್ದ ಮಾತುಗಳು ಹಾಗೂ ತೋರುತ್ತಿದ್ದ ಅಸಹನೆ ನನಗೆ ಈಗಲೂ ಜ್ಞಾಪಕದಲ್ಲಿದೆ. ಮುಂದೊಂದು ದಿನ ವಿಧಾನ ಪರಿಷತ್ತಿನ ಸದಸ್ಯತ್ವಕ್ಕಾಗಿ ಅದೇ ಕಾಂಗ್ರೆಸ್ ಪಕ್ಷವನ್ನು ಸೇರಿದವರು ಇದೇ ಎ.ಕೆ.ಸುಬ್ಬಯ್ಯನವರು ತಾನೆ? ಅಥವಾ ಆ ವ್ಯಕ್ತಿ ಬೇರೆಯವರೊ? ಅದೇ ವ್ಯಕ್ತಿಯಾಗಿದ್ದರೆ, ಬೇರೆಯವರಿಗೆ ನೀತಿಯ ಪಾಠ ಹೇಳುವ ಹಕ್ಕಿಲ್ಲವೆಂದು ನನ್ನ ಭಾವನೆ.''

ಶ್ರೀಮಾನ್ ಸುಬ್ಬಯ್ಯನವರೆ, ಹಲವಾರು ಕಾರಣಗಳಿಂದಾಗಿ ಈಗಲೂ ಸಹ ನಿಮ್ಮ ಬಗ್ಗೆ ನನಗೆ ಅಭಿಮಾನವಿದೆ. ಆದರೂ ನನ್ನ ಪ್ರಾಮಾಣಿಕತೆಯನ್ನು ಪ್ರಶ್ನೆ ಮಾಡಿ, ನನ್ನ ಮನಸ್ಸಿಗೆ ಘಾಸಿ ಮಾಡಿದ್ದೀರ ಹಾಗು ನೋವು ತಂದಿದ್ದೀರ. ಅದಕ್ಕಾಗಿ ಈ ಪತ್ರ ಬರೆಯುತ್ತಿದ್ದೇನೆ. ಹೇಗಿದ್ದರೂ ನೀವು ಹಿರಿಯರು ತಾನೆ? ನನ್ನ ಈ ಪತ್ರದಿಂದ ತಮಗೇನಾದರೂ ನೋವಾಗಿದ್ದರೆ ದಯಮಾಡಿ ಕ್ಷಮಿಸಿ. ಮಾನ್ಯರೆ, ಪ್ರತ್ಯಕ್ಷವಾದರೂ ಪರೀಕ್ಷಿಸಿ ನೋಡು ಎಂಬ ನುಡಿ ಇದೆ. ಆದ್ದರಿಂದ ಬೇರೆಯವರ ಬಗ್ಗೆ ಆಪಾದನೆ ಮಾಡುವಾಗ, ಒಂದು ಸಲ ಪರೀಕ್ಷೆ ಮಾಡುವುದು ಉಚಿತವೆಂದು ನನ್ನ ಅಭಿಪ್ರಾಯ. ಈ ನನ್ನ ಅಭಿಪ್ರಾಯದಲ್ಲಿ ತಪ್ಪಿದ್ದರೆ ಕ್ಷಮಿಸಿ.

ಇಂತೀ ನಮಸ್ಕಾರಗಳು
ವೈ.ಕೆ. ರಾಮಯ್ಯ
ಶಾಸಕರು, ಕುಣಿಗಲ್

ದಿನಾಂಕ : 11.1.1995

ಶ್ರೀ ಎಚ್.ಡಿ. ದೇವೇಗೌಡ ಅವರು
ಸನ್ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ಈ ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿರುವ ತಮಗೆ ನನ್ನ ಅಭಿನಂದನೆಗಳು. ಹಾಗೂ ಹೊಸ ವರ್ಷದ ಶುಭಾಶಯಗಳು.

ಸುಮಾರು ಎರಡು ದಶಕಗಳಿಗಿಂತಲೂ ಹೆಚ್ಚುಕಾಲ ನಿಮ್ಮೊಡನೆ ಕೆಲಸ ಮಾಡಿದ, ಜಗಳವಾಡಿದ, ವಿರೋಧಿಸಿದ, ಪ್ರೀತಿಸಿದ, ಗೌರವಿಸಿದ ಹಾಗು ಸುಖ-ದುಃಖಗಳನ್ನು ಹಂಚಿಕೊಂಡು ಬದುಕಿದ ನನಗೆ ನಿಮ್ಮ ಕಾರ್ಯವೈಖರಿಯ ಬಗ್ಗೆ, ನಂಬಿಕೆಗಳ ಬಗ್ಗೆ ಹಾಗೂ ಚಿಂತನೆಗಳ ಬಗ್ಗೆ ಅನೇಕ ವಿಷಯಗಳಲ್ಲಿ ಭಿನ್ನಮತವಿದೆ. ಅದೇ ರೀತಿ ಅನೇಕ ವಿಷಯಗಳಲ್ಲಿ ಸಹಮತವೂ ಇದೆ. ಸಹಮತವಿರುವ ವಿಷಯವೆಂದರೆ, ಈ ರಾಜ್ಯದ ರೈತನ ಜಮೀನಿಗೆ ನೀರು ಒದಗಿಸುವ ವಿಷಯದಲ್ಲಿನ ನಿಮ್ಮ ಆಸಕ್ತಿಯ ಬಗ್ಗೆ. 1962ರಿಂದ ಈ ವಿಷಯದಲ್ಲಿ ವಿಧಾನ ಸಭೆಯ ಒಳಗೆ ಮತ್ತು ಹೊರಗೆ ಅನೇಕ ವೇದಿಕೆಗಳಲ್ಲಿ ನೀವು ಮಾಡಿದ ಪ್ರತಿಪಾದನೆ ಹಾಗೂ ತಳೆದ ನಿಲುವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಈ ವಿಷಯದಲ್ಲಿ ನೀವು ಯಾರಿಗೂ ಎರಡನೆಯವರಲ್ಲ. ಹಾಗೆ ನೋಡಿದರೆ, ರೇಷ್ಮೆ ಉದ್ಯಮದ ಬಗ್ಗೆ ಇದ್ದ ನನ್ನ ಆಸಕ್ತಿಯನ್ನು ಕೆರಳಿಸಿ, ನೀರಾವರಿ ವಿಷಯದಲ್ಲಿಯೂ ಗಮನ ತಳೆಯುವಂತೆ ಆದದ್ದು ನಿಮ್ಮ ಪ್ರಭಾವದಿಂದಲೆ ಎಂದರೆ ತಪ್ಪಾಗಲಾರದು.

**ಕೃಷ್ಣಾ ಮತ್ತು ಕಾವೇರಿ ನದಿಗಳು ಕರ್ನಾಟಕ ಮಾತೆಯ ಎರಡು ಕಣ್ಣುಗಳು ಇದ್ದಂತೆ.** ಈ ಎರಡು ಕಣ್ಣುಗಳಿಂದ ಆನಂದ ಬಾಷ್ಪಸುರಿದು, ಭೂಮಿ ತೊಯ್ದು ರೈತನ ಭೂಮಿಯಲ್ಲಿ ಸಮೃದ್ಧ ಬೆಳೆ ಬೆಳೆದು, ಭೂಮಾತೆಯನ್ನೇ ನಂಬಿರುವ ಜನಸಾಮಾನ್ಯರ ಬದುಕು ಹಸನಾಗುವುದೆಂಬ ಉತ್ಕಟ ಆಸೆಯಿಂದಲೆ, ಕರ್ನಾಟಕ ರಾಜ್ಯದ ನೀರಾವರಿ ಯೋಜನೆಗಳನ್ನು ತ್ವರಿತವಾಗಿ ಮುಗಿಸಬೇಕು ಎನ್ನುವುದು ನಮ್ಮ ನಿಮ್ಮೆಲ್ಲರ ಇಚ್ಛೆ. ದುರಾದೃಷ್ಟವಶಾತ್ ಕರ್ನಾಟಕ ಮಾತೆಯ ಈ ಎರಡು ಕಣ್ಣುಗಳಿಂದ ಆನಂದಬಾಷ್ಪವು ಸುರಿಯುವ ಬದಲು ನೋವಿನ ಕಣ್ಣೀರು ಸುರಿಯುವುದನ್ನೇ ನೋಡಬೇಕಾಯಿತು. ಇದಕ್ಕೆ ಕಾರಣಗಳು ಹಲವಾರು. ಈ ಹಿನ್ನೆಲೆಯಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ಈ ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ಎಲ್ಲಾ ಪಕ್ಷದ, ಎಲ್ಲಾ ಸರ್ಕಾರಗಳು ಈ ನಾಡಿನ

ರೈತರಿಗೆ ನೀರನ್ನು ಒದಗಿಸುವ ವಿಷಯದಲ್ಲಿ ಮೋಸದ ಪರಂಪರೆ ಯನ್ನೇ ಅನುಸರಿಸಿಕೊಂಡು ಬಂದಿವೆ ಎಂಬುದು ನನ್ನ ಪ್ರಾಮಾಣಿಕ ಆನಿಸಿಕೆ. ಈ ರಾಷ್ಟ್ರದ ನೀರಾವರಿ ಭೂಮಿಯು ಸರಾಸರಿ ಶೇಕಡ 38. ಆದರೆ ಸುಮಾರು 55 ಲಕ್ಷ ಎಕರೆಗೆ ಆಗುವಷ್ಟು ಈ ರಾಜ್ಯದಲ್ಲಿ ಲಭ್ಯವಿರುವ ನೀರಾವರಿ ಸಾಮರ್ಥ್ಯದಲ್ಲಿ ನಮ್ಮ ಸಾಧನೆ ಕೇವಲ ಸರಾಸರಿ ಶೇಕಡ 14ರಷ್ಟು ಮಾತ್ರ. ಕಳೆದ ವರ್ಷ ರಾಜ್ಯ ಸರ್ಕಾರವು ಹೊರಡಿಸಿರುವ ಆರ್ಥಿಕ ಸಮೀಕ್ಷೆಯನ್ನು ತಾವು ಅವಲೋಕಿಸಿದರೆ ತಿಳಿಯುತ್ತದೆ. ಕಳೆದ ಒಂದು ದಶಕದಲ್ಲಿ ಈ ರಾಜ್ಯದ ನೀರಾವರಿ ಕ್ಷೇತ್ರದಲ್ಲಿ ನಾವು ಮಾಡಿರುವ ಸಾಧನೆ ಶೇಕಡ 1ರಷ್ಟು. ಇದರಿಂದ ಆಳುವ ಜನ ಅನುಸರಿಸಿ ಕೊಂಡು ಬಂದಿರುವ ಮೋಸದ ಪರಂಪರೆ ತಮಗೆ ಮನದಟ್ಟಾಗುತ್ತದೆ ಎಂದು ನನ್ನ ನಂಬಿಕೆ.

ಕರ್ನಾಟಕ ರಾಜ್ಯದ ಈ ಎರಡು ನೀರಾವರಿ ಯೋಜನೆಗಳನ್ನು, ಜರೂರಾಗಿ ಮಾಡಿ ಮುಗಿಸಬೇಕಾದ ಅನಿವಾರ್ಯತೆ ನಮ್ಮ ಮುಂದೆ ಇದೆ. ಈ ಎರಡು ಯೋಜನೆಗಳ ಅನುಷ್ಠಾನದ ಬಗ್ಗೆಯೂ ವಿಶೇಷವಾದ ಪರಿಸ್ಥಿತಿ ಇದೆ. ಕ್ರಿ.ಶ. 2000 ವರ್ಷದ ಒಳಗಾಗಿ ಕೃಷ್ಣಾನದಿಯಲ್ಲಿನ ನಮ್ಮ ಪಾಲಿನ ನೀರನ್ನು ಉಪಯೋಗಿಸಿಕೊಳ್ಳಲೇಬೇಕಾಗಿದೆ. ಇಲ್ಲದಿದ್ದಲ್ಲಿ ಯಾರು ಏನೇ ಹೇಳಲಿ, ಈ ನೀರಿಗಾಗಿ ಇರುವ ಹಕ್ಕನ್ನು ನಾವು ಕಳೆದುಕೊಳ್ಳುತ್ತೇವೆ ಎನ್ನುವುದು ನನ್ನ ಅಭಿಪ್ರಾಯ. ಇದೇ ರೀತಿ ತಮಿಳುನಾಡಿನ ರೈತರು ಕಾವೇರಿ ನೀರಿನ ಹಂಚಿಕೆಯ ಬಗ್ಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಹೂಡಿರುವ ವಿವಾದದಲ್ಲಿ, ನ್ಯಾಯಾಲಯವು ತನ್ನ ಮಧ್ಯಂತರ ತೀರ್ಪಿನಲ್ಲಿ, ಕರ್ನಾಟಕ ರಾಜ್ಯವು 11.5 ಲಕ್ಷ ಎಕರೆಗೆ ಮೀರಿ ಅಚ್ಚುಕಟ್ಟನ್ನು ಹೆಚ್ಚಿಸಬಾರದು ಎಂದು ನೀಡಿರುವ ತೀರ್ಮಾನವು ಕತ್ತಿಯ ರೂಪದಲ್ಲಿ ನಮ್ಮ ತಲೆಯ ಮೇಲೆ ತೂಗುತ್ತಿದೆ. ಈ ಮಧ್ಯಂತರ ತೀರ್ಪು ಅಂತಿಮ ತೀರ್ಮಾನ ಆದಲ್ಲಿ, ಕಾವೇರಿ ಕಣಿವೆಯಲ್ಲಿ ನೀರಿಗಾಗಿ ಕಾಯ್ದು ಕುಳಿತಿರುವ ರೈತರ ಆಸೆಯ ಸೆಲೆಯೇ ಬತ್ತಿ ಹೋಗುತ್ತದೆ.

ಈ ಅನಿವಾರ್ಯತೆಯನ್ನು ಅರಿತು, ವಿಶೇಷ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಈ ಯೋಜನೆಗಳ ಅನುಷ್ಠಾನಕ್ಕೆ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ವಿಷಯದ ಬಗ್ಗೆ ತಮಗಿರುವ "**ಆಸಕ್ತಿ**"ಯಲ್ಲಾಗಲೀ "**ಬದ್ಧತೆ**"ಯಲ್ಲಾಗಲೀ ನನಗೆ ಅನುಮಾನವಿಲ್ಲ. ಆದರೆ ಅನೇಕ ಹಿತಾಸಕ್ತಿಗಳ ಹಿಡಿತದಲ್ಲಿ ಹಾಗೂ ನಿಯಂತ್ರಣದಲ್ಲಿ ಕೆಲಸ ಮಾಡಬೇಕಾಗಿರುವ ತಾವು, ಎಷ್ಟರಮಟ್ಟಿಗೆ ಈ ಹಿತಾಸಕ್ತಿಗಳನ್ನು ಮೆಟ್ಟಿನಿಂತು, ನೀವು ಅನೇಕ ವರ್ಷಗಳು ಹೋರಾಡಿದ, ಆಸೆ ಇಟ್ಟು ಹಂಬಲಿಸಿದ ಈ ಕಾರ್ಯವನ್ನು ಸಾಧಿಸುತ್ತೀರಾ ಎನ್ನುವುದನ್ನಷ್ಟು ಮಾತ್ರ ಕಾದುನೋಡಬೇಕಾಗಿದೆ. ಏಕೆಂದರೆ ನಾವೇ ಸೃಷ್ಟಿಸಿಕೊಂಡಿರುವ "ವಿಚಿತ್ರ ವ್ಯವಸ್ಥೆ"ಯಲ್ಲಿ ಆಡಳಿತ ಮಾಡುವವರು, ತಮ್ಮ ಪ್ರಾಮಾಣಿಕ ಅನಿಸಿಕೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗದೆ ಇರುವ ಪರಿಸ್ಥಿತಿ ಇತ್ತೀಚಿನ ದಿನಗಳಲ್ಲಿ ಸಾಮಾನ್ಯವಾಗಿದೆ.

ಕಳೆದ ವರ್ಷ ಸರ್ಕಾರವು ರಚಿಸಿದ್ದ ನೀರಾವರಿ ಇಲಾಖೆಯ ವಿಷಯ ಸಮಿತಿಯ ಮುಂದೆ, ಸರ್ಕಾರದ ಕಾರ್ಯದರ್ಶಿಯವರು ಮಾತನಾಡುತ್ತಾ, "**ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ಯಾವ ಸರ್ಕಾರವೂ, ಯಾವುದೇ ವರ್ಷದಲ್ಲಿ, ನೀರಾವರಿ ಕಾರ್ಯಕ್ರಮಗಳಿಗೆ ನಿಯೋಜಿಸಿದಷ್ಟು ಹಣವನ್ನು ಬಿಡುಗಡೆ ಮಾಡಿ ಖರ್ಚು ಮಾಡಿಲ್ಲ**" ಎಂದು ಹೇಳಿರುತ್ತಾರೆ. ಇದನ್ನು ನೋಡಿದರೆ ನಾವು ಈ ರಾಜ್ಯದ ಜನರಿಗೆ ನೀರಾವರಿಯ ವಿಷಯದಲ್ಲಿ ಮೋಸ ಮಾಡಿದ್ದೇವೆ ಎನ್ನುವ ನನ್ನ ಅಭಿಪ್ರಾಯಕ್ಕೆ ಪುಷ್ಟಿ ದೊರೆಯುತ್ತದೆ.

ಮಾನ್ಯ ಮುಖ್ಯಮಂತ್ರಿಗಳೆ, ಇದುವರೆಗೆ ಯಾವ ಸರ್ಕಾರವೂ, ಯಾವ ವರ್ಷವೂ ಆಯ-ವ್ಯಯದಲ್ಲಿ ನಿಗದಿ ಮಾಡಿದಷ್ಟು ಹಣವನ್ನು ಬಿಡುಗಡೆ ಮಾಡಿ, ಖರ್ಚು ಮಾಡಿಲ್ಲದೆ ಇರುವ ಮೋಸದ ಪರಂಪರೆಯನ್ನು ಮುರಿದು, ಈ ವಿಷಯದಲ್ಲಿನ ನಿಮ್ಮ ಬದ್ಧತೆ ಕೇವಲ ರಾಜಕೀಯ ಪ್ರೇರಿತವಾದುದಲ್ಲ, ಅದು ಪ್ರಾಮಾಣಿಕವಾದದ್ದು ಎಂದು ಸಾಬೀತು ಮಾಡಿ. ಈ ರಾಜ್ಯದ ಜನತೆಗೆ ಸಾಮರ್ಥ್ಯವನ್ನು ತೋರಿಸುವ ಸದವಕಾಶ ತಮಗೆ ಈಗ ಒದಗಿ ಬಂದಿದೆ.

ರಾಜ್ಯದ ನೀರಾವರಿ ಯೋಜನೆಗಳು ಕುಂಠಿತಗೊಳ್ಳಲು ಇಚ್ಛಾಶಕ್ತಿಯ ಕೊರತೆಗಿಂತ, ಹೆಚ್ಚಾಗಿ ಹಣದ ಕೊರತೆ ಬಹುಮುಖ್ಯ ಕಾರಣವಾದದ್ದು ಎನ್ನುವ ವಾದವನ್ನು ತಾವು ಅನೇಕ ವೇಳೆ ಪ್ರತಿಪಾದನೆ ಮಾಡಿರುತ್ತೀರಿ. ಇದು ನಿಜವೂ ಹೌದು. ಈ ಹಿನ್ನೆಲೆಯಲ್ಲಿಯೇ ನಾವು ನಮ್ಮದೇ ಸರ್ಕಾರದ ವಿರುದ್ಧ ಪ್ರತಿಭಟಿಸಿ, ಮಂತ್ರಿ ಪದವಿಗಳಿಗೆ ರಾಜೀನಾಮೆ ಕೊಟ್ಟಿದ್ದೆವು, ಎನ್ನುವ ವಿಷಯ ನಿಮಗೆ ತಿಳಿದಿದೆ.

ನಾನು ಈಗಾಗಲೇ ತಿಳಿಸಿರುವಂತೆ, ತಾವು ಇಷ್ಟು ದಿನಗಳವರೆಗೆ ರಾಜ್ಯದ ನೀರಾವರಿಯ ಯೋಜನೆಗಳ ಬಗ್ಗೆ ತಾಳಿದ ನಿಲುವು, ಮಾಡಿದ ಪ್ರತಿಪಾದನೆಗಳು ಪ್ರಾಮಾಣಿಕವಾದವು ಎಂಬುದನ್ನು ಸಾಬೀತು ಪಡಿಸುವ ದೃಷ್ಟಿಯಿಂದಲೂ, ಮತ್ತು ರಾಜ್ಯದ ರೈತನ ಭೂಮಿಗೆ ನೀರನ್ನು ಒದಗಿಸುವ ಪುಣ್ಯದ ಕೆಲಸದಲ್ಲಿ ಭಾಗಿಯಾಗುವ ದೃಷ್ಟಿಯಿಂದಲೂ, ಈ ವರ್ಷ ಅಂದರೆ 1994-95ನೆಯ ವರ್ಷದಲ್ಲಿ ಆಯ-ವ್ಯಯದಲ್ಲಿ ನೀರಾವರಿ ಯೋಜನೆಗಳ ಅನುಷ್ಠಾನಕ್ಕಾಗಿ ನಿಗದಿ ಮಾಡಿರುವ ಹಣವನ್ನು ಬಿಡುಗಡೆ ಮಾಡಿ, ಮೋಸದ ಪರಂಪರೆಯನ್ನು ಮುರಿದು ಕೀರ್ತಿವಂತರಾಗಿ ಎಂದು ಕೋರುತ್ತೇನೆ.

ಗೌರವಗಳೊಂದಿಗೆ,

ತಮ್ಮವ

**ವೈ.ಕೆ. ರಾಮಯ್ಯ**



ದಿನಾಂಕ : 31.3.1995

## ಜೈಲಿನಿಂದ ವೈ.ಕೆ.ಆರ್ ಪತ್ರ

ಇನ್ನು ಎಷ್ಟು ದಿನ ಜೈಲಿನಲ್ಲಿಯೇ ಈ ಮುಷ್ಕರ ಮುಂದುವರೆಸುತ್ತಿರಾ? ಇದು ಎಲ್ಲರೂ ಕೇಳುವ ಪ್ರಶ್ನೆ. ನನ್ನ ಗಂಟಲು ಬೇನೆ ಎಲ್ಲರಿಗೂ ಉತ್ತರ ಹೇಳಲು ಅಡ್ಡಿಯಾಗುತ್ತಿದೆ. ನನ್ನ ಉತ್ತರ ಇಷ್ಟೆ : ''**ಎಲ್ಲಿಯವರೆಗೆ ಈ ಸರ್ಕಾರ ಈ ವಿಷಯದಲ್ಲಿ ಗಮನ ಹರಿಸಿ ತೀರ್ಮಾನ ತೆಗೆದುಕೊಳ್ಳದೇ ನಿದ್ದೆ ಮಾಡುತ್ತದೆಯೋ, ಅಲ್ಲಿಯವರೆಗೆ ನಾನು ಜೈಲಿನಲ್ಲಿ ನಿದ್ದೆ ಮಾಡುತ್ತಿರುತ್ತೇನೆ.** ಸರ್ಕಾರ ಮತ್ತು ಜನಪ್ರತಿನಿಧಿಗಳು ಇಂತಹ ಗಂಭೀರ ವಿಷಯಗಳಲ್ಲಿಯೂ ದಿವ್ಯ ನಿರ್ಲಕ್ಷ್ಯ ತೋರಿ, ನಿದ್ದೆ ಮಾಡಿದರೆ ಅವರನ್ನು ನಮ್ಮ ಜನ ಎದ್ದು ಬಂದು ಎಚ್ಚರಿಸುವವರೆಗೆ ನಾನು ಇಲ್ಲಿರವುದು ಅನಿವಾರ್ಯವಾಗಿದೆ''.

**ವೈ.ಕೆ. ರಾಮಯ್ಯ**
ಕೇಂದ್ರ ಕಾರಾಗೃಹ, ಬೆಂಗಳೂರು.

## ಬಟ್ಟೆ ತೊಟ್ಟವ ಹುಚ್ಚ

29-3-1995

ಕುಣಿಗಲ್

ಮಾನ್ಯ ಲಂಕೇಶ್ ಅವರೇ,

ತಮ್ಮ 60ನೇ ವರ್ಷದ ಹುಟ್ಟುಹಬ್ಬದ ಆಹ್ವಾನ ಪತ್ರಿಕೆ, ಬೆಂಗಳೂರಿನ ವಿಳಾಸಕ್ಕೆ ಬಂದಿದ್ದರಿಂದ, ಕಾರ್ಯಕ್ರಮಕ್ಕೆ ಬರಲು ಸಾಧ್ಯವಾಗಲಿಲ್ಲ. 60 ವರ್ಷ ಏಕೆ? 6000 ವರ್ಷ ಬದುಕಿದರೂ, ಲಂಕೇಶ್‌ರಂಥವರು ನಮಗೆ ಬೇಕಿದೆ. ಆದರೆ ಏನು ಮಾಡುವುದು? ನಮ್ಮ ಜಟಕಾ ಬಂಡಿಗೆ ''ವಿಧಿ'' ತಾನೇ ಸಾಹೇಬ ?

ತಮಗೆ 60 ವರ್ಷಗಳು ತುಂಬಿದ ಈ ಸಂದರ್ಭದಲ್ಲಿ ಶುಭ ಕೋರುತ್ತೇನೆ. ತಮ್ಮ ಆಹ್ವಾನ ಪತ್ರಿಕೆಯಲ್ಲಿ ಮುದ್ರಿಸಿರುವ ಕಾರ್ಯಕ್ರಮವನ್ನು ಓದಿದ ಒಬ್ಬರು ''ಹುಚ್ಚುತನದ ಲಕ್ಷಣಗಳಿಗೆ ಇದಕ್ಕಿಂತ ಬೇರೆ ಉದಾಹರಣೆ ಬೇಕೆ?'' ಎಂದು ಉದ್ಗಾರ ತೆಗೆದರು. ಅದಕ್ಕೆ ನಾನು ಹೇಳಿದೆ : ''ಬೆತ್ತಲೆ ಇರುವವರು ಬದುಕುತ್ತಿದ್ದ ಒಂದು ದ್ವೀಪದಲ್ಲಿ ಬಟ್ಟೆ ತೊಟ್ಟವನೆ ಹುಚ್ಚನಂತೆ ನಿಮಗೆ ತೋರಿದರೆ ನಾವೇನು ಮಾಡಲು ಸಾಧ್ಯವಿಲ್ಲ.''

- ವೈ.ಕೆ. ರಾಮಯ್ಯ

ಕುಣಿಗಲ್

(ಲಂಕೇಶ್ ಪತ್ರಿಕೆ : 29-3-1995)

27.3.1995

## ಜೈಲಿನಿಂದ ವೈ.ಕೆ.ಆರ್ ಪತ್ರ

ತುಮಕೂರು ಜಿಲ್ಲೆ ಹಾಗು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಜಮೀನುಗಳಿಗೆ ನೀರು ಒದಗಿಸಲು ನಡೆಯುತ್ತಿರುವ ನಾಲಾ ಕೆಲಸವನ್ನು ನಿಲ್ಲಿಸಿರುವುದನ್ನು ಕೂಡಲೆ ಶುರು ಮಾಡಬೇಕು. ಈಗಾಗಲೇ ಮಾಡಿರುವ ಕೆಲಸಕ್ಕೆ ಗುತ್ತಿಗೆದಾರರಿಗೆ ಕೊಡಬೇಕಾಗಿರುವ ಸುಮಾರು 25 ಕೋಟಿ ರೂಪಾಯಿ ಬಾಕಿ ಹಣವನ್ನು ಬಿಡುಗಡೆ ಮಾಡಬೇಕು.

ಬರದ ದವಡೆಯಲ್ಲಿ ತತ್ತರಿಸುತ್ತಿರುವ ತುಮಕೂರು ಜಿಲ್ಲೆಯ ಜನರಿಗೆ ಸ್ವಲ್ಪವಾದರೂ ಪರಿಹಾರ ಒದಗಿಸುವ ದಿಸೆಯಲ್ಲಿ ಶಿಂಷಾ ನದಿಯ ಪಾತ್ರಕ್ಕೆ ಹೇಮಾವತಿ ಅಣೆಕಟ್ಟಿನಿಂದ ಹರಿದು ಬರುತ್ತಿದ್ದ ನೀರನ್ನು ನಿಲ್ಲಿಸದೆ ಮುಂದುವರಿಸಬೇಕು. ಈ ಮೂರು ಬೇಡಿಕೆಗಳನ್ನು ಮುಂದಿಟ್ಟು ಸರ್ಕಾರಕ್ಕೆ ಒಂದಲ್ಲ, ನಾಲ್ಕಾರು ಪತ್ರಗಳನ್ನು ಬರೆದದ್ದಾಯಿತು. ಆ ಪತ್ರಗಳಿಗೆ ಉತ್ತರ ಕೊಡುವ ಸೌಜನ್ಯವನ್ನೂ ಸಹ ಸರ್ಕಾರ ತೋರಲಿಲ್ಲ. ಇಡೀ ತಮ್ಮ ರಾಜಕೀಯ ಜೀವನದಲ್ಲಿ ನೀರಾವರಿ ಬಗ್ಗೆ ಆಸಕ್ತಿ ಪ್ರದರ್ಶನ ಮಾಡುತ್ತಾ, ಮಣ್ಣಿನ ಮಗನೆಂದು ಹೇಳಿಕೊಂಡು ಅಧಿಕಾರಕ್ಕೆ ಬಂದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ದೇವೇಗೌಡರು ಅಧಿಕಾರಕ್ಕೆ ಬಂದ ಕೂಡಲೆ, ರಾಜ್ಯದ ಎಲ್ಲಾ ನೀರಾವರಿ ಯೋಜನೆಗಳ ಕೆಲಸವನ್ನು ಸ್ಥಗಿತಗೊಳಿಸಿದರು. ಮಣ್ಣಿನ ಮಕ್ಕಳಿಗೆ ಈ ರಾಜ್ಯದಲ್ಲಿ ಮುಖ್ಯಮಂತ್ರಿಗಳು ಕೊಟ್ಟ ಮೊದಲ ಕೊಡುಗೆ ಇದು.

ಹಾಸನ ಜಿಲ್ಲೆ ಹೇಮಾವತಿ ಅಣೆಕಟ್ಟಿನಲ್ಲಿ ನೀರು ತುಂಬಿದೆ. ತುಮಕೂರು ಜಿಲ್ಲೆ ರೈತರ ಜಮೀನಿನಲ್ಲಿ ಬೆಳೆ ಒಣಗಿ ನಿಂತಿದೆ. ಬೇಸಿಗೆಯ ಬಿಸಿಲಿನಿಂದಾಗಿ, ತುಮಕೂರು ನಗರ, ಗುಬ್ಬಿ, ತಿಪಟೂರು, ತುರುವೇಕೆರೆ ಮತ್ತು ಕುಣಿಗಲ್ ಪಟ್ಟಣಗಳಲ್ಲಿ ಕುಡಿಯುವ ನೀರಿಗೂ ತೊಂದರೆಯಾಗಿ ಜನ ಕಂಗಾಲಾಗಿದ್ದಾರೆ. ಹೇಮಾವತಿಯಿಂದ ಗಂಗನಘಟ್ಟ, ಮಲ್ಲಾಘಟ್ಟ, ನೊಣವಿನ ಕೆರೆ, ತುರುವೇಕೆರೆ, ಮಾಕೊರ್ನನಹಳ್ಳಿ ಹಾಗೂ ಇತರೆ ಕೆರೆಗಳಿಗೆ ಹರಿದು ಬರುತ್ತಿದ್ದ ನೀರನ್ನು ನಿಲ್ಲಿಸಿರುವುದರಿಂದ, ಅಲ್ಲಿಯ ರೈತರು ಸಂಕಷ್ಟಕ್ಕೀಡಾಗಿದ್ದಾರೆ. ಈ ಪರಿಸ್ಥಿತಿಯ ಹಿನ್ನೆಲೆಯಲ್ಲಿ 72 ವರ್ಷದ ವಯೋವೃದ್ಧರೂ, ಮಾಜಿ ಶಾಸಕರಾದ ಶ್ರೀ ಬಿ.ಪಿ. ಗಂಗಾಧರ್‌ರವರೂ ಸೇರಿದಂತೆ, ನಮ್ಮೆಲ್ಲಾ ಅಭಿಮಾನಿಗಳು ಈ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯ ಮಾಡಲು ಮುಖ್ಯಮಂತ್ರಿಗಳ ಹಂಗಾಮಿ ನಿವಾಸವಾದ ''ಕುಮಾರ ಕೃಪಾ''ದ ಮುಂದೆ ಮರದ ನೆರಳಿನಲ್ಲಿ ಕಾದು ಕುಳಿತರೆ, ಮಣ್ಣಿನ ಮಗನ ನೇತೃತ್ವದ ಈ ಸರ್ಕಾರ, ಮಣ್ಣಿಗೆ ನೀರು ಕೊಡಿ ಎಂದು ಮನೆಯ ಮುಂದೆ ಬಂದ ಮಣ್ಣಿನ ಮಕ್ಕಳನ್ನು ಬಂಧಿಸಿ ಜೈಲಿಗೆ ಕಳುಹಿಸಿದೆ.

ತುಂಗಭದ್ರಾ ಅಣೆಕಟ್ಟೆಯಿಂದ, ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮಾರಾವ್‌ರವರ ಬೇಡಿಕೆಯಂತೆ, ಆಂಧ್ರ ಪ್ರದೇಶಕ್ಕೆ ನೀರನ್ನು ಬಿಡುತ್ತಿದ್ದಾರೆ. ಕಾವೇರಿ

ನದಿಯ ನೀರನ್ನು ತಮಿಳುನಾಡಿನವರ ಬೇಡಿಕೆಯಂತೆ, ತಮಿಳುನಾಡಿನ ರೈತರಿಗೆ ನೀರನ್ನು ಒದಗಿಸಲಾಗುತ್ತಿದೆ. ಆದರೆ ಇದೇ ರಾಜ್ಯದಲ್ಲಿ ಹುಟ್ಟಿರುವ, ತುಮಕೂರು ಜಿಲ್ಲೆಯ ಮಣ್ಣಿನ ಮಕ್ಕಳು ಇದೇ ರಾಜ್ಯದಲ್ಲಿರುವ ಹೇಮಾವತಿ ನೀರನ್ನು ಒದಗಿಸುವಂತೆ ಕೇಳಿದರೆ, ಮಣ್ಣಿನ ಮಕ್ಕಳ ಹಿತ ಕಾಪಾಡುತ್ತೇನೆಂದು ಪಣತೊಟ್ಟು ಅಧಿಕಾರಕ್ಕೆ ಬಂದ ಮುಖ್ಯಮಂತ್ರಿ, ಮಣ್ಣಿನ ಮಗ ದೇವೇಗೌಡರು ನಮ್ಮನ್ನು ಬಂಧಿಸಿ ಜೈಲಿಗೆ ಕಳಿಸಿರುವುದು ಎಂತಹ ವಿಪರ್ಯಾಸ ಎಂಬುದನ್ನು ಈ ರಾಜ್ಯದ ಮಣ್ಣಿನ ಮಕ್ಕಳು ಯೋಚಿಸಬೇಕಾಗಿದೆ.

ಕಳೆದ ವರ್ಷ ಜನತಾದಳದ ಶಾಸಕಾಂಗದ ಸಭೆಯಲ್ಲಿ ನಾನು ಅಂದಿನ ಸರ್ಕಾರ ನೀರಾವರಿ ಯೋಜನೆಗಳಿಗೆ ಹಣ ಒದಗಿಸದೆ ಇರುವುದನ್ನು ಪ್ರಸ್ತಾಪಿಸಿದ್ದೆ. ಆಗ ಜನತಾದಳದ ಅಧ್ಯಕ್ಷರಾಗಿದ್ದ ಸನ್ಮಾನ್ಯ ಶ್ರೀ ದೇವೇಗೌಡರು ''ನೀರಾವರಿಗೆ ಹಣ ಒದಗಿಸದಿದ್ದರೆ ನೀವು ಹೋಗಿ ಮುಖ್ಯಮಂತ್ರಿಗಳ ಮನೆ ಮುಂದೆ ಸತ್ಯಾಗ್ರಹ ಮಾಡಿ'' ಎಂದು ವ್ಯಂಗ್ಯವಾಗಿ ನನಗೆ ತಿಳಿಸಿದ್ದರು. ಆದರೆ ನೀರಾವರಿ ಬಗ್ಗೆ ಈಗ ಅವರ ಮನೆ ಮುಂದೆ ಹೋಗಿ ಮುಷ್ಕರ ಮಾಡಿದರೆ ಬಂಧಿಸಿ ಜೈಲಿಗೆ ಕಳುಹಿಸಿದ್ದಾರೆ.

ಅಧಿಕಾರಕ್ಕೆ ಬಂದ ಕೂಡಲೆ, ''ಕುಂಟು ನೆಪಗಳನ್ನು ಮುಂದಿಟ್ಟು'' ರಾಜ್ಯದ ಎಲ್ಲಾ ನೀರಾವರಿ ಕೆಲಸಗಳನ್ನು ಸ್ಥಗಿತಗೊಳಿಸಿರುವುದು. ಆಗಿರುವ ಕೆಲಸಗಳಿಗೆ ಹಣ ಬಿಡುಗಡೆ ಮಾಡದಿರುವುದು. ಹಿಂದಿನ ಕಾಂಗ್ರೆಸ್ ಸರ್ಕಾರ ಆಯ-ವ್ಯಯದಲ್ಲಿ ಒದಗಿಸಿದಷ್ಟೂ ಹಣವನ್ನು ಖರ್ಚು ಮಾಡದೆ ಇರುವುದು ಮತ್ತು ಅವರ ಈಗಿನ ಆಯ-ವ್ಯಯದಲ್ಲಿ ರೈತರ ಬಗ್ಗೆ ಅವರು ತೆಗೆದುಕೊಂಡಿರುವ ನಿಲುವುಗಳನ್ನು ಗಮನಿಸಿದರೆ, ಮಾನ್ಯ ಮುಖ್ಯಮಂತ್ರಿಗಳು ತಮ್ಮ ರಾಜಕೀಯ ಜೀವನದಲ್ಲಿ ನೀರಾವರಿಯ ಬಗ್ಗೆ ಮಾಡಿದ ಪ್ರತಿಪಾದನೆಗಳು ಹಾಗು ಅವರು ತಳೆದ ನಿಲುವುಗಳು ರಾಜಕೀಯ ಪ್ರೇರಿತವಾದವುಗಳೇ ಹೊರತು, ಅವರ ಆಸಕ್ತಿ ಪ್ರಾಮಾಣಿಕ ವಾದುದಲ್ಲ ಎಂದು ಈ ರಾಜ್ಯದ ಜನತೆಗೆ ಈಗಾಗಲೇ ಅರಿವಾಗಿದೆ.

ತುಮಕೂರು ಜಿಲ್ಲೆಯ ಹೇಮಾವತಿ ಯೋಜನೆಗಳ ಬಗ್ಗೆ ನಮ್ಮ ಬೇಡಿಕೆಗಳನ್ನು ಈಡೇರಿಸುವ ಪ್ರಯತ್ನ ಮಾಡುವ ಬದಲು ನಮ್ಮನ್ನು ಬಂಧಿಸಿ ಜೈಲಿಗೆ ಕಳುಹಿಸಿದ್ದಾರೆ. ಈ ನಮ್ಮ ಬೇಡಿಕೆಗಳು ಈಡೇರುವವರೆಗೆ ನಾವು ಜೈಲಿನಲ್ಲಿಯೇ ನಮ್ಮ ಮುಷ್ಕರವನ್ನು ಮುಂದುವರಿಸುತ್ತೇವೆ. ಜೈಲಿನಿಂದ ಹೊರಗೆ ಹೋಗುವ ಪ್ರಶ್ನೆಯೇ ಇಲ್ಲ.

ಈ ಯೋಜನೆಯ ಫಲಾನುಭವಿಗಳಾದ ತುಮಕೂರು ಜಿಲ್ಲೆಯ ತಿಪಟೂರು, ತುರುವೇಕೆರೆ, ಗುಬ್ಬಿ, ತುಮಕೂರು ಮತ್ತು ಕುಣಿಗಲ್ ತಾಲ್ಲೂಕಿನ ರೈತರುಗಳು ಈಗಲಾದರು ಎಚ್ಚೆತ್ತುಕೊಂಡು, ಈ ಬೇಡಿಕೆಗಳ ಈಡೇರಿಕೆಗೆ ಸರ್ಕಾರದ ಮೇಲೆ ಒತ್ತಡ ತರಬೇಕು. ಈ ಭಾಗದ

ಜನ ಪ್ರತಿನಿಧಿಗಳು ಈಗಲಾದರು ತಮ್ಮ ಜವಾಬ್ದಾರಿಯನ್ನು ಅರಿತು, ಕರ್ತವ್ಯ ನಿರ್ವಹಿಸಲೆಂದು ಬಂಧೀಖಾನೆಯಲ್ಲಿ ಬಂಧಿತರಾಗಿರುವ ನಾವು ನಿರಿಕ್ಷಿಸಿದ್ದೇವೆ.

ವೈ.ಕೆ. ರಾಮಯ್ಯ
ಅಧ್ಯಕ್ಷರು
ಸಮಾಜವಾದಿ ಪಾರ್ಟಿ, ಕರ್ನಾಟಕ

ಸೆಂಟ್ರಲ್ ಜೈಲ್, ಬೆಂಗಳೂರು.

## ಬಂಧಿತರಾಗಿ ಜೈಲಿನಲ್ಲಿರುವವರ ಪಟ್ಟಿ

1. ಶ್ರೀ ವೈ.ಕೆ. ರಾಮಯ್ಯ, ಅಧ್ಯಕ್ಷರು, ಸಮಾಜವಾದಿ ಪಾರ್ಟಿ, ಕರ್ನಾಟಕ
2. ಶ್ರೀ ಬಿ.ಪಿ. ಗಂಗಾಧರ್, ಮಾಜಿ ಶಾಸಕರು, ತುಮಕೂರು
3. ಶ್ರೀ ಎಸ್. ಎಚ್. ರಾಮಚಂದ್ರಯ್ಯ, ಜಿಲ್ಲಾ ಯುವ ಅಧ್ಯಕ್ಷರು, ಸಮಾಜವಾದಿ ಪಾರ್ಟಿ, ಶಾಂತಪುರ
4. ಶ್ರೀ ಮಮ್ತಾಜ್ ಅಹಮದ್, ಅಧ್ಯಕ್ಷರು, ಸಮಾಜವಾದಿ ಪಾರ್ಟಿ, ಕುಣಿಗಲ್
5. ಶ್ರೀ ಕೃಷ್ಣಮೂರ್ತಿ, ಅಧ್ಯಕ್ಷರು, ಸಮಾಜವಾದಿ ಪಾರ್ಟಿ, ತುರುವೇಕೆರೆ
6. ಶ್ರೀ ವೈ.ಹೆಚ್. ಹುಚ್ಚಯ್ಯ, ಜಿಲ್ಲಾ ಪಂಚಾಯಿತಿ ಸದಸ್ಯರು, ಕುಣಿಗಲ್
7. ಶ್ರೀ ಬಿ.ಎಂ. ಹುಚ್ಚೇಗೌಡ, ತಾಲ್ಲೂಕು ಪಂಚಾಯಿತಿ ಸದಸ್ಯರು, ಕುಣಿಗಲ್
8. ಶ್ರೀ ಕೆ. ಬೋರಪ್ಪನವರು, ಪ್ರಧಾನ ಕಾರ್ಯದರ್ಶಿ, ಜಿಲ್ಲಾ ಸಮಾಜವಾದಿ ಪಾರ್ಟಿ, ತುಮಕೂರು
9. ಶ್ರೀ ರಾಮಲಿಂಗೇಗೌಡ, ತಾಲ್ಲೂಕು ಅಧ್ಯಕ್ಷರು, ಗುಬ್ಬಿ ತಾಲ್ಲೂಕು
10. ಶ್ರೀ ರಾಜಣ್ಣ, ಅಧ್ಯಕ್ಷರು, ಕಣಕುಪ್ಪೆ ಗ್ರಾಮ ಪಂಚಾಯಿತಿ, ತುಮಕೂರು ತಾಲ್ಲೂಕು
11. ಶ್ರೀ ಯು.ಕೆ. ಕರಿಯಪ್ಪನವರು, ಸಮಾಜವಾದಿ ಪಾರ್ಟಿ ಮುಖಂಡರು, ಉಜ್ಜನಿ
12. ಶ್ರೀ ಶಿವಣ್ಣ, ಸಮಾಜವಾದಿ ಪಾರ್ಟಿ ಯುವ ಮುಖಂಡರು, ಉಜ್ಜನಿ
13. ಶ್ರೀ ವೈ.ಆರ್. ರಾಜೀವ್ ಬಾಬು, ಸಮಾಜವಾದಿ ಪಾರ್ಟಿ ಯುವ ಮುಖಂಡರು, ಕುಣಿಗಲ್
14. ಶ್ರೀ ಅರುಣಕುಮಾರ್, ಗ್ರಾಮ ಪಂಚಾಯಿತಿ ಸದಸ್ಯರು, ಹನುಮಣ್ಣನ ಪಾಳ್ಯ, ಕುಣಿಗಲ್
15. ಶ್ರೀ ಎಂ.ಎಲ್. ಹನುಮಂತಯ್ಯ, ಮಾವಿನಕಟ್ಟೆಪಾಳ್ಯ, ಕುಣಿಗಲ್ ತಾಲ್ಲೂಕು
16. ಶ್ರೀ ಆರ್.ಕೆ. ರಾಮಣ್ಣಗೌಡ, ಗ್ರಾಮಪಂಚಾಯಿತಿ ಸದಸ್ಯರು, ರಾಜಗೆರೆ
17. ಶ್ರೀ ಪಟೇಲ್ ಕೆ.ಎಚ್. ಗೌಡ, ಸೂಬಗಾನಹಳ್ಳಿ
18. ಶ್ರೀ ಹೆಚ್.ಆರ್. ಶಿವರಾಜು, ಹೊಸಕೆರೆ
19. ಶ್ರೀ ಹೆಚ್.ಸಿ. ಬೊರಯ್ಯ, ಹೊಸಕೆರೆ

20. ಶ್ರೀ ಕೊಂಡಾರೆಡ್ಡಿ, ಕುಣಿಗಲ್
21. ಶ್ರೀ ಅಚ್ಯುತನ್, ಕುಣಿಗಲ್
22. ಶ್ರೀ ಅಶ್ವತ್ಥನಾರಾಯಣ, ಅಧ್ಯಕ್ಷರು, ಸಮಾಜವಾದಿ ಪಾರ್ಟಿ, ಬೆಂಗಳೂರು ನಗರ
24. ಶ್ರೀಮತಿ ಕಲ್ಯಾಣಿ, ಮೈಸೂರು
25. ಶ್ರೀಮತಿ ಮಂಜುಳಾ ಮೋಹನ್, ಬೆಂಗಳೂರು
26. ಶ್ರೀಮತಿ ಲಲಿತಾ ಹೆಗಡೆ, ರಾಜ್ಯ ಸಮಿತಿ ಸದಸ್ಯೆ, ಹೊನ್ನಾವರ
27. ಶ್ರೀಮತಿ ಅರುಣಾ ಶ್ರೀನಿವಾಸ್, ಬೆಂಗಳೂರು
28. ಶ್ರೀ ಅಲಿ, ಬೆಂಗಳೂರು



ದಿನಾಂಕ : 5-4-1995

ಮಾನ್ಯ ಗೃಹ ಸಚಿವರೇ,

''ವೈ.ಕೆ. ರಾಮಯ್ಯ ಅವರ ವಿರುದ್ಧ ಸರ್ಕಾರಕ್ಕಾಗಲಿ, ಮುಖ್ಯಮಂತ್ರಿ ದೇವೇಗೌಡ ಅವರಿಗಾಗಲಿ ಯಾವುದೇ ರೀತಿಯ ದ್ವೇಷ ಇಲ್ಲ.'' ರಾಮಯ್ಯ ಅವರನ್ನು ''ಬಂಧಿಸುವ ಪ್ರಶ್ನೆಯೇ ಇಲ್ಲ. ಅವರಾಗಿಯೇ ಜೈಲಿಗೆ ಹೋಗಿದ್ದಾರೆ'' ರಾಮಯ್ಯ ಅವರನ್ನು ''ಜಾಮೀನಿನ ಮೇಲೆ ಬಿಡುತ್ತೇವೆ'' ಎಂದರು. ಅವರು ಕೇಳದೆ ಜೈಲಿಗೆ ಹೋಗಿದ್ದಾರೆ. ಹಟ ಹಿಡಿದು ಕುಳಿತಿದ್ದಾರೆ. ಅವರನ್ನು ಜೈಲಿಗೆ ಹಾಕುವ ಪ್ರಶ್ನೆಯೇ ಇಲ್ಲ. ಅವರೇ ಹಾಕಿಸಿಕೊಂಡಿದ್ದಾರೆ.

ಸದನದಲ್ಲಿ ತಾರೀಕು 4.4.1995ರಂದು ನೀವು ನನ್ನ ಬಗ್ಗೆ ಮಾಡಿರುವ ಈ ಹೇಳಿಕೆಗೆ ಪ್ರತಿಕ್ರಿಯೆ ವ್ಯಕ್ತ ಮಾಡಲು ನನಗೆ ಅವಕಾಶ ಇಲ್ಲದಿರುವುದರಿಂದ, ಸದನದ ಸದಸ್ಯನಾಗಲು ನಾನು ತಕ್ಕವನಲ್ಲವೆಂದು ಜನ ನನ್ನನ್ನು ಹೊರಗೆ ಇಟ್ಟಿರುವುದರಿಂದ, ಮಾನ್ಯ ಸಭಾಧ್ಯಕ್ಷರ ಮೂಲಕ ನನ್ನ ಅನಿಸಿಕೆಗಳನ್ನು ಬರೆದು ಕಳುಹಿಸುತ್ತಿದ್ದೇನೆ. ಮೊದಲನೆಯದಾಗಿ ; ಸರಕಾರಕ್ಕೆ ಮತ್ತು ಮುಖ್ಯಮಂತ್ರಿ ದೇವೇಗೌಡರಿಗೆ ನನ್ನ ಮೇಲೆ ದ್ವೇಷ ಇದೆ ಎಂದು ನಾನು ಹೇಳಿಲ್ಲ. ಎರಡನೆಯದಾಗಿ ; ಬಂಧಿಸದಿದ್ದರೆ ಜೈಲಿಗೆ ಹೋಗುವ ''ಅವಕಾಶ''ವಾಗಲಿ ''ಅವಶ್ಯಕತೆ'' ಯಾಗಲಿ ಉದ್ಭವಿಸುವುದಿಲ್ಲ. ತಾವು ಕಾನೂನು ಪದವೀಧರರಲ್ಲದಿದ್ದರೂ, ಅತ್ಯಂತ ರಾಜಕೀಯ ಚತುರರಾದ ತಮಗೆ ಈ ಕನಿಷ್ಠ ಸಾಮಾನ್ಯ ವಿಷಯವೂ ತಿಳಿಯುವುದಿಲ್ಲ ಎಂದು ನಂಬಲು ನಾನು ಸಿದ್ಧನಿಲ್ಲ. ಪೊಲೀಸರು ನನ್ನ ಮೇಲೆ ಅಕ್ರಮ ಕೂಟ, ಅಕ್ರಮ ಪ್ರವೇಶ, ಅಸಭ್ಯವರ್ತನೆ, ಪ್ರಾಣಭಯದ ಬೆದರಿಕೆ, ಇನ್ನೂ ಅನೇಕ ಅಪರಾಧಗಳನ್ನು ಹೊರಿಸಿ, ಬಂಧಿಸಿ ನನ್ನನ್ನು ಜೈಲಿಗೆ ಕಳುಹಿಸಬೇಕೆಂದು ''Remind application'' ಹಾಕಿದುದರ ಆಧಾರದ ಮೇಲೆ ನ್ಯಾಯಾಲಯ ನನ್ನನ್ನು ಜೈಲಿಗೆ ಕಳುಹಿಸಿದೆ. ಇದು ಇರುವ ವಿಷಯ.

ಮಾನ್ಯ ಸಚಿವರೇ, ನನ್ನನ್ನು ಜಾಮೀನಿನ ಮೇಲೆ ಬಿಡಿ ಎಂದು ನಿಮ್ಮನ್ನು ನಾನು ಬೇಡುತ್ತಿಲ್ಲ. ನಿಮ್ಮ ''ಕರುಣೆ'', ''ಅನುಕಂಪ'' ನನಗೆ ಬೇಕಾಗಿಲ್ಲ. ನನಗೆ ನಿಮ್ಮಿಂದ ಬೇಕಾಗಿರುವುದು ''ನ್ಯಾಯ''. ಯಾವ ಕಾರಣಕ್ಕಾಗಿ ಹರಿದು ಬರುತ್ತಿದ್ದ ನೀರನ್ನು ನಿಲ್ಲಿಸಿದಿರಿ? ಯಾವ ಕಾರಣಕ್ಕಾಗಿ ಕೆಲಸಗಳನ್ನು ಸ್ಥಗಿತ ಗೊಳಿಸಿದಿರಿ? ತಿಳಿಸಿ. ಅಷ್ಟು ಸಾಕು. ನಿಮ್ಮ ಸರಕಾರದ ಈ ನಡವಳಿಕೆ, ಭೂತಕಾಲದ ಸಂದರ್ಭ, ಸನ್ನಿವೇಶಗಳ ಇತಿಹಾಸವನ್ನು, ಭವಿಷ್ಯದ ದಿಕ್‌ಸೂಚಿಯನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ.

ಮಾನ್ಯ ಮಂತ್ರಿವರ್ಯರೆ, ರಾಮಯ್ಯನನ್ನು ಜೈಲಿನಿಂದ ಬಿಡುವ ಅಥವಾ ಬಿಡದಿರುವ ವಿಷಯ ಹಾಗಿರಲಿ, ನನ್ನನ್ನು ಜೈಲಿನಿಂದ ಬಿಡುವುದರಿಂದ ಅಥವಾ ಓಡಿಸುವುದರಿಂದ ಸಮಸ್ಯೆ

ಬಗೆಹರಿಯುವುದಿಲ್ಲ. ಹೇಮಾವತಿಯ ನೀರನ್ನು ತುಮಕೂರು ಜಿಲ್ಲೆಗೆ ಹರಿಯಬಿಟ್ಟರೆ ಮಾತ್ರ ಈ ಸಮಸ್ಯೆ ಬಗೆಹರಿಯಲು ಸಾಧ್ಯ. ಇದು ನಿಮಗೆ ತಿಳಿದಿಲ್ಲ. ಈ ಗುರಿಯನ್ನು ಮುಟ್ಟಲು, ಈ ಪರಿಹಾರವನ್ನು ಪಡೆಯಲು **ಜೈಲಿಗೆ ಏನು? ''ನೇಣುಗಂಬಕ್ಕೆ'' ಹೋಗಲು ನಾನು ಸಿದ್ಧನಿದ್ದೇನೆ.**

''ಕತೃನಿರ್ಣಯ ಬಾಹ್ಯ ಲಾಭ ನಷ್ಟಗಳಿಗಲ್ಲ (ಮತ್ತೇಕೆ?) ಜಗಕೆ, ನಿನ್ನಾತ್ಮ **ಋಣ**''ವದೂ ಮಂಕುತಿಮ್ಮ'' ಎಂದರು ಡಿ.ವಿ.ಜಿ. ಇದರಲ್ಲಿ ನಂಬಿಕೆ ಉಳ್ಳವನು ನಾನು. ಈ ನನ್ನ ಹೋರಾಟ **''ಎಲ್ಲವನ್ನೂ''** ಕೊಟ್ಟ ನನ್ನ ಜನರ **''ಋಣ''** ತೀರಿಸುವ ಒಂದು ಸಣ್ಣ ಪ್ರಯತ್ನವೇ ಹೊರತು, ಮುಂದಿನ ಚುನಾವಣೆಗೆ ಹೂಡುತ್ತಿರುವ ಬಂಡವಾಳವಲ್ಲ.



ಇನ್ನು ಜಾಮೀನಿನ ಮೇಲೆ ಬಿಡುವುದು, ಬಿಡದೆ ಇರುವುದು, ನ್ಯಾಯಾಲಯಕ್ಕೆ ಸೇರಿದ ಅಧಿಕಾರ. ನಿಮಗಾಗಲಿ, ನಿಮ್ಮ ಮುಖ್ಯಮಂತ್ರಿಗಳಿಗಾಗಲಿ ಇಲ್ಲಿ ಮೂಗು ತೂರಿಸಲು ಅವಕಾಶ ಇಲ್ಲ. ಅಲ್ಲದೆ ಜಾಮೀನು ಕೊಟ್ಟು ಜೈಲಿನಿಂದ ಹೊರಬರಲು ನಾನು ಮಾಡಿರುವ ಅಪರಾಧವೇನು?

ನಿಮ್ಮ ಅಧಿಕಾರಿಗಳು ಹಾಕಿದ ಸುಳ್ಳು ಮೊಕದ್ದಮೆಯಲ್ಲಿ ಮುಚ್ಚಳಿಕೆ ಬರೆದುಕೊಟ್ಟು ಬರುವುದು ಎಂದರೆ ಅದು ಹೇಗೆ ಸಾಧ್ಯ? ಒಬ್ಬ ವ್ಯಕ್ತಿಯನ್ನು ಯಾವಾಗ, ಯಾರು, ಹೇಗೆ ಜೈಲಿಗೆ ಕಳುಹಿಸಲು ಸಾಧ್ಯ ಎನ್ನುವುದು ಎಲ್ಲರಿಗೂ ತಿಳಿದಿದೆ.

**ಒಣಗಿದ ಹೊಲಕ್ಕೆ, ದಣಿದ ಬಾಯಿಗೆ ನೀರು ಕೊಡಿ ಎಂದು ನಿಮ್ಮ ಮುಖ್ಯಮಂತ್ರಿಗಳ ಮನೆಯ ಮುಂದೆ ಉಪವಾಸ ಕುಳಿತರೆ, ಅದು ಅಪರಾಧವೇ? ಈ ಅಪರಾಧ ಮಾಡಿದಕ್ಕಾಗಿ, ನಾನು ಜಾಮೀನು ಕೊಟ್ಟು ಹೊರಗೆ ಬರಬೇಕೆ?**

ಇನ್ನು ನಿಮ್ಮ ಮೇಲಾಗಲಿ, ನಿಮ್ಮ ಮುಖ್ಯಮಂತ್ರಿಗಳ ಮೇಲಾಗಲಿ, ನಿಮ್ಮ ಸರಕಾರದ ಮೇಲಾಗಲಿ ನನಗೆ ದ್ವೇಷವಿಲ್ಲ. ನಿಮ್ಮ ಅಧಿಕಾರ ಚಿರಾಯುವಾಗಲಿ.

ವಂದನೆಗಳೊಡನೆ,

ಇಂತಿ

**ವೈ.ಕೆ. ರಾಮಯ್ಯ**

ಕೇಂದ್ರ ಕಾರಾಗೃಹ, ಬೆಂಗಳೂರು

ಮಾನ್ಯರೆ,

ಮಾನವ ಕುಲದ ನಾಳಿನ ಒಳಿತನ್ನು ಚಿಂತಿಸುವ ಪ್ರತಿಯೊಬ್ಬ ವ್ಯಕ್ತಿಯೂ ಗಮನಿಸಬೇಕಾದ್ದು ಮೂರು ಪ್ರಮುಖ ವಿಷಯಗಳು - ಸ್ವಚ್ಛ ಪರಿಸರ, ವಿದ್ಯಾಭ್ಯಾಸ ಹಾಗೂ ಭಾರತಕ್ಕೆ ಸಂಬಂಧಿಸಿದಂತೆ ಜನಸಂಖ್ಯೆಯ ನಿಯಂತ್ರಣ. ಜನತೆಯ ಪ್ರೀತಿ ಹಾಗು ವಿಧೇಯತೆ ಗಳಿಸಲು ಹಾಗೂ ಅಧಿಕಾರ ಮತ್ತು ಸವಲತ್ತುಗಳನ್ನು ಅನುಭವಿಸಲು ರಾಜಕೀಯ ಭ್ರಷ್ಟಾಚಾರ ಮತ್ತು ದ್ರೋಹವೆಂಬ ಕಪಟ ದ್ಯೂತ ಒಂದೇ ದಾರಿಯಲ್ಲ. ಪರಿಪೂರ್ಣ ನ್ಯಾಯಕ್ಕಾಗಿ ಹೋರಾಡುವ, ಸರ್ವರ ಒಳಿತನ್ನು ಚಿಂತಿಸುವ ವ್ಯಕ್ತಿ ಜಾತಿ, ಮತ, ಧರ್ಮ, ಸ್ವಾರ್ಥ ಇಂತವುಗಳನ್ನು ವರ್ಜಿಸಲೇಬೇಕಾಗುತ್ತದೆ.

ಈಗ ನಾವು ಬದುಕುತ್ತಿರುವ ಪರಿಸರ, ಪರಿಸ್ಥಿತಿ ಹಾಗೂ ವ್ಯವಸ್ಥೆಗಳನ್ನು ಗಮನಿಸಿದರೆ, ವ್ಯಥೆ ಆಗುವುದು ಅಷ್ಟೇ ಅಲ್ಲ, ಮುಂದಿನ ಜನಾಂಗಕ್ಕೆ ಒದಗಿಬರುವ ದುಸ್ಥಿತಿಯ ಬಗ್ಗೆ ಭಯವಾಗುತ್ತದೆ. ಇದಕ್ಕೆ ಇರುವ ಏಕೈಕ ಪರಿಹಾರ - ಪರಿಸರ ಮಾಲಿನ್ಯತೆಯಿಂದ ಹೊರತಾಗಿ ಸ್ವಚ್ಛವಾಗಬೇಕಾಗುತ್ತದೆ. ಪರಿಸ್ಥಿತಿ ಸುಧಾರಣೆಯಾಗಬೇಕಾಗುತ್ತದೆ. ವ್ಯವಸ್ಥೆಯಲ್ಲಿ ಅಮೂಲಾಗ್ರ ಬದಲಾವಣೆ ಬರಬೇಕಾಗಿದೆ. ಇದನ್ನು ಸಾಧಿಸಬೇಕಾದರೆ ''ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಉತ್ಕೃಷ್ಟ ಜೀವನ ವಿಧಾನದ ಜ್ವಲಂತ ಅನುಷ್ಠಾನ'' ಅತ್ಯವಶ್ಯಕ.

ನಾವು ವರ್ತಮಾನದಲ್ಲಿ ನಮ್ಮ ಸಕಲ ಶಕ್ತಿಸಾಮರ್ಥ್ಯಗಳನ್ನು ರಾಜಕೀಯ ವಲಯದಲ್ಲಿ ಮಾತ್ರ ಉನ್ನತ ಪರಿಕಲ್ಪನೆಯನ್ನು ಹೊಂದಿ, ಈ ಪರಿಕಲ್ಪನೆಯೇ ಅನುಸರಣೀಯ ವಾದುದೆಂದು ನಂಬಿದ್ದೇವೆ. ಆದ್ದರಿಂದಲೇ ಪರಿಸರದ ಸ್ವಚ್ಛತೆಯಾಗಲೀ, ಪರಿಸ್ಥಿತಿಯ ಸುಧಾರಣೆಯಾಗಲಿ, ವ್ಯವಸ್ಥೆಯ ಬಲಾವಣೆಯಾಗಲಿ ಸಾಧ್ಯವಿಲ್ಲವೆಂಬುದು ನನ್ನ ಅಚಲ ನಂಬಿಕೆ. ಸ್ವಾರ್ಥ ಸಾಧನೆಗಾಗಿ ಪರಿಸರವನ್ನು ಕೆಡಿಸಿ, ಪರಿಸ್ಥಿತಿಯನ್ನು ವಿಕೃತಗೊಳಿಸಿ, ವ್ಯವಸ್ಥೆಯನ್ನು ನಾಶ ಮಾಡಿ, ನಾವು ಹೇಗೆ ಬದುಕಲು ಸಾಧ್ಯ ಎನ್ನುವ ಕನಿಷ್ಠ ಅರಿವು ನಮಗೆ ಇಲ್ಲದಿರುವುದೇ, ಈ ಕಲುಷಿತ ಪರಿಸ್ಥಿತಿಗೆ ಕಾರಣವಾಗಿದೆ. ಮನುಷ್ಯನ ಭವಿಷ್ಯ ಸಹನೀಯ ವಾಗಬೇಕಾದಲ್ಲಿ, ನಮ್ಮ ಪಥ ಹಾಗೂ ಕಾರ್ಯ ಶೈಲಿಯಲ್ಲಿ ನಗ್ನ ಪಾಶವೀಯತೆಯ ಭೀತಿಗಿಂತ, ನ್ಯಾಯ ಮತ್ತು ಜನಹಿತ ನೀತಿಯನ್ನು ಕಠಿಣವಾಗಿ ಪ್ರತಿಪಾದಿಸಬೇಕಾಗುತ್ತದೆ. ಹಾಗು ಪಾಲನೆ ಮಾಡಬೇಕಾಗುತ್ತದೆ. ಇಂತಹ ಬದಲಾವಣೆಗಳನ್ನು ತರಲು ಪ್ರಯತ್ನಿಸುವಾಗ, ಪಟ್ಟಭದ್ರ ಹಿತಾಸಕ್ತಿಗಳಿಂದ ಒದಗಿಬರುವ ಅಡ್ಡಿ-ಆತಂಕಗಳನ್ನು ನಿಗ್ರಹಿಸುವುದು, ವೈಯಕ್ತಿಕ ಬದುಕಿನಲ್ಲಿ ಅಪಾರ ಬೆಲೆ ತೆರಬೇಕಾಗುವುದು ಅನಿವಾರ್ಯವಾಗಬೇಕಾಗುತ್ತದೆ.

ಈ ಎಲ್ಲಾ ನನ್ನ ನಂಬಿಕೆಗಳ ಹಿನ್ನೆಲೆಯಲ್ಲಿ, ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಅವಶ್ಯಕವಾದ ಜಾಗೃತ ಪ್ರಜೆಗಳಿಗಾಗಿ ಶಿಕ್ಷಣ ನಮ್ಮೆಲ್ಲಾ ಅಭಿವೃದ್ಧಿಗಳ ಸಾಧನೆ ಆದರೂ ನಮ್ಮನ್ನು ಕಿತ್ತು ತಿನ್ನುತ್ತಿರುವ

ಬಡತನ ನಿರ್ಮೂಲನಕ್ಕೆ ಜನಸಂಖ್ಯೆ ನಿಯಂತ್ರಣ ಹಾಗೂ ಕಲುಷಿತ ಪರಿಸರದ ಸ್ವಚ್ಛತೆಗಾಗಿ ಮರಗಿಡಗಳನ್ನು ಬೆಳೆಸುವುದು ಮತ್ತು ಉಳಿಸುವುದು. ಇವು ರಾಷ್ಟ್ರೀಯ ಕಾರ್ಯಕ್ರಮಗಳಾಗಬೇಕು ಎನ್ನುವುದು ನನ್ನ ನಂಬಿಕೆ.

1980ರ ದಶಕದಲ್ಲಿ ಈ ಜಿಲ್ಲೆಯಲ್ಲಿ ಅರಣ್ಯ ಇಲಾಖೆ, ತೋಟಗಾರಿಕೆ ಇಲಾಖೆ ವತಿಯಿಂದ ಜಿಲ್ಲೆಯ ಎಲ್ಲಾ ಇಲಾಖೆಗಳ ಸಹಕಾರಗಳೊಡನೆ, ಗಿಡಮರಗಳನ್ನು ನೆಡುವ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ ಮಾಡಲಾಯಿತು. ಈ ಕಾರ್ಯಕ್ರಮದಲ್ಲಿ ಇಡೀ ರಾಜ್ಯದಲ್ಲಿ ತುಮಕೂರು ಜಿಲ್ಲೆ ಪ್ರಥಮ ಸ್ಥಾನ ಪಡೆಯಿತು. ಅಂದು ಈ ಕಾರ್ಯಕ್ರಮದ ಯಶಸ್ಸಿಗೆ ಶ್ರಮಿಸಿದ ಎಲ್ಲರನ್ನೂ ನಾನು ಸ್ಮರಿಸುತ್ತೇನೆ. ಜಿಲ್ಲೆಯ ಎಲ್ಲಾ ಪ್ರಮುಖ ರಸ್ತೆಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಬೆಳೆದು ನಿಂತಿರುವ ಮರಗಳು ಈ ಕಾರ್ಯಕ್ರಮದ ಸಾಕ್ಷಿಯಾಗಿವೆ.

ಸರ್ಕಾರಿ ರಸ್ತೆಗಳಲ್ಲಿ ಬೆಳೆದು ನಿಂತಿರುವ ಲಕ್ಷಾಂತರ ಮರಗಳನ್ನು ಯಾರ ಹಿತಕ್ಕಾಗಿ ನಾವು ಬೆಳೆಸಿದೆವೋ, ಅದೇ ಜನಗಳು ಕಡಿದು ನಾಶಪಡಿಸುತ್ತಿದ್ದಾರೆ. ಈ ಗಿಡ-ಮರಗಳನ್ನು ನೆಡಲು ಮತ್ತು ಬೆಳೆಯಲು ಅಪಾರವಾಗಿ ಶ್ರಮಿಸಿದ ನನಗೆ ಅವುಗಳ ನಾಶ ಅತ್ಯಂತ ನೋವು ತಂದಿದೆ. ಈ ಸಾಲುಮರಗಳನ್ನು ರಕ್ಷಿಸಬೇಕೆಂದು ಅನೇಕರ ಮುಂದೆ ಅತ್ತು ಕರೆದುದಾಯಿತು, ಪತ್ರ ಬರೆದುದಾಯಿತು, ಆದರೆ ಪರಿಹಾರ ಶೂನ್ಯ. ಎಲ್ಲವನ್ನೂ ಸರಿ ಮಾಡಲಾಗದ, ನೋಡಿಕೊಂಡು ಸುಮ್ಮನೆ ಇರಲು ಆಗದ ಮನಸ್ಥಿತಿ ನನ್ನದು.

ಜಿಲ್ಲಾ ಆಡಳಿತದ ಮುಖ್ಯಸ್ಥರಾದ ತಾವಾದರೂ ಏನಾದರು ಮಾಡಬಲ್ಲಿರಿ ಎಂಬ ನಂಬಿಕೆಯಿಂದ ತಮಗೆ ಈ ಪತ್ರ ಬರೆಯುತ್ತಿದ್ದೇನೆ.

ಅರಣ್ಯ ಇಲಾಖೆ, ಲೋಕೋಪಯೋಗಿ ಇಲಾಖೆ ಮತ್ತು ಪೊಲೀಸ್ ಇಲಾಖೆ ಮನಸ್ಸು ಮಾಡಿ, ಕಾರ್ಯಪ್ರವೃತ್ತರಾದರೆ, ಈ ಜಿಲ್ಲೆಯ ರಸ್ತೆ ಬದಿಯಲ್ಲಿ ಬೆಳೆದು ನಿಂತಿರುವ ಸಾಲು ಮರಗಳನ್ನು ರಕ್ಷಿಸಲು ಸಾಧ್ಯ. ಈ ದೆಸೆಯಲ್ಲಿ ಸಂಬಂಧಪಟ್ಟ ಇಲಾಖೆ ಅಧಿಕಾರಿ ಗಳೊಡನೆ ಚರ್ಚಿಸಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಕೋರಿಕೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ಶ್ರೀಯುತ ಪಿ. ಎಂ. ವಿಠ್ಠಲಮೂರ್ತಿ, ಐ.ಎ.ಎಸ್
ಜಿಲ್ಲಾಧಿಕಾರಿಗಳು, ತುಮಕೂರು

ದಿನಾಂಕ 28-7-1997

ಮಾನ್ಯರೆ,

ದಿನಾಂಕ 9-7-1997ರಂದು ಬೆಳಗ್ಗೆ 9-00 ಗಂಟೆಗೆ ನಾನು ತಮ್ಮ ಅಧಿಕೃತ ನಿವಾಸದಲ್ಲಿ ಭೇಟಿಮಾಡಿ, ತುಮಕೂರು ಜಿಲ್ಲೆಯಲ್ಲಿ ಹೇಮಾವತಿ ನೀರಾವರಿ ಯೋಜನೆಗಳ ಅನುಷ್ಠಾನದಲ್ಲಿ ವಿಳಂಬವಾಗುತ್ತಿರುವ ಬಗ್ಗೆ ಚರ್ಚಿಸಿದ್ದು ಸರಿಯಷ್ಟೆ. ಅನೇಕ ವರ್ಷಗಳು, ರಾಜಕೀಯ ವ್ಯಕ್ತಿಯ ಶ್ರೇಯಸ್ಸಿಗಾಗಿ ನಾನು ಶ್ರಮಿಸಿದ ವ್ಯಕ್ತಿಯೊಬ್ಬರು ಮುಖ್ಯ ಮಂತ್ರಿಯಾದಾಗ, ಅವರು ನನ್ನನ್ನು ಭೇಟಿ ಮಾಡಲು ನಿರಾಕರಿಸಿದ ಅನಾಗರೀಕ ನಡವಳಿಕೆಯ ಕಹಿ ಅನುಭವ ಇರುವ ನನಗೆ, ಅಂದಿನ ತಮ್ಮ ನಡುವಳಿಕೆಗಾಗಿ ನಿಜವಾಗಿ ಸಂತೋಷವಾಯಿತು. ತಮ್ಮ ಮುಖ್ಯಮಂತ್ರಿ ಪದವಿ, ನನ್ನ ಪದವಿಯಿಲ್ಲದ ಪರಿಸ್ಥಿತಿ ಎರಡೂ ಪ್ರಾಮುಖ್ಯವಲ್ಲ ಹಾಗೂ ಶಾಶ್ವತವಲ್ಲ.

ಚರ್ಚೆಯ ಸಮಯದಲ್ಲಿ, ಹೇಮಾವತಿ ಪ್ರಮುಖ ನಾಲೆಯ ಕೆಲಸವನ್ನು 1997ನೇ ಆಗಸ್ಟ್ ತಿಂಗಳಿನೊಳಗಾಗಿ ಕುಣಿಗಲ್ ಕೆರೆಯವರೆಗೂ ಪೂರ್ಣಗೊಳಿಸಿ, ಅಲ್ಲಿಯ ಯೋಜನೆ ಪ್ರಕಾರ ಅಚ್ಚುಕಟ್ಟು ಸೃಷ್ಟಿಸಲು ಸರ್ಕಾರ ತೆಗೆದುಕೊಂಡಿರುವ ತೀರ್ಮಾನ ಹಾಗು ಈ ತೀರ್ಮಾನದ ಹಿನ್ನೆಲೆಯಲ್ಲಿ ಸರ್ಕಾರ ನಮಗೆ ನೀಡಿರುವ ಆಶ್ವಾಸನೆಯನ್ನು ಅಂದು ತಮ್ಮ ಗಮನಕ್ಕೆ ತಂದಿರುತ್ತೇನೆ. ಆದರೆ ಈಗ ಯೋಜನೆ ಅನುಷ್ಠಾನಗೊಳ್ಳುತ್ತಿರುವ ರೀತಿಯನ್ನು ಗಮನಿಸಿದರೆ, ಸರ್ಕಾರವು ನೀಡಿರುವ ಆಶ್ವಾಸನೆ ಪ್ರಕಾರ, 1997ನೇ ಆಗಸ್ಟ್ ತಿಂಗಳಿನೊಳಗಾಗಿ ಕೆಲಸಗಳನ್ನು ಪೂರ್ಣಗೊಳಿಸಲು ಸಾಧ್ಯವಾಗುವುದಿಲ್ಲ ಎನ್ನುವ ನನ್ನ ಅಭಿಪ್ರಾಯವನ್ನು ತಮ್ಮ ಗಮನಕ್ಕೆ ತರುತ್ತೇನೆ. ಅವಧಿಯೊಳಗಾಗಿ ಕೆಲಸಗಳನ್ನು ಮುಗಿಸಲು ತಾವು ಸಂಬಂಧಪಟ್ಟ ಸಚಿವರು ಹಾಗೂ ಅಧಿಕಾರಿಗಳೊಡನೆ ಯೋಜನಾ ಪ್ರದೇಶಕ್ಕೆ ಭೇಟಿ ನೀಡಿ. ತುಮಕೂರಿನಿಂದ ಕುಣಿಗಲ್‌ವರೆಗೆ ಈಗ ನಡೆಯುತ್ತಿರುವ ಕೆಲಸಗಳನ್ನು ಪರಿಶೀಲಿಸಿ ಸಭೆ ಮಾಡಿ. ಅವಶ್ಯಕವಿರುವ ಹಣ ಬಿಡುಗಡೆ ಮಾಡಿ ಕೆಲಸಗಳನ್ನು ಚುರುಕುಗೊಳಿಸಿ ನಿಗದಿತ ಅವಧಿಯೊಳಗೆ ಮುಗಿಸಲು ಕ್ರಮ ತೆಗೆದುಕೊಳ್ಳುವುದಾಗಿ ತಮ್ಮನ್ನು ಪ್ರಾರ್ಥಿಸಿಕೊಂಡೆವು. ತಾವು 1997ನೇ ಆಗಸ್ಟ್ ತಿಂಗಳು 18ನೇ ತಾರೀಖಿನಿಂದ 25ನೇ ತಾರೀಖಿನೊಳಗಾಗಿ ಯೋಜನಾ ಪ್ರದೇಶಕ್ಕೆ ಭೇಟಿ ನೀಡಿ ಪ್ರಗತಿ ಪರಿಶೀಲನೆ ಮಾಡಿ, ಕೆಲಸ ಮುಗಿಸಲು ಎಲ್ಲಾ ಕ್ರಮ ತೆಗೆದುಕೊಳ್ಳುವುದಾಗಿ ಹೇಳಿದಿರಿ. ಇಲ್ಲಿ ನಾನು 25.7.1997ನೇ ತಾರೀಖಿನವರೆಗೂ ತಮ್ಮ ಆಹ್ವಾನಕ್ಕಾಗಿ ಕಾದು ಕುಳಿತೆ. ಆದರೆ ತಾವು ತಮ್ಮ ಆಶ್ವಾಸನೆ ನೀಡಿದ ಪ್ರಕಾರ ಬರಲಿಲ್ಲ. ಹಾಗೂ ಬರದೇ ಇರಲು ಕಾರಣವೇನೆಂದು ತಿಳಿಸಲಿಲ್ಲ. ತಮ್ಮನ್ನು ಭೇಟಿ ಮಾಡಿ ಬಂದ ಮೇಲೆ, ನಾನು ಸಂತೋಷದಿಂದ ತಮ್ಮ ಬೇಡಿಕೆಯ ವಿಷಯವನ್ನು ಪತ್ರಿಕೆಗಳಿಗೆ ಸೇರಿದಂತೆ ಎಲ್ಲರಿಗೂ ತಿಳಿಸಿದೆ. ತಾವು ಮಾತಿನ ಪ್ರಕಾರ ಬರಲಿಲ್ಲ. ಲಕ್ಷಾಂತರ ಜನರ ಭೂಮಿಗೆ ನೀರು ಹರಿದು, ಅವರ ಹಸಿದ ಹೊಟ್ಟೆಗೆ ಅನ್ನ ದೊರಕುವ ಹಾಗೂ ಬಾಯಾರಿದವರಿಗೆ

ನೀರು ಕೊಡುವ ಪವಿತ್ರ ಕೆಲಸ ಬೇಗ ಆಗಲೆಂದು ತಮ್ಮನ್ನು ಭೇಟ ಮಾಡಿ ಬೇಡಿಕೊಂಡೆನೆ ಹೊರತು, ಯಾವುದೇ ವೈಯಕ್ತಿಕ ಅಥವಾ ರಾಜಕೀಯ ಕಾರಣಕ್ಕಾಗಿ ಅಲ್ಲ.

ತಾವು ಭೇಟ ನೀಡಲು ಒಪ್ಪಿರಲಿಲ್ಲ. ರಾಮಯ್ಯ ಸುಳ್ಳು ಹೇಳಿ ತಮ್ಮ ಒಣ ಪ್ರತಿಷ್ಠೆಯ ಪ್ರದರ್ಶನ ಮಾಡಲು ಈ ಸುದ್ದಿಯನ್ನು ಪತ್ರಿಕೆಗಳಲ್ಲಿ ಹೊರಡಿಸಿದರೆ? ಎಂದು ನನ್ನ ಬಗ್ಗೆ ಸಾರ್ವಜನಿಕರಲ್ಲಿ ತಪ್ಪು ಅಭಿಪ್ರಾಯ ಮೂಡುವ ಅಪಾಯವಿರುವುದರಿಂದ, ದಯಮಾಡಿ ಈಗಲಾದರು ಯೋಜನಾ ಪ್ರದೇಶಕ್ಕೆ ಭೇಟಿ ನೀಡುವ ಕೃಪೆ ತೋರಬೇಕೆಂದು ಅಥವಾ ತಮಗೆ ಯಾವುದೇ ಕಾರಣಕ್ಕಾಗಿ ಭೇಟ ನೀಡಲು ಸಾಧ್ಯವಾಗದೆಯಿದ್ದಲ್ಲಿ, ಯಾವ ಕಾರಣಕ್ಕಾಗಿ ತಾವು ಬರಲು ಸಾಧ್ಯವಾಗುವುದಿಲ್ಲ ಎಂದು ನನಗೆ ತಿಳಿಸುವ ಉಪಕಾರವನ್ನಾದರೂ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಈ ಪತ್ರಕ್ಕೆ ಉತ್ತರ ಬರೆಸುವ ಕೃಪೆ ಮಾಡುವಿರೆಂದು ನನ್ನ ಭಾವನೆ.

ಇಂತಿ ನಮಸ್ಕಾರಗಳು
**ವೈ.ಕೆ. ರಾಮಯ್ಯ**

ಮಾನ್ಯ ಶ್ರೀ ಜೆ.ಎಚ್. ಪಟೇಲ್‌ರವರು
ಮುಖ್ಯಮಂತ್ರಿಗಳು
ಕರ್ನಾಟಕಸರ್ಕಾರ
ವಿಧಾನಸೌಧ, ಬೆಂಗಳೂರು.

# ಮಂಗಳೂರಿಗೆ ಬೆಂಗಳೂರಿನ ತರಕಾರಿ

ದ.ಕ. ಜಿಲ್ಲೆಯಲ್ಲಿ ತರಕಾರಿ ಮತ್ತು ಹಣ್ಣುಗಳ ಬೆಲೆ ಏರಿಕೆ ಗಮನಿಸಿ, ಅದನ್ನು ಸಾಧ್ಯವಾದಷ್ಟು ಮಟ್ಟಿಗೆ ಪರಿಹರಿಸುವ ನಿಟ್ಟಿನಲ್ಲಿ ರಾಜ್ಯದ ತೋಟಗಾರಿಕಾ ಇಲಾಖೆ ಮಂಗಳೂರು ನಗರದಲ್ಲಿ ಬೆಂಗಳೂರಿನ ತೋಟಗಾರಿಕಾ ಬೆಳೆಗಾರರ ತರಕಾರಿ ಸಂಸ್ಕರಣ ಮತ್ತು ಮಾರಾಟ ಸಂಘದ ಮೂಲಕ, ತರಕಾರಿ ಮತ್ತು ಹಣ್ಣು ಹಂಪಲುಗಳ ಮಾರಾಟ ಪ್ರಾರಂಭಿಸಲು ನಿರ್ಧರಿಸಿದೆಯೆಂದು ರಾಜ್ಯದ ತೋಟಗಾರಿಕಾ ಸಚಿವ ಶ್ರೀ ವೈ.ಕೆ. ರಾಮಯ್ಯ ಅವರು ಇಂದಿಲ್ಲಿ ಪತ್ರಕರ್ತರಿಗೆ ತಿಳಿಸಿದರು.

ಬೆಂಗಳೂರಲ್ಲಿ ಈ ಸಹಕಾರಿ ಸಂಸ್ಥೆ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿದ್ದು ದಿನವೊಂದಕ್ಕೆ 60 ಟನ್‌ಗಳಿಗೂ ಹೆಚ್ಚು ತರಕಾರಿ ಹಾಗೂ ಹಣ್ಣುಹಂಪಲುಗಳನ್ನು ಬೆಂಗಳೂರು, ಮೈಸೂರು ಮತ್ತು ತುಮಕೂರುಗಳಲ್ಲಿ ಮಾರಾಟ ಮಾಡುತ್ತಿದೆ. ಮಂಗಳೂರಲ್ಲಿ ಅದೇ ರೀತಿ ತರಕಾರಿ ಮತ್ತು ಹಣ್ಣು ಹಂಪಲುಗಳ ಮಾರಾಟ ಪ್ರಾರಂಭಿಸುವಂತೆ ಅವರಿಗೆ ತಾವು ತಿಳಿಸಿರುವುದಲ್ಲದೆ, ಅದಕ್ಕೆ ಬೇಕಾದ ಪೂರ್ವಭಾವಿ ಸಿದ್ಧತೆಗಳ ಬಗ್ಗೆ ತಾವು ವಿಚಾರ ವಿನಿಮಯ ಮಾಡಿರುವುದಾಗಿ ಹೇಳಿ, ಅದಕ್ಕೆ ಬೇಕಾದ ಸ್ಥಳಾವಕಾಶವನ್ನು ಒದಗಿಸಲು ಮೇಯರ್ ಅವರು ಮುಂದೆ ಬಂದಿದ್ದಾರೆಂದು ತಿಳಿಸಿದರು.

ಪ್ರಕೃತ ಶೇಡಿಗುಡ್ಡೆ ಮಾರ್ಕೆಟ್‌ನಲ್ಲಿ ಬೆಂಗಳೂರಿನ ಸಹಕಾರಿ ಸಂಸ್ಥೆಯ ರಖಂ ವಿಭಾಗ ತೆರೆದು ಅಲ್ಲಿಂದ ನಗರದ ಬೇರೆ ಬೇರೆ ಎಂಟು ಬಡಾವಣೆಗಳಲ್ಲಿ ಚಿಲ್ಲರೆ ಮಾರಾಟದ ವ್ಯವಸ್ಥೆ ಮಾಡಲು ಉದ್ದೇಶಿಸಲಾಗಿದೆ. ಈಗಾಗಲೇ ಕಂಕನಾಡಿ, ಕರಮಗಲ್ಪಾಡಿ, ಮಹಾನವಮಿ ಕಟ್ಟೆ ಮತ್ತು ಲೇಡಿ ಹಿಲ್‌ಗಳಲ್ಲಿ ಚಿಲ್ಲರೆ ವ್ಯಾಪಾರ ನಡೆಸಲು ಸ್ಥಳ ಗೊತ್ತು ಮಾಡಲಾಗಿದೆ. ರಖಂ ವಿಭಾಗದಲ್ಲಿ ಸ್ಥಳೀಯ ತೋಟಗಾರಿಕಾ ಬೆಳೆಗಾರರ ಉತ್ಪನ್ನಗಳನ್ನು ಖರೀದಿಸುವ ವ್ಯವಸ್ಥೆಯನ್ನು ಮಾಡುವಂತೆ ತಿಳಿಸಲಾಗಿದೆ ಎಂದು ವಿವರಿಸಿದ ಸಚಿವರು, ಈ ಮಾರಾಟ ವ್ಯವಸ್ಥೆಯನ್ನು ಮಂಗಳೂರಿನಲ್ಲಿ ಇದೇ ಸೆಪ್ಟೆಂಬರ್ 23ರಂದು ಪ್ರಾರಂಭಿಸಲು ನಿರ್ಧರಿಸಿವುದಾಗಿ ಪ್ರಕಟಿಸಿದರು.

ಈ ತರಕಾರಿ ಮತ್ತು ಹಣ್ಣುಹಂಪಲು ಮಾರಾಟದ ಬಗ್ಗೆ ಸೂಕ್ತ ವ್ಯವಸ್ಥೆ ಮಾಡಲು ತಾವು ಇಲಾಖೆಯ ಹಿರಿಯ ಅಧಿಕಾರಿಗಳೊಬ್ಬರನ್ನು ಇಲ್ಲಿಗೆ ಕಳುಹಿಸುವುದಾಗಿ ಹೇಳಿದ ಸಚಿವರು. ಈ ವ್ಯವಸ್ಥೆ ಯಶಸ್ವಿಯಾಗಿ ನಡೆಯುವಂತೆ ಇಲ್ಲಿನ ಸಾರ್ವಜನಿಕರು ಸಹಕರಿಬೇಕೆಂದು ವಿನಂತಿಸಿದರು.

(**ಉದಯವಾಣಿ** : 25-8-1987)

## ಹಣ್ಣು-ತರಕಾರಿಗೆ ಸಹಕಾರಿ ವ್ಯವಸ್ಥೆ

**ಹಣ್ಣು - ತರಕಾರಿ ಬೆಳೆಗಾರರಿಗೆ ನ್ಯಾಯವಾದ ಬೆಲೆ ದೊರೆಯುವ ಉದ್ದೇಶದಿಂದ ರಾಜ್ಯಾದ್ಯಂತ ಕೆ.ಎಂ.ಎಫ್ ಮಾದರಿಯ ಸಹಕಾರಿ ಸಂಘಗಳ ಜಾಲ ವಿಸ್ತರಿಸುವ ಯೋಜನೆಯನ್ನು ತೀವ್ರವಾಗಿ ಪರಿಶೀಲಿಸಲಾಗುತ್ತಿದೆ ಎಂದು ರಾಜ್ಯ ತೋಟಗಾರಿಕೆ ಇಲಾಖೆ ಸಚಿವ ವೈ.ಕೆ. ರಾಮಯ್ಯ ಇಲ್ಲಿ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.**

ದಿಲ್ಲಿಯಲ್ಲಿ ಇರುವ ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿ ಮಾದರಿಯಲ್ಲಿ ಇಂಥ ಜಾಲ ವಿಸ್ತರಿಸುವ ಬಗ್ಗೆ ವ್ಯವಹರಿಸಲಾಗುತ್ತಿದೆ. ಇದರ ಮುಖ್ಯಸ್ಥ ಡಾ. ಕುರಿಯನ್ ಅವರು ಆಸ್ಥೆ ತೋರಿಸಿದ್ದು, ಈ ಯೋಜನೆ ಬಗ್ಗೆ ಮುಖ್ಯಮಂತ್ರಿಗಳಿಂದ ಒಪ್ಪಿಗೆಯೂ ಸಿಕ್ಕಿದೆ ಎಂದು ಹೇಳಿದರು. ಇದು 30 ಕೋಟಿ ರೂಪಾಯಿ ಯೋಜನೆ ಆಗಿದೆ.

ತೋಟಗಾರಿಕೆ ಉತ್ಪನ್ನಗಳ ನ್ಯಾಯವಾದ ಬೆಲೆ ಸಿಕ್ಕುವ ಬಗ್ಗೆ ಅಪೆಕ್ಸ್ ಮಾದರಿಯ ಸಂಘದ ಬಗ್ಗೆಯೂ ವಿಚಾರಿಸಲಾಗುತ್ತಿದೆ ಎಂದು ತಿಳಿಸಿದರು. ಮುಂದಿನ ಮುಂಗಾರು ಮಳೆಯ ವೇಳೆಗೆ ರಾಜ್ಯಾದ್ಯಂತ ಅವಶ್ಯ ಇರುವ ತೆಂಗು ಹಾಗೂ ಮಾವು ಸಸಿಗಳನ್ನು ರೈತರಿಗೆ ಒದಗಿಸುವುದಾಗಿ ಸಚಿವ ರಾಮಯ್ಯ ತಿಳಿಸಿದರು.

ನೆದರಲ್ಯಾಂಡ್ ಸರಕಾರದ ಸಹಾಯದಿಂದ ಬೆಂಗಳೂರು ಸಮೀಪ ಹಾಗೂ ಕುಣಿಗಲ್ ಬಳಿ ಸುಧಾರಿಸಿದ ಸಸ್ಯೋದ್ಯಾನವನ್ನು 600 ಎಕರೆ ಪ್ರದೇಶದಲ್ಲಿ ಬೆಳೆವ ಯೋಜನೆ ಸಿದ್ಧವಾಗಿದ್ದು ಇದಕ್ಕೆ ಒಪ್ಪಿಗೆಯೂ ಸಿಕ್ಕಿದೆ ಎಂದು ಹೇಳಿದರು. ಅಖಿಲ ಭಾರತ ಪರಿಶಿಷ್ಟ ಜಾತಿ ಅಭಿವೃದ್ಧಿ ಸಂಘದ ಆಶ್ರಯದಲ್ಲಿ ಈ ತೋಟಗಾರಿಕೆ ಕೆಲಸ ಕೈಕೊಳ್ಳಲಾಗುವುದು. ನಿರ್ಯಾತ ಮಾಡುವ ಹಣ್ಣು, ತರಕಾರಿ ಇಲ್ಲಿ ಬೆಳೆಯಲಾಗುತ್ತಿದೆ. ಈ ಸಂಘದ ಒಂದು ಶಾಖೆ ದಿಲ್ಲಿಯಲ್ಲಿ ಇದ್ದು ಕರ್ನಾಟಕದಲ್ಲಿ ಪ್ರಾರಂಭಿಸುವ ಮೊದಲನೇ ಸಂಸ್ಥೆ ಇದಾಗಿದೆ.

**(ಸಂಯುಕ್ತ ಕರ್ನಾಟಕ : 3-7-1987)**

## ನಗರದ ನಾಲ್ಕು ದಿಕ್ಕುಗಳಲ್ಲೂ ಲಾಲ್‌ಬಾಗ್ ತರಹ ಉದ್ಯಾನ

**ರಾಜ್ಯದ ಪ್ರತಿಯೊಂದು ಜಿಲ್ಲೆಯ ಒಂದೊಂದು ಉದ್ಯಾನವನ್ನು ತೋಟಗಾರಿಕೆ ಇಲಾಖೆ ವಹಿಸಿಕೊಂಡು ಅಭಿವೃದ್ಧಿ ಪಡಿಸಲು ಯೋಚಿಸಲಾಗುತ್ತಿದೆ ಎಂದು ತೋಟಗಾರಿಕೆ ಖಾತೆ ಸಚಿವ ವೈ.ಕೆ. ರಾಮಯ್ಯ ತಿಪಟೂರಿನಲ್ಲಿ ಸಂಜೆವಾಣಿಗೆ ತಿಳಿಸಿದರು.**

ಸುಮಾರು 33 ಕೋಟಿ ರೂ. ವೆಚ್ಚದಲ್ಲಿ ರಾಜ್ಯ ಮಟ್ಟದಲ್ಲೊಂದು ವ್ಯವಸ್ಥಿತ ತರಕಾರಿ, ಹೂ, ಹಣ್ಣು-ಹಂಪಲು ಮಾರುಕಟ್ಟೆ (ಸಂಸ್ಕರಣ - ಉಗ್ರಾಣ) ಸ್ಥಾಪಿಸಲು ಯೋಜಿಸಲಾಗಿದ

ಎಂದರು. ಲಾಲ್‌ಬಾಗ್ ಮಾದರಿಯಲ್ಲಿ ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲಿ ಬೃಹತ್ ಉದ್ಯಾನವನಗಳನ್ನು ಆರಂಭಿಸಲು ಪ್ರಯತ್ನ ನಡೆಸಲಾಗಿದೆ.

**ಅಖಿಲ ಭಾರತ ಪ.ಶಿ. ಜಾತಿ ಮತ್ತು ಪ.ಶಿ. ವರ್ಗ ಕೋ-ಆಪರೇಟಿವ್ ಸೊಸೈಟಿ ಯೋಜನೆಯಡಿ ಸುಮಾರು 40 ಕೋಟಿ ರೂ. ಯೋಜನೆಯೊಂದನ್ನು ರೂಪಿಸಲಾಗಿದ್ದು 500 ಎಕರೆ ಜಮೀನಿನಲ್ಲಿ ತರಕಾರಿ, ಹೂ, ಹಣ್ಣು ಬೆಳೆಸಿ ಹೊರದೇಶಗಳಿಗೆ ರಫ್ತು ಮಾಡಲಾಗುವುದೆಂದರು. ಹೂ, ಹಣ್ಣು, ತರಕಾರಿ ಬೆಳೆದು ಹೊರದೇಶಕ್ಕೆ ರಫ್ತು ಮಾಡುವುದರಲ್ಲಿ ಭಾರತದಲ್ಲೇ ಇದು ಪ್ರಥಮವಾಗಿದೆ ಎಂದರು.**

ರಾಜ್ಯದಲ್ಲಿ ಕಸಿ ಮಾವಿನ ಗಿಡಕ್ಕೆ ಬೇಡಿಕೆ ಇರುವುದರಿಂದ ಈವರೆಗೆ 60 ಲಕ್ಷ ಕಸಿಯಾದ ಮಾವಿನ ಸಸಿಗಳನ್ನು ನೆಡಲಾಗಿದೆ. ಸರ್ಕಾರ ಉದ್ದೇಶಿಸಿರುವ ಮಕ್ಕಳ ಉದ್ಯಾನವನ ನಿರ್ಮಾಣಕ್ಕೆ ಈಗಾಗಲೇ ರೇಸ್‌ಕೋರ್ಸನ್ನು ಸ್ಥಳಾಂತರಿಸಲು ಸರ್ಕಾರ ಪೂರ್ಣ ಕ್ರಮ ಕೈಗೊಳ್ಳುತ್ತಿದೆ ಎಂದರು.

**(ಸಂಜೆವಾಣಿ : 5-12-1987)**

## ಹೇಮಾವತಿ ಯೋಜನೆಗೆ ಪೂರ್ಣ ಹಣ ನೀಡುವುದಾದರೆ ಜಿಲ್ಲೆ ಮಂತ್ರಿ ಪದವಿಯೇ ಬೇಡ

**ಹೇಮಾವತಿ ಯೋಜನೆಯನ್ನು ಪೂರ್ಣಗೊಳಿಸಿ ತುಮಕೂರು ಜಿಲ್ಲೆಗೆ ನೀರು ಹರಿಸುವಲ್ಲಿ ಯಾವುದೇ ದೊಡ್ಡ ವಿರೋಧ ಶಕ್ತಿ ಎದುರಾದರೂ ಅದನ್ನು ಎದುರಿಸಿ ಶಕ್ತಿ ಇರುವವರೆವಿಗೂ ಹೋರಾಡಿ ಹೇಮಾವತಿ ನೀರನ್ನು ಜಿಲ್ಲೆಗೆ ಹರಿಸುತ್ತೇನೆ. ಮಂತ್ರಿ ಪದವಿಯ ಚಪಲಕ್ಕಿಂತ, ಜಿಲ್ಲೆಯ ಭೂಮಿಗೆ ನೀರುಣಿಸುವುದೆ ನನಗೆ ಮುಖ್ಯ. ಸರ್ಕಾರ ಹೇಮಾವತಿ ಯೋಜನೆಗೆ ಪೂರ್ಣ ಹಣ ಬಿಡುಗಡೆ ಮಾಡುವುದೇ ಆದರೆ, ನನಗೆ ಮಂತ್ರಿ ಪದವಿಯೇ ಬೇಡ ಎಂದು ತಿಳಿಸಿದ ಮಾಜಿ ಸಚಿವ ಹಾಗೂ ಶಾಸಕ ವೈ.ಕೆ .ರಾಮಯ್ಯ ಈ ಬಗ್ಗೆ ಸದ್ಯದಲ್ಲೇ ರೈತರ ಬೃಹತ್ ಸಮ್ಮೇಳನ ಕರೆಯಲಿದ್ದೇನೆ ಎಂದು ತಿಳಿಸಿದರು.**

ತುಮಕೂರು ತಾಲ್ಲೂಕು ನಾಗವಲ್ಲಿಯಲ್ಲಿಂದು ಹೇಮಾವತಿ ನಾಲಾ ಉಪ ವಿಭಾಗದ ವಸತಿ ಗೃಹಗಳ ಕಟ್ಟಡ ನಿರ್ಮಾಣಕ್ಕೆ ಗುದ್ದಲಿಪೂಜೆ ನೆರವೇರಿಸಿ ಶಾಸಕ ರಾಮಯ್ಯ ಮಾತನಾಡುತ್ತಿದ್ದರು.

ಗೊರೂರಿನಲ್ಲಿ ನಿರ್ಮಿಸಿರುವ ಹೇಮಾವತಿ ಡ್ಯಾಮ್ ಸುಮಾರು 5-6 ಲಕ್ಷ ಎಕರೆಗೆ ನೀರೊದಗಿಸುವ ಸಾಮರ್ಥ್ಯ ಹೊಂದಿದೆ. 1976ರಲ್ಲಿ ಪೂರ್ಣಗೊಂಡ ಈ ಡ್ಯಾಂನಿಂದ ಕೇವಲ

1.2 ಲಕ್ಷ ಎಕರೆ ಭೂಮಿಗೆ ನೀರು ಬಳಸುತ್ತಿರುವುದು ದುರದೃಷ್ಟಕರ. ಹಾಗೂ ಜಲಸಂಪತ್ತಿನಿಂದ ರೈತರನ್ನು ಸರ್ಕಾರ ವಂಚಿಸುತ್ತಿದೆ ಎನ್ನುವುದು ಸುಸ್ಪಷ್ಟ ಎಂದು ತಿಳಿಸಿದ ರಾಮಯ್ಯ ಅವರು, ಸರ್ಕಾರದ ಉದಾಸೀನತೆ ಬಗ್ಗೆ ತಮ್ಮ ವಿಷಾದ ವ್ಯಕ್ತಪಡಿಸಿದರು.

ಇನ್ನು ನಾಲ್ಕೈದು ವರ್ಷಗಳಲ್ಲಾದರು ಹೇಮಾವತಿ ನೀರಿನ ಪೂರ್ಣ ಬಳಕೆಯ ಬಗ್ಗೆ ತಮ್ಮ ಆಶಾ ಭಾವನೆಯನ್ನು ವೈ.ಕೆ.ಆರ್. ವ್ಯಕ್ತಪಡಿಸಿದರು.

ಮುಂದುವರೆದು ಮಾತನಾಡಿದ ಅವರು, ಸರ್ಕಾರ ಹೇಮಾವತಿ ಯೋಜನೆ ಬಗ್ಗೆ ಉದಾಸೀನತೆ ತೋರುವುದು ಮುಂದುವರಿಯುವುದೇ ಆದರೆ, ತಾನು ಸರ್ಕಾರದ ನೀತಿ ವಿರುದ್ಧ ಸಿಡಿದೇಳಲು ಸಿದ್ದನಿದ್ದೇನೆ ಎಂದು ಸ್ಪಷ್ಟಪಡಿಸಿದರು.

ಹತ್ತಾರು ಸಲ ಹೇಮಾವತಿ ಯೋಜನೆ ಕುರಿತಂತೆ ಜಿಲ್ಲೆಯ ಜನ ಪ್ರತಿನಿಧಿಗಳ ಸಭೆ ಕರೆದೆ. ಇದಕ್ಕೆ ಹಲವು ಲೀಡರ್ ಎನಿಸಿದವರು ಕಿವಿಗೊಡಲಿಲ್ಲ , ಏನೇ ಅಡ್ಡಿ ಆತಂಕಗಳು ಎದುರಾದರೂ, ಈ ಯೋಜನೆಗೆ ಜನಮನ್ನಣೆ ಇದೆ ಎಂದು ನಾನು ಭಾವಿಸಿದ್ದೇನೆ. ಜನಾಭಿಪ್ರಾಯಕ್ಕಾಗಿಯೇ ಸೆಪ್ಟೆಂಬರ್ ಕೊನೆಯಲ್ಲಿ ಗುಬ್ಬಿ ಇಲ್ಲವೇ ತುರುವೇಕೆರೆಯಲ್ಲಿ ರೈತರ ಬೃಹತ್ ಸಮ್ಮೇಳನವೊಂದನ್ನು ಕರೆಯಲಿದ್ದೇನೆ ಎಂದು ರಾಮಯ್ಯ ತಿಳಿಸಿದರು. ಸದ್ಯದಲ್ಲೇ ಯೋಜನೆ ಕುರಿತಂತೆ ಹೋರಾಟ ಸಮಿತಿಯೊಂದನ್ನು ರಚಿಸುವುದಾಗಿ ಈ ಸಂದರ್ಭದಲ್ಲಿ ರಾಮಯ್ಯ ತಿಳಿಸಿದರು.

1988-89ನೇ ಸಾಲಿನ ಆಯವ್ಯಯದಲ್ಲಿ ಹೇಮಾವತಿ ಯೋಜನೆಗೆ 21 ಕೋಟಿ ರೂ.ಗಳನ್ನು ನಿಗದಿ ಪಡಿಸಿದ್ದು, ಅದನ್ನು 10 ಕೋಟಿ ರೂ.ಗಳಿಗೆ ಇಳಿಸಿರುವುದು ತುಂಬಾ ನೋವುಂಟು ಮಾಡಿದೆ. ಇದು ಈ ಜಿಲ್ಲೆಯ ರೈತರ ದುರದೃಷ್ಟಕರ ಎಂದು ರಾಮಯ್ಯ ತಿಳಿಸಿದರು. 8 ಕಿ.ಮೀ. ಬಾಗೂರು-ನವಿಲೆ ಸುರಂಗ ಕಾರ್ಯ ಪೂರ್ಣಗೊಂಡಿದ್ದು, ಮತ್ತೊಂದು ಕಠಿಣ ಪರಿಸ್ಥಿತಿಯ ಕೆಲಸ ಎದುರಾಗಿದೆ. ಅದು 100 ರಿಂದ 120 ಅಡಿ ಆಳದ ಆಳಗಾಲುವೆ (ಡೀಪ್ ಕಟ್ ಚಾನಲ್) ಕೆಲಸ ಪೂರ್ಣಗೊಳ್ಳಬೇಕಿದೆ. ಈ ಕಾಲುವೆ ತೋಡುವಾಗ 20 ರಿಂದ 25 ವರ್ಷ ವಯಸ್ಸಿನ ಸಾವಿರಾರು ತೆಂಗಿನ ಮರಗಳು ನಾಶವಾಗುವು ದರಲ್ಲಿವೆಯಾದರೂ ಅಲ್ಲಿನ ರೈತರು ಮರಗಳನ್ನು ತ್ಯಾಗ ಮಾಡಿದ್ದಾರೆ ಎಂದು ಪ್ರಶಂಸೆ ವ್ಯಕ್ತಪಡಿಸಿದರು.

**ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಪರಿಷತ್ ಅಧ್ಯಕ್ಷ ಹೆಚ್. ನಿಂಗಯ್ಯ ಮಾತನಾಡಿ, ಹೇಮಾವತಿಯ ಯೋಜನೆಯ ಬಗ್ಗೆ ವಿರೋಧಪಕ್ಷದವರ ಊಹಾಪೋಹದ ಮಾತುಗಳು ಹುಸಿಯಾಗುತ್ತಿವೆ. ಯೋಜನೆ ಸಫಲವಾಗುವುದರಲ್ಲಿ ಸಂಶಯವಿಲ್ಲ. ಜಿಲ್ಲೆಗೆ ಹೇಮಾವತಿ ನೀರು ಹರಿಯುವುದು ಖಂಡಿತ ಎಂದು ತಿಳಿಸಿದ ಅವರು, ಈ ಯೋಜನೆಗೆ ಹೆಚ್ಚಿನ ಹಣ**

ಬಿಡುಗಡೆಗೆ ಒತ್ತಾಯಿಸಲು ಸದ್ಯದಲ್ಲೇ ಜಿಲ್ಲಾಪರಿಷತ್ತಿನ ನಿಯೋಗವೊಂದು ಮುಖ್ಯ ಮಂತ್ರಿಗಳ ಬಳಿಗೆ ಹೋಗಲಿದೆ ಎಂದು ತಿಳಿಸಿದರು.

ಸಮಾರಂಭದಲ್ಲಿ ಮಾತನಾಡಿದ ಜಿಲ್ಲಾ ಪರಿಷತ್ ಸದಸ್ಯೆ ನಂಜಮ್ಮ ವೆಂಕಟೇಗೌಡ ಅವರು ಹೇಮಾವತಿ ಯೋಜನೆಯ ಸಫಲತೆಯಲ್ಲಿ ವೈ.ಕೆ.ಆರ್ ಅಭಿನಂದನಾರ್ಹರು ಎಂದರು.

(ಪ್ರಜಾಪ್ರಗತಿ : 9-9-1988)

## ಅಧಿಕಾರಾವಧಿಯಲ್ಲಿ ಯಾವುದೇ ಆಸ್ತಿಪಾಸ್ತಿ ಮಾಡಿಲ್ಲ : ರಾಮಯ್ಯ

ಶಾಸಕ, ಗೃಹಮಂಡಳಿ ಅಧ್ಯಕ್ಷ ಮತ್ತು ಸಚಿವ ಆಗಿದ್ದ ಈ ಆರು ವರ್ಷದ ಅವಧಿಯಲ್ಲಿ, ಒಂದೇ ಒಂದು ಚಿಕ್ಕಾಸಿನ ಆಸ್ತಿಪಾಸ್ತಿಯನ್ನೂ ತಾವು ಮಾಡಿಕೊಂಡಿಲ್ಲ ಎಂದು ಮಾಜಿ ಸಚಿವರೂ ಜನತಾ ಪಕ್ಷದ ನಾಯಕ ಎಚ್.ಡಿ. ದೇವೇಗೌಡರ ನಿಕಟವರ್ತಿಗಳೂ ಆದ ವೈ.ಕೆ. ರಾಮಯ್ಯ ಇಂದು ಇಲ್ಲಿ ಸ್ಪಷ್ಟಪಡಿಸಿದರು.

ಕುಣಿಗಲ್ ತಾಲ್ಲೂಕಿನ ಹೊಸಹಳ್ಳಿ ಗ್ರಾಮದಲ್ಲಿ 31 ಎಕರೆ ತೋಟದ ಭೂಮಿ ಇದ್ದು ಇದು 1979ರಲ್ಲಿ ಗಳಿಸಿದ ಸ್ವಯಾರ್ಜಿತ ಆಸ್ತಿ. ಇದೇ ತಾಲ್ಲೂಕಿನ ಎಲೆಕಡಕಲು ಗ್ರಾಮ ಹಾಗೂ ನಿಡಸಾಲೆ ಗ್ರಾಮದಲ್ಲಿ ಒಟ್ಟು 27.6 ಎಕರೆ ಪಿತ್ರಾರ್ಜಿತ ಆಸ್ತಿ ಇದೆ. ಮದ್ದೂರು ತಾಲ್ಲುಕಿನ ಬೆಸಗರಹಳ್ಳಿಯಲ್ಲಿ ನನ್ನ ಪತ್ನಿ ಹೆಸರಿನಲ್ಲಿರುವ 30 ಗುಂಟೆ ಸ್ವಯಾರ್ಜಿತ ತರಿ ಜಮೀನು, ಕುಣಿಗಲ್‌ನಲ್ಲಿರುವ 16 ಚದರದ ಮನೆ. ಇದಿಷ್ಟು ಬಿಟ್ಟರೆ ಬೇರಾವುದೇ ಸ್ಥಿರಾಸ್ತಿ ನನಗಿಲ್ಲ ಎಂದು ಅವರು ಪತ್ರಿಕಾ ಗೋಷ್ಠಿಯಲ್ಲಿ ವಿವರಿಸಿದರು.

ಸ್ಥಿರ ಹಾಗೂ ಚರಾಸ್ತಿಗಳೇನಿದ್ದರೂ ನಾನು ಶಾಸಕನಾಗಿ ಆಯ್ಕೆ ಆಗುವುದಕ್ಕೆ ಮುನ್ನ ವಕೀಲ ವೃತ್ತಿ ನಡೆಸುತ್ತಿದ್ದಾಗ ಮಾಡಿದವು. ನನಗೆ ಬಂದ ಪಿತ್ರಾರ್ಜಿತ ಆಸ್ತಿ ಬಹಳ ಕಡಿಮೆ. ನಾನು ಪ್ರಕಟಿಸಿರುವುದಕ್ಕೆ ಹೊರತಾದ ಆಸ್ತಿ ನನ್ನ ಕುಟುಂಬದ ಯಾರದೇ ಹೆಸರಿನಲ್ಲಿ ನನ್ನದಾಗಿದ್ದರೆ, ಸೂಕ್ತ ಅಧಿಕಾರ ಬಳಸಿ, ಅದನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು ಎಂದು ಘೋಷಿಸಿದರು.

'ಸುಧಾ' ಸಾಪ್ತಾಹಿಕದ ಏ.30ರ ಸಂಚಿಕೆಯ ನಿಮ್ಮ ಪುಟ ವಿಭಾಗದಲ್ಲಿ ಪ್ರಕಟವಾದ 'ರಾಜಕೀಯ' ಎಂಬ ಶೀರ್ಷಿಕೆಯ ಪತ್ರವನ್ನೇ ಈ ವಿವರಣೆ ಕೊಡಲು ಕಾರಣವಾಗಿ ಬಳಸಿದ ರಾಮಯ್ಯ, ರಾಜಕಾರಣಿಗಳೆಲ್ಲರೂ ಭ್ರಷ್ಟರು ಎಂಬ ಅಭಿಪ್ರಾಯ ಸಾರ್ವತ್ರಿಕವಾಗಿ ಬೆಳೆಯುತ್ತಿದ್ದು ಇದಕ್ಕೆ ರಾಜಕಾರಣಿಗಳನ್ನಲ್ಲದೆ ಬೇರೆ ಯಾರನ್ನೂ ದೂಷಿಸಬೇಕಾಗಿಲ್ಲ ಎಂದರು.

ಯಾರು ಕೇಳದಿದ್ದರೂ ಆಸ್ತಿಪಾಸ್ತಿಯ ವಿವರ ಕೊಡಬೇಕಾದ್ದು ಕರ್ತವ್ಯ ಎಂದು ಭಾವಿಸಿದ್ದೇನೆ. ಲೋಕಾಯುಕ್ತಕ್ಕೆ ಪ್ರತಿವರ್ಷ, ಸಮಯಕ್ಕೆ ಸರಿಯಾಗಿ ಈ ವಿವರ ಸಲ್ಲಿಸಿಕೊಂಡು ಬಂದಿದ್ದೇನೆ. ನಮ್ಮ ಪಕ್ಷದ ಮುಖಂಡರು, ನಾಯಕರು ಹೀಗೆ ವಿವರ ಪ್ರಕಟಸುವುದು ಅವರವರ ನಿರ್ಧಾರಕ್ಕೆ ಬಿಟ್ಟದ್ದು. ನನ್ನ ಈ ಕೆಲಸ ಉಳಿದವರೆಲ್ಲರಿಗೆ ಪ್ರೇರಣೆಯಾದರೆ ನನ್ನ ಉದ್ದೇಶ ಸಾರ್ಥಕ ಎಂದು ಪ್ರಶ್ನೆಯೊಂದಕ್ಕೆ ಉತ್ತರಿಸಿದರು.

ಸಚಿವರಾಗಿದ್ದಾಗ ವಾಸಿಸಲು ದೊರೆತ ಸರಕಾರಿ ಬಂಗಲೆಯಲ್ಲೇ ತಮ್ಮ ವಾಸ್ತವ್ಯ ಮುಂದುವರಿಸಿರುವುದನ್ನು ರಾಮಯ್ಯ ಸಮರ್ಥಿಸಿಕೊಂಡರು. ನನ್ನ ರಾಜಕಾರಣಕ್ಕೆ ಶಾಲೆ-ಕಾಲೇಜು ಸೇರಿರುವ ನನ್ನ ಮಕ್ಕಳ ಹಿತದ ಬಲಿ ಕೊಡಲಾರೆ. ನನಗೆ ಬೆಂಗಳೂರಲ್ಲಿ ಸ್ವಂತ ಮನೆ ಇಲ್ಲ. ಗೃಹಮಂಡಳಿ ಅಧ್ಯಕ್ಷನಾಗಿ ಸಾವಿರಾರು ಜನರಿಗೆ ಮನೆ ಸಿಗಲು ನೆರವಾದೆ. ನಾನು ಮನೆ ಮಾಡಿಕೊಳ್ಳಲಿಲ್ಲ. ಈಗ ಇರುವ ಬಂಗಲೆಗೆ ಸರ್ಕಾರಿ ನಿಯಮದಂತೆ ಈವರೆಗೆ 51 ಸಾವಿರಕ್ಕು ಹೆಚ್ಚು ಹಣವನ್ನು ಬಾಡಿಗೆ ರೂಪದಲ್ಲಿ ಕೊಟ್ಟಿದ್ದೇನೆ ಎಂದು ಹೇಳಿದರು.

ತಾವು ರೈತ ಹಾಗೂ ಅವಿಭಕ್ತ ಕುಟುಂಬದಲ್ಲಿರುವ ಕಾರಣ ಆದಾಯ ತೆರಿಗೆ, ಸಂಪತ್ತು ತೆರಿಗೆ ತಮಗೆ ಅನ್ವಯವಾಗುವುದಿಲ್ಲ, ಕೊಟ್ಟಿಲ್ಲ ಎಂದು ಸ್ಪಷ್ಟಪಡಿಸಿದರು.

**(ಪ್ರಜಾವಾಣಿ : 4-5-1989)**

## ಹೇಮಾವತಿಯನ್ನು ತುಮಕೂರಿಗೆ ಹರಿಸದಿದ್ದರೆ ರಾಜಕೀಯ ಸನ್ಯಾಸ ಹೊಂದುತ್ತೇನೆ - ವೈಕೆಆರ್

ಹೇಮಾವತಿ ಕೆಲಸ ಕುಂಠಿತವಾಗಿರುವ ಬಗ್ಗೆ ಪ್ರಶ್ನಿಸಲು ಹಿಂದೆ ಕೆ.ಬಿ. ಕ್ರಾಸಿನಲ್ಲಿ ಸಭೆ ಕರೆದಾಗ ಸಚಿವ ಲಕ್ಷ್ಮೀ ನರಸಿಂಹಯ್ಯ ಮುಖ್ಯಮಂತ್ರಿ ಕೆಳ ಆಪ್ತ ಸಹಾಯಕ ಆಲ್ಬರ್ಟ್‌ಗೆ ಫೋನ್ ಮಾಡಿ, ಹೇಮಾವತಿ ಪ್ರಾಜೆಕ್ಟ್‌ನ ಮುಖ್ಯ ಎಂಜಿನಿಯರನ್ನು ಈ ಸಭೆಗೆ ಹೋಗದಂತೆ ಆದೇಶ ಹೊರಡಿಸಲು ಕೇಳಿದ್ದಾರೆ, ಇವರಿಗೆ ರೈತರ ಬಗ್ಗೆ ಕಾಳಜಿ ಇದೆಯೇ?

ಸಭೆಗೆ ಹಾಜರಿದ್ದ ರೇಣುಕಾರ್ಯರನ್ನು ತಿಪಟೂರು ಶಾಸಕ ಹೋಗಿ, ತಂದು ಬಿಟ್ಯಾ ಹೇಮಾವತಿ ನೀರನ್ನು ಎಂದು ವ್ಯಂಗ್ಯವಾಗಿ ಟೀಕಿಸಿದ್ದಾರೆ. ಗೌಡ್ರು ಮಂತ್ರಿಯಾಗಿದ್ದಾಗ ಡೀಪ್ ಕಟ್ ಚಾನಲ್ ಕೆಲಸವನ್ನು ತುಮಕೂರು ಚೀಫ್ ಇಂಜನಿಯರ್‌ಗೆ ವರ್ಗಾಯಿಸಿದ್ದು ಇದರ ಕೆಲಸ ಹಣವಿಲ್ಲದೆ ಕುಂಟಿತಗೊಂಡಿದೆ. ಇಂತಹುದರ ವಿರುದ್ಧ ಪ್ರಶ್ನಿಸಲು ಸಭೆ ಕರೆದರೆ ಡಿ. ನಾಗರಾಜಯ್ಯ

ಹೊರತು ಯಾರೂ ಸಭೆಗೆ ಹಾಜರಾಗಲಿಲ್ಲ. ಆದರೂ ಹೆದರದೆ ಹೇಮಾವತಿ ನೀರಿಗಾಗಿ ಹೋರಾಟ ನಡೆಸಿದೆ. ಈಗಲು ಇಂಥ ರೈತ ದ್ವೇಷಿ ರಾಜಕಾರಣಿಗಳಿಗೆ ತಿಳಿಸುವುದು ಇಷ್ಟೆ. ನನ್ನ ಹೋರಾಟದಲ್ಲಿ ಹೇಮಾವತಿ ನೀರನ್ನು ತುಮಕೂರಿಗೆ ಹರಿಸದಿದ್ದರೆ ನಾನು ರಾಜಕೀಯ ಸನ್ಯಾಸ ಹೊಂದುತ್ತೇನೆ ಎಂದು ವೈ.ಕೆ.ಆರ್. ಪ್ರತಿಜ್ಞೆ ಮಾಡಿದರಲ್ಲದೆ, ಇದಕ್ಕೆ ಅಡ್ಡಿ ಬಂದವರನ್ನು ಬುದ್ಧಿ ಕಲಿಸುವ ದಿಟ್ಟ ನಿರ್ಧಾರ ತೆಗೆದುಕೊಳ್ಳಬೇಕಾಗುತ್ತದೆ ಎಂದು ಎಚ್ಚರಿಸಿದರು.

(ಅಮರ ಸಂದೇಶ : 22-3-1989)

## ರೇಷ್ಮೆ : ಚೀನಾದಿಂದ ಆಮದಿಗೆ ವಿರೋಧ

ಚೀನಾದಿಂದ ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ವಿರೋಧಿಸಲು ಕರ್ನಾಟಕ ರೇಷ್ಮೆ ಸಂಘ ನಿರ್ಣಯಿಸಿದೆಯೆಂದು ಅಧ್ಯಕ್ಷ ವೈ.ಕೆ. ರಾಮಯ್ಯ ಅವರು ಇಂದು ಇಲ್ಲಿ ಸುದ್ದಿಗಾರರಿಗೆ ತಿಳಿಸಿದರು. ರಾಜ್ಯದ ಹೊರಗಿನ ಬಳಕೆದಾರರಿಗೆ ರೇಷ್ಮೆ ಕಳುಹಿಸುವುದನ್ನು ನಿಲ್ಲಿಸಿರುವ ರಾಜ್ಯ ರೇಷ್ಮೆ ಮಾರುಕಟ್ಟೆ ಮಂಡಳಿಯ ನಿರ್ಧಾರದ ಔಚಿತ್ಯವನ್ನು ಅವರು ಪ್ರಶ್ನಿಸಿ, ಅದನ್ನು ಕೂಡ ಸಂಘ ವಿರೋಧಿಸಿದೆಯೆಂದರು.

ಕಳೆದ ಆರು ತಿಂಗಳಲ್ಲಿ ಆಂಧ್ರ ಮತ್ತು ತಮಿಳುನಾಡುಗಳಿಂದ ರಾಜ್ಯಕ್ಕೆ 100 ಟನ್ ರೇಷ್ಮೆ ಬಂದಿದೆ ಎಂದು ಅವರು ಹೇಳಿದರು. ಚೀನಾದಿಂದ ರೇಷ್ಮೆ ಆಮದು ಆದಲ್ಲಿ ರಾಜ್ಯದ ರೇಷ್ಮೆ, ಕೃಷಿ - ಕೈಗಾರಿಕೆಗೆ ಮಾರಕವಾಗಲಿದೆಯೆಂದು ಅವರು ತಿಳಿಸಿ, ಅದನ್ನು ವಿರೋಧಿಸಲು ರಾಷ್ಟ್ರದ ಇತರ ಮಂಡಳಿಗಳ ನೆರವನ್ನು ಪಡೆಯಲಾಗುವುದೆಂದರು.

ಸಂಸತ್‌ನ ಚಳಿಗಾಲದ ಅಧಿವೇಶನ ಪ್ರಾರಂಭವಾಗುವ ಮೊದಲೇ ಕೇಂದ್ರ ಸರ್ಕಾರಕ್ಕೆ ಈ ಬಗ್ಗೆ ಮನವಿ ಸಲ್ಲಿಸಲು ಶಾಸಕರು ಮತ್ತು ರೇಷ್ಮೆ ಬೆಳೆಗಾರರಿಂದ ಕೂಡಿದ 12 ಮಂದಿ ನಿಯೋಗವೊಂದು ಶೀಘ್ರದಲ್ಲಿಯೇ ದೆಹಲಿಗೆ ತೆರಳಿದೆ. ಆಮದು ಯತ್ನವನ್ನು ವಿರೋಧಿಸಿ ಶೀಘ್ರದಲ್ಲಿಯೇ ರಾಜ್ಯಾದ್ಯಂತ ಚಳವಳಿ ಹೂಡಲು ಸಂಘ ನಿರ್ಧರಿಸಿದೆ ಎಂದರು.

(ಪ್ರಜಾವಾಣಿ : 17-11-1990)

## ಜನರ ಕಷ್ಟಸುಖ ಅರಿಯದ ಅಧಿಕಾರಿಗಳು :

## ವೈ.ಕೆ. ರಾಮಯ್ಯ ಹೇಳಿದ 'ಕಥೆ' !

ಜನಸಾಮಾನ್ಯರ ಕಷ್ಟಸುಖಗಳೇ ಗೊತ್ತಿಲ್ಲದವರು, ಸಮಸ್ಯೆಗಳನ್ನೆ ತಿಳಿಯದವರಿಂದ ಯಾವ ರೀತಿಯ ಯೋಜನೆಗಳು ತಯಾರಾಗುತ್ತಿವೆ ಎಂಬುದನ್ನು ಮಾಜಿ ರೇಷ್ಮೆ ಖಾತೆ ಸಚಿವ ವೈ.ಕೆ. ರಾಮಯ್ಯ ಅವರು ಇಂದಿಲ್ಲಿ ತಮ್ಮದೇ ಆದ ರೀತಿಯಲ್ಲಿ ವಿವರಿಸಿ ಸಭಿಕರನ್ನು ನಗೆಗಡಲಲ್ಲಿ ತೇಲಿಸಿದರು. ಮಾನಸಗಂಗೋತ್ರಿಯ ಮಾನವಿಕ ಸಭಾಂಗಣದಲ್ಲಿ ನಡೆದ ಸಮಾರಂಭದಲ್ಲಿ ಅವರು ಈ ನಿದರ್ಶನಗಳನ್ನು ನೀಡಿದರು.

ಬಿಡಿಓ ಒಬ್ಬರು ಸರ್ಕಾರಿ ಜಮೀನಿನಲ್ಲಿದ್ದ ಸೀಗೆಮೆಳೆಯನ್ನು 500 ರೂ.ಗೆ ಹರಾಜು ಮಾಡಲು ಅನುಮತಿ ನೀಡುವಂತೆ ಐ ಎ ಎಸ್ ಅಧಿಕಾರಿಯನ್ನು ಕೋರಿದರು. ಆತ ಆ ಮರಕ್ಕೆ ಎಷ್ಟು ವಯಸ್ಸಾಗಿದೆ ಎಂದು ಕೇಳಿದ. ಸುಮಾರು 45-50 ವರ್ಷ ಆಗಿರಬಹುದೆಂದು ಬಿಡಿಓ ತಿಳಿಸಿದ ಕೂಡಲೇ, ಇಷ್ಟೊಂದು ವಯಸ್ಸಾಗಿರುವ ಮರವನ್ನು 500 ರೂ.ಗೆ ಏಕೆ ಹರಾಜು ಹಾಕ್ತೀರಿ? ಹಲಗೆ ಮಾಡಿಸಿ ಎಂದರು, ಎಂದು ಹೇಳಿದ ರಾಮಯ್ಯನವರು ಸೀಗೆ ಮೆಳೆಯಿಂದ ಹಲಗೆ ಮಾಡಲು ಸಾಧ್ಯವೇ ಎಂದು ಕೇಳಿದಾಗ ನಗೆಯ ಅಲೆ ಚಿಮ್ಮಿತು.

ಆರ್ಥಿಕ ಸಮಸ್ಯೆಗಳನ್ನು ಕುರಿತು ಚರ್ಚಿಸಲಾಗಿರುವ 'ಸ್ಮಾಲ್ ಈಸ್ ಬ್ಯೂಟಿಫುಲ್' ಎಂಬ ಪುಸ್ತಕ ಖರೀದಿಸಲು ಕೆಳಗಿನ ಅಧಿಕಾರಿ, ಮೇಲಧಿಕಾರಿಯ ಅನುಮತಿ ಕೇಳಿದಾಗ 'ಇಂಥ ಕಾದಂಬರಿ ಕೊಳ್ಳುವುದಿಲ್ಲ' ಎಂಬ ಉತ್ತರ ನೀಡಿದರು ಎಂದರು ರಾಮಯ್ಯ.

ಜನರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸದ, ಸಮಸ್ಯೆಗಳ ವಸ್ತುಸ್ಥಿತಿಯ ಅರಿವಿಲ್ಲದ ಜನ, ಯೋಜನೆ ರೂಪಿಸುತ್ತಿರುವುದರಿಂದ ಸ್ವಾತಂತ್ರ್ಯ ಬಂದು 40 ವರ್ಷಗಳೇ ಕಳೆದಿದ್ದರೂ ಸಹ ದೇಶದ ಪರಿಸ್ಥಿತಿ ಬದಲಾಗಿಲ್ಲ ಎಂದು ವಿಷಾದದಿಂದ ಅವರು ಹೇಳಿದರು.

ದೇಶದ ಹವಾಮಾನಕ್ಕೆ ಹೊಂದಿಕೊಳ್ಳದ ರೇಷ್ಮೆ ತಳಿಗಳ ಬಗೆಗೂ ಅವರು ಸ್ವಾರಸ್ಯಕರ ನಿದರ್ಶನವೊಂದನ್ನು ನೀಡಿದರು. ಜಪಾನಿನಲ್ಲಿ ಒಳ್ಳೆಯ ಹವಾಮಾನ ಇದೆ. ಅದಕ್ಕನುಗುಣವಾಗಿ ಅಲ್ಲಿ ಕೆಂಪು ಬಣ್ಣದ ಮಕ್ಕಳು ಹುಟ್ಟುತ್ತವೆ. ಇಲ್ಲಿ ಅಂಥ ಮಕ್ಕಳು ಹುಟ್ಟಲಿಲ್ಲ ಎಂದು ತನ್ನ ಹೆಂಡತಿಗೆ ದೊಣ್ಣೆ ತೆಗೆದುಕೊಂಡು ಹೊಡೆದರೆ ಅವಳೇನು ಮಾಡಿಯಾಳು? ಎಂದು ಅವರು ಪ್ರಶ್ನಿಸಿದಾಗ ಸಭೆಯಲ್ಲಿ ಮತ್ತೊಮ್ಮೆ ನಗೆ ತೇಲಿ ಬಂದಿತು.

(ಆಂದೋಲನ : 22-3-1992)

## ಕುಣಿಗಲ್ ಸ್ಟಡ್ ಫಾರಂ ಒಳಗೆ ಶಾಸಕ ರಾಮಯ್ಯ ಧರಣಿ

**ರಾಜ್ಯ ಸರ್ಕಾರದ ಅತ್ಯಂತ ಅಮೂಲ್ಯ ಆಸ್ತಿಗಳಲ್ಲಿ ಒಂದಾದ ಇಲ್ಲಿನ ಸ್ಟಡ್ ಫಾರಂನ್ನು ಪರಭಾರೆಯಾಗದಂತೆ ತಡೆಯಲು, ಈ ಕ್ಷೇತ್ರದ ಶಾಸಕ ವೈ.ಕೆ. ರಾಮಯ್ಯ ಅವರು ನೇರ ಕ್ರಮಕ್ಕಿಳಿದಿದ್ದು, ತಮ್ಮ ಬೆಂಬಲಿಗರೊಂದಿಗೆ ಫಾರಂ ಒಳಗೆ ಧರಣಿ ಕುಳಿತಿದ್ದಾರೆ.**

ಕುಣಿಗಲ್ ಸ್ಟಡ್ ಫಾರಂನ್ನು ಬಂಗಾರಪ್ಪನವರ ಸರ್ಕಾರ ಇತ್ತೀಚೆಗೆ ಖ್ಯಾತ ಉದ್ಯಮಿ ವಿಜಯ್‌ಮಲ್ಯ ಅವರಿಗೆ (ಯು.ಬಿ. ಕಂಪೆನಿ) ಗುತ್ತಿಗೆ ನೀಡದ್ದು, ಇದರ ವಿರುದ್ಧ ಈಗಾಗಲೇ ರಾಜ್ಯದಾದ್ಯಂತ ಅನೇಕರಿಂದ ತೀವ್ರ ಪ್ರತಿಭಟನೆ ಕಂಡು ಬಂದಿದೆ.

ಸ್ಟಡ್‌ಫಾರಂ ಮುಂದೆ ಈಗ ಯು.ಬಿ. ಕಂಪೆನಿಯ ನಾಮಫಲಕವನ್ನು ತೂಗು ಹಾಕಲಾಗಿದೆ. ಆದರೆ ಈ ಕಂಪೆನಿಗೆ ಸೇರಿದ ನೌಕರರು ಮಾತ್ರ ಇನ್ನೂ ಒಳಗೆ ಬಂದಿಲ್ಲ.

ಯು.ಬಿ. ಕಂಪೆನಿಯ ಅಧ್ಯಕ್ಷ ವಿಜಯ್‌ಮಲ್ಯ ಅವರು ತಮ್ಮ ಕೆಲವು ಸ್ನೇಹಿತರ ಜೊತೆಯಲ್ಲಿ ಇದನ್ನು ವಶಪಡಿಸಿಕೊಳ್ಳಲು ಬರುತ್ತಾರೆಂಬ ಸುದ್ದಿಯ ಹಿನ್ನೆಲೆಯಲ್ಲಿ ಇದನ್ನು ತಡೆದು, ಈ ಅಮೂಲ್ಯ ಆಸ್ತಿಯನ್ನು ರಕ್ಷಿಸಲು ತಾವು ಈ ಕ್ರಮ ಕೈಗೊಂಡಿರುವುದಾಗಿ ರಾಮಯ್ಯ ಅವರು ಸ್ಪಷ್ಟಪಡಿಸಿದ್ದಾರೆ.

ಸ್ಟಡ್‌ಫಾರಂ ಈ ತನಕ ಬೆಂಗಳೂರು ಟರ್ಫ್ ಕ್ಲಬ್‌ಗೆ ಸೇರಿತ್ತು. ಇದರ ನಿರ್ವಹಣೆಯಿಂದ ನಿರಂತರ ನಷ್ಟ ಸಂಭವಿಸುತ್ತಿದೆ ಎಂಬ ಕಾರಣವನ್ನು ಮುಂದಿಟ್ಟು, ಟರ್ಫ್ ಕ್ಲಬ್‌ನವರು ಇದನ್ನು ಸರ್ಕಾರಕ್ಕೆ ಹಿಂದಿರುಗಿಸಿದರು.

ಇದನ್ನು ಪರಭಾರೆ ಮಾಡುವ ತೀರ್ಮಾನಕ್ಕೆ ಸರ್ಕಾರ ಬಂದಿರುವುದು ಪತ್ರಿಕೆಗಳ ಮೂಲಕ ತಮಗೆ ತಿಳಿದು ಬಂದಾಗ ಸರ್ಕಾರಕ್ಕೆ ತಾವು ಬರೆದ ಪತ್ರಗಳಿಗೆ ಈ ತನಕ ಯಾವುದೇ ಉತ್ತರ ಸಿಕ್ಕಿಲ್ಲ ಎಂದು ರಾಮಯ್ಯ ಆಪಾದಿಸಿದ್ದಾರೆ.

ಇಂತಹ ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುವಾಗ ಸರ್ಕಾರವಾಗಲೀ, ಟರ್ಫ್ ಕ್ಲಬ್‌ನ ಆಡಳಿತ ಮಂಡಳಿಯಾಗಲೀ, ಸ್ಥಳೀಯ ಶಾಸಕರೊಂದಿಗೆ ಸಮಾಲೋಚನೆ ನಡೆಸಿಲ್ಲ ಎಂಬುದು ಅವರ ಮತ್ತೊಂದು ಆರೋಪವಾಗಿದೆ.

ಇತ್ತೀಚಿನ ದಿನಗಳಲ್ಲಿ ಟರ್ಫ್ ಕ್ಲಬ್‌ನ ಬೇಜವಾಬ್ದಾರಿತನ ಹಾಗೂ ನಿರುತ್ಸಾಹದಿಂದಾಗಿ ಇಲ್ಲಿನ ಬೆಲೆ ಬಾಳುವ ವಸ್ತುಗಳು ಕಳ್ಳತನವಾಗುತ್ತಿದ್ದು ಇದನ್ನು ತಪ್ಪಿಸುವ ಉದ್ದೇಶದಿಂದ ತಾವು ಹೋರಾಟಕ್ಕಿಳಿದಿರುವುದಾಗಿ ರಾಮಯ್ಯ ಅವರು ಹೇಳಿದ್ದಾರೆ.

ಇದನ್ನು ಗುತ್ತಿಗೆ ತೆಗೆದುಕೊಳ್ಳುತ್ತಿರುವ ಯು.ಬಿ. ಗುಂಪಿನ ಅಧ್ಯಕ್ಷ ವಿಜಯ ಮಲ್ಯ ಅವರೊಂದಿಗೆ ರಾಮಯ್ಯ ಅವರು ಚರ್ಚಿಸಿದ್ದರು. ಆದರೆ ಅವರು ಬರೆದಿರುವ ಪತ್ರಗಳಿಗೆ ಮಾತ್ರ ಸರ್ಕಾರದಿಂದ ಉತ್ತರ ಬಂದಿಲ್ಲ.

''ನಾನು ಫಾರಂ ನೋಡುವುದಕ್ಕಾಗಿ ಕೆಲವು ಮಿತ್ರರ ಜೊತೆ ಅಲ್ಲಿಗೆ ಹೋಗುತ್ತಿದ್ದೇನೆ. ಆದರೆ ಅದನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಅಲ್ಲ'' ಎಂದು ವಿಜಯ ಮಲ್ಯ ಅವರು ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ತಾವು ಶಾಸಕರೊಂದಿಗೆ ಈ ಬಗ್ಗೆ ಚರ್ಚಿಸುವುದಾಗಿಯೂ ಅವರು ಹೇಳಿದ್ದಾರೆ.

ಇಲ್ಲಿ ಕೆಲಸ ಮಾಡುತ್ತಿರುವ ಟರ್ಫ್ ಕ್ಲಬ್‌ನ ಅಧಿಕಾರಿಗಳ ಪ್ರಕಾರ, ಸರ್ಕಾರ ಮತ್ತು ಟರ್ಫ್ ಕ್ಲಬ್ ನಡುವೆ ಸ್ಟಡ್ ಫಾರಂಗೆ ಸಂಬಂಧಿಸಿದ ಗುತ್ತಿಗೆ ಅವಧಿ ಸೆಪ್ಟೆಂಬರ್ 30ಕ್ಕೆ ಅಂತ್ಯವಾಗಿದೆ. ಹೀಗಾಗಿ ನಮಗೂ, ಈ ಫಾರಂಗೂ ಯಾವುದೇ ಸಂಬಂಧವಿಲ್ಲವೆಂದು ಇವರು ಹೇಳುತ್ತಿದ್ದಾರೆ. ಈ ಫಾರಂನಲ್ಲಿ ಕೆಲಸ ಮಾಡುತ್ತಿದ್ದ ಸರ್ಕಾರಿ ನೌಕರರನ್ನು ವರ್ಗ ಮಾಡಿರುವುದರಿಂದ, ನಮಗೂ ಇದಕ್ಕೂ ಈಗ ಯಾವುದೇ ಸಂಬಂಧ ಉಳಿದಿಲ್ಲ ಎಂದಿದ್ದಾರೆ.

ಈಗ ಈ ಅಮೂಲ್ಯವಾದ ಆಸ್ತಿ ಅನಾಥ ಶಿಶುವಾಗಿದೆ. ಇದನ್ನು ಈ ವಿಚಿತ್ರ ಪರಿಸ್ಥಿತಿಯಲ್ಲಿ ರಕ್ಷಿಸುವುದು ನಮ್ಮ ಜವಾಬ್ದಾರಿ ಎಂದು ರಾಮಯ್ಯ ಅವರು ಸ್ಪಷ್ಟಪಡಿಸಿದ್ದಾರೆ. ಸರ್ಕಾರ ಮತ್ತು ಟರ್ಫ್ ಕ್ಲಬ್‌ನಿಂದ ನಿರ್ದಿಷ್ಟ ಭರವಸೆ ಬರುವವರೆಗೆ ನಮ್ಮ ಈ ಹೋರಾಟ ನಿಲ್ಲುವುದಿಲ್ಲ ಎಂದು ಅವರು ಬಿಗಿ ಪಟ್ಟು ಹಿಡಿದಿದ್ದಾರೆ.

**(ಸಂಯುಕ್ತ ಕರ್ನಾಟಕ : 7-10-1992)**

## ಕುಣಿಗಲ್ ಕುದುರೆ ಫಾರಂ ಜನರ ವಶ

ಕುಣಿಗಲ್‌ನಲ್ಲಿನ ಕುದುರೆ ಸಾಕಣೆ ಕೇಂದ್ರವನ್ನು (ಸ್ಟಡ್ ಫಾರಂ) ತಾಲ್ಲೂಕಿನ ಜನರು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಶಾಸಕ ವೈ.ಕೆ. ರಾಮಯ್ಯ ಅವರ ನೇತೃತ್ವದಲ್ಲಿ ಸೋಮವಾರ ಸಂಜೆ ಜನರು 'ಸ್ಟಡ್ ಪಾರಂ'ಗೆ ನುಗ್ಗಿ, ಅದನ್ನು ವಶಪಡಿಸಿಕೊಂಡರು.

ಅತ್ಯುತ್ತಮ ಕುದುರೆ ತಳಿಗಳನ್ನು ಬೆಳೆಸುವ, ಅತ್ಯಮೂಲ್ಯವಾದ ಈ ಸರಕಾರಿ ಆಸ್ತಿ 'ನಾಶ'ವಾಗುವುದನ್ನು ತಡೆಯಲು ತಾಲ್ಲೂಕಿನ ರೈತರ ನೆರವಿನಿಂದ ತಾವು ಈ ಫಾರಂ ಅನ್ನು ವಶಪಡಿಸಿಕೊಂಡುದಾಗಿ ಶಾಸಕ ರಾಮಯ್ಯ ಹೇಳಿಕೆಯಲ್ಲಿ ತಿಳಿಸಿದ್ದಾರೆ.

ಈ ಕುದುರೆ ಸಾಕಣೆ ಕೇಂದ್ರದ ಮೇಲ್ವಿಚಾರಣೆ ನಡೆಸುತ್ತಿದ್ದ ಬೆಂಗಳೂರಿನ ಟರ್ಫ್ ಕ್ಲಬ್‌ನ ಕಳೆದ 31ರಂದೇ ಅದನ್ನು ಸರಕಾರಕ್ಕೆ ಒಪ್ಪಿಸಿಬಿಟ್ಟಿತು. ಈ ಕೇಂದ್ರದ ಎಲ್ಲ ನೌಕರರನ್ನು ಸರಕಾರ ಬೇರೆಡೆಗೆ ವರ್ಗ ಮಾಡಿದೆ. ಹೀಗಾಗಿ, ಈ ಕುದುರೆ ಫಾರಂ ಅನಾಥವಾಯಿತು. ವಿಶ್ವವಿಖ್ಯಾತವಾದ ಈ ಕುದುರೆ ಫಾರಂ ಹೀಗೆ ಅನಾಥವಾಗುವುದನ್ನು ನೋಡಿ ಸಹಿಸದ ಜನರು ಅದನ್ನು ವಶಪಡಿಸಿಕೊಂಡು ರಕ್ಷಿಸಲು ನಿರ್ಧರಿಸಿದರು ಎಂದು ಅವರು ತಿಳಿಸಿದ್ದಾರೆ.

'ಫಾರಂ ನೋಡಲು ದಿನಾಂಕ ನಾಲ್ಕರಂದು ಬರುವೆನೆ ಹೊರತು, ಅದನ್ನು ವಹಿಸಿಕೊಳ್ಳುವುದಕ್ಕಲ್ಲ' ಎಂದು ತಮಗೆ ಹೇಳಿದ್ದ ಯು.ಬಿ. ಗುಂಪಿನ ವಿಜಯ್ ಮಲ್ಯ, ಆ ದಿನ ಬರಲೇ ಇಲ್ಲ ಎಂದು ರಾಮಯ್ಯ ಹೇಳಿದರು.

**ಅಲ್ಲದೆ ರಾಜ್ಯ ಸರಕಾರ ಅಥವಾ ಬೆಂಗಳೂರು ಟರ್ಫ್ ಕ್ಲಬ್‌ಗೆ ತಾವು ಬರೆದ ಪತ್ರಗಳಿಗೆ ಉತ್ತರ ಕೂಡ ಬಂದಿಲ್ಲ. ಆದ್ದರಿಂದಲೇ ಫಾರ್ಮ್‌ನ್ನು ರಕ್ಷಿಸುವ ಕರ್ತವ್ಯದಂತೆ ಜನರು ಅದನ್ನು ವಹಿಸಿಕೊಂಡಿದ್ದಾರೆ ಎಂದರು.**

ಫಾರ್ಮ್‌ನಲ್ಲಿ ಸುಮಾರು ನಲವತ್ತು ಕುದುರೆಗಳು ಉಳಿದಿದ್ದು, ಸ್ಥಳೀಯ ಜನರೇ ಅವುಗಳನ್ನು ನೋಡಿಕೊಳ್ಳತೊಡಗಿದ್ದಾರೆ. ಈ ಸ್ಟಡ್ ಫಾರಂ ಬಗ್ಗೆ ಸರಕಾರ ತೋರುತ್ತಿರುವ ಬೇಜವಾಬ್ದಾರಿತನದ ವಿರುದ್ಧ ಪ್ರತಿಭಟಿಸಲು ತಾವು ಈ ಕ್ರಮ ಕೈಗೊಂಡುದಾಗಿಯೂ ಅವರು ಹೇಳಿದರು.

ಸರಕಾರ ಅಥವಾ ಬೆಂಗಳೂರು ಟರ್ಫ್ ಕ್ಲಬ್ ಈ ಫಾರಂನ ಭವಿಷ್ಯದ ಬಗ್ಗೆ ನಿರ್ದಿಷ್ಟ ಹೇಳಿಕೆಗಳನ್ನು ನೀಡುವವರೆಗೆ ತಾವು ಫಾರಂ ಬಿಟ್ಟು ಕದಲುವುದಿಲ್ಲ ಎಂದು ಅವರು ಹೇಳಿದ್ದಾರೆ.

ಸದ್ಯಕ್ಕೆ ಎಲ್ಲ ಕುದುರೆಗಳಿಗೂ ಮೇವು ಹಾಕುತ್ತಿದ್ದೇವೆ. ಒಂದೆಡೆ ಬೆಂಗಳೂರು ಟರ್ಫ್ ಕ್ಲಬ್ ಸೆಪ್ಟೆಂಬರ್ 30 ರಿಂದ ತಮಗೂ ಫಾರಂಗೂ ಸಂಬಂಧವಿಲ್ಲ ಎನ್ನುತ್ತಿದೆ. ಸರಕಾರ ಫಾರಂನ ಉಸ್ತುವಾರಿ ನಡೆಸುವ ಬದಲು ನೌಕರರನ್ನೆಲ್ಲಾ ವರ್ಗ ಮಾಡಿದೆ. ಹೀಗಾಗಿ ಇಡೀ ಫಾರಂ ಅನಾಥವಾಗಿದೆ. ಕುದುರೆಗಳು ಮತ್ತು ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಆಸ್ತಿಯನ್ನು ರಕ್ಷಿಸುವುದು ತಾಲ್ಲೂಕಿನ ಜನರ ಕರ್ತವ್ಯ ಎಂದೂ ಅವರು ಹೇಳಿದ್ದಾರೆ.

ಈ ಆಸ್ತಿಯನ್ನು ರಕ್ಷಿಸುವಲ್ಲಿ ಸರಕಾರ ಸಂಪೂರ್ಣ ವಿಫಲಗೊಂಡಿದೆ. ಭೂಮಿ ಹಕ್ಕಿಗೆ ಸಂಬಂಧಿಸಿದ ಪತ್ರದೊಂದಿಗೆ ಫಾರಂ ವಹಿಸಿಕೊಳ್ಳಲು ವಿಜಯ ಮಲ್ಯ ಬಂದರೆ, ಅದಕ್ಕೆ ತಮ್ಮ ಅಭ್ಯಂತರವೇನೂ ಇಲ್ಲ ಎಂದೂ ಅವರು ಈ ಹೇಳಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

**(ಕನ್ನಡ ಪ್ರಭ : 6-8-1992)**

# ಹರಿದ ನೀರು : ಬಗೆ ಹರಿಯದ ಸಮಸ್ಯೆ

ಎರಡು ದಿನಗಳ ಹಿಂದೆ ಹೇಮಾವತಿ ಎಡದಂಡೆಯ ಮುಖ್ಯ ಕಾಲುವೆಯ ಬಾಗಿಲನ್ನೇ ಸ್ಫೋಟಿಸುತ್ತೇವೆ ಎಂದು ರೋಷ ತಪ್ತರಾಗಿ ವೈ.ಕೆ. ರಾಮಯ್ಯ ಅವರ ನೇತೃತ್ವದಲ್ಲಿ ಹೊರಟು ನಿಂತಿದ್ದ ತುರುವೇಕೆರೆಯ ರೈತರ ಮುಖದಲ್ಲಿ ಇಂದು ಪ್ರಸನ್ನ ಭಾವ. ಶಿಂಷಾ ಕೊಳ್ಳಕ್ಕೆ ನೀರು ಬಿಡಲಾಗಿದೆ ಎಂಬ ಸುದ್ದಿ ಪತ್ರಿಕೆಗಳಿಂದ ತಿಳಿದ ಕ್ಷಣದಿಂದ ಜನ ಹೇಮಾವತಿಯ ಸ್ವಾಗತಕ್ಕೆ ಸಜ್ಜಾಗಿದ್ದಾರೆ.

ಹಾಸನ ಜಿಲ್ಲೆಯಲ್ಲಿರುವ ಹೇಮಾವತಿ ಎಡದಂಡೆಯ ಮುಖ್ಯ ಕಾಲುವೆ ಪ್ರದೇಶಕ್ಕೆ ಖುದ್ದಾಗಿ ಭೇಟಿ ನೀಡಿ ಬಿಡಲಾಗುತ್ತಿರುವ ನೀರನ್ನು ಗಮನಿಸಿದರೆ ರೈತರ ಮುಖದಲ್ಲಿನ ಈ ಸಂತಸ ಬಹಳ ದಿನ ಇರಲಾರದು ಎಂಬ ಗುಮಾನಿ ಮೂಡುತ್ತದೆ. ನೀರು ಬಿಡಲಾಗಿದೆಯೇ ಎಂಬುದನ್ನು ಖುದ್ದಾಗಿ ಗಮನಿಸಲು ಅಲ್ಲಿಗೇ ಬಂದಿದ್ದ ವೈ.ಕೆ. ರಾಮಯ್ಯ ಅವರೂ ಈ ಸಂಶಯಕ್ಕೆ ಸಹಮತ ವ್ಯಕ್ತಪಡಿಸಿದರು.

ಕೊಟ್ಟ ಆಶ್ವಾಸನೆಯಂತೆ ನೀರೇನೋ ಬಿಡಲಾಗಿದೆ. ಆದರೆ ಬಿಡುತ್ತಿರುವ ನೀರಿನ ಪ್ರಮಾಣ ಗಮನಿಸಿದರೆ ನೀರು ಮಾರ್ಕೋನಹಳ್ಳಿ ಕೆರೆ ತಲುಪಲು ಕನಿಷ್ಠ ಒಂದೂವರೆ ತಿಂಗಳು ಹಿಡಿಯಬಹುದು. ಮುಖ್ಯಮಂತ್ರಿ ದೇವೇಗೌಡರು ಬೆಂಗಳೂರಿನಲ್ಲಿ ಏನೇ ಹೇಳಬಹುದು. ಆದರೆ ಮುಖ್ಯ ಕಾಲುವೆಯಿಂದ ಬಾಗೂರು-ನವಿಲೆ ಸುರಂಗ ಕಾಲುವೆಗೆ ನೀರು ಬಿಡುವ ಗೇಟು ತೆಗೆಯುವ ಕಾಳೇಗೌಡ ಮಾತ್ರ ನಿರ್ಲಿಪ್ತ. ಎಷ್ಟು ನೀರು ಬಿಟ್ಟಿದ್ದೀಯಪ್ಪಾ? ಎಂದರೆ 'ಒಂದೂವರೆ ಅಡಿ ಬಿಟ್ಟಿದ್ದೀನಿ ಸಾರ್' ಎನ್ನುತ್ತಾನೆ ಆತ. ಅಂದರೆ ಎಷ್ಟು ಕ್ಯೂಸೆಕ್ಸ್? ಎಂದು ಕೇಳಿದರೆ ಅದೆಲ್ಲಾ ಗೊತ್ತಿಲ್ಲಾ ಸಾರ್ ಎನ್ನುತ್ತಾನೆ ನಿದ್ದೆಗಣ್ಣು ಉಜ್ಜುತ್ತಾ.

ಹೇಮಾವತಿ ಯೋಜನೆಯಲ್ಲಿನ ರಾಜಕೀಯದ ಪ್ರತ್ಯಕ್ಷದರ್ಶನವಾಗಬೇಕಾದರೆ ಅದರ ಎಡದಂಡೆಯ ಮುಖ್ಯ ಕಾಲುವೆಯ ದಡದಲ್ಲಿ ಹೋಗಿ ನಿಲ್ಲಬೇಕು. ಹೇಮಾವತಿ ಜಲಾಶಯದಿಂದ ಬಲದಂಡೆ ಮತ್ತು ಎಡದಂಡೆಯ ಎರಡು ಕಾಲುವೆಗಳಿಂದ ನೀರು ಹೊರ ಹರಿಯುತ್ತದೆ. ಬಲದಂಡೆ ಕಾಲುವೆ ಹಾಸನದ ಹೊಳೆನರಸೀಪುರ ಹಾಗೂ ಮೈಸೂರಿನ ಕೆ.ಆರ್. ನಗರದ ಜಮೀನಿಗೆ ನೀರುಣಿಸಿದರೆ, ಎಡದಂಡೆಯ ಮುಖ್ಯ ಕಾಲುವೆ ಎರಡು ಹೋಳಾಗಿ ಮೊದಲನೆಯದು ಸಾಹುಕಾರ್ ಚೆನ್ನಯ್ಯ ಕಾಲುವೆಯಿಂದ ಕೆ.ಆರ್. ಪೇಟೆ, ನಾಗಮಂಗಲಗಳ ರೈತರ ಜಮೀನಿಗೆ ನೀರು ಹರಿಯುತ್ತದೆ. ಎರಡನೆಯ ಬಾಗೂರು-ನವಿಲೆ ಸುರಂಗ ಕಾಲುವೆಯ ಮೂಲಕ ತುಮಕೂರಿಗೆ ನೀರು ಹರಿಯುತ್ತದೆ.

ಇತ್ತೀಚೆಗೆ ಹೇಮಾವತಿ ಯೋಜನೆ ಪ್ರದೇಶಕ್ಕೆ ನೀರು ಬಿಡಬೇಕೆಂಬ ಸರಕಾರದ ನಿರ್ಧಾರದಂತೆ ಬಲದಂಡೆಯ ಮುಖ್ಯ ಕಾಲುವೆ ಮತ್ತು ಎಡದಂಡೆಯ ಸಾಹುಕಾರ್ ಚೆನ್ನಯ್ಯ

ಕಾಲುವೆಯಲ್ಲಿ ನೀರು ಹರಿಯುತ್ತಲೇ ಇದೆ. ಅದರ ಅಚ್ಚುಕಟ್ಟು ಪ್ರದೇಶದ ರೈತರು ಅದರ ಫಲವನ್ನೂ ಅನುಭವಿಸುತ್ತಿದ್ದಾರೆ. ಸಾಹುಕಾರ್ ಚೆನ್ನಯ್ಯ ಕಾಲುವೆಯ ಪಕ್ಕದಲ್ಲಿಯೇ ಇರುವ ತುಮಕೂರಿಗೆ ನೀರು ಹರಿಸುವ ಬಾಗೂರು-ನವಿಲೆ ಸುರಂಗ ಕಾಲುವೆಯಲ್ಲಿ ಮಾತ್ರ ನೀರು ಹರಿದಿಲ್ಲ. ಅದಕ್ಕೆ ನೀರು ಬಿಡುವ ಕಬ್ಬಿಣದ ಗೇಟನ್ನು ಮಾತ್ರ ನಿನ್ನೆ ಮಧ್ಯಾಹ್ನದವರೆಗೆ ಭದ್ರವಾಗಿ ಮುಚ್ಚಿಡಲಾಗಿತ್ತು.

ತುರುವೇಕೆರೆಯ ರೈತರ ಮಾತಿನಲ್ಲಿಯೇ ಹೇಳುವುದಾದರೆ, ತುಮಕೂರು ನಾಲಾಕ್ಕೆ ನೀರು ಬಿಡುವ ಬಾಗಿಲಿಗೆ ಅಡ್ಡವಾಗಿರುವುದು ಕಬ್ಬಿಣದ ಗೇಟಲ್ಲ. ಮುಖ್ಯಮಂತ್ರಿ ದೇವೇಗೌಡರ ಕಬ್ಬಿಣಕ್ಕಿಂತ ಕಟುವಾಗಿರುವ ಮನಸ್ಸು. ರೈತರ ಪ್ರತಿಭಟನೆಗೆ ಕೊನೆಗೂ ಆ ಮನಸ್ಸು ಕರಗಿ ನಾಲೆಯಲ್ಲಿ ನೀರು ಹರಿದಿದೆ.

ಬಾಗೂರು-ನವಿಲೆ ಸುರಂಗ ಮಾರ್ಗದ ಮೂಲಕ ಹಾದು ವೈ ಪಥ ರೇಖೆಯನ್ನು ದಾಟಿಬರುವ ನೀರು ತುಮಕೂರು ಮತ್ತು ನಾಗಮಂಗಲ ವಿಭಾಗದ ನಾಲಾಗಳಲ್ಲಿ ಹರಿಯಬೇಕು. ಸುರಂಗ ಕಾಲುವೆಯನ್ನು ವಿಭಾಗಿಸುವವರೆಗೇನೋ ನಿನ್ನೆಯಿಂದ ನೀರು ಹರಿಯುತ್ತಿದೆ. ಆದರೆ ಅಲ್ಲಿರುವ ಮತ್ತೊಂದು ಕಬ್ಬಿಣದ ಗೇಟು ಇನ್ನೂ ಸರಿದಿಲ್ಲ. ಈಗ ತುಮಕೂರು ಜಿಲ್ಲೆಗೆ ಹರಿಯುವ ನೀರು ಅದೇ ಸ್ಥಳದಲ್ಲಿ ಕಾಲುವೆಯ ದುರಸ್ತಿಯಂತಹ ತುರ್ತು ಸಂದರ್ಭದಲ್ಲಿ ನೀರು ಹೊರಬಿಡಲು ನಿರ್ಮಿಸಲಾದ 'ಎಸ್ಕೇಪ್' ಗೇಟಿನ ಮೂಲಕ. ಈ ನೀರು ಗಂಗಾಘಟ್ಟ ಕೆರೆ ಹಾದು ಮೊದಲು ತಲುಪುವುದು ನೊಣವಿನಕೆರೆಗೆ. ಅಲ್ಲಿಂದ ಮಲ್ಲಾಘಟ್ಟ, ತುರುವೇಕೆರೆಗಳ ಮೂಲಕ ಹಾದು ಮಾರ್ಕೋನಹಳ್ಳಿ ಕೆರೆಗೆ ನೀರು ಹೋಗಬೇಕು. ಕಳೆದ ವಾರ ಇದೇ ಸಮಯದಲ್ಲಿ ಸರ್ಕಾರ 1,000 ಕ್ಯುಸೆಕ್ಸ್ ನೀರನ್ನು ಬಿಟ್ಟಿದೆ. ಆದರೂ ಮಾರ್ಕೋನಹಳ್ಳಿ ಕೆರೆ ತುಂಬಲು ತಿಂಗಳಿಗಿಂತ ಹೆಚ್ಚಿನ ಅವಧಿ ಬೇಕಾಗಿತ್ತು. ಈ ಬಾರಿ ಕೆರೆಗಳಲ್ಲಿ ಅಲ್ಪಸ್ವಲ್ಪ ನೀರಿದ್ದರೂ ಈಗಿನ ಪ್ರಮಾಣದಲ್ಲಿ (200 ರಿಂದ 250 ಕ್ಯುಸೆಕ್ಸ್) ನೀರು ಹರಿದರೆ ಕನಿಷ್ಠ ಎರಡು ತಿಂಗಳು ಬೇಕಾಗಬಹುದು.

ತುಮಕೂರು ವಿಭಾಗದ ಟಿ. ಸುಬ್ರಹ್ಮಣ್ಯ ನಾಲೆ ಪ್ರಾರಂಭವಾಗುವ ಸ್ಥಳದಿಂದ 30 ಕಿ.ಮೀ. ವರೆಗೆ ಹಾದು ಬಂದವರಿಗೆ ನಾಲಾ ಕಾಮಗಾರಿ ಪೂರ್ಣವಾಗಿರುವುದು ಸ್ಪಷ್ಟವಾಗುತ್ತದೆ. 30 ಕಿ.ಮೀನಲ್ಲಿರುವ ಈಚನೂರು ವರೆಗೆ ನೀರು ಬಿಡಲು ಸದ್ಯಕ್ಕೆ ಅಡ್ಡಿಗಳೇನಿಲ್ಲ. ಅಲ್ಲಿಯವರೆಗೆ ನೀರು ಹರಿದರೆ ತಿಪಟೂರು ಪಟ್ಟಣಕ್ಕೆ ಕುಡಿಯುವ ನೀರು ಪೂರೈಸುವ ಯೋಜನೆಯನ್ನೂ ಪೂರ್ಣಗೊಳಿಸಬಹುದು. (ಅಲ್ಲಿನ್ನೂ ಕೊಳವೆಗಳನ್ನು ಹಾಕುವ ಕೆಲಸವೇ ಪ್ರಾರಂಭವಾಗಿಲ್ಲವೆಂಬುದು ಬೇರೆ ಮಾತು). ಬಹುಶಃ ಇದಕ್ಕಾಗಿ ಸದ್ಯದಲ್ಲಿಯೇ ರೈತರು ಮತ್ತೊಂದು ಹೋರಾಟಕ್ಕೆ ಸಜ್ಜಾಗಬೇಕೇನೋ?

**(ಪ್ರಜಾವಾಣಿ : 7-9-1995)**

## ವೈ.ಕೆ. ರಾಮಯ್ಯ ಪ್ರಕರಣ ಪ್ರಸ್ತಾಪ

ಹೇಮಾವತಿ ನದಿ ನೀರಿನ ಯೋಜನೆಯನ್ನು ಆಗ್ರಹಿಸಿ ಕಾರಾಗೃಹದಲ್ಲಿರುವ ಸಮಾಜವಾದಿ ಜನತಾಪಕ್ಷದ ನಾಯಕ ವೈ.ಕೆ. ರಾಮಯ್ಯ ಅವರ ಪ್ರಕರಣ ಇಂದು ವಿಧಾನ ಪರಿಷತ್ತಿನಲ್ಲಿ ಪ್ರಸ್ತಾಪಗೊಂಡು, ಕಾಂಗ್ರೆಸ್ ಸದಸ್ಯರಿಗೂ ಹಾಗೂ ಜನತಾದಳದವರ ಮಧ್ಯೆ ಆಕ್ರೋಶಕ್ಕೆ ಕಾರಣವಾಯಿತು.

ಕಾಂಗ್ರೆಸ್ಸಿನ ಕೆ. ಮಲ್ಲಣ್ಣ ಶೂನ್ಯ ವೇಳೆಯಲ್ಲಿ ಈ ವಿಷಯ ವಿವರಿಸುತ್ತ, ತುಮಕೂರು ನಗರಕ್ಕೆ ಹೇಮಾವತಿ ನದಿ ನೀರನ್ನು ಕೊಡಿರಿ ಎಂದು ಆಗ್ರಹಿಸಿ ಸತ್ಯಾಗ್ರಹ ಮಾಡಿದ್ದು ತಪ್ಪೇ? ಅವರನ್ನು ಬಂಧಿಸಿ ಜೈಲಿಗೆ ಹಾಕಬೇಕೆ? ಎಂದು ಪ್ರಶ್ನಿಸಿದರು. ದೇವೇಗೌಡರ ಸರ್ಕಾರ ತುಮಕೂರಿಗೆ ಅನ್ಯಾಯ ಮಾಡುತ್ತಿದೆ ಎಂದರು. ಇದಕ್ಕೆ ಪೂರಕವಾಗಿ ಕಾಂಗ್ರೆಸ್ಸಿನ ಭೀಮಣ್ಣ ಖಂಡ್ರೆ ಹಾಗೂ ಎಚ್.ಕೆ. ಪಾಟೀಲ್ ಅವರು, ನಮ್ಮ ಕಾಂಗ್ರೆಸ್ ಸರ್ಕಾರ ಈ ಬಗ್ಗೆ ಪ್ರಯತ್ನ ಮಾಡಿತ್ತು. ಉದ್ದೇಶಪೂರ್ವಕವಾಗಿ ಈ ಯೋಜನೆಗೆ ಹಣ ನೀಡದೇ ರಾಮಯ್ಯ ಅವರನ್ನು ಬಂಧಿಸಿತು ಎಂದು ದೂರಿದರು.

**ಕಾಂಗ್ರೆಸ್ಸಿನ ಇನ್ನೊಬ್ಬ ಸದಸ್ಯ ಮರಿಲಿಂಗೇಗೌಡ ಅವರು, ನೀರಾವರಿಗೆ 300 ಕೋಟಿ ರೂ. ಹಣ ಕೊಡಲಿಲ್ಲ ಎಂದು ಆಪಾದಿಸಿ ನಿಮ್ಮ ಮುಖ್ಯಮಂತ್ರಿಗಳು ಆಗ ಸರ್ಕಾರದಿಂದ ಹೊರಗೆ ಬಂದರು. ಆದರೆ ಈಗ ರಾಮಯ್ಯ ಅವರನ್ನು ಬಂಧಿಸಿ ಜೈಲಿಗೆ ಕಳಿಸುವದೇ ಎಂದು ಚುಚ್ಚಿದರು.**

ಕೆ.ಪಿ.ಸಿ.ಯ ಸುದರ್ಶನ್, ಬಿಜೆಪಿಯ ರಾಮಚಂದ್ರೇಗೌಡ ಅವರು, ರಾಮಯ್ಯ ಅವರ ಮನ ಒಲಿಸಿ, ಚರ್ಚಿಸಿ ಅವರನ್ನು ಜೈಲಿನಿಂದ ಹೊರಗೆ ಬರುವಂತೆ ಮಾಡಬೇಕೆಂದರು. ಕೆ. ಮಲ್ಲಣ್ಣ ಮತ್ತು ಎಚ್.ಕೆ. ಪಾಟೀಲರು, ರಾಮಯ್ಯ ಅವರ ಮೇಲೆ ಹಾಕಿದ ಕೇಸ್ ವಾಪಸು ತೆಗೆದುಕೊಳ್ಳಬೇಕೆಂದರು.

**(ಸಂಯುಕ್ತ ಕರ್ನಾಟಕ : 6-6-1995)**

## ರಾಮಯ್ಯ ವಿರುದ್ಧದ ಮೊಕದ್ದಮೆ ವಾಪಸ್

**ಹೇಮಾವತಿ ನಾಲಾ ಕಾಮಗಾರಿಯನ್ನು ಮುಂದುವರಿಸುವಂತೆ ಆಗ್ರಹಿಸಿ ಸತ್ಯಾಗ್ರಹ ನಡೆಸಿದ ಆರೋಪದ ಮೇಲೆ ಈಗ ನ್ಯಾಯಾಂಗ ಬಂಧನದಲ್ಲಿರುವ ಮಾಜಿ ಸಚಿವ ವೈ.ಕೆ. ರಾಮಯ್ಯ ಅವರ ವಿರುದ್ಧ ಹೂಡಿರುವ ಮೊಕದ್ದಮೆಗಳನ್ನು ಸರ್ಕಾರ ಹಿಂತೆಗೆದುಕೊಂಡಿದೆ ಎಂದು ಗೃಹ ಸಚಿವ ಪಿ.ಜಿ.ಆರ್. ಸಿಂಧ್ಯಾ ಪ್ರಕಟಿಸಿದರು.**

ವಿಧಾನಸಭೆಯಲ್ಲಿಂದು ಸಂಜೆ ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸುವ ನಿರ್ಣಯದ ಮೇಲೆ ಚರ್ಚೆ ನಡೆದಿದ್ದ ಸಂದರ್ಭದಲ್ಲಿ ಮಧ್ಯ ಪ್ರವೇಶಿಸಿ ಈ ಹೇಳಿಕೆ ನೀಡಿದ ಅವರು, ಸತ್ಯಾಗ್ರಹ ನಿಲ್ಲಿಸುವಂತೆ ರಾಮಯ್ಯ ಅವರನ್ನು ಈ ಮೂಲಕ ವಿನಂತಿಸುವುದಾಗಿ ತಿಳಿಸಿದರು.

ಕನ್ನಡ ಚಳವಳಿಯ ವಾಟಾಳ್‌ನಾಗರಾಜ್ ಅವರ ಪ್ರಸ್ತಾಪಕ್ಕೆ ಉತ್ತರಿಸಿದ ಗೃಹಮಂತ್ರಿ ಸಿಂಧ್ಯಾ ಅವರು, ರಾಮಯ್ಯ ಅವರನ್ನು ಬಂಧನದಿಂದ ಬಿಡುಗಡೆ ಮಾಡಲು ಅಗತ್ಯವಾದ ಎಲ್ಲ ಕ್ರಮಗಳನ್ನು ಕೈಗೊಳ್ಳುವುದಾಗಿ ಹೇಳಿದರು.

ರಾಮಯ್ಯ ಅವರೇ ಸ್ವತಃ ನ್ಯಾಯಾಲಯಕ್ಕೆ ಮುಚ್ಚಳಿಕೆ ನೀಡಿ ಬಿಡುಗಡೆ ಆಗಬಹುದು ಎಂಬ ಸಚಿವರ ಹೇಳಿಕೆಯನ್ನು ಹಲವಾರು ಸದಸ್ಯರು ಒಪ್ಪದೆ, ಸರ್ಕಾರವೇ ರಾಮಯ್ಯ ಅವರನ್ನು ಬಿಡುಗಡೆ ಮಾಡಲು ಮುಂದಾಗಬೇಕು ಎಂದು ಕೋರಿದರು.

ಮಾಜಿ ಮುಖ್ಯಮಂತ್ರಿ ಬಂಗಾರಪ್ಪ ಹಾಗೂ ಮಾಜಿ ಮಂತ್ರಿಗಳಾದ ಕಾಗೋಡು ತಿಮ್ಮಪ್ಪ ಮತ್ತು ಕೆ.ಎಸ್. ನಾಗೇಗೌಡ ಮತ್ತಿತರ ಒತ್ತಾಯಕ್ಕೆ ಮಣಿದ ಸಚಿವ ಸಿಂಧ್ಯಾ ಅವರು, ಹೇಮಾವತಿ ನದಿ ನೀರಿಗೆ ಸಂಬಂಧಿಸಿದಂತೆ ಹೋರಾಟ ಮಾಡಿ ಜೈಲಿಗೆ ಹೋಗಿರುವ ರಾಮಯ್ಯ ಅವರ ಬಿಡುಗಡೆಗೆ ಕ್ರಮ ಕೈಗೊಳ್ಳಲಾಗುವುದು ಎಂದರು.

(ಸಂಯುಕ್ತಕರ್ನಾಟಕ : 6-6-1995)

## ತುಮಕೂರು ಜಿಲ್ಲೆಗೆ ಹೇಮಾವತಿ : ಬಲಿದಾನಕ್ಕೂ ಸಿದ್ಧ : ವೈ.ಕೆ.ಆರ್

ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಹರಿಯಲು ಎಂತಹ ತ್ಯಾಗ, ಬಲಿದಾನಕ್ಕೂ ಸಿದ್ಧವೆಂದು ಹೇಮಾವತಿ ನಾಲಾ ವಲಯ ಅಚ್ಚುಕಟ್ಟುದಾರರ ವೇದಿಕೆ ಅಧ್ಯಕ್ಷ ವೈ.ಕೆ.ರಾಮಯ್ಯ ತಿಳಿಸಿದರು. ಅವರು ಸಿ.ಎಸ್. ಪುರ ಗ್ರಾಮದ ಸಂತೆ ಮೈದಾನದಲ್ಲಿ ಅಚ್ಚುಕಟ್ಟುದಾರರ ವೇದಿಕೆ ಏರ್ಪಡಿಸಿದ್ದ, ತುಮಕೂರು, ಕುಣಿಗಲ್ ಮಾರ್ಗದ ಹೇಮಾವತಿ ಮುಖ್ಯ ನಾಲಾ ಕಾಮಗಾರಿ ಆರಂಭಿಸುವುದಕ್ಕೆ ಒತ್ತಾಯಿಸುವ ಪ್ರತಿಭಟನಾ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿದ್ದರು.

ಸರಕಾರ ನೀಡಿದ ಗಡುವಿನಂತೆ ತುಮಕೂರು, ಕುಣಿಗಲ್ ಮಾರ್ಗವನ್ನು ಇನ್ನು 15 ತಿಂಗಳಲ್ಲಿ ಪೂರ್ಣಗೊಳಿಸಬೇಕಾಗಿದ್ದು ಅವಧಿ ತೀರುತ್ತಾ ಬಂದಿದ್ದರೂ, ಕಾಮಗಾರಿ ಆರಂಭವಾಗಿಲ್ಲವೆಂದು ತಿಳಿಸಿದ ಅವರು, ಅಧಿಕಾರಕ್ಕಾಗಿ ಎಂದೂ ಆಸೆ ಪಡದೆ ರೈತರ ಹಿತಕ್ಕಾಗಿ ಶ್ರಮಿಸುವೆನೆಂದರು.

ರಾಜ್ಯ ರಾಜಕಾರಣದಲ್ಲಿ ಯಾರ ಬೆಂಬಲವಿಲ್ಲದೆ ಜನಪ್ರಿಯತೆ ಹೊಂದುತ್ತಿರುವ ನನ್ನನ್ನು ಜಿಲ್ಲೆಯ ರಾಜಕಾರಣಿಗಳು ತೇಜೋವಧೆ ಮಾಡಲೆತ್ನಿಸುತ್ತಿದ್ದು, ಯಾರ ಬೆದರಿಕೆಗೂ ಜಗ್ಗದೆ ನನ್ನ ಹೋರಾಟದ ಫಲವಾಗಿ ಜಿಲ್ಲೆಗೆ ಹೇಮಾವತಿ ನೀರು ಹರಿದಿರುವ ಬಗ್ಗೆ ಸಂತೃಪ್ತಿಯಿದೆಯೆಂದು ಭಾವುಕರಾಗಿ ನುಡಿದರು.

ಹೇಮಾವತಿಗಾಗಿ ಪ್ರಧಾನಿ ದೇವೇಗೌಡರು ನನ್ನ ಮಧ್ಯ ವಿರಸ ಮೂಡಿದ್ದು, ಅದರಿಂದ ನನಗೇನೂ ನಷ್ಟವಾಗಿಲ್ಲವೆಂದು ತಿಳಿಸಿದ ರಾಮಯ್ಯ, ಹನಿ ನೀರು ಹರಿದು ರೈತನ ಹೃದಯ ತಂಪಾಗುವುದಾದರೆ ನಾನೇ ಧನ್ಯ ಎಂದರು.

ಜಿಲ್ಲಾ ಪರಿಷತ್ ಸದಸ್ಯರುಗಳಾದ ವೈ.ಹೆಚ್. ಹುಚ್ಚಯ್ಯ, ಎಂ. ದಕ್ಷಿಣಾಮೂರ್ತಿ ಮಾತನಾಡಿ, ಹೋರಾಟಗಾರ ವೈ.ಕೆ. ರಾಮಯ್ಯನವರ ಜೊತೆಗೆ ಸದಾ ರೈತರ ಬೆಂಬಲವಿದ್ದು ಪಕ್ಷಭೇದ ಮರೆತು ಅವರ ಬೆಂಬಲಕ್ಕೆ ನಿಲ್ಲಬೇಕೆಂದು ನೆರೆದವರಲ್ಲಿ ಮನವಿ ಮಾಡಿದರು.

**(ಪ್ರಜಾವಾಣಿ : 14-9-1996)**

## ತುಮಕೂರು : ಹೇಮಾವತಿ ಯೋಜನೆ ಸ್ಪಷ್ಟನೆಗೆ ಆಗ್ರಹ

ಈ ತಿಂಗಳ 30ರೊಳಗೆ ಬುಗುಡನಹಳ್ಳಿ ಕೆರೆಗೆ, ಅಲ್ಲಿಂದ ತುಮಕೂರು ನಗರಕ್ಕೆ ನೀರು ಹರಿಸುವುದಾಗಿ ಹಿಂದಿನ ಮುಖ್ಯಮಂತ್ರಿಗಳು, ನೀಡಿರುವ ಆಶ್ವಾಸನೆ ಬಗ್ಗೆ ತಮ್ಮ ನಿಲುವನ್ನು ಸ್ಪಷ್ಟಪಡಿಸಬೇಕೆಂದು ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆಯ ಅಧ್ಯಕ್ಷ ಹಾಗೂ ಮಾಜಿ ಸಚಿವ ವೈ.ಕೆ. ರಾಮಯ್ಯ ಮುಖ್ಯಮಂತ್ರಿ ಜೆ.ಹೆಚ್. ಪಟೇಲ್ ಅವರನ್ನು ಆಗ್ರಹ ಪಡಿಸಿದ್ದಾರೆ.

ಕಳೆದ ಫೆಬ್ರವರಿ 27ರಂದು ವಿಧಾನಸಭೆಯಲ್ಲಿ ಹಾಗೂ ಇತ್ತೀಚಿನ ಲೋಕಸಭಾ ಚುನಾವಣೆಯ ಪ್ರಚಾರ ಭಾಷಣದಲ್ಲಿ ಆಗಿನ ಮುಖ್ಯಮಂತ್ರಿ ಎಚ್.ಡಿ. ದೇವೇಗೌಡ ಅವರು ತುಮಕೂರಿಗೆ ಹೇಮಾವತಿ ನೀರು ನೀಡುವುದಾಗಿ ಆಶ್ವಾಸನೆ ನೀಡಿರುವ ಹಿನ್ನೆಲೆಯಲ್ಲಿ ಹೊಸ ಸರಕಾರದ ನಿಲುವನ್ನು ತಿಳಿದುಕೊಳ್ಳಲು ತಾವು ಉತ್ಸುಕರಾಗಿದ್ದಾಗಿ ಅವರು ಇಂದು ಇಲ್ಲಿ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

''ಭರವಸೆ ನೀಡಿದ ಮುಖ್ಯಮಂತ್ರಿಗಳಾಗಲಿ ಅವರ ರಾಗಕ್ಕೆ ತಾಳ ಹಾಕಿದ ಜಿಲ್ಲಾ ಸಚಿವರಾಗಲಿ ಈಗ ಆ ಸ್ಥಾನಗಳಲ್ಲಿ ಇಲ್ಲ.

ಯಾವುದೇ ಬೇಡಿಕೆ ಈಡೇರಿಸಿಕೊಳ್ಳಲು ಸಂಘರ್ಷವೇ ಏಕೈಕ ಮಾರ್ಗವಲ್ಲ. ಆದರೆ ಬರೆದ ಪತ್ರಕ್ಕೆ ಉತ್ತರಿಸುವ ಕನಿಷ್ಠ ಸೌಜನ್ಯವನ್ನೂ ತೋರಿಸದಿರುವ ಅನಾಗರಿಕ ವ್ಯವಸ್ಥೆಯಲ್ಲಿ ಹೋರಾಟ ಅನಿವಾರ್ಯವಾಗಿತ್ತು ಎಂದು ಮುಖ್ಯಮಂತ್ರಿಗಳಿಗೆ ಬರೆದ ಪತ್ರದಲ್ಲಿ ತಾವು ತಿಳಿಸಿದ್ದಾಗಿ ಅವರು ಹೇಳಿದರು.

ಈ ತಿಂಗಳ 30ರೊಳಗೆ ನೀರು ಬಿಡದಿದ್ದಲ್ಲಿ ಕೇವಲ ಮತಗಳಿಕೆಗಾಗಿ ಸುಳ್ಳು ಭರವಸೆ ನೀಡಿದ ಸರಕಾರದ ವಿರುದ್ಧ ಈ ಜಿಲ್ಲೆಯ ಜನ ಏನು ಮಾಡಬೇಕು ಎನ್ನುವುದನ್ನು ನಿರ್ಧರಿಸಲಿದ್ದಾರೆ ಎಂದು ತಾವು ಈಗಾಗಲೇ ಹಿಂದಿನ ಮುಖ್ಯಮಂತ್ರಿಗಳಿಗೆ ಪತ್ರ ಬರೆದಿದ್ದು, ಕೆರೆಯಲ್ಲಿ ತುಂಬಿರುವ ನೀರನ್ನು ಒಣಗಿದ ಭೂಮಿಗೆ, ದಣಿದ ಬಾಯಿಗೆ ಬಿಡಿ ಎನ್ನುವ ಸಹಜ ಬೇಡಿಕೆಯನ್ನು ಈಡೇರಿಸಿಕೊಳ್ಳಲು ತಾವು ಮತ್ತೆ ಜೈಲಿಗೆ ಹೋಗುವ ಅವಶ್ಯಕತೆ ಬರಲಾರದೆಂದು ನಂಬಿದ್ದೇನೆ ಎಂದು ಅವರು ಹೇಳಿದರು.

ತಾವು ಈಗಾಗಲೇ ಹೇಮಾವತಿ ನಾಲಾ ಕೆಲಸ ನಡೆಯುವ ಸ್ಥಳಕ್ಕೆ ಭೇಟಿ ನೀಡಿದ್ದು, ಹೊಸ ಸರಕಾರ ಬಂದನಂತರ ಹೆಚ್ಚಿನ ವೇಗದಿಂದ ಕೆಲಸ ನಡೆಯುತ್ತಿದ್ದು ಇದೇ ರೀತಿ ಕೆಲಸ ಮುಂದುವರಿದರೆ, ನಿಗದಿತ ಸಮಯದಲ್ಲಿ ಕೆರೆಗೆ ನೀರು ಬರಬಹುದು ಎಂದ ಅವರು, ಮಳೆ ಬರುತ್ತಿರುವ ಈ ಸಮಯದಲ್ಲಿ ನಾಲಾದಲ್ಲಿ ನೀರು ಬಿಟ್ಟರೆ ಕುಸಿಯುವ ಸಾಧ್ಯತೆಗಳಿಲ್ಲವೇ ಎಂಬ ಪ್ರಶ್ನೆಗೆ, ಕುಸಿದರೆ ಮಾತ್ರ ಎಲ್ಲಿ ಲೈನಿಂಗ್ ಕೆಲಸ ನಡೆಸಬೇಕಾಗುತ್ತದೆ ಎಂಬ ಚಿತ್ರಣ ಸಿಗುತ್ತದೆ ಎಂದರು. ರಾಜ್ಯದಲ್ಲಿ ನೀರಾವರಿಗೆ ಒದಗಿಸಿದ ಹಣವನ್ನು ಸರ್ಕಾರವು ಪೂರ್ಣವಾಗಿ ವ್ಯಯಮಾಡದೆ ರೈತರಿಗೆ ದ್ರೋಹ ಬಗೆಯುತ್ತಾ ಬಂದಿದೆ ಎಂದು ಹೇಳಿದರು.

**(ಪ್ರಜಾವಾಣಿ : 15-6-1996)**

## ತಮಿಳುನಾಡಿಗೆ ಹೇಮಾವತಿ ನೀರು : ಪ್ರತಿಭಟನೆಗೆ ವೈಕೆಆರ್ ಕರೆ

ಹೇಮಾವತಿ ನೀರನ್ನು ಕದ್ದು ಮುಚ್ಚಿ ತಮಿಳುನಾಡಿಗೆ ಬಿಡುತ್ತಿರುವ ಸರ್ಕಾರದ ಕ್ರಮವನ್ನು ಖಂಡಿಸುವ ಸಲುವಾಗಿ ಸೆ.26ರಂದು ಜಿಲ್ಲಾಧಿಕಾರಿಗಳ ಕಛೇರಿ ಮುಂಭಾಗ ಬೃಹತ್ ಪ್ರತಿಭಟನೆಯನ್ನು ಹಮ್ಮಿಕೊಳ್ಳಲಾಗಿದೆ ಎಂದು ಸಮಾಜವಾದಿ ಪಕ್ಷದ ನಾಯಕ ಹಾಗೂ ಮಾಜಿ ಸಚಿವರಾದ ವೈ.ಕೆ. ರಾಮಯ್ಯ ತಿಳಿಸಿದರು.

ಅವರು ಗುರುವಾರ ನಗರದ ಪ್ರವಾಸಿ ಮಂದಿರದಲ್ಲಿ ಹೇಮಾವತಿ ಅಚ್ಚುಕಟ್ಟುದಾರರ ಸಭೆಯ ನಂತರ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡುತ್ತಾ, ಈ ಪ್ರತಿಭಟನೆಗೆ ಜಿಲ್ಲೆಯ ಎಲ್ಲಾ

ರಾಜಕೀಯ ಪಕ್ಷಗಳನ್ನು ಆಹ್ವಾನಿಸಲಾಗುತ್ತಿದ್ದು, ಈಗಾಗಲೇ ನವ ನಿರ್ಮಾಣ ವೇದಿಕೆ ತಮ್ಮ ಬೆಂಬಲ ವ್ಯಕ್ತಪಡಿಸಿದೆ ಎಂದು ಹೇಳಿದರು.

ಹೇಮಾವತಿ ನೀರು ಜೂನ್ 30ರೊಳಗೆ ಬುಗುಡನಹಳ್ಳಿ ಕೆರೆಗೆ ಬರುತ್ತದೆ ಎಂದು ಹೇಳಿದ ಸರ್ಕಾರ, ಇಂದಿಗೂ ನೀರು ಬಂದಿಲ್ಲದಿರುವುದನ್ನು ನೋಡಿದರೆ **'ನುಡಿದಂತೆ ನಡೆಯದ ಸರ್ಕಾರ'** ಎಂಬುದನ್ನು ಸಾಬೀತುಪಡಿಸಿದೆ. ಅಲ್ಲದೆ ತುಮಕೂರಿನಿಂದ ಕುಣಿಗಲ್‌ವರೆಗೆ ಕಾಲುವೆ ಕೆಲಸ ಮಾಡುವಂತೆ ನಾವು ಒತ್ತಾಯಿಸುತ್ತಾ ಬೇಡಿಕೆ ಮುಂದಿಟ್ಟಿದ್ದರೂ ಈ ಬಗ್ಗೆ ಚರ್ಚೆಯಾಗಲಿ, ಪ್ರಸ್ತಾಪವಾಗಲಿ ಅಥವಾ ಯಾವುದೇ ತೀರ್ಮಾನವಾಗಿಲ್ಲ ಎಂದು ತಿಳಿಸಿದರು.

ಈ ಬಗ್ಗೆ ನನಗೆ ಪತ್ರ ಬರೆದು ಜಿಲ್ಲೆಯ ಜನತೆಗೆ ಆಶ್ವಾಸನೆ ನೀಡಿದ ನೀರಾವರಿ ಸಚಿವರು, ಕುಣಿಗಲ್ ಕಾಲುವೆ ಬಗ್ಗೆ ಈವರೆಗೂ ಸರ್ವೆ ನಡಿಸಿಲ್ಲ. 4 ಬಾರಿ ಟೆಂಡರ್ ಮುಂದಕ್ಕೆ ಹಾಕಿದ್ದಾರೆ. ಇದಕ್ಕೆ ಕಾರಣ ಅವರಿಗೆ ಬೇಕಾದವರಿಗೇ ಟೆಂಡರ್ ನೀಡಲು ಈ ರೀತಿ ಮಾಡಿದ್ದಾರೆಂದು ಹೇಳಿದರು. ಕುಣಿಗಲ್ ಕಾಲುವೆ ಕೆಲಸಕ್ಕೆ 112 ಕೋಟಿ ರೂ. ಹಣ ಬೇಕಾಗಿದ್ದು, ಈವರೆಗೆ ಕೇವಲ 3 ಕೋಟಿ ರೂ.ಗಳನ್ನು ಮಾತ್ರ ಸರ್ಕಾರ ನೀಡಿದೆ ಎಂದರು.

ರಾಜ್ಯದ ನೀರಾವರಿ ಸಚಿವರು ಇತ್ತೀಚೆಗೆ ಹೇಮಾವತಿ ಕಾಮಗಾರಿ ಕೆಲಸವನ್ನು ವೀಕ್ಷಿಸಲು ಜಿಲ್ಲೆಗೆ ಆಗಮಿಸಿ, ನಾಲೆಯಲ್ಲಿ ಕಳಪೆ ಕಾಮಗಾರಿ ಕೆಲಸಗಳನ್ನು ಖುದ್ದಾಗಿ ವೀಕ್ಷಿಸಿದರೂ ಈ ಬಗ್ಗೆ ಚರ್ಚಿಸದೇ, ಪರಿಶೀಲಿಸದೆ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳದೆ ಇರುವುದಕ್ಕೆ ಕಾರಣವೇನು? ಸಚಿವರೊಂದಿಗೆ ಇದ್ದ ಜಿಲ್ಲೆಯ ಜನಪ್ರತಿನಿಧಿಗಳು ತಮ್ಮ ಮೌನ ಮುರಿಯದಿರಲು ಕಾರಣವೇನು? ಎಂದು ಪ್ರಶ್ನಿಸಿದ ಅವರು, ಇದೆಲ್ಲಾ ಅಧಿಕಾರಿಗಳ ಮತ್ತು ಜನಪ್ರತಿನಿಧಿಗಳ ಹೊಂದಾಣಿಕೆಯಾಗಿದೆ ಎಂದು ತಿಳಿಸಿದರು.

ತುಮಕೂರು ನಗರ ಹಾಗೂ ತಿಪಟೂರು ಪಟ್ಟಣಕ್ಕೆ ಕುಡಿಯುವ ನೀರು ಪೂರೈಕೆಯಾಗಲು ಇಂದಿನಿಂದ ಕೆಲಸ ಆರಂಭಿಸಿದರೂ ಇನ್ನೂ 2 ವರ್ಷ ಬೇಕಾಗುತ್ತದೆ. ಇದಕ್ಕೆ ತಾಂತ್ರಿಕ, ಆಡಳಿತಾತ್ಮಕ ಅಡಚಣೆ ಇಲ್ಲದೆ ಕೇವಲ ಆರ್ಥಿಕ ಕಾರಣ ಮಾತ್ರವೆಂದು ತಿಳಿಸಿದರು. ನಗರಸಭೆ ಮತ್ತು ಸರ್ಕಾರ ತಮ್ಮ ಪಾಲಿನ ಹಣವನ್ನು ಕೂಡಲೇ ಜಮಾ ಮಾಡಿ ಹುಡ್ಕೋದಿಂದ ಉಳಿಕೆ ಹಣ ಬಿಡುಗಡೆಗೆ ಒತ್ತಡ ತಂದರೆ ಕುಡಿಯುವ ನೀರು ಪೂರೈಕೆಯಾಗುತ್ತದೆ ಎಂದು ಹೇಳಿದರು.

ಈ ನೆಲದ ಕಾನೂನನ್ನು ಸಮಾನವಾಗಿ ಹಂಚಲಾಗುವುದು ಎಂಬ ಸರ್ಕಾರದ ಘೋಷಣೆ ಬರೀ ಘೋಷಣೆಯಾಗಿದೆ ವಿನಃ ಕಾರ್ಯರೂಪಕ್ಕಿಲ್ಲ. ಉದಾ. ಕುಣಿಗಲ್‌ನಲ್ಲಿ ನಡೆದ **ಗಂಗಯ್ಯನ ಕೊಲೆಯ ಬಗ್ಗೆ ಎಂ.ಎಸ್. ಪಾಟೀಲ್ ವರದಿಯನ್ನು ಸಚಿವ ಸಂಪುಟ ಒಪ್ಪಿಗೆ ನೀಡಿದೆಯಾದರೂ ಆರೋಪಿಯಾದ ಮಾಜಿ ಸಚಿವ ರಮೇಶ್‌ರವರನ್ನು ಪ್ರಧಾನಮಂತ್ರಿಗಳ ಆಪ್ತ**

ವಲಯದ ಸದಸ್ಯರೆಂಬ ಕಾರಣದಿಂದ ಯಾವ ಕ್ರಮ ಕೈಗೊಳ್ಳದೆ ಇರುವುದು ದುರದೃಷ್ಟಕರವೆಂದು ತಿಳಿಸಿದರು.

ಪತ್ರಿಕಾಗೋಷ್ಠಿಯಲ್ಲಿ ಸಮಾಜವಾದಿ ಪಕ್ಷದ ಜಿಲ್ಲಾಧ್ಯಕ್ಷರಾದ ಹೆಚ್. ನಿಂಗಯ್ಯ, ಹೇಮಾವತಿ ಅಚ್ಚುಕಟ್ಟುದಾರರ ಸಂಘದ ಸಂಚಾಲಕ ರಾಮಲಿಂಗೇಗೌಡ, ಗುಬ್ಬಿ ಪಟ್ಟಣ ಪಂಚಾಯ್ತಿ ಅಧ್ಯಕ್ಷ ಸುರೇಶ್, ನವನಿರ್ಮಾಣ ವೇದಿಕೆಯ ತಾತಯ್ಯ, ಚಂದ್ರಶೇಖರ್, ರವಿ, ತು.ಪು. ಮಹೇಶ್ ಮೊದಲಾದವರು ಉಪಸ್ಥಿತರಿದ್ದರು.

(ಪ್ರಜಾ ಪ್ರಗತಿ : 20-9-1996)

## ಬಾಗೂರು ಸಮೀಪ ನಾಲೆಗೆ ಹಾಕಿರುವ ಮಣ್ಣು ತೆರವಿಗೆ ಜು.15ರ ನಂತರ ಹೋರಾಟಕ್ಕೆ ನಿರ್ಧಾರ – ವೈ.ಕೆ.ಆರ್.

ಹೇಮಾವತಿ ಕಾಲುವೆ ಬಗ್ಗೆ ಜುಲೈ 9ರಂದು (ಇಂದು) ವಿಧಾನಸೌಧದಲ್ಲಿ ಸಂಬಂಧಿಸಿದವರ ಸಭೆ ಕರೆದಿರುವುದರಿಂದ ಜುಲೈ 8ರಂದು ಹೇಮಾವತಿ ನಾಲೆಯ ತುಮಕೂರು ಇಂಜಿನೀಯರ್‌ರವರ ಕಛೇರಿ ಆವರಣದಲ್ಲಿ ನಡೆಸಬೇಕಾಗಿದ್ದ ರೈತರ ಪ್ರತಿಭಟನಾ ಸಭೆಯನ್ನು ಜುಲೈ 15ರ ವರೆಗೆ ಮುಂದೂಡಿರುವುದಾಗಿ ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆಯ ಅಧ್ಯಕ್ಷ ಹಾಗೂ ಮಾಜಿ ಸಚಿವ ವೈ.ಕೆ. ರಾಮಯ್ಯ ತಿಳಿಸಿದರು.

ಅವರು ಬುಧವಾರದಂದು ನಗರದಲ್ಲಿ ಪತ್ರಿಕಾ ಗೋಷ್ಠಿಯನ್ನು ಉದ್ದೇಶಿಸಿ ಮಾತನಾಡುತ್ತಾ ಹಾಸನ ಜಿಲ್ಲೆಯ ಕೆಲವು ರೈತರು ತುಮಕೂರು ಜಿಲ್ಲೆಗೆ ನೀರು ಹರಿದು ಬರುವ ಕಾಲುವೆಯನ್ನು ಮುಚ್ಚಿ ನೀರನ್ನು ತಡೆ ಹಿಡಿದರುವ ಕ್ರಮವನ್ನು ಪ್ರತಿಭಟಿಸಿ ಹಾಗೂ ಸರ್ಕಾರ ಕಾಲುವೆಯನ್ನು ತೆರವು ಮಾಡಿಸಿ ಜಿಲ್ಲೆಗೆ ನೀರು ನೀಡಬೇಕೆಂದು ಒತ್ತಾಯಿಸಿ ಜುಲೈ7ರವರೆಗೆ ಗಡುವು ನೀಡಿ ನಂತರ ಪ್ರತಿಭಟನಾ ಸಭೆ ನಡೆಸಲು ನಿರ್ಧರಿಸಲಾಗಿತ್ತು ಎಂದು ಹೇಳಿದರು.

ಹೇಮಾವತಿ ನಾಲಾ ವಿಷಯದ ಬಗ್ಗೆ ಸರ್ಕಾರ ಇಂದು ಸಭೆ ಕರೆದಿದ್ದು ಸಭೆಗೆ ಭಾಗವಹಿಸಲು ತಮಗೂ ಆಹ್ವಾನ ನೀಡಲಾಗಿದೆ ಎಂದ ಅವರು, ಸದರಿ ಸಭೆಯಲ್ಲಿ ಭಾಗವಹಿಸುವುದಾಗಿ ತಿಳಿಸಿದರು.

ಹಾಸನ ಮತ್ತು ತುಮಕೂರು ಜಿಲ್ಲೆಯ ನಾಲಾ ರೈತರ ಸಮಸ್ಯೆ ಬಗ್ಗೆ ಚರ್ಚಿಸಲು ಮುಂದೆ ಬಂದಿರುವ ಸರ್ಕಾರದ ಕ್ರಮವನ್ನು ಸ್ವಾಗತಿಸಿದ ವೈ.ಕೆ. ರಾಮಯ್ಯನವರು ಜಿಲ್ಲೆಯ ರೈತರಿಗೆ ಇದೊಂದು ಶುಭಸೂಚನೆ ಎಂದರು.

ಇದಲ್ಲದೆ ಸಚಿವ ಹೆಚ್.ಡಿ. ರೇವಣ್ಣನವರ ಅಧ್ಯಕ್ಷತೆಯಲ್ಲಿ ಇದೇ 10ರಂದು ಹೇಮಾವತಿ ಯೋಜನೆ ನೀರಾವರಿ ಸಲಹಾ ಸಮಿತಿ ಸಭೆ ಕರೆದಿರುವುದಾಗಿ ತಿಳಿದುಬಂದಿದೆ ಎಂದ ಅವರು, ಈ ಸಭೆಯಲ್ಲಿ ಸಮಸ್ಯೆ ಇತ್ಯರ್ಥವಾಗಲಿ ಎಂದು ಆಶಯ ವ್ಯಕ್ತಪಡಿಸಿದರು.

ಹೇಮಾವತಿ ಜಲಾಶಯದಿಂದ ಇದೇ 15ರಂದು ತುಮಕೂರು ನಾಲೆಗೆ ನೀರು ಬಿಡುವ ಸಂಭವವಿದೆ ಎಂದ ಅವರು, ಅಷ್ಟರೊಳಗೆ ಹಾಸನ ಜಿಲ್ಲೆಯ ಬಾಗೂರು-ನವಿಲೆ ರೈತರ ಸಮಸ್ಯೆಗಳನ್ನು ಇತ್ಯರ್ಥ ಪಡಿಸುವ ಮುನ್ಸೂಚನೆಗಳು ಕಂಡು ಬರುತ್ತಿವೆ ಎಂದರು.

ಬಾಗೂರು-ನವಿಲೆ ಸುರಂಗ ಮಾರ್ಗದ ಬಳಿ ಹೇಮಾವತಿ ನಾಲೆಗೆ ಹಾಕಿರುವ ಅಡ್ಡಗೋಡೆಯನ್ನು ತೆರವು ಮಾಡಲು ಸರ್ಕಾರ ಜುಲೈ 9 (ಇಂದು) ಹಾಗೂ ಜುಲೈ 10 (ನಾಳೆ) ತೆಗೆದುಕೊಳ್ಳುವ ತೀರ್ಮಾನದ ಮೇಲೆ ಮುಂದಿನ ಹೋರಾಟದ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗುವುದು ಎಂದು ರಾಮಯ್ಯನವರು ಸ್ಪಷ್ಟಪಡಿಸಿದರು.

ಹೇಮಾವತಿ ಜಲಾಶಯದಿಂದ ಪ್ರತಿದಿನ 250ಕ್ಕೂ ಹೆಚ್ಚು ಕ್ಯೂಸೆಕ್ಸ್ ನೀರನ್ನು ನದಿಗೆ ಬಿಡಲಾಗುತ್ತಿದ್ದು, ಈ ನೀರೆಲ್ಲ ಸಮುದ್ರ ಸೇರುತ್ತದೆ. ಆದರೆ ಸುಮ್ಮನೆ ವ್ಯರ್ಥವಾಗಿ ಹರಿಯುವ ನೀರನ್ನು ತುಮಕೂರು ಜಿಲ್ಲಾ ನಾಲೆಗೆ ರೈತರು ಬಿಟ್ಟರೆ ಜಿಲ್ಲೆಯ ಎಲ್ಲ ಕೆರೆಗಳಿಗೂ ತುಂಬಿಸಿಕೊಂಡು ಅನುಕೂಲ ಮಾಡಿಕೊಳ್ಳುವರು. ಆದ್ದರಿಂದ ಹರಿದುಹೋಗುವ ನೀರನ್ನು ಶೇಖರಿಸಿ ದಂತಾಗುವುದು ಎಂದು ಹೇಳಿದರು.

ಹೇಮಾವತಿ ಜಲಾಶಯದಿಂದ ಜಿಲ್ಲೆಗೆ 365 ದಿವಸಗಳು ನೀರು ಹರಿದು ಬರಲು ಸಾಧ್ಯವಿಲ್ಲ. ಇದು ಅಸಾಧ್ಯವಾದ ಮಾತು ಎಂದ ಅವರು, ಮುಂಗಾರಿನ ಸಮಯದಲ್ಲಿ ನಾಲೆಯಿಂದ ಹರಿದು ಬರುವ ನೀರನ್ನು ಕೆರೆಗಳಲ್ಲಿ ಸಂಗ್ರಹಿಸಿ, ನೀರಾವರಿ ಮಾಡಬಹುದಾಗಿದೆ ಎಂದು ತಿಳಿಸಿದರು.

ಭದ್ರಾ ಮೇಲ್ದಂಡೆ ಹಾಗೂ ಕುಮಾರಧಾರಾ ನೀರಾವರಿ ಯೋಜನೆಗಳ ಕಾರ್ಯಾನುಷ್ಠಾನಕ್ಕೆ ಅಪ್ಪಾಸ್ ಸಮಿತಿ ಹೋರಾಟ ನಡೆಸುತ್ತಿರುವುದನ್ನು ಶ್ಲಾಘಿಸಿದ ಅವರು ಸದರಿ ಯೋಜನೆಯನ್ನು ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಲು ತಾಂತ್ರಿಕ ತೊಂದರೆಗಳಿದ್ದು, ಈ ಹೋರಾಟ ಹೀಗೆ ಮುಂದುವರಿದರೆ ಒಂದಲ್ಲ ಒಂದು ದಿನ ಯೋಜನೆ ಕಾರ್ಯಾನುಷ್ಠಾನ ಗೊಳ್ಳುವುದು ಎಂದರು.

**(ಪ್ರಜಾವಾಣಿ : 9-7-1998)**

## ಜಿಲ್ಲೆಗೆ ಹೇಮಾವತಿ ಹರಿಯುವ ತನಕ ಪಟ್ಟು ಬಿಡದ ರಾಮಯ್ಯ

ಹೇಮಾವತಿ ನಾಲಾ ನೀರಿನ ವಿಚಾರವಾಗಿ ಆರಂಭದಿಂದಲೂ ಸರ್ಕಾರ ಮಲತಾಯಿ ಧೋರಣೆ ಅನುಸರಿಸಿ, ತುಮಕೂರು ಜಿಲ್ಲೆಗೆ ಸತತವಾಗಿ ಅನ್ಯಾಯವಾಗುತ್ತಲೇ ಇದೆ. ಅದರಲ್ಲಿಯೂ ಕೇವಲ ಹಾಸನ ಜಿಲ್ಲೆಯ ರೈತರು ಹಾಗೂ ಜನತೆಯೇ ಹೇಮಾವತಿ ನೀರಿನ ಮೇಲೆ ಏಕಸ್ವಾಮ್ಯ ಹೊಂದಿದ್ದಾರೇನೋ ಎಂಬಂತೆ, ನೀರಿನ ಸಿಂಹಪಾಲನ್ನು ಅವರಿಗೆ ಅನುಕೂಲ ವಾಗುವಂತೆ ಮಾಡಿರುವುದಂತೂ ಸತ್ಯ. ಆದರೂ ಈ ಮಧ್ಯೆ ಬಾಗೂರು-ನವಿಲೆ ಸುರಂಗ ಮಾರ್ಗ ಪೂರ್ಣವಾದನಂತರ, ಜಿಲ್ಲೆಯ ರೈತರೂ ಹಾಗೂ ಜನತೆ ಕೊನೆಗೂ ಹೇಮಾವತಿ ನೀರಿನ ಭಾಗ್ಯ ದೊರೆಯಿತೇನೋ ಎಂಬಂತೆ ನಿರಾಳವಾಗಿ ನಿಟ್ಟುಸಿರು ಬಿಡಲು ಸಿದ್ಧರಾದಾಗ, ಬಾಗೂರು-ನವಿಲೆ ಸುತ್ತಮುತ್ತಲಿನ ರೈತರು ಸುರಂಗಕ್ಕೆ ಮಣ್ಣನ್ನು ಸುರಿದು ಸತತವಾಗಿ ಅನೇಕ ತಿಂಗಳಿಂದ ತಡೆ ಒಡ್ಡಿದರೂ, ಈ ಅವಿವೇಕಿ ಸರ್ಕಾರವಾಗಲೀ, ನೀರಾವರಿ ಸಚಿವ ನಾಗೇಗೌಡರಾಗಲೀ ಅತ್ತ ತಲೆ ಹಾಕದೇ, ರೈತರನ್ನು ಸಮಾಧಾನಿಸಿ ಕೋಟ್ಯಾಂತರ ರೂ. ವೆಚ್ಚದಲ್ಲಿ ನಿರ್ಮಾಣ ವಾಗಿರುವ ಸುರಂಗದಿಂದ ನೀರನ್ನು ಹರಿಸಲು ಅಸಮರ್ಥರಾದರು. ಈ ವಿಚಾರವಾಗಿ ತುಮಕೂರು ಜಿಲ್ಲೆಗೆ ಹೇಮಾವತಿ ನೀರನ್ನು ಹರಿಸಲೇಬೇಕೆಂದು ಛಲದಿಂದ ಹೋರಾಟ ನಡೆಸಿ, ಆರಂಭದಿಂದಲೂ ಭಗೀರಥ ಪ್ರಯತ್ನ ನಡೆಸಿದ್ದ ಮಾಜಿ ಮಂತ್ರಿ ವೈ.ಕೆ. ರಾಮಯ್ಯನವರು. ತಮ್ಮ ವರ್ಷಾನುಗಟ್ಟಲೆಯ ಹೋರಾಟ, ಕನಸು ಸಫಲವಾಗುವ ಸಮಯದಲ್ಲಿ ಅನವಶ್ಯಕ ಕಾರಣಗಳಿಂದಾಗಿ, ಸರ್ಕಾರದ ವೈಫಲ್ಯತೆ ಹಾಗೂ ರಾಜಕಾರಣಿಗಳ ಉದಾಸೀನತೆಯಿಂದಾಗಿ ವಿಳಂಬವಾಗುತ್ತಿರುವುದನ್ನು ಮನಗಂಡು, ಬಹಳಷ್ಟು ನೊಂದು ಪತ್ರ ಮುಖೇನ ಹಾಗೂ ದೂರವಾಣಿಯ ಮುಖಾಂತರ ಸರ್ಕಾರದ ಸಂಬಂಧಪಟ್ಟವರನ್ನು ಸಂಪರ್ಕಿಸಿದರೂ ಯಾವುದೇ ಫಲ ನೀಡಲಿಲ್ಲ. ತಮ್ಮ ಕಣ್ಣಮುಂದೆಯೇ ನಡೆಯುತ್ತಿರುವ ರೈತ ವಿರೋಧಿ ನೀತಿಯಿಂದ ಕೆರಳಿ, ಉಗ್ರ ಹೋರಾಟಕ್ಕೆ ಸಿದ್ಧರಾದದ್ದು ನಿಜಕ್ಕೂ ಅವರ ರೈತಪರ ಧೋರಣೆಯನ್ನು ಪ್ರದರ್ಶಿಸುತ್ತದೆ.

ಸೌಮ್ಯ ಹೋರಾಟದಿಂದ ಮಲಗಿರುವ ಸರ್ಕಾರವನ್ನು ಎಚ್ಚರಿಸಲು ಅಸಾಧ್ಯ ಎಂಬುದನ್ನು ಹುಟ್ಟು ಹೋರಾಟಗಾರರಾದ ವೈ.ಕೆ.ಆರ್. ಅರಿತರು. ಜಿಲ್ಲೆಯಾದ್ಯಂತ ಅಪಾರ ರೈತ ಅಭಿಮಾನಿಗಳನ್ನು, ಬೆಂಬಲಿಗರನ್ನು ಹೊಂದಿರುವ ರಾಮಯ್ಯನವರು, ತಮ್ಮ ಉಗ್ರ ಹೋರಾಟದ ಕರೆಯನ್ನು ನೀಡಿದ್ದೇ ಅಲ್ಲದೇ, ಕೇವಲ ಆಶ್ವಾಸನೆಗಳಿಗೆ ಹೋರಾಟವನ್ನು ಕೊನೆಗಾಣಿಸುವುದು ಅಸಾಧ್ಯ. ಇದಕ್ಕೆ ಶಾಶ್ವತ ಪರಿಹಾರ ದೊರಕುವವರೆಗೂ ಹೋರಾಟವನ್ನು ಮುಂದುವರೆಸಲೇಬೇಕೆಂದು ನಿಶ್ಚಯಿಸಿದರು. ಕುಣಿಗಲ್ ಸ್ಟೇಟ್ ಬ್ಯಾಂಕ್ ಮುಂಭಾಗದಲ್ಲಿ ಇತಿಹಾಸದಲ್ಲೇ ಕಂಡು ಕೇಳರಿಯದ ರೀತಿಯ ಬೃಹತ್ ಕೋಟೆಯೋಪಾದಿಯ ಗೋಡೆಯನ್ನು ಎನ್.ಹೆಚ್.48ರಲ್ಲಿ ನಿರ್ಮಿಸಿದರು. ಅದರ ಮುಂದೆ ತಮ್ಮ ಬೆಂಬಲಿಗರೊಂದಿಗೆ ಕುಳಿತು, ತಮ್ಮ ಉಗ್ರ ಹೋರಾಟ ಆರಂಭಿಸಿದರು. ಪ್ರಾರಂಭದಲ್ಲಿ ನೂರಾರು ಜನರಿಂದ ಆರಂಭಗೊಂಡ ರಸ್ತೆ

ತಡೆ ಚಳವಳಿ, ಸಮಯವಾದಂತೆ ರಂಗೇರತೊಡಗಿತು. ರೈತ ಬಾಂಧವರು ಸ್ವ-ಇಚ್ಛೆಯಿಂದ ಭಾಗವಹಿಸತೊಡಗಿದ್ದೇ ಅಲ್ಲದೆ, ರೈತ ವಿರೋಧಿ ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗತೊಡಗಿದರು. ಈ ಮಧ್ಯೆ ಪೊಲೀಸ್ ಅಧಿಕಾರಿಗಳು, ಉಪ- ವಿಭಾಗಾಧಿಕಾರಿ ಜನ್ನಪ್ಪ, ತಹಸೀಲ್ದಾರ್ ಬಸವರಾಜ್‌ರವರು ಮಾತನಾಡಿದರೂ ಸಹ ಮೊದಲೇ ತೀರ್ಮಾನ ಮಾಡಿದಂತೆ ವೈ.ಕೆ.ಆರ್.ರವರು ನಿಮ್ಮೊಂದಿಗೆ ನಾವು ಮಾತನಾಡುವುದಿಲ್ಲ. ನೇರವಾಗಿ ಸರ್ಕಾರದಿಂದ ಮಂತ್ರಿಗಳೋ, ಮತ್ತಾರೋ ಬರಲಿ. ಅವರೊಡನೆ ಮಾತನಾಡುತ್ತೇವೆ. ಸುರಂಗವನ್ನು ತೆರವು ಮಾಡಿಸಿ, ಮರುಗಳಿಗೆಯೇ ರಸ್ತೆ ತೆರವು ಮಾಡುತ್ತೇವೆ ಎಂದು ಪಟ್ಟು ಹಿಡಿದರಲ್ಲದೇ ರೈತರಿಗೆ ಆಗಿರುವ ಅನ್ಯಾಯದ ಬಗ್ಗೆ ಮಾತನಾಡುತ್ತಾ ಕೆಲವು ಭಾರಿ ಭಾವೋದ್ವೇಗಕ್ಕೊಳಗಾದರು. ಅಲ್ಲದೆ ವೈ.ಕೆ.ಆರ್.ರವರೊಬ್ಬರನ್ನೇ ಬಂಧಿಸಬೇಡಿ, ನಮ್ಮನ್ನೂ ಬಂಧಿಸಿ ಎಂದು ನೂರಾರು ಜನರು ಮುಕ್ತಕಂಠದಿಂದ ಕೂಗುತ್ತಿದ್ದರು. ಅಲ್ಲದೇ ವೇದಿಕೆಯ ಮೇಲೆ ಸೇರಿದ್ದ ನಾಯಕರುಗಳು ಅವಿರತವಾಗಿ ಮಾತನಾಡುತ್ತ ಜನರನ್ನು ಹುರಿದುಂಬಿಸುತ್ತಿದ್ದುದು ಸ್ಮರಣೀಯವಾಗಿತ್ತು.

ವಕೀಲರ ಸಂಘದ ವತಿಯಿಂದ ಎಲ್ಲಾ ವಕೀಲರುಗಳು ಬಂದದ್ದು ಕಳೆಗಟ್ಟಿತ್ತು. ಅಲ್ಲದೇ ತುರುವೇಕೆರೆ, ಗುಬ್ಬಿಯಿಂದಲೂ ರೈತರು ಆಗಮಿಸಿ ವೈ.ಕೆ.ಆರ್.ಗೆ ಬೆಂಬಲ ಸೂಚಿಸಿದ್ದು ಅಲ್ಲದೇ ತುರುವೇಕೆರೆ ಹಾಗು ಗುಬ್ಬಿಯಲ್ಲೂ ವೈ.ಕೆ.ಆರ್. ನಾಯಕತ್ವದಲ್ಲಿ ಹಾಗೂ ಮಾರ್ಗದರ್ಶನದಲ್ಲಿ ತೀವ್ರವಾಗಿ ಚಳುವಳಿ ನಡೆಸುವುದಾಗಿ ತೀರ್ಮಾನಿಸಿದ್ದುದು ಸ್ಪಷ್ಟವಾಗಿತ್ತು. 14-7-1998ರ ದಿವಸ ರಸ್ತೆ ತಡೆ ಪೂರ್ತಿಮಾಡಿ ಯಾವುದೇ ವಿಚಾರವೂ ಇತ್ಯರ್ಥವಾಗದೇ ಮಾರನೇ ದಿವಸದವರೆಗೂ ಮುಂದುವರೆಯಿತು. ಸತತವಾಗಿ ನಾಲ್ಕು ದಿವಸ ಜಿಲ್ಲೆಯಾದ್ಯಂತ ಉಗ್ರ ಪ್ರತಿಭಟನೆ ಹಾಗೂ ರಸ್ತೆ ತಡೆ ಚಳುವಳಿಯು ನಡೆಸಿದ್ದರ ಫಲಶೃತಿಯಾಗಿ, ಕೊನೆಗೂ ಎಮ್ಮೆಚರ್ಮದ ಸರ್ಕಾರ ಎಚ್ಚೆತ್ತು ಸುರಂಗ ಮಾರ್ಗವನ್ನು ತೆರವುಗೊಳಿಸಿತು. ನಿಜವಾಗಿಯೂ ವೈ.ಕೆ.ಆರ್.ರವರ ಈ ಚಳವಳಿ, ಹೋರಾಟ ಯಶಸ್ವಿಯಾಗಿದೆ.

ಆದರೆ ಒಮ್ಮೊಮ್ಮೆ ಜಿಲ್ಲೆಯಲ್ಲಿರುವ ರಾಜಕಾರಣಿಗಳಲ್ಲಿ, ಹೋರಾಟಗಾರರಲ್ಲಿ 4 ಶಾಸಕರುಗಳಲ್ಲಿ ಮತ್ತು ರಾಮಯ್ಯನವನ್ನು ಹೊರತುಪಡಿಸಿ ಮತ್ತಾರಿಗೂ ಹೇಮಾವತಿ ನೀರು ಬೇಡವೇ ಎಂದು ಸೋಜಿಗವೆನಿಸುತ್ತದೆ. ಏಕೆಂದರೆ ರೈತರ ವಿಚಾರವಾಗಿ ವೇದಿಕೆ ಮೇಲೆಲ್ಲಾ ಭಾಷಣ ಕುಟ್ಟುವ ರಾಜಕಾರಣಿಗಳಿಗೆ, ಈ ಸಮಯದಲ್ಲಿ ರೈತನ ನೆನಪೇ ಬಾರದಿದ್ದು ವಿಪರ್ಯಾಸ. **ಒಟ್ಟಾರೆ ಹೇಮಾವತಿ ನೀರನ್ನು ತುಮಕೂರಿಗೆ ಹರಿಸುವುದರಲ್ಲಿ ಯಶಸ್ವಿಯಾಗಿರುವ, ರಾಮಯ್ಯನವರು ಜಿಲ್ಲೆಯ ಜನರ ಮನಸ್ಸಿನಲ್ಲಿ ಶಾಶ್ವತವಾಗಿ ನೆಲೆಸಿರುತ್ತಾರೆ.**

**(ಕುಣಿಗಲ್ ವಾಯ್ಸ್: 24-7-1998)**

## ಸಾವಿರ ಸೋಲಿಗೂ ಸಿದ್ಧ: ವೈ.ಕೆ. ರಾಮಯ್ಯ

**ಕುಣಿಗಲ್ ವಿಧಾನಸಭಾ ಕ್ಷೇತ್ರದ ಚುನಾವಣೆಯಲ್ಲಿ ನಾನು ಸೋಲು ಒಪ್ಪಿಕೊಂಡಿದ್ದೇನೆ ಎಂದು ಹೇಳಿದ ಮಾಜಿ ಶಾಸಕ ವೈ.ಕೆ. ರಾಮಯ್ಯ 'ನಾನು ಇಂತಹ ಸಾವಿರ ಸೋಲುಗಳಿಗೆ ಸಿದ್ಧನಾಗಿರುತ್ತೇನೆಯೇ ಹೊರತು, ಒಂದೇ ಒಂದು ಶರಣಾಗತಿಗೆ ಸಿದ್ಧನಿಲ್ಲ' ಎಂದು ಹೇಳಿದರು.**

ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ವೈ.ಕೆ .ರಾಮಯ್ಯ, ರಾಜ್ಯದಲ್ಲಿ ಜನತಾದಳದ ಅಲೆಯಿದ್ದುದರಿಂದ ನಾನು ಸೋತೆ ಎಂದು ಹೇಳಿದರಲ್ಲದೆ, ನಂಬಿದವರು ಮೋಸ ಮಾಡಿದ್ದೂ ನನ್ನ ಸೋಲಿಗೆ ಕಾರಣ ಎಂದು ಹೇಳಿದರು. ಸೋಲಿಗೆ ಯಾರನ್ನೂ ದೋಷಾರೋಪಣೆ ಮಾಡುವುದಿಲ್ಲ. ಸೋಲಿನಿಂದ ವ್ಯಥೆಯೂ ಇಲ್ಲ ಎಂದು ಹೇಳಿದ ಅವರು, ಇದರಿಂದ ನನ್ನ ಕಾರ್ಯ ಶೈಲಿಯಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ ಎಂದರು.

ಶಾಸಕನಾಗಿದ್ದಾಗ ನಾನು ಜವಾಬ್ದಾರಿಯಿಂದ ಸೋತಿಲ್ಲ. ಆದ್ದರಿಂದ ನನಗೆ ಈ ಸೋಲಿನ ಬಗ್ಗೆ ಆತಂಕವಿಲ್ಲ ಎಂದು ವಿವರಿಸಿದ ವೈ.ಕೆ. ರಾಮಯ್ಯ ಅವರು, ಸೋತೆ ಎಂಬ ಕಾರಣಕ್ಕೆ ನಾನು ಪಕ್ಷ ಬದಲಾವಣೆ ಮಾಡುವ ಅಗತ್ಯವಿಲ್ಲ ಎಂದರಲ್ಲದೆ, ಸಮಾಜವಾದಿ ಪಕ್ಷದ ಸಂಘಟನೆ ಮಾಡಲು ರಾಜ್ಯಮಟ್ಟದಲ್ಲಿ ಈಗ ಕೆಲಸ ಮಾಡುತ್ತೇನೆ ಎಂದರು. ಅಧಿಕಾರ ಎಂಬ ಅಸ್ತ್ರ ಕೈಯಲ್ಲಿದ್ದಿದ್ದರೆ ತೀಕ್ಷ್ಣ ಹೋರಾಟ ಮಾಡಬಹುದಿತ್ತು. ಈಗ ಅದು ಸಾಧ್ಯವಿಲ್ಲ. ಆದ್ದರಿಂದ ಮೊಂಡುಗೈಯಲ್ಲೇ ಹೊರಾಟ ಮಾಡುತ್ತೇನೆ ಎಂದು ರಾಮಯ್ಯ ಹೇಳಿದರು.

**ಹೇಮಾವತಿ ನಾಲಾ ನೀರು ಇಡೀ ತುಮಕೂರು ಜಿಲ್ಲೆಗೆ ಸಿಗುವಂತಾಗಲು ಈಗ ನಾನು ಹೆಚ್ಚಿನ ಆಸಕ್ತಿ ವಹಿಸುವೆ ಎಂದು ಹೇಳಿದ ರಾಮಯ್ಯ, ಕಳೆದ 20 ವರ್ಷಗಳಿಂದ ಹೇಮಾವತಿ ನೀರು ತರಲು ಶ್ರಮಿಸಿದ್ದೇನೆ. ಈಗ ಅದಕ್ಕಾಗಿ ಹೆಚ್ಚು ಸಮಯ ಸಿಕ್ಕಿದೆ. ನಾನು ಹೇಮಾವತಿಗೆ ಹೆಚ್ಚು ಹೋರಾಟ ನಡೆಸಲಿ ಎಂದೇ ಜನ ನನ್ನನ್ನು ಸೋಲಿಸಿದರು ಎಂದು ಕಾಣುತ್ತದೆ ಎಂದು ಹೇಳಿದರು.**

ಗೆದ್ದ ಪ್ರತಿನಿಧಿಗಳಿಗೆ ಸರಿಯಾಗಿ ಕೆಲಸ ಮಾಡಲು ಎಲ್ಲ ಬೆಂಬಲ ನೀಡುವ ಭರವಸೆ ನೀಡಿದ ರಾಮಯ್ಯ, ಅವರು ಕೆಲಸ ಮಾಡದಿದ್ದರೆ ಬೀದಿಗಿಳಿದು ಹೋರಾಡಿ ಕೆಲಸ ಮಾಡಿಸುವುದಾಗಿ ಹೇಳಿದರು. ಗುಬ್ಬಿ ತಾಲ್ಲೂಕು ಅದಲಗೆರೆಯಲ್ಲಿ ಈಗ ಹೇಮಾವತಿ ನಾಲಾ ಕೆಲಸ ಮಾಡಲು ಈಗ ಯಾವ ಅಡ್ಡಿ ಆತಂಕಗಳೂ ಇಲ್ಲ. ಸಾಗರನಹಳ್ಳಿ ರೇವಣ್ಣ ಅವರ ವಾದ ಸೂಕ್ತವಾಗಿಲ್ಲ. ಆದ್ದರಿಂದ ಅಲ್ಲಿ ಕೆಲಸ ಆರಂಭಿಸಬೇಕೆಂದು ಮುಖ್ಯ ಇಂಜಿನಿಯರ್ ಅವರಿಗೆ ಪತ್ರ ಬರೆದಿರುವುದಾಗಿ ಹೇಳಿದ ರಾಮಯ್ಯ, ಪತ್ರದ ಪ್ರತಿಯನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿದರು.

**(ಪ್ರಜಾವಾಣಿ)**

## ಹೇಮಾವತಿ ಹೋರಾಟ ಹಿಂಸಾರೂಪಕ್ಕೆ : ವೈ.ಕೆ. ರಾಮಯ್ಯ ಎಚ್ಚರಿಕೆ

**ಹೇಮಾವತಿ ನೀರನ್ನು ಸೋಮವಾರದೊಳಗೆ ಜಿಲ್ಲೆಗೆ ಹರಿಸದಿದ್ದರೆ ಹೋರಾಟ ಹಿಂಸಾತ್ಮಕ ರೂಪು ತಳೆಯಲಿದೆ ಎಂದು ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ ಅಧ್ಯಕ್ಷ ವೈ.ಕೆ. ರಾಮಯ್ಯ ಇಲ್ಲಿ ಇಂದು ಪ್ರಕಟಿಸಿದರು.**

ಕಾಲುವೆಯಲ್ಲಿನ ಮಣ್ಣುತೆಗೆದು ನೀರು ಹರಿಸುವ ಪ್ರಕ್ರಿಯೆ ಪ್ರಾರಂಭವಾಗಿದೆ ಎಂದು ಅಧಿಕಾರಿಗಳು ತಿಳಿಸಿದ್ದ ಹಿನ್ನೆಲೆಯಲ್ಲಿ, ಕುಣಿಗಲ್‌ನಲ್ಲಿ ಪ್ರಾರಂಭಿಸಲಾದ ರಸ್ತೆ ತಡೆಯನ್ನು ತಾತ್ಕಾಲಿಕವಾಗಿ ನಿಲ್ಲಿಸಲಾಗಿದೆ. ಈ ಆಶ್ವಾಸನೆ ಈಡೇರದಿದ್ದಲ್ಲಿ ಹೋರಾಟ ಇನ್ನೊಂದು ಸ್ವರೂಪದಲ್ಲಿ ಪ್ರಾರಂಭವಾಗಲಿದೆ ಎಂದು ಅವರು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

**ಬಾಗೂರು-ನವಿಲೆ ರೈತರು ನಡೆಸುತ್ತಿರುವ ಹೋರಾಟ ಕೇವಲ ಅನ್ಯಾಯದ ವಿರುದ್ಧದ್ದು ಎಂದು ಹೇಳುವ ಸ್ಥಿತಿ ಇಲ್ಲ. ಇದರ ಹಿಂದೆ ಕುಟಿಲ ರಾಜಕೀಯ ಹುನ್ನಾರ ಇದೆ ಎಂದು ಆರೋಪಿಸಿದ ರಾಮಯ್ಯ ''ಕೇವಲ ಅನ್ಯಾಯದ ವಿದ್ಧುದ ಪ್ರತಿಭಟನೆ ಇದಾಗಿದ್ದರೆ, ಅವರು ಹೇಮಾವತಿ ಎಡದಂಡೆ ಕಾಲುವೆಗೂ ಮಣ್ಣುತುಂಬಿ ಮಂಡ್ಯ, ಹಾಸನ ಮತ್ತು ಮೈಸೂರು ಜಿಲ್ಲೆಗಳಿಗೆ ಹೋಗುವ ನೀರನ್ನು ಕೂಡಾ ತಡೆಯಬೇಕಾಗಿತ್ತು''** ಎಂದರು.

ಹೇಮಾವತಿ ಜಲಾಶಯ ತುಂಬುತ್ತಾ ಬಂದಿದ್ದು, ಈ ಸ್ಥಿತಿಯಲ್ಲಿ ಅನಿವಾರ್ಯವಾಗಿ ನೀರನ್ನು ಸಮುದ್ರಕ್ಕೆ ಬಿಡಲೇಬೇಕಾಗಿದೆ. ಆ ನೀರನ್ನು ಹರಿಸಿ ತುಮಕೂರು ಜಿಲ್ಲೆಯ ಕೆರೆಗಳನ್ನು ತುಂಬಿಸಿದರೆ ರೈತರು ನೆಮ್ಮದಿಯಾಗಿರುತ್ತಾರೆ. ರಸ್ತೆತಡೆಯಂತಹ ಅಂತಿಮವಾದ ಹೋರಾಟದ ಮಾರ್ಗವನ್ನು ಅನುಸರಿಸಲು ಇದು ಕಾರಣ. ಒಮ್ಮೆ ಸಮುದ್ರಕ್ಕೆ ಹರಿದುಹೋದ ನೀರನ್ನು ಮತ್ತೆ ಹಿಂದಕ್ಕೆ ಪಡೆಯುವುದು ಅಸಾಧ್ಯವಾದ ಕಾರಣ, ತಕ್ಷಣ ನೀರನ್ನು ತುಮಕೂರಿಗೆ ಹರಿಸಬೇಕಾಗಿದೆ ಎಂದರು. ಬಾಗೂರು-ನವಿಲೆ ರೈತರು ನಡೆಸುತ್ತಿರುವ ಹೋರಾಟವನ್ನು ಉಲ್ಲೇಖಿಸಿದ ರಾಮಯ್ಯ ಅವರು **''ತುಮಕೂರು ಜಿಲ್ಲೆಯಲ್ಲಿಯೂ ಮಹಿಳೆಯರಿದ್ದಾರೆ. ಅವರೇನು ಬಂಜೆಯರಲ್ಲ, ದುರ್ಬಲರೂ ಅಲ್ಲ. ಅವರು ಎರಡು ಸಾವಿರ ಮಹಿಳೆಯರನ್ನು ಹೋರಾಟಕ್ಕಿಳಿಸಿದರೆ ನಾವು ನಾಲ್ಕು ಸಾವಿರ ಮಹಿಳೆಯರನ್ನು ಬೀದಿಗಿಳಿಸುತ್ತೇವೆ''** ಎಂದರು. ಕೇವಲ ಹಾಸನದ ಒಬ್ಬ ರಾಜಕಾರಣಿಗೆ ಗುಲಾಮನಾಗಿದ್ದಾರೆ ಎಂಬ ಆರೋಪ ಹೊತ್ತಿರುವ ಮುಖ್ಯಮಂತ್ರಿಗಳು, ಮೊದಲು ತಮ್ಮತನವನ್ನು ಸಾಬೀತು ಪಡಿಸಿ ಪರಿಹಾರವನ್ನು ಕಲ್ಪಿಸಬೇಕು. ಎಲ್ಲರ ನಂಬಿಕೆಯನ್ನು ಕಳೆದುಕೊಂಡಿರುವ ನೀರಾವರಿ ಸಚಿವ ನಾಗೇಗೌಡರನ್ನು ದೂರ ಇಡಬೇಕೆಂದರು.

**(ಪ್ರಜಾವಾಣಿ : 17-7-1998)**

## ಕಾವೇರಿ ವಿವಾದ :
## ಮಧ್ಯಂತರ ತೀರ್ಪಿನ ಜಾರಿಯನ್ನು ತಡೆಯುತ್ತೇವೆ : ವೈ ಕೆ ಆರ್

**ಕಾವೇರಿ ನದಿ ವಿವಾದದ ಸಂಬಂಧ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮಧ್ಯಂತರ ತೀರ್ಪಿನ ಜಾರಿಗೆ ಹೊರಟರೆ, ಅದನ್ನು ತಡೆಯುವುದಾಗಿ ಮಾಜಿ ಸಚಿವ, ಕಾಂಗ್ರೆಸ್ ಮುಖಂಡ ವೈ.ಕೆ. ರಾಮಯ್ಯ ಅವರು ಇಲ್ಲಿ ಎಚ್ಚರಿಕೆ ನೀಡಿದರು.**

ಮಧ್ಯಂತರ ತೀರ್ಪಿನ ಜಾರಿಗೆ ಕಾವೇರಿ ಕಣಿವೆಯ ಮೈಸೂರು, ಮಂಡ್ಯ, ಚಾಮರಾಜನಗರ, ಹಾಸನ ಹಾಗೂ ತುಮಕೂರು-ಜಿಲ್ಲೆಗಳ ಜನರ ತೀವ್ರ ವಿರೋಧ ಇದೆ. ಈ ಜನರನ್ನು ಸಂಘಟಿಸಿ ಸರ್ಕಾರಗಳ ಪ್ರಯತ್ನವನ್ನು ವಿಫಲಗೊಳಿಸುತ್ತೇವೆ ಎಂದು ಅವರು ಶುಕ್ರವಾರ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು. ಸದ್ಯದಲ್ಲೇ ಈ ಬಗ್ಗೆ ಕಾರ್ಯಕ್ರಮ ರೂಪಿಸುವುದಾಗಿ ಅವರು ಹೇಳಿದರು.

ಮಧ್ಯಂತರ ತೀರ್ಪಿನ ಜಾರಿಗೆ ರಾಜ್ಯದ ವಿಧಾನ ಮಂಡಲ, ಎಲ್ಲ ಪಕ್ಷಗಳು, ಸಂಘಟನೆಗಳು ವಿರೋಧವಾಗಿದ್ದವು. ಈಗಲೂ ಕಾಂಗ್ರೆಸ್ ಪಕ್ಷ ಅದೇ ನಿಲುವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ನಮ್ಮ ಸಾಚಾತನವನ್ನು ಸಾಬೀತು ಮಾಡಲು, ಬೇರೆಯವರ ಇಬ್ಬಂದಿತನವನ್ನು ಹರಾಜು ಮಾಡಲು ಹೊರಟಿದ್ದೇವೆ. ಇದರಲ್ಲಿ ಯಾವುದೇ ರಾಜಕೀಯ ಇಲ್ಲ ಎಂದು ಅವರು ಸ್ಪಷ್ಟಪಡಿಸಿದರು.

ಮಧ್ಯಂತರ ತೀರ್ಪನ್ನು ವಿರೋಧಿಸಿರಲಿಲ್ಲ ಎಂದು ಯಾವುದೇ ರಾಜಕೀಯ ಪಕ್ಷದ ಮುಖಂಡರು ಈಗ ಹೇಳಿದರೆ, ನಾನು ಅವರ ಕ್ಷಮೆ ಕೋರಲು ಸಿದ್ಧ. ಹಿಂದೆ ವಿರೋಧ ಮಾಡಿದವರೆ ಈಗ ಸ್ವಾಗತಿಸುತ್ತಿರುವುದು ವಿಚಿತ್ರ ಎಂದು ಅವರು ಹೇಳಿದರು.

ಪ್ರಧಾನಿ ಅಧ್ಯಕ್ಷತೆಯಲ್ಲಿ ಇರುವ ಪ್ರಾಧಿಕಾರ ಕೇವಲ 205 ಟಿ.ಎಂ.ಸಿ ನೀರು ಬಿಡುಗಡೆ ಮಾಡುವುದಕ್ಕೆ ಸೀಮಿತವಾಗಿದ್ದರೆ ನಮ್ಮ ಅಭ್ಯಂತರ ಇರಲಿಲ್ಲ. ಕಾವೇರಿ ಕಣಿಯಲ್ಲಿ 11.2 ಲಕ್ಷ ಎಕರೆಗಿಂತ ಹೆಚ್ಚು ಪ್ರದೇಶದಲ್ಲಿ ನೀರಾವರಿ ಮಾಡಬಹುದು ಎಂದು ಮಧ್ಯಂತರ ತೀರ್ಪಿನಲ್ಲಿ ಹೇಳಿದೆ. ಇದು ಈಗ ಅನ್ವಯ ಆಗದು ಎಂದು ಭಾರೀ ನೀರಾವರಿ ಮಂತ್ರಿ ಕೆ.ಎನ್. ನಾಗೇಗೌಡರು ಸುಳ್ಳು ಹೇಳುತ್ತಿದ್ದಾರೆ, ಎಂದು ರಾಮಯ್ಯ ಟೀಕಿಸಿದರು.

**(ಕನ್ನಡಪ್ರಭ : 29-8-1998)**

## ಕಾವೇರಿ ಒಪ್ಪಂದ : ರಾಜ್ಯಕ್ಕೆ ಅನ್ಯಾಯ - ವೈ.ಕೆ.ಆರ್

ರಾಷ್ಟ್ರೀಯ ಜಲನೀತಿ ಜಾರಿಗೆ ಬರುವ ತನಕವೂ ಕಾವೇರಿ ನೀರು ಹಂಚಿಕೆ ಬಗ್ಗೆ ಯಾವುದೇ ನಿರ್ಧಾರಕ್ಕೆ ಬರಲು ಸಾಧ್ಯವಿಲ್ಲ. ರಾಜ್ಯ ಸರ್ಕಾರ ಪ್ರತಿಪಾದಿಸದೇ ಕೇಂದ್ರ ಸರ್ಕಾರ ಹೇಳಿದ್ದಕ್ಕೆಲ್ಲಾ ಒಪ್ಪಿಗೆ ನೀಡಿರುವುದು ರಾಜ್ಯ ರೈತರಿಗೆ ಅನ್ಯಾಯ ಮಾಡಿದಂತಾಗಿದೆ ಎಂದು ಮಾಜಿ ಸಚಿವ ವೈ.ಕೆ. ರಾಮಯ್ಯ ಇಂದು ಇಲ್ಲಿ ಆರೋಪಿಸಿದರು.

ಕಾವೇರಿ ನ್ಯಾಯ ಮಂಡಲಿಯ ಮಧ್ಯಂತರ ತೀರ್ಪನ್ನು ಈ ಹಿಂದೆ ವಿರೋಧಿಸಿದವರೇ ಈಗ ಅದು ರಾಜ್ಯಕ್ಕೆ ಕಳಂಕಪ್ರಾಯ ಎಂದು ಹೆಗಲು ತಟ್ಟಿಕೊಳ್ಳುತ್ತಿರುವುದು ನಾಚಿಕೆಗೇಡು. ಕಾವೇರಿ ಸಮಸ್ಯೆ ಪರಿಹಾರವಾಗಿದೆ ಎಂದು ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಮತ್ತು ಸಚಿವ ನಾಗೇಗೌಡ ಅವರು ಸುಳ್ಳು ಹೇಳುತ್ತಾ ಜನರಿಗೆ ಮೋಸ ಮಾಡುತ್ತಿದ್ದಾರೆ. ಈಗ ಕಾವೇರಿ ಸಮಸ್ಯೆ ಮತ್ತಷ್ಟು ಉಲ್ಬಣವಾಗಿದೆ ಎಂದು ಅವರು ಪತ್ರಿಕಾಗೋಷ್ಠಿಯಲ್ಲಿ ಆಪಾದಿಸಿದರು.

'ನೀರಾವರಿ ವಿಚಾರ ಪ್ರಸ್ತಾಪವಾದಾಗಲೆಲ್ಲ ಅತ್ಯಂತ ಭಾವೋದ್ವೇಗದಿಂದ ಮಾತನಾಡುತ್ತಿದ್ದ ಮಾಜಿ ಪ್ರಧಾನಿ ದೇವೇಗೌಡರು, ಕಾವೇರಿ ವಿಚಾರದಲ್ಲಿ ಈಗ ಮೌನ ವಹಿಸಿರುವುದು ವಿಪರ್ಯಾಸ. ಅವರು ಪ್ರಧಾನಿಯಾಗಿದ್ದಾಗ ಮಧ್ಯಂತರ ಆಜ್ಞೆಯನ್ನು ಜಾರಿಗೊಳಿಸುತ್ತೇವೆ ಎಂದು ನ್ಯಾಯಾಲಯಕ್ಕೆ ಮುಚ್ಚಳಿಕೆ ಬರೆದುಕೊಟ್ಟಿರುವುದರಿಂದ ಈಗ ಬಾಯಿಗೆ ಬೀಗ ಹಾಕಿಕೊಂಡು ಕುಳಿತಿದ್ದಾರೆ' ಎಂದು ರಾಮಯ್ಯ ವ್ಯಂಗ್ಯವಾಡಿದರು.

ರೈತರಿಗೂ ನದಿ ನೀರಿಗೂ ಭಾವನಾತ್ಮಕ ಸಂಬಂಧವಿದೆ. ಆದರೆ ಈ ಸಂಬಂಧದ ಜೊತೆ ರಾಜಕೀಯ ಬೆರೆಸಿ ಸರಸವಾಡಲು ಸರ್ಕಾರ ಹವಣಿಸಿದರೆ ಕಾವೇರಿ ಕೊಳ್ಳದಲ್ಲಿ ರಕ್ತಪಾತವಾಗುತ್ತದೆ ಎಂದು ಅವರು ಎಚ್ಚರಿಕೆ ನೀಡಿದರು. ಕಾವೇರಿ ಹೋರಾಟದ ಮಾತನ್ನಾಡುತ್ತಿರುವವರಿಗೆ ಮಾಡಲು ಬೇರೆ ಉದ್ಯೋಗವಿಲ್ಲ ಎಂದು ಮುಖ್ಯಮಂತ್ರಿ ಪಟೇಲ್ ಹೇಳಿರುವುದನ್ನು ತರಾಟೆಗೆ ತೆಗೆದುಕೊಂಡ ಅವರು, ಇದೇ ಪಟೇಲರು ಹಿಂದೆ ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದುದೂ ಕೆಲಸವಿಲ್ಲದ ಕಾರಣಕ್ಕಾಗಿಯೇ ಎಂದು ಪ್ರಶ್ನಿಸಿದರು.

'ಪ್ರಾಧಿಕಾರ ರಚಿಸಿದಾಕ್ಷಣ ಕಾವೇರಿ ಸಮಸ್ಯೆ ಪರಿಹಾರವಾಗಿಲ್ಲ. ನ್ಯಾಯ ಮಂಡಲಿಯ ಮಧ್ಯಂತರ ಆಜ್ಞೆ ಜಾರಿ ಮಾಡುವುದಷ್ಟೇ ಈ ಪ್ರಾಧಿಕಾರದ ಜವಾಬ್ದಾರಿ. ಈ ವಿಚಾರದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರಾಜ್ಯದ ಜನತೆಗೆ ಮಾಡಿರುವ ವಂಚನೆಯನ್ನು ಬಯಲು ಮಾಡಲು ಕಾವೇರಿ ಅಚ್ಚುಕಟ್ಟು ಪ್ರದೇಶದಲ್ಲಿ ಉಗ್ರ ಹೊರಾಟ ನಡೆಸಲು ನಿರ್ಧರಿಸಲಾಗಿದೆ' ಎಂದು ರಾಮಯ್ಯ ತಿಳಿಸಿದರು.

**(ಪ್ರಜಾವಾಣಿ : 25-8-1998)**

# ಜಲವಿವಾದ ಇತ್ಯರ್ಥಕ್ಕೆ ರಾಷ್ಟ್ರೀಯ ಜಲನೀತಿ ಅನಿವಾರ್ಯ

**ಕರ್ನಾಟಕ ಮತ್ತು ತಮಿಳುನಾಡುಗಳ ಮಧ್ಯೆ ಉಂಟಾಗಿರುವ ಜಲ ವಿವಾದವನ್ನು ಬಗೆಹರಿಸುವ ಮೊದಲು ಕೇಂದ್ರ ಸರ್ಕಾರ ರಾಷ್ಟ್ರೀಯ ಜಲನೀತಿ ರೂಪಿಸುವುದು ಅನಿವಾರ್ಯವಾಗಿದೆ ಎಂದು ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ ಅಧ್ಯಕ್ಷ ಹಾಗೂ ಮಾಜಿ ಸಚಿವ ವೈ.ಕೆ. ರಾಮಯ್ಯ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.**

ಅವರು ಸುದ್ದಿಗೋಷ್ಠಿಯಲ್ಲಿ ಮಾತನಾಡಿ, ರಾಷ್ಟ್ರೀಯ ಜಲನೀತಿ ಹೊರತು ಯಾವುದೇ ಮಂಡಳಿ, ಆಯೋಗದ ಅಥವಾ ಸಮಿತಿಗಳಿಂದ ಈ ವಿವಾದವನ್ನು ಬಗೆಹರಿಸಲು ಸಾಧ್ಯವಿಲ್ಲವೆಂದು ಎಂದರಲ್ಲದೆ, ಕೇಂದ್ರ ಸರ್ಕಾರ ಕರಡು ನೀತಿ ಮುಖೇನ ವಿವಾದ ಇತ್ಯರ್ಥಕ್ಕೆ ಮುಂದಾಗಿರುವುದು ಸಾಧುವಲ್ಲ ಎಂದಿದ್ದಾರೆ.

ಕರ್ನಾಟಕ ಸರ್ಕಾರ ಕಾವೇರಿ ಉಳಿವಿಗಾಗಿ ನಡೆಸುತ್ತಿರುವ ಪ್ರಯತ್ನ ಶ್ಲಾಘನೀಯವಾದರೂ ನಿಗದಿತ ನೀರನ್ನು ಬಳಸಿಕೊಳ್ಳುವಲ್ಲಿ ತೆಗೆದುಕೊಳ್ಳುತ್ತಿರುವ ವಿಳಂಬ ನೀತಿಯಿಂದಾಗಿ ರಾಜ್ಯದ ರೈತರ ಬದುಕಿಗೆ ಮುಳುವಾಗಿದೆ. ಈ ದಿಸೆಯಲ್ಲಿ ಸರ್ಕಾರ ತನ್ನ ಪಾಲಿನ ನೀರನ್ನು ಬಳಸಿಕೊಳ್ಳುವ ಬಗ್ಗೆ ಸೂಕ್ತ ಕಾರ್ಯತಂತ್ರ ರೂಪಿಸಬೇಕೆಂದು ವೈ ಕೆ ಆರ್ ಒತ್ತಾಯಿಸಿದರು.

ತುಮಕೂರಿನಿಂದ ಕುಣಿಗಲ್‌ವರೆಗೆ ಆಗಬೇಕಿರುವ ಕಾಲುವೆ ಕೆಲಸವನ್ನು ತುರ್ತಾಗಿ ಪೂರ್ಣಗೊಳಿಸಿ, ಆ ಪ್ರದೇಶಕ್ಕೆ ನೀರು ಒದಗಿಸಬೇಕೆಂದು ವೈ.ಕೆ. ರಾಮಯ್ಯ ಸರ್ಕಾರವನ್ನು ಒತ್ತಾಯಿಸಿದರು. ನಗರದಲ್ಲಿಂದು ಸುದ್ಧಿಗೋಷ್ಠಿಯಲ್ಲಿ ಮಾತನಾಡಿದ ಅವರು, ಕಾಲುವೆಯಿಂದ ನೀರು ಹರಿಯಬೇಕಿರುವ ಕಡಬಾ, ಸಿ.ಎಸ್. ಪುರ ಮತ್ತು ಎಡಿಯೂರು ಹೋಬಳಿಗಳ ರೈತರ ಸಭೆಯನ್ನು ಇದೇ ಆ.23ರಂದು ಸಿ.ಎಸ್. ಪುರದಲ್ಲಿ ಏರ್ಪಡಿಸಿ, ಮುಂದಿನ ಕಾರ್ಯಕ್ರಮ ಚರ್ಚಿಸಲಾಗುವುದು ಎಂದರು.

ಕುಣಿಗಲ್‌ವರೆಗೆ ಆಗಬೇಕಿರುವ ಕಾಲುವೆ ಕೆಲಸವನ್ನು ಮುಗಿಸಿ 1997ರ ಆಗಸ್ಟ್ ತಿಂಗಳೊಳಗಾಗಿ ಆ ಪ್ರದೇಶಕ್ಕೆ ನೀರು ಒದಗಿಸಬೇಕೆಂದು ಸರ್ಕಾರ ತೀರ್ಮಾನ ಮಾಡಿ, ಈ ವಿಷಯದಲ್ಲಿ ತುಮಕೂರು ಮುಖ್ಯ ಇಂಜನಿಯರ್‌ರವರಿಗೆ ನೀರಾವರಿ ಸಚಿವಾಲಯದಿಂದ ಸೂಚನೆ ಕೊಡಲಾಗಿತ್ತು. ನಂತರ ಕಳೆದ ವರ್ಷ ಮುಖ್ಯಮಂತ್ರಿಗಳು ಜಿಲ್ಲೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಡಿಸೆಂಬರ್ 1998ರೊಳಗಾಗಿ ಕುಣಿಗಲ್‌ವರೆಗಿನ ಕಾಲುವೆ ಕೆಲಸ ಪೂರ್ಣ ಗೊಳಿಸಿ ನೀರು ಹರಿಸಲಾಗುವುದು ಎಂದು ಭರವಸೆ ನೀಡಿದ್ದರು. ಇಷ್ಟಾದರೂ ಕೆಲಸ ಮುಗಿಸುವುದಿರಲಿ, ಈವರೆವಿಗೆ ಪ್ರಮುಖ ಕಾಲುವೆಯ ಎಲ್ಲಾ ಕೆಲಸಗಳು ಪ್ರಾರಂಭ ಆಗಿಲ್ಲ ಎಂದು ಹೇಳಿದರು.

**(ಸೊಗಡು : 8-8-1998)**

## ಬಾಗೂರು-ನವಿಲೆ ಬಳಿ ನಾಲೆಗೆ ಅಡ್ಡಗೋಡೆ : ಪ್ರತಿಭಟನೆ

**ಬಾಗೂರು-ನವಿಲೆ ಸಮೀಪ ಹೇಮಾವತಿ ನಾಲೆಗೆ ಕಳೆದ ಮೂರು ತಿಂಗಳಿಂದ ಅಡ್ಡಗೋಡೆ ಹಾಕಿ ತುಮಕೂರು ಜಿಲ್ಲೆಗೆ ನೀರು ಬರದಂತೆ ತಡೆದಿರುವ ವಿರುದ್ಧ ಮಂಗಳವಾರ ಬೆಳಗಿನ ಜಾವ ಇಲ್ಲಿನ ಬಿ.ಎಂ. ರಸ್ತೆಗೆ ಅಡ್ಡಗೋಡೆ ನಿರ್ಮಿಸಲಾಗಿದ್ದು, ಮಾಜಿ ಸಚಿವ ವೈ.ಕೆ. ರಾಮಯ್ಯನವರ ನೇತೃತ್ವದಲ್ಲಿ ಪ್ರತಿಭಟನೆ ಆರಂಭವಾಯಿತು.**

ಕುಣಿಗಲ್ ಮೂಲಕ ಬೆಂಗಳೂರು ಹಾಗೂ ಮಂಗಳೂರು ಮಹಾನಗರಗಳಿಗೆ ಸಂಪರ್ಕ ಕಲ್ಪಿಸುವ ಬಿ.ಎಂ. ರಸ್ತೆಗೆ, ಬಾಗೂರು-ನವಿಲೆ ಸಮೀಪ ನಾಲೆಗೆ ಅಡ್ಡಲಾಗಿ ನಿರ್ಮಿಸಿರುವ ರೀತಿಯೇ ಆಳೆತ್ತರದ ಅಡ್ಡಗೋಡೆಯನ್ನು ಇಲ್ಲಿನ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಸಮೀಪ ರಾತ್ರೋ-ರಾತ್ರಿಯೇ ನಿರ್ಮಿಸುವ ಮೂಲಕ ನೂರಾರು ರೈತರು ಚಳುವಳಿ ಪ್ರಾರಂಭಿಸಿದರು.

ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ ವತಿಯಿಂದ ಆರಂಭವಾಗಿರುವ ಈ ಚಳುವಳಿಯ ಮುಖ್ಯ ಘೋಷಣೆ **'ನೀರು ಬಿಡುವವರೆಗೆ ದಾರಿ ಬಿಡುವುದಿಲ್ಲ'** ಎಂಬುದಾಗಿದೆ. ಅಡ್ಡ ಗೋಡೆ ಬಳಿಯೇ ವೇದಿಕೆಯೊಂದನ್ನು ನಿರ್ಮಿಸಲಾಗಿದ್ದು, ಗಾಂಧೀಜಿಯವರ ಭಾವಚಿತ್ರ ಮುಂದಿಟ್ಟುಕೊಂಡು ಅನಿರ್ದಿಷ್ಟ ಚಳವಳಿಯನ್ನು ವೈ.ಕೆ. ರಾಮಯ್ಯ ತಮ್ಮ ನೂರಾರು ಜನರೊಡಗೂಡಿ ಆರಂಭಿಸಿದ್ದಾರೆ.

ಸೂರ್ಯ ಮೇಲೇರಿದಂತೆ ಪಕ್ಷಾತೀತವಾಗಿ ಜನರು ಬೆಂಬಲ ಸೂಚಿಸಿದ್ದರಿಂದ ಚಳವಳಿ ಮತ್ತಷ್ಟು ತೀವ್ರಗೊಂಡು ರಸ್ತೆ ಸಂಪರ್ಕ ಸಂಪೂರ್ಣ ಕಡಿದುಹೋಗಿತ್ತು.

ಸ್ಥಳಕ್ಕಾಗಮಿಸಿದ ತಹಶೀಲ್ದಾರ್ ಬಸವರಾಜು, ಹೆಚ್ಚುವರಿ ಎಸ್ಪಿ ಶಿವಸ್ವಾಮಿ ಹಾಗೂ ಡಿವೈ ಎಸ್ಪಿ ಗಣಪತಿ ಮನವಿ ಮಾಡಿಕೊಂಡರೂ ಪ್ರಯೋಜನವಾಗಲಿಲ್ಲ. ತಹಶೀಲ್ದಾರ್ ಬಸವರಾಜ್‌ರವರು ಕೊನೆಗೆ ಚಳವಳಿಗಾರರನ್ನು ಕುರಿತು ಬಂಧಿಸುವುದಾಗಿ ಹೇಳಿದಾಗ, ನಾವು ನೀಡುವ ಮನವಿಯನ್ನು ಸರ್ಕಾರಕ್ಕೆ ತಿಳಿಸಿ, ಆನಂತರ ದಸ್ತಗಿರಿ ಮಾಡಿ ಎಂದು ನೇರವಾಗಿ ರಾಮಯ್ಯ ಸವಾಲ್ ಹಾಕಿದರು.

**ಕಳೆದ ಮೂರು ತಿಂಗಳಿಂದ ಹೇಮಾವತಿ ನಾಲೆಯನ್ನು ಬಂದ್ ಮಾಡಿ ಕುಳಿತಿರುವ ರೈತರ ವಿರುದ್ಧ ಕ್ರಮಕೈಗೊಳ್ಳದೆ ಕೇವಲ ಮೂರು ಗಂಟೆಗಳಿಂದ ರಸ್ತೆ ತಡೆ ಮಾಡುತ್ತಿರುವ ನಮ್ಮನ್ನು ದಸ್ತಗಿರಿ ಮಾಡಲು ಬಂದಿದ್ದೀರ ಎಂದು ಕೇಳಿದ ರಾಮಯ್ಯ, ಹಾಸನ ಜಿಲ್ಲೆಗೆ ಒಂದು ಕಾನೂನು, ತುಮಕೂರು ಜಿಲ್ಲೆಗೆ ಒಂದು ಕಾನೂನೇ ಎಂದು ನೇರ ಪ್ರಶ್ನೆ ಹಾಕಿದರು. ಇದರಿಂದ ಬಾಯಿಕಟ್ಟಿದಂತಾದ ತಹಶೀಲ್ದಾರ್‌ರವರು ಸರ್ಕಾರದೊಮದಿಗೆ ಸಂಪರ್ಕಿಸಲು ತೆರಳಿದರು.**

ಅದೇ ಸಂದರ್ಭಕ್ಕೆ ಆಗಮಿಸಿದ ಮಾಜಿ ಸಚಿವ ಡಾ. ಜಿ. ಪರಮೇಶ್ವರ್ ಅವರು ಮಾತನಾಡಿ, ತಮಿಳುನಾಡಿಗೆ ಯಥೇಚ್ಛವಾಗಿ ನೀರು ಹರಿದು ಹೋಗುತ್ತಿದ್ದರೂ ಸುಮ್ಮನಿರುವ ಸರ್ಕಾರ ತುಮಕೂರು ಜಿಲ್ಲೆಗೆ ನೀರು ಹರಿಸಲು ಏಕೆ ಕಷ್ಟಪಡುತ್ತಿದೆ. ಹಾಸನ ಜಿಲ್ಲೆಗೆ ಹೋಗಿ ಕೇಳುವ ಧೈರ್ಯ ಸರ್ಕಾರಕ್ಕೆ ಇಲ್ಲವೆ ಎಂದು ಪ್ರಶ್ನಿಸಿದ ಅವರು, ಮುಖ್ಯಮಂತ್ರಿ ಪಟೇಲರು ದೇವೇಗೌಡರ ಕೈಗೊಂಬೆಯಾಗಿದ್ದು, ಗೌಡರನ್ನು ಎದುರಿಸಿ ನಿಲ್ಲುತ್ತಿಲ್ಲ. ಅವರನ್ನು ಎದುರಿಸುವ ಬದಲು ಜನರ ಬಳಿ ಹೋಗಿ ಚುನಾವಣೆ ಎದುರಿಸಲಿ ಎಂದರು.

ಪ್ರತಿಭಟನೆ ನಿಲ್ಲಿಸಿ ಎಂದು ಪೊಲೀಸರು ಅನೇಕ ಬಾರಿ ಮನವಿ ಮಾಡಿದರೂ, ಪ್ರತಿಭಟನಕಾರರು ಜಗ್ಗಲಿಲ್ಲ. ಅನೇಕ ಕಸರತ್ತು ಮಾಡಿದ ಪೊಲೀಸರು ಎಲ್ಲದರಲ್ಲೂ ವಿಫಲರಾಗಿ ಕೊನೆಗೆ ರಾಮಯ್ಯನವರನ್ನು ಬಂಧಿಸುವುದಾಗಿ ನೊಟೀಸ್ ನೀಡಿದರು.

ನೋಟೀಸನ್ನು ಸಭೆಯಲ್ಲಿ ಬಹಿರಂಗವಾಗಿ ರಾಮಯ್ಯ ಓದಿ ಕೆಂಡಾಮಂಡಲ ವಾದರು. ಅನ್ಯಾಯ ಮಾಡುತ್ತಿರುವವರನ್ನು ಹಿಡಿಯಿರಿ ಎಂದರೆ, ನ್ಯಾಯ ಸಮ್ಮತವಾಗಿ ಧರಣಿ ಮಾಡುತ್ತಿರುವವರನ್ನು ದಸ್ತಗಿರಿ ಮಾಡಲು ಬಂದಿದ್ದೀರಾ ಎಂದು ರೇಗಿದರು. ರಾಮಯ್ಯ ನವರನ್ನು ಮುತ್ತಿಕೊಂಡ ಪ್ರತಿಭಟನಾಕಾರರು 'ಅವರನ್ನು ಬಂಧಿಸಿದರೆ ನಾವೂ ಬಂಧಿಗಳಾಗುತ್ತೇವೆ' ಎಂದು ಪೊಲೀಸರಿಗೆ ಎಚ್ಚರಿಕೆ ನೀಡಿದರು.

ಪೊಲೀಸರು ಮುತ್ತಿಕೊಂಡವರನ್ನು ಬಂಧಿಸಲು ಮುಂದಾದಾಗ, ವಕೀಲರುಗಳು ಮುಂದೆ ಬಂದು ತಡೆದರು. 'ನೀವು ವಾರೆಂಟ್ ತಂದಿರುವುದು ರಾಮಯ್ಯನವರನ್ನು ಬಂಧಿಸಲು ಮಾತ್ರ, ನಮ್ಮನ್ನು ಬಂಧಿಸಬೇಕಾದರೆ ಪ್ರತಿಯೊಬ್ಬರಿಗೂ ಪ್ರತ್ಯೇಕ ವಾರೆಂಟ್ ತನ್ನಿ' ಎಂದರು.

ಇದರಿಂದ ನಿರಾಶರಾದ ಪೊಲೀಸರು ಸುಮ್ಮನಾದರು. ತಹಶೀಲ್ದಾರ್, ಉಪ-ವಿಭಾಗಾಧಿಕಾರಿ, ಎ.ಎಸ್.ಪಿ, ಡಿ.ವೈ.ಎಸ್ಪಿರವರು ಪರಸ್ಪರ ಚರ್ಚೆ ನಡೆಸುತ್ತಾ ಅತ್ತಿಂದಿತ್ತ, ಇತ್ತಿಂದತ್ತ ಓಡಾಡತೊಡಗಿ ತಮ್ಮ ಅಸಹಾಯಕತೆ ವ್ಯಕ್ತಪಡಿಸುತ್ತಿದ್ದರು.

ಸಂಜೆ 5 ಗಂಟೆಗೆ ಆಗಮಿಸಿದ ಎಸ್ಪಿ ಎಂ.ವಿ. ಮೂರ್ತಿ, ಸಿ.ಇ.ಓ ಅಜೀಜಿಲ್ಲಾ ಬೇಗ್‌ರವರು ವೈ.ಕೆ. ರಾಮಯ್ಯನವರೊಂದಿಗೆ ಮಾತನಾಡಿ ಚಳುವಳಿ ಹಿಂತೆಗೆದುಕೊಳ್ಳಲು ಮನವಿ ಮಾಡಿದರೂ ಪ್ರಯೋಜನವಾಗಲಿಲ್ಲ. ಸಂಧಾನಕಾರ್ಯ ವಿಫಲವಾಗಿದ್ದು ಮತ್ತೆ ಮಾತುಕತೆ ಮುಂದುವರೆಯಿತು. ಈ ಸಂದರ್ಭದಲ್ಲಿ ಶಾಸಕ ಎಸ್.ಪಿ. ಮುದ್ದಹನುಮೇಗೌಡ, ಡಾ. ಜಿ. ಪರಮೇಶ್ವರ್ ಇದ್ದರು. ರಾತ್ರಿಯಾದರೂ, ಚಳುವಳಿಗಾರರು ಸ್ಥಳ ಬಿಟ್ಟು ಕದಲಲಿಲ್ಲ, ಊಟ, ತಿಂಡಿ ಹಾಗೂ ಬೆಳಕಿನ ವ್ಯವಸ್ಥೆ ಮಾಡಿಕೊಂಡು ಚಳುವಳಿ ಮುಂದುವರೆಸಿದರು.

ಮಂಗಳೂರು ಹಾಗೂ ಬೆಂಗಳೂರು ಹಾಸನ ಮಾರ್ಗವಾಗಿ ಓಡಾಡುವ ವಾಹನಗಳನ್ನು ಬೆಳ್ಳೂರು ಕ್ರಾಸ್‌ನಿಂದ ಮಂಡ್ಯ ಮಾರ್ಗವಾಗಿಯೂ, ತುಮಕೂರು

ಮಾರ್ಗವಾಗಿಯೂ ಓಡಿಸುವ ವ್ಯವಸ್ಥೆ ಮಾಡಲಾಯಿತು. ಚಳುವಳಿಯ ವಿಷಯ ತಿಳಿಯದೇ ಬಂದ ಕೆಲ ಬಸ್ಸುಗಳ ಪ್ರಯಾಣಿಕರು ಅಲ್ಲಿಂದ ನಡೆದುಬಂದು ಸಾರಿಗೆ ಬಸ್ ನಿಲ್ದಾಣದಿಂದ ಬೇರೆಡೆಗೆ ಹೋಗುತ್ತಿದ್ದರು.

ಈ ಚಳುವಳಿಗೆ ಡಾ. ರಾಜ್‌ಕುಮಾರ್ ಅಭಿಮಾನಿಗಳ ಸಂಘದ ಸದಸ್ಯರು ಬೆಂಬಲಿಸಿ ರಸ್ತೆ ತಡೆ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ವಕೀಲರು ನ್ಯಾಯಾಲಯದ ಕೆಲಸವನ್ನು ಬಹಿಷ್ಕರಿಸಿ ಪಾಲ್ಗೊಂಡಿದ್ದರು. ವಕೀಲರ ಸಂಘದ ಅಧ್ಯಕ್ಷ ಮುಮ್ತಾಜ್ ಅಹಮದ್ ನೇತೃತ್ವದಲ್ಲಿ ವಕೀಲರು ಮೆರವಣಿಗೆ ನಡೆಸಿದರು.

ಕುಣಿಗಲ್ ವಿಧಾನಸಭಾಕ್ಷೇತ್ರದ ಬಿಜೆಪಿ ಅಧ್ಯಕ್ಷರು, ಕಾರ್ಯಕರ್ತರು, ಯಡಿಯೂರು ಗ್ರಾಮಪಂಚಾಯ್ತಿ ಅಧ್ಯಕ್ಷ ಜಿ.ಟಿ. ವೆಂಕಟಸ್ವಾಮಿ, ಹೇಮಾವತಿ ರೈತರ ಸಂಚಾಲಕ ರಾಮಲಿಂಗಯ್ಯ ಹಾಗೂ ಪಕ್ಷಾತೀತವಾಗಿ ಎಲ್ಲಾ ಪಕ್ಷಗಳ ಮುಖಂಡರು ಭಾಗವಹಿಸಿದ್ದರು. ಕುಣಿಗಲ್ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿ ಪಾಲ್ಗೊಂಡಿದ್ದರು. ಲೋಕಶಕ್ತಿ ಅಧ್ಯಕ್ಷ ಬಿ.ಕೆ. ರಂಗಸ್ವಾಮಿ, ವೈ.ಹೆಚ್. ಹುಚ್ಚಯ್ಯ, ಮುಮ್ತಾಜ್ ಅಹಮದ್, ಸರ್ಕಾರಿ ನೌಕರರ ಸಂಘದ ಮಾಜಿ ಅಧ್ಯಕ್ಷ ಕೆ. ಕೃಷ್ಣಪ್ಪ, ಶಾಸಕ ಎಸ್.ಪಿ. ಮುದ್ದಹನುಮೇಗೌಡ ಮುಂತಾದವರು ಮಾತನಾಡಿದರು.

**(ತುಮಕೂರು ವಾರ್ತೆ : 15.7.1998)**

## ಹೇಮಾವತಿ ನೀರಿಗೆ ಅಡಚಣೆ ತೆರವು
## ಜಿಲ್ಲೆಯ ಸಾಂಘಿಕ ಹೋರಾಟಕ್ಕೆ ಸಂದ ಜಯ - ವೈ.ಕೆ.ಆರ್

ಅನೇಕ ಜನರ ಶ್ರಮ, ದುಡಿಮೆ ಹಾಗೂ ಆಸಕ್ತಿಯ ಫಲವಾಗಿ ತುಮಕೂರು ಜಿಲ್ಲೆಗೆ ಪೂರ್ಣವಾಗಿ ಅಲ್ಲದಿದ್ದರೂ ಹೇಮಾವತಿಯ ನೀರು ಹರಿದು ಬಂದು ಜಿಲ್ಲೆಯ ಕೆಲವು ಪ್ರದೇಶದಲ್ಲಾದರೂ ಹಸಿದ ಹೊಟ್ಟೆಗೆ ಅನ್ನ ಬೆಳೆದುಕೊಳ್ಳಲು, ಬಾಯಾರಿದ ಬಾಯನ್ನು ತಣಿಸಿಕೊಳ್ಳಲು ಸಾಧ್ಯವಾಯಿತು. ಈಗ್ಗೆ ಮೂರು ತಿಂಗಳ ಹಿಂದೆ ಹಾಸನ ಜಿಲ್ಲೆಯಲ್ಲಿ ಬಂಧಿಸಿದ ''ಹೇಮಾವತಿ''ಯನ್ನು ಬಿಡಿಸಿಕೊಂಡು ಬರಲು ಈ ಜಿಲ್ಲೆಯ ಜನರು ಭಗೀರಥ ಪ್ರಯತ್ನವನ್ನೇ ಮಾಡಬೇಕಾಯಿತು. ತುಮಕೂರು ಜಿಲ್ಲೆಯಾದ್ಯಂತ ನೀರಿಗಾಗಿ 6 ದಿನಗಳ ಕಾಲ ನಡೆದ ಹೋರಾಟ ಚರಿತ್ರಾರ್ಹ ಘಟನೆಯಾಗಿತ್ತು. ಹೇಮಾವತಿ ನೀರು ಜಿಲ್ಲೆಯ ಪ್ರತಿಯೊಬ್ಬರ ಅವಶ್ಯಕತೆ ಎಂಬ ಸತ್ಯವನ್ನು ಮನವರಿಕೆ ಮಾಡಿಕೊಂಡ ಜನರು, ಬಡವ - ಬಲ್ಲಿದ, ರೈತರು -

ವರ್ತಕರು, ಕಾರ್ಮಿಕರು - ಅಧಿಕಾರಿಗಳು, ಸಮಾಜ ಸೇವಕರು - ರಾಜಕಾರಣಿಗಳು, ಯುವಜನರು - ವಿದ್ಯಾರ್ಥಿಗಳು, ಮಹಿಳೆಯರು, ವೈದ್ಯರು, ಎಲ್ಲರೂ ಈ ಹೋರಾಟದಲ್ಲಿ ಸ್ವಯಂ ಪ್ರೇರಿತರಾಗಿ ಭಾಗವಹಿಸಿ ಈ ಹೋರಾಟವನ್ನು ಯಶಸ್ವಿಗೊಳಿಸಿದ್ದಾರೆ. ಅಲ್ಲದೇ ಸರ್ಕಾರಕ್ಕೆ ಜಿಲ್ಲೆಯ ಜನರು ಒಗ್ಗಟ್ಟಿನ ಸಂದೇಶವನ್ನುಸಾರಿದ್ದಾರೆ ಎಂದು ತುಮಕೂರು ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆಯ ಅಧ್ಯಕ್ಷ ಹಾಗೂ ಮಾಜಿ ಸಚಿವ ವೈ.ಕೆ. ರಾಮಯ್ಯ ಅವರು ಪತ್ರಿಕಾ ಹೇಳಿಕೆಯಲ್ಲಿ ತಿಳಿಸಿದ್ದಾರೆ.

ನೀರಿಗಾಗಿ ನಡೆದ ಈ ಹೋರಾಟದ ಹಾದಿಯಲ್ಲಿ ಪಕ್ಷ, ಜಾತಿ, ವರ್ಗ, ಪ್ರದೇಶ ಯಾವುದೂ ಅಡ್ಡಿಯಾಗಬಾರದು. ವೈಯಕ್ತಿಕ ಭಿನ್ನಾಭಿಪ್ರಾಯ ಇದಾವುದರಿಂದಲೂ ಇಂತಹ ಹೋರಾಟ ಹಿನ್ನೆಡೆ ಪಡೆಯಬಾರದು ಎಂಬುದೇ ನಮ್ಮ ಅಪೇಕ್ಷೆ. ಜಿಲ್ಲೆಯ ಎಲ್ಲಾ ಪಕ್ಷದ ಸ್ನೇಹಿತರು, ಎಲ್ಲಾ ವರ್ಗದ ಜನರು ಇದನ್ನುಸಾಬೀತು ಪಡಿಸುವ ರೀತಿಯಲ್ಲಿ ನಡೆದು ಕೊಂಡಿರುವುದು ಜಿಲ್ಲೆಯ ಸಮಗ್ರ ಅಭಿವೃದ್ಧಿ ದೃಷ್ಟಿಯಿಂದ ಒಂದು ಶುಭ ಸೂಚನೆಯಾಗಿದೆ ಎಂದು ಅಭಿಪ್ರಾಯಿಸಿದ್ದಾರೆ.

ಹಾಸನ ಜಿಲ್ಲೆ ಚನ್ನರಾಯಪಟ್ಟಣದ ವಡ್ಡರಹಳ್ಳಿ ಗೇಟಿನ ಬಳಿ ಸುಮಾರು 97 ದಿನಗಳ ಕಾಲ ಹಾಸನ ಜಿಲ್ಲೆಯ ಕೆಲವರು ತುಮಕೂರು ಜಿಲ್ಲೆಗೆ ನೀರು ಹರಿಯಬೇಕಾದ ಕಾಲುವೆಗೆ ಮಣ್ಣು ತುಂಬಿ ಕುಳಿತಾಗ, ಜಗತ್ತಿನಲ್ಲಿ ಎಲ್ಲೂ ನಡೆಯದ ಈ ಅನ್ಯಾಯವನ್ನು ಸರ್ಕಾರ ಕಂಡೂ ಕಾಣದಂತೆ ಕಣ್ಣುಮುಚ್ಚಿ ಕುಳಿತದ್ದರಿಂದ ನಾವು ಅನಿವಾರ್ಯವಾಗಿ ಸಂಘರ್ಷದ ಮಾರ್ಗಕ್ಕೆ ಇಳಿಯಲೇಬೇಕಾಯಿತು. ಅಲ್ಲಿಯ ರೈತರಿಗೆ ಅನ್ಯಾಯವನ್ನು ಪ್ರತಿಭಟಿಸಲು ತುಮಕೂರು ಜಿಲ್ಲೆಯೊಂದನ್ನೇ ಬಲಿಕೊಡಲು ಏಕೆ ತೀರ್ಮಾನಿಸಿದರು? ಎಂಬುದೇ ನಮಗೆ ಇಂದಿಗೂ ಅರ್ಥವಾಗದ ಪ್ರಶ್ನೆಯಾಗಿದೆ ಎಂದಿದ್ದಾರೆ.

ತುಮಕೂರು ಕಾಲುವೆಯಿಂದ ನಾಲ್ಕು ಹೆಜ್ಜೆ ದೂರದಲ್ಲಿರುವ ಹಾಸನ-ಮಂಡ್ಯ-ಮೈಸೂರು ಜಿಲ್ಲೆಗೆ ನೀರು ಹರಿದು ಹೋಗುವ ಕಾಲುವೆಗಳನ್ನು ಏಕೆ ಮುಚ್ಚಲಿಲ್ಲ? ಎಂಬುದು ಅನೇಕ ಸಲ ನಾನು ಕೇಳಿದ ನೋವು ತುಂಬಿದ ಪ್ರಶ್ನೆಗೆ ಯಾರಿಂದಲೂ ಈವರೆಗೆ ಉತ್ತರ ಬರಲಿಲ್ಲ.

ಹಾಸನ ಜಿಲ್ಲೆಯ ಗೊರೂರಿನಿಂದ ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಕರೆದು ತರುವ ದಾರಿಯಲ್ಲಿ ಅಡ್ಡಿಬಂದ ದುಷ್ಟ ಶಕ್ತಿಗಳು ಈ ನಿಟ್ಟಿನಲ್ಲಿ ನಡೆದ ಕುಯುಕ್ತಿ, ಕುತಂತ್ರಗಳನ್ನು ಎರಡು ದಶಕಗಳಿಗೂ ಹೆಚ್ಚು ಕಾಲ ಅನುಭವಿಸಿದ ನನಗೆ ತುಮಕೂರು ಜಿಲ್ಲೆ ಒಂದಕ್ಕೆ ಏಕೆ ಈ ರೀತಿಯ ನಿರಂತರ ಅನ್ಯಾಯವಾಗುತ್ತಿದೆ? ಈ ಪ್ರಶ್ನೆಗೆ ಉತ್ತರ ಹುಡುಕುವ ಮೂಲಕವೇ ಈ ಜಿಲ್ಲೆಯ ಎಲ್ಲ ಪಕ್ಷದ ರಾಜಕಾರಣಿಗಳು, ಎಲ್ಲ ವರ್ಗದ ಜನರು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ ಎಂದು ಸಲಹೆ ನೀಡಿದ್ದಾರೆ.

ನೀರಿನ ವಿಷಯದಲ್ಲಿ ಮಾತ್ರವಲ್ಲ, ಜಿಲ್ಲೆಗೆ ನ್ಯಾಯಬದ್ಧವಾಗಿ ಸಿಗಬೇಕಾದ ಪ್ರತಿಯೊಂದು ಸೌಲಭ್ಯದಲ್ಲಿ ಏಕೆ ಅನ್ಯಾಯವಾಗುತ್ತಿದೆ? ಸರ್ಕಾರ ಈ ಜಿಲ್ಲೆಯನ್ನು ಇಷ್ಟೊಂದು ನಿರ್ಲಕ್ಷ್ಯದಿಂದ ಕಾಣಲು ಕಾರಣವೇನು? ಈ ನಿರಂತರ ಅನ್ಯಾಯವನ್ನು ಪ್ರತಿಭಟಿಸುವ ವಿರೋಧಿಸುವ ಶಕ್ತಿಸಂಚಯನ ನಡೆಯುತ್ತಿಲ್ಲವೇಕೆ? ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ.

ಇದಕ್ಕೆ ಇಲ್ಲಿನ ಸ್ವಾಭಿಮಾನ ಶೂನ್ಯ ಜಡಗೊಂಡ ಜನಸಮೂಹ, ಯಾವುದೇ ವಿಷಯದ ಬಗ್ಗೆ ನಿರ್ಧಿಷ್ಟ ನಿಲುವಿಲ್ಲದ, ಪ್ರಬಲ ಇಚ್ಛಾಶಕ್ತಿಯುಳ್ಳ ನಾಯಕತ್ವದ ಕೊರತೆ - ಕಾರಣಗಳೆಂಬ ಅಪವಾದವಿದೆ. ಆದರೆ ಈಗ ನಡೆದ ಹೋರಾಟದಲ್ಲಿ ಎಲ್ಲಾ ವರ್ಗದ ಜನರು ತೋರಿದ ಅಭೂತಪೂರ್ವ ಪ್ರತಿಕ್ರಿಯೆ ಹಾಗೂ ಅಸಮಾನ್ಯ ಇಚ್ಛಾಶಕ್ತಿ ಎಲ್ಲರನ್ನೂ ಅಚ್ಚರಿಗೊಳಿಸಿದೆ. ಈ ಹೋರಾಟವನ್ನು ಯಶಸ್ವಿಗೊಳಿಸುವ ಮೂಲಕ ಮೇಲೆ ಹೇಳಿದ ಆರೋಪವನ್ನು ಶಾಶ್ವತವಾಗಿ ತೊಡೆದು ಹಾಕಿದ್ದೇವೆ. ಈ ಯಶಸ್ವಿ ಹೋರಾಟ ಕೇವಲ ನೀರಿನದ್ದಾಗದೆ, ಜಿಲ್ಲೆಯ ಜನರ ಸ್ವಾಭಿಮಾನ ಜಾಗೃತಿಗೊಳಿಸಿದ ಹೋರಾಟ. ಇದು ಸರ್ಕಾರಕ್ಕೆ ಎಚ್ಚರಿಕೆ ಗಂಟೆ ಎಂದು ಪ್ರತಿಪಾದಿಸಿದ್ದಾರೆ.

ಇಂತಹ ಚಳುವಳಿ, ಪ್ರತಿಭಟನೆ, ಬಂದ್‌ಗಳು ನಡೆಯುವಾಗ ಸಂಯಮ ಮೊದಲ ಅವಶ್ಯಕತೆ. ಸರ್ಕಾರದ ಆಸ್ತಿ ಕೂಡ ನಮ್ಮ ಬೆವರಿನ ಫಲ. ನಮ್ಮ ಈ ಹೋರಾಟದ ಒಗ್ಗಟ್ಟಿನ ಬಲ ಅಧಿಕಾರದ ಗದ್ದುಗೆಯಲ್ಲಿ ನಿಷ್ಕ್ರಿಯರಾಗಿ ಕುಳಿತಿರುವವರ ವಿರುದ್ಧವೇ ಹೊರತು, ಜನರ ವಿರುದ್ಧವಲ್ಲ. ಜಿಲ್ಲೆಯಾದ್ಯಂತ ಸುಮಾರು ಒಂದು ವಾರಗಳ ಕಾಲ ನಡೆದ ರಸ್ತೆ ತಡೆ ಹಾಗೂ ಬಂದ್‌ನ ಸಂದರ್ಭದಲ್ಲಿ ಯಾವುದೇ ಅಹಿತಕರ ಘಟನೆ ನಡೆಯಲು ಅವಕಾಶಕೊಡದೆ ಹೋರಾಟವನ್ನು ಯಶಸ್ವಿಗೊಳಿಸಿದ್ದು ಈ ಜಿಲ್ಲೆಯ ಜನರ ಹೆಗ್ಗಳಿಕೆ ಎಂದು ಹೇಳಿ, ಈ ಸಂದರ್ಭದಲ್ಲಿ ಪೊಲೀಸರು ತೋರಿದ ಸಂಯಮವೂ ಪ್ರಶಂಸಾರ್ಹ ಎಂದಿದ್ದಾರೆ.

ಸಮಸ್ಯೆಗಳ ಪರಿಹಾರಕ್ಕೆ ಸಂಧಾನವೇ ಸೂಕ್ತ ಮಾರ್ಗ ಎನ್ನುವ ಅರಿವು ನಮಗಿದೆ. ಆದರೆ ಆಳುವವರಿಗೆ ಈ ಅರಿವು ಇಲ್ಲದೇ ಹೋದಾಗ ಸಂಘರ್ಷ ಅನಿವಾರ್ಯವಾಗುತ್ತದೆ ಎಂದಿದ್ದಾರೆ.

ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಪಡೆದುಕೊಳ್ಳುವಲ್ಲಿ ತುಮಕೂರು ಜಿಲ್ಲಾ ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ ತನ್ನದೇ ರೀತಿಯಲ್ಲಿ ಕೆಲಸ ಮಾಡಿಕೊಂಡು ಬಂದಿದೆ. ಕಾಲುವೆಗೆ ಮಣ್ಣುಸುರಿದು ನೀರು ತಡೆದಾಗ ನಾವು ಪ್ರಾರಂಭಿಸಿದ ಪ್ರತಿಭಟನಾ ಕಾರ್ಯಕ್ರಮಕ್ಕೆ ಬೆಂಬಲವಿತ್ತು. ಯಶಸ್ವಿಗೊಳಿಸಲು ಸಹಕರಿಸಿದ ಎಲ್ಲರಿಗೂ ಋಣಿಯಾಗಿರುತ್ತೇನೆ ಎಂದಿದ್ದಾರೆ.

ಸದರಿ ಹೊರಾಟದಿಂದ ರಾಜಕೀಯ ಪ್ರತಿಫಲ ಪಡೆಯುವ ಆಸೆ - ಗುರಿ ನನಗಿಲ್ಲ ಎಂದು ಸ್ಪಷ್ಟಪಡಿಸಿರುವ ರಾಮಯ್ಯ, ಇತರ ಮುಖಂಡರು ತಮ್ಮ ಬಗ್ಗೆ ಆ ರೀತಿ ತಿಳಿಯಬಾರದೆಂದು ವಿನಂತಿಸಿದ್ದಾರೆ.

ಜಿಲ್ಲೆಯ ವಿವಿಧೆಡೆ ವಿಜಯೋತ್ಸವ ಮತ್ತು ಸನ್ಮಾನಕ್ಕೆ ಬರುತ್ತಿರುವ ಆಹ್ವಾನಗಳನ್ನು ನಿರಾಕರಿಸಿರುವುದಾಗಿ ತಿಳಿಸಿದ ಅವರು, ಗ್ರಾಮಸ್ಥರು ವಿಜಯೋತ್ಸವ ನಡೆಸಿಕೊಳ್ಳಲಿ; ಆದರೆ ಸನ್ಮಾನಕ್ಕೆ ಅರ್ಹವಾಗುವ ಸಾಧನೆಯನ್ನೇನೂ ಮಾಡದಿರುವುದರಿಂದ ಸನ್ಮಾನವನ್ನು ತಿರಸ್ಕರಿಸಿದೆ ಎಂದರು.

ನಾಲೆಯಲ್ಲಿ ನೀರು ಹರಿಹಲು ಪ್ರಾರಂಭವಾಗಿರುವುದರಿಂದ ಇನ್ನು ಮುಂದೆ ಅದನ್ನು ಜಿಲ್ಲೆಗೆ ಹರಿಸಿ ವಿತರಣೆ ಮಾಡುವುದು ನೀರಾವರಿ ಇಲಾಖೆ ಹೊಣೆಯಾಗಿದ್ದು, ಈ ದಿಸೆಯಲ್ಲಿ ಮುಖ್ಯ ಇಂಜಿನಿಯರ್ ಮತ್ತು ಅಧಿಕಾರಿ - ಸಿಬ್ಬಂದಿ ಸಮಯಕ್ಕೆ ತಕ್ಕಂತೆ ಕಾರ್ಯನಿರ್ವಹಿಸಲಿ ಎಂದು ಕರೆ ನೀಡಿದ್ದಾರೆ.

**(ತುಮಕೂರು ವಾರ್ತೆ : 22-7-1998)**

## ಮಾಜಿ ಶಾಸಕರ ಭೇಟಿ : ಸರ್ಕಾರಿ ನೌಕರರು ಪರಾರಿ

**ಮಾಹಿತಿ ಸಂಗ್ರಹಿಸಲು ಮಾಜಿ ಶಾಸಕ ಹಾಗೂ ಸಮಾಜವಾದಿ ಪಕ್ಷದ ರಾಜ್ಯ ಅಧ್ಯಕ್ಷ ವೈ.ಕೆ. ರಾಮಯ್ಯ ಇಲ್ಲಿನ ಹೇಮಾವತಿ ನಾಲಾ ವಲಯ ಕಚೇರಿಗೆ ತೆರಳಿದಾಗ ನೌಕರರು ಕಛೇರಿಯನ್ನು ಬಿಟ್ಟು ಹೊರಕ್ಕೆ ಓಡಿ ಬಂದ ಪ್ರಸಂಗ ಬುಧವಾರ ನಡೆಯಿತು.**

ಹೇಮಾವತಿ ನಾಲಾ ಕೆಲಸವನ್ನು ಹೊಸ ಸರ್ಕಾರ ಬಂದ ನಂತರ ಸಂಪೂರ್ಣ ಸ್ಥಗಿತಗೊಳಿಸಲಾಗಿದೆ. ಕೆಲಸ ಮತ್ತೆ ಆರಂಭಿಸುವಂತೆ ಹೊಸ ಸರ್ಕಾರಕ್ಕೆ ವೈ.ಕೆ. ರಾಮಯ್ಯ ಮಾ.26 ರವರೆಗೆ ಗಡುವು ನೀಡಿದ್ದಾರೆ. ಕೆಲಸ ಪುನರ್ ಆರಂಭಿಸದಿದ್ದರೆ ಉಗ್ರಕ್ರಮ ಕೈಗೊಳ್ಳುವುದಾಗಿ ಅವರು ಎಚ್ಚರಿಕೆ ನೀಡಿದ್ದಾರೆ.

ಮಾ. 26 ಸಮೀಪಿಸುತ್ತಿರುವದರಿಂದ ನಾಲಾ ಕೆಲಸದ ವಿವರ ತಿಳಿಯಲು ವೈ.ಕೆ. ರಾಮಯ್ಯ, ಜಿಲ್ಲಾ ಸಮಾಜವಾದಿ ಪಕ್ಷದ ಅಧ್ಯಕ್ಷ ಹಾಗೂ ಜಿಲ್ಲಾ ಪರಿಷತ್‌ನ ಮಾಜಿ ಅಧ್ಯಕ್ಷ ಎಚ್. ನಿಂಗಯ್ಯ ಹಾಗೂ ಬೆಂಬಲಿಗರೊಂದಿಗೆ ಹೇಮಾವತಿ ಕಚೇರಿಗೆ ತೆರಳಿದರು. ರಾಮಯ್ಯನವರು ಉಗ್ರಕ್ರಮ ಕೈಗೊಳ್ಳಲು ಬರುತ್ತಿದ್ದಾರೆ ಎಂದು ಭಾವಿಸಿದ ಹೇಮಾವತಿ ನೌಕರರು ಕಚೇರಿಯಿಂದ ಹೊರಬಂದು ನಿಂತರು.

ಈ ಹಿಂದೆ ಹೇಮಾವತಿ ಕಚೇರಿಗೆ ಬೀಗ ಹಾಕಿ, ನೌಕರರಿಗೆ ದಿಗ್ಬಂದನ ಮಾಡಿದ್ದ ಘಟನೆಯನ್ನು ನೆನಪಿಸಿಕೊಂಡು ನೌಕರರು ಗಾಬರಿಯಾಗಿ ಹೊರಬಂದಿದ್ದಾರೆ ಎಂಬುದನ್ನು ಅರಿತ ವೈ.ಕೆ. ರಾಮಯ್ಯನವರು ನೌಕರರಿಗೆ ನಿಜ ಸ್ಥಿತಿ ಹೇಳಿ ಪರಿಸ್ಥಿತಿಯನ್ನು ತಿಳಿಗೊಳಿಸಿದರು.

**(ಪ್ರಜಾವಾಣಿ )**

## Making sericulture more profitable

The minister of state for sericulture, Mr. Y.K. Ramaiah, today stressed the importance of supplying silk rearers with disease-resistant worms that would ensure a good crop and sustantial returns from the market. If sericulture was to make headway in the country. In his address at the inaugural function of the Spun Silk India factory at Chickballapur. Mr. Ramaiah pointed out that the post cocoon silk industry in the state faced several constraints. Spun silk was found to be the most profitable of the post-cocoon silk programmes. He said. Decisions taken at the state and central levels should help the poor silk weavers and rearer instead of the trader who got the lion's share of the profits.

The boost the silk industry should getting the missing because of a misconception among industrialists that sericulture was non-profitable. Mr. Ramaiah called on the Central government to ban the import of any kind of silk. The importer of silk would only destabilise and destroy the silk industry inland, as was evident in China's strategy of selling China silk at low rates sans duty to India. India produced enough silk to meet its own requirements. He was confident of meeting the requirements of manufacturers in the country with the silk produced in Karnataka. Mr. Ramaiah said the import policy lop-sided should be regularised through the Central Silk Board. An authority should check that the imported silk is utilised for the manufacture of silk goods. He called on experts to keep in mind the market viability of the product made of silk.

The large and medium industries minister, Mr. J.H. Patel, said the question today was whether to replace manpower with machines in order to become technologically advanced at the risk of intensifying the unemployment prob-

lem. A permanent solution would have to be worked out, he said.

Industrial development in the state had suffered for 15 years due to bad planning. The main cause of losses was the power crisis in the state. However, the situation would improve within three or four years when work on the big power projects got under way, Mr. Ramaiah stated. The fisheries and ports minister, Mr. C. Byregowda, said the criterion for locating and industry should be the potential for employment in the area. He requested Mr. Patel to make it mandatory for an industry to provide employment to local residents. In the Kolar Gold Fields, for example, only 5 percent of the residents of Kolar had been provided employment. The Karnataka Pradesh Congress Committee president, Mr. K.H. Ranganath, said the lobbying within the state for a ban on imports of silk was not strong, as it had not led to the Centre's ban on import. Mr. B.K. Chandrashekar, MLC, hoped the advanced technology which was making its entry in villages would lead to training villagers on the use of modern machinery. Mr. Hachiro Kaneko, presidnt of Messrs Shinano Kenshi Company, Japan, who was collaborated with Spun Silk India in his venture, inaugurated the project. In his inaugural address he said Japan was the biggest silk producing and consuming country in the world. But over 15 years there had been a 45 percent decline in both production and consumption of silk in his country.

(Times of India : 21-10-1985)

## Padayatra to propagate tree planting plans

A three day padayatra to propagate tree planting and family planning programmes began at Kunigal taluk in Tumkur district on Tuesday. The 57 km padayatra, which will touch a number of villages, will reach Maddur taluk in Mandya district on Thursday evening. The padayatra being held for the second time by the Horticulture Minister Y.K. Ramaiah in Tumkur district attracted hundreds of people on the way.

Number of people from every village on the way accompanied the Minister up to the next village. Mr. Ramaiah went on a padayatra from Tumkur district to Magadi taluk (80 kms.) last year. Earlier to the commencement of the padayatra, Mr. Ramaiah who addressed a public meeting, refuted the opposition charges that he organised functions and padayatras for political advantage. He also made it clear that he was inspired by the success of the padayatra held by him last year. Incidentally, the Co-operation Minister Ekantaiah, who laid the foundation stone for Rs. 8 lakh godown of the Karnataka State Marketing Federation, told the gathering at Kunigal that the godown has the capacity to store 1,000 metric tonnes of food grains. Social Welfare Minister G. Basavannappa, who laid the foundation stone for a pre-metric hostel for Scheduled Castes and Scheduled Tribes at Kunigal, said the State Government would provide buildings to 115 such hostels by 1988. Forest Minister, Bagalkot who inaugurated the tree planting programme said the Government has distributed over 80 crore saplings since 1983 and said that it had plans to distribute about 30 crore saplings this year.

(Indian Express, Bangalore : Dt.-12-8-1987)

## Crub on seedlings purchase

A ban has been imposed on purchase of seedlings from outside the state by the horticulture department, horticulture minister Mr. Y.K. Ramaiah said here today. He told newsmen that the department officials would be allowed to purchase seedlings from outside the state only on obtaining non availability certificate from the director of horticulture. He said he had given the instructions since it was found that seedlings were being purchased from outside the state even though the seedlings of the same variety were available within the state. Asked why this was being done, the minister said, "I leave it to you to judge". He said efforts would be made to see that seedlings of all varieties were grown in the farms of the horticulture department. However, he felt that the state farms were not able to meet the demand for seedlings. Mr. Ramaiah said two horticulture projects proposed for World Bank assistance which were lying idle since 1979 were being revised and sent for World Bank assistance. One of them is integrated horticulture development programme costing Rs.58 crores the other is a Rs.36 crores coconut development programme. He said he was seeking a meeting with the central minister to impress upon him the need to clear these programmes. The programme included improving the infrastructural facilities, finance and marketing. The minister said that he was also thinking of creating an apex body like the Karnataka fruits and vegetable marketing board so that institutional finance could be secured for marketing of fruits and vegetables. The officials have been asked to prepare a plan in this regard. He said he was also exploring the possiblility of exporting fruits and vegetables.

(Times of India : 13-7-1987)

## "Iron bars no barriers to chalk out strategies"

" Stone walls do not a prison make", so wrote some bard and gazing past the iron bars of his cell, book in hand, President of the Samajwadi Party, (Karnataka) Y. K. Ramaiah's demeanour more or less echoes the bard. He was totally at ease when **Bangalore Sun** met him in the confines of the City Central Jail. In a free-wheeling interview Ramaiah held forth on a variety of subjects including that of being a politician. "... For a politician the atmosphere within the four walls may prove beneficial. It could help him think of better political strategies, the pros and cons of the cause fo which he is fighting or well, he may very well settle down to writing. And reading. Like some of the great political stalwarts..."

Y.K. Ramaiah was arrested when he went on a hunger strike demanding the immediate release of the Hemavathy water to Tumkur and the revival of irrigation projects in the district. Ramaiah flayed the Janata Dal government for having pulled the plug on irrigation projects. "Just another political gimmick and clear-cut vote bank politics".

"... My victory in the 1992 Kunigal by-election paved the way for the reunification of the JD and kindly let my friends in power at Vidhana Soudha know that they owe it to me..."

He said it was his determiniation, his fondness for challenges and an inner urge that makes him take on the impossible which had made him state that he would stay in jail till goverment wakes up and releases the Hemavathy water.

"... It is my privilege to be in jail. I could not go to jail during the independence movement and during emergency and now I have a just cause to do so. It's nice here, books to

read... literature, socialist writings of Jayaprakash Narayan etc., ..."

"... Reading has made me more mature and I can face an thousand debates and not a single defeat... " Ramaiah flashes fire and brimstone as he says this. Ramaiah on the budget: "Proves the intellectual poverty of the govenment and the allocation of funds to various development projects proves it". And on corruption: "... A world wide phenomenon and nobody can eradicate it". Ramaiah quotes Deve Gowda's foot-in-mouth gaffe, "Remember Deve Gowda saying in public when he took over as president of Janata Dal that everyone including himself was corrupt".

(SUN *Evening English Daily)*

## Ramaiah threatens statewide agitation

State Samajawadi Party President and former minister Y.K. Ramaiah today warned the Chief Minister H.D. Deve Gowda that a state-wide agitation would be launched in consultation with other political parties if irrigation projects works in the State did not resume befor April 15. Addressing a press conference after his release from the jail, he said the agitation which is currently restricted to Tumkur district, protesting against the stoppage of work on Hemavathy river chanal, will assume greater proportions if work does not resume within specific period as assured by Chief Minister himself. Mr. Ramaiah was in trhe eye of the storm recently for his arrest by the police when he was staging a dharna near CM's house, demanding immediate resumprion of the work on Hemavathy chanal. Later, Mr. Gowda clarified that all irrigation works in the State had been stopped to put an end to the reported irregularities and work would resume on April 11.

He challenged Mr. Gowda to fulfil his promise so that his much boasted concern for the farmers would be proved and people of the State would be benefitted. "I do not doubt Mr. Gowda's pious intensions. But he has become captive of many vested interests," he alleged. Even there was no money in the State exchequer. The Government did not have any innovative plans to mobilise resources. Hence it would be difficult to believe Chief Minister's high sounding claims on irrigation, he said. Launching a scathing attack on Mr. Gowda, Mr. Ramaiah described the reasons given by Mr. Gowda for stoppage of the irrigation work as "unreasonable". The violation or rules whicle executing works, which the chief Minister projected as the reason, was not exclusive to irrigation department and there was no need to stop the work, he contended.

Mr Ramaiah who was with Janata Dal earlier, said Chief Minister should remember that his political life received a positive turn after Mr Ramaiah won Kunigal by-election in the last Assembly. The process of merger between two Janata Dal factions was begun after Kunigal victory. "Hence I too have contributed to the JD's victory in the State," he claimed.

"There were occasions when previous chief ministers Mr. Bangarappa and Mr Veerappa Moily syspathetically considered demands relating to irrigation raised by me. But Mr. Gowda did not bother even to send reply to my letters on irrigation," he regretted.

Mr Ramaiah thanked all the persons who pleaded for his release when he was in jail.

(Deccan Herald 9-4-1995)

# ಹೇಮಾವತಿ ನಾಲೆ ಕಾಮಗಾರಿ ಪರಿಶೀಲನೆ

ಹೇಮಾವತಿ ನಾಲೆಯ ಏರಿಯ ಮೇಲೆ ಇಂದು ಕಾರು, ಜೀಪುಗಳ ಜಾಥ ನಡೆದು ಹಳ್ಳಿಯ ಜನರಲ್ಲಿ ಪುಳಕ ಮೂಡಿಸಿತು.

ಹೇಮಾವತಿ ಇತಿಹಾಸದಲ್ಲೇ ಇದೇ ಮೊದಲ ಬಾರಿಗೆ ವಿಧಾನಸಭೆಯ ಅಂದಾಜು ಸಮಿತಿ ನಾಲೆಯ ಏರಿಯ ಮೇಲೆ ಪ್ರವಾಸ ಕೈಗೊಂಡು ಕಾಮಗಾರಿಗೆ ಇರುವ ಅಡೆತಡೆಗಳನ್ನು ವಿಚಾರಿಸಿದ್ದು, ಹಳ್ಳಿಯ ಜನರಿಗೆ ನಾಲೆಯಲ್ಲಿ ನೀರು ಹರಿದಷ್ಟೇ ಸಂತಸ ತಂದಿತು. ಒಟ್ಟು 8 ಅಂಬಾಸಿಡರ್ ಕಾರುಗಳು ಮತ್ತು 12 ಜೀಪುಗಳು ಸಾಲಾಗಿ ಏರಿಯ ಮೇಲೆ ಕಡಿದಾದ ರಸ್ತೆಗಳಲ್ಲಿ ಹೋಗುತ್ತಿದ್ದ ದೃಶ್ಯ ನಾಲೆಯ ಬದಿಗಳಲ್ಲಿದ್ದ ಜನತೆಗೆ ವಿಸ್ಮಯ ಹುಟ್ಟಿಸಿತ್ತು.

ವಿಧಾನಸಭೆಯ ಅಂದಾಜು ಸಮಿತಿ, ಪೊಲೀಸ್ ಅಧಿಕಾರಿಗಳು ಮತ್ತು ಪತ್ರಕರ್ತರನ್ನು ಕರೆದೊಯ್ಯುತ್ತಿದ್ದ ವಾಹನಗಳು ದೂರದಿಂದ ಬರುತ್ತಿದ್ದಂತೆ ಹಳ್ಳಿಯ ಜನರು ಅಭಿಮಾನದ ಮಹಾಪೂರವನ್ನೇ ಹರಿಸುತ್ತಿದ್ದುದು ಸಾಮಾನ್ಯವಾಗಿತ್ತು.

ಕೆಲವೆಡೆ ತಳಿರು ತೋರಣಗಳಿಂದ ಅಲಂಕರಿಸಲಾಗಿತ್ತು. ಮತ್ತೆ ಕೆಲವು ಕಡೆಗಳಲ್ಲಿ ಹಾರ ತುರಾಯಿಗಳ ಭರಾಟೆಯೂ ನಡೆದಿತ್ತು. ಎಲ್ಲೆಡೆ ಎಳನೀರು, ಬಿಸ್ಕೆಟ್, ಬಾಳೆಹಣ್ಣು, ಕಾಫಿ -ಚಹಾ, ತಂಪು ಪಾನೀಯಗಳನ್ನು ಅಭಿಮಾನದಿಂದ ಒತ್ತಾಯಪೂರ್ವಕವಾಗಿ ಜನ ನೀಡುತ್ತಿದ್ದರು. ನಾಲೆಯ 172ನೇ ಕಿ.ಮೀ. ಪ್ರದೇಶದಲ್ಲಿ ಪ್ರಶಾಂತ ತೋಟದಲ್ಲಿ ಭರ್ಜರಿ ಭೋಜನ ವ್ಯವಸ್ಥೆ ಮಾಡಲಾಗಿತ್ತು.

ಸಮಿತಿಯ ಸದಸ್ಯರು ಪಕ್ಷಭೇದ ಮರೆತು ಸಮಸ್ಯೆಗಳನ್ನು ಗಂಭೀರವಾಗಿ ಚರ್ಚಿಸುತ್ತಿದುದು ಕಂಡುಬಂತು. ಸಮಿತಿಯಲ್ಲಿ 19 ಮಂದಿ ಸದಸ್ಯರಿದ್ದರೂ ಇಂದು ಕೇವಲ ಆರು ಮಂದಿ ಮಾತ್ರ ಕಾಮಗಾರಿ ವೀಕ್ಷಣೆಗೆ ಆಗಮಿಸಿದ್ದರು.

ಸಮಿತಿಯ ಅಧ್ಯಕ್ಷ ಬಿ.ಎಸ್. ಪಾಟೀಲ್ ಸಾಸನೂರು, ಹುಲಿಯೂರುದುರ್ಗ ಶಾಸಕ ವೈ.ಕೆ. ರಾಮಯ್ಯ, ತುರುವೇಕೆರೆ ಶಾಸಕ ಎಂ.ಡಿ. ಲಕ್ಷ್ಮೀನಾರಾಯಣ, ಸಿ.ಎಂ. ಲಿಂಗಪ್ಪ, ಹೊನ್ನಾಳಿ ಶಾಸಕ ಡಿ.ಜಿ. ಶಾಂತನಗೌಡ, ಶಾಸಕ ಶ್ರೀ ರಂಗದೇವರಾಯ ಅವರು ಕಾಮಗಾರಿ ಪರಿಶೀಲನೆ ಮಾಡಿದರು.

ಸಮಿತಿಯ ಸದಸ್ಯ ವೈ.ಕೆ. ರಾಮಯ್ಯ ಅವರು ಕಾಮಗಾರಿ ಪರಿಶೀಲನೆ ಸಮಯದಲ್ಲಿ ಎಂಜಿನಿಯರ್‌ಗಳು, ಇಂಜಿನಿಯರಿಂಗ್ ವಿಭಾಗದ ಅಧಿಕಾರಿಗಳು ಮತ್ತು ಗುತ್ತಿಗೆದಾರರ ವಿರುದ್ಧ ಕೆಂಡಾಮಂಡಲವಾಗಿದ್ದರು.

'ಅಪ್ಪ ಅಮ್ಮ ದೇಹ ಕೊಟ್ಟಿದ್ದಾರೆ; ವಿದ್ಯೆ ಕೊಟ್ಟಿದ್ದಾರೆ; ಸರ್ಕಾರ ಕೆಲಸ ಕೊಟ್ಟಿದೆ; ನಿಯತ್ತಾಗಿ ಕೆಲಸ ಮಾಡುವುದು ಕಲಿಯಿರಿ. ಯಾವುದೇ ವಿವರಣೆ ನಿಮ್ಮಿಂದ ಬೇಕಿಲ್ಲ; ನಮ್ಮ ದೇಶದ ಜನ ಅದರಲ್ಲೂ ಬಡ ರೈತರು ಯಾವ ತಪ್ಪು ಮಾಡಿದ್ದಾರೆ ಎಂದು ಅವರಿಗೆ ಶಿಕ್ಷೆ ಕೊಡುತ್ತೀರಿ? ಅವರ ಋಣ ತೀರಿಸಿದ್ರೆ ನಿಮ್ಮ ಮನೆ ಹಾಳಾಗುತ್ತಾ' ಎಂದು ಅಧಿಕಾರಿಗಳನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡರು.

'ತಿಂಗಳು ತಿಂಗಳು ಬರುವ ಸಂಬಳ ಒಂದು ದಿನ ತಡವಾದರೆ ನೀವು ಸುಮ್ಮನಿರುತ್ತೀರಾ? ಅಂತೆಯೇ ಕಾಮಗಾರಿ ವಿಳಂಬವಾದರೆ ಏಕೆ ಸಂಬಂಧಪಟ್ಟವರನ್ನು ಎಚ್ಚರಿಸುವುದಿಲ್ಲ. ಕಂತೆಕಂತೆ ಎಣಿಸಿಕೊಳ್ಳಲು ಬರುವ ನಿಮಗೆ ನಿಯತ್ತಾಗಿ ಕೆಲಸ ಮಾಡಲು ತೊಂದರೆ ಏನು' ಎಂದು ಖಾರವಾಗಿ ಪ್ರಶ್ನಿಸಿದರು. ಸಮಿತಿಯ ಅಧ್ಯಕ್ಷ ಬಿ.ಎಸ್.ಪಾಟೀಲ್ ಅವರು ಹಲವು ಸಂದರ್ಭದಲ್ಲಿ ಸಹನೆ ಮೀರಿ ಮಾತನಾಡುತ್ತಿದ್ದ ರಾಮಯ್ಯ ಅವರನ್ನು ಸಮಾಧಾನಪಡಿಸುತ್ತಿದ್ದರು.

ಕೆಲವು ಕಾಮಗಾರಿಗಳನ್ನು ವೀಕ್ಷಿಸಿದ ಬಳಿಕ ಒಂದೆಡೆ ಗುತ್ತಿಗೆದಾರರ ಬೇಜವಾಬ್ದಾರಿಯುತ ಹೇಳಿಕೆಯಿಂದ ಕೋಪಗೊಂಡು, '25 ವಾಹನಗಳಲ್ಲಿ ಇಷ್ಟೊಂದು ಹಣ ಖರ್ಚು ಮಾಡಿಕೊಂಡು ಇಲ್ಲಿಗೆ ಬಂದಿದ್ದೇವೆ; ಮೊದಲು ಜವಾಬ್ದಾರಿಯುತವಾಗಿ ಮಾತನಾಡುವುದು ಕಲಿಯಿರಿ' ಎಂದು ಗದರಿದರು.

ಸಮರ್ಪಕವಾಗಿ ಕೆಲಸ ಮಾಡಿದ ಗುತ್ತಿಗೆದಾರರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಿ ಎಂದು ಅವರ ಅಧಿಕಾರಿಗಳಿಗೆ ಸೂಚಿಸಿದರು.

(ಪ್ರಜಾವಾಣಿ : 21-7-2000)

## ವನವಿಕಾಸ : 3 ಕೋಟಿ ವೆಚ್ಚದಲ್ಲಿ 5 ಕೋಟಿ ಸಸಿ

ವನವಿಕಾಸ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಸರ್ಕಾರ ಮೂರು ಕೋಟಿ ರೂಪಾಯಿ ವೆಚ್ಚದಲ್ಲಿ ಐದು ಕೋಟಿ ಸಸಿಗಳನ್ನು ಬೆಳೆಸಲು ಉದ್ದೇಶಿಸಿದ್ದು, ಇದರ ಸಂಪೂರ್ಣ ಅನುಷ್ಠಾನವನ್ನು ವನಸಂವರ್ಧನೆ ಟ್ರಸ್ಟ್‌ಗೆ ನೀಡಿದೆ ಎಂದು ಹುಲಿಯೂರು ದುರ್ಗ ಶಾಸಕ ವೈ.ಕೆ. ರಾಮಯ್ಯ ಇಂದು ತಿಳಿಸಿದರು.

ಕುಣಿಗಲ್ ಪಟ್ಟಣದಲ್ಲಿ ವನವಿಕಾಸ ಯೋಜನೆಯಲ್ಲಿ ಸಸಿ ನೆಡುವ ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಅವರು ಪತ್ರಕರ್ತರೊಂದಿಗೆ ಮಾತನಾಡಿದರು. ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ವಿಧ್ಯುಕ್ತವಾಗಿ ಈ ತಿಂಗಳ 24ರಂದು ಯೋಜನೆ ಉದ್ಘಾಟಿಸುವರು ಎಂದು ಹೇಳಿದರು.

ಸಸ್ಯ ಸಂಪತ್ತನ್ನು ಹೆಚ್ಚಿಸುವ ಜತೆಗೆ, ವೃಕ್ಷ ಸಂಪತ್ತು ಬೆಳೆಸುವ ಪರಿಕಲ್ಪನೆಯನ್ನು ಜನಸಾಮಾನ್ಯರಲ್ಲಿ ತರಬೇಕಿದ್ದು, ಈ ದಿಕ್ಕಿನಲ್ಲಿ ವನ ಸಂವರ್ಧನ ಟ್ರಸ್ಟ್‌ನ ಜತೆಗೆ ಸಂಘ ಸಂಸ್ಥೆಗಳು, ಸಾರ್ವಜನಿಕರು, ಸ್ವಯಂ ಸೇವಾ ಸಂಸ್ಥೆಗಳು ಪಾಲ್ಗೊಳ್ಳುವಂತೆ ಮಾಡುವುದು ಇದರ ಉದ್ದೇಶವಾಗಿದೆ ಎಂದರು.

ಹುಲಿಯೂರು ದುರ್ಗ ಕ್ಷೇತ್ರದ ವ್ಯಾಪ್ತಿಯಲ್ಲಿ ಸುಮಾರು ಮೂರು ಲಕ್ಷ ಸಸಿಗಳನ್ನು ನೆಡಲಾಗುತ್ತಿದೆ. ಎರಡು ಲಕ್ಷ ಸಸಿಗಳನ್ನು ರೈತರ ಜಮೀನಿನಲ್ಲಿ ರೈತರಿಂದಲೇ ಗುಂಡಿ ತೆಗೆಸಿ ನೆಡಲಾಗುವುದು. ಉಳಿದ ಒಂದು ಲಕ್ಷ ಸಸಿಗಳನ್ನು ಸರ್ಕಾರಿ ಗೋಮಾಳ, ಶಾಲಾ-ಕಾಲೇಜು, ವಸತಿ ನಿಲಯಗಳು, ಸ್ಮಶಾನ, ರಸ್ತೆ ಬದಿಗಳಲ್ಲಿ ನೆಡಿಸಲು ಉದ್ದೇಶಿಸಲಾಗಿದೆ ಎಂದು ವಿವರಿಸಿದರು. ಇದಕ್ಕಾಗಿ ಈಗಾಗಲೇ 75 ಸಾವಿರ ಗುಂಡಿಗಳನ್ನು ಜೆಸಿಬಿ ಸಹಾಯದಿಂದ ತೆಗಿಸಲಾಗಿದೆ.

ಗಿಡ ನೆಡುವ ಕಾರ್ಯಕ್ರಮ ಒಂದು ತಿಂಗಳಿಂದ ನಿರಂತರವಾಗಿ ನಡೆಯುತ್ತಿದ್ದು, ಗಿಡಗಳನ್ನು ಅರಣ್ಯ, ತೋಟಗಾರಿಕೆ ಮತ್ತು ಜಲಾನಯನ ಪ್ರದೇಶಾಭಿವೃದ್ಧಿ ಇಲಾಖೆಯ ವತಿಯಿಂದ ಪೂರೈಸಲಾಗುತ್ತಿದೆ. ಹೆಚ್ಚುವರಿ ಗಿಡಗಳನ್ನು ಕೋಲಾರ, ಬೆಂಗಳೂರು, ಮಂಡ್ಯ ಮತ್ತು ಹಾಸನ ಜಿಲ್ಲೆಗಳಿಂದ ತರಿಸಲಾಗುತ್ತಿದೆ. ಕೋಲಾರದಿಂದ 20 ಸಾವಿರ ಹಾಗೂ ಬೆಂಗಳೂರು ಜಿಲ್ಲೆಯಿಂದ ಒಂದು ಲಕ್ಷ ಗಿಡಗಳನ್ನು ತರಲಾಗಿದೆ ಎಂದು ಹೇಳಿದರು.

ಈ ಕ್ಷೇತ್ರದ ಕೆಂಚನಹಳ್ಳಿ, ಮಲ್ಲಾಪುರ, ಬೇಗೂರು, ಹೆಗ್ಗಡನಹಳ್ಳಿ, ನಿಡಸಾಲೆ, ಪಿ. ವನಮಾಚನಹಳ್ಳಿ, ದೊಡ್ಡಮಧುರೆ ಗ್ರಾಮಗಳಲ್ಲಿ ಗಿಡ ನೆಡಲಾಗುತ್ತಿದ್ದು, ತರೀಕೆರೆ, ಮಾದಲಾಪುರ, ಕದಲಾಪುರ, ಹಿತ್ತಲಹಳ್ಳಿ ಹಾಗೂ ಸಂತೆಮಾವತೂರು ಗ್ರಾಮಗಳಲ್ಲಿ ಇಂದು ಸಸಿಗಳನ್ನು ನೆಡಲಾಗುತ್ತಿದೆ ಎಂದು ಹೇಳಿದರು.

ಬೈರನಾಯಕನಹಳ್ಳಿ, ಮೋದೂರು, ಕೊಡವತ್ತಿ ಗ್ರಾಮಗಳಲ್ಲಿ ಗಿಡ ನೆಡುವ ಕಾರ್ಯಕ್ಕಾಗಿ 12 ಜೆಸಿಬಿ, 10 ಟ್ರ್ಯಾಕ್ಟರ್ ಹಾಗೂ ಎಂಟು ಲಾರಿಗಳು ಕೆಲಸ ಮಾಡುತ್ತಿವೆ ಎಂದರು. ಹುಲಿಯೂರುದುರ್ಗ ಕ್ಷೇತ್ರ, ಮುತ್ತುರಾಯನಕೆರೆ, ಬ್ಯಾಲದಕೆರೆ, ಗೋಕುಲ, ಹುಲಿಯೂರು ದುರ್ಗದ ವಸತಿಗೃಹ ಹಾಗು ಮಾರ್ಕೋನಹಳ್ಳಿ ವಸತಿಗೃಹಗಳಲ್ಲಿ ಗಿಡಗಳನ್ನು ಸಂಗ್ರಹಿಸಲಾಗಿದೆ ಎಂದು ವಿವರಿಸಿದರು.

(ಪ್ರಜಾವಾಣಿ : 17-8-2001)

# ಮಂತ್ರಿಯಾಗುವ ಇಚ್ಛೆ ಇಲ್ಲ: ವೈಕೆಆರ್

ನನಗೆ ಮಂತ್ರಿಯಾಗುವ ಬಯಕೆ ಇಲ್ಲ. ಇಂದಿನ ಪರಿಸ್ಥಿತಿಯಲ್ಲಿ ಮಂತ್ರಿಯಾಗಿ ನಿಷ್ಠುರವಾದ ಯಾವುದೇ ತೀರ್ಮಾನ ತೆಗೆದುಕೊಳ್ಳಲು ಸಾಧ್ಯವಿಲ್ಲ. ಮಂತ್ರಿಯಾದರೆ ಯಾವ ಯಾವುದೋ ರೀತಿಯ ರಾಜಿಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ಮಂತ್ರಿಯಾಗದೆಯೇ ಜನಪರವಾದ ಕೆಲಸ ಮಾಡುತ್ತೇನೆ' ಎಂದು ಮಾಜಿ ಸಚಿವ ಹಾಗೂ ಕಾಂಗ್ರೆಸ್ ಶಾಸಕ ವೈ.ಕೆ.ರಾಮಯ್ಯ ಅವರು ಇಂದು ಇಲ್ಲಿ ಘೋಷಿಸಿದರು.

ಮೈಸೂರಿನ ಅಭಿಮಾನಿಗಳು 'ಜನಪರ ರಾಜಕಾರಣಿ' ಪ್ರಶಸ್ತಿ ಪಡೆದ ಅವರಿಗೆ ಇಂದು ಅಭಿನಂದಿಸಲು ಸಂಘಟಿಸಿದ್ದ ಸಮಾರಂಭದಲ್ಲಿ ಮಾತನಾಡಿದ ಅವರು, ನನ್ನನ್ನು ಮಂತ್ರಿ ಮಾಡಬೇಡಿ, ನನಗೆ ಸನ್ಮಾನ ಮಾಡಬೇಡಿ. ನನ್ನ ಹುಚ್ಚುತನಗಳ ನಡುವೆ ಸ್ವತಂತ್ರವಾಗಿ ಬದುಕಲು ನನ್ನನ್ನು ಬಿಡಿ' ಎಂದು ಜನರಲ್ಲಿ ಮನವಿ ಮಾಡಿದರು.

'ಕೆಲವರು ಹೇಳುವಂತೆ ನಾನು ಕಾಂಗ್ರೆಸ್ಸಿನಲ್ಲಿ ಕರಗಿ ಹೋಗಿಲ್ಲ. ಒಂದು ರೀತಿ ಸಿದ್ಧಿಗಾಗಿ ರಾಜಕಾರಣಕ್ಕೆ ಎರಡು ವರ್ಷಕಾಲ ರಜೆ ಘೋಷಿಸಿದ್ದೆ. ಆ ಅವಧಿ ಈ ಅಕ್ಟೋಬರ್ ತಿಂಗಳಿಗೆ ಮುಗಿಯಲಿದೆ. ಆನಂತರ ಮೊದಲಿನ ರಾಮಯ್ಯನಾಗಿ ಹೊರಗೆ ಬಂದು ಜನರಿಗಾಗಿ ಹೋರಾಡುತ್ತೇನೆ' ಎಂದು ಅವರು ಪ್ರಕಟಿಸಿದರು.



'ನಿಷ್ಠುರವಾದಿ, ಇದ್ದುದನ್ನು ಇದ್ದ ಹಾಗೆಯೇ ಹೇಳುವವನು. ಕೋಪಿಷ್ಟ ಎಂದೆಲ್ಲಾ ನನ್ನನ್ನು ವರ್ಣಿಸುತ್ತಾರೆ. ನಮ್ಮ ಸುತ್ತಲ ಸಮಸ್ಯೆಗಳನ್ನು ನೋಡಿ ಕೋಪ ಮಾಡಿಕೊಳ್ಳದೆ ಮತ್ತೇನು ಮಾಡುವುದು. ನಿದರ್ಶನವಾಗಿ ಹೇಳುವುದಾದರೆ, ಸ್ವಾತಂತ್ರ ಬಂದು ಐವತ್ತು ವರ್ಷಗಳು ಕಳೆದರೂ ಗ್ರಾಮಾಂತರ ಪ್ರದೇಶಗಳಲ್ಲಿ ಶೌಚಾಲಯಗಳಿಲ್ಲ. ಅದರಲ್ಲಿಯೂ ಮಹಿಳೆಯರಿರುವ ಪಾಡು ಹೇಳತೀರದು. ಇದನ್ನು ನೋಡಿ ಈ ವ್ಯವಸ್ಥೆಯ ಬಗ್ಗೆ ಸಿಟ್ಟು ಮಾಡಿಕೊಳ್ಳದೆ ಹೇಗೆ ಇರುವುದು ಎಂದು ಅವರು ಪ್ರಶ್ನಿಸಿದರು.

ಭ್ರಷ್ಟಾಚಾರದ ವಿರುದ್ಧ ತಾವು ಜನಸಂಘಟನೆ ಮಾಡಬೇಕೆಂಬ ಭಾಷಣಕಾರ ರೊಬ್ಬರ ಸಲಹೆಗೆ ಪ್ರತಿಕ್ರಯಿಸಿದ ಅವರು, ಸಾವಿರಾರು ಕೋಟಿ ರೂ. ಹಗರಣದಲ್ಲಿ ಭಾಗಿಯಾದ ಲಾಲೂಪ್ರಸಾದ್ ಯಾದವ್ ಹಾಗೂ ಅಧಿಕಾರದಲ್ಲಿದ್ದಾಗ ಅಕ್ರಮವಾಗಿ ಅಪಾರ ಸಂಪತ್ತು ಗಳಿಸಿದ ಜಯಲಲಿತಾ ಅವರಿಗೆ ಜನ ಮಾನ್ಯತೆ ನೀಡಿರುವುದನ್ನು ನೋಡಿದರೆ, ಭ್ರಷ್ಟಾಚಾರ ಅಪರಾಧವೆಂಬಂತೆ ಜನರು ನೋಡುತ್ತಲೇ ಇಲ್ಲ ಎಂದೆನಿಸುತ್ತದೆ. ಹೀಗಾಗಿ ಭ್ರಷ್ಟಾಚಾರದ ವಿರುದ್ಧ ಹೋರಾಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಜನ ಅದನ್ನು ಒಪ್ಪಿಕೊಂಡಂತಾಗಿದೆ ಎಂದು ಅವರು ಇಂದಿನ ದುಃಖಕರ ಸನ್ನಿವೇಶವನ್ನು ವಿವರಿಸಿದರು.

**ಈ ಮೊದಲು ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ಎಚ್. ವಿಶ್ವನಾಥ್ ಅವರು 'ವೈ.ಕೆ. ರಾಮಯ್ಯ ಅಪರೂಪದ ರಾಜಕಾರಣಿಯಾಗಿದ್ದು ಕೃಷ್ಣ ಅವರ ಸರ್ಕಾರದಲ್ಲಿ ಅವರು ಮಂತ್ರಿಯಾಗಲೇಬೇಕು' ಎಂದರು. ''ಸರ್ಕಾರಕ್ಕೆ ಅವರ ಅನುಭವದ ಅವಶ್ಯಕತೆ ಇದೆ ಎಂದೂ ಅವರು ಹೇಳಿದರು. ತುಮಕೂರಿಗೆ ಹೇಮಾವತಿ ನದಿ ನೀರು ಪೂರೈಕೆಯಾಗಲು ರಾಮಯ್ಯ ಅವರೇ ಕಾರಣ. ಅವರು ಅಪಾರ ಜನಪರ ಕಾಳಜಿಯುಳ್ಳ ವ್ಯಕ್ತಿ'' ಎಂದು ಸಚಿವರು ಹೇಳಿದರು.**

ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಹಾಗೂ ಹೆಸರಾಂತ ಸಾಹಿತಿ ದೇ. ಜವರೇಗೌಡ ಅವರು ಮಾತನಾಡಿ, ವೈ.ಕೆ. ರಾಮಯ್ಯ ಅವರು ಅಪರೂಪದ ರಾಜಕಾರಣಿ, ಅವರಲ್ಲಿರುವ ಸಿಟ್ಟು, ಛಲ ಜನಪರವಾದುದು. ದೇಶವನ್ನು ಕಟ್ಟುವುದರಲ್ಲಿ ಪಣ ತೊಟ್ಟವರು ಎಂದು ವರ್ಣಿಸಿದರು.

ಮಾಜಿ ಶಾಸಕ ಹಾಗೂ ಖ್ಯಾತ ವಕೀಲ ಎಚ್. ಗಂಗಾಧರನ್ ಅವರು ಮಾತನಾಡಿ, ದೇಶದಲ್ಲಿ ತುಂಬಿರುವ ಭ್ರಷ್ಟಾಚಾರದ ವಿರುದ್ಧ ಚಳವಳಿಯನ್ನು ಸಂಘಟಿಸಬೇಕೆಂದು ಕರೆ ನೀಡಿದರು. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಕುಲಪತಿ ಡಾ. ಎನ್. ಎಸ್. ರಾಮೇಗೌಡ ಅವರು ಮಾತನಾಡಿ, ರಾಮಯ್ಯ ಅವರ ಆಲೋಚನೆ, ಮಾತು, ಕೃತಿಯಲ್ಲಿ ಹೊಂದಾಣಿಕೆ ಕಾಣುತ್ತಿದ್ದು ಇಂದಿನ ಜಗತ್ತಿನಲ್ಲಿ ಈ ಗುಣ ಅಪರೂಪದ್ದು ಎಂದರು. ಈ ಮೊದಲು ಪ್ರಾಸ್ತಾವಿಕ ಭಾಷಣ ಮಾಡಿದ ಮಾಜಿ ಶಾಸಕ ಪ್ರೊ. ಪಿ.ಎಂ. ಚಿಕ್ಕ ಬೋರಯ್ಯ ಅವರು ಮಾತನಾಡಿ ವೈ.ಕೆ. ರಾಮಯ್ಯ ಅವರನ್ನು ತತ್ವನಿಷ್ಠ ರಾಜಕಾರಣಿ ಎಂದು ವರ್ಣಿಸಿದರು. ಪ್ರಸಿದ್ಧ ಕವಿ. ವೀ. ಚಿಕ್ಕವೀರಯ್ಯ ಅವರು ಮಾತನಾಡಿ ತುಮಕೂರಿನ ಹೊರಗೂ ವೈ.ಕೆ. ರಾಮಯ್ಯ ಅವರ ಹೋರಾಟ ಜನಜನಿತವಾಗಿರುವುದು ಇಲ್ಲಿ ಅಧಿಕ ಸಂಖ್ಯೆಯಲ್ಲಿ ಅಭಿಮಾನಿಗಳು ಸೇರಿರುವುದೇ ನಿದರ್ಶನ ಎಂದರು. ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನದ ಶ್ರೀ ಬಾಲಗಂಗಾಧರನಾಥ ಸ್ವಾಮಿ ಅವರು ಅಭಿನಂದನಾ ಸಮಾರಂಭದ ಸಾನಿಧ್ಯ ವಹಿಸಿದ್ದರು.

**(ಪ್ರಜಾವಾಣಿ : 28-5-2001)**

## ಕುದುರೆಮುಖ : 'ದೀರ್ಘಾವಧಿ ಗಣಿಗಾರಿಕೆಗೆ ಅನುಮತಿ ಬೇಡ'

**ಕುದುರೆಮುಖ ಕಬ್ಬಿಣ ಅದಿರು ಕಂಪೆನಿಗೆ ಐದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ಗಣಿಗಾರಿಕೆಗೆ ಅವಕಾಶ ನೀಡದಂತೆ ಸುಪ್ರೀಂ ಕೋರ್ಟ್‌ನಲ್ಲಿ ರಾಜ್ಯ ಸರ್ಕಾರ ಅಫಿಡವಿಟ್ ಸಲ್ಲಿಸಬೇಕು ಎಂದು ಪರಿಸರವಾದಿ ಮತ್ತು ಹುಲಿಯೂರುದುರ್ಗ ಶಾಸಕ ವೈ.ಕೆ. ರಾಮಯ್ಯ ಅವರು ಒತ್ತಾಯಿಸಿದ್ದಾರೆ.**

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಸಸ್ಯಸಂಪತ್ತು ಮತ್ತು ಜೀವ ವೈವಿಧ್ಯವನ್ನು ಸಂರಕ್ಷಿಸುವುದು, ಪರಿಸರ ಮಾಲಿನ್ಯವನ್ನು ತಡೆಗಟ್ಟುವುದು ಮತ್ತು ರೈತರ ಹಿತಾಸಕ್ತಿ ಕಾಪಾಡುವ ಸಲುವಾಗಿ ಈ ಕ್ರಮ ಅನಿವಾರ್ಯ ಎಂದು ಅವರು ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ. ಕುದುರೆಮುಖ ಕಂಪೆನಿಯಲ್ಲಿ ಕೆಲಸ ಮಾಡುತ್ತಿರುವ ಉದ್ಯೋಗಿಗಳ ಸೇವೆಯನ್ನು ಆ ಪ್ರದೇಶದಲ್ಲಿ ಅರಣ್ಯೀಕರಣ ಮಾಡಲು ಬಳಸಿಕೊಳ್ಳಬಹುದು ಎಂದು ಸಲಹೆ ಮಾಡಿರುವ ಅವರು, ಕಂಪೆನಿಯು ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ತಕ್ಷಣದಿಂದ ಆರಂಭಿಸಬೇಕು ಎಂದು ಪತ್ರದಲ್ಲಿ ಆಗ್ರಹಿಸಿದ್ದಾರೆ.

**ರಾಜ್ಯದಲ್ಲಿ ಈ ಬಾರಿ ತೀವ್ರ ಬರ ಪರಿಸ್ಥಿತಿ ಎದುರಾಗಿದ್ದು, ರೈತರು ಮತ್ತು ಕೃಷಿ ಕೂಲಿ ಕಾರ್ಮಿಕರ ಸ್ಥಿತಿ ಚಿಂತಾಜನಕವಾಗಿದೆ. ರಾಜ್ಯದ ಕೃಷಿ ಕೂಲಿ ಕಾರ್ಮಿಕರಲ್ಲಿ ಶೇಕಡ 75ರಷ್ಟು ಮಂದಿಗೆ ನದಿಯೇ ಜೀವನಾಧಾರ ಎಂದು ಹೇಳಿದ್ದಾರೆ.**

ಕುದುರೆಮುಖ ಅರಣ್ಯ ಪ್ರದೇಶವು ಭದ್ರಾ, ತುಂಗ ಮತ್ತು ನೇತ್ರಾವತಿ ನದಿಗಳ ಉಗಮಸ್ಥಾನವಾಗಿದ್ದು ಗಣಿಗಾರಿಕೆಯಿಂದಾಗಿ ಭದ್ರಾ ನದಿ ತೀವ್ರವಾಗಿ ಕಲುಷಿತಗೊಂಡಿದೆ. ಭದ್ರಾ ಎಡದಂಡೆ ನಾಲೆಯೇ 8600 ಹೆಕ್ಟೇರ್‌ನಷ್ಟು ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುತ್ತಿದ್ದು, ಗಣಿಗಾರಿಕೆಯಿಂದಾಗಿ ಭದ್ರಾ ಅಣೆಕಟ್ಟಿನಲ್ಲಿ ಭಾರಿ ಪ್ರಮಾಣದಲ್ಲಿ ಹೂಳು ತುಂಬಿಕೊಂಡಿದೆ ಎಂದು ಅವರು ವಿವರಿಸಿದ್ದಾರೆ.

**ಭದ್ರಾ ಅಣೆಕಟ್ಟಿನಿಂದ ಸುಮಾರು ಒಂದು ಲಕ್ಷ ಹೆಕ್ಟೇರ್ ನೀರಾವರಿ ಭೂಮಿಯಿದ್ದು ಇದೇ ಪ್ರಮಾಣದಲ್ಲಿ ಗಣಿಗಾರಿಕೆ ಮುಂದುವರಿದರೆ ಅಣೆಕಟ್ಟೆಯಲ್ಲಿ ಹೂಳು ತುಂಬಿ ರೈತರ ಪರಿಸ್ಥಿತಿ ಹದಗೆಡುವ ಭೀತಿಯಿದೆ ಎಂದು ಹೇಳಿದ್ದಾರೆ.**

ರಾಜ್ಯ ಸರ್ಕಾರದಿಂದ ನೇಮಿಸಲ್ಪಟ್ಟ ಸಮಿತಿ ಕೂಡಾ ತನ್ನ ವರದಿಯಲ್ಲಿ, ಈ ಅಂಶವನ್ನು ಸ್ಪಷ್ಟಪಡಿಸಿದೆ. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ತಜ್ಞರ ತಂಡದ ವರದಿ ಕೂಡಾ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪ್ರದೇಶದಲ್ಲಿ ಗಣಿಗಾರಿಕೆ ಮುಂದುವರಿಸದಂತೆ ಆದೇಶಿಸಬೇಕು ಎಂದು ಶಿಫಾರಸ್ಸು ಮಾಡಿದೆ ಎಂದು ತಿಳಿಸಿದ್ದಾರೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಜೀವವೈವಿಧ್ಯದ ತಾಣವಾಗಿದ್ದು, ಹಲವು ಔಷಧೀಯ ಸಸ್ಯಗಳ ಮೂಲಕೇಂದ್ರವೂ ಆಗಿದೆ. ಈ ಹಿನ್ನೆಲೆಯಲ್ಲಿ ಈ ಪರಿಸರ ಸಂರಕ್ಷಣೆ ಅತ್ಯಂತ ಮುಖ್ಯ. ಆದ್ದರಿಂದ ಐದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ಗಣಿಗಾರಿಕೆಗೆ ಅನುಮತಿ ನೀಡಬಾರದು ಎಂದು ಅಭಿಪ್ರಾಯಪಟ್ಟಿದ್ದಾರೆ.

(ಪ್ರಜಾವಾಣಿ : 23-9-2001)

## ವೈಕೆಆರ್ ರಾಜಕೀಯ ರಜೆ ಮುಕ್ತಾಯ

ಕುಣಿಗಲ್ ಕೆರೆಗೆ ಹೇಮಾವತಿ ಹರಿಯುವ ಕಾಮಗಾರಿ ಮುಗಿಯುವವರೆಗೂ ರಾಜಕೀಯ ರಜೆ ಹಾಕುವುದಾಗಿ ಹೇಳಿ 'ಮೌನವ್ರತ' ಕೈಗೊಂಡಿದ್ದ ಹುಲಿಯೂರು ದುರ್ಗ ಶಾಸಕ ವೈ.ಕೆ. ರಾಮಯ್ಯ ಅವರು ಮೌನಮುರಿದು ರಾಜಕೀಯ ರಜೆಗೆ ಮುಕ್ತಾಯ ಘೋಷಿಸಿದ್ದಾರೆ.

ಇಂದು ಪತ್ರಿಕಾಗೋಷ್ಠಿಯಲ್ಲಿ ಈ ವಿಷಯ ಪ್ರಕಟಿಸಿದ ಅವರು, 'ಬಹುದಿನಗಳ ನನ್ನ ಕನಸು ನನಸಾಗಿದೆ. ಪೂರ್ಣಾವಧಿ ರಾಜಕೀಯವನ್ನೇ ಮಾಡುತ್ತಿರುವ ಜನಪ್ರತಿನಿಧಿ ತನ್ನ ಕ್ಷೇತ್ರದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಸಮರ್ಪಕವಾಗಿ ಕೈಗೊಳ್ಳಲು ಸಾಧ್ಯವಾಗುವುದಿಲ್ಲ ಎಂಬ ಕಾರಣಕ್ಕಾಗಿ ಸಕ್ರಿಯ ರಾಜಕೀಯಕ್ಕೆ ಎರಡು ವರ್ಷಗಳ ಕಾಲ ರಜೆ ಹಾಕಿ, ಕಾಮಗಾರಿ ಪೂರ್ಣಗೊಳಿಸುವ ಕಂಕಣ ತೊಟ್ಟಿದ್ದ ನನಗೆ ಇಂದು ಅತೀವ ಸಂತಸವಾಗಿದೆ' ಎಂದು ಹೇಳಿದರು.

ಹಿಂದೆ ರಾಜಕೀಯ ಹೋರಾಟದ ಮೂಲಕ ಹೇಮಾವತಿ ಯೋಜನೆಯ ವಿವಿಧ ಹಂತಗಳಲ್ಲಿ ಯಶಸ್ಸು ಸಾಧಿಸಲು ಸಾಧ್ಯವಾಗಿತ್ತು. ಆದರೆ ಕಾಂಗ್ರೆಸ್ ಸರ್ಕಾರ ಎರಡು ವರ್ಷಗಳ ಹಿಂದೆ ಅಧಿಕಾರಕ್ಕೆ ಬಂದಾಗ, ಆಡಳಿತ ಪಕ್ಷದ ಸದಸ್ಯನಾಗಿದ್ದುಕೊಂಡು ಹೇಗೆ ಕಾಮಗಾರಿ ಮುಗಿಸುತ್ತಾರೆ ಎಂಬ ಶಂಕೆಯನ್ನು ಹಲವಾರು ಮಂದಿ ವ್ಯಕ್ತಪಡಿಸಿದರು. ಈ ಹಂತದಲ್ಲಿ ಯೋಜನೆಯನ್ನು ಸವಾಲಾಗಿ ಸ್ವೀಕರಿಸಿ ಎಲ್ಲರ ಸಹಕಾರದೊಂದಿಗೆ ನಿಗದಿತ ಅವಧಿಯಲ್ಲಿ ಮುಗಿಸುವುದು ಸಾಧ್ಯವಾಯಿತು ಎಂದು ವಿವರಿಸಿದರು.

ಎರಡು ವರ್ಷಗಳ ಅವಧಿಯಲ್ಲಿ ಕಾಮಗಾರಿ ಮುಗಿಯದಿದ್ದರೆ ವಿಧಾನಸಭಾ ಸದಸ್ಯತ್ವಕ್ಕೆ ರಾಜೀನಾಮೆ ನೀಡುವುದಾಗಿ ಬೆದರಿಕೆ ಹಾಕಿ ಒತ್ತಡ ತಂದಿದ್ದು ನಿಜ; ಆ ದೃಢ ಸಂಕಲ್ಪದ ಫಲವಾಗಿಯೇ ಮಹತ್ಸಾಧನೆ ಸಿದ್ಧಿಸಿತು. ಯೋಜನೆ ಒಂದು ಹಂತಕ್ಕೆ ಬಂದಿರುವುದರಿಂದ ಒತ್ತಡ ಕಡಿಮೆಯಾಗಿದೆ. ಇನ್ನು ಸಕ್ರಿಯ ರಾಜಕಾರಣಕ್ಕೆ ಕೈ ಹಾಕುವುದಾಗಿ ಘೋಷಿಸಿದರು.

(ಪ್ರಜಾವಾಣಿ : 8-1-2002 )

## ಶಾಸಕರಿಗೆ ವಿಶ್ರಾಂತಿ ವೇತನ

ಶಾಸಕರಿಗೆ ವಿಶ್ರಾಂತಿ ವೇತನವನ್ನು ಕೊಡಬೇಕೇ, ಬೇಡವೆ ಎನ್ನುವ ಬಗ್ಗೆ ಚರ್ಚೆ ಮಾಡಿ ಕಾನೂನು ತಂದವರೆ ಕಾಂಗ್ರೆಸ್ ಪಕ್ಷದವರು.

ಇನ್ನು ವಿಷಯಕ್ಕೆ ನೇರವಾಗಿ ಬರಬೇಕು ಎಂದರೆ, ನಮ್ಮ ಮುಂದಿರುವ ವಿಷಯ ಶಾಸನ ಸಭೆಯಲ್ಲಿ ಕೆಲಸ ಮಾಡಿದ ಶಾಸಕರುಗಳಿಗೆ ವಿಶ್ರಾಂತಿ ವೇತನವನ್ನು ಕೊಡಬೇಕೇ, ಬೇಡವೇ ಎಂಬುದಷ್ಟೇ ಇದರಲ್ಲಿ ಇರುವ ತತ್ವ. ಇವೆಲ್ಲದಕ್ಕಿಂತ ಮುಖ್ಯವಾದುದು ಅವಶ್ಯಕತೆ. ಇದು ಬಹಳ ಪ್ರಾಮುಖ್ಯವಾದದ್ದು. ಯಾರು ತನ್ನ ಶಾಸಕ ಅವಧಿಯಲ್ಲಿ ಲೂಟಿ ಜೀವನ ಮಾಡಿರುತ್ತಾನೆ, ಲೂಟಿ ರಾಜಕೀಯ ಮಾಡಿರುತ್ತಾನೆ. ಅಂಥವರಿಗೆ ತನ್ನ ಹೆಂಡತಿ ಮಕ್ಕಳನ್ನು ಸಾಕುವುದಕ್ಕೆ ಇದು ಅವಶ್ಯಕತೆ ಇರುವುದಿಲ್ಲ. ಆದರೆ ಯಾರು ನಿಷ್ಠಾವಂತರಾಗಿ ಕೇವಲ ಬರುವ ಸವಲತ್ತುಗಳನ್ನೇ ಉಪಯೋಗಿಸಿಕೊಂಡು ಜೀವನಮಾಡಿರುತ್ತಾರೆ. ಅಷ್ಟೇ ಸವಲತ್ತುಗಳನ್ನು ಉಪಯೋಗಿಸಿಕೊಂಡು ಶಾಸಕ ತನ್ನ ಜೀವನ ಕಳೆದಿರುತ್ತಾನೋ ಅಂಥವನಿಗೆ ಈ ಸೌಲಭ್ಯ ದಿಂದ ತನ್ನ ಹೆಂಡತಿ ಮಕ್ಕಳನ್ನು ಸಾಕುವುದಕ್ಕೆ ಬೇಕಾಗಿರುತ್ತದೆ. ಆದರೆ ಯಾವ ಶಾಸಕ ಒಂದು ಟ್ರಾನ್ಸ್‌ಫರ್ ಕೇಸ್‌ಗೆ 5-10 ಸಾವಿರ ರೂಪಾಯಿಗಳನ್ನು ಪಡೆದುಕೊಂಡಿರುತ್ತಾನೋ ಅಂಥಾ ಶಾಸಕನಿಗೆ ಇದು ಬೇಕಾಗಿಲ್ಲ. ಆದುದರಿಂದ ಮಾನ್ಯ ಶ್ರೀ ಖಂಡ್ರೆಯವರು ಏನು ನಿರ್ಣಯವನ್ನು ತಂದಿದ್ದಾರೆ ಅದಕ್ಕೊಂದು ತಿದ್ದುಪಡಿಯನ್ನು ನಾನು ಮಾಡಿಸುವುದಕ್ಕೆ ಇಷ್ಟಪಡುತ್ತೇನೆ. ಅದು ಏನೆಂದರೆ **''ಅವಶ್ಯಕತೆ ಇಲ್ಲದೇ ಇರತಕ್ಕಂಥ ಶಾಸಕರಿಗೆ ಕೊಡುತ್ತಿರುವ ವಿಶ್ರಾಂತಿ ವೇತನವನ್ನು ರದ್ದುಪಡಿಸಬಹುದು''** ಇದು ನನ್ನ ಅಭಿಪ್ರಾಯ. ಇದು ನನ್ನ ಸ್ವಂತ ಅಭಿಪ್ರಾಯ. ಆದುದರಿಂದ ಈ ರೀತಿ ಮಾಡಿಕೊಳ್ಳಬಹುದೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಇದು ಉತ್ತಮ ಕೆಲಸ ಮಾಡಿದವರಿಗೆ ಕೊಡುವ ಪುರಸ್ಕಾರ ಎಂದು ನಾನಾದರೂ ಭಾವಿಸಿದ್ದೇನೆ. ಬ್ರಿಟನ್ನಿನ ಎನ್‌ಸೈಕ್ಲೊಪಿಡಿಯಾದಲ್ಲಿ ಒಂದು ಮಾತು ಬರುತ್ತದೆ, ಅದರ ಅರ್ಥ ಈ ರೀತಿ ಇದೆ. **''ಈ ವಿಶ್ರಾಂತಿ ವೇತನ ಎನ್ನುವುದು ಯೋಗ್ಯ ರೀತಿಯಿಂದ ಕೆಲಸ ಮಾಡಿದಂತಹ ವ್ಯಕ್ತಿಗೆ ಕೊಡುವಂತಹ ಒಂದು ಸಂಭಾವನೆ''** ಎಂದು. ಅಯೋಗ್ಯ ರೀತಿಯಲ್ಲಿ ನಡೆದವರಿಗೆ ಕೊಡತಕ್ಕ ಸಂಭಾವನೆ ಇದಲ್ಲ. ಯೋಗ್ಯರೀತಿಯಲ್ಲಿ ಕರ್ತವ್ಯವನ್ನು ನಿಷ್ಠೆಯ ಆಧಾರದ ಮೇಲೆ ಕೆಲಸ ಮಾಡಿದ ವ್ಯಕ್ತಿಗೆ ಕೊಡುವ ಸಂಭಾವನೆ. ಖಂಡ್ರೆಯವರು ಮಾತನಾಡುತ್ತಾ 'ರಾಜಕೀಯ ಕಸಬಲ್ಲ' ಎಂಬ ಮಾತನ್ನು ಹೇಳಿದರು. ಬಹುಶಃ ಬಹಳ ದೊಡ್ಡ ಮಾತು ಅದು. 10-15 ವರ್ಷಗಳಿಂದ ಸಾರ್ವಜನಿಕ ಜೀವನದಲ್ಲಿ ದುಡಿರುವ ನಮಗೆ ಈ ಬಗ್ಗೆ ಏನು ಹೇಳಬೇಕೋ ಗೊತ್ತಿಲ್ಲ.

ವಿರೋಧಪಕ್ಷದಲ್ಲಿಯೇ ಬೆಳೆದುಕೊಂಡು ಬಂದಂತಹ ನಮಗೆ, 1969ರಿಂದೀಚೆಗೆ ಈ ದೇಶದ, ರಾಜ್ಯದ ಸಮಾಜ ವ್ಯವಸ್ಥೆಯನ್ನು ನೋಡಿದಾಗ ರಾಜಕೀಯವನ್ನು ಸೇವಾ ಮಾರ್ಗವಾಗಿ ಇಟ್ಟುಕೊಂಡಿದ್ದಾರೋ, ಸೇವಾಕ್ಷೇತ್ರವಾಗಿ ಇಟ್ಟುಕೊಂಡಿದ್ದಾರೋ ಅಥವಾ ಹೊಟ್ಟೆಪಾಡಿಗಾಗಿ ಇಟ್ಟುಕೊಂಡಿದ್ದಾರೋ ಎಂಬುದು ಅರ್ಥವಾಗುತ್ತಿಲ್ಲ. ನಾನು ಸಮಾಜದ ಸಾಮಾನ್ಯ ವ್ಯಕ್ತಿಯಾಗಿ ನೋಡಿದ್ದೇನೆ, ಕಣ್ಣಾರೆ ಕಂಡಿದ್ದೇನೆ. 10-15 ವರ್ಷಗಳಿಂದೀಚೆಗೆ ಸಾರ್ವಜನಿಕ ಜೀವನ ಕಹಿಯೋ, ಸಿಹಿಯೋ ಗೊತ್ತಿಲ್ಲ, ಒಳ್ಳೆಯದೋ, ಕೆಟ್ಟದ್ದೋ ಗೊತ್ತಿಲ್ಲ. ಇದು **ಸೇವಾಕ್ಷೇತ್ರದ ಬದಲಾಗಿ, ಸೇವೆ ಮಾಡುವ ಸಾಧನದ ಬದಲಾಗಿ ಹೊಟ್ಟೆ ಹೊರೆದುಕೊಳ್ಳುವ ಸಾಧನವಾಗಿದೆ.** ಅದನ್ನು ತಪ್ಪಿಸುವುದಕ್ಕೆ ಇಂಥ ವಿಶ್ರಾಂತಿವೇತನವನ್ನು ಕೊಡಬೇಕೆಂದು ಕಾಣುತ್ತದೆ. ಯಾರು ಹೊಟ್ಟೆಪಾಡಿಗಾಗಿ ಬಸ್‌ಸ್ಟಾಂಡ್‌ನಲ್ಲಿ ಜುಬ್ಬ ಹಾಕಿಕೊಂಡು ನಿಂತುಕೊಳ್ಳುತ್ತಾರೆ ಅದನ್ನು ತಪ್ಪಿಸಲಿಕ್ಕೆ ವಿಶ್ರಾಂತಿವೇತನ ಕೊಡಬೇಕಾಗುತ್ತದೆ. ಅವರಿಗೆ ಬೆಂಬಲ ಕೊಡಬೇಕಾಗುತ್ತದೆ. ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡುವವರೆಗೆ ರಾಜಕೀಯ ಕಸಬಲ್ಲ. ಅದನ್ನು ತಪ್ಪಿಸುವುದಕ್ಕೆ ಇಂಥ ಸವಲತ್ತುಗಳನ್ನು ಕೊಡುವುದರಿಂದ ಉತ್ತಮವಾಗುತ್ತದೆಂದು ನನ್ನ ಕಳಕಳಿಯ ವಿನಂತಿ.

ಇದಕ್ಕೆ ನಾನು ಖಂಡಿತ ವಿರೋಧ ಮಾಡುವವನಲ್ಲ. ನಾನು ಹೇಳುವುದು ಇಷ್ಟೇ. ಅವಶ್ಯಕತೆ ಇರುವಂತಹ ನಿಷ್ಠಾವಂತ ರಾಜಕಾರಣಿಯಾಗಿ ಕೆಲಸ ಮಾಡಿದಂತಹವರ ಹೆಂಡತಿ ಮಕ್ಕಳು ಬೀದಿಗೆ ಬೀಳದಿರಲಿ, ದುಃಖತಪ್ತರಾಗದಿರಲಿ ಎಂಬ ದೃಷ್ಟಿಯಿಂದ ಅಂಥವರಿಗೆ ವಿಶ್ರಾಂತಿವೇತನ ಕೊಡಬೇಕಾಗುತ್ತದೆ. ಆದರೆ ಇತರೆಯವರಿಗೆ ಕೊಡಬಾರದು. ವಿಶ್ರಾಂತಿ ವೇತನವನ್ನು ಪಡೆಯುವುದು ಕಡ್ಡಾಯವೇನಲ್ಲ. ಅವಶ್ಯಕತೆ ಇಲ್ಲದವರು ವಾಪಸ್ಸು ಬಿಡಬಹುದು. ಯಾರಿಗೆ ಸಂಸಾರ ಸಾಗಿಸಲು ತೊಂದರೆ ಇದೆ ಅಂಥವರಿಗೆ ಕೊಡಬಹುದು. ಈ ನಿರ್ಣಯ ಏತಕ್ಕೆ ತಂದರು ಎಂಬುದು ಅರ್ಥವಾಗುತ್ತಿಲ್ಲ. ಬಹುಶಃ ಜನರ ಕಣ್ಣಿಗೆ ಮಣ್ಣೆರಚಲಿಕ್ಕೆ ಈ ನಿರ್ಣಯ ತಂದಿದ್ದಾರೆಂದು ಅನ್ನಿಸುತ್ತದೆ. ಸಾರ್ವಜನಿಕರಲ್ಲಿ ಅಂಥ ಪ್ರಜ್ಞಾಹೀನ ಮತದಾರರು ಇಂದು ಇಲ್ಲ. ಯಾರು ನೀತಿವಂತರು ಯಾರು ಅನೀತಿವಂತರು ಎಂಬುದನ್ನು ಸ್ಪಷ್ಟವಾಗಿ ನೋಡಿ ಮತ ಕೊಡುವ ಜನರಿದ್ದಾರೆ. ಆದ್ದರಿಂದ ಸಾರ್ವಜನಿಕರನ್ನು ತಪ್ಪು ದಾರಿಗೆ ಎಳೆಯುವುದರ ಬದಲು ಈ ನಿರ್ಣಯವನ್ನು ವಾಪಸ್ಸು ತೆಗೆದುಕೊಂಡು, ಅವಶ್ಯಕತೆ ಇರುವ ಶಾಸಕರೆಲ್ಲರಿಗೂ ಬೇಕಾದ ಸವಲತ್ತುಗಳನ್ನು ಕೊಡಬೇಕೆಂದು ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

O

**(11-3-1983)**

## ಬಜೆಟ್‌ನ ಕುರಿತು ಚರ್ಚೆ

ಮಾನ್ಯ ಅಧ್ಯಕ್ಷರೇ, ಸನ್ಮಾನ್ಯ ಮುಖ್ಯಮಂತ್ರಿಗಳು ತಂದಿರತಕ್ಕ ಆಯವ್ಯಯ ಪಟ್ಟಿಯನ್ನು ಸ್ವಾಗತಿಸುತ್ತಾ, ಒಂದೆರಡು ಮಾತುಗಳನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಪ್ರಪಂಚದಲ್ಲಿ ಮನುಷ್ಯ ಮಾಡಲಿಕ್ಕೆ ಮೂರು ಅಸಾಧ್ಯ ಕೆಲಸಗಳು ಇವೆ :

1. To kiss a girl leading towards others

2. To climb a wall leading toward us

3. ಅನೇಕ ಜನರು ಒಂದೇ ವಿಷಯವನ್ನು ಕುರಿತು ಮಾತನಾಡಿದ ಮೇಲೆ ಅದೇ ವಿಷಯವನ್ನು ಕುರಿತು ಮಾತನಾಡುವುದು.

ಇಂಥ ಒಂದು ಪರಿಸ್ಥಿತಿ ನಮಗೆ ಬಂದಿದೆ. ಮಾನ್ಯ ಅಧ್ಯಕ್ಷರೇ, ಬಹುಶಃ ನಾನು ನೋಡಿದ ಹಾಗೆ ಈ ಆಯವ್ಯಯದ ಮೇಲೆ ಚರ್ಚೆಯ ವಿವೇಚನೆಯನ್ನು ಶುರು ಮಾಡಿದ ಮೇಲೆ ಪ್ರತಿ ಹಂತದಲ್ಲಿಯೂ ಒಂದು ಪ್ರಶ್ನೆ ಏಳುತ್ತದೆ. ಬಡ್ಜೆಟ್ಟನ್ನು ಕುರಿತು ಮಾತನಾಡುವಾಗ ಭಾಷಣದ ವ್ಯಾಪ್ತಿ ಏನು? ಇದರ ಬಗ್ಗೆ ಹಿರಿಯ ಸದಸ್ಯರು, ಕಿರಿಯ ಸದಸ್ಯರು, ಅನೇಕ ಜನರು ಇದನ್ನು ಕುರಿತು ಯೋಚನೆ ಮಾಡುತ್ತಿದ್ದಾರೆ. ನೇರವಾಗಿ ನಾನು ವಿಷಯಕ್ಕೆ ಬರಬೇಕಾದರೆ, ಬಡ್ಜೆಟ್ ದೇಶಕ್ಕಾಗಲೀ, ಕುಟುಂಬಕ್ಕಾಗಲೀ, ಸಂಸ್ಥೆಗಾಗಲೀ ಪ್ರತಿಯೊಬ್ಬ ವ್ಯಕ್ತಿಗೂ ಇದರ ಅರಿವು ಬೇಕು. ತನ್ನ ಆದಾಯ ಎಷ್ಟು, ಖರ್ಚು ಎಷ್ಟು ಮಾಡಬೇಕು ಎಂದು ಕುರಿತು ಒಂದು ಪಟ್ಟಿಯನ್ನು ತಯಾರು ಮಾಡುವುದೇ ಬಡ್ಜೆಟ್. ಇಂಥ ಒಂದು ಆಯವ್ಯಯವನ್ನು ದೇಶ ಅಥವಾ ರಾಜ್ಯ ತಯಾರು ಮಾಡಿದಾಗ ಅದರ ಉತ್ತಮ ಗುಣಗಳು, ಕೆಟ್ಟ ಗುಣಗಳು ಯಾವುವು ಎಂದು ನಾವು ಪರ್ಯಾಲೋಚನೆ ಮಾಡಬೇಕು. ಉಳಿದ ವಿಷಯಗಳು ನಮಗೆ ಅನಿವಾರ್ಯವು ಅಲ್ಲ, ಅವಶ್ಯಕವೂ ಅಲ್ಲ.

ಇನ್ನು ಉತ್ತಮ ಬಡ್ಜೆಟ್ ಯಾವುದು ಎಂದರೆ, ಯಾವ ಆಯವ್ಯಯದಲ್ಲಿ ಅತಿ ಕಡಿಮೆ ತೆರಿಗೆ ಇರುತ್ತದೋ, ಎಲ್ಲಕ್ಕಿಂತ ಮಿಗಿಲಾಗಿ That too in a country like ours which is underdeveloped ಉತ್ತಮ ಗುಣ ಯಾವುದು? ಎಂದರೆ, ರಾಜ್ಯವಾಗಲೀ, ರಾಷ್ಟ್ರವಾಗಲೀ ಇರುವಂಥ ಹಣದಲ್ಲಿ ಅತಿ ಹೆಚ್ಚಿನ ಹಣವನ್ನು ಉತ್ಪಾದನಾ ಕಾರ್ಯಗಳಿಗೆ ಉಪಯೋಗಿಸುವಂಥಾದ್ದು. ಈ ಒಂದು ದೃಷ್ಟಿಯಿಂದ ಈ ಆಯವ್ಯಯ ಪ್ರಾಮುಖ್ಯವಾದುದು. ನಮ್ಮ ದೇಶದಲ್ಲಿ ಇನ್ನೂ ಸಂಪತ್ತನ್ನು ಹಂಚಿಕೊಳ್ಳುವ ಸ್ಥಿತಿಗೆ ನಾವು ಬಂದಿಲ್ಲ. ನಾವಿರುವಂಥ ಸ್ಥಿತಿ ಸಂಪತ್ತನ್ನು ಸೃಷ್ಟಿಸುವಂಥಾದ್ದು. ಆದ್ದರಿಂದ ನಾವು ಈ ವರ್ಷದ ಬಡ್ಜೆಟ್ಟನ್ನು ನೋಡಿದಾಗ ಮತ್ತು

ಹಿಂದಿನದನ್ನೂ ನಾವು ನೋಡಿದಾಗ, ಹಿಂದಿನ ಯಾವ ಬಡ್ಜೆಟ್‌ಗಳೂ ಸಹ ಅಭಿವೃದ್ಧಿ ಕಾರ್ಯಗಳಿಗೆ ಕೊಡದೆ ಇರುವಷ್ಟು ಹಣವನ್ನು ಈ ಸಾರಿ ನಮ್ಮ ಮುಖ್ಯಮಂತ್ರಿಗಳು ಒದಗಿಸಿಕೊಟ್ಟಿದ್ದಾರೆ. ಆದ್ದರಿಂದ ಇದರಲ್ಲಿ ಉತ್ತಮ ಬಡ್ಜೆಟ್ಟಿಗೆ ಇರಬೇಕಾದಂಥ ಮುಖ್ಯ ಲಕ್ಷಣಗಳಲ್ಲಿ ಒಂದಾದ ನಿಯಮ, ಈ ಅಭಿವೃದ್ಧಿ ಕಾರ್ಯಗಳಿಗೆ ಹಣ ಒದಗಿಸುವುದು, ಈ ನಿಯಮವನ್ನು ಅನುಸರಿಸುವುದರಲ್ಲಿ, ಬಹುಶಃ ಈ ಆಯವ್ಯಯ ಬಹಳಷ್ಟು ಸಫಲವಾಗಿದೆ ಎಂದು ನನಗನ್ನಿಸುತ್ತದೆ. ಈ ಆಯವ್ಯಯವನ್ನು ಕುರಿತು ವೀರಪ್ಪ ಮೊಯ್ಲಿಯವರು ಅರ್ಥಮಂತ್ರಿಗಳಾಗಿದ್ದರು, ಅವರೂ ಸಹ ಇದರ ಬಗ್ಗೆ ಮಾತನಾಡುತ್ತಾ ಅನೇಕ ನ್ಯೂನತೆಗಳನ್ನು ತೋರಿಸಿದ್ದಾರೆ. ನಾನು ಮಾನ್ಯ ವಿರೋಧ ಪಕ್ಷದ ನಾಯಕರನ್ನು ಒಂದು ಪ್ರಶ್ನೆ ಕೇಳಬೇಕಾಗಿದೆ. ಅವರು ಈ ಸದನದಲ್ಲಿ ಸುಮಾರು ನಾಲ್ಕಾರು ಬಡ್ಜೆಟ್‌ಗಳನ್ನು ಮಂಡಿಸಿದ್ದಾರೆ. ಕಳೆದ 34 ವರ್ಷಗಳಿಂದಲೂ ಕಾಂಗ್ರೆಸ್ ಸರ್ಕಾರ ಆಡಳಿತದಲ್ಲಿದ್ದು ನೂರಾರು ಬಡ್ಜೆಟ್‌ಗಳನ್ನು ಅವರು ತಂದಿದ್ದಾರೆ. ಅವರ ಪ್ರತಿಯೊಂದು ಬಡ್ಜೆಟ್ ಅವರು ಈಗ ಹೇಳುವಂಥ ನ್ಯೂನತೆಗಳಿಂದ ಹೊರತಾಗಿತ್ತೇ? ಅವರು ನ್ಯೂನತೆಗಳು ಇಲ್ಲದಂಥ ಆಯವ್ಯಯವನ್ನು ಈ ಸದನದಲ್ಲಿ ಮಂಡಿಸಿದ್ದೇ ಆಗಿದ್ದರೆ, ಮಂಡಿಸಿದ್ದ ಪಕ್ಷದಲ್ಲಿ, ಈ ದೇಶದಲ್ಲಿ ಆರ್ಥಿಕ ಪ್ರಗತಿ ಇಷ್ಟೊಂದು ಕುಂಠಿತವಾಗಲಿಕ್ಕೆ ಕಾರಣ ಏನು? ಈ ದೇಶದಲ್ಲಿ ಹರಿದು ಹಂಚಿರುವ ಬಡತನ ಇನ್ನೂ ಇರಲಿಕ್ಕೆ ಕಾರಣ ಏನು? ಈ ಅವ್ಯವಸ್ಥೆಯುಳ್ಳ ಆರ್ಥಿಕ ಪರಿಸ್ಥಿತಿ ಇನ್ನೂ ಇರಲಿಕ್ಕೆ ಕಾರಣ ಏನು? ಇದಕ್ಕೆ ಸೂಕ್ತ ಉತ್ತರವನ್ನು ಅವರು ಕೊಡಬೇಕಾಗುತ್ತದೆ. ಆದ್ದರಿಂದ ಮಾನ್ಯ ಮಿತ್ರರನ್ನು ನಾನು ಕೇಳಿಕೊಳ್ಳುವುದು ಇಷ್ಟೆ, ಈ ಆಯವ್ಯಯವಾಗಲೀ ಅಥವಾ ಯಾವುದೇ ತೀರ್ಮಾನವಾಗಲೀ ಅದು ನ್ಯೂನತೆಗಳನ್ನು ಹೊಂದಿರಲೇಬೇಕು. ಪ್ರತಿಯೊಂದರಲ್ಲಿಯೂ ನ್ಯೂನತೆಗಳು ಇದ್ದೇ ಇರುತ್ತವೆ. ಯಾವುದು ಕಡಿಮೆ, ಯಾವುದು ಹೆಚ್ಚಾಗಿವೆ ಎನ್ನುವುದರ ಬಗ್ಗೆ ನಾವು ಇಲ್ಲಿ ಕುರಿತು ಯೋಚನೆ ಮಾಡಬೇಕಾಗುತ್ತದೆ. ನನಗೆ ತಿಳಿದ ಮಟ್ಟಿಗೆ ಈ ಆಯವ್ಯಯದಲ್ಲಿ ಕೊರತೆ ಎನ್ನುವುದು ಒಂದೇ ಒಂದು ದೋಷ. ಶ್ರೀಮಾನ್ ಮೊಯ್ಲಿಯವರು ಈ ಕೊರತೆಯನ್ನು ಹೇಗೆ ತುಂಬಿಸುತ್ತಾರೆ, ತುಂಬಿಸಲಿಕ್ಕೆ ಹೇಗೆ ಸಾಧ್ಯ ಎಂದು ಪ್ರಶ್ನೆ ಮಾಡಿದ್ದಾರೆ, ನಾವು ಈ ದೇಶದ ಹಣವನ್ನು ಖರ್ಚು ಮಾಡುವಾಗ, ಸಾರ್ವಜನಿಕ ಹಣವನ್ನು ಖರ್ಚುಮಾಡುವಾಗ ಸರ್ಪ ಕಾವಲು ಕಾದ ಹಾಗೆ ನೋಡಿಕೊಂಡರೆ ಮಾತ್ರ ಈ ಕೊರತೆಯನ್ನು ತುಂಬುವುದಕ್ಕೆ ಸಾಧ್ಯ. ಇದು ಬಿಟ್ಟು ಯಾವುದನ್ನೂ ಯೋಚನೆ ಮಾಡದೆ ಆನೇಕಲ್‌ಗೆ ಏರೋಪ್ಲೇನ್‌ನಲ್ಲಿ ಹೋಗುವುದು, ಮತ್ತೊಂದು ಕಡೆಗೆ ಏರೋಪ್ಲೇನ್‌ನಲ್ಲಿ ಹೋಗುವುದು. ಇಂತ ಅನೀತಿಯುತವಾಗಿ ಸರ್ಕಾರದ ಹಣವನ್ನು ಖರ್ಚು ಮಾಡುವುದನ್ನು ನಿಲ್ಲಿಸಿದರೆ ಮಾತ್ರ ಈ ಕೊರತೆಯನ್ನು ತುಂಬುವುದಕ್ಕೆ ಸಾಧ್ಯ.

ಆಯವ್ಯಯವನ್ನು ರಚನೆ ಮಾಡುವಾಗ, ತಯಾರು ಮಾಡುವಾಗ ರಾಜ್ಯದ ಮುಖ್ಯಮಂತ್ರಿಗಳು ದಾರ ಅಥವಾ ಹಗ್ಗವನ್ನು ಯಾರ ಕೈಯಲ್ಲಿ ಕೊಟ್ಟಿರುತ್ತಾರೆ? ಪ್ರಜಾ

ಪ್ರಭುತ್ವದಲ್ಲಿ ಸರ್ಕಾರದ ಕಡಿವಾಣ ಯಾವುದು ಎನ್ನುವ ಅರಿವು ನಮಗೆ ಇರಬೇಕಾಗುತ್ತದೆ. ಆಳುವ ಪಕ್ಷ ತನ್ನ ಕಡಿವಾಣವನ್ನು ವಿರೋಧ ಪಕ್ಷದವರ ಕೈಯಲ್ಲಿ ಕೊಡಬೇಕಾಗುತ್ತದೆ. ಆಳುವ ಪಕ್ಷವನ್ನು ಬಿಗಿಯಾದ ಕಡಿವಾಣದೊಂದಿಗೆ ಬಿಗಿ ಮಾಡತಕ್ಕದ್ದು ವಿರೋಧ ಪಕ್ಷಕ್ಕೆ ಸೇರಿದ್ದು. ಆಳುವ ಪಕ್ಷದವರು ತಪ್ಪುದಾರಿಗೆ ಹೋದಾಗ ಅವರನ್ನು ಕಡಿವಾಣ ದೊಂದಿಗೆ ಎಳೆದು ನಿಲ್ಲಿಸತಕ್ಕ ಕೆಲಸವನ್ನು ನೀವು ಮಾಡಬೇಕು. ಇಂಥ ಒಂದು ಶಕ್ತಿಯನ್ನು ಗಳಿಸಿಕೊಳ್ಳಬೇಕು.

ಮಾನ್ಯ ಅಧ್ಯಕ್ಷರೇ, ಮಾನ್ಯ ವಿರೋಧ ಪಕ್ಷದ ನಾಯಕರು ಮಾತನಾಡತಕ್ಕಂಥ ಕಾಲದಲ್ಲಿ, ಈ ದೇಶದಲ್ಲಿ ಹಣದುಬ್ಬರನ್ನು ತಡೆಯುವುದಕ್ಕೆ ಯಾವ ಕಾರ್ಯಕ್ರಮವನ್ನೂ ಹಾಕಿಕೊಂಡಿಲ್ಲ ಎಂದು ಹೇಳಿದರು. ಈ ಸಂದರ್ಭದಲ್ಲಿ ನಾನು ಒಂದು ವಿಷಯವನ್ನು ಈ ಸಭೆಯ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಇದನ್ನು ಬರೀ ಬಿಳಿ ಪೇಪರ್ ಮೇಲೆ ಪ್ರಿಂಟ್ ಮಾಡುವುದರಿಂದ ಈ ಹಣದುಬ್ಬರನ್ನು ಖಂಡಿತವಾಗಿ ತಡೆಯುವುದಕ್ಕೆ ಸಾಧ್ಯವಿಲ್ಲ. ಇದನ್ನೇ ದಿನೇ ದಿನೇ ಈ ಹಣದುಬ್ಬರ ಜಾಸ್ತಿಯಾಗುತ್ತಾ ಇದೆ. ಎಂದಿನವರೆಗೆ ಈ ದೇಶದಲ್ಲಿ ಕಷ್ಟಪಟ್ಟು ಸಂಪಾದನೆ ಮಾಡಿದ ಹಣವನ್ನು ಸರಿಯಾದ ರೀತಿಯಲ್ಲಿ ಖರ್ಚು ಮಾಡುವಂತಹ ಮನೋಭಾವ ಬರುವುದಿಲ್ಲವೋ ಅಲ್ಲಿಯವರೆಗೂ ಈ ಹಣದುಬ್ಬರ ನಿಲ್ಲುವುದಿಲ್ಲ. ಈ ಬಗ್ಗೆ ನಾನೊಂದು ಉದಾಹರಣೆಯನ್ನು ಕೊಡುತ್ತೇನೆ. ನನ್ನ ತೋಟದಲ್ಲಿ ಕೆಲಸಮಾಡುವಂತಹ ಒಬ್ಬ ಕೂಲಿಗಾರ ನಾನು ಕೊಟ್ಟಂತಹ 7 ರೂಪಾಯಿಗಳನ್ನು ತೆಗೆದುಕೊಂಡು ಸಂತೆಗೆ ಹೋದರೆ 'ರಾಗಿ ಬೆಲೆ ಎಷ್ಟು ಅಂತ 3 ಅಂಗಡಿಗಳಲ್ಲಿ ವಿಚಾರಿಸುತ್ತಾನೆ. ಅದೇ ನಾನು ಬೆಂಗಳೂರಿನಲ್ಲಿ ಒಂದು ಅಂಗಡಿಗೆ ಟೂತ್‌ಪೇಸ್ಟ್ ಕೊಂಡುಕೊಳ್ಳುವುದಕ್ಕೆ ಹೋದರೆ, ಅವನು ಅದರ ಬೆಲೆ ಎಷ್ಟು ಹೇಳಿದ, ಬೇರೆ ಅಂಗಡಿಯಲ್ಲಿ ಇದರ ಬೆಲೆ ಕಡಿಮೆ ಇದೆಯೇ ಅಥವಾ ಹೆಚ್ಚು ಇದೆಯೇ ಎಂದು ಚಿಂತನೆ ಮಾಡುವುದಿಲ್ಲ. ಇದಕ್ಕೆ ಕಾರಣವೇನೆಂದರೆ, ನಮ್ಮ ದೇಶದಲ್ಲಿ, ಹಣದ ಚಲಾವಣೆ ಅಂದರ ಮನಿ ಸರ್ಕುಲೇಷನ್ ಜಾಸ್ತಿಯಾಗಿದೆ. ಈ ಹಣದ ಚಲಾವಣೆ ಜಾಸ್ತಿಯಾಗುವುದಕ್ಕೆ ಕಾರಣವೇನೆಂದರೆ, ಅನೀತಿಯುತವಾದ ಮಾರ್ಗದಲ್ಲಿ ನಾವು ಹಣವನ್ನು ಗಳಿಸುವುದು ಹೆಚ್ಚಾಗಿದೆ. ಒಬ್ಬ ಮನುಷ್ಯನಿಗೆ ಬರುವ ಸಾವಿರ ರೂಪಾಯಿಗಳ ಸಂಬಳದಲ್ಲಿ ಅವನು ಜೀವನ ಮಾಡುವುದಕ್ಕೆ ಸಾಧ್ಯವಿದ್ದಾಗ ಅದಕ್ಕಿಂತ ಹೆಚ್ಚಿಗೆ ಹಣವನ್ನು ಖರ್ಚು ಮಾಡುವುದಕ್ಕೆ ಸಾಧ್ಯವಿಲ್ಲ. ಅದೇ 1 ಸಾವಿರ ರೂಪಾಯಿಗಳ ಜೊತೆಗೆ 2 ಸಾವಿರ ರೂಪಾಯಿಗಳು ಬೇರೆ ಮೂಲಗಳಿಂದ ಬಂದರೆ ಅವನಿಗೆ ಹಣದ ಬೆಲೆ ಗೊತ್ತಾಗುವುದಿಲ್ಲ. ಆಗ ಹಣದ ಚಲಾವಣೆ ಜಾಸ್ತಿಯಾಗುತ್ತೆ. ಆದ್ದರಿಂದ ಈ ಹಣದುಬ್ಬರವನ್ನು ತಡೆಯುವಂತಹ ಕೆಲಸ ಬರೀ ಪೇಪರ್‌ನಲ್ಲಿ ಪ್ರಿಂಟ್ ಮಾಡಿದರೆ ಅಥವಾ ಆ ಬಗ್ಗೆ ಲೇಖನವನ್ನು ಬರೆದರೆ ಅದು ಖಂಡಿತ ಸಾಧ್ಯವಿಲ್ಲ.

ಇಲ್ಲಿ ಯಾರಿಗಾದರು ಈ ಹಣದುಬ್ಬರ ವನ್ನು ತಡೆಯಬೇಕೆಂದು ಇಷ್ಟವಿದ್ದರೆ ಸಾರ್ವಜನಿಕ ಜೀವನದಲ್ಲಿ ತುಂಬಿ ತುಳುಕುತ್ತಿರುವ ಈ ಭ್ರಷ್ಟಾಚಾರವನ್ನು ಮೊದಲು ಕಡಿಮೆ

ಮಾಡಬೇಕು. ನಾವು ಅನೀತಿಯುತವಾಗಿ ಏನು ಹಣ ಸಂಪಾದನೆ ಮಾಡುತ್ತಿದ್ದೇವೆ ಅದನ್ನು ಮೊದಲು ನಿಲ್ಲಿಸಬೇಕು. ಅನೀತಿಯುತವಾದ ಮಾರ್ಗದಲ್ಲಿ ಹಣ ಸಂಪಾದನೆ ಮಾಡುವುದನ್ನು ನಿಲ್ಲಿಸಿದರೆ, ಸಿಕ್ಕಾಪಟ್ಟೆ ಖರ್ಚು ಮಾಡುವುದನ್ನು ಕಂಟ್ರೋಲ್ ಮಾಡಿದ ಹಾಗಾಗುತ್ತದೆ. ಈ ದಿಶೆಯಲ್ಲಿ ಹಣದುಬ್ಬರವನ್ನು ತಡೆಯುವುದಕ್ಕೆ ಪ್ರಯತ್ನ ಮಾಡಬಹುದು.

ಆಮೇಲೆ ನಮ್ಮ ವಿರೋಧಪಕ್ಷದ ನಾಯಕರು ಇನ್ನೂ ಕೆಲವು ವಿಷಯಗಳನ್ನು ಈ ಸಭೆಯ ಗಮನಕ್ಕೆ ತಂದರು. ನಾನಂತೂ ಈ ಸಭೆಗೆ ಹೊಸಬ. ಈ ಕ್ಯಾಪಿಟೇಶನ್ ಫೀ ಬಗ್ಗೆ ಮತ್ತು ವೃತ್ತಿ ತೆರಿಗೆಯ ಬಗ್ಗೆ ಇನ್ನೂ ಅನೇಕ ವಿಷಯಗಳನ್ನು ಅವರು ಹೇಳಿದರು. ಈ ಖಾಯಿಲೆಯನ್ನು ಯಾರು ತಂದವರು? ನಾವು ಜನತಾ ಪಕ್ಷದವರು ಅದನ್ನು ತಂದೆವೆ? ಜಾತಿ ಜಾತಿಗಳಿಗೆ ನೀವು ಇಂಜಿನಿಯರಿಂಗ್ ಕಾಲೇಜುಗಳನ್ನು ಕೊಟ್ಟಿರಿ. ಜಾತಿಜಾತಿಗಳ ತಲೆಯನ್ನು ನೋಡಿಕೊಂಡು ಮೆಡಿಕಲ್ ಕಾಲೇಜುಗಳನ್ನು ಕೊಟ್ಟಿರಿ. ಇವತ್ತು ನಮ್ಮನ್ನು ಮಾಡಿ ಎಂದು ಹೇಳುತ್ತಿದ್ದಿರಿ; ಏತಕ್ಕೆ ಮಾಡಿದಿರಿ ಇದನ್ನು ನೀವು? ಈ ವೃತ್ತಿತೆರಿಗೆಯನ್ನು ತಂದವರು ಯಾರು? ಈ ಖಾಯಿಲೆಯನ್ನು ತಂದು ಹರಡಿ, ಈ ಸಮಾಜದಲ್ಲಿ ರೋಗರುಜಿನಗಳನ್ನು ತಂದು ಅದು ಹುಳು ಹತ್ತಿಕೊಂಡು ತಿನ್ನುವ ಹಾಗೆ ಮಾಡಿ ಇವತ್ತು ಈ ಸರ್ಕಾರಕ್ಕೆ ಸರಿ ಮಾಡಿ ಎಂದು ಹೇಳಿದರೆ ಇದಕ್ಕೆ ಯಾರು ಹೊಣೆ? ನಾವೇನಾದರೂ 2 ತಿಂಗಳಲ್ಲಿ ಯಾವುದಾದರೂ ಖಾಯಿಲೆಯನ್ನು ತಂದಿದ್ದರೆ ಅದಕ್ಕೆ ನಾವು ಇಂಜಕ್ಷನ್ ಕೊಡುತ್ತೇನೆ, ಆಪರೇಷನ್ ಮಾಡುತ್ತೇವೆ, ಮೆಡಿಸನ್ ಬೇಕಾದರೆ ಕೊಡುತ್ತೇವೆ. ಮಾನ್ಯ ಅಧ್ಯಕ್ಷರೇ, ಲಿವರ್‌ಗೆ ಸಿರಿಲಿಸಿಸ್ ಎನ್ನುವ ಖಾಯಿಲೆ ಬರುತ್ತದೆ. ಈ ದೇಶದಲ್ಲಿ 35 ವರ್ಷಗಳ ಕಾಲ ಅಧಿಕಾರ ಮಾಡಿದವರು ಈ ಸಿರಿಲಿಸಿಸ್ ಖಾಯಿಲೆ ತರಹ ಮಾಡಿದ್ದಾರೆ.

O

**(25-3-1983)**

# ಬರಗಾಲ ಕುರಿತು

ಮಾನ್ಯ ಅಧ್ಯಕ್ಷರೇ, ಇವತ್ತು ರಾಜ್ಯದಲ್ಲಿ ಬರಗಾಲ ಬಂದಿದೆ. ಜನತಾ ಪಕ್ಷದ ಸರ್ಕಾರ ನಿರ್ಮಾಣ ಆದಾಗ ಈ ಬರದ ಶಾಪ ಏಕೆ ತಾಂಡವವಾಡುತ್ತಿದೆ ಎಂದು ನನಗೆ ಸ್ವಲ್ಪ ವೇದನೆಯಾಗಿದೆ. ಮತ್ತು ಒಂದು ಕಡೆ ಸಂತೋಷವೂ ಆಗಿದೆ. ಕಾರಣವೇನೆಂದರೆ ನಾವೆಲ್ಲರೂ ಪುರಾಣ ಪುಣ್ಯ ಕತೆಗಳನ್ನು ನೋಡಿದ್ದೇವೆ. ಒಳ್ಳೆಯ ವ್ಯಕ್ತಿಗೆ ದೇವರಲ್ಲಿ ಸಂಪೂರ್ಣವಾಗಿ ಭಕ್ತಿ ಇಟ್ಟಂಥವನಿಗೆ ದೇವರು ವರ ಕೊಡುವುದಕ್ಕೆ ಮೊದಲು ಆತನ ಭಕ್ತಿ ನಿಜವೋ, ಸುಳ್ಳೋ ಎಂದು ಪರೀಕ್ಷೆ ಮಾಡುತ್ತಾನೆ. ನಮ್ಮ ಜನತಾ ಪಕ್ಷಕ್ಕೆ ರಾಜ್ಯದಲ್ಲಿ ಈ ಬರಗಾಲ ಪರಿಸ್ಥಿತಿಯನ್ನು ಎದುರಿಸುವುದು ಒಂದು ಪರೀಕ್ಷೆಯಾಗಿದೆ ಎಂದು ನಾನು ನಂಬಿದ್ದೇನೆ. ಒಂದು ವಿಷಯವನ್ನು ಹೇಳುವುದಕ್ಕೆ ಇಷ್ಟ ಪಡುತ್ತೇನೆ. ಶ್ರೀಮಾನ್ ಮಲ್ಲಿಕಾರ್ಜುನ ಖರ್ಗೆಯವರು ತಾವು ಹಿಂದೆ ರೆವಿನ್ಯೂ ಮಂತ್ರಿಯಾಗಿದ್ದಾಗ ಏನೇನು ಸಾಧನೆಗಳನ್ನು ಮಾಡಿದ್ದೆವು ಎಂಬುದರ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ಅವರ ಎಲ್ಲಾ ಅಭಿವೃದ್ಧಿ ಕೆಲಸಗಳಿಗೆ, ಅವರಿಗೆ ಅವರ ಸರ್ಕಾರಕ್ಕೆ ಮತ್ತು ಅವರ ಪಕ್ಷಕ್ಕೆ ರಾಜ್ಯದ ಜನ ಚಿರಋಣಿಯಾಗಿದ್ದಾರೆ. ಅವರು ಮಾಡಿರುವ ಎಲ್ಲಾ ಕೆಲಸಗಳಿಗೆ ವಂದನೆಗಳನ್ನು ಸಲ್ಲಿಸುತ್ತಾ ಇವತ್ತಿನವರೆಗೂ ನನ್ನ ಜಿಲ್ಲೆಯಲ್ಲಿ ವಿಶೇಷವಾಗಿ ಕುಣಿಗಲ್ ಪಟ್ಟಣದಲ್ಲಿ, ಕಳೆದ ಮುವತ್ತೈದು ವರ್ಷಗಳಿಂದ ಜನರಿಗೆ ಕುಡಿಯುವ ನೀರಿನ ಸೌಕರ್ಯವಿಲ್ಲ. ಇಂತಹ ಪರಿಸ್ಥಿತಿಗೆ ಜವಾಬ್ದಾರರು ಅವರು, ಅವರ ಸರ್ಕಾರ ಮತ್ತು ಅವರ ಪಕ್ಷ ಎಂದು ನಾನು ಹೇಳುತ್ತೇನೆ. ಹಿಂದೆ ನಡೆದುಹೋಯಿತು ಎಂದು ಚಿಂತಿಸುವ ಬದಲು, ಮುಂದೆ ಏನು ಮಾಡಬೇಕು ಎನ್ನುವುದನ್ನು ನಾವೆಲ್ಲರೂ ಕೂತು ಚರ್ಚಿಸಿದರೆ ಉತ್ತಮ ಎಂದು ನನಗನ್ನಿಸುತ್ತದೆ. ಸಂಪೂರ್ಣವಾಗಿ ಬರಪೀಡಿತ ಪ್ರದೇಶಗಳಲ್ಲಿ ತುಮಕೂರು ಜಿಲ್ಲೆ ಕೂಡ ಒಂದಾಗಿದೆ. ಇಲ್ಲಿ ಕುಡಿಯುವುದಕ್ಕೆ ನೀರಿಲ್ಲ. ಸುಮಾರು 1500 ಹಳ್ಳಿಗಳಲ್ಲಿ ಕುಡಿಯುವ ನೀರಿಲ್ಲದೆ ಜನರು ತೊಂದರೆಗೀಡಾಗಿದ್ದಾರೆ.

ಜನತಾ ಪಕ್ಷದ ಸರ್ಕಾರವಾಗಿರಲಿ, ಅಥವಾ ಕಾಂಗ್ರೆಸ್ ಪಕ್ಷದ ಸರ್ಕಾರವಾಗಿರಲಿ ಅಥವಾ ಇನ್ಯಾವುದೇ ಪಕ್ಷದ ಸರ್ಕಾರವಾಗಿರಲಿ, ಜನಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡದೆ ಇರತಕ್ಕಂತಹ ಸರ್ಕಾರ ಪ್ರಜಾಪ್ರಭುತ್ವದ ಸರ್ಕಾರವೆಂದೆನಿಸುವುದಿಲ್ಲ. ಅದು ಉತ್ತಮ ಸರ್ಕಾರವೆಂದು ಹೇಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಜನರಿಗೆ ಕುಡಿಯುವ ನೀರನ್ನು ಕೊಡಲೇ ಬೇಕಾಗುತ್ತದೆ. ಪ್ರತಿ ವರ್ಷ ಈ ಬೇಗೆಯನ್ನು ತೀರಿ ಸಲಿಕ್ಕೆ ಹಣವನ್ನು ಖರ್ಚು ಮಾಡಿದ್ದರೂ ಜನಗಳಿಗೆ ಕುಡಿಯುವ ನೀರನ್ನು ಒದಗಿಸಲಿಕ್ಕೆ ಸಾಧ್ಯವಾಗಿಲ್ಲ ಎಂಬುದನ್ನು ಹೇಳಬೇಕಾಗುತ್ತದೆ.

ಮಾನ್ಯ ಅಧ್ಯಕ್ಷರೇ, ತಾವೂ ಕೂಡ ತುಮಕೂರು ಜಿಲ್ಲೆಯಿಂದ ಬಂದಿರತಕ್ಕಂತಹವರು. ತಮಗೆ ಒಂದು ಸಣ್ಣ ಉದಾಹರಣೆಯನ್ನು ಕೊಡುವುದಕ್ಕೆ ಇಷ್ಟಪಡುತ್ತೇನೆ. ನನ್ನ ಕ್ಷೇತ್ರದಲ್ಲಿ

ಮೊದಲಸಾರಿ ಒಂದು ಹಳ್ಳಿಯಲ್ಲಿ ಒಂದು ಮೈಲಿಯಿಂದ, ಒಂದೂವರೆ ಮೈಲಿಯ ದೂರದವರೆಗೆ ಯಾವ ಕಡೆ ಹೋದರೂ ಹಕ್ಕಿ ಕುಡಿಯುವುದಕ್ಕೂ ನೀರು ಇಲ್ಲ. ಆ ಹಳ್ಳಿಯಲ್ಲಿರತಕ್ಕಂತಹ ಮಕ್ಕಳು ಮುಖತೊಳೆದು ಎಷ್ಟು ದಿವಸವಾಗಿದೆಯೋ ಹೇಳುವುದಕ್ಕಾಗುವುದಿಲ್ಲ. ಇಂತಹ ಒಂದು ಕಠಿಣ ಪರಿಸ್ಥಿತಿ ಇದ್ದರೂ, ನಮ್ಮ ಸರ್ಕಾರಿ ಅಧಿಕಾರಿಗಳು ಏನು ಮಾಡುತ್ತಿದ್ದಾರೆಂದು ನಾನು ಇವತ್ತು ತಮ್ಮ ಮೂಲಕ ಕೇಳಬೇಕಾಗಿದೆ.

ಆ ಹಳ್ಳಿಗೆ ಹೋದಂತಹ ಸಮಯದಲ್ಲಿ ನಮ್ಮ ಜೊತೆಯಲ್ಲಿ ಗ್ರಾಮಸೇವಕರನ್ನೂ ಕರೆದುಕೊಂಡು ಹೋಗಿದ್ದೆ. ದಯಮಾಡಿ ಮಾನ್ಯ ಮಂತ್ರಿಗಳು ಗಮನವಿಟ್ಟು ಕೇಳಬೇಕು. ಇಂತಹ ಒಂದು ಕೆಟ್ಟ ಪರಿಸ್ಥಿತಿಯನ್ನು ಮೇಲಧಿಕಾರಿಗಳಿಗೆ ಏಕೆ ವರದಿ ಮಾಡಿಲ್ಲ ಎಂಬುದಾಗಿ ನಾನು ಕೇಳಿದರೆ, ಆ ಗ್ರಾಮ ಸೇವಕರು ಹೇಳುತ್ತಾರೆ, ನಾನು ಲೋನ್ ಅಪ್ಲಿಕೇಷನ್ಸ್ ಅಟೆಂಡ್ ಮಾಡುತ್ತಿದ್ದೆ ಅಂತ. ಈಗ ಇರತಕ್ಕಂತಹ ವಿಶೇಷ ಪರಿಸ್ಥಿತಿಯ ಅರಿವು ಮತ್ತು ಅದರ ಬಗ್ಗೆ ಕಳಕಳಿ ಸರ್ಕಾರಕ್ಕಿದೆ. ಆದರೆ ಈ ಸರ್ಕಾರದ ಕೈಕೆಳಗೆ ಕೆಲಸ ಮಾಡುತ್ತಿರತಕ್ಕಂತಹ ಅಧಿಕಾರಿಗಳಿಗೆ ಹಾಗೂ ನೌಕರರಿಗೆ ಈ ವಿಶೇಷ ಪರಿಸ್ಥಿತಿಯ ಅರಿವು ಆಗಿಲ್ಲ. ಅವರು ಮೊದಲು ಬರುತ್ತಿದ್ದ ಹಾಗೆ 11-00 ಗಂಟೆಗೆ ಆಫೀಸಿಗೆ ಬರುತ್ತಿದ್ದಾರೆ. ಮೊದಲು ಲಂಚ ತೆಗೆದುಕೊಳ್ಳುತ್ತಿದ್ದ ಹಾಗೆ ಈಗಲೂ ಲಂಚವನ್ನು ತೆಗೆದುಕೊಳ್ಳುತ್ತಿದ್ದಾರೆ. ಈಗಲೂ ದಿಮಾಕಿನ ಜೀವನವನ್ನು ನಡೆಸುತ್ತಿದ್ದಾರೆ ನಮ್ಮ ಅಧಿಕಾರಿಗಳು. ಈಗ ಈ ವಿಶೇಷ ಪರಿಸ್ಥಿತಿಗೆ ಹೊಂದಿಕೊಂಡು ಕೆಲಸ ಮಾಡುವುದಕ್ಕೆ ಸಾಧ್ಯ ಇರುವ ಅಧಿಕಾರಿಗಳಿಗೆ ಎಚ್ಚರಿಕೆ ಹಾಗೂ ಬಲವನ್ನು ಕೊಡಬೇಕಾಗುತ್ತದೆ. ಆ ಒಂದು ದೃಢ ಸಂಕಲ್ಪವನ್ನು ನೀವು ಮಾಡಬೇಕಾಗುತ್ತದೆ. ಅದನ್ನು ನೀವು ಮಾಡದಿದ್ದರೆ ಕೇಂದ್ರ ಸರ್ಕಾರ ಕೊಟ್ಟಂತಹ 10 ಕೋಟಿ ರೂಪಾಯಿಗಳಾಗಲಿ, ರಾಜ್ಯ ಸರ್ಕಾರ ಕೊಟ್ಟಂತಹ 5 ಕೋಟಿ ರೂಪಾಯಿಗಳಾಗಲಿ ನಿಮ್ಮ ಖಜಾನೆಯಲ್ಲಿರುತ್ತದೆಯೇ ಹೊರತು, ಜನಗಳಿಗೆ ಅನುಕೂಲ ವಾಗುವುದಿಲ್ಲ. ಲೆಕ್ಕದಲ್ಲಿ ಮಾತ್ರ ಖರ್ಚಾಗುತ್ತದೆ.

ಶ್ರೀಮಾನ್ ಖರ್ಗೆಯವರು ಹೇಳುತ್ತಿದ್ದರು, ಕೊಟ್ಟಂತಹ 10 ಕೋಟಿ ಹಣ ಖರ್ಚು ಮಾಡಿದ್ದೇವೆ ಎಂದು. ಕೊಟ್ಟಂತಹ ಹಣ ಖರ್ಚಾದ ತಕ್ಷಣ ಜನತೆಗೆ ಸವಲತ್ತು ಸಿಕ್ಕಿತು ಎಂದು ಅರ್ಥವಲ್ಲ.. ಉದಾಹರಣೆಗೆ ಹೇಳಬೇಕೆಂದರೆ, ಕೆರೆಯಿಂದ ತೂಬಿನ ಮೂಲಕವಾಗಿ ಜಮೀನಿಗೆ ಬಿಟ್ಟಂತಹ ನೀರು ಜಮೀನಿಗೆ ಹೋಗುವ ಮೊದಲು ಕಾಲುವೆಯೇ ಎಷ್ಟೋ ನೀರನ್ನು ಕುಡಿದುಕೊಳ್ಳುತ್ತದೆ. ಜಮೀನಿಗೆ ನೀರು ಹೋಗಿರುವುದಿಲ್ಲ. ಆದರೆ ನೀರು ಖರ್ಚಾಗಿದೆ, ಬೆಳೆ ಏಕೆ ಆಗಿಲ್ಲ ಎಂಬುದಾಗಿ ಕೇಳುವಂತಹ ವಾದ ಸರಿಯಾದಂತಹ ವಾದವಲ್ಲ. ಖಜಾನೆಯಿಂದ ಹೊರಟಂತಹ ಹಣ ತಲುಪುವವರಿಗೆ ತಲುಪದೇ ಎಷ್ಟೋ ಸಾರಿ ಖರ್ಚಾಗಿರುತ್ತದೆ. ಖರ್ಚಾದಂತಹ ಹಣಕ್ಕೆ ಸರಿಸಮಾನವಾದಂತಹ ಕೆಲಸಗಳಾಗಿವೆ ಎಂಬುದಾಗಿ ನಾನು ಒಪ್ಪುವುದಕ್ಕೆ ಸಾಧ್ಯವಿಲ್ಲ. 10 ಕೋಟಿ ಹಣವನ್ನು ರಿಲೀಜ್ ಮಾಡಿದ್ದೇವೆ, 20 ಕೋಟಿ ಹಣವನ್ನು ರಿಲೀಜ್

ಮಾಡಿದ್ದೇವೆ, ಖಜಾನೆಯಿಂದ ತೆಗೆದುಕೊಟ್ಟಿದ್ದೇವೆ ಅಂತ ಸರ್ಕಾರ ತಿಳಿದಿಕೊಂಡಿದ್ದರೂ, ಖರ್ಚಾದಂತಹ ಹಣದಿಂದ ಜನರಿಗೆ ಪ್ರಯೋಜನವಾಗಿರುವುದಿಲ್ಲ. ಆದ್ದರಿಂದ ಕೊಟ್ಟಂತಹ ಹಣ ಸದುಪಯೋಗವಾಗಿದೆಯೇ ಎಂಬುದನ್ನು ಪರಿಶೀಲನೆ ಮಾಡುವ ಏರ್ಪಾಡನ್ನು ಮಾಡಬೇಕಾಗುತ್ತದೆ.

ಮೊದಲನೆಯದಾಗಿ ಕುಡಿಯುವ ನೀರಿಗಾಗಿ ಇರತಕ್ಕಂತಹ ಕೊಳವೆ ಬಾವಿಯ ವ್ಯವಸ್ಥೆ ಸರಿ ಇಲ್ಲ. ಯಾವ ಊರಿಗೆ ಕೊಳವೆ ಬಾವಿ ಬೇಕೆಂಬ ಪಟ್ಟಿಯನ್ನು ಜಿಲ್ಲಾಧಿಕಾರಿಗಳು ಪಟ್ಟಿಯನ್ನು ತಯಾರು ಮಾಡಿದ ನಂತರ, ಸಾರ್ವಜನಿಕ ಆರೋಗ್ಯ, ಇಂಜಿನೀಯರಿಂಗ್ ಇಲಾಖೆಯವರು ಕೊಳವೆ ಬಾವಿಯನ್ನು ತೆಗೆಯಬೇಕಂತೆ. ಇದರ ಬಗ್ಗೆ ನನ್ನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಪರಿಸ್ಥಿತಿ ಏನಾಗಿದೆ ಎಂದರೆ, ಪಟ್ಟಿ ತಯಾರಾದಾಗ ಕೊರೆಯುವಂತಹ ರಿಗ್‌ಗಳು ಇರುವುದಿಲ್ಲ. ರಿಗ್‌ಗಳು ಬಂದು ಅಮೃತೂರುನಲ್ಲಿ ನಿಂತಿದೆ. ಜಿಲ್ಲಾಧಿಕಾರಿಗಳು ಕೊಳವೆ ಬಾವಿಗಳ ಪಟ್ಟಿಯನ್ನು ಕೊಟ್ಟಿಲ್ಲ. ಇದು ಎಂತಹ ಅವ್ಯವಸ್ಥೆಯಾಗಿದೆ ಅಂತ ಹೇಳಿದರೆ, ಈ ಪರಿಸ್ಥಿತಿಯ ತಾಪ ಅಥವಾ ಕಿಚ್ಚು ನಮ್ಮ ಅಧಿಕಾರಿಗಳಿಗೆ ತಟ್ಟಿಲ್ಲ. ಆದ್ದರಿಂದ ಯಾವ ಅಧಿಕಾರಿ ಏನನ್ನಾದರೂ ಮಾಡಿಕೊಳ್ಳಲಿ, ಕುಡಿಯುವ ನೀರಿನ ವ್ಯವಸ್ಥೆಯನ್ನು ನಮ್ಮ ಸಾರ್ವಜನಿಕ ಆರೋಗ್ಯ ಇಂಜಿನಿಯರಿಂಗ್ ಇಲಾಖೆಯವರೇ ಸ್ಥಳವನ್ನು ಸೆಲೆಕ್ಟ್ ಮಾಡಿಕೊಂಡು ಕೊರೆಯುವ ವ್ಯವಸ್ಥೆಯನ್ನು ಇನ್ನುಮೇಲಾದರೂ ಮಾಡಬೇಕಾಗುತ್ತದೆ. ಮಾನ್ಯ ಅಧ್ಯಕ್ಷರೆ, ತುಮಕೂರು ಜಿಲ್ಲೆಯ ವಿಚಾರ ತಮಗೂ ಗೊತ್ತಿರುವ ಹಾಗೆ ಹೇಳುವುದಾದರೆ, ಇದುವರೆಗೆ ಕೊಳವೆ ಬಾವಿಗಳನ್ನು ಕೊರೆಯುವುದಕ್ಕಾಗಿ 3 ಪಟ್ಟಿಗಳನ್ನು ಜಿಲ್ಲಾಧಿಕಾರಿಗಳು ಮಾಡಿದ್ದಾರೆ. ಮೊದಲನೇ ಪಟ್ಟಿ 35 ಹಳ್ಳಿಗಳಿಗೆ ಎಂದಾಯಿತು. ನಂತರ ಅದು 50ಕ್ಕೆ ಹೋಯಿತು. ಇವತ್ತು ನಮ್ಮ ಜಿಲ್ಲಾಧಿಕಾರಿಗಳು 10 ಊರುಗಳಿಗೆ ಮಾತ್ರ ಕೊಳವೆ ಬಾವಿಯನ್ನು ಕೊರೆಯುವುದಕ್ಕೆ ಪ್ರಾರಂಭ ಮಾಡಿದ್ದೇವೆ ಅಂತ ಹೇಳುತ್ತಾರೆ.

ಮಾನ್ಯ ಅಧ್ಯಕ್ಷರೇ, ತಮಗೂ ಗೊತ್ತಿರುವ ಹಾಗೆ ಚುನಾವಣೆಯಾಗಿ 3 ತಿಂಗಳಾಗಿದೆ. ಈ ಸರ್ಕಾರ ಅಸ್ತಿತ್ವಕ್ಕೆ ಬಂದು ಹೆಚ್ಚುಕಡಿಮೆ ಮೂರು ತಿಂಗಳಾಗಿದೆ. ನಾನು ಇಲ್ಲಿಗೆ ಬಂದ ಮೇಲೆ ಏನು ಮಾಡಿದ್ದಾರೋ ಗೊತ್ತಿಲ್ಲ. ಆದರೂ ಒಂದೇ ಒಂದು ಹಳ್ಳಿಯಲ್ಲೂ ಕೊಳವೆ ಬಾವಿಯನ್ನು ತೆಗೆದ್ದಿಲ. ಪಿ.ಎಚ್.ಇ. ಇಲಾಖೆಯವರನ್ನು ಕೇಳಿದರೆ, ಜಿಲ್ಲಾಧಿಕಾರಿಗಳು ಕೊಳವೆ ಬಾವಿಗಳನ್ನು ತೆಗೆಯಬೇಕಾಗಿರುವ ಹಳ್ಳಿಗಳ ಪಟ್ಟಿಯನ್ನು ಅಪ್ರೂವ್ ಮಾಡಬೇಕು ಅಂತ ಹೇಳುತ್ತಾರೆ. ಜಿಲ್ಲಾಧಿಕಾರಿಗಳು ಪಟ್ಟಿಯನ್ನು ಅಪ್ರೂವ್ ಮಾಡಿದಾಗ ಪಿ.ಎಚ್.ಇ. ಇಲಾಖೆಯವರಲ್ಲಿ ಕೊರೆಯುವ ರಿಗ್ಸ್ ಇಲ್ಲ ಅಂತ ಹೇಳುತ್ತಾರೆ. ಆದ್ದರಿಂದ ನಾನು ತಮ್ಮ ಮೂಲಕ ಸರ್ಕಾರದಲ್ಲಿ ಕೆಲಸ ಮಾಡುತ್ತಿರತಕ್ಕಂತಹ ಅಧಿಕಾರಿಗಳಿಗೆ ಹೇಳುವುದೇನೆಂದರೆ, ಜನತೆಯ ಸಂಕಷ್ಟಗಳ ಜೊತೆ ಸರಸವಾಡುವುದನ್ನು ಇನ್ನಾದರೂ ಬಿಡಬೇಕು. ಬೇರೆ ಯಾವುದರ ಬಗ್ಗೆಯಾದರೂ ಸರಸವಾಡಿ,

ಆದರೆ ಜನರ ಸಂಕಷ್ಟಗಳನ್ನು ಅರಿತು ಅವುಗಳನ್ನು ನಿವಾರಣೆ ಮಾಡುವಂತಹ ಮನೋಭಾವನೆಯನ್ನು ಇಟ್ಟುಕೊಳ್ಳಿ.

ನಾನು ತಮ್ಮ ಮೂಲಕ ಮಾನ್ಯ ಕಾಮಗಾರಿ ಸಚಿವರಿಗೆ ಒಂದು ಸಲಹೆ ಮಾಡುವುದೇನೆಂದರೆ, ಇಲ್ಲದೇ ಇರುವ ನೀರನ್ನ ಸೃಷ್ಟಿ ಮಾಡುವುದಕ್ಕಿಂತ ಮೊದಲು, ಇರುವಂತಹ ನೀರನ್ನು ರಕ್ಷಿಸಿಕೊಳ್ಳುವುದು ಬಹಳ ಮುಖ್ಯ. ಅನೇಕ ಕೆರೆಕಟ್ಟೆಗಳಲ್ಲಿ ಸ್ವಲ್ಪ - ಸ್ವಲ್ಪ ನೀರು ಇದೆ. ಇದನ್ನು ನೋಡಿಕೊಂಡು ಬೆಳೆಗಳನ್ನು ಬೆಳೆಯುವ ನೆಪದಲ್ಲಿ ಕೆಲವರು ಅವರ ತೋಟದ ಹಿಂಬದಿಯಲ್ಲಿರುವ ಜಮೀನಿನಲ್ಲಿ ಬೆಳೆಯನ್ನು ಮಾಡಿಕೊಂಡಿರುತ್ತಾರೆ. ಆದ್ದರಿಂದ ಇರುವ ನೀರನ್ನು ಕುಡಿಯುವುದಕ್ಕಾಗಿ ಉಪಯೋಗಿಸಬೇಕೇ ವಿನಃ ಇನ್ಯಾವುದೇ ಉಪಯೋಗಕ್ಕಾಗಿ ನೀರನ್ನು ಉಪಯೋಗಿಸಕೂಡದೆಂಬ ಕಟ್ಟಾಜ್ಞೆಯನ್ನು ಸರ್ಕಾರದವರು ಕೊಡಬೇಕಾಗುತ್ತದೆ.

ನನಗಿಂತ ಮುಂಚೆ ಮಾತನಾಡಿದ ಮಾನ್ಯ ಸದಸ್ಯರಾದ ಶ್ರೀಮಾನ್ ಲಕ್ಷ್ಮಯ್ಯನವರು ಹೇಳಿದ್ದಾರೆ, ನಾನೂ ಕೂಡ ಮಾನ್ಯ ಮಂತ್ರಿಗಳನ್ನು ಕೇಳಿಕೊಂಡಿದ್ದೇನೆ. ತಮಗೂ ಗೊತ್ತಿರುವ ಹಾಗೆ ತುಮಕೂರು ಜಿಲ್ಲೆಯ ಆಣೆವಾರು ಲೆಕ್ಕ ಸರ್ಕಾರಕ್ಕೆ ಬಂದಿದೆ. ಆದರೂ ಕೂಡ ಇದುವರೆಗೂ ಅದನ್ನು ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಿಲ್ಲ ಎಂದು ನನಗನ್ನಿಸುತ್ತಿದೆ. ಆ ರೀತಿ ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಿದ್ದರೆ ಸಂತೋಷ. ಒಂದು ವೇಳೆ ಆ ರೀತಿ ಮಾಡದಿದ್ದರೆ, ನಾಳೆಯೋ ಅಥವಾ ನಾಡಿದ್ದೋ ಮಾಡಬೇಕಾಗುತ್ತದೆ. ಕಾರಣ ಸದನ ಈ ದಿವಸ ಮುಗಿದರೆ ನಾಳೆ ನಾವೆಲ್ಲಾ ನಮ್ಮ ನಮ್ಮ ಕ್ಷೇತ್ರಕ್ಕೆ ಹೊರಟು ಹೋಗಿಬಿಡುತ್ತೇವೆ. ಮತ್ತೆ ನಿಮ್ಮನ್ನು ನೋಡುವುದಕ್ಕೆ ಬರುವುದಕ್ಕಾಗುವುದಿಲ್ಲ. ಕಾರಣ ಇಷ್ಟೇ, ಆ ರೀತಿ ಘೋಷಣೆ ಮಾಡದಿದ್ದರೆ ಸೊಸೈಟಿಯ ಅಧಿಕಾರಿಗಳು ಮನೆಗಳಿಗೆ ಬಂದು ಮನೆಯಲ್ಲಿರತಕ್ಕಂತಹ ಪಾತ್ರೆ .. ಪಗಡವನ್ನು ಜಪ್ತಿ ಮಾಡುತ್ತಾರೆ. ಆದ್ದರಿಂದ ಅಧಿಕಾರಿಗಳು ಹಳ್ಳಿಗಳಿಗೆ ಹೋಗಿ ಈ ರೀತಿ ಮಾಡುವುದಕ್ಕಿಂತ ಮೊದಲು, ಆದಷ್ಟು ಬೇಗ ತುಮಕೂರು ಜಿಲ್ಲೆ ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಬೇಕು.

ನಮ್ಮ ತುಮಕೂರು ಜಿಲ್ಲೆಯಲ್ಲಿ ಸಾಯಿಲ್ ಕನ್ಸರ್ವೆಷನ್ ಇಲಾಖೆಗೆ ಸ್ವಲ್ಪ ಹಣವನ್ನು ಕೊಟ್ಟಿದ್ದಾರೆ. ಸಾಯಿಲ್ ಕನ್ಸರ್ವೇಶನ್‌ಗಾಗಿ ಹಣವನ್ನು ಕೊಡತಕ್ಕ ಅವಶ್ಯಕತೆ ಇಲ್ಲ ಅಂತ ನಾನು ಹೇಳುತ್ತಿದ್ದೇನೆ. ಅಲ್ಲಿಯ ಸ್ಥಳೀಯ ಅಧಿಕಾರಿಗಳನ್ನು - ಈ ಬಗ್ಗೆ ವಿಚಾರ ಮಾಡಿದಾಗ ಅವರು ಹೇಳುತ್ತಾರೆ. ಈ ಒಣ ಭೂಮಿಯಲ್ಲಿ ಬದುಗಳನ್ನು ಹಾಕುವುದಕ್ಕೆ ಸಾಧ್ಯವಿಲ್ಲ, ನಮಗೆ ಇದಕ್ಕಾಗಿ ಹಣ ಬೇಕಾಗಿಲ್ಲ ಅಂತ ಹೇಳುತ್ತಾರೆ. ಆದ್ದರಿಂದ ಸಾಯಿಲ್ ಕನ್ಸರ್ವೇಶನ್‌ಗಾಗಿ ಕೊಟ್ಟಿರತಕ್ಕಂತಹ ಹಣವನ್ನು ಬೇರೆ ಕೆಲಸಕ್ಕಾಗಿ ಡೈವರ್ಟ್ ಮಾಡಿ, ಯಾವುದೇ ಕಾಮಗಾರಿ ಕೆಲಸಗಳನ್ನು ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ನನ್ನ ಪ್ರಾರ್ಥನೆ.

ಮಾನ್ಯ ಅಧ್ಯಕ್ಷರೇ, ಕೊನೆಯದಾಗಿ ನನ್ನ ಕ್ಷೇತ್ರದಲ್ಲಿ ಒಂದು ಸಣ್ಣ ಪಟ್ಟಣವೂ ಸೇರಿಕೊಂಡಿದೆ. ಹಳ್ಳಿಗಳ್ಳಿರುವ ಕುಡಿಯುವ ನೀರಿನ ಪರಿಸ್ಥಿತಿಗಿಂತ, ಪಟ್ಟಣದಲ್ಲೇನೂ ಉತ್ತಮವಾಗಿಲ್ಲ. ನಮ್ಮ ನಗರಾಭಿವೃದ್ಧಿಸಚಿವರು ಇಲ್ಲಿ ಇಲ್ಲ ಅಂತ ಕಾಣುತ್ತದೆ. ನಮ್ಮ ಕುಣಿಗಲ್ ಪಟ್ಟಣಕ್ಕೆ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಒಂದು ಪೈಸೆ ಹಣವನ್ನೂ ಕೊಟ್ಟಿಲ್ಲ. ಆದ್ದರಿಂದ ಸಂಬಂಧಪಟ್ಟ ಅಧಿಕಾರಿಗಳಿಗೆ ಈ ಬಗ್ಗೆ ಸ್ಪಷ್ಟ ನಿರ್ದೇಶನವನ್ನು ಕೊಟ್ಟು ಕೂಡಲೇ ಕುಣಿಗಲ್ ಪಟ್ಟಣದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ. ಇಷ್ಟೊಂದು ಸಮಯ ಮಾತನಾಡಲು ನನಗೆ ಅವಕಾಶ ಮಾಡಿಕೊಟ್ಟಿದ್ದೀರಿ. ಬಹುಶಃ ನಿಮ್ಮ ಜಿಲ್ಲೆ ಅಂತ ಜಾಸ್ತಿ ಸಮಯವನ್ನು ನನಗೆ ಕೊಟ್ಟಿರಬಹುದು. ಆದರೂ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

O

(31-3-1983)

# ರೇಷ್ಮೆ ಬಿಕ್ಕಟ್ಟು

ಮಾನ್ಯ ಅಧ್ಯಕ್ಷರೇ, ಈ ದಿವಸ ಸದನದ ಮುಂದಿರುವ ಬೇಡಿಕೆಗಳಿಗೆ ನನ್ನ ಒಪ್ಪಿಗೆಯನ್ನು ಸೂಚಿಸುತ್ತಾ, ಮಾನ್ಯ ಗಂಗಾಧರನ್ ಅವರು ಸಂಕ್ಷಿಪ್ತವಾಗಿ ಹೇಳಿರುವ ವಿಷಯಗಳಿಗೆ ನಾನೂ ಸಹ ಬಾಯಿ ಹಾಕುತ್ತೇನೆ. ಈಗ ತುಮಕೂರು, ಕೋಲಾರ, ಬೆಂಗಳೂರು ಹಾಗೂ ಮಂಡ್ಯ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ರೈತರು ತಮ್ಮ ಜೀವನಕ್ಕೆ ಆಧಾರವಾಗಿಟ್ಟುಕೊಂಡಿರುವ ಕಸುಬು ಎಂದರೆ ರೇಷ್ಮೆ ಉದ್ಯಮ. ಆದ್ದರಿಂದ ಇದರ ಮೇಲೆ ಕೆಲವು ವಿಷಯಗಳನ್ನು ಹೇಳುತ್ತೇನೆ.

ಈ ರೇಷ್ಮೆ ಉದ್ಯಮ ನಮ್ಮ ಭಾರತ ದೇಶಕ್ಕೆ ಬಹಳ ಪುರಾತನವಾದಂಥ ಉದ್ಯಮ ವಾಗಿದೆ. ಈ ಉದ್ಯಮದ ಉಗಮ ನಮ್ಮ ದೇಶದಲ್ಲಿ 1670ರಲ್ಲಿ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಪ್ರಾರಂಭವಾಗಿದ್ದು ಟಿಪ್ಪು ಸುಲ್ತಾನ್ ಕಾಲದಲ್ಲಿ, ಟಿಪ್ಪು ಸುಲ್ತಾನ್ ತನ್ನ ಪ್ರತಿನಿಧಿಗಳನ್ನು ಚೈನಾ ದೇಶಕ್ಕೆ ಕಳುಹಿಸಿಕೊಟ್ಟು, ಅಲ್ಲಿಂದ ರೇಷ್ಮೆ ಬೆಳೆಯ ಕಡ್ಡಿ ಮತ್ತು ಬೀಜವನ್ನು ತರಿಸಿಕೊಂಡು, ಹಳೆಯ ಮೈಸೂರು ಭಾಗದಲ್ಲಿ ರೇಷ್ಮೆಯನ್ನು ಬೆಳೆದಂಥ ಮಾಹಿತಿ ಇದೆ. ಈ ದಿವಸ ಭಾರತ ದೇಶದಲ್ಲಿ ಬೆಳೆಯುವಂತಹ ರೇಷ್ಮೆಯಲ್ಲಿ ಸಿಂಹಪಾಲು ನಮ್ಮ ಕರ್ನಾಟಕ ರಾಜ್ಯದ್ದೇ ಆಗಿದೆ. ಇಲ್ಲಿ ಶೇಕಡಾ 80ರಷ್ಟು ರೇಷ್ಮೆಯನ್ನು ಉತ್ಪತ್ತಿ ಮಾಡಲಾಗುತ್ತಿದೆ. ಆದ್ದರಿಂದ ರೇಷ್ಮೆ ಉದ್ಯಮದಲ್ಲಿ ನಮ್ಮ ಕರ್ನಾಟಕದ ಪಾತ್ರ ಬಹಳ ದೊಡ್ಡದಾಗಿದೆ. ಇದನ್ನು ಇನ್ನೂ ಹೆಚ್ಚು ಮಾಡಬೇಕಾಗಿದೆ ಮತ್ತು ಇದರ ಗುಣಮಟ್ಟವನ್ನೂ ಸಹ ಹೆಚ್ಚು ಮಾಡಬೇಕಾಗಿದೆ ಯೆಂಬುದು ಈ ಉದ್ಯಮದಲ್ಲಿ ಆಸಕ್ತಿ ಇರುವವರೆಲ್ಲರ ಅಭಿಲಾಷೆಯಾಗಿದೆ. ನಾನೂ ಕೂಡ ಒಬ್ಬ ಸಾಮಾನ್ಯ ಬೆಳೆಗಾರನ ಮಗನಾಗಿ, ಸ್ವತಃ ನಾನೂ ಸಹ ಬೆಳೆಗಾರನಾಗಿ ಇದನ್ನು ಸಮಗ್ರ ವಾಗಿ ಪರಿಶೀಲನೆ ಮಾಡಿದಾಗ, ಈ ಒಂದು ಉದ್ಯಮವನ್ನು ಪ್ರಗತಿಪಥದಲ್ಲಿ ತೆಗೆದುಕೊಂಡು ಹೋಗಬೇಕಾದರೆ, ಎರಡು ಪ್ರಮುಖವಾದ ಅಂಶಗಳನ್ನು ನಾವು ಗಮನಕ್ಕೆ ತೆಗೆದುಕೊಳ್ಳ ಬೇಕಾಗುತ್ತದೆ. **ಮೊದಲನೆಯದು; ಬೆಳೆಗಾರರಿಗೆ ರೋಗರಹಿತವಾದಂಥ ಮತ್ತು ಉತ್ತಮ ವಾದಂಥ ಮೊಟ್ಟೆಗಳನ್ನು ಒದಗಿಸುವುದು. ಎರಡನೆಯದು; ಅವರು ಬೆಳೆದಂಥ ಬೆಳೆಗೆ ಅಂದರೆ ಗೂಡಿಗೆ ಉತ್ತಮವಾದಂಥ ಬೆಲೆಯನ್ನು ಕಲ್ಪಿಸಿಕೊಡುವುದು.** ಈ ಎರಡನ್ನೂ ನಾವು ಗಮನ ದಲ್ಲಿಟ್ಟುಕೊಂಡು ಮುಂದುವರೆದರೆ ಬಹುಶಃ ಈ ಉದ್ಯಮದ ಪ್ರಗತಿ ಸಾಧ್ಯವಾಗಬಹುದು. ಆದರೆ ನನ್ನ ಅಭಿಪ್ರಾಯದಲ್ಲಿ ಈ ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇದಕ್ಕೆ ಸಂಬಂಧಪಟ್ಟ ಇಲಾಖೆ ಕೆಲಸ ಮಾಡುವುದಲ್ಲಿ ಸಂಪೂರ್ಣ ವಾಗಿ ಫಲಪ್ರದವಾಗಿದೆ ಎಂದು ನಾನು ಒಪ್ಪಿಕೊಳ್ಳುವುದಕ್ಕೆ ಸಿದ್ದನಿಲ್ಲ.

ರೇಷ್ಮೆ ಸಂಘದ ಅಧ್ಯಕ್ಷನಾಗಿ ಸುಮಾರು ಎರಡು ವರ್ಷಗಳ ಹಿಂದೆ ನಾನು, ಆನೇಕಲ್ ತಾಲ್ಲೂಕಿಗೆ ಹೋಗಿ ರೈತರ ಪರಿಸ್ಥಿತಿಯನ್ನು ನೋಡಿದಾಗ ಕರುಳು ಕಿತ್ತುಬರುವ ಪರಿಸ್ಥಿತಿ ಇತ್ತು.

ಬೈವೋಲ್ಟೀನ್ ಬೀಜವನ್ನು ತಂದು ಹುಳುವನ್ನು ಸಾಕಿ ಚಂದ್ರಿಕೆಗೆ ಬಿಡುವಾಗ ಯಾವುದೋ ಒಂದು ರೋಗ ಬಂದು ಎಲ್ಲಾ ಹುಳುಗಳನ್ನು ತಿಪ್ಪೆಗೆ ಸುರಿದಿದ್ದರು. ಆನೇಕಲ್ ತಾಲ್ಲೂಕಿನಲ್ಲಿ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ, ಮನೆ ಮಂದಿಯೆಲ್ಲಾ ಶ್ರಮ ವಹಿಸಿ ಸಾಕಿದಂತಹ ಹುಳಗಳನ್ನು ತಿಪ್ಪೆಗೆ ಸುರಿದು ಬಂದಿದ್ದರು. ಅಲ್ಲಿಯ ರೈತರು ತಮ್ಮ ಮಗನನ್ನು ಶವ ಸಂಸ್ಕಾರ ಮಾಡಿ ಬಂದರೆ ಯಾವ ರೀತಿ ದುಃಖವಾಗುತ್ತದೆ, ಆ ರೀತಿಯ ದುಃಖವಾಗುತ್ತದೆಂದು ಹೇಳಿದರು. ಇಂತಹ ಒಂದು ಪರಿಸ್ಥಿತಿ ಆನೇಕಲ್ ತಾಲ್ಲೂಕಿನಲ್ಲಿ ಒಂದು ಊರನ್ನು ಬಿಟ್ಟರೆ ಎಲ್ಲಾ ಊರುಗಳಲ್ಲೂ ಇತ್ತು. ಹುಳು ಸಾಕಿದರೆ ಕೊನೆಯ ಗಳಿಗೆಯಲ್ಲಿ ಹುಳುಗಳು ಹೊರಟು ಹೋಗುತ್ತವೆ. ಇದು ಇಲಾಖೆಯವರ ವೈಫಲ್ಯವೆಂದು ಹೇಳುವುದಕ್ಕೆ ಇಷ್ಟಪಡುವುದಿಲ್ಲ. ಮೈಸೂರಿನಲ್ಲಿ ಸಂಶೋಧನಾ ಕೇಂದ್ರವಿದೆ. ಅದು ಏತಕ್ಕೆ ಇದೆಯೋ ಗೊತ್ತಿಲ್ಲ. ಅಲ್ಲಿ ನಾರ್ತ್ ಕರ್ನಾಟಕದ ಒಬ್ಬರು ಅಧಿಕಾರಿಗಳಿದ್ದಾರೆ. ಅವರಿಗೆ ಹಿಪ್ಪನೇರಳೇ ಸೊಪ್ಪು, ಹುಳ ಹೊತ್ತಿದೆಯೋ ಇಲ್ಲವೋ ಗೊತ್ತಿಲ್ಲ. ನಾನು ಅವರ ಬಗ್ಗೆ ಏನೂ ಹೇಳುವುದಕ್ಕೆ ಹೋಗುವುದಿಲ್ಲ. ಕರ್ನಾಟಕದಲ್ಲಿರುವ ಕೇಂದ್ರ ಸರ್ಕಾರದ ಸಂಶೋಧನಾಲಯ ರೈತರಿಗೆ ಒಳ್ಳೆಯ ಗುಣಮಟ್ಟದ, ರೋಗರಹಿತವಾದ ಮೊಟ್ಟೆಗಳನ್ನು ಒದಗಿಸುವುದರಲ್ಲಿ ರೈತರಿಗೆ ಸಹಾಯ ಮಾಡುವುದರಲ್ಲಿ ವಿಫಲವಾಗಿದೆಯೆಂದು ಇಷ್ಟು ಮಾತ್ರ ಸಭೆಯ ಮುಂದೆ ಹೇಳಲಿಕ್ಕೆ ಇಷ್ಟಪಡುತ್ತೇನೆ.

ಸಂಶೋಧನಾ ಕೇಂದ್ರದಲ್ಲಿ ರೇಷ್ಮೆ ಉದ್ಯಮಕ್ಕೆ ಸಂಬಂಧಪಟ್ಟ ಹಾಗೆ ಒಂದು ಸಮಿತಿ ಇದೆ. ಬೆಳೆಗಾರರ ತೋಟಗಳಲ್ಲಿ ತಟ್ಟೆಗಳಲ್ಲಿ ಬರತಕ್ಕ ರೋಗಗಳಿಗೆ ಸಂಶೋಧನೆ ಮಾಡತಕ್ಕ ಕೆಲಸವನ್ನು ಸಂಶೋಧನಾ ಕೇಂದ್ರದಲ್ಲಿ ತೆಗೆದುಕೊಂಡ ಹಾಗೆ ಕಾಣುವುದಿಲ್ಲ. ಸಂಶೋಧನಾ ಕೇಂದ್ರದಲ್ಲಿ ಬರುವ ಸಮಸ್ಯೆಗಳನ್ನು ರೈತರ ತೋಟಗಳಿಗೆ ಕೊಡುವುದು ಬೇಡ. ಬರತಕ್ಕ ಸಮಸ್ಯೆಗಳನ್ನು ಸಂಶೋಧನಾ ಕೇಂದ್ರದ ಲ್ಯಾಬೋರೇಟರಿಯಲ್ಲಿ ಅದಕ್ಕೆ ಪರಿಹಾರ ಕಂಡುಹಿಡಿಯಬೇಕು. ಅಲ್ಲಿ ಬರತಕ್ಕ ಸಮಸ್ಯೆಗಳನ್ನು ರೈತರ ಮೇಲೆ ಎಕ್ಸ್‌ಪರಿಮೆಂಟ್ ಮಾಡಲಿಕ್ಕೆ ಹೋಗುವುದು ಬೇಡ. ಈ ವಿಷಯದಲ್ಲಿ ಸರ್ಕಾರ ಗಮನಹರಿಸಬೇಕೆಂದು ಮತ್ತೊಮ್ಮೆ ಹೇಳಲಿಕ್ಕೆ ಇಚ್ಛೆಪಡುತ್ತೇನೆ. ನಮ್ಮ ದೇಶದ ದುರಾದೃಷ್ಟವೋ ಏನೋ, ಯಾವುದೇ ಒಂದು ಯೋಜನೆಯನ್ನು ಸಂಶೋಧನೆ ಮಾಡುವಾಗ ಮಾನ್ಯ ಗಂಗಾಧರ್‌ರವರ ಹೇಳಿದ ಹಾಗೆ, ಕ್ಯಾಪಿಟಲಿಸ್ಟ್ ಜನ ಏನಿದ್ದಾರೆ ಅವರ ದೃಷ್ಟಿಯನ್ನಿಟ್ಟುಕೊಂಡು ಮಾಡುವುದು ಬೇಡ. ರೇಷ್ಮೆ ಇಲಾಖೆಯಲ್ಲಿ ಯಾವುದೇ ಯೋಜನೆಯನ್ನು ತಯಾರು ಮಾಡುವಾಗ ಯಾವುದೇ ತಳಿಯನ್ನು ಕಂಡುಹಿಡಿಯುವಾಗ ಅದರ ಬಗ್ಗೆ ಸಂಶೋಧನೆ ಮಾಡುವಾಗ, ಗುಡಿಸಲುಗಳಲ್ಲಿ ರೇಷ್ಮೆಯನ್ನು ಉತ್ಪಾದನೆ ಮಾಡುವವರನ್ನು ಗಮನದಲ್ಲಿಟ್ಟುಕೊಳ್ಳಬೇಕು. ಯಾರು 10-12 ಗುಂಟೆ ಜಮೀನಿನಲ್ಲಿ ರೇಷ್ಮೆ ಬೆಳೆಯನ್ನು ಬೆಳೆದು ಜೀವನ ಮಾಡತಕ್ಕಂತಹ ಲಕ್ಷಾಂತರ ರೈತರು ಇದ್ದಾರೆ, ಅವರ ಹಿತದೃಷ್ಟಿಯಿಂದ ಸಂಶೋಧನೆಯನ್ನು ಮಾಡಬೇಕೆಂದು ತಮ್ಮ ಮೂಲಕ ಮಾನ್ಯ ಮಂತ್ರಿಗಳಲ್ಲಿ ಕೇಳಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ.

ಈ ದಿಸೆಯಲ್ಲಿ ರೇಷ್ಮೆ ಮೊಟ್ಟೆಯನ್ನು ಒದಗಿಸುವುದಕ್ಕೆ ಒಂದು ಸಮಸ್ಯೆ ಇದೆ. ನನಗೆ ತಿಳಿದಮಟ್ಟಿಗೆ ಕರ್ನಾಟಕ ಸಿರಿಕಲ್ಚರ್ ಪ್ರಾಜೆಕ್ಟ್ ಕೆಳಗಡೆ ಗ್ರೈನೇಜ್‌ನ್ನು 16-17 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದರೂ ಸಹ ಕರ್ನಾಟಕದಲ್ಲಿರುವ ಎಲ್ಲರಿಗೂ ಮೊಟ್ಟೆ ಪೂರೈಸುವುದಕ್ಕೆ ಸಾಧ್ಯವಿಲ್ಲ. ಮೊಟ್ಟೆ ಪೂರೈಸತಕ್ಕದ್ದು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿಲ್ಲ. ನಮ್ಮ ನೆರೆ ರಾಜ್ಯಗಳಾದ ಆಂಧ್ರ, ಮದ್ರಾಸ್ ಮತ್ತು ಬೇರೆ ಹೊರರಾಜ್ಯಗಳಿಗೆ ಬೇಕಾಗುತ್ತದೆ. ಆ ದೃಷ್ಟಿಯನ್ನಿಟ್ಟುಕೊಂಡು **ಮೊಟ್ಟೆಗಳನ್ನು ತಯಾರು ಮಾಡುವ ಒಂದು ಸ್ವತಂತ್ರವಾದ ಕಾರ್ಪೊರೇಷನ್‌ನ್ನು ಮಾಡಬೇಕೆಂದು ಹಿಂದಿನಿಂದಲೂ ಬೇಡಿಕೆ ಇದೆ. ಇದನ್ನು ಆದಷ್ಟು ಬೇಗ ನಮ್ಮ ಮಂತ್ರಿಗಳು ವೈಯಕ್ತಿಕವಾಗಿ ಶ್ರಮ ತೆಗೆದುಕೊಂಡು ಬೇಗ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.** ಮೊನ್ನೆ ಇದರ ಬಗ್ಗೆ ನಾನು ಒಂದು ಕಾಗದ ಬರೆದಿದ್ದೇನೆ. ಈ ಸಂದರ್ಭದಲ್ಲಿ ಒಂದು ಎಚ್ಚರಿಕೆ ಕೊಡಲಿಕ್ಕೆ ಇಷ್ಟಪಡುತ್ತೇನೆ. ಕಾರ್ಪೊರೇಷನ್ ಅನ್ನು ಕರ್ನಾಟಕ ರೇಷ್ಮೆ ಕೈಗಾರಿಕೆ ಅಭಿವೃದ್ಧಿ ನಿಗಮದ ಕೆಳಗಡೆ ಮಾಡುತ್ತಾರೆಂದು ತಿಳಿದುಕೊಂಡಿದ್ದೇನೆ. ಈ ರೀತಿ ಮಾಡಿದರೆ ಅದು ತಪ್ಪಾಗುತ್ತದೆ. ಉದ್ಯಮದಾರರಿಗೆ ಬೆಳೆಗಾರರಿಗೆ ಮಾಡುವಂತಹ ಅಪರಾಧ ಇದಕ್ಕಿಂತ ಬೇರೊಂದು ಇಲ್ಲ. **ಕರ್ನಾಟಕ ರೇಷ್ಮೆ ಕೈಗಾರಿಕೆ ಅಭಿವೃದ್ಧಿ ನಿಗಮಕ್ಕೆ ಚಿಕ್ಕ ಚಿಕ್ಕ ಮಿಲ್‌ಗಳನ್ನು ಕೊಟ್ಟಿದ್ದೀರಿ. ಅವರು ಅದನ್ನೇ ಮಾಡಿಕೊಂಡು ಹೋಗಲಿ. ಬೆಳೆಗಾರರ ಹಿತದೃಷ್ಟಿಯಿಂದ ಬಿತ್ತನೆ ಕೇಂದ್ರವನ್ನು ಮಾಡುವಾಗ ಸ್ವತಂತ್ರವಾದ ಕಾರ್ಪೊರೇಷನ್ ಮಾಡಿ. ಪ್ರತ್ಯೇಕ ಕಾರ್ಪೊರೇಷನ್ ಮಾಡಿ ನುರಿತ ಹಿರಿಯ ಅಧಿಕಾರಿಯನ್ನು ಮುಖ್ಯಸ್ಥರನ್ನಾಗಿ ಮಾಡಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.** ಉತ್ತಮ ಮೊಟ್ಟೆಗಳನ್ನು ಕೊಡಲಿಕ್ಕೆ ಈ ದಿಸೆಯಲ್ಲಿ ಮತ್ತೊಂದು ಅಭಿಪ್ರಾಯವನ್ನು ಕೊಡಲಿಕ್ಕೆ ಇಚ್ಛೆಪಡುತ್ತೇನೆ. ರೇಷ್ಮೆ ಇಲಾಖೆ ಮತ್ತು ತೋಟಗಾರಿಕೆ ಇಲಾಖೆ ತಾಂತ್ರಿಕ ಇಲಾಖೆಗಳೆಂದು ತಾವೇ ಒಪ್ಪಿಕೊಂಡಿದ್ದೀರಿ. ಅಂತಹ ಇಲಾಖೆಗಳಿಗೆ ಆಡಳಿತವನ್ನು ನೋಡಿಕೊಳ್ಳಲು ಐ.ಎ.ಎಸ್. ಅಧಿಕಾರಿಗಳನ್ನು ಹಾಕುತ್ತೀರಿ. ಅವರು ಆಡಳಿತ ನೋಡಿಕೊಳ್ಳಲಿ, ತಾಂತ್ರಿಕತೆಗೆ ಸಂಬಂಧಪಟ್ಟ ಹಾಗೆ, ರೇಷ್ಮೆ ಉದ್ಯಮಕ್ಕೆ ಸಂಬಂಧಪಟ್ಟ ಹಾಗೆ, ಬೆಳೆಗಾರರ ಸಮಸ್ಯೆಗಳಿಗೆ ಸಂಬಂಧಪಟ್ಟ ಹಾಗೆ, ಬೆಳೆಗಾರರ ಕಷ್ಟಸುಖಗಳನ್ನು ನೋಡುವ ವ್ಯವಸ್ಥೆ ಇದೆಯೆ? ಫಾರಂಗಳು, ಗ್ರೈನೇಜ್‌ಗಳು ಇವುಗಳ ಮೆಂಟೇನೆನ್ಸ್ ಇದಕ್ಕೆ ಸಂಬಂಧಪಟ್ಟ ಹಾಗೆ ಇಲಾಖೆಯಲ್ಲಿರುವ ಹಿರಿಯ ಅಧಿಕಾರಿಗಳನ್ನು ಅಡಿಷನಲ್ ಡೈರೆಕ್ಟರ್ ಎಂದು ಮಾಡಿ ಹುಳುಗಳನ್ನು ಯಾವ ರೀತಿ ಸಾಕಬೇಕು, ಬೆಳೆಯನ್ನು ಯಾವ ರೀತಿ ಬೆಳೆಯಬೇಕು ಇದರ ಬಗ್ಗೆ ಅನುಭವವಿರುವಂತಹ ಅಧಿಕಾರಿಗಳನ್ನು ಇಲಾಖೆಯಲ್ಲಿ ನೇಮಿಸಿ ಅವರಿಗೆ ಅಧಿಕಾರ ವಹಿಸಿಕೊಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ.

ಇನ್ನು ಮುಂದೆ ಉತ್ತಮವಾದ ಚಾಕಿ ಕೊಡಿ. ಉತ್ತಮವಾದ ಮೊಟ್ಟೆಗಳನ್ನು ಕೊಡಿ. ಈ ವಿಷಯದಲ್ಲಿ ಮತ್ತೊಂದು ಆಸೆ ಏನೆಂದರೆ, ಜಪಾನ್ ದೇಶಕ್ಕೆ ಅಧಿಕಾರಿಗಳನ್ನು ತರಬೇತಿಗಾಗಿ

ಕಳುಹಿಸಿಕೊಡುತ್ತಿರಿ. ತರಬೇತಿ ಪಡೆದುಕೊಂಡು ಬಂದಂತಹ ಅಧಿಕಾರಗಿಳನ್ನು ಮಾನ್ಯ ವಿರೋಧಪಕ್ಷದ ನಾಯಕರಾದ ವೀರಪ್ಪ ಮೊಯ್ಲಿಯವರು ಹೇಳಿದ ಹಾಗೆ, ಬೇರೆ ಕಡೆಗೆ ಹಾಕುತ್ತೀರಿ. ರೇಷ್ಮೆ ಇಲಾಖೆಯ ಬಗ್ಗೆ ತರಬೇತಿ ಪಡೆದುಕೊಂಡು ಬಂದಂತಹ ಅಧಿಕಾರಿಯನ್ನು ಭದ್ರಾವತಿಯ ಕಬ್ಬಿಣ ಕಾರ್ಖಾನೆಗೆ ಹಾಕುತ್ತೀರಿ. ಇದು ನಮ್ಮ ದೇಶದ ದುರಾದೃಷ್ಟವೋ ಅಥವಾ ಅಡ್ಮಿನಿಸ್ಟ್ರೇಷನ್ ವೈಫಲ್ಯವೋ ಗೊತ್ತಿಲ್ಲ. ಏನಾದರೂ ಆಗಲಿ, ರೇಷ್ಮೆ ಉದ್ಯಮದ ಬಗ್ಗೆ ಹೊರ ದೇಶಗಳಿಗೆ ತರಬೇತಿಗೆ ಅಧಿಕಾರಿಗಳನ್ನು ಕಳುಹಿಸುವುದರ ಜೊತೆಗೆ, ಪ್ರಾಮಾಣಿಕವಾಗಿ ವಿದ್ಯಾವಂತರು, ಪ್ರಾಜ್ಞರು, ಉತ್ತಮ ಬೆಳೆಗಾರರು ಇವರನ್ನು ಕಳುಹಿಸಿಕೊಟ್ಟರೆ, ಸ್ವತಂತ್ರವಾದ ಲಾಭ ಸಿಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ರೇಷ್ಮೆ ಮೊಟ್ಟೆಯನ್ನು ತಯಾರು ಮಾಡಲಿಕ್ಕೆ ಹುಳುವನ್ನು ಸಾಕುವಾಗ, ಬಿತ್ತನೆ ಬೀಜ ತಯಾರು ಮಾಡುವಾಗ, ಹೆಚ್ಚು ಗಮನಕೊಡುವುದು ಅವಶ್ಯಕ. **ನಮ್ಮಲ್ಲಿ ಎರಡು ಪ್ರಮುಖವಾದ ಬಿತ್ತನೆ ಕೇಂದ್ರಗಳಿವೆ. ಒಂದು ಮೈಸೂರು ಬಿತ್ತನೆ ಕೇಂದ್ರ. ಇನ್ನೊಂದು ಬೈವೋಲ್ಟೀನ್ ಕೇಂದ್ರ.** ಮೈಸೂರು ಬಿತ್ತನೆ ಕೇಂದ್ರದಲ್ಲಿ, ನಾನು ಸ್ವತಹ ಬೆಳೆಗಾರ, ನನ್ನ ಮತದಾರರ ಕ್ಷೇತ್ರದಲ್ಲಿ 12 ಸಾವಿರ ಕುಟುಂಬಗಳು ಮೈಸೂರು ಬಿತ್ತನೆ ಕೇಂದ್ರದಲ್ಲಿ ಜೀವನ ಮಾಡುವುದರಿಂದ, ನನಗೆ ಪ್ರಬಲವಾದ ಆಸಕ್ತಿ ಇದೆ. ಒಂದು ಸ್ವಾರ್ಥವೂ ಇದೆ. ಮೈಸೂರು ಬಿತ್ತನೆ ಕೇಂದ್ರ ಪದ್ಧತಿ ಬಹುಶಃ ಟಿಪ್ಪು ಸುಲ್ತಾನ್ ಕಾಲದಲ್ಲಿಯೇ ಶುರುವಾಗಿರಬಹುದು ಎಂದು ನನ್ನ ಅಭಿಪ್ರಾಯ. ದುರಾದೃಷ್ಟವಶಾತ್ ಮೈಸೂರು ಬಿತ್ತನೆಯನ್ನು ಅಭಿವೃದ್ಧಿಪಡಿಸಲಿಕ್ಕೆ ಆಗಿಲ್ಲ, ಅದನ್ನು ನಿರ್ಲಕ್ಷಿಸಲಾಗಿದೆ, ಅನ್ಯಾಯವಾಗಿದೆ. ಕೋಟಿ ರೂಪಾಯಿಗಳ ವಿಶ್ವಬ್ಯಾಂಕ್ ಪ್ರಾಜೆಕ್ಟನ್ನು ತಯಾರು ಮಾಡುವಾಗ, ಅಧಿಕಾರಿಗಳು ಮತ್ತು ಸರ್ಕಾರ ಅನ್ಯಾಯ ಮಾಡಿದೆ ಅಂದರೆ ಅದು ಉತ್ಪ್ರೇಕ್ಷೆಯಾಗಲಾರದು. They have forgotten the basic problem of the basic seed. That is my difficulty, ಮಾನ್ಯ ಉಪಾಧ್ಯಕ್ಷರೆ, 80 ಕೋಟಿ ರೂಪಾಯಿಗಳ ಯೋಜನೆಯಲ್ಲಿ 80 ರೂಪಾಯಿಗಳನ್ನು ಕೂಡ ಬೇಸಿಕ್ ಫಾರಂಗೆ ಕೊಡಲಿಲ್ಲ ಇದು ಅನ್ಯಾಯ. ಒಂದು ನಯಾಪೈಸೆ ಕೂಡ ವಿಶ್ವಬ್ಯಾಂಕ್ ಯೋಜನೆಯಲ್ಲಿ ಇದಕ್ಕೆ ಕೊಡಲಿಲ್ಲ. ಎರಡು ವರ್ಷಗಳ ಹಿಂದೆ ಹೋರಾಟ ಮಾಡಿ ಹಣವನ್ನು ಪಡೆದಿದ್ದೇನೆ. ಇದಕ್ಕೆ ಕಾರಣಕರ್ತರು ಯಾರೇ ಆಗಿರಲಿ, ಆಗಿರುವ ಅನ್ಯಾಯವನ್ನು ಸರಿಪಡಿಸಿ ಕೊಳ್ಳುವುದು ಅವಶ್ಯಕವಿದೆ.

ಮೈಸೂರು ಬಿತ್ತನೆ ಬೀಜ ಬೆಳೆಯುವವರ ಪರವಾಗಿ ಮಾನ್ಯ ಗುಂಡೂರಾಯರನ್ನು ನಾನು ಅಭಿನಂದಿಸಲಿಕ್ಕೆ ಇಚ್ಛೆಪಡುತ್ತೇನೆ. ಒಳ್ಳೆಯ ಕೆಲಸ ಮಾಡಿದವರು ಯಾರೇ ಆಗಿರಲಿ, ಅವರ ಗುಣಕ್ಕೆ ನಾವು ಅಭಿನಂದಿಸಲೇಬೇಕು. ಮೈಸೂರು ಬಿತ್ತನೆ ಬೀಜವನ್ನು ನಾವು ಒಂದು ಕಾನೂನು ಚೌಕಟ್ಟಿನೊಳಗೆ ಬೆಳೆಯಬೇಕು. ಬಿತ್ತನೆ ತಳಿ ಬೆಳೆಯಲಿಕ್ಕೆ ಕಾನೂನಿನ ಮೂಲಕ ಒತ್ತಾಯ ಮಾಡುತ್ತಾರೆ. ಕಾನೂನು ಮೂಲಕ ಒತ್ತಾಯ ಮಾಡುವವರು, ಕಾನೂನಿನ ಹಿಡಿತಕ್ಕೆ ಸಿಕ್ಕಿಸಿಕೊಂಡವರು ನಾವು ಬೆಳೆದಂತಹ ರೇಷ್ಮೆಯನ್ನು ಸರ್ಕಾರ ಕೊಂಡುಕೊಳ್ಳತಕ್ಕದ್ದು ಅದು

ಸರ್ಕಾರದ ಕರ್ತವ್ಯ. There is a contract between the Government and the rearer. You are insistign the rearer to go in a particular way. If the Government fails to purchase their product, they are violating the agreement and they are liable to the damages. ನಾನು ಒಬ್ಬ ಸಾಮಾನ್ಯ ಬೆಳೆಗಾರನಾಗಿ ಸರ್ಕಾರದ ಗಮನಕ್ಕೆ ಅನೇಕ ವರ್ಷಗಳಿಂದ ಈ ವಿಷಯವನ್ನು ತಂದರೂ, ಸರ್ಕಾರ ಅದನ್ನು ಗಮನಕ್ಕೆ ಹಾಕಿಕೊಳ್ಳಲಿಲ್ಲ. ಬಿತ್ತನೆ ಬೀಜವನ್ನು ಬೆಳೆದು, ಅವರಿಗೆ ಅನ್ಯಾಯವಾಗುವ ಪರಿಸ್ಥಿತಿ ಇದ್ದಾಗ ಅದನ್ನು ಕೊಳ್ಳಲಿಲ್ಲ. ಬಿತ್ತನೆ ಬೀಜವನ್ನು ಬೆಳೆದು, ಅವರಿಗೆ ಅನ್ಯಾಯವಾಗುವ ಪರಿಸ್ಥಿತಿ ಇದ್ದಾಗ, ಅವರಿಗೆ ಸರ್ಕಾರ ನ್ಯಾಯ ದೊರಕಿಸಿಕೊಡುವುದು ನ್ಯಾಯವಾದುದು. ಇದನ್ನು 35 ವರ್ಷಗಳಿಂದ ಮಾಡಲಿಲ್ಲ.

ಈ ದಿಸೆಯಲ್ಲಿ ಸರ್ಕಾರದವರು ಒಂದು ವರ್ಷದ ಹಿಂದೆ ಬೆಳೆಗಾರರಿಗೆ ಒಂದು ಕೆ.ಜಿ.ಗೆ 3 ರೂಪಾಯಿಗಳ ಬೋನಸ್ ಕೊಡುವ ವ್ಯವಸ್ಥೆಯನ್ನು ಹಿಂದಿನ ಸರ್ಕಾರದವರು ಮಾಡಿದರು. ಆದರೆ ಯಾರು ಉತ್ತಮವಾದಂಥ ಕೆಲಸವನ್ನು ಮಾಡಿರುತ್ತಾರೋ ಅವರನ್ನು ಸ್ವಾಗತಿಸುವುದು ನಮ್ಮ ಪ್ರಜಾಪ್ರಭುತ್ವದ ಮೂಲಕರ್ತವ್ಯವೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಆದ್ದರಿಂದ ಉತ್ಪಾದನಾ ವೆಚ್ಚವನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು, ಮಾರ್ಕೆಟ್ ರೇಟ್ ಫಿಕ್ಸ್ ಮಾಡಬೇಕೆಂದು ನಾನು ಹೇಳುತ್ತೇನೆ. ಮೈಸೂರು ಬಿತ್ತನೆಯ ಉತ್ಪಾದನಾ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು, ಸರ್ಕಾರದವರು ಬೆಳೆಗಾರರಿಗೆ ಬೋನಸ್ ಕೊಡಬೇಕೆಂದು ನಾನು ಹೇಳುತ್ತೇನೆ. ಆದರೆ ರೇಷ್ಮೆ ಬಿತ್ತನೆ ಈ ರಾಜ್ಯದಲ್ಲಿ ಬಹಳ ವ್ಯಾಪಕವಾಗಿ ಬೆಳೆಯುತ್ತಿರುವುದರಿಂದ, ಸರ್ಕಾರದವರು ಇದರ ಬಗ್ಗೆ ಹೆಚ್ಚು ಗಮನವನ್ನು ಕೊಟ್ಟು ಪ್ರೋತ್ಸಾಹ ಕೊಡಬೇಕು.

ಈ ಬೈವೋಲ್ಟಿನ್ ಇದು ನಮ್ಮ ರಾಜ್ಯದ ಬಿತ್ತನೆ ಅಲ್ಲ. ಹೆಚ್ಚಾಗಿ ಪೌರಾತ್ಯ ರಾಷ್ಟ್ರಗಳಲ್ಲಿ ಬೆಳೆಯುತ್ತಾರೆ. ಆದರೆ ಇದನ್ನು ನಮ್ಮ ರಾಜ್ಯದಲ್ಲಿ ತಂದು ಅಭಿವೃದ್ಧಿ ಮಾಡುವುದಕ್ಕೆ ಹೊರಟಿದ್ದಾರೆ. ಈ ಒಂದು ಬೈವೋಲ್ಟಿನ್ ಬಿತ್ತನೆಯನ್ನು ಸಂಶೋಧನೆ ನಡೆಸಲು ಅನೇಕ ಜನ ತಜ್ಞರು ಪರಿಶೋಧನೆ ಮಾಡಿ, ಇಲ್ಲಿ ಆ ಬಿತ್ತನೆಯನ್ನು ಮಾಡಬೇಕೆಂದು ರೈತರ ಮೇಲೆ ಬಲವಂತದಿಂದ ಹೇರುತ್ತಾರೆ. ಆದ್ದರಿಂದ ನಾನು ಹೇಳುವುದೇನೆಂದರೆ ಈ ಬಿತ್ತನೆ ಸರಿಯಾದ ಪ್ರಮಾಣದಲ್ಲಿ ಬೆಳೆಯುವುದಿಲ್ಲ. ನಮ್ಮ ನಿರೀಕ್ಷೆಯ ಮಟ್ಟದಲ್ಲಿ ಉತ್ಪಾದನೆಯಾಗುವುದಿಲ್ಲ. They have failed to achieve the target in the Bivoltine ಇವತ್ತು ರೈತರ ಶ್ರಮಕ್ಕೆ ತಕ್ಕ ಬೆಲೆಯನ್ನು ತಾವು ಕೊಡುತ್ತಿಲ್ಲ. ನಾವು ಇವತ್ತು ಎಷ್ಟು ಪ್ರಮಾಣದಲ್ಲಿ ಬೈವೋಲ್ಟಿನ್ ಬಿತ್ತನೆಯನ್ನು ಉತ್ಪಾದನೆ ಮಾಡಬೇಕೋ, ಆ ಪ್ರಮಾಣದಲ್ಲಿ ಉತ್ಪಾದನೆಯನ್ನು ಮಾಡುವುದಕ್ಕೆ ಆಗುತ್ತಿಲ್ಲ. ಕಾರಣವೆಂದರೆ ಇಲ್ಲಿನ ವಾತಾವರಣದಲ್ಲಿ ಆ ಬಿತ್ತನೆ ಸರಿಯಾದ ಪ್ರಮಾಣದಲ್ಲಿ ಆಗುವುದಿಲ್ಲ. ಇವತ್ತು ಬೈವೋಲ್ಟಿನ್ ಬಿತ್ತನೆಗೆ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಇದೆ, ಇಲ್ಲವೆಂದು ನಾನು ಹೇಳುತ್ತಿಲ್ಲ. ಆದರೆ

ಪರರಾಷ್ಟ್ರದಲ್ಲಿ ಒಳ್ಳೆಯ ಉತ್ಪಾದನೆ ಇದೆಯೆಂದು ತಿಳಿದು ನಮ್ಮ ರಾಜ್ಯದಲ್ಲಿ ಆ ಬಿತ್ತನೆ ಮಾಡಬೇಕೆಂದು ಹೊರಟರೆ ಅದರಿಂದ ತಮಗೆ ಯಾವ ಪ್ರಯೋಜನವಾಗುವುದಿಲ್ಲ. ತಾವು ಎಷ್ಟೇ ಪ್ರಾಜೆಕ್ಟ್‌ಗಳನ್ನು ಮಾಡಿ ಆ ಬಿತ್ತನೆಯನ್ನು ಮಾಡಿದರೂ ಕೂಡ, ಸರಿಯಾದ ಪ್ರಮಾಣದಲ್ಲಿ ಅದು ಉತ್ಪತ್ತಿಯಾಗುವುದಿಲ್ಲ. ಕಾರಣ ಇಲ್ಲಿನ ವಾತಾವರಣಕ್ಕೆ ಅದು ಸರಿ ಹೊಂದುವುದಿಲ್ಲ. ಆದ್ದರಿಂದ ತಾವು ಅನಾವಶ್ಯಕವಾಗಿ ರೈತರ ಮೇಲೆ ಈ ಬೈವೋಲ್ಟಿನ್ ತಳಿಯನ್ನು ಬೆಳೆಯುವಂತೆ ಒತ್ತಾಯ ಮಾಡುವುದನ್ನು ಬಿಡಿ. ಇಲ್ಲಿನ ಗುಣಮಟ್ಟಕ್ಕೆ ಆ ಬೈವೋಲ್ಟಿನ್ ತಳಿ ಸರಿಯಾಗಿ ಆಗುವುದಿಲ್ಲ.

ಜಪಾನ್ ದೇಶದಲ್ಲಿ ಈ ಬೆಳೆ ಚೆನ್ನಾಗಿ ಆಗುತ್ತದೆಂದು ಹೇಳಿ ನಮ್ಮ ರಾಜ್ಯದಲ್ಲಿ ಕೂಡ ಅಂತಹ ಫಾರಂಗಳನ್ನು ಮಾಡಿ, ಇಲ್ಲಿ ಬೆಳೆಸುವುದಕ್ಕೆ ತಾವು ಪ್ರಯತ್ನಪಟ್ಟರೆ ಆಗುವುದಿಲ್ಲ. ಮಾನ್ಯ ಅಧ್ಯಕ್ಷರೇ, ನಾನು ಇದರ ಬಗ್ಗೆ ಒಂದು ಉದಾಹರಣೆಯನ್ನು ಹೇಳುವುದಾದರೆ ಜಪಾನ್ ದೇಶದಲ್ಲಿ ಹುಟ್ಟತಕ್ಕಂಥ ಮಕ್ಕಳು ಎಲ್ಲರೂ ಸಾಮಾನ್ಯವಾಗಿ ಬೆಳ್ಳಗೆ ಇರುತ್ತಾರೆ. ಆದರೆ ಇಲ್ಲಿ ನಮ್ಮ ಕರ್ನಾಟಕ ರಾಜ್ಯದಲ್ಲಿ ಹುಟ್ಟತಕ್ಕಂಥ ಮಕ್ಕಳು ಕಪ್ಪಾಗಿ ಹುಟ್ಟುತ್ತಾರೆ. ಆದರೆ ಜಪಾನ್ ದೇಶದಲ್ಲಿ ಹುಟ್ಟುವಂತೆ ಬೆಳ್ಳಗೆ ನನ್ನ ಮಗ ಹುಟ್ಟಬೇಕೆಂದು ಹೇಳಿ ನಾನು ಸರ್ವ ಪತ್ರಯತ್ನಪಟ್ಟರೂ ಅದು ಆಗುವುದಿಲ್ಲ. ಕಾರಣ ಅಲ್ಲಿನ ವಾತಾವರಣ ಮತ್ತು ಗುಣಮಟ್ಟವನ್ನು ಆದರಿಸಿಕೊಂಡು ಆ ಮಗು ಬೆಳ್ಳಗೆ ಹುಟ್ಟುತ್ತಾನೆಯೇ ವಿನಃ, ಕಪ್ಪಾಗಿ ಹುಟ್ಟುವುದಕ್ಕೆ ಆಗುವುದಿಲ್ಲ. ಅದೇ ರೀತಿಯಲ್ಲಿ ಕರ್ನಾಟಕದ ಮಗು ಕಪ್ಪಾಗಿದೆ. ಆದ್ದರಿಂದ ತಾವು ಅನಾವಶ್ಯಕವಾಗಿ ಈ ಬೈವೋಲ್ಟಿನ್ ತಳಿಯನ್ನು ಕರ್ನಾಟಕ ರಾಜ್ಯದ ರೈತರ ಮೇಲೆ ತಂದು ಒತ್ತಾಯ ಮಾಡುವುದನ್ನು ನಿಲ್ಲಿಸಿ. ಆದ್ದರಿಂದ ನಾನು ಮಾನ್ಯ ಮಂತ್ರಿಗಳಲ್ಲಿ ಅರಿಕೆ ಮಾಡಿಕೊಳ್ಳುವುದೇನೆಂದರೆ, ರೈತನು ಬೆಳೆದಂಥ ಬೆಳೆಗೆ ಸರಿಯಾದ ಮಾರ್ಕೆಟ್ ರೇಟ್ ಕೊಡಿ. ಅವನ ಉತ್ಪಾದನಾ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು, ಅವನಿಗೆ ಬೆಲೆಯನ್ನು ನಿಗಧಿ ಮಾಡಿ ಎಂದು ನಾನು ಕೇಳಿಕೊಳ್ಳುತ್ತೇನೆ. ಇವತ್ತು ರೈತನು ಬೆಳೆದ ಬೆಳೆಗೆ ಸಿಗುತ್ತಿರುವ ಉತ್ಪಾದನಾ ವೆಚ್ಚ ಎಷ್ಟು ಎಂಬುದು ಗೊತ್ತಾಗುತ್ತದೆ. ಕಾರಣವೇನೆಂದರೆ, ತಮ್ಮ ಫಾರಂನಲ್ಲಿ ಒಂದು ಕೆ.ಜಿ. ಗೂಡನ್ನು ಬೆಳೆಯಬೇಕಾದರೆ ಸುಮಾರು 36 ರೂಪಾಯಿಗಳು ವೆಚ್ಚವಾಗುತ್ತದೆಂದು ತಮ್ಮ ತಜ್ಞರಿಂದ ಲೆಕ್ಕಾಚಾರ ಮಾಡಿಸಿದ್ದೀರಿ. ಅದೇ ರೀತಿಯಲ್ಲಿ ರೈತನಿಗೂ ಕೂಡ ಉತ್ಪಾದನಾ ವೆಚ್ಚ ಎಷ್ಟಾಗುತ್ತದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು, ಅವನಿಗೆ ಸರಿಯಾದ ಬೆಲೆಯನ್ನು ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇವತ್ತು ರೈತನು ಒಂದು ಕೆ.ಜಿ. ಗೂಡನ್ನು ಉತ್ಪಾದನೆ ಮಾಡಬೇಕಾದರೆ ಸುಮಾರು 60-70 ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ.

ಮತ್ತೆ ಈಗ ನಮ್ಮ ರಾಜ್ಯಕ್ಕೆ ಬೇರೆ ರಾಷ್ಟ್ರದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ರೇಷ್ಮೆಯನ್ನು ಆಮದು

ಮಾಡಿಕೊಳ್ಳುತ್ತಿರುವುದರಿಂದ ಆಗುತ್ತಿರುವ ನಷ್ಟ ಸಾಕಾಗಿದೆ. ಇನ್ನು ಮುಂದೆ ಆ ಒಂದು ಪದ್ಧತಿಯನ್ನು ತಾವು ನಿಲ್ಲಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಿರುವುದರಿಂದ ನಮ್ಮ ರಾಜ್ಯದ ರೇಷ್ಮೆಗೆ ಬೆಲೆ ಇಲ್ಲದಂತಾಗಿದೆ. ಈ ರೇಷ್ಮೆಯನ್ನು ತಾವು ಪರರಾಷ್ಟ್ರಗಳಿಂದ ಆಮದು ಮಾಡಿಕೊಳ್ಳುತ್ತಿರುವುದರಿಂದ ನಮ್ಮ ರಾಜ್ಯದ ಮಾರುಕಟ್ಟೆಯಲ್ಲಿ ನಾವು ಬೆಳೆದಂಥ ರೇಷ್ಮೆಗೆ ಬೆಲೆ ಇಲ್ಲದಾಗಿದೆ. ನಮ್ಮಲ್ಲಿ ಸುಮಾರು 3 ರೀತಿಯ ಸ್ಕೀಂಗಳನ್ನು ತಂದರು. ಅದರಲ್ಲಿ ಮೊದಲನೆಯದಾಗಿ ಹೇಳುವುದಾದರೆ ಇಕ್ಸ್‌ಪೋರ್ಟ್ ರೀಪ್ಲೇಸ್‌ಮೆಂಟ್ ಸ್ಕೀಂ ಎಂದು. ಆದರೆ ಇದೇ ಸಂದರ್ಭದಲ್ಲಿ ನಮ್ಮ ಮಾನ್ಯ ಬಸವಯ್ಯ ನವರನ್ನು ಜ್ಞಾಪಿಸಿಕೊಳ್ಳದಿದ್ದರೆ, ಅದು ನಾನು ಮಾಡಿದ ಕರ್ತವ್ಯ ಲೋಪ ಎಂದು ಈ ಸಂದರ್ಭ ದಲ್ಲಿ ಹೇಳಬೇಕಾಗುತ್ತದೆ. ನಿಜವಾಗಿಯೂ ಅವರು ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅವರ ಕಾಲದಲ್ಲಿಯೇ ಸಿ.ಎಸ್.ಬಿ. ಬರುವುದಕ್ಕೆ ಅವಕಾಶ ಮಾಡಿಕೊಟ್ಟರು. ಅವರು ಇದನ್ನು ತರುವುದಕ್ಕೆ ಭಾರೀ ಪ್ರಯತ್ನವನ್ನು ಮಾಡಿದ್ದಾರೆ. ಅವರು ಅದಕ್ಕೆ ಸಂಬಂಧ ಪಟ್ಟಂತಹ ಫೈಲ್‌ನ್ನು ತರಿಸಿಕೊಂಡು ಕೇಂದ್ರ ಸರ್ಕಾರವನ್ನು ಕೂಡ ಲೆಕ್ಕಿಸದೆ ಆರ್ಡರ್ ಮಾಡಿಸಿ ಒಂದು ಸಿ.ಎಸ್.ಬಿ.ಯನ್ನು ಇಲ್ಲಿ ತಂದರು. ಅವತ್ತು ಅವರು ಮಾಡಿದಂಥ ಒಂದು ಒಳ್ಳೆಯ ಕೆಲಸವನ್ನು ನಾವು ಯಾರೂ ಮರೆಯುವಂತಿಲ್ಲ.

ಒಂದನೆಯದು, ಎಕ್ಸ್‌ಪೋರ್ಟ್ ರಿಪ್ಲೇಸ್‌ಮೆಂಟ್ ಸ್ಕೀಂ ಎಂದು. ಮಾನ್ಯ ಅಧ್ಯಕ್ಷರೇ, ಹಿಂದೆ ಇದ್ದಂಥ ಪರಿಸ್ಥಿತಿ ಏನೆಂದರೆ, ಯಾರು ಬಟ್ಟೆಗಳನ್ನು ತಯಾರು ಮಾಡಿ ಈ ದೇಶದಿಂದ ಹೊರಗಡೆ ಕಳಿಸುವಂಥವರು ಇದ್ದಾರೋ ಅವರಿಗೆ, ಅವರು ಕಳುಹಿಸುವ ಬೆಲೆಯ 10 ಭಾಗದಷ್ಟು ರೇಷ್ಮೆಯನ್ನು ಆಮದು ಮಾಡಿಕೊಳ್ಳುವ ನೀತಿಯಿತ್ತು. ಅದನ್ನು ಕಳೆದ ವರ್ಷ 10 ರಿಂದ 20 ಪರ್ಸೆಂಟ್ ಮಾಡಿದ್ದಾರೆ. ಇದರ ಪ್ರತಿಫಲವೇನು ಎಂದು ಅಂಕಿಅಂಶಗಳನ್ನು ಕೊಡುವುದಕ್ಕೆ ನಾನು ಇಷ್ಟಪಡುತ್ತೇನೆ.

1982-83ರಲ್ಲಿ ಸುಮಾರು 65 ಕೋಟಿ ರೂಪಾಯಿಯಷ್ಟು ರೇಷ್ಮೆ ಎಕ್ಸ್‌ಪೋರ್ಟ್ ಆದರೆ, ಸುಮಾರು 12 ಕೋಟಿ ರೂಪಾಯಿಗಳ ಬೆಲೆಯ 6 ನೂರು ಟನ್ ವಿದೇಶಿ ರೇಷ್ಮೆ ಈ ದೇಶಕ್ಕೆ ಬಂದಿದೆ. ಈ ಪರಿಸ್ಥಿತಿಯನ್ನು ಅರಿತು ಈಗಲಾದರೂ ಅದು ಸರಿಯಾಗದಿದ್ದರೆ ಕಷ್ಟ. ಎರಡನೆಯದಾಗಿ; ಅಡ್ವಾನ್ಸ್ ಲೈಸೆನ್ಸಿಂಗ್ ಸ್ಕೀಂನಲ್ಲಿ ರೇಷ್ಮೆಯನ್ನು ಇಂಪೋರ್ಟ್ ಮಾಡುತ್ತೇವೆ. 250 ಟನ್ ಚೈನಾ ದೇಶದ ರೇಷ್ಮೆಯನ್ನು ಆಮದು ಮಾಡಿಕೊಂಡಿದ್ದೇವೆ. ಆಮದು ಮಾಡಿಕೊಂಡಾಗ, ನಮ್ಮ ದೇಶದ ಎಲ್ಲಾ ರಾಜ್ಯಗಳ ಬೆಳೆಗಾರರು ವಿರೋಧ ಮಾಡಿದರು. ಅದು ಒಂದು ಪಕ್ಷದ ಅಥವಾ ವ್ಯಕ್ತಿಯ ಪ್ರಶ್ನೆಯಲ್ಲ. ಮಾನ್ಯ ಫರ್ನಾಂಡಿಸ್‌ರವರು ಕೇಂದ್ರದ ಕೈಗಾರಿಕಾ ಮಂತ್ರಿಯಾಗಿದ್ದಾಗ ಬಾರ್ಟರ್ ಸಿಸ್ಟಂ ಮೇಲೆ ಹೊಗೆಸೊಪ್ಪು ಕೊಟ್ಟು ನಾವು ರೇಷ್ಮೆಯನ್ನು ಇಂಪೋರ್ಟ್ ಮಾಡುತ್ತೇವೆಂದು ಹೇಳಿದರು. ಅದನ್ನು ಕಟುವಾಗಿ ವಿರೋಧ ಮಾಡಿ ಹೋರಾಟ ಮಾಡಿ ನಿಲ್ಲಿಸಿದ್ದೇನೆ. ಈ 250 ಟನ್ ರೇಷ್ಮೆ ಆಮದು ಮಾಡಿಕೊಳ್ಳುವ ಚೈನಾ ದೇಶದವರು,

ರೇಷ್ಮೆಯನ್ನು 1ಕೆ.ಜಿ.ಗೆ ಕೇವಲ 200 ರೂಪಾಯಿಗೆ ಮಾರಾಟ ಮಾಡುವುದಕ್ಕೆ ಸಿದ್ಧರಾಗಿದ್ದರು. ಅವರ ದೇಶದಲ್ಲಿ ಕೂಡ 100 ರೂಪಾಯಿಗಿಂತ ಅದರ ಬೆಲೆ ಜಾಸ್ತಿಯಿದೆ. ಹಾಗೆಯೇ ವೆಸ್ಟರ್ನ್ ಕಂಟ್ರೀಸ್‌ಗೂ ಜಾಸ್ತಿ ಬೆಲೆಯಲ್ಲಿ ಮಾರಾಟ ಮಾಡುವುದಕ್ಕೆ ಸಿದ್ಧವಾಗಿದ್ದಾರೆ. ಆದರೆ ಭಾರತ ದೇಶಕ್ಕೆ ಮಾತ್ರ ಒಂದು ಕೆ.ಜಿ.ಗೆ ಕೇವಲ 200 ರೂಪಾಯಿಗೆ ಮಾರುತ್ತಿದ್ದಾರೆ. ಏಕೆ? ಇದರ ಅರ್ಥವೇನು? ಚೈನಾ ದೇಶದ ಆಡಳಿತಗಾರರಿಗೆ ಮತ್ತು ಅಲ್ಲಿಯ ಆರ್ಥಿಕ ತಜ್ಞರಿಗೆ ಚೆನ್ನಾಗಿ ಗೊತ್ತಿದೆ. ಏನೆಂದರೆ, ಯಾರು, ಅಂತರರಾಷ್ಟ್ರೀಯ ರೇಷ್ಮೆ ಮಾರುಕಟ್ಟೆಯಲ್ಲಿ ಪ್ರಬಲವಾದಂಥ ಮಾರಾಟಗಾರರು ಇದ್ದರೆ, ಅದು ಭಾರತ ದೇಶ. ಇದನ್ನು ಗಮನ ದಲ್ಲಿಟ್ಟುಕೊಂಡು ಈ ದೇಶದಲ್ಲಿ ಬೆಳೆಯುವಂಥ ಬೈವೊಲ್ಟಿನ ಪ್ರಾಡಕ್ಟ್ ಉತ್ಪಾದನೆಯ ದಮನಕ್ಕಾಗಿ ಅವರು ಈ ರೀತಿ ಮಾರುತ್ತಿದ್ದಾರೆ. ಇದನ್ನು ಕೇಂದ್ರ ಸರ್ಕಾರದವರು ಗಮನಿಸಿದರೆ ಒಳ್ಳೆಯದೆಂದು ನಾನು ಹೇಳುತ್ತೇನೆ. ಇದನ್ನು ನಾನು ಏಕೆ ಹೇಳುತ್ತಿದ್ದೇನೆಂದರೆ , ದುರಾದೃಷ್ಟವಶಾತ್ 1982ನೇ ಇಸವಿಯಲ್ಲಿ ನಾನು ಶಾಸಕನಾಗಿರಲಿಲ್ಲ. ಈ ಒಂದು ದಿಸೆಯಲ್ಲಿ ಸಾಮಾನ್ಯ ಪ್ರಜೆಯಾಗಿ ಈ ಆಮದಿನ ವಿರುದ್ಧದ ಹೋರಾಟದಲ್ಲಿ ವಿಫಲನಾಗಿದ್ದೇನೆ. ಆದರೆ ನನ್ನ ಆಸೆಯಿಷ್ಟೇ. ಈ ಸದನದ ಮೂಲಕ ಒಬ್ಬ ಶಾಸಕನಾಗಿ ಈ ದಿಸೆಯಲ್ಲಿ ಏನಾದರೂ ಸಫಲ ನಾಗುತ್ತೇನೆಯೇ ಎಂಬ ಒಂದು ಉತ್ಕಟವಾದ ಆಕಾಂಕ್ಷೆಯಿದೆ. ಇದರಲ್ಲಿ ನನ್ನ ಸ್ನೇಹಿತರ ಮತ್ತು ವಿರೋಧ ಪಕ್ಷದ ಸ್ನೇಹಿತರ ಸಹಾಯ ಮತ್ತು ಸಹಕಾರವನ್ನು ಸಹ ನಾನು ಬೇಡುತ್ತೇನೆ.

ಇನ್ನು ಈ ಆಮದು ಮಾಡಿಕೊಳ್ಳುವ ನೀತಿಯಲ್ಲಿ ನಮ್ಮ ರಾಜ್ಯದ ರೇಷ್ಮೆ ಬೆಳೆಗೆ ಧಕ್ಕೆಯುಂಟಾಗಿದೆ. ಇದೊಂದು ಅನಿಷ್ಟ ಪರಂಪರೆ. ಈ ದೇಶದ ರೇಷ್ಮೆ ಉತ್ಪತ್ತಿಯಲ್ಲಿ 80 ಭಾಗ ಕರ್ನಾಟಕದ್ದೇ ಉಳಿದದ್ದು ಬೇರೆ ಪ್ರದೇಶಗಳದ್ದು. ಈ ರೇಷ್ಮೆ ಉತ್ಪತ್ತಿ ಮಾಡುವಂತಹ ಜನ ಏನಿದ್ದಾರೆ ಅವರು ಭಾರತದೇಶದಲ್ಲಿ ಕೆಳಗಡೆ ಇದ್ದಾರೆ. ಆದರೆ ರೇಷ್ಮೆ ವ್ಯಾಪಾರವನ್ನು ಮಾಡುವಂಥ ಜನ ಡೆಲ್ಲಿಯಲ್ಲಿದ್ದಾರೆ. ಸಾಮಾನ್ಯ ಬೆಳೆಗಾರನ ಕೂಗು ಡೆಲ್ಲಿಗೆ ಕೇಳಿಸುತ್ತಿಲ್ಲ. ಪಟ್ಟಭದ್ರ ಹಿತಾಸಕ್ತಿಗಳು ದೆಹಲಿಯಲ್ಲಿರುವುದರಿಂದ ಅವರ ಕೂಗು ಕೇಳುತ್ತಿದೆ. ಆದರೆ ಬಡ ಬೆಳೆಗಾರರ ಕೂಗನ್ನು ಯಾರು ಕೇಳುತ್ತಾ ಇಲ್ಲ. ಆದ್ದರಿಂದ ಕೆಲವು ರಾಜಕಾರಣಿಗಳ ಹಿತವನ್ನು ಕಾಪಾಡುವುದಕ್ಕಾಗಿ, ವಾರಣಾಸಿಯ ಕೆಲವು ನೇಯ್ಗೆಗಾರರನ್ನು ಕಾಪಾಡುವುದಕ್ಕಾಗಿ ಕರ್ನಾಟಕದ ಯಾವುದೇ ರಾಜಕಾರಣಿ ಅಥವಾ ಶಾಸಕರು ಅಥವಾ ಮಂತ್ರಿಗಳು ಕಷ್ಟಪಡುತ್ತಿಲ್ಲ. ಈ ಆಮದು ನೀತಿಯನ್ನು ಭಾರತ ಸರ್ಕಾರ ಕೈಬಿಡದಿದ್ದರೆ ನಾವು ಏನು ಮಾಡಬೇಕು? ನಾನು ಆಗಲೇ ಹೇಳಿದ್ದೇನೆ, ಈ ಸದನದ ಹೊರಗಡೆ ಇದ್ದಾಗ ನಾನು ವಿಫಲನಾಗಿದ್ದೇನೆಂದು. 1982ರಲ್ಲಿ ಕರ್ನಾಟಕದ ಪ್ರತಿಯೊಂದು ಶಾಸಕರನ್ನು ಈ ವಿಚಾರದಲ್ಲಿ ಮಾತನಾಡಲು ಆಮಂತ್ರಿಸಿದ್ದೆ. ಆದರೆ ಬಂದಿದ್ದವರು ಕೇವಲ 3 ಜನ ಮಾತ್ರ. ಈ ರಾಜ್ಯದಿಂದ ಆಯ್ಕೆಯಾದಂಥ ಪ್ರತಿಯೊಬ್ಬ ಲೋಕಸಭಾ ಸದಸ್ಯರಿಗೂ ಕೂಡ ಪ್ರತಿಯೊಂದು ಅಂಕಿ- ಅಂಶಗಳನ್ನು ಕೊಟ್ಟು ಕಾಗದ ಬರೆದಿದ್ದೆ.

ಆದರೆ ದುರದೃಷ್ಟವಶಾತ್ ಪಾರ್ಲಿಮೆಂಟ್ ಸದಸ್ಯರಾದ ಶ್ರೀ ಟಿ.ಆರ್. ಶಾಮಣ್ಣನವರು ಮಾತ್ರ ಈ ವಿಷಯವನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಪ್ರಯತ್ನಪಟ್ಟರು.

ಈ 350 ಟನ್ ರೇಷ್ಮೆ ಇಂಪೋರ್ಟ್ ಮಾಡಿಕೊಂಡಾಗ ಸೆಂಟ್ರಲ್ ಗವರ್ನಮೆಂಟ್‌ನವರು, ಭಾರತ ದೇಶದ ಮಾರ್ಕೆಟಿನಲ್ಲಿ ಯಾವಾಗ ರೇಷ್ಮೆ ಬೆಲೆ 450 ರೂಪಾಯಿಗಿಂತ ಜಾಸ್ತಿಯಾದಾಗ ಮಾತ್ರ ಈ ಇಂಪೋರ್ಟೆಡ್ ಸಿಲ್ಕನ್ನು ಮಾರ್ಕೆಟ್‌ಗೆ ಬಿಡಬಹುದೆಂದು ಒಂದು ಕಂಡೀಷನ್ ಹಾಕಿದರು . ಆದರೆ ಇತ್ತೀಚೆಗೆ ಈ ವ್ಯವಸ್ಥೆಯೂ ಬದಲಾವಣೆಯಾಗುವಂತಹ ಪರಿಸ್ಥಿತಿ ನೋಡುತ್ತಿದ್ದೇವೆ. 450 ರೂಪಾಯಿಗಳಿಗಿಂತ ಜಾಸ್ತಿಯಾದಾಗ ಮಾತ್ರ ನೀವು ಇದನ್ನು ರಿಲೀಸ್ ಮಾಡಬೇಕೆಂದು ಮಾಡಿದ್ದು ಆ ಕಂಡೀಷನ್ ವೇವ್ ಮಾಡುವುದಕ್ಕೆ ಈಗ ಪ್ರಯತ್ನ ಪಡುತ್ತಿದ್ದಾರೆಂದು ತಿಳಿದಿದ್ದೇನೆ. ಆದರೆ ಮಂತ್ರಿಯವರು ಈ ದಿಸೆಯಲ್ಲಿ ಆದಷ್ಟು ಜಾಗ್ರತೆ ಈ ರೀತಿ ಮಾಡುವುದನ್ನು ತಪ್ಪಿಸಬೇಕೆಂದು ಹೇಳುತ್ತೇನೆ.

ಇನ್ನು ಈ ರೇಷ್ಮೆ ಆಮದು ಮಾಡಿಕೊಳ್ಳುವುದರಿಮದ ನೇಕಾರರಿಗೆ ಅನುಕೂಲ ವಾಗುತ್ತದೆಯೆಂದು ಹೇಳುತ್ತಿದ್ದಾರೆ. ಇದು ನಿಜವಾಗಿಯೂ ಅಪ್ಪಟ ಸುಳ್ಳು. ಹಿಂದೆ ಒಂದುಸಾರಿ ನನ್ನ ಸ್ನೇಹಿತರು ನೇಕಾರರನ್ನೆಲ್ಲ ಕರೆದುಕೊಂಡು ಮೆರವಣಿಗೆ ಮಾಡಿದರು. ನೇಕಾರರಿಗೆ ಸಿಗುವುದು ಕೇವಲ ಕೂಲಿ ಮಾತ್ರ. ಲಾಭ ಸಿಕ್ಕುವುದು ನೇಯ್ಗೆಯಿಟ್ಟಿರುವ ಮಾಲೀಕರಿಗೆ. ಆದ್ದರಿಂದ ನೇಕಾರರಿಗೆ, ಬೆಳೆಗಾರರಿಗೆ, ರೀಲರ್ಸ್ ಯಾರಿಗೂ ಅನುಕೂಲವಾಗುತ್ತಿಲ್ಲ. ಎಲ್ಲರಿಗೂ ಮೋಸ ಮಾಡುತ್ತಿದ್ದಾರೆ.

ಎರಡನೆಯದಾಗಿ ಈ ರೇಷ್ಮೆಯನ್ನು ಆಮದು ಮಾಡಿಕೊಳ್ಳುವುದು ಬೆಲೆಯನ್ನು ನಿಯಂತ್ರಿಸುವುದಕ್ಕೆಂದು ಹೇಳುತ್ತಿದ್ದಾರೆ. ಇದೂ ಸಹ ಸುಳ್ಳು. ಏಕೆಂದರೆ ಉದ್ಯಮದ ಮೇಲೆ ಇದು ಪ್ರಬಲವಾದಂಥ ಪೆಟ್ಟು ಕೊಡುತ್ತದೆ. ನಮ್ಮಲ್ಲಿ ಈಗ ಸಿಲ್ಕ್‌ಗೇನೂ ಅಭಾವವಿಲ್ಲ. ಬೇಕಾದಷ್ಟು ನಮ್ಮಲ್ಲಿದೆ. ಇದರಿಂದ ಈ ಕಾರಣ ಕೂಡ ಒಳ್ಳೆಯ ಕಾರಣವಲ್ಲ. ಈ ಆಮದು ನೀತಿಯನ್ನು ಕೇಂದ್ರ ಸರ್ಕಾರದವರು ನಿಲ್ಲಿಸಬೇಕೆಂದು ಹೇಳಿ ನನ್ನ ಎಲ್ಲಾ ಮಿತ್ರರ ಸಹಾಯವನ್ನು ಕೇಳಿಕೊಳ್ಳುತ್ತೇನೆ.

ಆಮೇಲೆ ಉತ್ತಮ ಬೆಲೆಯನ್ನು ಒದಗಿಸಿ ಕೊಡುವುದರಲ್ಲಿ ಈ ಕಕೂನ್ ರೇಷ್ಮೆ ಬೆಲೆ ವಿಚಾರವು ಕನಿಷ್ಠ ಬೆಲೆ, ಗರಿಷ್ಠ ಬೆಲೆಯನ್ನು ನಿರ್ಧಾರ ಮಾಡುವುದಕ್ಕೆ ಕೇಂದ್ರ ಸರ್ಕಾರ ಒಂದು ಯೋಜನೆಯನ್ನು ಇಟ್ಟುಕೊಂಡಿದೆ. ಆ ಯೋಜನೆ ಯಾವುದೋ ಕಾರಣಕ್ಕಾಗಿ 'ಫಿಕ್ಸಿಂಗ್ ಆಫ್ ಫೇರ್ ಪ್ರೈಸ್ ಅಂಡ್ ಸೀಲಿಂಗ್ ಪ್ರೈಸ್ ಅದರ ಬಗ್ಗೆ ಬಹಳ ದೀರ್ಘವಾದ ಕಾರಣ ಕೊಟ್ಟಿದ್ದಾರೆ. ಆದ್ದರಿಂದ ಆದಷ್ಟು ಬೇಗ ಕನಿಷ್ಠ ಬೆಲೆಯನ್ನು ನಿಗಧಿಪಡಿಸಬೇಕು. ಗರಿಷ್ಟ ಬೆಲೆಯನ್ನಲ್ಲ.

ಕೊನೆಯದಾಗಿ, ಉತ್ತಮ ಬೆಲೆ ಕೊಡುವ ವಿಚಾರದಲ್ಲಿ, ಈ ಮಾರ್ಕೆಟ್‌ಗಳು ಹೆಚ್ಚಿನ ಪ್ರಾಧಾನ್ಯತೆಯನ್ನು ವಹಿಸಿಕೊಳ್ಳಬೇಕಾಗುತ್ತದೆ. ರಾಮನಗರ ಮಾರ್ಕೆಟ್‌ನ ವಿಷಯದಲ್ಲಿ

ಹೇಳುವುದಾದರೆ, ಇಡೀ ಕರ್ನಾಟಕದಲ್ಲಿ ಎಲ್ಲೂ ಇಲ್ಲದಂಥ ನ್ಯೂನತೆಗಳು ಈ ಮಾರ್ಕೆಟ್‌ನಲ್ಲಿವೆ. ನಾನು ಕಳೆದ ಅಕ್ಟೋಬರ್ 28-29ರಂದು ಯಾರಿಗೂ ಗೊತ್ತಿಲ್ಲದ ಹಾಗೆ ಆ ಮಾರ್ಕೆಟ್‌ನಲ್ಲಿ ಕುಳಿತಿದ್ದೆ ಮತ್ತು ಅಲ್ಲಿ ನಡೆಯತಕ್ಕ ವ್ಯವಹಾರವನ್ನು ನೋಡಿದ್ದೇನೆ.

ಮಾರ್ಕೆಟ್‌ನಲ್ಲಿ ಕುಳಿತಿದ್ದಕ್ಕೆ ನನಗೆ ತಿಳಿದುಬಂದದ್ದು ಏನೆಂದರೆ, ಇಷ್ಟು ಬೆಳೆಯನ್ನು ಬೆಳೆದು ಅದನ್ನು ಹೊತ್ತುಕೊಂಡು ಹೋದ ರೈತನನ್ನು, ಯಾರು ಅದನ್ನು ದೇವರು ಎಂದು ಪೂಜೆ ಮಾಡಿ ತಂದಿರುತ್ತಾರೋ ಅಂತಹ ರೈತರನ್ನು ಅಲ್ಲಿ ಕಾಲುಕಸಕ್ಕಿಂತ ಕೀಳಾಗಿ ಕಾಣುತ್ತಾರೆ. ಇದನ್ನು ದಯವಿಟ್ಟು ತಪ್ಪಿಸಬೇಕು. ನಾನು ಒಬ್ಬ ಬೆಳೆಗಾರನ ಮಗನಾಗಿ ಹೃದಯಾಳದಿಂದ ಬಂದಂತಹ ನೋವಿನಿಂದ ಕೂಡಿದ ಈ ಮಾತನ್ನು ನಿಮಗೆ ಹೇಳುತ್ತಿದ್ದೇನೆ. ಇದನ್ನು ನೀವು ನಿಲ್ಲಿಸದೇ ಹೋದರೆ ಬಹುಶಃ ಯಾವತ್ತಾದರೂ ರೈತರು ಅಧಿಕಾರಿಗಳ ಮೇಲೆ, ಸರ್ಕಾರದ ಮೇಲೆ ತಿರುಗಿಬೀಳ ಬಹುದು. ಆದ್ದರಿಂದ ಇದನ್ನು ಆದಷ್ಟು ಬೇಗ ನಿಲ್ಲಿಸಬೇಕು. ಮಾರುಕಟ್ಟೆಯಲ್ಲಿ ಗೂಡು ಮಾರುವವರೂ ಹೋಗುತ್ತಾರೆ, ಕೊಂಡುಕೊಳ್ಳುವವರೂ ಹೋಗುತ್ತಾರೆ. ಆದರೆ ಈ ಮಧ್ಯವರ್ತಿಗಳನ್ನು ಒಳಗಡೆ ಬಿಡುವುದನ್ನು ಸಂಪೂರ್ಣವಾಗಿ ತಪ್ಪಿಸಿದರೆ, ಈ ಅವ್ಯವಸ್ಥೆ ಖಂಡಿತವಾಗಿಯೂ ಕಡಿಮೆಯಾಗುತ್ತದೆ.

ಇನ್ನು ಬೆಲೆಯನ್ನು ನಿಯಂತ್ರಿಸುವಲ್ಲಿ ಉತ್ತಮ ಬೆಲೆ ಕೊಡುವುದಕ್ಕೆ ಸರ್ಕಾರ ಪ್ರಯತ್ನ ಮಾಡಿದೆ. ಇದಕ್ಕಾಗಿ ನಾನು ಸರ್ಕಾರವನ್ನು ಅಭಿನಂದಿಸುತ್ತೇನೆ. ಕೆ ಎಸ್ ಎಂ ಬಿ ಸಿಲ್ಕ್ ಎಕ್ಸ್‌ಚೇಂಜ್ ಮಾಡಿದ್ದಾರೆ. I congratulate the previous Government for establishing these two institutions as they are safeguarding the interests of the Weavers and also other sections who are engaged in this field. Karnataka Silk Marketing Board - Silk Exchange - They are doing good things. They may be continued and they have to be strengthened.

ಮಾನ್ಯ ಅಧ್ಯಕ್ಷರೇ, ಇನ್ನು ಕೊನೆಯದಾಗಿ, ಒಂದು ವಿಷಯವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಅದು ರೇಷ್ಮೆ ಆಮದು ನೀತಿ. ಈ ರೇಷ್ಮೆ ಆಮದು ನೀತಿಯಿಂದ ಆಗುವಂತಹ ಅನಿಷ್ಟದ ಫಲ ಕೇಂದ್ರ ಸರ್ಕಾರದ ಗಮನಕ್ಕೆ ಬಂದಿದೆಯೆ? ಒಂದು ವೃತ್ತಪತ್ರಿಕೆಯಲ್ಲಿ ಬಂದ ವರದಿಯನ್ನು ನಾನು ತಮ್ಮ ಗಮನಕ್ಕೆ ತಂದು ನನ್ನ ಮಾತನ್ನು ಮುಗಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ. ಇದೇನೋ ಅವರಿಗೆ ಗೊತ್ತಿಲ್ಲದೇ ಇಲ್ಲ. ಗೊತ್ತಿದ್ದರೂ ಕೂಡ ಈ ನೀತಿಯನ್ನು ಮುಂದುವರೆಸಿಕೊಂಡು ಹೋಗಲಿಕ್ಕೆ ಬಹುಶಃ ಅದರಲ್ಲೂ ಕೂಡ ರಾಜಕಾರಣ ಇದೆಯೇ ಎನ್ನುವ ಭಯ ನನಗೆ ಇದೆ.

ಅಂತರಾಷ್ಟ್ರೀಯ ಮಟ್ಟದಲ್ಲಿ ಭಾರತದ ರೇಷ್ಮೆ ಪ್ರಮಾಣ ದಿನೆದಿನೇ ಕುಸಿಯುತ್ತಿರುವ ಓನ್ನೆಲೆಯಲ್ಲಿ ಕೇಂದ್ರ ಸರ್ಕಾರ ರೇಷ್ಮೆ ಬೆಲೆ ನಿಯಂತ್ರಣ ಸಮಿತಿಯನ್ನು ರಚಿಸಿದೆ. ಅಂತರರಾಷ್ಟ್ರ ಮಟ್ಟದಲ್ಲಿ ಭಾರತ ಈಗ ಏಳನೇ ಸ್ಥಾನಕ್ಕೆ ಹೋಗಿರುವ ಓನ್ನೆಲೆಯಲ್ಲಿ ಸರ್ಕಾರ ಈ ಸಮಿತಿಯನ್ನು ರಚಿಸಿದೆ. ರೇಷ್ಮೆ ಬೆಳೆಗಾರರ ಮತ್ತು ನೇಕಾರರ ಹಿತರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು ಕಚ್ಚಾರೇಷ್ಮೆಯ ಕನಿಷ್ಠ ಮತ್ತು ಗರಿಷ್ಟ ಬೆಲೆಯನ್ನು ಶಿಫಾರಸ್ಸು ಮಾಡಬೇಕೆಂದು ಕೇಂದ್ರ ಸರ್ಕಾರ ಈ ಸಮಿತಿಗೆ ಸೂಚಿಸಿದೆ. ಅದರ ಜೊತೆಗೆ ರೇಷ್ಮೆ ಬೆಳೆಗಾರರ ಹಿತಾಸಕ್ತಿಯನ್ನು ಕಾಪಾಡಿಕೊಂಡು ಹೋಗುವಂತೆ ಒಂದು ಸಂಸ್ಥೆಯನ್ನು ಸ್ಥಾಪಿಸಲು ಸಾಧ್ಯವೇ ಎಂಬ ಪ್ರಶ್ನೆಯನ್ನು ಪರಿಶೀಲಿಸಲಾಗುವುದು. ಅನಂತರವೂ ರೇಷ್ಮೆ ಬೆಲೆ ಸ್ಥಿರಗೊಳ್ಳದಿರುವುದನ್ನು ಗಮನಿಸಿರುವ ಕೇಂದ್ರ ಸರ್ಕಾರ ರೇಷ್ಮೆ ಬೇಸಾಯ, ಮಾರುಕಟ್ಟೆ ಮತ್ತು ರಫ್ತು ಈ ಮೂರನ್ನೂ ಪುನರ್ ಪರಿಶೀಲಿಸಲು ಯೋಚಿಸುತ್ತಿದೆ.

That means, the Central Government has perfect knowledge that by importing raw silk, neither they can arrest the price nor can they provide good quality of silk to the manufacturers. ಎಂದರೆ, ಈ ಆಮದು ಮಾಡಿಕೊಳ್ಳುವುದರಿಂದ ಏನೊಂದು ಕೆಟ್ಟ ಪರಿಸ್ಥಿತಿ ನಮಗೆ ಇದೆಯೆಂಬುದನ್ನು ಕೇಂದ್ರ ಸರ್ಕಾರ ಗಮನಿಸಿದೆ. ಆದರೆ ಕೆಲವು ಉತ್ತರ ಪ್ರದೇಶದ ರಾಜಕಾರಣಿಗಳ ಹಿತ ಕಾಪಾಡುವುಕ್ಕೋಸ್ಕರ ಈ ಆಮದು ನೀತಿಯನ್ನು ಬದಲಾಯಿಸುವುದಕ್ಕೆ ಕೇಂದ್ರ ಸರ್ಕಾರ ಹಿಂದೆ ಮುಂದೆ ನೋಡುತ್ತಿದೆ. ವಿರೋಧ ಪಕ್ಷದ ನಾಯಕರಲ್ಲಿ ಒಬ್ಬ ಸಾಮಾನ್ಯ ಬೆಳೆಗಾರನಾಗಿ ನಾನು ಕೇಳಿಕೊಳ್ಳುತ್ತೇನೆ. ಅಲ್ಲಿನವರ ಹಿತರಕ್ಷಣೆಗಾಗಿ ಈ ರಾಜ್ಯದ ಲಕ್ಷಾಂತರ ಬೆಳೆಗಾರರ ಹಿತವನ್ನು ಬಲಿ ಕೊಡುವುದು ಬೇಡ. ಮಾನ್ಯ ವೀರಪ್ಪ ಮೊಯಿಲಿ ಅವರಿಗೆ ಈ ವಿಷಯ ಗೊತ್ತಿದೆ. ಅವರು ತಮ್ಮ ಆತ್ಮ ವಂಚನೆ ಮಾಡಿಕೊಳ್ಳುವುದು ಬೇಡ. They are cheating their own conscience. Central Government is quite aware of the import policy of raw silk and it is definitely a blow to these industries in this country. If they don't stop it, we have to find out the altemative. ಆದ್ದರಿಂದ ಇದರ ಬಗ್ಗೆ ಏನು ಮಾಡಬೇಕೋ ಅದನ್ನು ಮಾಡಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ. ಇಷ್ಟೆಲ್ಲಾ ಹೇಳಿದರೂ ಕೂಡ, ಮಾನ್ಯ ಮೊಯಿಲಿಯವರು ಕೂಡ ಅವರಿಗೆ ಬರೆದಿದ್ದರು. ಮಾನ್ಯ ಗುಂಡೂರಾಯರ ಮಂತ್ರಿಮಂಡಲ ಇದ್ದಾಗ, ನಾನು ಎಷ್ಟು ಪ್ರಬಲವಾಗಿ ವಿರೋಧ ಮಾಡಿದ್ದೆನೋ, ಅಷ್ಟೇ ಪ್ರಬಲವಾಗಿ ಸರ್ಕಾರದವರು ಕೂಡ ಬರೆದಿದ್ದರು. ಈ ವಿಷಯದಲ್ಲಿ ನಾನು ಅವರ ಸರ್ಕಾರವನ್ನು ಅಭಿನಂದಿಸುತ್ತೇನೆ. ನಾನು ಈ ವಿಷಯವನ್ನು ನಮ್ಮ ಮಂತ್ರಿಯವರಿಗೂ ಹೇಳಿದೆ. ಅವರ ಸರ್ಕಾರವನ್ನು ಕೇಳಿಕೊಂಡಾಗಲೂ ಕೂಡ ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಲಿಲ್ಲ. ಇನ್ನು ನಾವು ಕೇಳಿಕೊಂಡರೆ ನಿಲ್ಲಿಸುತ್ತಾರೆಯೇ ಎಂದು ಕೇಳಿದರು.

ಮಂತ್ರಿಗಳು ಇದರ ಬಗ್ಗೆ ಆಮೇಲೆ ಉತ್ತರ ಕೊಡುತ್ತಾರೆ. ಆದರೆ ನನಗೆ ತಿಳಿದ ಹಾಗೆ ಈ ವಿಷಯಕ್ಕಾಗಿ ಅವರು ಒಮ್ಮೆ ಸ್ವತಃ ಡೆಲ್ಲಿಗೆ ಹೋಗಿದ್ದರು. ಮಂತ್ರಿಯಾಗಿ ಏನು ಉತ್ತರ ಕೊಡಬೇಕೋ ಅವರು ಉತ್ತರ ಕೊಡುವಾಗ ಅದನ್ನು ಕೊಡುತ್ತಾರೆ. ಅವರು ಮಂತ್ರಿಯಾದ ಮೇಲೆ ಎಷ್ಟು ಕಾಗದ ಬರೆದಿದ್ದಾರೆಂದು ಅವರು ಹೇಳುತ್ತಾರೆ. ಮಾನ್ಯ ಅಧ್ಯಕ್ಷರೇ, ಈ ವಿಷಯ ನಮ್ಮ ಕೇಂದ್ರ ಸರ್ಕಾರದ ಗಮನಕ್ಕೆ ತಂದು, ಅವರು ನಮ್ಮ ಕೂಗಿಗೆ ಬೆಲೆ ಕೊಡದೇ ಹೋದರೆ ನಾನು ಈ ಸರ್ಕಾರವನ್ನು ಕೇಳಿಕೊಳ್ಳುತ್ತೇನೆ. ಕೋರ್ಟಿನ ಮೂಲಕ ಏನಾದರೂ ಇದನ್ನು ನಿಲ್ಲಿಸಲಿಕ್ಕೆ ಸಾಧ್ಯವೇ ಎಂಬುದನ್ನು ದಯವಿಟ್ಟು ತಾವು ಪರಿಶೀಲಿಸಬೇಕು. By way of writ, can you prevent this import of raw silk? The Reelers should come out to the street. That is the only alternative. ನಮಗೆ ಈ ವಿಷಯದಲ್ಲಿ ಇನ್ನೇನೂ ದಾರಿಯಿಲ್ಲವೆಂದು ಕಾಣುತ್ತದೆ. ಪರಿಸ್ಥಿತಿ ವಿಕೋಪಕ್ಕೆ ಹೋಗುವ ಮೊದಲು ಈ ದೇಶಕ್ಕೆ ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಬೇಕು. ಇನ್ನೊಂದು ವಿಷಯ, ರಾಜಕಾರಣಿಗಳಿಗಿಂತ ಹೆಚ್ಚಾಗಿ ಈ ದೇಶದ ರೇಷ್ಮೆ ಆಮದು ನೀತಿಯನ್ನು ಬಹಳ ಸ್ಪಷ್ಟವಾಗಿ, ನಿರ್ಧಾಕ್ಷಿಣ್ಯವಾಗಿ ವಿರೋಧಿಸಿದವರು ಎಂದರೆ ನಮ್ಮ ಪತ್ರಿಕೆಯವರು. ನನ್ನಲ್ಲಿ ಅವುಗಳ ಪೇಪರ್ ಕಟಿಂಗ್ಸ್ ಇದೆ. ಕೆಲವು ಸಾರಿ ಶಾಸಕರಾಗಿ, ಪ್ರಜಾಪ್ರತಿನಿಧಿಗಳಾಗಿ, ಪ್ರಜೆಗಳ ಹಿತ ರಕ್ಷಣೆ ಮಾಡುವವರು, ಇಂತಹ ವಿಷಯದ ಬಗ್ಗೆ ಹೆಚ್ಚು ಗಮನ ಕೊಡುವುದಿಲ್ಲ. ಪ್ರಜಾವಾಣಿ ಪತ್ರಿಕೆಯಲ್ಲಿ ಸಂಪದಾಕೀಯ ಪ್ರಕಟವಾಗಿದೆ. ಬಹುಶಃ ಮಾನ್ಯ ಅಧ್ಯಕ್ಷರು ಇನ್ನೂ ನಾಲ್ಕೈದು ನಿಮಿಷ ಕೊಟ್ಟರೆ ಅದು ವ್ಯರ್ಥವಾಗುವುದಿಲ್ಲವೆಂದು ತಿಳಿದುಕೊಂಡಿದ್ದೇನೆ. ಅವರು ಸಂಪಾದಕೀಯವನ್ನು ಬಹಳ ಚೆನ್ನಾಗಿ ಬರೆದಿದ್ದಾರೆ. ಬಹುಶಃ ಅನೇಕ ಸಾರ್ವಜನಿಕ ಅಭಿಪ್ರಾಯ ನಿರೂಪಿಸುವುದರಲ್ಲಿ ಪತ್ರಿಕೆಯವರ ಪಾತ್ರ ಅಪಾರವದುದು ಎಂದು ನಾನು ತಿಳಿದುಕೊಂಡಿದ್ದೇನೆ. ಅದನ್ನು ಇಲ್ಲಿ ಓದಲಿಕ್ಕೆ ತಮ್ಮ ಅಪ್ಪಣೆಯನ್ನು ಕೇಳುತ್ತೇನೆ.

## ರೇಷ್ಮೆ ಬಿಕ್ಕಟ್ಟು

**ರೇಷ್ಮೆ ಬೆಲೆ ಏರಿ ಪೀತಾಂಬರ ಪೇಟೆ ಪುನಃ ಬಿಕ್ಕಟ್ಟಿಗೆ ಸಿಕ್ಕಿದೆ. ಇದೇ ನೆಪದಿಂದ ಅನೇಕ ಮಗ್ಗಗಳು ನಿಷ್ಕ್ರಿಯವಾಗಿವೆ. ಪರಿಣಾಮ ಬಡ ನೇಕಾರನಿಗೆ ಉಪವಾಸ. ಅವನಿಗೆ ಅನ್ನ ದೊರಕಿಸಿ ಕೊಡುವ ಸೋಗು ಹಾಕಿ ಹಲವು ರಾಜಕಾರಣಿಗಳೂ ಈಗ ಮುಂದಾಳುತನ ವಹಿಸಲು ಬೀದಿಗೆ ಇಳಿದ್ದಾರೆ. ಆದರೆ ರೇಷ್ಮೆ ಧಾರಣೆ ಇಳಿದರೆ ನೇಕಾರನ ದಿನಗೂಲಿಯೇನೂ ಏರುವುದಿಲ್ಲವೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ರೇಷ್ಮೆ ಧಾರಣೆ ಏರುಪೇರಾದರೆ ಅದರ ಲಾಭ ಪಡೆಯುವ ಕುಳಗಳೇ ಬೇರೆ. ಆ ಪಟ್ಟಭದ್ರಹಿತಗಳೇ ಕೂಲಿಕಾರರನ್ನು ಮುಂದೆ ಮಾಡಿಕೊಂಡು ಸಾರ್ವಜನಿಕರ ಮತ್ತು ಸರ್ಕಾರದ ಸಹಾನುಭೂತಿಗಳಿಸಲು ಯತ್ನಿಸಿರುವ ವದಂತಿಗಳಿವೆ. ಆ ವದಂತಿಗಳು ಏನೇ ಇರಲಿ, ನ್ಯಾಯ ಬೆಲೆಯಲ್ಲಿ ರೇಷ್ಮೆ ದೊರೆಯಬೇಕೆಂಬ ಬೇಡಿಕೆ ನ್ಯಾಯಸಮ್ಮತವೇ. ರೇಷ್ಮೆ ಬೆಲೆಯನ್ನು ಇಳಿಸಲು ರೇಷ್ಮೆಯನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಬೇಕೆಂಬ ಬೇಡಿಕೆಕೂಡ ಈಗ ಕೇಳಿಬರುತ್ತಿದೆ.**

**ವಿದೇಶಿ ರೇಷ್ಮೆ ಮಾರುಕಟ್ಟೆಗೆ ಬಂದರೆ, ಸ್ವದೇಶೀ ರೇಷ್ಮೆ ಬೆಲೆ ಇಳಿಯುವುದೊಂದೇ ಅಲ್ಲ. ಅದರ ಉತ್ಪಾದನೆ ಮೂಲಕ್ಕೇ ಅದು ಕೊಡಲಿ ಪೆಟ್ಟಾಗಲಿದೆ ಯೆಂಬುದರಲ್ಲಿ ಸಂಶಯವಿಲ್ಲ. ಯಾವುದೇ ಕಾರಣದಿಂದ ರೇಷ್ಮೆ ಆಮದು ಸಲ್ಲದು.**

ನ್ಯಾಯ ಬೆಲೆಯಲ್ಲಿ ರೇಷ್ಮೆಯನ್ನು ನೇಕಾರರಿಗೆ ನೇರವಾಗಿ ಸರಬರಾಜು ಮಾಡಲು ಸರ್ಕಾರ ಪರಿಶೀಲಿಸಬಹುದು. ಕಚ್ಚಾ ಮಾಲನ್ನು ಒದಗಿಸಿದ ಬಳಿಕ ಸರ್ಕಾರ ಅದರಿಂದ ಉತ್ಪಾದನೆಯಾದ ಉತ್ಪನ್ನಗಳನ್ನು ನ್ಯಾಯ ಬೆಲೆಗೆ ಕೊಳ್ಳಲು ಕೂಡ ಪರಿಶಿಲಿಸಬಹುದು. ಅದನ್ನು ಬಿಟ್ಟು ದೇಶೀಯ ರೇಷ್ಮೆ ಕೃಷಿ-ಕೈಗಾರಿಕೆಗೆ, ಮಾರಕವಾಗುವ ರೇಷ್ಮೆ ಆಮದಿಗೆ ಕೈಹಾಕುವ ಮೊದಲು, ಅದರ ಫಲಾಫಲಗಳನ್ನು ಕೂಲಂಕುಷವಾಗಿ ವಿಚಾರ ಮಾಡಬೇಕಾದುದು ಅನಿವಾರ್ಯ.

ಈ ತರಹ ಅನೇಕ ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತರಬೇಕಾದ್ದು ಇದೆ. ಎಲ್ಲಾ ಸಮಸ್ಯೆಗಳನ್ನು ನಮ್ಮ ಮಂತ್ರಿಗಳ ಗಮನಕ್ಕೆ ಈಗಾಗಲೇ ಸಾಕಷ್ಟು ತಂದಿದ್ದೇನೆ. ಮುಂದೆಯೂ ತರುವುದಕ್ಕೆ ಪ್ರಯತ್ನ ಮಾಡುತ್ತೇನೆ. ಸದನದಲ್ಲಿ ಈ ಒಂದು ಉದ್ಯಮದ ಬಗ್ಗೆ ಬಹಳ ಕಾಲ ಮಾತನಾಡಿದ್ದೇನೆ. ಕೊನೆಯದಾಗಿ ಮೊನ್ನೆ ಈ ಸದನದಲ್ಲಿ ಮುಧೋಳ್‌ನಲ್ಲಿ ಕಟ್ಟಬೇಕಾಗಿದ್ದಂತಹ ಮಾರುಕಟ್ಟೆಯನ್ನು ಹುಲಿಯೂರುದುರ್ಗಕ್ಕೆ ಬದಲಾವಣೆ ಮಾಡಿದ್ದರ ಬಗ್ಗೆ ಸ್ವಲ್ಪ ಗೊಂದಲವಾಯಿತು. ದಾವಣಗೆರೆಯಲ್ಲಿ 59 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಮಾರುಕಟ್ಟೆಯನ್ನು ಕಟ್ಟಿದ್ದೇವೆ. ಅಲ್ಲಿ ಒಬ್ಬ ಕೊಂಡುಕೊಳ್ಳುವ ಅಧಿಕಾರಿಯೂ ಇದ್ದಾರೆ. ಆದರೆ ಆ ಭಾಗದ ಜನರು ರೇಷ್ಮೆ ಗೂಡನ್ನು ಮಾರುವುದಕ್ಕೆ ರಾಮನಗರಕ್ಕೆ ಬರುತ್ತಾರೆ. ಅದೇ ರೀತಿ ಕೊಳ್ಳೆಗಾಲದಲ್ಲಿ 9 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಮಾರುಕಟ್ಟೆಯನ್ನು ಕಟ್ಟಿದ್ದಾರೆ. ಅಲ್ಲೂ ಕೂಡ ಕೊಂಡುಕೊಳ್ಳುವ ಅಧಿಕಾರಿ ಇದ್ದಾನೆ. ಆದರೂ ಕೊಳ್ಳೆಗಾಲದಲ್ಲಿ ಬೆಳೆದಂತಹ ಗೂಡು ಮಾರಾಟವಾಗಲು ರಾಮನಗರಕ್ಕೆ ಬರುತ್ತದೆ. ಅದೇ ರೀತಿ ಮಂಡ್ಯದಲ್ಲಿ ಮಾರುಕಟ್ಟೆಯನ್ನು ಕಟ್ಟಿದ್ದೇವೆ. ಆ ಭಾಗದ ಜನರು ಕೂಡ ರಾಮನಗರಕ್ಕೆ ಗೂಡನ್ನು ತರುತ್ತಾರೆ. ಕಾರಣ ಇಷ್ಟೇ, ರೇಷ್ಮೆ ಮಾರುಕಟ್ಟೆಯನ್ನು ನಿರ್ಮಾಣ ಮಾಡುವುದಕ್ಕೆ ಕೆಲವು ನೀತಿ ನಿಯಮಗಳು ಇವೆ. Number one is, there must be a producer and number. Two is, there must be a purchaser. ದಾವಣಗೆರೆಯಲ್ಲಿರುವ ಮಾರುಕಟ್ಟೆಯಲ್ಲಿ ಗೂಡನ್ನು ಕೊಂಡುಕೊಳ್ಳುವವರು ಯಾರೂ ಇಲ್ಲ. ಮುಧೋಳ್‌ನಲ್ಲಿ ಕಾಟನ್ ರಿಸರ್ಚ್‌ನ ಮಾರುಕಟ್ಟೆಯನ್ನು ಬೇಕಾದರೆ ತೆಗೆಯಿರಿ. ಅದಕ್ಕೆ ನನ್ನ ಅಭ್ಯಂತರವಿಲ್ಲ. ಹುಲಿಯೂರುದುರ್ಗಕ್ಕೆ ರೇಷ್ಮೆ ಗೂಡಿನ ಮಾರುಕಟ್ಟೆ ಬೇಕು. ಅದೇ ರೀತಿ ಮುಧೋಳ್‌ಗೆ ಕಾಟನ್ ಮಾರುಕಟ್ಟೆ ಬೇಕು. ರೇಷ್ಮೆ ಮಾರುಕಟ್ಟೆಯನ್ನು ಕಟ್ಟಿದಾಕ್ಷಣ ವ್ಯಾಪಾರವಾಗುತ್ತದೆ ಎಂದರೆ ಅಲ್ಲಿ ಆಗುವುದಿಲ್ಲ. ಅಲ್ಲಿ ಕೊಂಡುಕೊಳ್ಳುವವರು ಇರಬೇಕಾಗುತ್ತದೆ.

ಆ ದೃಷ್ಟಿಯಿಂದ ಅವಶ್ಯಕತೆ ಹಾಗೂ ಅನಾವಶ್ಯಕತೆ ಎಂಬುದಾಗಿ ಪದಪ್ರಯೋಗ ಮಾಡಿದ್ದು. ನನ್ನ ಕ್ಷೇತ್ರ ಇನ್ನೊಬ್ಬರ ಕ್ಷೇತ್ರ ಎಂದು ಅಲ್ಲ. ಅಲ್ಲಿ ರೇಷ್ಮೆ ಗೂಡು ಹೆಚ್ಚಿಗೆ ಬರುತ್ತದೆ.

ಅದೇ ರೀತಿ ಎಲ್ಲಿ ಹೆಚ್ಚಿಗೆ ಗೂಡನ್ನು ಕೊಂಡುಕೊಳ್ಳುವವರು ಬರುತ್ತಾರೋ ಅಂತಹ ಕಡೆ ಮಾರುಕಟ್ಟೆಯ ಅವಶ್ಯಕ ಇದೆ. ಈ ಎರಡು ಅನುಕೂಲಗಳು ಇಲ್ಲದ ಕಡೆ ಮಾರುಕಟ್ಟೆಯನ್ನು ನೀಡುವುದು ಅನಾವಶ್ಯಕ. ಆ ದೃಷ್ಟಿಯಿಂದ ನಾನು ಹೇಳಿದ್ದು ಎಂಬುದಾಗಿ ವಿವರಣೆ ಕೊಟ್ಟಿದ್ದೇನೆ. ಕೊನೆಯದಾಗಿ, ಈ ಉದ್ಯಮ ಬಹಳ ಪ್ರಾಮುಖ್ಯತೆಯನ್ನು ಹೊಂದಿರುವುದಕ್ಕೆ ಕಾರಣ ಇಷ್ಟೇ. ಒಂದು ವರ್ಷದಲ್ಲಿ ಎರಡು ಸಾರಿ ಮಳೆ ಬಿದ್ದರೆ ಉಪ್ಪುನೇರಳೆ ಕಡ್ಡಿ ಹೋಗುವುದಿಲ್ಲ. ನಾವು ನೋಡುತ್ತಿರುವ ಹಾಗೆ ಪ್ರತಿ ವರ್ಷ ಬರ ಬರುತ್ತಿದೆ. ಅದನ್ನು ಡೈವರ್ಟ್ ಮಾಡುವುದಕ್ಕಾಗಿ ಜನರು ಹೆಚ್ಚು ರೇಷ್ಮೆ ಉದ್ಯಮವನ್ನು ಅವಲಂಬಿಸಿದ್ದಾರೆ. It is really a scheme proned against the drought. ಇಷ್ಟು ವಿಚಾರಗಳನ್ನು ಸರ್ಕಾರದ ಗಮನಕ್ಕೆ ತರುತ್ತಾ ಇಷ್ಟು ಸಮಯ ಮಾತನಾಡುವುದಕ್ಕೆ ಅವಕಾಶ ಮಾಡಿಕೊಟ್ಟಂತಹ ತಮಗೂ ಹಾಗು ಕುಳಿತು ಕೇಳಿದಂತಹ ಮಾನ್ಯ ಸದಸ್ಯರಿಗೂ ನಮಸ್ಕಾರ ಮಾಡಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ○

(17-9-1983)

# ಕೃಷಿ ಮತ್ತು ನೀರಾವರಿ

ಮಾನ್ಯ ಅಧ್ಯಕ್ಷರೇ, ಭಾರತದೇಶದಲ್ಲಿ ವ್ಯವಸಾಯ ಬಹಳ ಪ್ರಧಾನವಾದುದು. ಈ ದೇಶದಲ್ಲಿ ವ್ಯವಸಾಯಗಾರನಿಗೆ ನೀರಿನ ಪ್ರಾಮುಖ್ಯತೆ, ನೀರಿನ ಅವಶ್ಯಕತೆ ಎಷ್ಟು ಇರಬೇಕೋ ಅಷ್ಟು ಇಲ್ಲ ಅನ್ನುವುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ. ವ್ಯವಸಾಯದಾರನಿಗೆ ಉತ್ತಮ ಬೀಜ ಮತ್ತು ಉತ್ತಮವಾದ ಗೊಬ್ಬರ ಕೊಟ್ಟರೂ ಕೂಡ ಅವನಿಗೆ ನೀರು ಇಲ್ಲದೇ ಹೋದರೆ, ನೀರನ್ನು ಸಾಕಷ್ಟು ಒದಗಿಸದೇ ಹೋದರೆ ಅವನ ಬೆಳೆಯೆಲ್ಲಾ ಹಾಳಾಗಿ ಹೋಗುತ್ತದೆ. ಇಂಥಾ ಒಂದು ದಾರುಣ ಪರಿಸ್ಥಿತಿಯನ್ನು ನಾವು ಪ್ರತಿವರ್ಷವೂ ನೋಡುತ್ತಾ ಇದ್ದೇವೆ. ಈ ಒಂದು ಪರಿಸ್ಥಿತಿಯನ್ನು ನೀಗಲಿಕ್ಕಾಗಿ ಕಾವೇರಿ ನದಿ ಮತ್ತು ಹೇಮಾವತಿ ನದಿಗೆ ಅಣೆಕಟ್ಟನ್ನು ಕಟ್ಟುವ ಒಂದು ಯೋಜನೆಯನ್ನು ಸುಮಾರು 1968ರಲ್ಲಿ ಪ್ರಾರಂಭಮಾಡಿ 1980ರಲ್ಲಿ ಮುಗಿಸಿದರು. ಈ ಒಂದು ಯೊಜನೆಗೆ ಇವೊತ್ತಿನ ವೆಚ್ಚ 386 ಕೋಟಿ ರೂಪಾಯಿಗಳು. ಈ ಒಂದು ಯೋಜನೆಯ ಪ್ರಕಾರ 6 ಲಕ್ಷ 55 ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸಿ ರೈತನ ಒಂದು ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಬೇಕಾಗಿತ್ತು. ರೈತನಿಗೋಸ್ಕರ ಈ ಒಂದು ಯೊಜನೆಯನ್ನು ರೂಪಿಸಲಾಯಿತು.

ಇದು 1968ರಲ್ಲಿ ಮೊದಲು ಪ್ರಾರಂಭಮಾಡಿದರೂ ಕೂಡ, 1973ನೇ ಇಸವಿಗೆ ತುಮಕೂರು ಜಿಲ್ಲೆಯ ಗುಬ್ಬಿ, ತಿಪಟೂರು, ತುಮಕೂರು ಮತ್ತು ಕುಣಿಗಲ್ ಇದರ ಜೊತೆಗೆ ಮಂಡ್ಯ ಜಿಲ್ಲೆಯ ಯಾವಾಗಲೂ ಬರಗಾಲ ಇರುವ ನಾಗಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು. ಇದು ದುರಾದೃಷ್ಟವೋ ಅದೃಷ್ಟವೋ ನನಗೆ ಗೊತ್ತಿಲ್ಲ. 1973ನೇ ಇಸವಿಗೆ ಆ ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನ ತೆಗೆದುಕೊಂಡಿದ್ದರೂ ಕೂಡ ಈ ಸ್ಥಳಗಳಿಗೆ ನೀರನ್ನು ಒದಗಿಸಲಿಲ್ಲ. ಅಷ್ಟೇ ಅಲ್ಲ, ಬಾಗೂರು-ನವಿಲೆ ಸುರಂಗ ಮಾರ್ಗವನ್ನೂ ಸಹ ತೋಡುವ ಕೆಲಸವನ್ನೂ ಸಹ 1979ನೇ ಇಸವಿಯವರೆಗೂ ಮಾಡಲಿಲ್ಲ. ಈ ರೀತಿಯಾಗಿ ಇದುವರೆಗೆ ಈ ಯೋಜನೆಯಲ್ಲಿ ಹಿಡಿದಿಟ್ಟಿರುವ ನೀರನ್ನು ಉಪಯೋಗಿಸಿಕೊಳ್ಳದೇ ಇರುವುದು ನಮ್ಮ ದುರಾದೃಷ್ಟಕರ ಎಂದು ಹೇಳಬೇಕಾಗಿದೆ.

ಈ ಪರಿಸ್ಥಿತಿಯನ್ನು ನಾವು ನೋಡಿದಾಗ ಈ ಬಗ್ಗೆ ತೀರ್ಮಾನ ತೆಗೆದೊಂಡು 6 ವರ್ಷವಾದರೂ ಕೂಡ ಈ ಬಾಗೂರು-ನವಿಲೆ ಸುರಂಗ ಮಾರ್ಗವನ್ನು ಇದುವರೆಗೂ ಏತಕ್ಕೆ ಮಾಡಲಿಲ್ಲ? ಈ ಬಗ್ಗೆ ಹಿಂದಿನ ಸರ್ಕಾರವೇ ಆಗಲಿ, ಯಾವ ಸರ್ಕಾರವೇ ಆಗಲಿ, ಇವೊತ್ತಿನ ದಿವಸ ಇದಕ್ಕೆ ಉತ್ತರ ಹೇಳಬೇಕು ಎಂದು ನಾನು ಬಯಸುತ್ತೇನೆ. ಲಕ್ಷಾಂತರ ಜನರ ರೈತರ ಪರವಾಗಿ ನಾನು ಈ ಮಾತನ್ನು ಕೇಳುತ್ತಿದ್ದೇನೆ. ಈ ಅವಧಿಯಲ್ಲಿ ಈ ಕೆಲಸ ಮಾಡದೇ

ಇರುವುದರಿಂದ ನನಗೆ ಅಪಾರವಾದ ದುಃಖವಾಗುತ್ತದೆ. 6 ಲಕ್ಷದ 55 ಸಾವಿರ ಎಕರೆಗೆ ನಿರು ಒದಗಿಸುವಂಥಾ ಈ ಯೋಜನೆಯನ್ನು ಯಾಕೆ ರೂಪಿಸಲಿಲ್ಲ? ಎಂದು ಅಧಿಕಾರ ಸ್ಥಾನದಲ್ಲಿರುವವರನ್ನು ನಾವು ಕೇಳಬೇಕಾಗಿದೆ. ಮತ್ತು ಅಧಿಕಾರ ಮಾಡಬೇಕು ಎಂದು ಬುಡಬುಡಿಕೆ ಹೊಡೆದುಕೊಂಡು ತಿರುಗಾಡುತ್ತಾ ಇರತಕ್ಕಂಥಾ ರಾಜಕಾರಣಿಗಳನ್ನು ನಾನು ಪ್ರಶ್ನೆ ಮಾಡುತ್ತೇನೆ. ಮೊದಲು 6 ಲಕ್ಷ 55 ಸಾವಿರ ಎಕರೆಗೆ ನೀರನ್ನು ಕೊಟ್ಟು ಉಳಿದ 5 ಲಕ್ಷ 75 ಸಾವಿರ ಎಕರೆಗೆ ನೀರನ್ನು ಕೊಡುವ ಹಾಗೆ ಯೋಜನೆಯನ್ನು ರೂಪಿಸಿದ್ದಾರೆ. ಅವರು ಅಧಿಕಾರದಲ್ಲಿರುವಾಗ ಈ ಒಂದು ಯೋಜನೆಯನ್ನು ರೂಪಿಸಲು ಅಧಿಕಾರ ಚಲಾಯಿಸಿದಂಥಾ ರಾಜಕಾರಣಿಗಳು ಏನು ಇದ್ದಾರೆ, ಆ ಕಾಲದಲ್ಲೇ ಅವರು ಏನೂ ಮಾಡಲಿಲ್ಲ. ಇಂದಿನ ಪರಿಸ್ಥಿತಿ ನೋಡಿದರೆ ಇನ್ನು 10 ವರ್ಷವಾದರೂ ಕೂಡ ಈ ಕಾಲುವೆ ಕೆಲಸಗಳು ಮುಗಿಯುವುದಕ್ಕೆ ಸಾಧ್ಯವಾಗುವುದಿಲ್ಲ. 1980ನೇ ಇಸವಿಯಲ್ಲಿ ಪ್ರಾರಂಭ ಮಾಡಿದರೂ ಇನ್ನೂ ಮುಗಿದಿಲ್ಲ. 1990ನೇ ಇಸವಿಯಾದರೂ ಮುಗಿಯುವುದಿಲ್ಲ. ಇಲ್ಲಿ 1980ನೇ ಇಸವಿಯಿಂದ 1990ನೇ ಇಸವಿಯವರೆಗೆ 5 ಲಕ್ಷ 90 ಸಾವಿರ ಎಕರೆಗೆ ನೀರು ಕೊಟ್ಟಿದ್ದರೆ ಎಷ್ಟು ಬೆಳೆಯುತ್ತಿತ್ತು ಅನ್ನುವುದನ್ನು ಲೆಕ್ಕಾಚಾರ ಹಾಕಿ ನೋಡಿದರೆ, ಎಷ್ಟು ಉತ್ಪನ್ನ ನಷ್ಟವಾಗಿದೆ ಅನ್ನುವುದನ್ನು ತಿಳಿದುಕೊಳ್ಳಬಹುದು.

ಅದರಿಂದ ಬರುವ ಆದಾಯ ಎಷ್ಟು? ಇದರಿಂದ ದೇಶದ ಬೊಕ್ಕಸಕ್ಕೆ ಬರುತ್ತಿದ್ದಂಥ ಹಣ ಎಷ್ಟು? ರೈತನ ಕಣಜಕ್ಕೆ ಹಾನಿಮಾಡಿದಂಥ ಅಧಿಕಾರಿಯಾಗಲೀ, ಸರ್ಕಾರವಾಗಲೀ ಚಡ್ಡಿಯ ಬಡ ರೈತನ ಶಾಪಕ್ಕೆ ತುತ್ತಾಗದೇ ಇರುವುದಿಲ್ಲ. ಇವತ್ತು ಕಟ್ಟೆಯಲ್ಲಿ 5 ಲಕ್ಷ 90 ಸಾವಿರ ಎಕರೆಗೆ ಬೇಕಾಗುವಷ್ಟು ನೀರು ಇದೆ. ಇಂಥ ಒಂದು ಕೆಟ್ಟ ವ್ಯವಸ್ಥೆಯನ್ನು ಮಾಡಿದವರು ಯಾರೇ ಇರಲಿ; ಜನತಾ ಸರ್ಕಾರದವರಿರಲಿ; ತುತ್ತು ಅನ್ನ ಇಲ್ಲದೇ ನರಳುತ್ತಿರುವ ಬಡ ರೈತನ ಶಾಪಕ್ಕೆ ಗುರಿಯಾಗುತ್ತೀರೆಂದು ಖಡಾಖಂಡಿತವಾಗಿ ಹೇಳುತ್ತೇನೆ. ಇದಕ್ಕೆ ರಾಜಕೀಯ ಬಣ್ಣವನ್ನು ಕೊಡುವುದು ಬೇಡ. ಉಳಿದಿರುವಂಥ ನೀರನ್ನು ಉಪಯೋಗಿಸಿಕೊಳ್ಳುವ ದಿಸೆಯಲ್ಲಿ ಸೂಕ್ತ ಕ್ರಮವನ್ನು ಮಾನ್ಯ ಮಂತ್ರಿಗಳು ಕೈಗೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಸ್ವಾಮಿ, ಮಾನ್ಯ ಮಂತ್ರಿಯವರು ನಮ್ಮನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿದ್ದರು. ತುಮಕೂರು ಜಿಲ್ಲೆಗೆ ನೀರು ಕೊಡುವುದಕ್ಕೆ ನಿಧಾನವಾಗಿರುವುದಕ್ಕೆ ಕಾರಣ ಏನು ಎನ್ನುವುದನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದರು. ಬಹಳ ಪ್ರಮುಖವಾದ ಕಾರಣ ಬಾಗೂರು-ನವಿಲೆ ಸುರಂಗ ಮಾರ್ಗದ ಉದ್ದ ಸುಮಾರು 9 ಕಿಲೋಮೀಟರುಗಳು. ಸುರಂಗ ಮಾರ್ಗದ ಕೆಲಸ ಮಾಡಬೇಕೆಂದು ತೀರ್ಮಾನವಾದುದು 1973ರಲ್ಲಿ; ಕೆಲಸ ಪ್ರಾರಂಭವಾದುದು 1979ರಲ್ಲಿ. 1979ರಿಂದ ಇಲ್ಲಿಯವರೆಗೆ 1,300 ಮೀಟರ್ ಕೆಲಸ ಮಾತ್ರ ಆಗಿದೆ. ಶೇಕಡ 50 ಭಾಗದ ಕೆಲಸ ಕೂಡ ಆಗಿಲ್ಲ. ತುಮಕೂರು ಜಿಲ್ಲೆಗೆ ನೀರು ಕೊಡಬೇಕೇ? ಕೊಡಬಾರದೇ? ಕೊಡಲೇಬಾರದು ಎನ್ನುವ ಪ್ರಶ್ನೆಯನ್ನೂ ರಾಜಕಾರಣಿಗಳು ಎತ್ತಿದ್ದಾರೆ. ಸುರಂಗ ಮಾರ್ಗದ ಕೆಲಸ

ನಿಧಾನವಾಗಿರುವುದಕ್ಕೆ ನಿಜವಾದಂಥ ಕಾರಣ ಏನು ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ನಾನು ತಿಳಿಯ ಬಯಸುತ್ತೇನೆ. ತುಮಕೂರು ಜಿಲ್ಲೆಯ ಕೆಲವರು ಪ್ರತಿಭಾವಂಥ ದೊಡ್ಡ ರಾಜಕಾರಣಿಗಳ ಪ್ರಕಾರ, ಶ್ರೀಮಾನ್ ದೇವೇಗೌಡರು ಹಾಸನ ಜಿಲ್ಲೆಯವರು; ಹಾಸನ ಜಿಲ್ಲೆಯ ರೈತರಿಗೆ ಅನುಕೂಲ ಮಾಡಿಕೊಡಲು; ತುಮಕೂರು ಜಿಲ್ಲೆಯ ರೈತರಿಗೆ ದ್ರೋಹ ಮಾಡುತ್ತಿದ್ದಾರೆ. ಅದಕ್ಕಾಗಿ ಸುರಂಗ ಮಾರ್ಗದ ಕೆಲಸವನ್ನು ನಿಧಾನ ಮಾಡುತ್ತಿದ್ದಾರೆ. ಬೇಕೆಂದೆ ಕೆಲಸ ಸ್ಥಗಿತಗೊಳಿಸಿದ್ದಾರೆ; ಆದ್ದರಿಂದ ಜಿಲ್ಲೆಯಾದ್ಯಂತ ರೈತರು ಹೋರಾಟ ಮಾಡಬೇಕು ಶ್ರೀಮಾನ್ ದೇವೇಗೌಡರನ್ನು ಮಂತ್ರಿ ಪದವಿಯಿಂದ ಕಿತ್ತುಹಾಕಬೇಕು ಎನ್ನುವ ಆಪಾದನೆ ಯನ್ನು ಮಾಡುತ್ತಿದ್ದಾರೆ.

ನಾನು ಒಬ್ಬ ರಾಜಕಾರಣಿ ಎನ್ನುವುದನ್ನು ಮಾನ್ಯ ಬೈರಪ್ಪಾಜಿಯವರು ಮರೆಯ ಬಾರದು. ಚುನಾವಣೆ ಹತ್ತಿರ ಬಂದಾಗ ಬುಡಬುಡಿಕೆ ಆಡಿಸಿಕೊಂಡು ನಾನು ಹೋಗುತ್ತೇನೆ. ಸೂರ್ಯಚಂದ್ರರ ಬೆಳಕು ಎಷ್ಟು ಸತ್ಯವೋ, ಅಷ್ಟೇ ಸತ್ಯ ನಾನು ಒಬ್ಬ ರಾಜಕಾರಣಿ ಎನ್ನುವುದು. ಯಾವುದೇ ಒಬ್ಬ ವ್ಯಕ್ತಿಯಾಗಲಿ, ಗುಂಪಿಗಾಗಲಿ ಕುರಿತು ನಾನು ಮಾತನಾಡುತ್ತಿಲ್ಲ. ಸ್ವಾಮಿ, ಬಾಗೂರು-ನವಿಲೆ ಸುರಂಗ ಮಾರ್ಗದ ಕೆಲಸ ನನ್ನ ಮಿತ್ರರು ಹೇಳಿದಂತೆ ನಿಧಾನವಾಗಿದ್ದರೆ; ನಿಧಾನವಾಗಿರುವುದಕ್ಕೆ ಅವರು ಹೇಳಿರತಕ್ಕಂಥ ಕಾರಣ ಇದ್ದರೆ, ದಯವಿಟ್ಟು ಆ ಕೆಲಸವನ್ನು ಆದಷ್ಟು ಜಾಗ್ರತೆ ಮುಗಿಸಿ; ತುಮಕೂರು ಜಿಲ್ಲೆಯ ಬಡ ರೈತನ ಜಮೀನಿಗೆ ನೀರು ಕೊಡಿಸಿ, ಒಳ್ಳೆಯ ಹೆಸರು ಪಡೆಯಿರಿ ಎಂದು ಹೇಳುತ್ತೇನೆ. ಸುರಂಗದ ಕೆಲಸವನ್ನು ಚುರುಕಾಗಿ ಮಾಡುವುದಕ್ಕೆ ಸಾಧ್ಯವಿಲ್ಲ; ಬಲವಾದಂಥ ಭೂಮಿ ಸಿಗದೆ ಜಿಯಾಲಿಜಕಲ್ ಪಾರ್ಟ್ಸ್ ಸಿಕ್ಕಿದ್ದರಿಂದ ನಿಧಾನವಾಗುತ್ತಿದೆ ಎನ್ನುವ ಕಾರಣ ಹೇಳುತ್ತಿದ್ದೀರಿ; ನನ್ನ ಹತ್ತಿರ ಸಂಪೂರ್ಣ ಮಾಹಿತಿ ಇಲ್ಲ. 10 ಕೋಟಿ ರೂಪಾಯಿ ವೆಚ್ಚದ ಹಾರಿಸಾಂಟಲ್ ಬೋರ್ಟ್ ತರಿಸಿ, ಶೀಘ್ರವಾಗಿ ಕೆಲಸವನ್ನು ಮುಗಿಸಬೇಕೆಂದು ಹೇಳುತ್ತೇನೆ. 10 ಕೋಟಿ ರೂಪಾಯಿ ಖರ್ಚು ಮಾಡಿತಂದರೆ ನಮ್ಮ ರಾಜ್ಯಕ್ಕೆ ಕೆಲಸ ಮಾಡಿಸಿಕೊಡುವುದಲ್ಲದೆ; ಪಕ್ಕದ ರಾಜ್ಯಗಳಿಗೂ ಅದನ್ನು ಕೊಡಬಹುದು.

1980ರಲ್ಲಿ ಕೆಲಸ ಮುಗಿದರೂ ಇವತ್ತಿನವರೆಗೂ ರೈತರ ಜಮಿನಿಗೆ ನೀರು ಕೊಡುವುದಕ್ಕಾಗಿಲ್ಲ. ಹಿಂದಿನ ಸರ್ಕಾರದ ಪ್ರಕಾರ, ಸುರಂಗದ ಕೆಲಸ ಮುಗಿದ ಮೇಲೆ ತುಮಕೂರು ಜಿಲ್ಲೆಯಲ್ಲಿ ಕೆಲಸ ಪ್ರಾರಂಭ ಮಾಡುತ್ತೇವೆ; ಸುರಂಗದ ಕೆಲಸ ಒಂದೆರಡು ವರ್ಷಗಳಲ್ಲಿ ಮುಗಿಯುವ ಸೂಚನೆ ಕಂಡುಬಂದ ಮೇಲೆ, ಕಾಲುವೆ ಕೆಲಸ ಪ್ರಾರಂಭ ಮಾಡುತ್ತೇವೆಂದು ಹೇಳಿದ್ದಾರೆ. ಯೋಜನಾ ಇಲಾಖೆಯಲ್ಲಿ ಒಂದು ಕಾನೂನು ಇದೆ; ಇವತ್ತು ಹಣ ಖರ್ಚು ಮಾಡಿದರೆ; ಮೂರು ವರ್ಷಗಳಲ್ಲಿ ಹಾಕಿದ ಹಣಕ್ಕೆ ಪ್ರತಿಫಲ ಬರಬೇಕೆಂದು ಇದೆ. ಆ ರೀತಿಯಾಗಿ ಆಗದಿದ್ದರೆ ಹುಚ್ಚು ತನ, ದಡ್ಡತನ ಎಂದು ಕರೆಯಬೇಕೆಂದು ಇದೆ. ಈ ಯೋಜನೆಯನ್ನು ಮಾಡಿದಂಥವರಿಗೆ ಈ ಪ್ರಜ್ಞೆ ಇದ್ದಿದ್ದರೆ 1980ಕ್ಕೆ ಅಣೆಕಟ್ಟು ಮುಗಿಯು ವಷ್ಟರಲ್ಲಿ

ಕಾಲುವೆಗಳ ಕೆಲಸವನ್ನು ಮುಗಿಸಬೇಕಾಗಿತ್ತು. ಇಂಥ ದಡ್ಡ ಯೋಜನೆ, ದಡ್ಡ ತೀರ್ಮಾನವನ್ನು ಅಧಿಕಾರಿಗಳು ಏತಕ್ಕೆ ತೆಗೆದುಕೊಂಡರೋ ಗೊತ್ತಿಲ್ಲ. !! ಮೂರು ವರ್ಷಕ್ಕೆ ಹಣ ಹಿಂದಿರುಗಿ ಬರಬೇಕೆಂದು ಕಾನೂನು ಇದ್ದರೂ ಏತಕ್ಕೆ ಪರಿಗಣಿಸಲಿಲ್ಲ. ಇವತ್ತು ಮಾನ್ಯ ಮಂತ್ರಿಯವರ ಮೇಲೆ ಗುರುತರವಾದ ಅಪವಾದ ಇದೆ. ಮೊದಲು ನನ್ನ ಮನೆ, ನನ್ನ ಮಕ್ಕಳ ವಿದ್ಯಾಭ್ಯಾಸ; ನನ್ನ ಗದ್ದೆಗೆ ನಿರು ಬರಬೇಕೆಂದು ಬಯಸುವುದು ಸಹಜವಾದಂಥ ಮನೋಭಾವ ಎಂದು ನಾನು ನಂಬಿದ್ದೇನೆ. ಮಾನವ ಸಹಜವಾದಂಥ ಮನೋಭಾವ ಮಾನ್ಯ ಮಂತ್ರಿಗಳಿಗೆ ಇಲ್ಲವೆಂದು ತೋರಿಸಿಕೊಡಬೇಕಾದರೆ, ಆದಷ್ಟು ಕೂಡಲೇ ತುಮಕೂರು ಜಿಲ್ಲೆಯಲ್ಲಿ ಒಂದು ಡಿವಿಷನ್ ಮಾಡಿ; ಕಾಲುವೆಗಳ ಕೆಲಸ ಮಾಡುವಂಥ ತೀರ್ಮಾನ ಹಾಕಿಕೊಳ್ಳಬೇಕಾಗುತ್ತದೆ.

ನಾನು ಇದನ್ನು ಬಹು ಕಟುವಾಗಿ ಹೇಳುತ್ತಿದ್ದೇನೆ. ಅನುಮಾನ ಪರಿಹಾರ ಮಾಡತಕ್ಕಂಥ ಕೆಲಸವನ್ನು ಕೂಡಲೇ ಮಾಡಬೇಕಾಗುತ್ತದೆ. ಈ ಯೋಜನೆಯ ಕೆಲಸ ನಿಧಾನ ವಾಗಲಿಕ್ಕೆ ಎರಡು ಕಾರಣಗಳಿರಬಹುದು. ಮೊದಲನೆಯದಾಗಿ ಹಣದ ಕಾರಣವಿರಬಹುದು. ಎರಡನೆಯದಾಗಿ : ತಾಂತ್ರಿಕ ದೋಷಗಳು ಕಾರಣವಿರಬಹುದು. ದೋಷಗಳ ತೊಂದರೆಗಳನ್ನು ತಪ್ಪಿಸಲಿಕ್ಕೆ ಏನು ಮಾಡಬೇಕು ಎನ್ನುವುದನ್ನು ಈ ಸದನದ ಗಮನಕ್ಕೆ ತಂದಿದ್ದೇನೆ. ಎರಡನೆಯದಾಗಿ ಈ ಯೋಜನೆಗೆ ಕೊಟ್ಟಿರುವಂಥಾ ಹಣದಿಂದ ಈ ಯೋಜನೆಯ ಕೆಲಸ ಸ್ಥಗಿತಗೊಂಡಿದೆ. ವೇಗದ ಮಿತಿ ಕಡಿಮೆಯಾಗಿದೆ ಎಂದು ಹೇಳುವುದಾದರೆ, ಅದರ ಬಗ್ಗೆ ಹಣ ಕೊಟ್ಟಿರತಕ್ಕದ್ದನ್ನು ಸಹ ನೋಡಿದರೆ, ಅದೂ ಸಹ ಸರಿಯಿಲ್ಲವೆಂದು ಅನ್ನಿಸುತ್ತದೆ. ಏತಕ್ಕೆಂದರೆ, ಈ ಯೋಜನೆಗೆ ತೆಗೆದಿಟ್ಟಿರತಕ್ಕ ಹಣ 1980-81ರಲ್ಲಿ 10 ಕೋಟಿ ರೂ.ಗಳು. 1981-82ರಲ್ಲಿ 11 ಕೋಟಿ ರೂ.ಗಳು. 1983-84ರಲ್ಲಿ 20 ಕೋಟಿ ರೂ.ಗಳು. 1984-85ರಲ್ಲಿ 35 ಕೋಟಿ ರೂ.ಗಳನ್ನು ಒದಗಿಸಿದೆ. ಇದನ್ನು ನೋಡಿದಾಗ ಬಹುಶಃ ಶ್ರೀಮಾನ್ ದೇವೇಗೌಡರವರು ಈ ಕೆಲಸವನ್ನು ಸ್ಥಗಿತಗೊಳಿಸುವುದಕ್ಕೆ ಹಣವನ್ನು ಕೊಟ್ಟಿಲ್ಲವೆಂದು ಹೇಳುವುದಾದರೆ, ಈ ಅಂಕಿ-ಸಂಖ್ಯೆಗಳಿಂದ ಆ ವಾದವನ್ನು ಸಹ ಒಪ್ಪುವುದಕ್ಕಾಗುವುದಿಲ್ಲ. ಇನ್ನೊಂದು ವಾದವಿದೆ ಅದು ಏನೆಂದರೆ, ತುಮಕೂರು ಜನರಿಗೆ, ರೈತರಿಗೆ ನೀರು ಸಿಕ್ಕದ ಹಾಗೆ ಮಾಡಲಿಕ್ಕೆ ಹಾಸನ ಜಿಲ್ಲೆಯಲ್ಲಿ ಅನೇಕ ಏತದ ನಿರಾವರಿ ಕಾಮಗಾರಿಗಳನ್ನು ಕೈಗೊಂಡಿದ್ದಾರೆ ಎಂದೂ ಇದೆ. ಈ ವಾದವನ್ನು ಇವತ್ತು ನಮ್ಮ ಮುಂದಿಟ್ಟಿದ್ದಾರೆ. ಕಾನೂನಿನ ದೃಷ್ಟಿಯಿಂದ ಈ ವಾದ ಸರಿಯಲ್ಲ, ಆದರೆ ಅಲ್ಲಿ ನಿಜವಾದ ಪರಿಸ್ಥಿತಿ ಏನಿದೆ ಎನ್ನುವುದನ್ನು ಸರ್ಕಾರದ ಗಮನಕ್ಕೆ ತರಬೇಕಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೇ, ಈ ಯೋಜನೆಯಲ್ಲಿ ನಮಗೆ ಸಿಕ್ಕಿರುವಂಥಾ ನೀರು ಎಷ್ಟು? ನಾವು ಎಷ್ಟು ಉಪಯೋಗಿಸಿ ಕೊಳ್ಳುತ್ತೇವೆ? ಇನ್ನು ಎಷ್ಟು ನೀರು ಉಳಿಯುತ್ತದೆ? ಎನ್ನುವ ಬಗ್ಗೆ ನಾನು ಶ್ರಮಪಟ್ಟು ಕೆಲವು ಅಂಕಿ-ಅಂಶಗಳನ್ನು ಸಂಗ್ರಹಣೆ ಮಾಡಿಕೊಂಡು, ಈ ಸದನದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಹೇಮಾವತಿ ಯೋಜನೆಗೆ ಕಾವೇರಿ ನದಿಯಿಂದ ನಮಗೆ ಸಿಗುವಂಥಾ ನೀರು ಎಷ್ಟು ಅಂದರೆ ....

(ಸದಸ್ಯರುಗಳಿಂದ ಅಡಚಣೆ)

ಆದುದರಿಂದ ಅಧ್ಯಕ್ಷರೇ, ಕರ್ನಾಟಕ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ ಮಾನ್ಯ ಸದಸ್ಯರುಗಳಿಗೆ ಏನು ಆತುರವಿದೆಯೋ, ನಮಗೂ ಅದೇ ಆತುರ - ಕಾತುರವಿದೆ. ಹೇಮಾವತಿ ನದಿಯಿಂದ ಉಪಯೋಗಿಸಿಕೊಳ್ಳತಕ್ಕ ನೀರಿನ ಬಗ್ಗೆ ಹೇಳುವುದಾದರೆ, 5 ಏತದ ನೀರಾವರಿಯನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಅನಂತರ ಯಗಚಿಯಿಂದ ನೀರನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಇಷ್ಟೆಲ್ಲಾ ನೀರನ್ನು ಉಪಯೋಗ ಮಾಡಿದ ಮೇಲೂ ನಮಗೆ ಏನಾದರೂ ನೀರು ಕಡಿಮೆಯಾಗಿದೆಯೆ? ಎನ್ನುವ ಬಗ್ಗೆ ನಾನು ಅಂಕಿ-ಅಂಶಗಳನ್ನು ಕೊಡುವುದಕ್ಕೆ ಇಷ್ಟಪಡುವುದಿಲ್ಲ. ತುಮಕೂರಿಗೆ ನೀರನ್ನು ಕೊಡಲು ಯಾವುದೇ ಧಕ್ಕೆ ಬರುವುದಿಲ್ಲ. ಧಕ್ಕೆ ಬಾರದ ರೀತಿಯಲ್ಲಿ ಏನು ಏರ್ಪಾಡನ್ನು ಮಾಡಿಕೊಂಡಿದ್ದಾರೆ ಎನ್ನುವ ಬಗ್ಗೆ ಉತ್ತರವನ್ನು, ಮಾನ್ಯ ಮಂತ್ರಿಗಳವರು ನೀಡುತ್ತಾರೆಂದು ತಿಳಿದಿದ್ದೇನೆ.

ಅಧ್ಯಕ್ಷರೇ, ಈ ವಿಷಯವನ್ನು ನಾನು ಈ ಸದನದಲ್ಲಿ ತರುವುದಕ್ಕೆ ಉದ್ದೇಶ ವೇನೆಂದರೆ, ಮಾನ್ಯ ಶ್ರೀ ಬೈರಪ್ಪಾಜಿಯವರು ಹೇಳಿದ ಹಾಗೆ, ಯಾವುದೇ ರಾಜಕಾರಣವನ್ನು ತರಲಿಕ್ಕೋಸ್ಕರವಾಗಿ ಅಥವಾ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸುವ ದೃಷ್ಟಿಯಿಂದ ಈ ವಿಷಯವನ್ನು ನಾನು ಸದನಕ್ಕೆ ತಂದಿದ್ದು ಅಲ್ಲ. ನಾನು ಹೊಟ್ಟೆಪಾಡಿಗಾಗಿ ರಾಜಕಾರಣಮಾಡಿ ಅಧಿಕಾರಕ್ಕಾಗಿ ಅಧಿಕಾರವನ್ನೇ ನಂಬಿಕೊಂಡಿಲ್ಲ. ಮಾಡಬಾರದ್ದನ್ನು ಮಾಡಿ, ಕ್ಷುಲ್ಲಕ ರಾಜಕೀಯ ಮಾಡುವಂಥಾ ಉದ್ದೇಶದಿಂದ ನಾನು ಶಾಸಕನಾಗಿ ಬಂದಿಲ್ಲವೆಂದು ಈ ಸದನದಲ್ಲಿ ಸ್ಪಷ್ಟ ಪಡಿಸುವುದಕ್ಕೆ ಇಷ್ಟಪಡುತ್ತೇನೆ. ಆದುದರಿಂದ ಇದನ್ನು ಹೇಳಿದರೆ ರಾಜಕೀಯವಾಗಲಾರದು ಎಂದು ತಿಳಿದುಕೊಂಡಿದ್ದೇನೆ. ನನ್ನ ತಾಲ್ಲೂಕಿನಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಮಾಡಬೇಕೆಂದು ಒಂದು ಯೋಜನೆ ತಯಾರಾಯಿತು. ಸುಮಾರು ಲಕ್ಷಾಂತರ ರೂ.ಗಳ ಹಣವನ್ನು ಸಂಗ್ರಹಣೆಮಾಡಿ ಬ್ಯಾಂಕ್‌ನಲ್ಲಿಡಲಾಯಿತು. ಆದರೆ ಈ ಸಕ್ಕರೆ ಕಾರ್ಖಾನೆ ಕುಣಿಗಲ್‌ನಲ್ಲಿ ಮಾಡಲು ಆಗಲಿಲ್ಲ. ಇದಕ್ಕೆ ಕಾರಣ ಹೇಳುವುದಕ್ಕೆ ಹೋದರೆ ಶ್ರೀ ಬೈರಪ್ಪಾಜಿಯವರು ನಾವು ರಾಜಕೀಯ ಮಾಡುತ್ತೇವೆಂದು ಹೇಳುತ್ತಾರೆ. ಆದರೆ ಈ ಸಹಕಾರಿ ಸಕ್ಕರೆ ಕಾರ್ಖಾನೆ ಏತಕ್ಕೆ ನಿಂತುಹೋಯಿತು? ಯಾರ ಹಿತವನ್ನು ಕಾಪಾಡುವು ದಕ್ಕೋಸ್ಕರವಾಗಿ ನಿಂತುಹೋಯಿತು? ಎನ್ನುವುದು ಅಲ್ಲಿಯ ಜನತೆಗೆಲ್ಲಾ ಗೊತ್ತಿದೆ. ಆದುದರಿಂದ ಅದನ್ನು ಪುನಃ ನಾನು ಇಲ್ಲಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ.

ಶ್ರೀಮಾನ್ ದೇವೇಗೌಡರವರು ಲೋಕೋಪಯೋಗಿ ಇಲಾಖೆಯ ಮಂತ್ರಿಗಳಾಗಿದ್ದಾರೆ, ಜನತಾ ಸರ್ಕಾರ ಅಧಿಕಾರವನ್ನು ನಡೆಸುತ್ತಿದೆ. ಯಾವುದೋ ಒಂದು ರಾಜಕೀಯ ಉದ್ದೇಶದಿಂದ ಜನಗಳ ಹಿತವನ್ನು, ಸಾರ್ವಜನಿಕರ ಹಿತವನ್ನು ಅದರಲ್ಲೂ ತುಮಕೂರಿನ ಬಡ

ರೈತರ ಹಿತವನ್ನು, ಕಾಪಾಡುವುದರಲ್ಲಿ ಪಕ್ಷವಾಗಲೀ ಅಥವಾ ಈ ಒಂದು ಶಾಸನ ಸಭೆಯಾಗಲೀ ಅಡ್ಡ ಬರಲಾರದು ಎನ್ನುವುದನ್ನು ನನ್ನ ಮಿತ್ರರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಇದಕ್ಕೆ ಕಾರಣವಿಷ್ಟೆ, ಶ್ರೀಮಾನ್ ದೇವೇಗೌಡರು ಒಬ್ಬ ರೈತನ ಮಗನಾಗಿದ್ದಾರೆ ಎಂದು ನಾನಾದರೂ ತಿಳಿದುಕೊಂಡಿದ್ದೇನೆ. ರೈತ ಎಂದರೆ ಹಾಸನದವ ನಾಗಿರಲಿ, ಕೇರಳದವನಾಗಿರಲೀ, ಪಂಜಾಬ್‌ನವರೇ ಆಗಿರಲಿ ಎಲ್ಲಾ ರೈತರೂ ಒಂದೇ ಎನ್ನುವ ನಂಬಿಕೆ ಅವರಲ್ಲಿದ್ದರೆ, ಇವತ್ತಿನ ದಿವಸ ತುಮಕೂರಿನಲ್ಲಿ ಏನು ಕೆಲಸವಾಗಬೇಕಾಗಿದೆ, ಅದನ್ನು ಎಷ್ಟು ದಿವಸದಲ್ಲಿ ಮಾಡಿ ಮುಗಿಸುತ್ತಾರೆ, ಎನ್ನುವ ಬಗ್ಗೆ ನಿರ್ದಿಷ್ಟವಾದ ಹೇಳಿಕೆಯನ್ನು ಅವರು ಕೊಡಬೇಕೆಂದು ಪ್ರಾರ್ಥನೆ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ. ○

(3-3-1984)

# ಬಡ ರೈತನ ಶಾಪ

ಮಾನ್ಯ ಅಧ್ಯಕ್ಷರೇ, ಭಾರತದೇಶದಲ್ಲಿ ವ್ಯವಸಾಯ ಬಹಳ ಪ್ರಧಾನವಾದುದು. ಈ ದೇಶದಲ್ಲಿ ವ್ಯವಸಾಯಗಾರನಿಗೆ ನೀರಿನ ಪ್ರಾಮುಖ್ಯತೆ, ಎಷ್ಟು ಇರಬೇಕೋ ಅಷ್ಟು ಇಲ್ಲ ಅನ್ನುವುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ. ವ್ಯವಸಾಯಗಾರನಿಗೆ ಉತ್ತಮವಾದ ಬೀಜ ಮತ್ತು ಗೊಬ್ಬರ ಕೊಟ್ಟರೂ ಕೂಡ ಅವನಿಗೆ ನೀರನ್ನು ಸಾಕಷ್ಟು ಒದಗಿಸದೆ ಹೋದರೆ ಅವನ ಬೆಳೆಯಲ್ಲಾ ಹಾಳಾಗಿ ಹೋಗುತ್ತದೆ. ಇಂಥಾ ಒಂದು ದಾರುಣ ಪರಿಸ್ಥಿತಿಯನ್ನು ನಾವು ಪ್ರತಿವರ್ಷವೂ ನೋಡುತ್ತಾ ಇದ್ದೇವೆ.ಈ ಪರಿಸ್ಥಿತಿಯನ್ನು ನೀಗಲಿಕ್ಕಾಗಿ ಕಾವೇರಿ ನದಿಯ ಮತ್ತು ಹೇಮಾವತಿ ನದಿಯ ಜಲಾಶಯಗಳನ್ನು ಕಟ್ಟುವ ಯೋಜನೆಗಳನ್ನು ಸುಮಾರು 1968ರಲ್ಲೇ ಪ್ರಾರಂಭ ಮಾಡಿ 1980ರಲ್ಲಿ ಮುಗಿಸಿದರು. ಈ ಯೋಜನೆಯ ಇಂದಿನವರೆಗಿನ ವೆಚ್ಚ 386 ಕೋಟಿ ರೂಪಾಯಿಗಳು. ಈ ಯೋಜನೆಯ ಪ್ರಕಾರ 6 ಲಕ್ಷ 55 ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸಿ ರೈತನ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಬೇಕಾಗಿತ್ತು. ರೈತನಿಗೋಸ್ಕರ ಈ ಯೋಜನೆಯನ್ನು ರೂಪಿಸಲಾಯಿತು. ಈ ಯೋಜನೆಯನ್ನು 1968ರಲ್ಲಿ ಮೊದಲು ಪ್ರಾರಂಭ ಮಾಡಿದರೂ ಕೂಡ, 1973ನೆಯ ಇಸವಿಯ ವೇಳೆಗೆ ತುಮಕೂರು ಜಿಲ್ಲೆಯ ಗುಬ್ಬಿ, ತಿಪಟೂರು, ತುಮಕೂರು ಮತ್ತು ಕುಣಿಗಲ್ ಇದರ ಜೊತೆಗೆ ಮಂಡ್ಯ ಜಿಲ್ಲೆಯ ಯಾವಾಗಲೂ ಬರ ಪೀಡಿತ ಪ್ರದೇಶವಾದ ನಾಗಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು.

ಇದು ದುರಾದೃಷ್ಟವೋ ಅಥವಾ ಅದೃಷ್ಟವೋ ನನಗೆ ಗೊತ್ತಿಲ್ಲ. 1973ನೆಯ ಇಸವಿಗೆ ಆ ಸ್ಥಳಗಳಿಗೆ ನೀರನ್ನು ಕೊಡಬೇಕೆನ್ನುವ ತೀರ್ಮಾನ ತೆಗೆದುಕೊಂಡಿದ್ದರೂ ಆ ಸ್ಥಳಗಳಿಗೆ ನೀರನ್ನು ಒದಗಿಸಲಿಲ್ಲ. ಅಷ್ಟೇ ಅಲ್ಲ ಬಾಗೂರು ನವಿಲೆ ಸುರಂಗ ಮಾರ್ಗವನ್ನು ತೋಡುವ ಕೆಲಸವನ್ನೂ ಸಹ 1979ನೇ ಇಸವಿಯವರೆಗೂ ಮಾಡಲಿಲ್ಲ. ಈ ರೀತಿಯಾಗಿ ಇದುವರೆಗೆ ಈ ಯೋಜನೆಯಲ್ಲಿ ಹಿಡಿದಿಟ್ಟಿರುವ ನೀರನ್ನು ಉಪಯೋಗಿಸಿಕೊಳ್ಳದೇ ಇರುವುದು ನಮ್ಮ ದುರಾದೃಷ್ಟಕರ ಎಂದು ಹೇಳಬೇಕಾಗಿದೆ. ಈ ಪರಿಸ್ಥಿತಿಯನ್ನು ನಾವು ನೋಡಿದಾಗ ಈ ಬಗ್ಗೆ ತೀರ್ಮಾನ ತೆಗೆದುಕೊಂಡು 6 ವರ್ಷವಾದರೂ ಕೂಡ ಈ ಬಾಗೂರು-ನವಿಲೆ ಸುರಂಗ ಮಾರ್ಗವನ್ನು ಇದುವರೆಗೂ ಏತಕ್ಕೆ ಮಾಡಲಿಲ್ಲ? ಈ ಬಗ್ಗೆ ಹಿಂದಿನ ಸರ್ಕಾರವೇ ಆಗಲಿ, ಯಾವ ಸರ್ಕಾರವೇ ಆಗಲಿ, ಇಂದಿನ ಸರ್ಕಾರ ಇದಕ್ಕೆ ಉತ್ತರ ಹೇಳಬೇಕು ಎಂದು ನಾನು ಬಯಸುತ್ತೇನೆ. ಲಕ್ಷಾಂತರ ಜನ ರೈತರ ಪರವಾಗಿ ಈ ಬಾಗೂರು-ನವಿಲೇ ಸುರಂಗ ಮಾರ್ಗ 1973ರಿಂದ 1979ನೇ ಇಸವಿಯವರೆಗೂ ಏತಕ್ಕೆ ಮಾಡಲಿಲ್ಲ? ಎಂದು; ಆಗಿನ ಸರ್ಕಾರ ಇದನ್ನು ಏತಕ್ಕೆ ಮಾಡಲಿಲ್ಲ? ಎಂದು ಕೇಳುತ್ತಿದ್ದೇನೆ. ಇದಕ್ಕೆ ತಾವು ಉತ್ತರ ಹೇಳಬೇಕು.

ಈ ಅವಧಿಯಲ್ಲಿ ಈ ಕೆಲಸ ಮಾಡದೇ ಇರುವುದರಿಂದ ನನಗೆ ಅಪಾರವಾದ ದುಃಖವಾಗುತ್ತದೆ. 6 ಲಕ್ಷ 55 ಸಾವಿರ ಎಕರೆಗೆ ನೀರು ಒದಗಿಸುವಂಥಾ ಈ ಯೋಜನೆಯನ್ನು ರೂಪಿಸತಕ್ಕಂಥಾ ಅಧಿಕಾರ ಸ್ಥಾನದಲ್ಲಿರುವವರನ್ನು ನಾವು ಕೇಳಬೇಕಾಗಿದೆ. ಮತ್ತು ಅಧಿಕಾರ ಮಾಡಬೇಕು ಎಂದು ಬುಡಬುಡಿಕೆ ಹೊಡೆದುಕೊಂಡು ತಿರುಗಾಡುತ್ತಾ ಇರತಕ್ಕ ರಾಜಕಾರಣಿಗಳನ್ನು ನಾನು ಪ್ರಶ್ನಿಸುತ್ತೇನೆ. ಮೊದಲು 6 ಲಕ್ಷ 55 ಸಾವಿರ ಎಕರೆಗೆ ನೀರನ್ನು ಕೊಟ್ಟು ಉಳಿದುದ್ದನ್ನು 5 ಲಕ್ಷ 75 ಸಾವಿರ ಎಕರೆಗೆ ಕೊಡುವ ಹಾಗೆ ಯೋಜನೆಯನ್ನು ನಿರೂಪಿಸಿದ್ದಾರೆ. ಅವರು ಅಧಿಕಾರದಲ್ಲಿರುವಾಗ ಈ ಒಂದು ಯೋಜನೆಯನ್ನು ರೂಪಿಸಲು ಅಧಿಕಾರ ಚಲಾಯಿಸಿದಂಥಾ ರಾಜಕಾರಣಿಗಳು ಯಾರಿದ್ದಾರೆ ಅವರು ಆ ಕಾಲದಲ್ಲಿ ಏನೂ ಮಾಡಲಿಲ್ಲ. ಇಂದಿನ ಪರಿಸ್ಥಿತಿ ನೋಡಿದರೆ ಇನ್ನೂ 10 ವರ್ಷಗಳಾದರೂ ಕೂಡ ಈ ಕಾಲುವೆ ಕೆಲಸಗಳನ್ನು ಮುಗಿಸಲು ಸಾಧ್ಯವಿಲ್ಲ. 1980ನೇ ಇಸವಿಯಲ್ಲಿ ಪ್ರಾರಂಭ ಮಾಡಿದರೂ ಇನ್ನೂ ಮುಗಿದಿಲ್ಲ. 1990ನೇ ಇಸವಿಯಾದರೂ ಮುಗಿಯುವುದಿಲ್ಲ. ಅಲ್ಲಿಗೆ 1980ನೇ ಇಸವಿಯಿಂದ 1990ನೇ ಇಸವಿಯ ವರೆಗೆ 5 ಲಕ್ಷ 90 ಸಾವಿರ ಎಕರೆಗೆ ನೀರು ಕೊಟ್ಟಿದ್ದರೆ ಎಷ್ಟು ಬೆಳೆ ಬೆಳೆಯುತ್ತಿತ್ತು ಅನ್ನುವುದನ್ನು ಲೆಕ್ಕಾಚಾರ ಹಾಕಿ ನೋಡಿದರೆ, ಎಷ್ಟು ಉತ್ಪನ್ನ ಕಡಿಮೆಯಾಗಿದೆ ಅನ್ನುವುದನ್ನು ತಿಳಿದುಕೊಳ್ಳಬಹುದು.

ಅದರಿಂದ ಬರುವ ಆದಾಯ ಎಷ್ಟು? ಇದರಿಂದ ದೇಶದ ಬೊಕ್ಕಸಕ್ಕೆ ಬರುತ್ತಿದಂಥ ಆದಾಯ ಎಷ್ಟು? ರೈತನ ಕಣಜಕ್ಕೆ ಹಾನಿಮಾಡಿದಂಥ ಅಧಿಕಾರಿಯಾಗಲೀ, ಸರ್ಕಾರವಾಗಲೀ, ಹರಕಲು ಚಡ್ಡಿಯ ಬಡ ರೈತನ ಶಾಪಕ್ಕೆ ತುತ್ತಾಗದೇ ಇರುವುದಿಲ್ಲ. ಇವತ್ತು ಕಟ್ಟೆಯಲ್ಲಿ 5 ಲಕ್ಷ 90 ಸಾವಿರ ಎಕರೆಗೆ ಬೇಕಾಗುವಷ್ಟು ನೀರು ಇದೆ. ಇಂಥ ಒಂದು ಕೆಟ್ಟ ವ್ಯವಸ್ಥೆಯನ್ನು ಮಾಡಿದವರು ಕಾಂಗ್ರೆಸ್ (ಐ) ನವರಿರಲಿ; ಜನತಾ ಸರ್ಕಾರದವರಿರಲಿ; ತುತ್ತು ಅನ್ನ ಇಲ್ಲದೇ ನರಳುತ್ತಿರುವ ಬಡ ರೈತನ ಶಾಪಕ್ಕೆ ಗುರಿಯಾಗುತ್ತೀರೆಂದು ಖಡಾಖಂಡಿತವಾಗಿ ಹೇಳುತ್ತೇನೆ. ಇದಕ್ಕೆ ರಾಜಕೀಯ ಬಣ್ಣವನ್ನು ಕೊಡದೇ, ಉಳಿದಿರುವಂಥ ನೀರನ್ನು ಉಪಯೋಗಿಸಿಕೊಳ್ಳುವ ದಿಸೆಯಲ್ಲಿ ಸೂಕ್ತ ಕ್ರಮವನ್ನು ಮಾನ್ಯ ಮಂತ್ರಿಗಳು ಕೈಗೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಸ್ವಾಮಿ, ನಾವು ಪತ್ರಿಕೆಯಲ್ಲಿ ಓದಿದ ಪ್ರಕಾರ ಮಾನ್ಯ ಮಂತ್ರಿಯವರು ನಮ್ಮನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿದ್ದರು. ತುಮಕೂರು ಜಿಲ್ಲೆಗೆ ನೀರು ಕೊಡುವುದಕ್ಕೆ ನಿಧಾನವಾಗಿರುವುದಕ್ಕೆ ಕಾರಣ ಏನು ಎನ್ನುವುದನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದರು. ಬಹಳ ಪ್ರಮುಖವಾದ ಕಾರಣ ಬಾಗೂರು-ನವಿಲೆ ಸುರಂಗ ಮಾರ್ಗದ ಕೆಲಸ ಆಗದೇ ಇರುವುದು ಎನ್ನುವ ಕಾರಣವನ್ನು ಕೊಡುತ್ತಾರೆ. ಸುರಂಗ ಮಾರ್ಗದ ಉದ್ದ ಸುಮಾರು 9,800 ಮೀಟರುಗಳು. ಸುರಂಗಮಾರ್ಗದ ಕೆಲಸ ಮಾಡಬೇಕೆಂದು ತೀರ್ಮಾನವಾದುದು 1973ರಲ್ಲಿ; ಕೆಲಸ ಪ್ರಾರಂಭವಾದುದು 1979ರಲ್ಲಿ. 1979ರಿಂದ ಇಲ್ಲಿಯವರೆಗೆ 1,300 ಮೀಟರ್ ಕೆಲಸ ಮಾತ್ರವಾಗಿದೆ. 50 ಭಾಗದ ಕೆಲಸ ಕೂಡ ಆಗಿಲ್ಲ. ತುಮಕೂರು ಜಿಲ್ಲೆಗೆ ನೀರು ಕೊಡಬೇಕೇ, ಕೊಡಬಾರದೇ; ಕೊಡಲೇಬಾರದು ಎನ್ನುವ

ಪ್ರಶ್ನೆಯನ್ನು ರಾಜಕಾರಣಿಗಳು ಎತ್ತಿದ್ದಾರೆ. ಸುರಂಗ ಮಾರ್ಗದ ಕೆಲಸ ನಿಧಾನವಾಗಿರುವುದಕ್ಕೆ ನಿಜವಾದಂಥ ಕಾರಣ ಏನು ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ನಾನು ಬಯಸುತ್ತೇನೆ. ತುಮಕೂರು ಜಿಲ್ಲೆಯ ಕೆಲವರು ಪ್ರತಿಭಾವಂತ ಬಹಳ ದೊಡ್ಡ ರಾಜಕಾರಣಿಗಳ ಪ್ರಕಾರ ಶ್ರೀಮಾನ್ ದೇವೇಗೌಡರು ಹಾಸನ ಜಿಲ್ಲೆಯವರು; ಹಾಸನ ಜಿಲ್ಲೆಯ ರೈತರಿಗೆ ಅನುಕೂಲ ಮಾಡಿಕೊಡಲು; ತುಮಕೂರು ಜಿಲ್ಲೆಯ ರೈತರಿಗೆ ದ್ರೋಹ ಮಾಡುತ್ತಿದ್ದಾರೆ; ಅದಕ್ಕಾಗಿ ಸುರಂಗಮಾರ್ಗದ ಕೆಲಸವನ್ನು ನಿಧಾನ ಮಾಡುತ್ತಿದ್ದಾರೆ. ಬೇಕೆಂದೇ ಕೆಲಸ ಸ್ಥಗಿತಗೊಳಿಸಿದ್ದಾರೆ; ಆದ್ದರಿಂದ ಜಿಲ್ಲೆಯಾದ್ಯಂತ ರೈತರು ಹೋರಾಟ ಮಾಡಬೇಕು; ಶ್ರೀಮಾನ್ ದೇವೇಗೌಡರನ್ನು ಮಂತ್ರಿ ಪದವಿಯಿಂದ ಕಿತ್ತುಹಾಕಬೇಕು ಎನ್ನುವ ಮಾತನ್ನಾಡುತ್ತಿದ್ದಾರೆ. ○

(27-3-1984)

## ರಾಜ್ಯಪಾಲರ ಭಾಷಣದ ವಂದನಾ ನಿರ್ಣಯ ಕುರಿತು

ಸನ್ಮಾನ್ಯ ಅಧ್ಯಕ್ಷರೇ, ನನ್ನ ಸ್ನೇಹಿತರಾದ ಶ್ರೀಮಾನ್ ಎಂ.ಪಿ. ಪ್ರಕಾಶ್‌ರವರು ಈ ಸದನದ ಮುಂದೆ ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯವನ್ನು ಅರ್ಪಿಸಿ ಮಾತನಾಡಿದಂಥ ಕಾಲದಲ್ಲಿ ಅದನ್ನು ನಾನು ಅನುಮೋದನೆ ಮಾಡಿ ಎರಡು ಮಾತುಗಳನ್ನು ಹೇಳಬೇಕೆಂದು ನಿಂತಿದ್ದೇನೆ. ಇಲ್ಲಿ ಒಂದು ಸಮಸ್ಯೆ ಇದೆ. ಆ ಸಮಸ್ಯೆಯಿಂದ ನನಗೆ ಒಂದು ಮಾತು ಜ್ಞಾಪಕಕ್ಕೆ ಬರುತ್ತಿದೆ. ಅದೇನೆಂದರೆ ರೋಟರಿ ಕ್ಲಬ್ ಸದಸ್ಯರಾದ ಶ್ರೀ ಕೆ.ಎಸ್. ಮೆನನ್‌ರವರು ಮೂರು ಇಂಪಾಜಿಬಲ್‌ಟೀಸ್ ಹೇಳಿದ್ದರು. ಅವು ಯಾವುದೆಂದರೆ First impossibility is to climb a wall which is leaving towards us. The Second impossibility is to kiss a girl who is learning towards the other side. ಮೂರನೆಯದು ಯಾವುದೆಂದರೆ; ಯಾವುದಾದರೊಂದು ವಿಷಯದ ಮೇಲೆ ಅವರು ತಿಳಿದುಕೊಂಡಿರತಕ್ಕಂಥ ವಿಷಯದ, ಉದ್ದನೆಯ ಭಾಷಣ ಮಾಡಿದರೆ, ಅದರ ಮೇಲೆ ಮತ್ತೆ ಮಾತನಾಡತಕ್ಕಂಥಾದ್ದು. ಆ ಒಂದು ಪರಿಸ್ಥಿತಿಯಲ್ಲಿ ಈಗ ನಾನು ಇದ್ದೇನೆ.

ನನ್ನ ಸ್ನೇಹಿತರಾದ ಶ್ರೀ ಎಂ.ಪಿ. ಪ್ರಕಾಶ್ ರವರು ರಾಜ್ಯಪಾಲರ ಭಾಷಣದ ಮೇಲೆ ಸುದೀರ್ಘವಾಗಿ ಸವಿಸ್ತಾರವಾಗಿ ವಿಶ್ಲೇಷಣೆ ಮಾಡಿದ್ದಾರೆ. ಅದೇ ವಿಷಯದ ಮೇಲೆ ಈಗ ನಾನು ಬೇರೆ ದೃಷ್ಟಿಕೋನವನ್ನು ಇಟ್ಟುಕೊಂಡು ನಾಲ್ಕು ಜನರನ್ನು ಕೂಡಿಸಿಕೊಂಡು ವಿಷಯವನ್ನು ಪ್ರಸ್ತಾಪ ಮಾಡುವುದಕ್ಕೆ ಪ್ರಯತ್ನಪಡುತ್ತೇನೆ. ಈ ರಾಜ್ಯಪಾಲರ ಭಾಷಣ ಒಂದು ವಾಡಿಕೆಗೋಸ್ಕರ, ಸೌಜನ್ಯಕ್ಕೋಸ್ಕರವೋ ನಡೆದುಕೊಂಡು ಬರುತ್ತಿದೆ. ಇದರ ಅವಶ್ಯಕತೆ ಇದೆಯೇ ಎಂದು ನಾನು ಕೇಳುತ್ತೇನೆ. ಇದರ ಉದ್ದೇಶವಾದರೂ ಏನು? ಸ್ವಾಮಿ ಈ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ 1950ರಲ್ಲಿ ಗಣರಾಜ್ಯವಾಯಿತು. ಬಹುಶಃ ಆಗ ಮೈಸೂರಿನ ಮಹಾರಾಜರು ಇದ್ದರು. ಆಗಿಂದ ಇಲ್ಲಿಯವರೆಗೂ ಈ ಒಂದು ಸಂಪ್ರದಾಯ ನಡೆದುಕೊಂಡು ಬಂದಿದೆ. ಇದರಿಂದ ಏನಾದರು ಸಾಧನೆಯಾಗಿದೆಯೇ? ಎಂಬ ಬಗ್ಗೆ ನಾವು ಚಿಂತನೆ ಮಾಡುವ ಅವಶ್ಯಕತೆ ಇದೆ. ಮಾನ್ಯ ಸದಸ್ಯರಾದ ಶ್ರೀ ಕೆ.ಎಚ್. ಶ್ರೀನಿವಾಸ್‌ರವರು ನೆನ್ನೆ ಒಂದು ಮಾತನ್ನು ಹೇಳುತ್ತಿದ್ದರು. ಚರ್ಚೆ ಪರಿಹಾರವನ್ನು ಸೂಚಿಸುವ ಸಾಧನವಾಗಬೇಕು. ಯಾವುದಾದರು ಒಂದು ವಿಷಯವನ್ನು ಕುರಿತು ಚರ್ಚೆ ಮಾಡುವುದು, ಅದು ಕೇವಲ ಚರ್ಚೆಗಾಗಿ ಚರ್ಚೆಯಾಗುವುದು ಬೇಡ. ಪರಿಹಾರವನ್ನು ಸೂಚಿಸುವ ಚರ್ಚೆಯಾಗಬೇಕೆಂದು ಹೇಳಿದ್ದಾರೆ. ಚರ್ಚೆ ಕೇವಲ ಪರಿಹಾರ ಸೂಚಿಸುವ ಸಾಧನ ಅಷ್ಟೇ ಅಲ್ಲ, ಸಮಸ್ಯೆಗಳನ್ನು ಕಂಡುಹಿಡಿದು ಆ ಸಮಸ್ಯೆಗೆ ಸತ್ಯದ ಶೋಧನೆಯಾಗಬೇಕು. ಸತ್ಯದ ಶೋಧನೆಯ ಮೂಲಕ ಕಂಡುಹಿಡಿದ ಮೇಲೆ ಅದಕ್ಕೆ ಪರಿಹಾರವನ್ನು ಸೂಚಿಸುವ

ಚರ್ಚೆಯಾಗಬೇಕು. ಈಗ ರಾಜ್ಯಪಾಲರ ಭಾಷಣವನ್ನು ಕುರಿತು ಚರ್ಚೆ ಮಾಡಲಿಕ್ಕೆ ಹೊರಟಿದ್ದೇವೆ. ಇದು ಸಂಪ್ರದಾಯವೋ, ವಾಡಿಕೆಯೋ ನನಗೆ ಗೊತ್ತಿಲ್ಲ. ಇದರ ಅವಶ್ಯಕತೆ ಇರುವ ಬಗ್ಗೆ ನಿರ್ದಿಷ್ಟವಾದ ನಿಲುವನ್ನು ತಿಳಿಸುವುದಕ್ಕೆ ನಾನು ಸಿದ್ಧನಿಲ್ಲ.

ರಾಜ್ಯಪಾಲರ ಹುದ್ದೆ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಚರ್ಚೆಯೂ ಆಗಿಹೋಗಿದೆ. ಮಾನ್ಯ ಬಸವಲಿಂಗಪ್ಪನವರು ಈ ಸದನದಲ್ಲಿ ಒಂದು ವ್ಯಾಖ್ಯಾನ ಮಾಡಿದ್ದರು. ಕಳೆದ ವರ್ಷ ಸರ್ಕಾರ ಹಾಕಿಕೊಂಡಿದ್ದ ಕಾರ್ಯಕ್ರಮ ನಡೆಸಿದಂಥ ನಡವಳಿಕೆ, ನಡೆಸಿದಂಥ ಆಡಳಿತಾತ್ಮಕ ವೈಖರಿ ಬಗ್ಗೆ ವಿಶ್ಲೇಷಣೆ ನಡೆಸಿ, ಎರಡನೆಯದಾಗಿ ಮುಂದಿನ ವರ್ಷ ಈ ರಾಜ್ಯದಲ್ಲಿ ನಡೆಯಬೇಕಾಗಿರತಕ್ಕಂಥ ಕಾರ್ಯಕ್ರಮ, ಈ ರಾಜ್ಯ ಸರ್ಕಾರದ ತತ್ವ ಹಾಗೂ ಸಿದ್ಧಾಂತಗಳ ವಿಚಾರ ನಡೆಸಿದರು. ಈ ಎರಡನ್ನೂ ಚರ್ಚೆ ಮಾಡುವಂಥ ಅವಕಾಶ ರಾಜ್ಯಪಾಲರ ಭಾಷಣದಿಂದ ಬಂದಿದೆ ಎಂದು ನಾನು ಭಾವಿಸಿಕೊಳ್ಳುತ್ತೇನೆ. ಬಹುಶಃ ರಾಜ, ರಾಣಿಯರ ಕಾಲದಿಂದ ಪಡೆದುಕೊಂಡಿರತಕ್ಕ ಅನೇಕ ಸಂಪ್ರದಾಯಗಳಲ್ಲಿ ರಾಜ್ಯಪಾಲರ ಭಾಷಣವೂ ಒಂದು ಎಂದು ನಾನು ಭಾವಿಸಿಕೊಂಡಿದ್ದೇನೆ.

ಸನ್ಮಾನ್ಯ ಅಧ್ಯಕ್ಷರೇ, ನಾನು ಈಗಾಗಲೇ ಹೇಳಿದ ಹಾಗೆ ಈ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಸನ್ಮಾನ್ಯ ಜವಹರಲಾಲ್ ನೆಹರೂರವರಿಂದ, ಸನ್ಮಾನ್ಯ ರಾಜೀವ್ ಗಾಂಧಿಯವರೆಗೂ ನಾಲ್ಕಾರು ಜನ ಪ್ರಧಾನಿಗಳು ಬಂದುಹೋದರು. ಸನ್ಮಾನ್ಯ ಕೆ.ಸಿ. ರೆಡ್ಡಿಯವರಿಂದ ಹಿಡಿದು, ಸನ್ಮಾನ್ಯ ರಾಮಕೃಷ್ಣ ಹೆಗಡೆಯವರೆಗೆ ಹತ್ತಾರು ಜನ ಮುಖ್ಯಮಂತ್ರಿಗಳು ಬಂದುಹೊದರು. ನನ್ನನ್ನೂ ಹಾಗು ನನ್ನ ಸ್ನೇಹಿತರನ್ನೂ ಸೇರಿಸಿಕೊಂಡು ಸಾವಿರಾರು ಜನ ಮಂತ್ರಿಮಹೋದಯರು ಆಡಳಿತ ಮಾಡಿ ಹೋಗಿದ್ದಾರೆ. ಒಂದಲ್ಲ, ಎರಡಲ್ಲ, ಏಳು ಪಂಚವಾರ್ಷಿಕ ಯೊಜನೆಗಳನ್ನು ರೂಪಿಸಿ ಕಾರ್ಯಗತ ಮಾಡಿದಂಥ ಹೆಮ್ಮೆ ಈ ರಾಷ್ಟ್ರದ್ದು. ಹತ್ತಾರು ಅಲ್ಲ, ಸಾವಿರಾರು ಕೋಟಿ ರೂಪಾಯಿಗಳನ್ನು ಅಭಿವೃದ್ಧಿ ಕೆಲಸಗಳಿಗೆ ತೊಡಗಿಸಿದಂಥ ಪ್ರತಿಷ್ಠೆಯ ಜಂಭ ನಮ್ಮದು. ಹತ್ತಾರು ವಿಶ್ವವಿದ್ಯಾನಿಲಯಗಳನ್ನು ಕಟ್ಟಿದ್ದೇವೆ. ಸಾವಿರಾರು ಉಪಾಧ್ಯಾಯರನ್ನು ಅಪಾಯಿಂಟ್ ಮಾಡಿದ್ದೇವೆ. ಅನೇಕ ಯೋಜನೆಯನ್ನು ರೂಪಿಸಿದ್ದೇವೆ ಹಾಗು ಅವುಗಳನ್ನು ಕಾರ್ಯಗತ ಗೊಳಿಸಿದ್ದೇವೆ. ಇಷ್ಟೆಲ್ಲಾ ಆಗುವುದಕ್ಕೆ ಕಾರಣ ಏನು? ಇಷ್ಟೆಲ್ಲಾ ಯೋಜನೆಗಳನ್ನು ರೂಪಿಸಿದ ಮೇಲೆ, ಇಷ್ಟೊಂದು ಆಡಳಿತವನ್ನು ದೊಡ್ಡದು ಮಾಡಿಕೊಂಡ ಮೇಲೆ ಜನರಿಗೆ ಅನುಕೂಲವಾಗ ಬೇಕಾಗುತ್ತದೆ. ಈ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಾಗ ಬಡವರು ಎಷ್ಟು ಜನರಿದ್ದರೋ ಅದಕ್ಕಿಂಥ ಹೆಚ್ಚುಸಂಖ್ಯೆಯ ಬಡವರು ಈಗ ಇದ್ದಾರೆ.

ಇಷ್ಟೊಂದು ಹಣವನ್ನು ಖರ್ಚು ಮಾಡಿ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದು, ಇಷ್ಟೊಂದು ಹಣವನ್ನು ಖರ್ಚುಮಾಡಿ ಯೋಜನೆಯನ್ನು ಕಾರ್ಯರೂಪಕ್ಕೆ ತಂದು, ಇಷ್ಟೊಂದು

ಮಂತ್ರಿ ಮಹೋದಯರು ಬಂದು, ಇನ್ನೂ ಬಡವರ ಸಂಖ್ಯೆ ಕಡಿಮೆಯಾಗಲಿಲ್ಲ. ಜಾಸ್ತಿಯಾಗಿದೆ. ಮೂಲಭೂತವಾಗಿ ಹೇಳುವುದಾದರೆ ಈ ಪ್ರಶ್ನೆಯನ್ನು ಜನಸಾಮಾನ್ಯರು ಕೇಳಿ ಉತ್ತರ ಕೊಡಿ ಎಂದು ನಮ್ಮ ಕೊರಳ ಪಟ್ಟಿಯನ್ನು ಹಿಡಿದು ಕೇಳುತ್ತಾರೆ ಇನ್ನು ಮುಂದೆ. ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು 40 ವರ್ಷಗಳಾಗಿದ್ದರೂ ಬಡತನವನ್ನು ಹೋಗಲಾಡಿಸಿಲ್ಲ. ಯಾವುದೇ ಪಕ್ಷ ಇದುವರೆಗೆ ರಾಷ್ಟ್ರವನ್ನು ಆಳಿರಬಹುದು, ಎಲ್ಲ ಪಕ್ಷದವರನ್ನೂ ಸೇರಿಸಿ ನಾನು ಹೇಳುತ್ತಿದ್ದೇನೆ. ಕಾಂಗ್ರೆಸ್(ಐ) ನವರು ಆಳಿದ್ದಾರೆ, ಕಮ್ಯುನಿಸ್ಟ್‌ನವರು ಕೆಲವರು ರಾಜ್ಯದಲ್ಲಿ ಆಡಳಿತ ಮಾಡುತ್ತಿದ್ದಾರೆ. ಜನತಾ ಪಕ್ಷದವರು ರಾಷ್ಟ್ರವನ್ನು ಆಳಿದ್ದಾರೆ. ನಾನು ಅದನ್ನು ಪ್ರಶ್ನೆ ಮಾಡುತ್ತಿಲ್ಲ.

ಇಷ್ಟು ವರ್ಷ ಆಡಳಿತ ಮಾಡಿದ ಮೇಲೆ, ಇಷ್ಟೊಂದು ಹಣವನ್ನು ಖರ್ಚು ಮಾಡಿದ ಮೇಲೆ, ಈ ರಾಷ್ಟ್ರದಲ್ಲಿ ಏನು ಸಾಮಾಜಿಕ ಪರಿವರ್ತನೆ ಆಗಬೇಕಾಗಿತ್ತೊ ಜನಸಾಮಾನ್ಯರ ಬಾಳು ಹಸನಾಗ ಬೇಕಾಗಿತ್ತೋ ಅದು ಆಗಿಲ್ಲ. ಅದು ಏಕಾಗಲಿಲ್ಲ? ಇವೊತ್ತು ರಾಜ್ಯಪಾಲರ ಭಾಷಣದ ಮೇಲೆ ಚರ್ಚೆಯಾಗುವಂತೆ ಲೋಕಸಭೆಯಲ್ಲಿಯೂ ಯಾವುದಾದರೂ ಒಂದು ವಿಷಯದ ಮೇಲೆ ಚರ್ಚೆಯಾಗುತ್ತದೆ. ಈ ಚರ್ಚೆಯು ಬಡವರ ಪರಿವರ್ತನೆಯ ಬಗ್ಗೆ ಮುಂದು ವರಿಯಬೇಕು. ಇದಕ್ಕೆ ಒಂದು ಪರಿಹಾರವನ್ನು ಸೂಚಿಸಲಿಕ್ಕೆ, ಸೂಚನೆಗಳು ಬರಬೇಕಾಗಿದೆ ಎನ್ನುವ ದೃಷ್ಟಿಯನ್ನು ಇಟ್ಟುಕೊಂಡು ನಾನು ಎರಡು ಮಾತುಗಳನ್ನು ಹೇಳಲಿಕ್ಕೆ ಇಚ್ಛಿಸುತ್ತೇನೆ. ಮೊಟ್ಟ ಮೊದಲನೆಯದಾಗಿ, ಅಧ್ಯಕ್ಷರೆ, ಈ ರಾಷ್ಟ್ರದಲ್ಲಿ ಒಂದು ದುರಂತ ನಡೆದಿದೆ ಎಂದು ಬಸವ ಲಿಂಗಪ್ಪನವರು ಹೇಳಿದ್ದನ್ನು ನಾನು ಒಪ್ಪಿಕೊಳ್ಳುತ್ತೇನೆ. ಅದಾವುದೆಂದರೆ, ಈ ರಾಷ್ಟ್ರದ ಜನರ ದುಃಖದುಮ್ಮಾನಗಳನ್ನು, ಕಷ್ಟಕಾರ್ಪಣ್ಯಗಳನ್ನು ಯಾವ ರೀತಿಯಲ್ಲೂ ಅರಿಯದವರ ಕೈಗೆ ನಾವು ಅಧಿಕಾರವನ್ನು ಕೊಟ್ಟಿರುವುದು. ಕೋಳಿಗೂಡಿನ ಅರಿವಿಲ್ಲ, ನೇಗಿಲು-ಮೇಣಿ ಎಂದರೆ ಗೊತ್ತಿಲ್ಲ. ರಾಗಿ, ಮರವೇ, ಗಿಡವೇ ತಿಳಿದಿಲ್ಲ. ದನ ಹೇಗೆ ಕಟ್ಟಬೇಕು ಗೊತ್ತಿಲ್ಲ. ಇಂಥವರ ಕೈಗೆ 99ರಷ್ಟು ಜನ ಅಧಿಕಾರ ಕೊಟ್ಟು ಕೈಚೆಲ್ಲಿ ಕುಳಿತಿದ್ದಾರೆ.

ಇವರಿಗೆ ಸಮಸ್ಯೆಯ ಅರಿವಿಲ್ಲ. ಯೋಜನೆಯ ತಿಳಿವೂ ಇಲ್ಲ. ಇದು ನಾನು ಹೇಳಿದ್ದಲ್ಲ. ಬ್ರಿಟಿಷರಲ್ಲಿ ಕೇಂಬ್ರಿಜ್ ಎಂಬ ವಿಶ್ವವಿದ್ಯಾಲಯದಲ್ಲಿ ಅತಿ ಹೆಚ್ಚಿನ ಪದವಿ ಪಡೆದ ವೆರಿಯರ್ ಎಲ್ವಿನ್ ಎಂಬ ವ್ಯಕ್ತಿ ಈ ರಾಷ್ಟ್ರಕ್ಕೆ ಬಂದು, ಇಲ್ಲಿನ ಪ್ರಜೆಯಾಗಿ ಇಲ್ಲಿನ ಗಿರಿಜನರ ಜೊತೆ ಬದುಕಿದ. ಆತ 1952ರಲ್ಲೆ ಪಂಡಿತ ನೆಹರೂ ಅವರಿಗೆ ಪತ್ರ ಬರೆಯುತ್ತಾನೆ. ಸರ್ಕಾರ ರೂಪಿಸುವ ಯೋಜನೆಗಳು ಜನರನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರ ಕುಂದುಕೊರತೆಗಳನ್ನು ನಿವಾರಣೆ ಮಾಡುವಂತಿರಬೇಕು. ಆದರೆ ಈ ದೇಶದ ಯೋಜನೆಗಳು ಜನಗಳ ಬದುಕಿಗೆ ಕಾಂಟ್ರಿಬ್ಯುಟ್ ಮಾಡುವ ಬದಲು, ಅವರ ಬದುಕಿನಲ್ಲಿರುವುದನ್ನೇ ನಾಶ ಮಾಡುತ್ತಿವೆ. ಉದಾಹರಣೆಗೆ, ಗೋಂಡಾ ಎನ್ನುವ ಜನಗಳು ಬಟ್ಟೆ ಹಾಕುತ್ತಿರಲಿಲ್ಲ, ಹಿಂದಿನಂತೆ ಮರಗಳ ಎಲೆಗಳಿಂದ ಮೈಮುಚ್ಚಿಕೊಂಡಿರುತ್ತಿದ್ದರು. ಆಗ ಸರ್ಕಾರ ಅವರಿಗಾಗಿ ಒಂದು ಯೋಜನೆ ತಂದು ಉಚಿತವಾಗಿ

ಬಟ್ಟೆ ಹಂಚಿದರು. ಅವರು ಸರ್ಕಾರ ಕೊಟ್ಟ ಬಟ್ಟೆ ಧರಿಸಿ ಎಲೆಗಳನ್ನು ತೊಡುವುದನ್ನು ಬಿಟ್ಟರು. ಸ್ವಾಭಾವಿಕವಾಗಿ, ನೆಮ್ಮದಿಯಾಗಿದ್ದ ಆ ಜನರು ಮತ್ತೆ ಬಟ್ಟೆ ಕೊಡುತ್ತಾರೆಂದು ಕೇಳಿದರು. ಅಷ್ಟರಲ್ಲಿ ಇವರ ಯೋಜನೆ ಹೋಗಿತ್ತು. ಬಟ್ಟೆಗಳನ್ನು ಕೊಡಲಿಲ್ಲ. ಹೀಗಾಗಿ ಆ ಜನ ಮಾನಸಿಕವಾಗಿ ಮತ್ತು ದೈಹಿಕವಾಗಿ ಕೀಳಾಗಿಸಲ್ಪಟ್ಟು ಶೋಷಿತರಾಗಬೇಕಾಯಿತು. ಇದನ್ನು ಉದಾಹರಿಸುತ್ತ ಡಾ. ಆರ್ವಿನ್ ಹೇಳುತ್ತಾನೆ, ನಾವು ರೂಪಿಸುವ ಯೋಜನೆಗಳು ನಮ್ಮಲ್ಲಿರುವುದನ್ನು ಕಿತ್ತುಕೊಳ್ಳು ವಂತಿರಬಾರದು ಎಂದು. ಇದಕ್ಕೆ ಒಟ್ಟಾರೆ ಹೇಳಬೇಕೆಂದರೆ, ಈ ರಾಷ್ಟ್ರದ ಬಡತನವನ್ನು ಕಡಿಮೆ ಮಾಡಿಸುವಲ್ಲಿ ಆಗಿರುವ ವೈಫಲ್ಯಕ್ಕೆ ಮುಖ್ಯ ಕಾರಣಗಳೆಂದರೆ, ಸಮಸ್ಯೆಗಳ ಅರಿವಿಲ್ಲದ ಜನರ ಕೈಗೆ ಅಧಿಕಾರ ಕೊಟ್ಟದ್ದು. ಎರಡನೆಯದು ಎಂದರೆ, ಇದರ ಬಗ್ಗೆ ನನ್ನ ಮಿತ್ರ ಪ್ರಕಾಶರು ಅವರದೇ ಆದ ಧಾಟಿಯಲ್ಲಿ ಈಗಾಗಲೇ ಹೇಳಿದ್ದಾರೆ.

ನಮ್ಮ ಜಿಲ್ಲೆಯಲ್ಲಿ ಸಿದ್ದಗಂಗೆ ಸ್ವಾಮಿಗಳಿದ್ದಾರೆ. ಅವರು ಒಂದು ಕಥೆ ಹೇಳಿದರು. ಕೆರೆಯಿಂದ ಹೊರಟ ನೀರು ಗದ್ದೆ ಮುಟ್ಟಲು ಕಾಲುವೆ ಮೂಲಕ ಹೋಗಬೇಕು. ತೆಂಗಿನ ಗಿಡಕ್ಕಾಗಿ ಖರ್ಚಾಗುವುದು ಕೇವಲ 40ರಷ್ಟು ಮಾತ್ರ. ಉಳಿದ ಅರವತ್ತು ಭಾಗ ಮಧ್ಯದಲ್ಲೆಲ್ಲೋ ಸೋರಿಹೋಗುತ್ತದೆ ಎಂದು. ಸ್ವಾಮೀಜಿಯವರಷ್ಟೇ ಅಲ್ಲ. ಕಡಿದಾಳ್ ಮಂಜಪ್ಪನವರೂ ಇದನ್ನೇ ಹೇಳುತ್ತಿದ್ದರು. ಅಂದರೆ ಈ ದೇಶದಲ್ಲಿ ಯೋಜನೆಗಳಿಗೆಂದು ಇಟ್ಟ ಸಂಪೂರ್ಣ ಹಣ ಯೋಜನೆಗಳಿಗಾಗಿ ಖರ್ಚಾಗದೇ ಹೋದದ್ದು ಎರಡನೆಯ ದುರಂತ. ಮೂರನೆಯ ಕಾರಣ : ಪ್ರಕಾಶರು ಹೇಳಿದಂತೆ ಈ ದೇಶದಲ್ಲಿ ಗುಲಾಮರಾಗಿ ಬದುಕುವುದಕ್ಕೆ ಸಂಬಳ ಪಡೆಯುವ ನಾವು, ಪ್ರಭುಗಳಂತೆ ನಡೆದುಕೊಳ್ಳುವುದು. ಸರ್ಕಾರೀ ಹಣ ನನ್ನ ಶರ್ಟಿನ ಸೂಲನ್ನು ಕೊಟ್ಟಿತು, ನನ್ನ ಹೆಂಡತಿಯ ಮಾನ ಮುಚ್ಚುವ ಸೀರೆಯನ್ನು ಕೊಂಡುಕೊಟ್ಟಿತು. ಆ ಹಣ ನಮ್ಮ ದೇಶದ ಬಡರೈತ ಕೊಟ್ಟ ತೆರಿಗೆಯಿಂದ ಬಂದದ್ದು ಎನ್ನುವುದನ್ನು ತಿಳಿದುಕೊಳ್ಳದೇ ಇರುವುದು ಒಂದು ದುರಂತ.

ಶ್ರದ್ಧಾಹೀನರಾದ ಸರ್ಕಾರಿ ನೌಕರಿ ಮಾಡುವ ನಮ್ಮ ಪ್ರವೃತ್ತಿ, ಯೋಜನೆಗಳ ವೈಫಲ್ಯತೆಗೆ ಮುಖ್ಯ ಕಾರಣ. 30 ದಿವಸಗಳ ಸಂಬಳ ತೆಗೆದೊಂಡು ಒಂದು ದಿನವಸವೂ ಕಚೇರಿಗೆ ಹೋಗದ ಅಧಿಕಾರಿಗಳಿದ್ದಾರೆ. ಚುನಾವಣೆ ಮೂಲಕ ಆರಿಸಿಬಂದ ನಂತರ, ಮುಂದಿನ ಐದು ವರ್ಷಗಳಲ್ಲಿ ಒಂದು ದಿವಸಕ್ಕೂ ತನ್ನ ಕ್ಷೇತ್ರಕ್ಕೆ ಕಾಲಿಡದ ನಾವು ಇದ್ದೇವೆ. ಯಾವ ಜನರಿಗೆ ಗುಲಾಮರಾಗಿ ಸೇವೆ ಸಲ್ಲಿಸಬೇಕೋ, ಯಾವ ಜನರ ಅನ್ನದ ಋಣದಿಂದ ಬದುಕುತ್ತಿದ್ದೇವೋ, ಅವರ ಅರಿವಿಲ್ಲದೆ ಶ್ರದ್ಧಾಹೀನರಾಗಿ ಆ ಜನಗಳ ಬುಡಕ್ಕೇ ಕುತ್ತು ತಂದಿಡುವ ಯೋಜನೆಗಳ ಹರಿಕಾರಾದದ್ದು ಮೂಲ ಕಾರಣ.

ಈಗ ನನ್ನ ಸ್ನೇಹಿತರು ಕೇಳುತ್ತಾರೆ, ಹೇಗೂ ನಿಮ್ಮ ಪಕ್ಷವೇ ಅಧಿಕಾರಕ್ಕೆ ಬಂದಿದೆ. ಅದರ ಬಲದಿಂದ ಈ ಸಮಸ್ಯೆಗಳನ್ನೆಲ್ಲ ನಿವಾರಿಸುವುದಕ್ಕೆ, ಎಲ್ಲಾ ವಿಫಲತೆಗಳನ್ನೂ ಇಲ್ಲವಾಗಿಸುವುದಕ್ಕೆ

ಏನಾದರೂ ಮಾಡಬಹುದಲ್ಲ ಎಂದು. ಸನ್ಮಾನ್ಯ ಅಧ್ಯಕ್ಷರೇ, ಇಲ್ಲಿ 224 ಜನ ಶಾಸಕರಿದ್ದಾರೆ. ಹಿಂದೆಯೂ ಅಷ್ಟೇ ಇದ್ದರು. ಈಗ ಮಂತ್ರಿಗಳಿದ್ದಾರೆ, ಆಗಲೂ ಮಂತ್ರಿಗಳಿದ್ದರು. ಅಂದರೆ ಈ ವಿಫಲತೆ ಗಳನ್ನೆಲ್ಲಾ ಪತ್ತೆಹಚ್ಚುವುದಕ್ಕೆ, ಸಮಸ್ಯೆಗಳ ನಿವಾರಣೋಪಾಯಗಳನ್ನು ಕಂಡುಹಿಡಿಯುವುದಕ್ಕೆ, ರೈತನ ಋಣ ತೀರಿಸುವುದಕ್ಕೆ ಏನು ಕಾರ್ಯಕ್ರಮಗಳನ್ನು ನಾವು ಹಾಕಿಕೊಂಡಿದ್ದೇವೆ? ಎಂದು ಅವರು ಪ್ರಶ್ನೆ ಕೇಳುತ್ತಾರೆ. ಚಿಂತನೆಯೇನೋ ಸರಿ, ಆದರೆ ಅವನ್ನು ಕಾರ್ಯಗತ ಗೊಳಿಸುವುದಕ್ಕೆ ಕಷ್ಟವಾಗುತ್ತದೆ. ಅದರ ಅರಿವು, ಆಡಳಿತ ಮಾಡಿದ ಎಲ್ಲ ಸ್ನೇಹಿತರಿಗೂ ಗೊತ್ತಿದೆ.

ಒಂದು ಮಾತಿನಲ್ಲಿ ಈ ಸರ್ಕಾರ ಹೇಗೆ ಕೆಲಸ ಮಾಡುತ್ತಿದೆ ಎಂಬುದನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಪ್ರಾಮಾಣಿಕವಾಗಿ ಈ ಸರ್ಕಾರ ಜನಸಾಮಾನ್ಯರ ಕಷ್ಟಗಳಿಗೆ, ಸಮಸ್ಯೆಗಳಿಗೆ ಸ್ಪಂದಿಸುವಂಥ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಎರಡನೆಯದಾಗಿ; ಅವರ ದುಃಖ-ದುಮ್ಮಾನಗಳನ್ನು ಸ್ವಲ್ಪವಾದರೂ ಅರಿತುಕೊಂಡು ಎಲ್ಲವನ್ನೂ ಸರಿಯಾಗಿ ಮಾಡಿದ್ದೇವೆಂಬ ಹೆಮ್ಮೆ ನನಗಿಲ್ಲ. ಸರಿಯಾಗಬೇಕೆನ್ನುವ ಪ್ರಾಮಾಣಿಕ ಪ್ರಯತ್ನ ಮಾತ್ರ ನಮ್ಮದು. ನಾಲ್ಕು ವರ್ಷಗಳಿಂದ ನೀವು ಕಡಿದುಹಾಕಿದ್ದೇನು ಎಂಬ ಪ್ರಶ್ನೆಗೆ ನನ್ನ ಉತ್ತರ ಇಷ್ಟೇ. ಎಲ್ಲಾ ನಾವು ಮಾಡಿಬಿಟ್ಟಿದ್ದೇವೆ ಎಂಬ ಹುಂಬತನ, ಹುಚ್ಚುತನ ನನಗಿಲ್ಲ. ಇನ್ನೂ ಇಂಥಿಂಥದ್ದನ್ನು ಮಾಡಬೇಕೆಂಬ ಪ್ರಾಮಾಣಿಕ ಪ್ರಯತ್ನ ಇದೆ. ಏನೇನು ಮಾಡಿದ್ದೇವೆಂದರೆ, ಮೊಟ್ಟಮೊದಲಿಗೆ; ಈ ರಾಷ್ಟ್ರದ ರೋಗಗಳಿಗೆ ಪರಿಹಾರವಾಗಿ ಏನು ಮಾಡಬೇಕು? ನಾನು ಆಗಲೇ ಹೇಳಿದಂತೆ ಕೇವಲ ಕಾರಣಗಳನ್ನು ಕಂಡು ಹಿಡಿಯುವುದರಲ್ಲಿ ವಿಫಲತೆಯನ್ನೆಲ್ಲಾ ಹೋಗಲಾಡಿಸಿದಂತಲ್ಲ. ಯಾವುದೇ ವ್ಯಕ್ತಿಯ ಅಥವಾ ಸರ್ಕಾರದ ಕರ್ತವ್ಯ ಅಷ್ಟೇ ಅಲ್ಲ. we have only succeeded in identifying our problems, but we have failed to findout remedies. ಅದಕ್ಕಾಗಿ ಈ ಸರ್ಕಾರ ಏನು ಪರಿಹಾರವನ್ನು ರೂಪಿಸಲಿಕ್ಕೆ ಪ್ರಯತ್ನಿಸಿದೆ ಎಂದರೆ, ಬಡತನವನ್ನು ಕಡಿಮೆ ಮಾಡುವಂಥ ಕ್ರಮ. ಇದನ್ನು ಎಲ್ಲಾ ಪಕ್ಷಗಳೂ, ಎಲ್ಲಾ ಸರ್ಕಾರಗಳೂ ನಾವೂ-ನೀವೂ ಎಲ್ಲರೂ ಹೇಳುತ್ತಲೇ ಬಂದಿರುವಂಥದದ್ದು. ಈ ರಾಷ್ಟ್ರದ ರಾಷ್ಟ್ರಪತಿಗಳು ಹೇಳಿದ್ದಾರೆ, ಇದನ್ನು ಪ್ರಧಾನಿಗಳು ಹೇಳಿದ್ದಾರೆ, ಮಂತ್ರಿಮಹೋದಯರು ಹೇಳಿದ್ದಾರೆ. ಆದರೆ ಬಡತನವನ್ನು ನಿವಾರಣೆ ಮಾಡುವುದು ಹೇಗೆ? ನಾವು ಹಸಿರುಕಾರ್ಡ್ ಕೊಡುವ ಮುಖಾಂತರ, ಆಹಾರಧಾನ್ಯ ಮತ್ತು ಬಟ್ಟೆಗಳನ್ನು ವಿತರಣೆ ಮಾಡುವ ಕಾರ್ಯಕ್ರಮ ಇಟ್ಟುಕೊಂಡಿದ್ದೇವೆ. ರೈತರಿಗೆ ಸಾಲ ಮರುಪಾವತಿ ಮಾಡಲು ಅಸಮರ್ಥರಾದವರಿಗೆ ಅದನ್ನು ಮುಫತ್ತು ಮಾಡುವ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ರೈತನ ಹೊಲದಲ್ಲಿ ಬಾವಿ ತೋಡಿದಾಗ ಅಲ್ಲಿ ನೀರು ಬರದಿದ್ದರೆ, ಅದನ್ನು ಮುಫತ್ತು ಮಾಡುವ ಕಾರ್ಯಕ್ರಮವಿದೆ. ಇದರ ಜೊತೆಗೆ ತಾಳೀ ಭಾಗ್ಯ, ಹಿರಿಯರಿಗೆ ಮಾಶಾಸನ, ಗರ್ಭಿಣಿಯರಿಗೆ ಮಾಶಾಸನಗಳನ್ನು ಕೊಡುವ ಕಾರ್ಯಕ್ರಮಗಳಿವೆ. ಮುದುಕರಿಗೆ ಮತ್ತು

ಮಕ್ಕಳಿಗೆ ಪುಕ್ಕಟೆಯಾಗಿ ಮತ್ತು ಅರ್ಧ ದರದಲ್ಲಿ ಪಾಹನ ಸೌಲಭ್ಯ ಕೊಟ್ಟಿದ್ದೇವೆ. ಇನ್ನೂ ರಾಷ್ಟ್ರೀಯ ಕಾರ್ಯಕ್ರಮವಾದ 20 ಅಂಶಗಳ ಕಾರ್ಯಕ್ರಮದಲ್ಲಿ, ಕರ್ನಾಟಕ ರಾಜ್ಯ 5ನೇ ಸ್ಥಾನದಲ್ಲಿದೆ. ಇದು ಸಾಧನೆ ಅಲ್ಲವೇ? ಇದರ ಜೊತೆಯಲ್ಲಿ ಕನಿಷ್ಠ ಮಜೂರಿ ಬಗ್ಗೆ ಹೇಳಿದರೆ, ನನ್ನ ಸ್ನೇಹಿತರು ಒಪ್ಪಿಕೊಳ್ಳುತ್ತಾರೋ ಇಲ್ಲವೋ ಗೊತ್ತಿಲ್ಲ. ಯಾವತ್ತೂ ಇಲ್ಲದೇ ಇರತಕ್ಕಂತಹ ಮಟ್ಟದಲ್ಲಿ ಕನಿಷ್ಠ ಮಜೂರಿಯನ್ನು ಒಂದು ಸಾರಿ; ಎರಡು ಸಾರಿ ರಿವೈಸ್ ಮಾಡಿದ್ದೇವೆ. ಹೀಗೆ ಬಡತನ ನಿರ್ಮೂಲನದ ಕಾರ್ಯಕ್ರಮಗಳನ್ನು ನಮ್ಮ ಸರ್ಕಾರ ಕ್ರಮ ಕೈಗೊಂಡಿದೆ.

ಸನ್ಮಾನ್ಯ ಅಧ್ಯಕ್ಷರೇ, ನಾನು ನನ್ನ ಭಾಷಣವನ್ನು ಇಲ್ಲಿಗೇ ಮುಗಿಸುತ್ತಿಲ್ಲ. ಅವರು ಏನು ಸಮಸ್ಯೆಯನ್ನು ಹೇಳಿದರು, ಅಲ್ಲಿಗೇ ಬರುತ್ತಿದ್ದೇನೆ ದಯವಿಟ್ಟು ಕೇಳಿ. ಪಂಜಾಬಿನಲ್ಲಿ ಗೋಧಿ ಬೆಳೆದು ಗುಡ್ಡೆ ಹಾಕಿದ್ದಾರೆ. ಅದು ಕೊಳೆತು ಹೋಗುತ್ತಿದೆ, ಬೆಂಗಳೂರಿನಲ್ಲಿ ಅನ್ನವಿಲ್ಲದೆ ಸಾವಿರಾರು ಜನರು ಸಾಯುತ್ತಿದ್ದಾರೆ. ಬಡವನಿಗೆ ಕೊಂಡುಕೊಳ್ಳುವಂತಹ ಶಕ್ತಿ ತುಂಬಲಿಕ್ಕೆ ಏನು ಕಾರ್ಯಕ್ರಮ ಹಾಕಿಕೊಂಡಿದ್ದೀರಿ ಎಂದು ಪ್ರಶ್ನೆ ಕೇಳುತ್ತಿದ್ದೀರಿ. ಪಂಜಾಬಿನಲ್ಲಿ ಗೋಧಿ ಬೆಳೆದು ಅದನ್ನು ತುಂಬಲು ಗೋಡೌನ್‌ಗಳು ಇಲ್ಲದೇ ಬಿಸಾಕಿದ್ದಾರೆ. ಬೆಂಗಳೂರಿನಲ್ಲಿ ಬಡವ ಕುಕ್ಕರುಗಾಲು ಹಾಕಿಕೊಂಡು ಬಿದಿದ್ದಾನೆ. ಅವನಿಗೆ ಕೊಳ್ಳುವಂತಹ ಶಕ್ತಿ ಇಲ್ಲ. ಜನತಾ ಪಕ್ಷದ ಸರಕಾರ ಬಡವರಿಗಾಗಿ ಹಾಕಿಕೊಂಡ ಕಾರ್ಯಕ್ರಮದ ಬಗ್ಗೆ, ನನ್ನ ಅನೇಕ ಜನ ಮಿತ್ರರು ವ್ಯಂಗ್ಯವಾಗಿ ಮಾತನಾಡಿದ್ದಾರೆ. ಒಂದೊಂದು ಸಲ ಬಹಳ ನೋವಾಗುವ ತರ ನಡೆದು ಕೊಂಡಿದ್ದಾರೆ. ಕಳೆದ ವರ್ಷ ನಾನು ಈ ಸದನದಲ್ಲಿ ಕುಳಿತಿದ್ದಾಗ ಮಾನ್ಯ ಪಾಟೀಲ್‌ರವರು ಒಂದು ಮಾತನ್ನು ಹೇಳಿದ್ದರು. ಮದುವೆಗೆ ಸಾಮಾನು ಕೊಡುವುದನ್ನು ಬಿಟ್ಟು ಎಲ್ಲಾ ಕೊಟ್ಟಿದ್ದೀರಿ, ಈ ದೇಶದ ಜನತೆಗೆ ಏನು ಮಾಡಿದ್ದೀರಿ ಎಂದು ವ್ಯಂಗ್ಯವಾಗಿ ತಮಾಷೆಯಾಗಿ ಹೇಳಿದರು. ಅದು ತರವಲ್ಲ. ಬಡವನ ಬಗ್ಗೆ ವ್ಯಂಗ್ಯ ಮಾಡುವುದಾಗಲೀ, ಬಡವರ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಉಡಾಫೆ ಮಾಡುವುದಾಗಲೀ ತರವಲ್ಲ. ತಮ್ಮಲ್ಲಿ ಕೈ ಮುಗಿದು ಕೇಳಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಬಡತನದ ಬಗ್ಗೆ ಡೆಫಿನೇಷನ್ ಕೇಳಿದರೆ ಹಸಿದು ಮಲಗಿದವ ಮಾತ್ರ ಬಡತನದ ಬಗ್ಗೆ ಬರೆಯಬಲ್ಲನು. ಅಲ್ಲದೇ ಒಂದೇ ಒಂದು ಪ್ಯಾಂಟ್ ಇಟ್ಟುಕೊಂಡು ಪರೀಕ್ಷೆಗೆ ಹೋದಾಗ, ಅದು ಹರಿದುಹೋಗಿ, ಮುಂದಿನ ದಿವಸ ಪರೀಕ್ಷೆಗೆ ಹೋಗಲು ಏನು ಪರಿಸ್ಥಿತಿ ಉದ್ಭವಿಸುತ್ತದೆ, ಆ ಪರಿಸ್ಥಿತಿ ಅರ್ಥವಾಗಿದ್ದರೆ ಆಗ ಈ ವ್ಯಂಗ್ಯದ ಮಾತು ಬರುತ್ತಿರಲಿಲ್ಲ. ಎದೆ ಕಾಣುವ ಹಾಗೆ ಬಟ್ಟೆ ತೊಟ್ಟ ಹೆಣ್ಣುಮಕ್ಕಳನ್ನು ನೋಡಿದರೆ ಈ ಮಾತನ್ನು ಆಡುತ್ತಿರಲಿಲ್ಲ. ಹೊಟ್ಟೆ ಹಸಿದು ಬೆನ್ನಿಗೆ ಹೊಟ್ಟೆ ಕಚ್ಚಿಕೊಂಡಿರುವ ಬಡವನನ್ನು ನೋಡಿದ್ದರೆ ಆ ಮಾತನ್ನು ಅವರು ಆಡುತ್ತಿರಲಿಲ್ಲ.

ಸನ್ಮಾನ್ಯ ಅಧ್ಯಕ್ಷರೇ, ನನ್ನ ಸ್ನೇಹಿತರು ಹೇಳಿರತಕ್ಕ ಮಾತಿಗೆ ನಾನು ಹೇಳುವುದು ಇಷ್ಟೇ. ಈ ರಾಷ್ಟ್ರದ ಸಂಪತ್ತು ಯಾರದೂ ಅಲ್ಲ. ಖಜಾನೆಯಿಂದ ಬರುವಂಥ ಯಾವ ನೋಟಗೂ ರಾಮಕೃಷ್ಣ ಹೆಗಡೆಯವರ ನೋಟು, ವೈ.ಕೆ. ರಾಮಯ್ಯನ ನೋಟು, ರಾಜೀವ್ ಗಾಂಧಿಯವರ

ನೋಟು ಎಂದು ಒತ್ತಿಲ್ಲ. ಪ್ರತಿಯೊಂದು ಪೈಸೆಯೂ ಕೂಡಾ ರಾಷ್ಟ್ರದ ಸಾಮಾನ್ಯ ಜನರ ಪಾಲಿನದು. ಸರ್ಕಾರ ಎರಡು ರೂಪಾಯಿಗೆ ಒಂದು ಕೆ.ಜಿ. ಅಕ್ಕಿಯನ್ನು ಕೊಡುತ್ತಿದ್ದಾರೆ. ಶೆಟ್ಟರ ಅಂಗಡಿಯಲ್ಲಿ ನಾಲ್ಕು ರೂಪಾಯಿಗೆ ಕೊಡುತ್ತಾರೆ. ಇದನ್ನು ಜನಕ್ಕೆ ನೀಡಿದರೆ ಅನ್ಯಾಯವೇ? ಎರಡನೆಯದಾಗಿ; ಹೆಣ್ಣು ಮಕ್ಕಳು ಉಡತಕ್ಕ ಸೀರೆ ಮತ್ತು ಹೆಣ್ಣು ಮಕ್ಕಳು ಮಾನವನ್ನು ಮುಚ್ಚಬೇಕಾದರೆ ಪಡತಕ್ಕಂಥ ಕಷ್ಟಏನು ಇದೆ, 40 ರೂಪಾಯಿಗಳ ಸೀರೆಯನ್ನು 15 ರೂಪಾಯಿಗೆ ಕೊಟ್ಟರೆ ಅದರ ಬಗ್ಗೆ ಗೇಲಿ ಮಾಡಿದ್ದಾರೆ. ಈ ದೇಶದ ಜನರು ಬಡವರು. ಬಡವರ ಬಗ್ಗೆ ಗೇಲಿ ಮಾಡಿದರೆ, ವ್ಯಂಗ್ಯವಾಗಿ ಮಾತನಾಡಿದರೆ ಏನಾದರು ಅದರ ಬಗ್ಗೆ ನಾವು ಲಘುವಾಗಿ ಕಂಡರೂ ಅವರು ಯಾವುದೇ ಪಕ್ಷದವರಾಗಿರಲಿ, ಯಾವುದೇ ಶಾಸಕನಾಗಿರಲಿ, ಬಡತನದ ಬೇಗೆಯಲ್ಲಿ ಬೇಯತಕ್ಕಂಥ ಜನ ದಂಗೆ ಎದ್ದಾರು. ದಯಮಾಡಿ ಆ ವಿಷಯದಲ್ಲಿ ಗೇಲಿ ಮಾಡುವುದನ್ನು ಬಿಟ್ಟುಬಿಡಿ. ಇನ್ನು ಗರ್ಭಿಣಿ ಸ್ತ್ರೀಯರಿಗೆ ಮಾಶಾಸನ ಕೊಡುವ ಬಗ್ಗೆ ಗೇಲಿ ಮಾಡಿದ್ದಾರೆ. ಬೆಳಿಗ್ಗೆಯಿಂದ ಸಂಜೆಯವರೆಗೂ ಹೊಲದಲ್ಲಿ ದುಡಿದು, ಜೋಳದ ಹೊರೆಯನ್ನು ಹೊತ್ತುಕೊಂಡುಬಂದು, ಮನೆಯಲ್ಲಿ ಹೋಗಿ ರಾತ್ರಿ ಹೆರಿಗೆ ಆಗಿರುವಂಥ ಹೆಣ್ಣುಮಕ್ಕಳನ್ನು ನಾನು ಕಣ್ಣಾರೆ ನೋಡಿದ್ದೇನೆ. ಹೆರಿಗೆ ಇನ್ನು ಒಂದು ತಿಂಗಳು ಇದೆ ಎನ್ನುವಾಗಲೇ, ಆಸ್ಪತ್ರೆಗೆ ಸೇರಿಸತಕ್ಕಂಥ ನಮ್ಮಂಥವರಿಗೆ ಅದರ ಕಷ್ಟ ಗೊತ್ತಿಲ್ಲ. ಆ ಕಷ್ಟ ಅವರಿಗೇ ಗೊತ್ತು. 15 ದಿವಸ, ಇನ್ನು ಒಂದು ತಿಂಗಳು ಇದೆ ಎನ್ನುವಾಗಲೇ ನಾಲ್ಕು ಜನ ವೈದ್ಯರ ಕೈಯಲ್ಲಿ ಪರೀಕ್ಷೆ ಮಾಡಿಸಿಕೊಳ್ಳುವ ಮಟ್ಟಕ್ಕೆ ಬೆಳೆದುಕೊಂಡು ಬಂದಿರುವ ಸ್ಥಿತಿಯ ಬಗ್ಗೆ ನಮಗೇನು ಗೊತ್ತು. ಇವತ್ತು ಆ ಹೆಣ್ಣುಮಕ್ಕಳಿಗೆ 50 ರೂಪಾಯಿಗಳನ್ನು ಕೊಟ್ಟರೆ ಇದು ಅನ್ಯಾಯವೇ?

ವಿರೋಧ ಪಕ್ಷದ ನಾಯಕರು ಹೇಳಿದ ಮಾತನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಂಡು, ಈ ಸರ್ವ ಕಾರ್ಯಕ್ರಮಗಳ ವಿಫಲತೆಗೆ ಪ್ರಮುಖ ಕಾರಣವನ್ನು ಆಗಲೇ ಪ್ರಸ್ತಾಪ ಮಾಡಿದ್ದೇನೆ. ನಮ್ಮ ಯೋಜನೆಯಲ್ಲಿ ಲಭಿಸುವ ಕಾರ್ಯಕ್ರಮಗಳು ತಲುಪದವರಿಗೆ ತುಪುತ್ತಿಲ್ಲ ಎನ್ನುವ ಮಾತನ್ನು ಒಪ್ಪಿಕೊಂಡಿದ್ದೇವೆ. ಇದಕ್ಕೆ ಕಾರಣಕರ್ತರು ಯಾರು ಎಂದು ಹೇಳುವಾಗ ನನಗೆ ಸ್ವಲ್ಪ ಕಷ್ಟವಾಗುತ್ತದೆ. Who are all contributing for all these systems? ನನ್ನ ಕ್ಷೇತ್ರದಲ್ಲಿ ಕೂಡ ಇದರ ಬಗ್ಗೆ ದೂರು ಬಂದಿದೆ. ಪೋಸ್ಟ್‌ಮ್ಯಾನ್ ಎಂ.ಓ. ತೆಗೆದೊಂಡು ಹೋದಾಗ ಐದು ರೂಪಾಯಿ ಕೇಳುತ್ತಾನೆಂದು ದೂರು ಇದೆ. ಇದನ್ನು ದರಿದ್ರ ವ್ಯವಸ್ಥೆ ಎಂದು ನಾವು ಕರೆಯಬೇಕಾಗುತ್ತದೆ. ನೂರಾರು ವರ್ಷಗಳಿಂದಲೂ ನಾವು ಶೋಷಣೆಗೆ ಒಳಗಾಗಿ ಬಂದಿದ್ದೇವೆ. ಶೋಷಿತರಾಗಿದ್ದೇವೆ. ಇದನ್ನು ನಿರ್ಮೂಲನ ಮಾಡಲಿಕ್ಕೆ ಸಂಪೂರ್ಣವಾಗಿ ಸಫಲರಾಗಿದ್ದೇವೆ ಎಂದು ಹೇಳುವುದಕ್ಕೆ ನಾನು ಸಿದ್ಧನಾಗಿಲ್ಲ. ಈ ಸಂದರ್ಭದಲ್ಲಿ ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ. ನಮ್ಮ ಹಳ್ಳಿಯಲ್ಲಿ ಒಬ್ಬ ಗೃಹಿಣಿ ಅಡಿಗೆ ತಯಾರುಮಾಡಿ ಇಟ್ಟಿದ್ದಳು. ಭೋಜನಕ್ಕೆ ಆಕೆ ಪತಿ ಬರುವ ಮೊದಲೇ, ಇವಳೇ ಆ ಭೋಜನವನ್ನು ತಿಂದು ಬಿಟ್ಟಿದ್ದಳು. ಆಮೇಲೆ

ಇದನ್ನು ನೋಡಿ ಅವನು ಇನ್ನೊಬ್ಬಳನ್ನು ಮದುವೆ ಮಾಡಿಕೊಂಡ. ಅವಳು ಮಡಕೆಯನ್ನೇ ತಿಂದುಬಿಟ್ಟಳು. ಇದು ಒಂದು ತಾತ್ವಿಕವಾದ ಪ್ರಶ್ನೆಯಾದ್ದರಿಂದ ನಾನು ಈ ಕಥೆಯನ್ನು ಪ್ರಸ್ತಾಪ ಮಾಡಿದೆ ಅಷ್ಟೆ. ಇದರ ಬಗ್ಗೆ ನಾನು ಹೇಳುವುದು ಏನೆಂದರೆ, ಈ ಶಾಶ್ವತವಾದ ಉತ್ಪಾದನಾ ಯೋಜನೆ ಕಾರ್ಯಕ್ರಮಗಳು ಹಣದ ಕೊರತೆಯಿಂದ ಕುಂಠಿತವಾಗಿದೆ ಎಂದು ನಾನು ಅನೇಕ ಕಡೆಗಳಲ್ಲಿ ಕೇಳಿದ್ದೇನೆ.

ಆದುದರಿಂದ ನಾನು ಇವೊತ್ತಿನ ದಿವಸ ಹೇಮಾವತಿ ಕಾರ್ಯಕ್ರಮಗಳಿಗೆ ಹೆಚ್ಚಿನ ಹಣ ಕೇಳಿದ್ದೇನೆ. ಅದು ಕಾರ್ಯರೂಪಕ್ಕೆ ಬಂದರೆ ಯಾರಿಗೆ ಬರುತ್ತದೆ ಸ್ವಾಮಿ? ಆ ನೀರು ನನಗೆ ಬರುತ್ತದೆಯೇ, ಕೃಷ್ಣಾರೆಡ್ಡಿಯವರಿಗೆ ಬರುತ್ತದೆ, ಶಿವನಂಜಪ್ಪನವರಿಗೆ ಬರುತ್ತದೆ. 100ಕ್ಕೆ 200ರಷ್ಟು ಜನಕ್ಕೆ ಅವರು ಸತ್ತರೆ ಹೂಳುವುದಕ್ಕೆ ಜಾಗ ಇಲ್ಲದಂತಾಗುತ್ತದೆ. ಇಂಥಾ ಯೋಜನೆಗಳನ್ನು ನಾವು ಸೃಷ್ಟಿ ಮಾಡಿದ್ದೇವೆ. ನಮಗೆ ರಸ್ತೆಗಳಾಗಬೇಕು, ಸೇತುವೆಗಳಾಗಬೇಕು, ನೀರಾವರಿ ಕಾಮಗಾರಿ ಗಳಾಗಬೇಕು ಎಂದು ಶೇಕಡಾ 70 ಜನರ ಕ್ಷೇಮವನ್ನು ನಾವು ನೋಡಿಕೊಳ್ಳುವುದಾದರೆ, ಅದರಲ್ಲೂ ನಿಮ್ನವರ್ಗದ ಜನರಿಗೆ ಜಮೀನು ಇಲ್ಲದೇ ಇದ್ದವರು ಏನು ಇದ್ದಾರೆ, ಅವರು ಏನು ಮಾಡಬೇಕು ಹೇಳಿ? ಅವರಿಗೂ ಸಹ ನಾವು ಅವಕಾಶವನ್ನು ಕಲ್ಪಿಸಿಕೊಡಬೇಕು. ರಸ್ತೆ ಮಾಡಿದರೆ, ಅದಕ್ಕೆ ಕೆಲಸ ಮಾಡಿಸಿಕೊಟ್ಟರೆ ಅದು ಯಾರಿಗೆ ಅನುಕೂಲ ನನಗೆ ಅನುಕೂಲ. ಆದರೆ ನೇಗಿಲು ಹಿಡಿದಿರುವ ರೈತನಿಗೆ ಮಣ್ಣಿನ ರಸ್ತೆಯಾದರೇನು, ಜಲ್ಲಿ ರಸ್ತೆಯಾದರೇನು. ಟಾರ್ ರಸ್ತೆಯಾದರೇನು ಅವನಿಗೆ ಅದೆಲ್ಲವೂ ಒಂದೇ.

ಇದರಲ್ಲಿ ಈಗ ಬಂದಿರುವುದು ಈ ತಾತ್ವಿಕವಾದ ಪ್ರಶ್ನೆ ಏನು ಇದೆ ಎಂದರೆ, ರಾಜ್ಯದ ಅಭಿವೃದ್ಧಿ ಕೆಲಸ ಕಾರ್ಯಗಳಿಗೆ ತೊಡಗಿಸುವಂಥಾ ಹಣದ ಬಗ್ಗೆ ಮತ್ತು ಬಡತನ ನಿರ್ಮೂಲನ ಮಾಡುವುದಕ್ಕೆ ಹೊರಟಾಗ ಇವರುಗಳು ಓಟಿನ ಬೇಟೆಗಾಗಿ ಇಂತಹ ಕಾರ್ಯಕ್ರಮಗಳಿಗೆ ಖರ್ಚು ಮಾಡುತ್ತಿದ್ದಾರೆ ಎಂದು ಹೇಳುತ್ತಿದ್ದಾರೆ. ಇದನ್ನು ನಾನು ಮಾಡುವುದಿಲ್ಲ ಎಂದು ಇಟ್ಟುಕೊಳ್ಳಿ. ಈ ಬಗ್ಗೆ ನನ್ನ ಒಂದು ಅಭಿಪ್ರಾಯವನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಅದೇನೆಂದರೆ, ಯಾರಾದರು ಸತ್ತರೆ 100ಕ್ಕೆ 30 ಪರ್ಸೆಂಟ್ ಜನಕ್ಕೆ ಅವರನ್ನು ಹೂಳುವುದಕ್ಕೆ ಜಾಗ ಇಲ್ಲ ಎಂದು ಅವರ ಹಿತರಕ್ಷಣೆ ಮಾಡುವುದಕ್ಕೆ ಸ್ವಲ್ಪ ಕುಂಠಿತವಾದರೂ ಪರವಾಗಿಲ್ಲ. ಆದರೆ 100ಕ್ಕೆ 70ರಷ್ಟು ಬಡವರು ಏನು ಇದ್ದಾರೆ ಅವರ ಹಿತರಕ್ಷಣೆ ಮಾಡುವುದಕ್ಕೋಸ್ಕರ ನಾವು ಸ್ವಲ್ಪವಾದರೂ ಕೆಲಸ ಮಾಡಲೇ ಬೇಕಾಗುತ್ತದೆ.

ನಾನು ಈಗಾಗಲೇ ಹೇಳಿದಂತೆ ಹೊಲಗಳಿಗೆ ಹೋಗಿ ಕೂಲಿ ಕೆಲಸ ಮಾಡುವವರಿಗೆ 8-10 ರೂಪಾಯಿಗಳ ಕೂಲಿ ಸಿಗುತ್ತದೆ. ಈಗ ಅಕ್ಕಿಯ ಬೆಲೆ ಕೆ.ಜಿ.ಗೆ 4 ರೂಪಾಯಿಗಳಿಗಿಂತ ಜಾಸ್ತಿ ಇದೆ. ಇವರು ಬಂದ ಕೂಲಿಯಲ್ಲಿ ಎರಡು ಕೆ.ಜಿ. ಅಕ್ಕಿ ಕೊಂಡರೆ, ಉಪ್ಪು, ಬೇಳೆ ಮುಂತಾದ ಇತರೇ

ಅಡಿಗೆ ಸಾಮಾನುಗಳನ್ನು ಯಾವ ರೀತಿ ಕೊಳ್ಳಬೇಕು? ಬಟ್ಟೆಯನ್ನು ಯಾವ ರೀತಿ ಕೊಳ್ಳಬೇಕು? ತಮ್ಮ ಮಕ್ಕಳಿಗೆ ಬೇಕಾದ ಪುಸ್ತಕ, ಪೆನ್ಸಿಲ್‌ಗಳನ್ನು ಯಾವ ರೀತಿ ಕೊಳ್ಳಬೇಕು? ಇದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ನಮ್ಮ ಸರ್ಕಾರ, ಇಂತಹ ಬಡವರಿಗೆ ಕಡಿಮೆ ದರದಲ್ಲಿ ಬಟ್ಟೆ ಮತ್ತು ಅಕ್ಕಿಯನ್ನು ಮಾರಾಟ ಮಾಡುವಂತಹ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಇಂತಹ ಬಡತನ ನಿರ್ಮೂಲನ ಕಾರ್ಯಕ್ರಮಗಳು ನಮ್ಮ ಅಭಿವೃದ್ಧಿ ಯೋಜನೆಗಳನ್ನು ಕುಂಠಿತಗೊಳಿಸುತ್ತವೆ ಎಂದು ಯಾರಾದರೂ ದೂಷಣೆ ಮಾಡಿದರೆ, ಅಂತಹವರು ಈ ದೇಶದ ಬಡಜನರ ಆಕ್ರೋಶಕ್ಕೆ ಕಾರಣರಾಗಬೇಕಾಗುತ್ತದೆ.

O

(6-2-1987)

# ಕಾವೇರಿ ನದಿ ನೀರಿನ ಬಗ್ಗೆ ಚರ್ಚೆ

ಸನ್ಮಾನ್ಯ ಉಪಾಧ್ಯಕ್ಷೆಯವರೆ, ನಾನು ರುಜು ಮಾಡದಿದ್ದರೂ ಮಾತನಾಡುವುದಕ್ಕೆ ಅವಕಾಶ ಕೊಟ್ಟಿದ್ದೀರಿ. ಕಾವೇರಿ ನೀರಿನ ಬಗ್ಗೆ ಚರ್ಚೆ ನಡೆಯುವಾಗ ಸುಮ್ಮನೆ ಕುಳಿತು ಕೊಳ್ಳುವುದಕ್ಕೆ ನನ್ನ ಕೈಯಲ್ಲಿ ಆಗುವುದಿಲ್ಲ. ನಾನು ಮಾತನಾಡಲು ಅವಕಾಶ ಕೊಡಬೇಕೆಂದು ನನ್ನ ಮಿತ್ರರು ತಮ್ಮಲ್ಲಿ ಕೇಳಿದ್ದಕ್ಕೆ ಅವಕಾಶ ಕೊಟ್ಟಿದ್ದೀರಿ. ಅದಕ್ಕಾಗಿ ತಮಗೆ ವಂದನೆಗಳು.

ಈ ದಿವಸ ದಕ್ಷಿಣ ರಾಜ್ಯಗಳ ಮಧ್ಯದಲ್ಲಿ ಕಾವೇರಿ ನೀರಿನ ಹಂಚಿಕೆಯ ಬಗ್ಗೆ ಸಮ್ಮ ಉಚ್ಚ ನ್ಯಾಯಾಲಯದಲ್ಲಿ ನಡೆಯುತ್ತಿರುವ ಪ್ರಸ್ತಾಪ, ಅದರಿಂದ ಬಂದಂತಹ ತೀರ್ಮಾನಗಳನ್ನು ಕುರಿತು ಚರ್ಚೆ ನಡೆಯುತ್ತಿದೆ. ಬಹುಶಃ ಕಾವೇರಿ ನೀರಿನ ವಿತರಣೆಯ ಬಗ್ಗೆ ಸದನದ ಒಳಗೆ ಹಾಗೂ ಹೊರಗೆ ಅನೇಕ ವೇದಿಕೆಗಳಲ್ಲಿ ಚರ್ಚೆಯಾಗುತ್ತಿದೆ. ಈ ಚರ್ಚೆ ಇವತ್ತಿನದಲ್ಲ, ನಿನ್ನೆ - ಮೊನ್ನೆಯದಲ್ಲ. ಇದು 16-10-1981ರಿಂದ ನಡೆಯುತ್ತಿದೆ. ನನ್ನಲ್ಲಿರುವ ಕಾಗದ ಪತ್ರಗಳ ಮಾಹಿತಿ ಪ್ರಕಾರ ಇಲ್ಲಿಗೆ ಸುಮಾರು 101 ವರ್ಷಗಳಾಯಿತು. 101 ವರ್ಷಗಳ ಹಿಂದೆ ಅಂದಿನ ಪ್ರಜಾಪ್ರತಿನಿಧಿಗಳ ಸಭೆಯಲ್ಲಿ ಈ ವಿಷಯ ಆರನೆಯ ವಿಷಯವಾಗಿ ಚರ್ಚೆಯಾಗಿದೆ. ಅಂದರೆ 101 ವರ್ಷಗಳ ಹಿಂದೆ ಪೀಪಲ್ ರೆಪ್ರಸೆಂಟೇಟಿವ್ ಸಭೆಯಲ್ಲಿ ಸಾಕಷ್ಟು ಚರ್ಚೆ ಯಾಗಿದೆ. ಆವೊತ್ತಿನ ಚರ್ಚೆಯಲ್ಲಿ ಮೈಸೂರಿನ ಹಿತವನ್ನು ರಕ್ಷಣೆ ಮಾಡಬೇಕೆಂದು ವಾದ ಮಾಡಿದವರು ವೈ.ಕೆ. ರಾಮಯ್ಯನವರೂ ಅಲ್ಲ, ಬಂಗಾರಪ್ಪನವರೂ ಅಲ್ಲ; ಅವನು ಯಾವ ತಾಯಿಯ ಮಗನೋ, ಎಲ್ಲಿ ಮಣ್ಣಾಗಿದ್ದಾನೋ, ಎಲ್ಲಿ ಬೂದಿಯಾಗಿದ್ದಾನೋ ನನಗೆ ಗೊತ್ತಿಲ್ಲ. 'ಇಲಿಯಟ್' ಎನ್ನುವ ಒಬ್ಬ ಇಂಗ್ಲೀಷ್ ಮನುಷ್ಯ. 6ನೆಯ ವಿಷಯದಲ್ಲಿ ಪ್ರಸ್ತಾಪ ಮಾಡಿ, ಆ ಪ್ರಸ್ತಾಪದಲ್ಲಿ ಒಂದು ಮಾತನ್ನು ಹೇಳುತ್ತಾನೆ. ''**ಮೈಸೂರು ರಾಜ್ಯದ ಜನರ ದೇಣಿಗೆಯಿಂದ ಮೈಸೂರಿನ ಭೂಮಿಯ ಮೇಲೆ ಕಟ್ಟಿದಂತಹ ಅಣೆಕಟ್ಟೆಯ ಮೂಲಕ ನೀರನ್ನು ಬಿಟ್ಟು ಕೊಡುವಂತಹ ಯಾವುದೇ ಪ್ರಸ್ತಾಪ ಅನ್ಯಾಯ. ಅಷ್ಟೇ ಅಲ್ಲ, ಇದು ಅವಿವೇಕ ಕೂಡ**'' ಎಂದು ಅಲ್ಲಿ ಅವರು ಪ್ರಸ್ತಾಪ ಮಾಡುತ್ತಾರೆ. ಅದನ್ನು ನಾನು ಇಲ್ಲಿ ಪೂರ್ತಿ ಓದುವುದಕ್ಕೆ ಹೋಗುವುದಿಲ್ಲ.

1992ನೇ ಇಸವಿಯವರೆಗೆ ಈ ರಾಜ್ಯದ ಎಲ್ಲ ಕ್ಷೇತ್ರಗಳಲ್ಲಿ, ಈ ಸದನದ ಹೊರಗಡೆ ಮತ್ತು ಒಳಗಡೆ ಈ ವಿಷಯ ಕುರಿತು ಚರ್ಚೆಯಾಗಿದೆ. 1988ರಲ್ಲಿ ಈ ವಿಷಯವನ್ನು ಕುರಿತು ಸುಪ್ರೀಂ ಕೋರ್ಟಿನಲ್ಲಿ ಕೊನೆಯ ತೀರ್ಮಾನ ಆಗುವಂಥ ಹಂತದಲ್ಲಿ 13-10-1988ರಲ್ಲಿ ಈ ಸದನದಲ್ಲಿ ದೀರ್ಘವಾದಂಥ ಚರ್ಚೆಯಾಗಿದೆ. ಆ ಚರ್ಚೆ ಈ ಸದನದ ಕಡತದಲ್ಲಿ ಸೇರಿ ಹೋಗಿದೆ. ಈ ಸಭೆಯ ಹಿರಿಯ ಸದಸ್ಯರಾದ ಶ್ರೀ ವೀರಪ್ಪಮೊಯ್ಲಿಯವರು, ಶ್ರೀಮತಿ

ನಾಗರತ್ನಮ್ಮನವರು ಅವತ್ತು ಮಾತನಾಡಿದ್ದಾರೆ. ಆಗ ಈ ರಾಜ್ಯದ ಲಕ್ಷಾಂತರ ಜನರಿಗೆ ಸಂಬಂಧಪಟ್ಟ ಚರ್ಚೆ ಇದಾಗಿದ್ದು, ಈ ಚರ್ಚೆಯನ್ನು ಒಂದೆರಡು ಗಂಟೆಗೆ ಸೀಮಿತವಾಗಿ ಮಾಡಬೇಡಿ. ಹತ್ತಾರು ದಿವಸ ಚರ್ಚೆಗೆ ಅವಕಾಶ ಮಾಡಿಕೊಡಿ ಅಂತ ಆ ದಿನ ಹೇಳಿದ್ದಾರೆ. ದುರಾದೃಷ್ಟವಶಾತ್ ಏನಾಗುತ್ತದೆ ಎಂದರೆ, ಈ ಕಡೆ ಕುಳಿತುಕೊಂಡು ಆಡಿದ ಮಾತು, ಆ ಕಡೆಗೆ ಹೋದಾಗ ಏಕೋ ಬದಲಾವಣೆಯಾಗುತ್ತದೆ. ಇದು ನನಗೂ ಅನ್ವಯಿಸುತ್ತದೆ. ಇದು ಮನುಷ್ಯನ ಸ್ವಭಾವ ಅಂತ ಕಾಣುತ್ತದೆ. ಅವತ್ತು ಶ್ರೀಮತಿ ನಾಗರತ್ನಮ್ಮನವರು ಒಂದು ಮಾತನ್ನು ಹೇಳಿದ್ದಾರೆ. ಅವರು ವಿರೋಧ ಪಕ್ಷದ ನಾಯಕರು, ಟೈಮ್ ವೇಸ್ಟ್ ಆಗುತ್ತದೆ ಎಂದು ಹೇಳಿದರೆ, ನಾನು ಓದುವುದಿಲ್ಲ. ನನ್ನ ಪ್ರಶ್ನೆ ಇಷ್ಟೇನೆ; ಇಲ್ಲಿ ಚರ್ಚೆಯಾಗುತ್ತಿದೆ ಮತ್ತು ಎಲ್ಲಕಡೆ ಚರ್ಚೆ ಆಗುತ್ತಿದೆ. ಆದರೆ ಸಮಸ್ಯೆಗೆ ಪರಿಹಾರ ದೊರೆತಿಲ್ಲ. ಇಷ್ಟೇ ನನ್ನ ಕಳಕಳಿ ಹೊರತು, ಮಾತನಾಡಿ ಚಟ ತೀರಿಸಿಕೊಳ್ಳಬೇಕು ಎನ್ನುವುದು ನನ್ನ ಉದ್ದೇಶ ಅಲ್ಲ. ಅದಕ್ಕಾಗಿ ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ, ಸ್ವಲ್ಪ ಹೆಚ್ಚಿನ ಕಾಲಾವಕಾಶವನ್ನು ನನಗೆ ಕೊಡಬೇಕು ಅಂತ.

ಇದು 1891ರಲ್ಲಿ ತೀರ್ಮಾನ ಆಗಿದೆ. 1964ರಲ್ಲಿ ತೀರ್ಮಾನ ಆಗಿದೆ. 1966ರಲ್ಲಿ ತೀರ್ಮಾನ ಆಗಿದೆ. ಮತ್ತೆ ಈ ಸದನದಲ್ಲಿ ನಾನು ಇಲ್ಲದಿರುವ ಸಂದರ್ಭದಲ್ಲಿ ಅಂದರೆ ದಿನಾಂಕ 7-6-1991ರಲ್ಲಿ ಒಂದು ತೀರ್ಮಾನವಾಗಿದೆ. 1990ರಲ್ಲಿ ಆದಂಥ ತೀರ್ಮಾನ ಏನು ಎಂದರೆ, ಕಾವೇರಿ ನೀರಿನ ಹಂಚಿಕೆ ಬಗ್ಗೆ ಉಚ್ಚ ನ್ಯಾಯಾಲಯ ನೀಡಿರುವ ತೀರ್ಮಾನವನ್ನು ತಿರಸ್ಕರಿಸಬೇಕು, ಅದನ್ನು ಗಣನೆಗೆ ತೆಗೆದುಕೊಳ್ಳಬಾರದು. ರಾಜ್ಯ ಸರ್ಕಾರ ಅದನ್ನು ರಿಜೆಕ್ಟ್ ಮಾಡಬೇಕು ಅಂತ. ಉಚ್ಚನ್ಯಾಯಾಲಯದಿಂದ ರಚಿಸಲ್ಪಟ್ಟಂಥ ಟ್ರಿಬ್ಯುನಲ್ ಅದು. I know the whole story. It is the child of the Supreme Court. As per the direction of the Supreme Court, the tribunal was constituted. ಆ ಒಂದು ಟ್ರಿಬ್ಯುನಲ್ ಕೊಟ್ಟಂಥ ತೀರ್ಪನ್ನು ತಿರಸ್ಕರಿಸಬೇಕು ಎಂದು ಈ ಸದನ ಒಂದು ಸರ್ವಾನುಮತದ ತೀರ್ಮಾನಕ್ಕೆ ಬಂದಿದೆ. ಅದು ಹಕ್ಕುಚ್ಯುತಿಯಾಗುತ್ತದೆಯೇ, ಪ್ರಿವಿಲೆಜ್ ಆಗುತ್ತದೆಯೇ, ಮಾನನಷ್ಟ, ಇಲ್ಲವೇ ಅಧಿಕಾರ ನಷ್ಟವಾಗುತ್ತದೆಯೇ ಎಂದು ನನಗೆ ಗೊತ್ತಿಲ್ಲ.

ವಿರೋಧ ಪಕ್ಷದ ನಾಯಕರು ಕೊಟ್ಟಂಥ ಒಂದು ಪತ್ರಿಕಾ ಹೇಳಿಕೆಯನ್ನು ಸರ್ಕಾರ ಗಣನೆಗೆ ತೆಗೆದುಕೊಳ್ಳದೇ ಹೋಗಬಹುದು. ಒಬ್ಬ ಶಾಸಕರು ಬರೆದ ಪತ್ರವನ್ನು ಮಂತ್ರಿಗಳು ಗಣನೆಗೆ ತೆಗೆದುಕೊಳ್ಳದೇ ಹೋಗಬಹುದು. ಆದರೆ ಈ ರಾಜ್ಯದ ಇಡೀ ಸಮುದಾಯವನ್ನು, ಜನಾಂಗವನ್ನು ಪ್ರತಿನಿಧಿಸುವಂಥ ಈ ಸದನ ತೆಗೆದುಕೊಂಡಂಥ ತೀರ್ಮಾನಕ್ಕೂ ಕೂಡ ಮೂರು ಕಾಸಿನ ಬೆಲೆ ಸಿಗದಿದ್ದರೆ, ಅದನ್ನು ಪರಿಗಣನೆಗೆ ತೆಗೆದುಕೊಳ್ಳದಿದ್ದರೆ, ಅದನ್ನು ಗಂಭೀರವಾಗಿ ಪರಿಶೀಲಿಸದಿದ್ದರೆ, ಅದನ್ನು ಕಾರ್ಯರೂಪಕ್ಕೆ ತರದಿದ್ದರೆ, ಈ ರಾಜ್ಯದ ಜನತೆಗೆ ಇರುವ ಮತ್ತೊಂದು ದಾರಿಯನ್ನು ತಾವು ತೋರಬೇಕಾಗುತ್ತದೆ. ನಾನು ಈ ಪೀಠಿಕೆಯನ್ನು ಹುಚ್ಚನಾಗಿ

ಕೊಟ್ಟಿಲ್ಲ, ಚೆಪ್ಪನಾಗಿ ಕೊಟ್ಟಿಲ್ಲ. 1891ನೇ ಇಸವಿಯಿಂದ 1992ನೇ ಇಸವಿಯವರೆಗೆ ನೂರು ವರ್ಷಕಾಲ ಈ ವಿಷಯ ಚರ್ಚೆಯಾಗಿದೆ. 1964ರಲ್ಲಿ ಏನಾಯಿತು, 66ರಲ್ಲಿ ಏನಾಯಿತು, ಏನೇನು ತೀರ್ಮಾನವಾಯಿತು ಎಂದು ನನ್ನ ಹತ್ತಿರ ದಾಖಲೆಗಳಿವೆ. ಬೇಕಾದರೆ ಅದನ್ನು ಓದುತ್ತೇನೆ. ನನ್ನ ಪೀಠಿಕೆಯ ಉದ್ದೇಶ ಇಷ್ಟೇನೆ; ಜನಪ್ರತಿನಿಧಿಗಳಾದ ನಾವು ತೆಗೆದುಕೊಳ್ಳುವಂಥ ತೀರ್ಮಾನಕ್ಕೆ ಈ ಸರ್ಕಾರ, ಯಾವ ಪಕ್ಷದ್ದೇ ಆಗಿರಲಿ, ಅದಕ್ಕೆ ಬೆಲೆ ಕೊಡದಿದ್ದರೆ, ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳದಿದ್ದರೆ, ಕಾರ್ಯರೂಪಕ್ಕೆ ತರದೇ ಇದ್ದರೆ, ಕೋಟ್ಯಾಂತರ ಜನರ ಪ್ರತಿನಿಧಿಗಳ ಬಯಕೆಗೆ ಸ್ಪಂದಿಸದೇ ಇದ್ದರೆ ಏನು ಮಾಡಬೇಕು? ಬೇರೆ ದಾರಿ ಯಾವುದು? ಅದಕ್ಕೆ ಶ್ರೀ ನಾಗರಾಜ್‌ರವರು with no other alternative wanted to burn that report What is the best alternative? I request the Chief Minister where shall be go now? ಮತ್ತೇನು ಮಾಡಬೇಕು? ತಮ್ಮ ಮುಂದೆ ಪ್ರತಿಭಟನೆ ಮಾಡಿದ್ದು ಆಯಿತು. ಡಿ.ಸಿ. ಆಫೀಸಿನ ಮುಂದೆ ಪ್ರತಿಭಟನೆ ಮಾಡಿದ್ದಾಯಿತು. ಗವರ್ನರ್‌ರವರ ಹತ್ತಿರ ಹೋಗಿ ಅರ್ಜಿ ಕೊಟ್ಟಿದ್ದೂ ಆಯಿತು.

1988ರಲ್ಲಿ ನಮ್ಮ ಎಲ್ಲಾ ಹಿರಿಯ ಸದಸ್ಯರು ಕುಳಿತುಕೊಂಡು ಚರ್ಚೆ ಮಾಡಿದ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಿದ್ದೆ. ಏನೆಂದರೆ, ವಿರೋಧ ಪಕ್ಷದ ಸದಸ್ಯರು ಅಥವಾ ಆಡಳಿತ ಪಕ್ಷದ ಸದಸ್ಯರಾಗಿ ಮಾತನಾಡುತ್ತಿರುವ ನಾವು, ಈ ಜನರ ಹಿತರಕ್ಷಣೆ ಮಾಡದಿದ್ದಲ್ಲಿ, ಒಣಗಿದ ಪೈರಿಗೆ ನೀರನ್ನು ಕೊಡದೆ ಹಿಂದೆಬಿದ್ದಲ್ಲಿ, ಈ ರಾಜ್ಯದ ಜನ ಎಚ್ಚೆತ್ತುಕೊಳ್ಳಬೇಕಾಗುತ್ತದೆ. ಅವರು ರಾಜ್ಯ ಸರ್ಕಾರದ ಮೇಲೆ, ಕೇಂದ್ರದ ಮೇಲೆ, ಜಿಲ್ಲಾ ಪರಿಷತ್ತುಗಳ ಮೇಲೆ, ಎಂ.ಎಲ್.ಎ.ಗಳ ಮೇಲೆ ತಿರುಗಿಬೀಳುವಂಥ ಪರಿಸ್ಥಿತಿಯನ್ನು ನೋಡಬೇಕಾಗುತ್ತದೆ. ಈ ರಾಜ್ಯದ ಹಿತವನ್ನು ಕಾಪಾಡು ವುದರಲ್ಲಿ, ರೈತನ ಪೈರಿಗೆ ನೀರುಣಿಸುವ ಪವಿತ್ರ ಕೆಲಸ ಮಾಡುವುದರಲ್ಲಿ, ಆದ್ಯತೆಯನ್ನು ನೀಡುವುದರಲ್ಲಿ, ಮೀನಾಮೇಷ ಎಣಿಸಿದರೆ, ಕಾವೇರಿ ಕೊಳ್ಳದ ಜನ ರೊಚ್ಚಿಗೆದ್ದಾರು ಎಂದು 1988ನೇ ಅಕ್ಟೋಬರ್ 13ರಂದು ಈ ಸದನದಲ್ಲಿ ನಾವು ಮಾಡಿದಂಥ ಚರ್ಚೆ. ನಾನು ಈ ಚರ್ಚೆಯಲ್ಲಿ ಬಹುಶಃ ಸುಮಾರು 55 ನಿಮಿಷಗಳ ಕಾಲ ಮಾತನಾಡಿದ್ದೇನೆ. ನಾನು ಪಕ್ಷದ ದೃಷ್ಟಿಯಿಂದ ಮಾತನಾಡುತ್ತಿಲ್ಲ. ಆಡಳಿತ ಪಕ್ಷದಲ್ಲಿ ಕುಳಿತು, ಇಷ್ಟು ಕಠಿಣವಾದ ಶಬ್ದವನ್ನು ಬಳಸಿ, ನಾನು ಸರ್ಕಾರಕ್ಕೆ ಮನವಿ ಮಾಡಿಕೊಂಡಿದ್ದೇನೆ, ಎಚ್ಚರ ಮಾಡಿದ್ದೇನೆ ಎನ್ನುವ ಒಂದೇ ಉದ್ದೇಶದಿಂದ ಇದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

6-7-1991ರಂದು ಒಂದು ತೀರ್ಮಾನವಾಗಿದೆ. ಈ ತೀರ್ಮಾನ ಏನು ಎಂದರೆ, ಈ ಟ್ರಿಬ್ಯುನಲ್ ಕೊಟ್ಟ ಆರ್ಡರ್‌ನ್ನು ತಿರಸ್ಕಾರ ಮಾಡಬೇಕೆನ್ನತಕ್ಕಂಥಾದ್ದು. ಸರಕಾರಕ್ಕೆ ನನ್ನ ಕೋರಿಕೆ ಇಷ್ಟೆ, ಒಬ್ಬ ಶಾಸಕನಾಗಿ ನಾನು ಬರೆದ ಕಾಗದವನ್ನು ಅವರು ಕಸದ ಬುಟ್ಟಿಗೆ ಹಾಕಬಹುದು. ವಿರೋಧಪಕ್ಷದ ನಾಯಕರಾದ ಶ್ರೀಮಾನ್ ಚಂದ್ರೇಗೌಡರು ಕೊಟ್ಟ ಪತ್ರಿಕಾ ಹೇಳಿಕೆಯನ್ನು

ಸಂಪೂರ್ಣವಾಗಿ ನಿರ್ಲಕ್ಷಿಸಬಹುದು. ನಾನು ಮಾಡಿದ ಭಾಷಣವನ್ನುಸಂಪೂರ್ಣವಾಗಿ ಗಮನಕ್ಕೆ ತೆಗೆದುಕೊಳ್ಳದೇ ಹೋಗಬಹುದು. ಆದರೆ ಕೋಟ್ಯಾಂತರ ಜನರ ಪ್ರತಿನಿಧಿಗಳ ಈ ಸಭೆ ತೆಗೆದುಕೊಂಡಿದ್ದ ಯುನಾನಿಮಸ್ ಡಿಷಿಷನ್ ಅನ್ನು ಗೌರವಿಸದೆ ಇದ್ದ ಪಕ್ಷದಲ್ಲಿ ನಾವು ಏನು ಮಾಡಬೇಕು? ಇಲ್ಲಿ ಮಾನ್ಯ ವಾಟಾಳ್ ನಾಗರಾಜ್ ಮಾಡಿದ ತರಹ ಸುಡಬೇಕು, ಇಲ್ಲದೇ ಹೋದರೆ ಕಾನೂನನ್ನು ಕೈಗೆ ತೆಗೆದುಕೊಳ್ಳುವ ಕೊನೆಯ ಪ್ರಯತ್ನ ಮಾಡಬೇಕು.

If the Government fails to implement, fails to honour the decision of this House. I would like to know from the Government what is the alternate remedy available for the Hon'ble Members sitting here? If this is answered I will sit down. This House has taken an unanimous decision to reject the orders of the Tribunal but still you are considering it, you are honouring it, why? Please tell me what is the alternate remedy for us. that is why,I said it is a clear violation of the directives given by this House. That is why it amounts to privilege. This is what I said.

ಸನ್ಮಾನ್ಯ ಅಧ್ಯಕ್ಷಿಣಿಯವರೇ, ಬಹುಶಃ ನಮ್ಮ ಅಧ್ಯಕ್ಷರು ಈಗ ತಮ್ಮ ಸ್ಥಾನದಲ್ಲಿ ಇದ್ದಿದ್ದರೆ ನನಗೆ ತುಂಬಾ ಅನುಕೂಲವಾಗುತ್ತಿತ್ತು. ಕಾವೇರಿ ನೀರಿನ ವಿತರಣೆ ಬಗ್ಗೆ ಉಚ್ಚನ್ಯಾಯಾಲಯದ ಆದೇಶದ ಮೇಲೆ ಟ್ರಿಬ್ಯುನಲ್ ಏನು ತೀರ್ಮಾನ ಕೊಟ್ಟಿದೆ. ಆ ತೀರ್ಮಾನ ದಿಂದ ನನಗೆ ಹಾಗು ಶ್ರೀಮಾನ್ ಮಂಜುನಾಥ್‌ರವರಿಗೆ, ಶ್ರೀಮಾನ್ ಹುಚ್ಚಮಾಸ್ತಿಗೌಡರಿಗೆ, ಸ್ವಲ್ಪಮಟ್ಟಿಗೆ ನಮ್ಮ ಅಧ್ಯಕ್ಷರಾದ ಶ್ರೀಮಾನ್ ಎಸ್.ಎಂ. ಕೃಷ್ಣರವರಿಗೆ ಹಾಗೂ ನಾಗಮಂಗಲದವರಿಗೆ ಹೆಚ್ಚಿನ ಅನುಕೂಲವಾಗಿದೆ. ಮಂಡ್ಯ ಜಿಲ್ಲೆಯಲ್ಲಿ ವಿಶ್ವೇಶ್ವರಯ್ಯ ಚಾನಲ್ ಕೆಳಗಡೆ ಬರತಕ್ಕ ನೀರನ್ನು ಉಪಯೋಗಿಸಿಕೊಂಡು ಆಗಲೇ ಗದ್ದೆ ಮಾಡುತ್ತಿದ್ದಾರೆ. ಹಾಸನ ಜಿಲ್ಲೆಯಲ್ಲಿ ಹೇಮಾವತಿ ನೀರಿನ ಬಳಕೆ ಎಷ್ಟಾಗುತ್ತದೋ ಅಷ್ಟನ್ನು ಮಾನ್ಯ ಶ್ರೀಕಂಠಯ್ಯನವರೂ, ದೇವೇಗೌಡರೂ ಉಪಯೋಗ ಮಾಡಿಕೊಳ್ಳುತ್ತಿದ್ದಾರೆ. ಇವತ್ತು ಹೇಮಾವತಿಯಲ್ಲಿ ತುಂಬಿರುವ ನೀರನ್ನು ಮೂರುವರೆ ಲಕ್ಷ ಎಕರೆ ಭೂಮಿಗೆ, ತುಮಕೂರು ಜಿಲ್ಲೆ ಹಾಗೂ ನಾಗಮಂಗಲ ತಾಲ್ಲೂಕಿಗೆ ಬಿಡಬೇಕಾಗಿದೆ. ಈ ನೀರನ್ನು ತಾವು ಮದ್ರಾಸಿಗೆ ಕೊಡುವುದಾದರೆ, ತುಮಕೂರು ಜಿಲ್ಲೆಯಲ್ಲಿ ನಡೆಸುವ ಕಾಮಗಾರಿಗಳನ್ನು ನಿಲ್ಲಿಸಿಬಿಡಿ, ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. If this Government fails to protect the interest of Karnataka people by preserving the cauvery water, which was preserved in Hemavathi, if you fails, then you stop all the channel works. There is no necessity. It is simply a waste.

ನನಗೆ ಪಕ್ಷದ ಗೊಂದಲ ಇಲ್ಲ. ಅಥವಾ ನನಗೆ ಯಾರ ಹಿಡಿತವೂ ಇಲ್ಲ. ನಾನು ಅಕ್ಟೋಬರ್ 1988ರಲ್ಲಿ ಮಾಡಿದ ನನ್ನ ಭಾಷಣ ಮತ್ತು ನಾನು ಅವತ್ತು ಆಡಿರುವ ಮಾತುಗಳನ್ನು ನಾನು ಆಡಳಿತ ಪಕ್ಷದಲ್ಲಿ ಕುಳಿತುಕೊಂಡು ಮಾಡಿದ್ದು. ಬಹುಶಃ ಅಷ್ಟೊಂದು ಕಠಿಣವಾದ ಶಬ್ದಗಳನ್ನು ನಾನು ಇವತ್ತು ವಿರೋಧಪಕ್ಷದಲ್ಲಿ ಕುಳಿತುಕೊಂಡು ಉಪಯೋಗಿಸುತ್ತಾ ಇಲ್ಲ. ಆದ್ದರಿಂದ ನನ್ನ ಪ್ರಾರ್ಥನೆ ಇಷ್ಟೆ. ನೀರನ್ನು ಇವತ್ತು ತುಮಕೂರಿಗೆ ಕೊಡಬೇಕೋ ಅಥವಾ ತಮಿಳುನಾಡಿಗೆ ಕೊಡಬೇಕೋ ಎನ್ನುವುದಕ್ಕೆ ಆಜ್ಞೆ ಇದೆ. ಆ ಆಜ್ಞೆಯನ್ನು ಕಾರ್ಯರೂಪಕ್ಕೆ ತರುವುದಾದರೆ, ನೀವು ಕೇಂದ್ರ ಸರ್ಕಾರವನ್ನು ಮೆಚ್ಚಿಸಲಿಕ್ಕೋ ಅಥವಾ ಶ್ರೀಮತಿ ಜಯಲಲಿತರನ್ನು ಮೆಚ್ಚಿಸಲಿಕ್ಕೋ ಅಥವಾ ಇನ್ನಾರನ್ನಾದರೂ ಮೆಚ್ಚಿಸಲಿಕ್ಕೋ ಆ ನೀರನ್ನು for the best reasons known to the State Government, if they are going to implement the orders of the Tribunal - that is a death sentence to the farmer of Tumkur and Nagamangala Taluk. ಹರಿಯಬಿಡುವುದಾದರೆ ತುಮಕೂರು ಜಿಲ್ಲೆಗೆ ಬಿಡಿ.

ನಾನು ಮಾನ್ಯ ನೀರಾವರಿ ಮಂತ್ರಿಗಳನ್ನು ತಮ್ಮ ಮುಖಾಂತರ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಕೋಟ್ಯಾಂತರ ರೂಪಾಯಿಗಳು ಈಗಾಗಲೇ ಖರ್ಚಾಗಿವೆ. ನಾನು ಮತ್ತು ನಮ್ಮ ಮಂಜುನಾಥ್‌ರವರು ಶ್ರಮ ಬಿದ್ದು ಕಾಲುವೆ ಕೆಲಸ ಮಾಡಿಸಿದ್ದೇವೆ. ನೀರು ಬಿಡದಿದ್ದರೆ ಹೊಳೆಗೆ ಹುಣಸೆಹಣ್ಣು ಹಿಂಡಿದಂತಾಗುತ್ತದೆ. ದಯಮಾಡಿ ಅದನ್ನು ಮಾಡುವುದು ಬೇಡ. ಇವತ್ತು ಕಾವೇರಿ ನೀರನ್ನು ತಮಿಳುನಾಡಿಗೆ ಬಿಟ್ಟು ಕೊಟ್ಟು ಸರ್ಕಾರದವರು ಅಧಿಕಾರದಲ್ಲಿ ಉಳಿದುಕೊಳ್ಳುವಂಥ ಕಾರ್ಯದಲ್ಲಿ ಸಫಲರಾಗಬಹುದು. ಕೇಂದ್ರಸರ್ಕಾರವನ್ನು ಮೆಚ್ಚಿಸು ವಂತಹ ಕಾರ್ಯದಲ್ಲಿ ಸಫಲರಾಗಬಹುದು. ಆದರೆ ಕರ್ನಾಟಕ ರಾಜ್ಯದ ಚರಿತ್ರೆಯಲ್ಲಿ ಈ ಪಾಪ ಕಾರ್ಯವನ್ನು ಮಾಡಿದಂತಹ ಚಾಪ್ಟರ್‌ನಲ್ಲಿ ಅವರ ಹೆಸರು ಉಳಿದುಹೋಗುತ್ತದೆ.

ಆದ್ದರಿಂದ ಇವತ್ತು ಅಧಿಕಾರವನ್ನು ಉಳಿಸಿಕೊಳ್ಳುವ ಅಥವಾ ಕಳೆದುಕೊಳ್ಳುವ ಪ್ರಶ್ನೆ ಅಲ್ಲ. ನನ್ನ ಪ್ರಾರ್ಥನೆ ಏನೆಂದರೆ, ಜನತಾ ಪಕ್ಷದವರು ಇದನ್ನು ಮಾಡಲಿಲ್ಲ. ಕಮ್ಯುನಿಸ್ಟ್ ಪಕ್ಷದವರು ಮಾಡಲಿಲ್ಲ. ಕಾಂಗ್ರೆಸ್ ಪಕ್ಷದವರು ಮಾಡಲಿಲ್ಲ ಅಂತ ಅಲ್ಲ. ಈ ರಾಷ್ಟ್ರದ ದುರಾದೃಷ್ಟ ಅಂತ ಕಾಣುತ್ತದೆ. ಈ ರಾಷ್ಟ್ರದ ಬಡಜನರ ಸಮಸ್ಯೆಗಳ ಅರಿವು ಇಲ್ಲದೆ ಇರತಕ್ಕಂಥವರ ಕೈಲಿ ಯೋಜನೆಗಳನ್ನು ರೂಪಿಸುವಂತಹ ಅಧಿಕಾರವನ್ನು ಕೊಡುವ ಪಾಪವನ್ನು ನಾವು ಮಾಡಿದ್ದೇವೆ. ನೀರಿನ ಬಗ್ಗೆ, ಬೇಸಾಯದ ಬಗ್ಗೆ, ನೀರು ಇಲ್ಲದ ಭೂಮಿ ಒಣಗಿದಾಗ ಪಡುವಂತಹ ನೋವನ್ನು ಅರ್ಥ ಮಾಡಿಕೊಳ್ಳದೆ ಇರತಕ್ಕಂಥವರ ಕೈಲಿ ನಾವು ಅಧಿಕಾರವನ್ನು ಕೊಟ್ಟು ಕೆಟ್ಟಿದ್ದೇವೆ. 1980ರಲ್ಲಿ ಜನತಾಪಕ್ಷದ ಸರ್ಕಾರಕ್ಕೂ ನಾನು ಹೇಳಿದ್ದೇನೆ. ಈ ಸರ್ಕಾರಕ್ಕೂ ನಾನು ಹೇಳುತ್ತಿದ್ದೇನೆ. ಹಣವನ್ನು ಖರ್ಚು ಮಾಡಿ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವುದರ ಮುಖಾಂತರ ಅತಿ

ಜಾಗ್ರತೆಯಾಗಿ ಕಾವೇರಿ ಜಲಾನಯನ ಪ್ರದೇಶದಲ್ಲಿರುವ ಭೂಮಿಗೆ ನೀರನ್ನು ಕೊಡುವ ಕೆಲಸವನ್ನು ನಾವು ಮಾಡದೇ ಇದ್ದರೆ ಹೇಗೆ? ನೀರಾವರಿ ಮಂತ್ರಿಗಳು ಏತಕ್ಕೋ ಹೇಮಾವತಿ ಮತ್ತು ಕಾವೇರಿ ಕಡೆ ಗಮನ ಕೊಡುತ್ತಿಲ್ಲ....

ಮಾನ್ಯ ಅಧ್ಯಕ್ಷಿಣಿಯವರೇ, ನಾನು ತಮ್ಮ ಮುಖಾಂತರ ಈಗಿನ ಹಾಲಿ ನೀರಾವರಿ ಸಚಿವರನ್ನು ಈ ಸದನದಲ್ಲಿ ಅಭಿನಂದಿಸುತ್ತೇನೆ. ಏಕೆಂದರೆ ಅನೇಕ ವರ್ಷಗಳಿಂದ ತುಮಕೂರು ಜಿಲ್ಲೆಗೆ ಅಗತ್ಯವಾದ ಅತಿ ಮುಖ್ಯವಾದಂತಹ ಡೀಪ್‌ಕಟ್ ಚಾನಲ್ ಕಾಲುವೆ ಕೆಲಸ ನೆನೆಗುದಿಗೆ ಬಿದ್ದಿತ್ತು. ಆ ಕೆಲಸವನ್ನು ನನ್ನ ಒತ್ತಾಯಕ್ಕೋ ಅಥವಾ ನಮ್ಮ ಮಂತ್ರಿಗಳ ಒತ್ತಾಯಕ್ಕೋ ಮೊದಲು ಮಾಡಿಸಿದ್ದಾರೆ. ಅವರು ಅಧಿಕಾರಿಗಳನ್ನು ಕರೆದುಕೊಂಡು ಹೋಗಿ ತೋರಿಸಿದ್ದಾರೆ. ಇದು ಕಾವೇರಿ-ಕೃಷ್ಣಾ ಸಂಬಂಧ ತರಹ ಅಲ್ಲ. ತಾವು ನೀರಾವರಿ ಮಂತ್ರಿಗಳಾಗಿ ಬಂದ ಮೇಲೆ ತುಮಕೂರು ಜಿಲ್ಲೆಗೆ ಹೇಮಾವತಿ ಕಾಮಗಾರಿಗಳಿಗೆ ಚುರುಕು ಮುಟ್ಟಿದೆ. ಅದಕ್ಕೆ ನಾನು ತಮ್ಮನ್ನು ಅಭಿನಂದಿಸುತ್ತೇನೆ.

ಈ ವಿಷಯದಲ್ಲಿ ನನ್ನ ಪ್ರಾರ್ಥನೆ ಇಷ್ಟೇ. ಈ ಸದನ ಒಂದು ತೀರ್ಮಾನ ತೆಗೆದುಕೊಂಡಿದೆ. ಸನ್ಮಾನ್ಯ ವೀರಪ್ಪಮೊಯ್ಲಿಯವರು ಕಾನೂನು ಸಚಿವರೆಂದು ನಾನು ಭಾವಿಸಿ ಕೊಂಡಿದ್ದೇನೆ. ಕಾನೂನು ದೃಷ್ಟಿಯಿಂದ ದಾರಿ ತೋರಿಸಿದರೆ ಸಾಕು. ಸುಪ್ರೀಂ ಕೋರ್ಟ್‌ನಲ್ಲಿ ಪ್ಲೀಡಿಂಗ್ಸ್ ಟ್ರೈ ಮಾಡಿ ಅಲ್ಲೂ ನಾವು ಸೋತಿದ್ದೇವೆ. ರಾಜ್ಯಪಾಲರಿಗೆ ಮನವಿ ಕೊಟ್ಟದ್ದು ಪ್ರಯೋಜನವಾಗಲಿಲ್ಲ. ಡಿ.ಸಿ. ಆಫೀಸ್ ಮುಂದೆ ಹಾಗೂ ಸರ್ಕಾರದ ಮುಂದೆ ಬೊಬ್ಬೆ ಹೊಡೆದು ಕೊಂಡರು. ಅಲ್ಲೂ ಪ್ರಯೋಜನವಾಗಲಿಲ್ಲ.

As a last resort we have taken shelter in this House. you have passed an unanimous resolutions to reject the interim order of the Tribunal. Now, I want to know whether the Government has rejected it or not? If you say that you have rejected the Tribunal order, I will simply sit down, because you have honoured the sentiments of these hon'ble members. If you have not respected, if you have not rejected, I have no other alternative excpet to presume that this Government does not have regard for the decision of this House. I would like to ask the Hon'ble Law Minister here. If I violate the rules laid down in this House or if Mr. Vatal Nagaraj violates orders of the Chair, does it not amount to violation of the rules and contempt of the House? If the Government rejects the decision of this House what should be the

remedy? I want a clear answer to this question. If you say that we have rejected the orders of the Tribunal on the basis of the decision of this House, I have no argument at all, I will keep quiet. ನಮ್ಮದು ಮುಂದೆ ವಾದವೇ ಇಲ್ಲ. ಈ ವೇದಿಕೆಯ ಅವಶ್ಯಕತೆನೇ ಇಲ್ಲ. ಆದರೆ ಆ ತೀರ್ಮಾನದ ಬಗ್ಗೆ ಇನ್ನು ಏನೂ ತಿರ್ಮಾನ ತೆಗೆದು ಕೊಳ್ಳದಿದ್ದರೆ, ಈ ಸದನದ ತೀರ್ಮಾನಕ್ಕೆ ನೀವೇನಾದರೂ ಸ್ಪಂದಿಸದಿದ್ದರೆ, ಈ ತೀರ್ಮಾನಕ್ಕೆ ಬೆಲೆ ಕೊಡದಿದ್ದರೆ ಮುಂದೆ ನನಗೆ ಬೇರೆ ದಾರಿಯೇ ಇಲ್ಲದೆ ಈ ಸದನಕ್ಕೆ ನೀವು ಅಗೌರವ ತಂದಿದ್ದೀರ ಎಂದು ಹೇಳಬೇಕಾಗುತ್ತದೆ. ಈ ಸದನದ 224 ಜನ ಸದಸ್ಯರ ತೀರ್ಮಾನವೇ ಹೊರತು ಇದು ಒಂದು ಪಕ್ಷದಿಂದ ಮಾಡಿದ ತೀರ್ಮಾನ ಅಲ್ಲ. ಕಾಂಗ್ರೆಸ್‌ನವರು, ಜನತಾ ದವರು, ಕಮ್ಯುನಿಸ್ಟ್‌ನವರು ಮಾಡಿದ್ದಲ್ಲ. ಇದು ಇಡೀ ಸದನ ಮಾಡಿದಂಥ ತೀರ್ಮಾನ. ಈ ತೀರ್ಮಾನಕ್ಕೆ ನೀವು ಬೆಲೆ ಕೊಡಲಿಲ್ಲ ಅಂತ ಅಂದರೆ, ಇದು ಪ್ರಿವಿಲೇಜ್ ಆಗುತ್ತಿದೆಯೇ? ಈ ರಾಜ್ಯದ ಕೋಟ್ಯಾಂತರ ಜನರ ಪ್ರತಿನಿಧಿಗಳಾದ ನಮಗೆ ಅವಮಾನ ಮಾಡಿದಂತಾ ಗುತ್ತದೆಯೇ? ಎನ್ನುವ ಬಗ್ಗೆ ಸರ್ಕಾರದವರು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

ಆದ್ದರಿಂದ, ಅಧ್ಯಕ್ಷಿಣಿ ಯವರೆ, ಪೀಠಿಕೆ ಹಾಕುವಾಗಲೇ ನಾಲ್ಕೈದು ಜನ ಸ್ನೇಹಿತರು ನನ್ನ ಮೇಲೆ ದುಂಬಾಲು ಬಿದ್ದಿದ್ದರು. ಯಾವ ಕಾರಣಕ್ಕೋ ಗೊತ್ತಿಲ್ಲ. ನನ್ನ ವಾದ ಇಷ್ಟೇ, ಈ ಸದನವು ತೆಗೆದುಕೊಂಡ ತೀರ್ಮಾನಕ್ಕೆ ಸರ್ಕಾರ ಬೆಲೆ ಕೊಡಬೇಕೇ ಅಥವಾ ಬೇಡವೇ? ಅದನ್ನು ಪುರಸ್ಕಾರ ಮಾಡಬೇಕೇ ಅಥವಾ ಬೇಡವೇ? ಅದನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೇ ಅಥವಾ ಬೇಡವೇ ಇದು ಒಂದನೆಯದು. ಇನ್ನು ಎರಡನೆಯದು; ತೆಗೆದುಕೊಂಡಂಥ ತೀರ್ಮಾನವನ್ನು ಅವರು ರಿಜೆಕ್ಟ್ ಮಾಡಿದ್ದಾರೋ ಅಥವಾ ಇಲ್ಲವೋ. ರಿಜೆಕ್ಟ್ ಮಾಡಿದ್ದರೆ ಸಂತೋಷ. ಆ ತೀರ್ಮಾನವನ್ನು ರಿಜೆಕ್ಟ್ ಮಾಡದಿದ್ದರೆ that is the clear violation of the rules prevailed. ಇಷ್ಟನ್ನು ಹೇಳಿದ ಮೇಲೆ ನಾನು ಸರ್ಕಾರದವರಿಂದ ಭಾಷಣ ನಿರೀಕ್ಷೆ ಮಾಡುವುದಿಲ್ಲ. ಈ ಸದನವು ತೆಗೆದುಕೊಂಡಂಥ ಯುನಾನಿಮಸ್ ಡಿಸೀಷನ್ ಏನಿದೆ? ಆ ಡಿಸೀಷನ್‌ಗೆ ಇವರು ಗೌರವ ಕೊಡುತ್ತಾರೋ ಕೊಡುವುದಿಲ್ಲವೋ? ಗೌರವ ಕೊಡುವುದಾದರೆ ಆ ಟ್ರಿಬ್ಯುನಲ್ ಆರ್ಡರನ್ನು ರಿಜೆಕ್ಟ್ ಮಾಡುತ್ತಾರೋ ಇಲ್ಲವೋ, ಎನ್ನುವ ಬಗ್ಗೆ ಉತ್ತರವನ್ನು ಬಯಸಿ ನಾನು ಮಾತನಾಡಲಿಕ್ಕೆ ಅವಕಾಶ ಮಾಡಿಕೊಟ್ಟ ನಿಮಗೆ ವಂದನೆಗಳನ್ನು ಅರ್ಪಿಸುತ್ತೇನೆ.

O

(10-7-1992)

## ಬಾಬರಿ ಮಸೀದಿ - ರಾಮಜನ್ಮ ಭೂಮಿ ವಿವಾದ ಕುರಿತು

ಮಾನ್ಯ ಉಪಾಧ್ಯಕ್ಷರೇ, ಡಿಸೆಂಬರ್ 6ರಂದು ಅಯೋಧ್ಯೆಯಲ್ಲಿ ನಡೆದ ಮಸೀದಿ ಕೆಡವಿದ ಒಂದು ಘಟನೆ ಬಗ್ಗೆ ಈ ರಾಷ್ಟ್ರದ ಎಲ್ಲಾ ಮಾಧ್ಯಮಗಳು ಹಾಗೂ ಎಲ್ಲಾ ವೇದಿಕೆಗಳಲ್ಲಿ ಚರ್ಚೆಯಾಗುತ್ತಿದೆ. ಅದಕ್ಕೆ ಮೂಲ ಒಂದು ವರ್ಗದವರ ನಂಬಿಕೆ ಪ್ರಕಾರ, ಕೆಡವಿದ ಮಸೀದಿ ಇರುವ ಜಾಗದಲ್ಲಿ ಒಂದು ಕಾಲದಲ್ಲಿ ಶ್ರೀರಾಮ ಹುಟ್ಟಿದ್ದ. ಅಲ್ಲಿ ಶ್ರೀರಾಮನ ದೇವಸ್ಥಾನ ಇತ್ತು. ಅದನ್ನು ಇತ್ತೀಚಿನ ವರ್ಷಗಳಲ್ಲಿ ಬಾಬರ್ ಬಂದ ಕಾಲದಲ್ಲಿ ದೇವಸ್ಥಾನವನ್ನು ಕೆಡವಿ ಮಸೀದಿಯನ್ನು ಕಟ್ಟಿದರು. ಆದುದರಿಂದ ಆ ಮಸೀದಿಯನ್ನು ಕೆಡವಿ ಶ್ರೀರಾಮನ ದೇವಸ್ಥಾನವನ್ನು ಕಟ್ಟುತ್ತಿದ್ದೇವೆ ಎನ್ನುವ ವಾದ ನಮ್ಮ ಮುಂದೆ ಇದೆ.

ಸನ್ಮಾನ್ಯ ಅಧ್ಯಕ್ಷರೇ, ಯಾವುದೇ ಒಬ್ಬ ವ್ಯಕ್ತಿ, ಯಾವುದೇ ಒಂದು ಸಂಸ್ಥೆ ಅಥವಾ ಯಾವುದೇ ಒಂದು ಪಕ್ಷ, ಈ ರಾಷ್ಟ್ರ ಒಂದು ಜಾತಿ ಜನರಿಗೆ ಸೇರಿದ್ದು, ಒಂದು ಮತದ ಜನರಿಗೆ ಸೇರಿದ್ದು, ಒಂದು ವರ್ಗದ ಜನರಿಗೆ ಸೇರಿದ್ದುದು ಎನ್ನುವಂತಹ ವಾದ ಏನಾದರು ಇದ್ದರೆ, ಆ ವಾದ ನನ್ನ ಪ್ರಕಾರ ಖಂಡನಾರ್ಹವಾದುದು. ಕಾರಣ, ಈ ರಾಷ್ಟ್ರದಲ್ಲಿ ಎಲ್ಲರೂ ಬದುಕಬೇಕು. ಬದುಕುವುದು ಅಷ್ಟೇ ಅಲ್ಲ, ಎಲ್ಲರೂ ತಮ್ಮ ನಂಬಿಕೆ ಇಟ್ಟುಕೊಳ್ಳಬೇಕು ಎನ್ನುವ ಸ್ವಾತಂತ್ರ್ಯವನ್ನು 1956ರಿಂದಲೂ ಈ ರಾಷ್ಟ್ರದ ಸಂವಿಧಾನದಲ್ಲಿ ಅಳವಡಿಸಿಕೊಂಡು, ನಾವು ಅದನ್ನು ಪರಿಪಾಲನೆ ಮಾಡುತ್ತಾ ಬಂದಿದ್ದೇವೆ. ಕೇವಲ ಬದುಕುವುದಕ್ಕಷ್ಟೇ ಸ್ವಾತಂತ್ರ್ಯ ಅಲ್ಲ, ಬದುಕುತ್ತಿರುವ ನಮ್ಮ ಜನರಿಗೆ ಈ ರಾಷ್ಟ್ರದಲ್ಲಿ ತನ್ನದೇ ಆದ ನಂಬಿಕೆಯನ್ನು ಇಟ್ಟುಕೊಳ್ಳುವ ಸ್ವಾತಂತ್ರ್ಯ ಇದೆ. ಇಂತಹ ಸ್ವಾತಂತ್ರ್ಯವನ್ನು ಹೊಂದಿರುವ ಜಾತ್ಯಾತೀತತೆಯ ಸಂವಿಧಾನದಲ್ಲಿ, ಈ ರಾಷ್ಟ್ರ ಹಿಂದೂಗಳಿಗೆ ಸೇರಿದ್ದು, ಈ ರಾಷ್ಟ್ರ ಜೈನರಿಗೆ ಸೇರಿದ್ದು, ಈ ರಾಷ್ಟ್ರ ಅಲ್ಪಸಂಖ್ಯಾತರಿಗೆ ಸೇರಿದ್ದು ಎನ್ನುವ ವಾದ ಖಂಡನಾರ್ಹವಾದುದು. ಈ ಹಿನ್ನೆಲೆಯಲ್ಲಿ 6ನೇ ತಾರೀಖು ನಡೆದ ಘಟನೆಯನ್ನು ಯಾವುದೇ ದೃಷ್ಟಿಯಿಂದ ಸಮರ್ಥಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಮತದ ಅಮಲು ಏರಿದ ಜನ, ಮತೀಯ ಭಾವನೆಯ ಪಿತ್ತ ಏರಿದ ಜನ, ಹುಚ್ಚೆದ್ದು ಕುಣಿದಾಗ ಅದನ್ನು ನಿಯಂತ್ರಣ ಮಾಡುವ ಅವಶ್ಯಕತೆ ಇದೆ ಎನ್ನುವುದನ್ನು ನಾವು ಚಿಂತನೆ ಮಾಡಬೇಕಾಗಿದೆ. ಬಾಬರಿ ಮಸೀದಿಯನ್ನು ಕೆಡವಿದಂಥವರು ಯಾರೇ ಇರಬಹುದು. ಶಿವಸೇನೆಯವರು ಕೆಡವಿದ್ದಾರೋ, ಆರ್.ಎಸ್.ಎಸ್. ನವರು ಕೆಡವಿದ್ದಾರೋ, ವಿಶ್ವ ಹಿಂದೂ ಪರಿಷತ್ತುನವರು ಕೆಡವಿದ್ದಾರೋ, ಆದರೆ ಅವರಿಗೆ ನನ್ನ ನೇರವಾದ ಪ್ರಶ್ನೆ ಇಷ್ಟೇ. ಕಾನೂನಿನ ದೃಷ್ಟಿಯಿಂದ ಇದು ಸರಿಯಾದುದೇ? ರಾಷ್ಟ್ರದಲ್ಲಿರುವಂಥ ಎಲ್ಲಾ ವಿವಾದಗಳನ್ನು ಈ ರೀತಿ ಬಗೆಹರಿಸುವುದಕ್ಕೆ ಸಾಧ್ಯವೇ? ಇದು ಬಹಳ ಪ್ರಮುಖವಾದಂಥ ಪ್ರಶ್ನೆ? ಇವತ್ತು ಬಾಬರಿ ಮಸೀದಿ ಅಲ್ಲಿ ಇತ್ತು. ಆ ಸ್ಥಳದಲ್ಲಿ ಹಿಂದೆ ಶ್ರೀರಾಮ ದೇವಸ್ಥಾನ ಇತ್ತೆ, ಜೈನರ

ಬಸದಿ ಇತ್ತೆ, ಮಾರಮ್ಮನ ಗುಡಿ ಇತ್ತೆ, ಕೊಲ್ಲಾಪುರದಮ್ಮನ ಗುಡಿ ಇತ್ತೆ? ಎನ್ನುವಂಥ ಒಂದು ವಿವಾದ ರಾಷ್ಟ್ರದ ಮುಂದೆ ಇದ್ದಾಗ, ಅದನ್ನು ಸಂಬಂಧಪಟ್ಟವರು ಕಾನೂನನ್ನು ಕೈಗೆತ್ತಿಕೊಂಡು ನಾಶ ಮಾಡುವಂತಹ ಪ್ರವೃತ್ತಿ ಈ ರಾಷ್ಟ್ರಕ್ಕೆ ಒಳ್ಳೆಯದಲ್ಲ.

ಇಂತಹ ವಿವಾದಗಳು ಬಂದಾಗ ಕಾನೂನಿನಿಂದ ಸರಿ ಮಾಡಬೇಕಾಗುತ್ತದೆ ಅಥವಾ ಸಂಬಂಧಪಟ್ಟವರು ಕುಳಿತುಕೊಂಡು ಮಾತು-ಕಥೆ ಮೂಲಕ ಸರಿ ಮಾಡಬೇಕಾಗುತ್ತದೆ. ಎರಡನ್ನೂ ಬಿಟ್ಟು, ಕಾನೂನನ್ನು ಕೈಗೆತ್ತಿಕೊಂಡು ಬಾಬರಿ ಮಸೀದಿಯನ್ನು ಕೆಡವಿದ ಕೃತ್ಯ, ಬಹುಶಃ ಇಡೀ ರಾಷ್ಟ್ರ ವ್ಯಥೆ ಪಡುವಂಥಾದ್ದು, ನಾಚಿಕೆ ಪಡುವಂಥಾದ್ದು. ಬಾಬರಿ ಮಸೀದಿಯನ್ನು ಪುಡಿಪುಡಿ ಮಾಡಿದ್ದೇವೆ ಎನ್ನುವ ವಿಷಯ ಹೆಮ್ಮೆ ಪಡುವಂತಹ ವಿಷಯ ಅಲ್ಲ. ಇದು ನನ್ನ ದೃಷ್ಟಿಯಲ್ಲಿ ನಾಚಿಕೆಗೇಡಿನ ಕೃತ್ಯ ಎಂದು ಭಾವಿಸಬೇಕಾಗುತ್ತದೆ. ಇದಕ್ಕೆ ಒತ್ತನ್ನು ಕೊಡುವುದಕ್ಕೆ ಅವರು ಪ್ರಯತ್ನ ಪಡುತ್ತಿದ್ದಾರೆ. ಇದನ್ನು ಮಾಡುವುದಕ್ಕೆ ಜನಗಳ ಮ್ಯಾನ್‌ಡೇಟ್ ಇತ್ತೇ, ಅನುಮತಿ ಇತ್ತೆ ಎಂದು ಕೇಳುತ್ತಿದ್ದೇನೆ. ಅತ್ಯಂತ ಕನಿಷ್ಠ ಅನುಭವ ಇರುವವರು ಕೂಡ ಇದನ್ನು ಒಪ್ಪಿಕೊಳ್ಳುತ್ತಾರೆ. ಈ ರಾಷ್ಟ್ರದ ಜನ ನಮಗೆ ಓಟನ್ನು ಕೊಟ್ಟು ಕಳುಹಿಸುವುದು, ಸರ್ಕಾರಗಳನ್ನು ಸ್ಥಾಪನೆ ಮಾಡುವುದು, ಕಾನೂನಿನ ಚೌಕಟ್ಟಿನಲ್ಲಿ ಕೆಲಸ ಮಾಡುವುದಕ್ಕೆ. ಸಂವಿಧಾನದ ಚೌಕಟ್ಟಿನಲ್ಲಿ ಕೆಲಸ ಮಾಡುವುದಕ್ಕೆ. ಓಟು ಕೊಟ್ಟು ಕಳುಹಿಸಿದ ಮಾತ್ರಕ್ಕೆ, ಸರ್ಕಾರಗಳನ್ನು ರಚನೆ ಮಾಡಿದ ಮಾತ್ರಕ್ಕೆ, ಸಂವಿಧಾನಕ್ಕೆ ವಿರುದ್ಧವಾಗಿ ಕೆಲಸ ಮಾಡುವುದಕ್ಕೆ ಸಾಧ್ಯ ಇಲ್ಲ.

ಉತ್ತರ ಪ್ರದೇಶದ ಜನ ಬಿ.ಜೆ.ಪಿ. ಸರ್ಕಾರಕ್ಕೆ ಅನುಮತಿ ಕೊಟ್ಟಿದ್ದು ನಿಜ. ಜನರ ನೋವು-ನಲಿವುಗಳನ್ನು, ಜನರ ಸಮಸ್ಯೆಗಳನ್ನು ಜನರ ದುಃಖ-ದುಮ್ಮಾನಗಳನ್ನು ಬಗೆಹರಿಸುವುದಕ್ಕೆ ಹೊರತು, ಯಾವುದೋ ಒಂದು ವಿಷಯದಲ್ಲಿ ಕಾನೂನನ್ನು ಕೈಗೆತ್ತಿಕೊಂಡು ನಾಶ ಮಾಡುವುದಕ್ಕೆ ಅಲ್ಲ. ಜನರು ಅವಕಾಶ ಕೊಟ್ಟಿದ್ದಾರೆ, ಆದುದರಿಂದ ಇದನ್ನು ಕೆಡವಿದೆವು ಎಂಬ ವಾದ ಸರಿಯಾದುದಲ್ಲ. ಒಪ್ಪುವಂಥದ್ದು ಅಲ್ಲ. ಮತ್ತೊಂದು ವಿಷಯ ನನ್ನ ಸ್ನೇಹಿತರು ಪ್ರಸ್ತಾಪ ಮಾಡಿದ್ದಾರೆ. ಒಂದು ರಾಜಕೀಯ ಪಕ್ಷಕ್ಕೆ ದೇವಸ್ಥಾನ ಕಟ್ಟುವಂತಹ ಒಂದು ಕಾರ್ಯಕ್ರಮ ಸರಿಯಾದುದಲ್ಲ. ದೇವಸ್ಥಾನ ಕಟ್ಟುವುದಕ್ಕೆ ಬೇರೆಯವರು ಇದ್ದಾರೆ. ಭಕ್ತರು ಇದ್ದಾರೆ ಕಟ್ಟಿಕೊಳ್ಳುತ್ತಾರೆ. ಇದು ಒಂದು ವಿಶೇಷ, ಇವರು ದೇವಸ್ಥಾನ ಕಟ್ಟುತ್ತಿದ್ದಾರೆ. ಎಲ್ಲಾ ಹಿಂದುಗಳ ಪರವಾಗಿ ಕಟ್ಟುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ಯಾರು ಇವರಿಗೆ ಈ ರೀತಿ ಹೇಳಿ ಎಲೆಕ್ಟ್ ಮಾಡಿ ಕಳುಹಿಸಿದವರು? ಒಂದು ಸಮೀಕ್ಷೆಯ ಪ್ರಕಾರ ಆರನೇ ತಾರೀಖು ನಡೆದಂಥ ನಡವಳಿಕೆಗೆ ಒಪ್ಪುವಂಥ ಹಿಂದೂಗಳು ಸುಮಾರು ಶೇಕಡಾ 20ಕ್ಕಿಂತ ಕಡಿಮೆ. ಎಲ್ಲಾ ಹಿಂದೂಗಳ ಪರವಾಗಿ ಮಸೀದಿಯನ್ನು ಒಡೆಯುವುದಕ್ಕೆ, ದೇವಸ್ಥಾನ ಕಟ್ಟುವುದಕ್ಕೆ ಯಾರು ಇವರಿಗೆ ಪರವಾನಗಿ ಕೊಟ್ಟಿದ್ದಾರೆ? ಬಹುಶಃ ಈ ಸದನದಲ್ಲಿರುವವರೆಲ್ಲರ ಪೈಕಿ ಮಸೀದಿಯನ್ನು ಒಡೆದು ದೇವಸ್ಥಾನ ಕಟ್ಟಬೇಕೆನ್ನುವ ಯಾವ ಹಿಂದೂವೂ ಇರಲಾರರು - ಮೂರು ನಾಲ್ಕು ಜನರನ್ನು ಬಿಟ್ಟು - ಎಂದು

ನನ್ನ ಭಾವನೆ. How they have assumed our consent, how they have assumed our approval to destroy the Masjid and construct the temple? I am a Hindu by birth. I, myself; not agreeing for such an act.

ಪ್ರಭು ಶ್ರೀರಾಮಚಂದ್ರನ ಹೆಸರಿನ ದುರುಪಯೋಗದ ಇಚ್ಛೆ ನನಗೆ ಇಲ್ಲ. ಯಾವ ಹಿಂದೂ ಜನ ಈ ದೇವಸ್ಥಾನ ಕಟ್ಟಿ ಎಂದು ಹೇಳಿದ್ದಾರೆ? ಆದುದರಿಂದ ಎಲ್ಲಾ ಹಿಂದೂಗಳ ಪರವಾಗಿ ಈ ಕೃತ್ಯ ಮಾಡಿದ್ದೇವೆ ಎಂದು ಹೇಳುವುದಾದರೆ, ಒಬ್ಬ ಹಿಂದುವಾಗಿ ನಾನು ಇದಕ್ಕೆ ನಾಚಿಕೆ ಪಡುತ್ತೇನೆ. ಏತಕ್ಕೆಂದರೆ ವಿಶ್ವದ ಯಾವುದೇ ಒಂದು ಧರ್ಮ, ಒಬ್ಬ ಮಾನವ ಮತ್ತೊಬ್ಬ ಮಾನವನನ್ನು ಕೊಲ್ಲಬೇಕೆಂದು ಹೇಳುವುದಿಲ್ಲ. ವಿಶ್ವದ ಯಾವುದೇ ಧರ್ಮ, ಹಿಂದು ಧರ್ಮ ಸೇರಿದಂತೆ ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ದ್ವೇಷ ಮಾಡಬೇಕು, ಕೊಲೆ ಮಾಡಬೇಕೆಂದು ಹೇಳುವುದಾದರೆ ಅಂಥ ಧರ್ಮಕ್ಕೆ ಧಿಕ್ಕಾರವಿರಲಿ. ಅಂಥ ಧರ್ಮ ರಾಷ್ಟ್ರದಲ್ಲೇ ಅಲ್ಲ, ಇಡಿ ವಿಶ್ವದಲ್ಲೇ ಇರುವ ಅವಶ್ಯಕತೆ ಇಲ್ಲ. ಅದನ್ನು ಮೆಚ್ಚುವ ಅವಶ್ಯಕತೆ ಇಲ್ಲ, ಅದನ್ನು ಅನುಸರಿಸುವಂತಹ ಅವಶ್ಯಕತೆ ಇಲ್ಲ.

ಸನ್ಮಾನ್ಯ ಅಧ್ಯಕ್ಷಿಣಿಯವರೇ, ಹಿಂದೂ ಧರ್ಮದ ತಿರುಳು, ಹಿಂದೂ ಧರ್ಮದ ಮೂಲತತ್ವ, ಪರಮತ ಸಹಿಷ್ಣುತೆ. ಅದನ್ನು ನಮ್ಮ ಮಿತ್ರರು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಧರ್ಮದ ಹೆಸರಿನಲ್ಲಿ ಬಾಬರಿ ಮಸೀದಿಯನ್ನು ಕೆಡವುದಾದರೆ, ಇವರ ಉದ್ದೇಶ ಹಿಂದೂಗಳ ಉದ್ಧಾರ ಅಲ್ಲ. ಹಿಂದೂ ಧರ್ಮದ ಉದ್ಧಾರ ಅಲ್ಲ. ಇವರ ಉದ್ದೇಶ ನನ್ನ ಪ್ರಕಾರ ರಾಜಕೀಯ ಉದ್ದೇಶ. ಮೂಲಭೂತವಾದಂತ ಪ್ರಶ್ನೆ. ಈ ವಿವಾದವನ್ನು ಕೈಗೆತ್ತಿಕೊಂಡಿರತಕ್ಕಂತವರ ಉದ್ದೇಶ ದೇವಸ್ಥಾನವನ್ನು ಕಟ್ಟುವುದು ಅಲ್ಲ. ಅಯೋಧ್ಯೆಯಲ್ಲಿ ದೇವಸ್ಥಾನ ಕಟ್ಟಬೇಕು ಅಂತ ನಕ್ಷೆ ತಯಾರಾಗಿರುವುದು, ಅದರ ಅಂದಾಜು ತಯಾರಾಗಿರುವುದು, ಅಮೃತ ಶಿಲೆಯಲ್ಲಿ ಕಟ್ಟಬೇಕು ಎಂದು. ಕಳೆದ ವರ್ಷ ಇಡೀ ರಾಷ್ಟ್ರದಲ್ಲಿ ಇಟ್ಟಿಗೆಗಳ ಮೆರವಣಿಗೆ ಆಯಿತು. ಒಂದೊಂದು ಇಟ್ಟಿಗೆಗೆ 50 ರೂಪಾಯಿಯಂತೆ ನಮ್ಮ ಜನ ಹಣ ಕೊಟ್ಟರು. ನಾನು ಈ ಸದನದ ಮುಖಾಂತರ ಈ ಜನರಿಗೆ ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಇಚ್ಛೆಪಡುತ್ತೇನೆ. ಅಮೃತ ಶಿಲೆಯಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತೇವೆ ಎಂದು ತೀರ್ಮಾನ ಮಾಡಿರುವ ನಿಮಗೆ ಕುಣಿಗಲ್ ಇಟ್ಟಿಗೆ ಏತಕ್ಕೆ? ಜಮ್ಮುವಿನ ಇಟ್ಟಿಗೆ, ತಿರುವನಂತಪುರದ ಇಟ್ಟಿಗೆ ಏಕೆ? ತಮಿಳುನಾಡಿನ ಇಟ್ಟಿಗೆ ಏಕೆ? ಆದ್ದರಿಂದ ಅವರು ಈ ದೇವಸ್ಥಾನಕ್ಕೆ ಇಟ್ಟಿಗೆ ತೆಗೆದುಕೊಂಡು ಹೋಗುತ್ತೇವೆಂದು ನಮ್ಮ ಜನರಿಗೆ ಮೋಸ ಮಾಡಿದ್ದಾರೆ. ಎರಡನೆಯದು; ಈ ಇಟ್ಟಿಗೆ ಮೆರವಣಿಗೆ ರೂಪದಲ್ಲಿ ವಂತಿಕೆ ಬಂದಿರು ವಂತಹ ಕೋಟ್ಯಾಂತರ ರೂಪಾಯಿಗಳ ಲೆಕ್ಕವನ್ನು ಈ ರಾಷ್ಟ್ರದ ಜನತೆಗೆ ಕೊಟ್ಟಿಲ್ಲ. ಈ ರಾಷ್ಟ್ರದ ಹಿಂದೂಗಳಿಗೆ ಕೊಟ್ಟಿಲ್ಲ. ಎಷ್ಟು ಕೋಟಿ ರುಪಾಯಿಗಳು ಇಟ್ಟಿಗೆ ಮೆರವಣಿಗೆ ರೂಪದಲ್ಲಿ ಬಂದಿದೆ, ಇದರೊಳಗೆ ದೇವಸ್ಥಾನಕ್ಕೆ ಖರ್ಚಾದದ್ದು ಎಷ್ಟು? ಚುನಾವಣೆಗಳಿಗೆ ಖರ್ಚಾದದ್ದು ಎಷ್ಟು? ಇದರ

ಮಾಹಿತಿಯನ್ನು ಈ ಜನ ರಾಷ್ಟ್ರದ ಮುಂದೆ ಈಗಲಾದರೂ ಕೊಡುತ್ತಾರೆಂದು ನಾನು ಭಾವಿಸಿಕೊಳ್ಳುತ್ತೇನೆ. ಸನ್ಮಾನ್ಯ ಅಧ್ಯಕ್ಷಿಣಿಯವರೇ, ಈ ಕೆಡವುವ ಜನಗಳ ಬಗ್ಗೆ, ಒಂದು ವರ್ಗದವರಲ್ಲಿ ನಂಬಿಕೆವುಳ್ಳಂತಹ ಜನರ ಬಗ್ಗೆ ನನ್ನದೊಂದು ಪ್ರಶ್ನೆ. ನಾನು ಮಾನ್ಯ ಬಸವಲಿಂಗಪ್ಪನವರು ತೀರಿಕೊಳ್ಳುವುದಕ್ಕೆ ಎರಡು ಮೂರು ದಿವಸಗಳಿಗೆ ಮೊದಲು ಅವರನ್ನು ಭೇಟಿ ಮಾಡಿದಾಗ, ನಿಮಗೆ ಹಿಂದೂ ಧರ್ಮದ ಬಗ್ಗೆ ಇಂತಹ ಮನೋಭಾವ ಏಕೆ ಎಂದು ಕೇಳಿದೆ. ನಾನು ಅವರನ್ನು ಸ್ವಲ್ಪ ಹುಚ್ಚರು ಎಂದು ತಿಳಿದುಕೊಂಡಿದ್ದೆ. ಅವರು ಸ್ವಲ್ಪ ಒರಟಾಗಿ ಒಂದು ಮಾತನ್ನು ಹೇಳಿದರು.

''ಅಲ್ಲಯ್ಯಾ, ನಿಮ್ಮ ಹಿಂದು ದೇವಾಸ್ಥಾನಗಳಿಗೆ ಬರಬೇಡಿ ಎಂದು ಹೇಳುತ್ತೀರಿ, ಮಸೀದಿಗೆ ಹೊಗಬೇಡಿ ಎಂದು ಹೇಳುತ್ತೀರಿ'' ಎಷ್ಟೊಂದು ಮಾರ್ಮಿಕವಾಗಿತ್ತು ಅವರ ಮಾತು ಎಂದರೆ, ಇಡೀ ರಾಷ್ಟ್ರದ ಸಾಮಾಜಿಕ ವ್ಯವಸ್ಥೆ ಏನು ಇದೆ ಅದರ ಬಗ್ಗೆ ಎರಡೇ ಮಾತಿನಲ್ಲಿ ಹೇಳಿದರು. ಒಂದು ಕಡೆ ದೇವಸ್ಥಾನಗಳಿಗೆ ಬರಬೇಡಿ ಎಂದು ನಮ್ಮನ್ನು ಆಚೆಗೆ ತಳ್ಳುತ್ತೀರಿ, ಮತ್ತೊಂದು ಕಡೆ ಮಸೀದಿಗೆ ಹೋಗಬೇಡಿ ಎಂದು ಹೇಳುತ್ತೀರಿ. ಹಾಗಾದರೆ ನಾವೇನು ಮಾಡಬೇಕು? ಇದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಹಿಂದೂಗಳ ಉದ್ಧಾರ ಮಾಡುತ್ತೇವೆ, ಹಿಂದೂ ರಾಷ್ಟ್ರವನ್ನು ಕಟ್ಟುತ್ತೇವೆಂದು ವಾದ ಮಾಡುವ ಈ ಜನಕ್ಕೆ ಯಾರು ಹಿಂದೂಗಳು? ಇಡೀ ರಾಷ್ಟ್ರದಲ್ಲಿರುವ ಎಲ್ಲಾ ಹಿಂದೂಗಳನ್ನು ಅವರು ಹಿಂದೂಗಳು ಎಂದು ಪರಿಗಣನೆ ಮಾಡುವುದಿಲ್ಲ. ಆ ರೀತಿ ಪರಿಗಣನೆ ಮಾಡುವುದಾಗಿದ್ದರೆ, ದಿವಂಗತ ಬಸವ ಲಿಂಗಪ್ಪನವರು ಹೇಳಿದ ರೀತಿಯಲ್ಲಿ, ದೇವಸ್ಥಾನಗಳಿಗೆ ಬರಬೇಡಿ ಎನ್ನುವ ವಾದವನ್ನು ಅವರು ಮಾಡುತ್ತಿರಲಿಲ್ಲ. ಇವತ್ತಿಗೂ ಇದು ಇದೆ. ಆದ್ದರಿಂದ ಹಿಂದೂಗಳನ್ನು ಉದ್ಧಾರ ಮಾಡುವ ಈ ಜನ, ಒಂದು ವರ್ಗದ ಜನರನ್ನು ದೇವಾಸ್ಥಾನಗಳಿಗೆ ಬರಬೇಡಿ ಎಂದು ಹೇಳುತ್ತಾರೆ. ಆದ್ದರಿಂದ ಹಿಂದೂಗಳ ಉದ್ಧಾರ ಮಾಡುತ್ತೇವೆಂದು ಹೇಳುವ ಇವರ ವಾದದಲ್ಲಿ ತಿರುಳಿಲ್ಲವೆಂದು ನಾವು ಭಾವಿಸುತ್ತೇವೆ.

ಸನ್ಮಾನ್ಯ ಅಧ್ಯಕ್ಷಿಣಿಯವರೇ, ಮತ್ತೊಂದು ವಿಷಯ ಈ ಶ್ರೀರಾಮ ಯಾರು? ಅಯೋಧ್ಯೆಯಲ್ಲಿ ಹುಟ್ಟಿದನೇ, ಚಿಕ್ಕನಾಯಕನಹಳ್ಳಿಯಲ್ಲಿ ಹುಟ್ಟಿದವನೇ, ಕುಣಿಗಲ್‌ನಲ್ಲಿ ಹುಟ್ಟಿದನೇ? ನನ್ನ ಬಂಧುಗಳಲ್ಲಿ ಈ ಒಂದು ಪ್ರಶ್ನೆಯನ್ನು ಕೇಳಿಕೊಳ್ಳುತ್ತೇನೆ. ನೀನು ಹುಟ್ಟಿದ ಒಂದೇ ಒಂದು ಕಾರಣಕ್ಕಾಗಿ, ಈ ಭೂಮಿ ಮೇಲೆ ತಪಸ್ಸು ಮಾಡುವ ಯೋಗ್ಯತೆ ನಿನಗಿಲ್ಲ. ನಿನಗೆ ತಪಸ್ಸು ಮಾಡುವ ಅಧಿಕಾರ ಇಲ್ಲ ಎಂದು ಶೂದ್ರ ತಪಸ್ವಿಯನ್ನು ಕೊಂದಂತಹ ಶ್ರೀರಾಮನಿಗೆ ನಾನು ಕೈಮುಗಿಯಲಿಕ್ಕೆ ಸಿದ್ಧನಿಲ್ಲ. ಅಂತಹ ಶ್ರೀರಾಮನಿಗೆ ದೇವಸ್ಥಾನ ಕಟ್ಟುವ ನೆಪದಲ್ಲಿ, ಇಡೀ ರಾಷ್ಟ್ರಕ್ಕೆ ಬೆಂಕಿ ಹಚ್ಚುವ ಅವಶ್ಯಕತೆ ಇಲ್ಲ. ವಾಲಿ-ಸುಗ್ರೀವರ ಕಥೆಯಲ್ಲಿ ಕದ್ದು ತಮ್ಮನನ್ನು ಕೊಂದಂತಹ ಶ್ರೀರಾಮನಿಗೆ ಕೈಮುಗಿಯುವ ಅವಶ್ಯಕತೆ ಇಲ್ಲ. ನಾನು ಈ ಮಾತನ್ನು ಏಕೆ

ಹೇಳುತ್ತಿದ್ದೇನೆ ಎಂದರೆ, ಶ್ರೀರಾಮನ ದೇವಸ್ಥಾನ ಕಟ್ಟುವಂತಹ ಜನರಿಗೆ, ಹಿಂದೂ ಧರ್ಮದ ಉದ್ಧಾರದ ಗುತ್ತಿಗೆ ತೆಗೆದುಕೊಂಡಿರುವ ಜನರಿಗೆ ಕಳಕಳಿಯಿಂದ ಈ ಹಂತದಲ್ಲಿ ನನ್ನ ಒಂದು ಮಾತನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಇದು ಕೇವಲ ದೇವಸ್ಥಾನ, ಮಸೀದಿಯ ಪ್ರಶ್ನೆಯಲ್ಲ. ವೈಚಾರಿಕತೆ, ವಿಚಾರವಂತಿಗೆಯನ್ನು ನಾಶ ಮಾಡಿ, ಜನರನ್ನು ಮತ್ತೆ ಮೌಢ್ಯಕ್ಕೆ ತೆಗೆದುಕೊಂಡು ಹೋಗುವ ಒಂದು ಚಾಣಾಕ್ಷತನ ಇದು. ಮತ್ತೆ ಮತೀಯ ಅಫೀಮನ್ನು ತಿನ್ನಿಸಿ, ಮತದ ಪಿತ್ತವನ್ನು ಏರಿಸಿ, ವೈಚಾರಿಕತೆಯನ್ನು ನಾಶಮಾಡಿ ಮೌಢ್ಯಗಳಿಗೆ ಕೊಂಡೊಯ್ಯುವಂತಹ ಅಡ್ಡದಾರಿ ಇದು. ಈ ಒಂದು ಚಾಣಾಕ್ಷತನ ಬಹುಶಃ ಪುರಾತನ ಕಾಲದಿಂದಲೂ ನಡೆದುಬಂದಿದೆ. ಆದ್ದರಿಂದ ಮಂದಿರ ಮಸೀದಿಗಳ ನೆಪದಲ್ಲಿ ಹಿಂದೂರಾಷ್ಟ್ರದ ಸ್ಥಾಪನೆಯ ಕನಸಿನಲ್ಲಿ ಈ ರಾಷ್ಟ್ರದ ವೈಚಾರಿಕತೆಯ ಆಂದೋಲನವನ್ನು ನಾಶ ಮಾಡಿ, ಜನರನ್ನು ಮೌಢ್ಯದ ಕಡೆ ತೆಗೆದುಕೊಂಡು ಹೋಗಬೇಡಿ, ಎಂದು ನನ್ನ ಸ್ನೇಹಿತರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಾನು ಈಗಾಗಲೇ ಹೇಳಿದ ಹಾಗೆ, ಇಲ್ಲಿ ನಮಗೆ ಅರ್ಥವಾಗದಿರುವ ಅನೇಕ ವಿಷಯಗಳಿವೆ. ಶ್ರೀರಾಮನ ದೇವಸ್ಥಾನ ಏಕೆ ಕಟ್ಟಬೇಕು ಇವರು? ಅದು ಅಯೋಧ್ಯೆಯಲ್ಲೇ ಏಕೆ ಹೋಗಿ ಕಟ್ಟಬೇಕು. ನಮ್ಮ ಮಾರಮ್ಮನ ದೇವಸ್ಥಾನ ಕಟ್ಟಲು ಇವರಿಗೆ ಏಕೆ ಆಸಕ್ತಿ ಇಲ್ಲ. ಕೊಲ್ಲಾಪುರದಮ್ಮನ ದೇವಸ್ಥಾನ ಕಟ್ಟಲಿಕ್ಕೆ ಏಕೆ ಆಸಕ್ತಿ ಇಲ್ಲ.

ಮೂಢನಂಬಿಕೆಗಳನ್ನು ಮರೆತು ವೈಚಾರಿಕ ಯುಗದಲ್ಲಿ ನಾವು ಕಾಲಿಡುವಂತಹ ಸಂದರ್ಭದಲ್ಲಿ ದೇವರ ಹೆಸರನ್ನು ಹೇಳಿ, ಮತದ ಹೆಸರನ್ನು ಹೇಳಿ, ಮೌಢ್ಯಕ್ಕೆ ನಮ್ಮನ್ನು ಕೊಂಡೊಯ್ಯುವಂತಹ ಈ ಜನರ ನಡವಳಿಕೆ ಪ್ರವೃತ್ತಿ ಏನಿದೆ ಇದು ಕೇವಲ ಒಂದು ಮಸೀದಿಯ ನಾಶದ ವಿಷಯವಲ್ಲ, ಒಂದು ದೇವಸ್ಥಾನದ ಉದ್ಧಾರದ ವಿಷಯವಲ್ಲ, ಇಡೀ ಜನಾಂಗದ ಬದುಕಿನ ಮೇಲೆ ಕೆಟ್ಟ ಪ್ರಭಾವವನ್ನು ಬೀರುವಂತಹ ನಡವಳಿಕೆ ಎಂದು ನಾನು ಈ ಸಂದರ್ಭದಲ್ಲಿ ಹೇಳಲಿಕ್ಕೆ ಇಷ್ಟಪಡುತ್ತೇನೆ. ನಿನ್ನೆ ನನ್ನ ಮಿತ್ರರು ಮಾತನಾಡುವಾಗ ಜಾತಿ ಹೆಸರಿನಲ್ಲಿ, ಮತದ ಹೆಸರಿನಲ್ಲಿ, ಯಾರಾದರೂ ರಾಜಕೀಯ ಮಾಡಿ, ತನ್ಮೂಲಕ ಅಧಿಕಾರಕ್ಕೆ ಹೋಗುವಂತಹ ಪ್ರಯತ್ನ ಮಾಡಿದರೆ ಅದು ಖಂಡನಾರ್ಹ ಎಂದು ಹೇಳಿದರು. ಮತ್ತೆ ಇನ್ನಾವ ಉದ್ದೇಶಕ್ಕಾಗಿ ಅದು? ರಾಜಕೀಯ ಉದ್ದೇಶ ಬಿಟ್ಟು ಒಂದು ರಾಜಕೀಯ ಪಕ್ಷಕ್ಕೆ ಬೇರೆ ಉದ್ದೇಶ ಏನಿದೆ? It is a political party, recognised by the Election Commission. Their main aim is to accept the position. I agree with them; it is the aim of all the political parties. But the means you have to fight. ಈ ದೇಶದ ಜಾತ್ಯಾತೀತ ತತ್ವಕ್ಕೆ, ಪರಮತ ಸಹಿಷ್ಣುತೆಗೆ, ಈ ರಾಷ್ಟ್ರದ ಸಂವಿಧಾನದಲ್ಲಿ ನಡೆದು ಕೊಳ್ಳಲೇಬೇಕಾದ ತತ್ವಗಳಿಗೆ ಬೆಂಕಿ ಹಚ್ಚಿ, ಆ ಬೆಂಕಿಯ ಉರಿಯುಲ್ಲಿ ಮೈಕಾಯಿಸಿಕೊಳ್ಳುವ, ತೀಟೆ ತೀರಿಸಿಕೊಳ್ಳುವ, ನೋವನ್ನು ಕಡಿಮೆ ಮಾಡಿಕೊಳ್ಳುವಂತಹ ನಡವಳಿಕೆ ಏನಿದೆ, ಇದನ್ನು ನಾವ್ಯಾರು ಮೆಚ್ಚುವಂತಹುದಲ್ಲ.

ಇದರ ಜೊತೆಗೆ, ಸನ್ಮಾನ್ಯ ಉಪಾಧ್ಯಕ್ಷಿಣಿಯವರೇ, ಇಂಥ ಹಿಂದೂರಾಷ್ಟ್ರದ ಪರಿಕಲ್ಪನೆ ನಮಗೆ ಕಲ್ಪಿಸಿಕೊಂಡರೂ ಕೂಡ ಜೀವದಲ್ಲಿ ನಡುಕ ಬರುತ್ತದೆ. ಈ ರಾಷ್ಟ್ರ ಒಂದು ಜನಾಂಗಕ್ಕೆ ಸೇರಿತೋ, ಹಿಂದುಗಳಿಗೆ ಸೇರಿತೋ, ಮಹಮದೀಯರಿಗೆ ಸೇರಿತೋ, ಕ್ರಿಶ್ಚಿಯನ್ನರಿಗೆ ಸೇರುವ ಒಂದು ನಂಬಿಕೆ ಏನು ಇದೆ, ಇದನ್ನು ಕಲ್ಪಿಸಿಕೊಳ್ಳುವುದಕ್ಕೂ ಸಾಧ್ಯವಿಲ್ಲ. ನನ್ನ ದೃಷ್ಟಿಯಿಂದ ಈ ಪರಿಕಲ್ಪನೆ Itself is a crime. ಈ ಸದನದಲ್ಲಿ ಇರುವುದು ವಿಶ್ವಕ್ಕೆಲ್ಲಾ ಬೇಕಾಗಿಲ್ಲ. ಎಲ್ಲರ ಮೈಯನ್ನು ಚುಚ್ಚಿಕೊಂಡು ಬಂದರೂ ಕೂಡ ರಕ್ತ ಕೆಂಪಗೆ ಬರುತ್ತದೆಯೇ ಹೊರತು, ಯಡಿಯೂರಪ್ಪನವರ ಮೈಯಲ್ಲಿ ಕರ್ರಗೆ, ರಾಮಯ್ಯನವರ ಮೈಯಲ್ಲಿ ಕೆಂಪಗೆ, ನಮ್ಮ ಸಾದತ್ ಆಲಿ ಅವರ ಮೈಯಲ್ಲಿ ನೀಲಿ ಬಣ್ಣದ ರಕ್ತ ಬರುವುದಕ್ಕೆ ಸಾಧ್ಯವಿಲ್ಲ. ಈ ನಿತ್ಯಸತ್ಯ ಕಣ್ಣಿಲ್ಲದೇ ಇರತಕ್ಕ ಕುರುಡರಿಗೆ ಗೊತ್ತಾಗುತ್ತದೆ. ಆದರೆ ಕಣ್ಣಿರುವ, ನಂಬಿಕೆಯುಳ್ಳಂಥ ನಮ್ಮ ಜನರಿಗೆ ಇದು ಗೊತ್ತಾಗುವುದಿಲ್ಲ. **'ಮತಾಂಧರಿಗೆ ಅಂಧರು ತೋರಿದ ದಾರಿ' - ಮತಾಂಧರು** ಎನ್ನುವ ಪದ ಉಪಯೋಗಿಸುವಾಗ, ಸ್ವಲ್ಪ ಅದು ಒರಟಾಗಿ ಕಂಡರೂ ಅರ್ಥ ಮಾತ್ರ ಅಂಥ ಕೆಟ್ಟದ್ದಲ್ಲ.

ಮತೀಯ ಭಾವನೆ ಎಂಬ ರಾಮರಸದಿಂದ ಪಿತ್ತನೆತ್ತಿಗೇರಿದಾಗ ಕಣ್ಣು ಕಾಣಿಸುವುದಿಲ್ಲ. ಈ ಮತೀಯ ಭಾವನೆ ಪಿತ್ತ ನೆತ್ತಿಗೇರಿ ಕುರುಡರಾಗಿರುವಂಥ ಜನರಿಗೆ ಕಣ್ಣಿಲ್ಲದ ಕುರುಡರಿಗೆ ಗೊತ್ತಿರುವಂಥ ಸತ್ಯದ ಅರಿವೂ ಕೂಡ ಆಗದೇ ಇರುವುದು ದುರದೃಷ್ಟಕರ. ಮೊನ್ನೆ ಅಂಧರೇ ಒಂದು ಸಭೆಯಲ್ಲಿ : ಅವರು ಕಣ್ಣಿಲ್ಲದ ಕುರುಡರು, ಕಣ್ಣುಳ್ಳಂಥ ಈ ಕುರುಡರಿಗೆ ಹೇಳಿರುವ ಎರಡು ವಾಕ್ಯಗಳನ್ನು ಈ ಸಭೆಯ ಮುಖಾಂತರ ತಮ್ಮ ಗಮನಕ್ಕೆ ತರುವುದಕ್ಕೆ ಇಚ್ಛೆ ಪಡುತ್ತೇನೆ. **''ಮನುಷ್ಯ ಜಾತಿ ತಾನೊಂದೆವಲಂ''** ಎಂಬ ಸದ್ಬೋಧನೆಯನ್ನು ಮರೆತು, ಸರ್ವಧರ್ಮ ಸಮನ್ವಯಕ್ಕೆ ಹೆಸರಾದ ಈ ಪುಣ್ಯಕ್ಷೇತ್ರವನ್ನು ಮಂದಿರ, ಮಸೀದಿಗಳ ಹೆಸರಿನಲ್ಲಿ ಕುರುಕ್ಷೇತ್ರವನ್ನೇಕೆ ಮಾಡುವಿರಿ? ಜಾತಿ, ಮತ, ಪಂಥಗಳ ತೊರೆದು ಭಾವೈಕ್ಯ ಬೀಜಕ್ಕೆ ನೀರು ಗೊಬ್ಬರವನ್ನು ಎರೆದು ಹೊಸಸಮಾಜವನ್ನು ಕಟ್ಟೋಣ ಬನ್ನಿ.

ಸುಟ್ಟ ಮನೆಗಳ ಮುಂದೆ ನಿಂತ ನಿರ್ಗತಿಕರಲ್ಲಿ, ತಾಯಿ-ತಂದೆಯರನ್ನು ಕಳೆದುಕೊಂಡ ಎಳೆಗೂಸುಗಳ ಮುಖದಲ್ಲಿ ರಾಮ ರಹೀಮ ಸಿಗಲಿಲ್ಲ. ರಾಮನೆಂದರೆ ರಹೀಮ, ರಹೀಮ ನೆಂದರೆ ರಾಮ. ದೇವರೆಂದಾದರು ನಿಮ್ಮ ಬಳಿ ಬಂದು, ಅಯೋಧ್ಯೆಯ ಸ್ಥಳದಲ್ಲಿಯೇ ನೆರಳು ಬೇಕೆಂದು ಕೇಳಿದ್ದನೇ? ಈ ಮಾತನ್ನು ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ, ರಾಜಕಾರಣವನ್ನು ಮಾಡತಕ್ಕ ಸಂದರ್ಭದಲ್ಲಿ ಏನಾದರೂ ಮಾಡಿ ಅಧಿಕಾರಕ್ಕೆ ಹೋಗಬೇಕು. ಯಾವುದಾದರೂ ರೂಪದಲ್ಲಿ ಅಧಿಕಾರಕ್ಕೆ ಹೋಗಬೇಕು, ಎನ್ನುವ ಒಂದು ಭಾವನೆ ಏನಿದೆ, ಈ ಭಾವನೆಯಿಂದ ರಾಮನ ಹೆಸರನ್ನು ಹೇಳಿಕೊಂಡು ರಾಜಕೀಯ ಮಾಡುವಂಥ ಜನ ಈ ರಾಷ್ಟ್ರಕ್ಕೆ ಕಳಂಕವನ್ನು ತಂದಿದ್ದಾರೆ. ಕಣ್ಣಿಲ್ಲದ ಕುರುಡರಿಗೆ ಕಾಣುವಂತ ಸತ್ಯ, ಕಣ್ಣುಳ್ಳಂಥ ಈ ಕುರುಡರಿಗೆ ಕಾಣದೇ ಇರುವುದು ದುರದೃಷ್ಟಕರ ಎಂದು ನಾನು ಭಾವಿಸಿಕೊಳ್ಳುತ್ತೇನೆ. 6ನೇ ತಾರೀಖು, ನಡೆದಂಥ ಘಟನೆಗೆ ನಾನು

ಈಗಾಗಲೇ ಹೇಳಿದ ಹಾಗೆ, ಯಾವುದೋ ಒಂದು ಪಕ್ಷ, ಯಾವುದೋ ಒಂದು ಸಂಸ್ಥೆ, ಅಥವಾ ಯಾವುದೋ ಒಬ್ಬ ವ್ಯಕ್ತಿಯನ್ನು ನಾನು ಗುರಿಮಾಡುವುದಕ್ಕೆ ಸಾಧ್ಯವಿಲ್ಲ. ಈ ಸದನದಲ್ಲಿ ಚರ್ಚೆ ಮಾಡುವಂಥ ಸಂದರ್ಭದಲ್ಲಿ ಕೆಲವು ವಿಷಯಗಳು ನನ್ನ ಗಮನಕ್ಕೆ ಬಂತು. ಅದನ್ನು ನೋಡಿದಾಗ ಒಂದು ತೀರ್ಮಾನಕ್ಕೆ ನಾನು ಬಂದೆ. ಈ ಧರ್ಮಾಂಧತೆಯ ನಂಬಿಕೆ ಇದು ಪಕ್ಷಕ್ಕೆ ಸೀಮಿತವಾಗಿಲ್ಲ. ಎಲ್ಲಾ ಪಕ್ಷದಲ್ಲಿಯೂ ಬಿಜೆಪಿಯವರು ಇದ್ದಾರೆ, ಕಾಂಗ್ರೆಸ್‌ನಲ್ಲೂ ಬಿಜೆಪಿಯವರು ಇದ್ದಾರೆ. ಅವರು ಗುಟ್ಟಾಗಿ ಒಪ್ಪಿಕೊಳ್ಳುತ್ತಾರೆ. ಅವರು ಮಸೀದಿ ಕೆಡವಿದ್ದು ಕರೆಕ್ಟ್ ಎಂದು ಹೇಳುವವರು ಇದ್ದಾರೆ. ಜನತಾದಳದಲ್ಲೂ, ಜನತಾಪಕ್ಷದಲ್ಲೂ ಬಿಜೆಪಿಯ ಮನಸ್ಸಿನವರು ಇದ್ದಾರೆ.

ಸನ್ಮಾನ್ಯ ಅಧ್ಯಕ್ಷರೇ, ಆಯೋಧ್ಯೆಯಲ್ಲಿ ನಡೆದ ಘಟನೆ ಯಾವುದೇ ದೃಷ್ಟಿಯಿಂದ ನೋಡಿದರು ಖಂಡನಾರ್ಹವಾದುದು. ಕೇವಲ ಈ ಸದನದಲ್ಲಿರುವ 224 ಜನ ಒಂದು ನಿರ್ಣಯ ಅಂಗೀಕಾರ ಮಾಡಿ ಈ ಘಟನೆ ಕೃತ್ಯವನ್ನು ಹೀನಾಯವಾದುದು, ನಾಚಿಕೆ ಪಡುವಂತಹುದು ಎಂದು ಅಂಗೀಕಾರ ಮಾಡಿದರೆ, ಆಗಿರುವ ಇರ್ರಿಪೇರಬಲ್ ಡ್ಯಾಮೇಜ್ ಟು ದಿ ಸೆಕ್ಯುಲರ್ ಕ್ಯಾರೆಕ್ಟರ್ ಆಫ್ ಎ ಕಂಟ್ರಿ. ಮತ್ತೆ ಸಂವಿಧಾನಕ್ಕೆ ಎಸಗಿರುವ ಅಪಚಾರ ಸರಿ ಮಾಡಲಿಕ್ಕೆ ಸಾಧ್ಯ ಎಂದು ನಾನು ಭಾವಿಸಿಕೊಳ್ಳುವುದಿಲ್ಲ. ನಿರ್ಣಯ ಮಾಡುವುದರಿಂದ, ಭಾಷಣ ಮಾಡುವುದರಿಂದ ಒಂದು ಕೆಟ್ಟ ನಂಬಿಕೆ, ಪದ್ಧತಿ, ವ್ಯವಸ್ಥೆಯನ್ನು ನಿರ್ಮೂಲನ ಮಾಡಲು ಸಾಧ್ಯವೆಂದು ನಾನು ಭಾವಿಸಿಕೊಳ್ಳುವುದಿಲ್ಲ. ಕಾನೂನಿನ ದೃಷ್ಟಿಯಿಂದ ನಡೆದ ಈ ಘೋರ ಅಪರಾಧ ನಡೆದಂತಹ ಸ್ಥಳಕ್ಕೆ ಯಾವುದಾದರೂ ಕಾನೂನಿತ್ತೇ. ಆ ಕಾನೂನನ್ನು ಜಾರಿಗೆ ತರುವಂತಹ, ಅಪರಾಧವನ್ನು ತಡೆಯಲಿಕ್ಕೆ ಕರ್ತವ್ಯ ಹೊಂದಿದ್ದಂತಹ ವ್ಯವಸ್ಥೆ ಏನಾದರೂ ಇತ್ತೆ? ಇದಕ್ಕೆ ಉತ್ತರ ಇತ್ತು ಎಂದು ಹೇಳಬೇಕಾಗುತ್ತದೆ.

There was a Government headed by Sri Kalyan Singh which was legally constituted under the Constitution. The question is whether this legally constituted Government has discharged legitimate duties to protect the people and the country. ಅದು ಹಿಂದೂಗಳದ್ದೋ, ಮಹಮದೀಯರದೋ, ಕ್ರಿಶ್ಚಿಯನ್ನರದೋ, ಬೌದ್ಧರದೋ ಅನ್ನುವ ಪ್ರಶ್ನೆ ಇಲ್ಲಿ ಬೇಡ. ಕಾನೂನಿನ ಪ್ರಕಾರ ಅಸ್ತಿತ್ವಕ್ಕೆ ಬಂದಿರುವ ಸಂವಿಧಾನದ ಕೂಸಾದಂತಹ ಒಂದು ಸರ್ಕಾರ ತಾನು ಮಾಡಬೇಕಾಗಿದ್ದ ಕರ್ತವ್ಯ ಮಾಡಿದೆಯೇ? ಎಂದು ಅತ್ಯಂತ ನೋವಿನಿಂದ ಕೇಳುತ್ತೇನೆ, ಅವೊತ್ತು ಅಸ್ತಿತ್ವದಲ್ಲಿದ್ದ ಉತ್ತರಪ್ರದೇಶದ ರಾಜ್ಯಸರ್ಕಾರ, ತನ್ನ ನಡವಳಿಕೆಯಿಂದ ಕರ್ತವ್ಯಚ್ಯುತಿ ಮಾಡಿದೆ. ಸಂವಿಧಾನಕ್ಕೆ ಅಪಚಾರವನ್ನು ಮಾಡಿದೆ. ಈ ಅಪಚಾರ ಕರ್ತವ್ಯ ಚ್ಯುತಿಗಾಗಿ ಕಲ್ಯಾಣ್ ಸಿಂಗ್‌ರು ರಾಜೀನಾಮೆ ಕೊಟ್ಟಾದಮೇಲೆ ಈ ಸರ್ಕಾರವನ್ನು ಡಿಸ್‌ಮಿಸ್ ಮಾಡಿದ್ದುದು ಸಮರ್ಪಕವೋ, ಅಲ್ಲವೋ. ಕಾನೂನಿನ ದೃಷ್ಟಿಯಿಂದ ಅದು ಒಳಿತೋ, ಕೆಡಕೋ ಬೇರೆ ವಿಷಯ. ಆದರೆ ಒಂದು

ಅಕೃತ್ಯ ನಡೆಯುತ್ತಿದ್ದ ಸಂದರ್ಭದಲ್ಲಿ, ಒಂದು ಸ್ಫೋಟಕ ಘಟನೆ ನಡೆಯುತ್ತಿದ್ದ ಸಂದರ್ಭದಲ್ಲಿ, ಅದನ್ನು ತಡೆಯಲಿಕ್ಕೆ ಪ್ರಯತ್ನ ಮಾಡದೇ ಹೋದಂತಹ ಹೀನ ಪ್ರವೃತ್ತಿ ಯಾವುದೇ ಸರ್ಕಾರ ಮಾಡಿದರೂ ಅದನ್ನು ಖಂಡಿಸ ಬೇಕಾಗುತ್ತದೆ. ಸಾವಿರಾರು, ಲಕ್ಷಾಂತರ ಜನ ಅಲ್ಲಿ ಒಂದು ಕಟ್ಟಡವನ್ನು ಕೆಡವುತ್ತಿದ್ದಾರೆ. ಆ ಕಟ್ಟಡ disputed structure. ವಿವಾದಾತ್ಮಕ ಕಟ್ಟಡ ಆದಾಗ್ಯು ಅಲ್ಲಿ ಶ್ರೀ ರಾಮಚಂದ್ರ ಜನಿಸಿದ್ದಾಗ್ಯೂ ಕೂಡ, ಅಲ್ಲಿ ಶ್ರೀರಾಮನ ದೇವಸ್ಥಾನ ಇತ್ತೆಂದು ಭಾವಿಸಿದ್ದರೂ ಕೂಡ Assuming for argument sake, that is adisputed structure, it can be done under the due process of law. ಕಾನೂನು ಚೌಕಟ್ಟಿನಲ್ಲಿ ತೆಗೆಯಬೇಕೆ ಹೊರತು, ಯಾರೋ ಮೂರನೆಯವರು ಅದನ್ನು ಮಾಡಲಿಕ್ಕೆ ಸಾಧ್ಯವಿಲ್ಲ . ಇಂತಹ ಒಂದು ಅಕೃತ್ಯ ನಡೆಯುವಾಗ, ಅದನ್ನು ತಡೆಯುವಲ್ಲಿ ವಿಫಲವಾದ ಉತ್ತರಪ್ರದೇಶ ಸರ್ಕಾರ ತನ್ನ ಕರ್ತವ್ಯಚ್ಯುತಿ ಮಾಡಿದೆ. ಅದು ಅಲ್ಲಿಗೇ ನಿಲ್ಲಲಿಲ್ಲ. ಕರ್ತವ್ಯಚ್ಯುತಿಗೆ ಅಥವಾ ಸಂವಿಧಾನದ ಅಪಚಾರಕ್ಕೆ, ಆ ಸರ್ಕಾರ ನ್ಯಾಯಾಂಗಕ್ಕೆ ಕೂಡ ಅಪಚಾರ ಮಾಡಿದೆ.

ಉತ್ತರ ಪ್ರದೇಶದ ಸರ್ಕಾರ ಉಚ್ಚನ್ಯಾಯಾಲಯದಲ್ಲಿ ವಿವಾದ ನಡೆಯತಕ್ಕ ಸಂದರ್ಭದಲ್ಲಿ ಅಲ್ಲಿ ಕರಸೇವೆಯನ್ನು ಮಾಡುವುದಕ್ಕೆ ನಾವು ಅವಕಾಶವನ್ನು ಮಾಡಿಕೊಡುವುದಿಲ್ಲ ಎನ್ನುವ ಒಪ್ಪಂದವನ್ನು ಅಂಡರ್ ಟೇಕಿಂಗ್ಸ್ ಉಚ್ಚನ್ಯಾಯಾಲಯಕ್ಕೆ ಕೊಟ್ಟ ಮುಚ್ಚಳಿಕೆಯನ್ನು ಮುರಿಯುವುದರ ಮುಖಾಂತರ, ಈ ರಾಷ್ಟ್ರದ ಅತ್ಯುನ್ನತವಾದಂಥ ನ್ಯಾಯಾಲಯಕ್ಕೆ ಅಪಮಾನ ಮಾಡಿದೆ. ಒಬ್ಬ ವ್ಯಕ್ತಿ ಕಾನೂನನ್ನು ಮುರಿದರೆ, ಆತನಿಗೆ ಶಿಕ್ಷೆ ಇದೆ. ಇಂಥ ಘೋರ ಅಪರಾಧವನ್ನು ಮಾಡುವುದನ್ನು ತಡೆಯುವುದಕ್ಕೆ ಸಾಧ್ಯ ಇಲ್ಲದೇ ಇರತಕ್ಕ ಸರ್ಕಾರ ನ್ಯಾಯಾಲಯಕ್ಕೆ ಕೊಟ್ಟಿರುವ ಮುಚ್ಚಳಿಕೆಯನ್ನು ಮುರಿದಂಥ ಅಪರಾಧಕ್ಕೆ ಕಾನೂನಿನಲ್ಲಿ ಯಾವ ಶಿಕ್ಷೆಯನ್ನು ಕೊಡುವುದಕ್ಕೆ ಸಾಧ್ಯವಿಲ್ಲ? ಸಂವಿಧಾನಕ್ಕೆ, ನ್ಯಾಯಕ್ಕೆ ಅಷ್ಟೇ ಅಪಚಾರ ಎಸಗಲಿಲ್ಲ ಈ ಜನ. ಯಾವ ಜನ ಸಾಮಾನ್ಯರು ತಮ್ಮ ಒಳಿತಿಗಾಗಿ, ತಮ್ಮ ಉತ್ತಮ ಬದುಕಿಗಾಗಿ ಉತ್ತರಪ್ರದೇಶದ ಸರ್ಕಾರದಲ್ಲಿ ನಂಬಿಕೆಯನ್ನು ತೋರಿದರೋ, ಆ ನಂಬಿಕೆಗೆ ದ್ರೋಹ ಬಗೆದಿದ್ದಾರೆ. ಜನಗಳು ಮತ ಕೊಟ್ಟು ಸರ್ಕಾರಗಳನ್ನು ನೇಮಕ ಮಾಡುವುದು, ಸರ್ಕಾರಗಳನ್ನು ಆರಿಸುವುದು, ಅಸ್ತಿತ್ವಕ್ಕೆ ಬರುವುದು, ಜನರ ಕೆಲಸ ಮಾಡುವುದಕ್ಕಾಗಿ. ಅಂಥ ನಂಬಿಕೆ ಇಟ್ಟ ಜನರಿಗೆ ದ್ರೋಹವನ್ನು ಬಗೆದಿದ್ದಾರೆ.

ಈ ಹಿಂದೂ ರಾಷ್ಟ್ರದ ಪರಿಕಲ್ಪನೆ, ರಾಮರಾಜ್ಯದ ಕನಸು, ಬಹುಶಃ, ನಮ್ಮ ಕಾವ್ಯಗಳಲ್ಲಿ ಕಂಡಂಥ ಶ್ರೀರಾಮನ ರಾಮರಾಜ್ಯ ಬರುವುದಾದರೆ, ಅಂಥ ರಾಮರಾಜ್ಯ ನಮಗೆ ಬೇಕಾಗಿಲ್ಲ. ಹುಟ್ಟಿದ ಆಧಾರದ ಮೇಲೆ ನಮ್ಮ ಅಧಿಕಾರಿಗಳನ್ನು ನಿರ್ಣಯ ಮಾಡುವಂಥ ಶ್ರೀರಾಮ ಬರುವುದಾದರೆ, ಅಂಥ ರಾಜ್ಯ ಬರುವುದಾದರೆ ನಮಗೆ ಬೇಕಾಗಿಲ್ಲ. ಈ ಹಿಂದೂ ರಾಷ್ಟ್ರ ಪರಿಕಲ್ಪನೆ ಉಳ್ಳಂಥ ಜನ ಕಾನೂನು, ಧರ್ಮ, ಸಂವಿಧಾನ ಇವೆಲ್ಲವನ್ನೂ ನಾಶ ಮಾಡಿದ್ದಾರೆ. ಇದರ ಪರಿಣಾಮವೇನು? ಮತೀಯ ಭಾವನೆ ಮತ್ತೇರಿದಂಥ ಜನರ ಹುಚ್ಚಾಟ. ಹಿಂದೂ

ರಾಷ್ಟ್ರದ ಪರಿಕಲ್ಪನೆ ಇಟ್ಟುಕೊಂಡಿರುವಂಥ ರಾಜಕೀಯ ದಾಹದ ಕೆಲಸ. ಆದರೆ ಈ ಘಟನೆಯಿಂದ, ನಡೆದ ಕೃತ್ಯದಿಂದ, ಈ ನಾಚಿಕೆಗೇಡು ಪ್ರಸಂಗದಿಂದ, ಈ ರಾಷ್ಟ್ರದಲ್ಲಿ, ಆದ ಪರಿಣಾಮದ ಬಗ್ಗೆನಾವು ಆಲೋಚನೆ ಮಾಡಬೇಕು. ನಮ್ಮ ಹಿರಿಯ ಸದಸ್ಯರಾದಂಥ ಶ್ರೀಮಾನ್ ರಾಮಕೃಷ್ಣಹೆಗಡೆಯವರು ತುಂಬಾ ಚೆನ್ನಾಗಿ ಹೇಳಿದರು. It is not the question of demolition of Mosque. It is the question of demolition of the prestige of the country at the international level. ಅಂತರರಾಷ್ಟ್ರೀಯ ಮಟ್ಟದಲ್ಲಿ ಇಲ್ಲಿ ಎಲ್ಲರೂ ಒಂದಾಗಿ ಬಾಳುತ್ತಾರೆ ಎನ್ನುವ ನಂಬಿಕೆ ಇತ್ತೋ, ಆ ನಂಬಿಕೆಯನ್ನು ನಾಶ ಮಾಡಿದ ಒಂದು ದುಷ್ಕೃತ್ಯ ಇದು. ಅಂತರರಾಷ್ಟ್ರೀಯ ಮಟ್ಟದಲ್ಲಿ ರಾಷ್ಟ್ರಕ್ಕೆ ಮಸಿಯನ್ನು ಬಳಿದ ಒಂದು ಕೃತ್ಯ ಇದು.

ಸನ್ಮಾನ್ಯ ಅಧ್ಯಕ್ಷರೇ, ನಾನು ಆಗಲೇ ಹೇಳಿದೆ, ಈ ವಿಶ್ವದಲ್ಲಿ ಯಾವುದೇ ಒಂದು ಧರ್ಮ, ಯಾವುದೇ ಒಂದು ನೀತಿ, ಯಾವುದೇ ಒಂದು ನ್ಯಾಯ ಅಥವಾ ಯಾವುದೇ ಒಂದು ಕಾನೂನು, ಒಬ್ಬ ಮನುಷ್ಯನನ್ನು ವಿನಾಕಾರಣಕ್ಕಾಗಿ ಕೊಲ್ಲುವಂಥದ್ದನ್ನು ಪ್ರೀಚ್ ಮಾಡುವ ಯಾವುದೇ ಧರ್ಮ ಇಲ್ಲ. ಮಹಾತ್ಮಾಗಾಂಧಿ ಇರಬಹುದು, ಏಸು ಕ್ರಿಸ್ತ ಇರಬಹುದು, ಬುದ್ಧ ಇರಬಹುದು. ಯಾರೇ ಆಗಿರಲಿ, ಒಬ್ಬ ಮನುಷ್ಯ ವಿನಾ ಕಾರಣ ಮತ್ತೊಬ್ಬ ಮನುಷ್ಯನನ್ನು ದ್ವೇಷ ಮಾಡಬೇಕು, ಅಸೂಯೆ ಪಡಬೇಕು ಎಂದು ಬೋಧನೆ ಮಾಡುವ ಧರ್ಮ ಇಲ್ಲ. ಯಾವುದೇ ಧರ್ಮ ಪ್ರಬೋಧಕರು ಇಲ್ಲ. ಆದ್ದರಿಂದ ಕವಿಗಳು ಹೇಳುವ ಹಾಗೆ, ತಂದೆಯನ್ನು ಕಳೆದುಕೊಂಡಂತಹ ಮಕ್ಕಳು, ಮಕ್ಕಳನ್ನು ಕಳೆದುಕೊಂಡಂತಹ ತಂದೆಯರು, ಅಕ್ಕತಂಗಿಯರ ಮುಖದಲ್ಲಿ ನಿಮ್ಮ ರಾಮ ಕಾಣುವುದಿಲ್ಲ. ನಿಮ್ಮ ರಹೀಮ ಕಾಣುವುದಿಲ್ಲ. ನಿಮ್ಮ ಮಾರಮ್ಮ ಕಾಣುವುದಿಲ್ಲ. ನಿಮ್ಮ ಪಟಾಲಮ್ಮ ಕಾಣವುದಿಲ್ಲ. ನಿಮ್ಮ ಭೂತ ಕಾಣುವುದಿಲ್ಲ. ಅವರ ಮುಖದಲ್ಲಿ ಕಾಣುವುದು ಒಂದೇ, ಅದು ಮನುಷ್ಯತ್ವ. ತಂದೆಯನ್ನು ಕಳೆದುಕೊಂಡ ಮಗನ ಮುಖದಲ್ಲಿ ಕಾಣುವುದು ಮನುಷ್ಯತ್ವ. ತಾಯಿಯನ್ನು ಕಳೆದುಕೊಂಡ ಮಗಳ ಮುಖದಲ್ಲಿ ಕಾಣುವುದು ಮನುಷ್ಯತ್ವ. ಸಾವಿರಾರು ಜನ ತಮ್ಮ ಅಸುವನ್ನು ನೀಗಿದರು. ಏತಕ್ಕಾಗಿ ನೀಗಿದರು? ರಾಷ್ಟ್ರ ರಕ್ಷಣೆಯ ನೆಪದಲ್ಲಿ ಜನರನ್ನು ಕೊಲ್ಲುವುದೂ ಕೂಡ ಒಂದು ಪಾಪ. ಅದೂ ಆಗಿಲ್ಲ. ಇಲ್ಲಿ ದೇಶದ ರಕ್ಷಣೆ ಇಲ್ಲ. ಧರ್ಮದ ರಕ್ಷಣೆ ಇಲ್ಲ. ನ್ಯಾಯದ ರಕ್ಷಣೆಗಾಗಿ ಅಲ್ಲ. ಇವೆಲ್ಲವೂ ಬೇಡ ಎಂದರೆ, ಮನುಷ್ಯನಿಗೆ ಒಳ್ಳೆಯದಾಗುವಂತಹ ಒಂದು ಜನಪರ ಕಲ್ಯಾಣದ ಕೆಲಸವೂ ಇಲ್ಲ. ಇದು ಯಾವುದೂ ಇಲ್ಲದೇ ಇದ್ದಾಗ, ಒಂದೇ ಕಾರಣಕ್ಕಾಗಿ ಅವನು ಅಲ್ಪಸಂಖ್ಯಾತ ಕೊಲ್ಲು. ಕಳೆದ ಗಣೇಶನ ಪೂಜೆಗೆ ಇನ್ನೂರ ಒಂದು ರೂಪಾಯಿ ದೇಣಿಗೆ ಕೊಟ್ಟಂತಹ ಒಬ್ಬ ಅಲ್ಪಸಂಖ್ಯಾತನನ್ನು ಕೊಂದರೆ ಇದು ಧರ್ಮವೇನು? ಪ್ರತಿವರ್ಷ ನೂರಾರು ಜನ ಹಿಂದೂಗಳನ್ನು ಮನೆಗೆ ಕರೆದು ಅನ್ನ ಹಾಕುವಂತಹ ಅಲ್ಪಸಂಖ್ಯಾತರನ್ನು ಬೀದಿಯಲ್ಲಿ ಮಚ್ಚಿನಿಂದ ಕೊಚ್ಚುವುದು ಒಂದು ಧರ್ಮವೇನು? ಅದು ನ್ಯಾಯವೇನು? ಆದ್ದರಿಂದ ಈ ಒಂದು ಕೃತ್ಯವನ್ನು ಮಾಡಿದವರಿಗೆ ಏನು ಲಾಭ

ಸಿಗುತ್ತದೆಯೋ ನನಗಂತೂ ಗೊತ್ತಿಲ್ಲ. ಇಷ್ಟು ಜನರ ಕೊಲೆಗೆ, ಪಾಪಕ್ಕೆ, ಈ ಕೃತ್ಯವನ್ನು ಎಸಗಿದಂತವರು ಜವಾಬ್ದಾರರಾಗುತ್ತಾರೆ.

ಇದರ ಜೊತೆಗೆ ನನ್ನ ಮಿತ್ರರಲ್ಲಿ ಒಂದು ಪ್ರಾರ್ಥನೆ. ವಿಶ್ವದ ಅನೇಕ ರಾಷ್ಟ್ರಗಳಲ್ಲಿ ಹಿಂದೂಗಳು ಅಲ್ಪಸಂಖ್ಯಾತರಾಗಿ ವಾಸಿಸುತ್ತಿದ್ದಾರೆ. ಮಸ್ಕಾಟ್‌ನಲ್ಲಿ ಕೆಲಸ ಮಾಡುತ್ತಿರುವಂತಹ ರುದ್ರಯ್ಯ ನವರ ಗಮನಕ್ಕೆ ಬರಬೇಕು. ಅವನ ಹೆಂಡತಿ ಮಕ್ಕಳು ಬೀದಿಯಲ್ಲಿ ತಿರುಗಾಡಬೇಕಾಗುತ್ತದೆ ಎಂದು. ದುಬಾಯ್‌ನಲ್ಲಿ ಕೆಲಸ ಮಾಡುತ್ತಿರುವ ನರಸಿಂಹಮೂರ್ತಿ ಅವರ ಮಕ್ಕಳ ಗಮನಕ್ಕೆ ಬರಬೇಕು. ಇಲ್ಲಿ ಅಲ್ಪಸಂಖ್ಯಾತರನ್ನು ಕೊಲ್ಲುವ ರೀತಿಯಲ್ಲಿ ಅವರೆಲ್ಲ ನಿಮ್ಮನ್ನು ಕೊಂದರೆ ನೀವು ಏನು ಮಾಡುತ್ತೀರಿ? ಏನು ಪರಿಹಾರ ಕೊಡುತ್ತೀರಿ? ಈ ಜನತೆಗೆ, ಬೇರೆ ರಾಷ್ಟ್ರದಲ್ಲಿ ಎಲ್ಲಿ ಹಿಂದೂಗಳು ಅಲ್ಪಸಂಖ್ಯಾತರಾಗಿದ್ದಾರೋ, ಆ ಅಲ್ಪಸಂಖ್ಯಾತರಾಗಿರುವಂತಹ ರಾಷ್ಟ್ರದಲ್ಲಿ ನೀವು ಎಸಗಿದಂತಹ ಕೃತ್ಯವನ್ನು ಅವರೂ ಎಸಗುವುದಾದರೆ, ನೀವು ಅವರಿಗೆ ಏನು ರಕ್ಷಣೆ ಕೊಡುತ್ತೀರಿ, ಏನು ಉತ್ತರಕೊಡುತ್ತೀರಿ? ನೀವು ಅವರಿಗೆ ಏನು ಸಂತಾಪವನ್ನು ಮಾಡುತ್ತೀರಿ? ಆದ್ದರಿಂದ ಆ ದಿನ ಅಯೋಧ್ಯೆಯಲ್ಲಿ ನಡೆದಂತಹ ಘಟನೆಗೆ ಮನುಕುಲವೇ ತಲೆ ತಗ್ಗಿಸುವಂತಹುದು. ಈ ಕೃತ್ಯದಿಂದ ಆದಂತಹ ದುಷ್ಪರಿಣಾಮಗಳಿಗೆ ಧರ್ಮ - ಕರ್ಮ, ಪಾಪ - ಪುಣ್ಯ, ಸ್ವರ್ಗ - ನರಕ, ಇವೆಲ್ಲವೂ ಇವೆಯೋ ಇಲ್ಲವೋ ನನಗೆ ಗೊತ್ತಿಲ್ಲ, ಆದರೆ ವಿಶ್ವದ ಎಲ್ಲಾ ಮನುಷ್ಯತ್ವಕ್ಕೆ ಇವರು ಧಕ್ಕೆ ತಂದಿದ್ದಾರೆ. ಮನುಕುಲ ತಲೆತಗ್ಗಿಸುವ ರೀತಿಯಲ್ಲಿ ಈ ಕೃತ್ಯವನ್ನು ಮಾಡಿದ್ದಾರೆಂದು ನಾನು ಭಾವಿಸಿಕೊಳ್ಳುತ್ತೇನೆ. ನಾನು ಬೆಳಗ್ಗೆ ಮಾತನಾಡುತ್ತಾ, ಈ ಜನಕ್ಕೆ ಹಿಂದೂ ಧರ್ಮದ ರಕ್ಷಣೆ, ಹಿಂದೂಗಳ ಉದ್ಧಾರ ಮಾಡುವಂತಹ, ನಿಜವಾದ ಉದ್ದೇಶ ಇದ್ದರೆ ಮಂಡಲ್ ಕಮೀಷನ್ ರಿಪೋರ್ಟ್‌ಗೆ ಇವರು ಏಕೆ ವಿರೋಧ ಮಾಡಿದರು ಎಂದು ಕೇಳುತ್ತೇನೆ.

ಮಂಡಲ್ ಕಮೀಷನ್ ವರದಿಯಲ್ಲಿ ಮಹಮದೀಯರಿಗೆ ಯಾವ ಸೌಲಭ್ಯ, ಸವಲತ್ತುಗಳನ್ನು ಒದಗಿಸಿರಲಿಲ್ಲ. ಆದರೂ ಕೂಡ ಮಂಡಲ್ ಕಮೀಷನ್ ಬಂದಂತಹ ಸಂದರ್ಭದಲ್ಲಿ ಹಿಂದೂಗಳಲ್ಲಿ ನಂಬಿಕೆವುಳ್ಳಂಥ ಜನ ಅದನ್ನು ವಿರೋಧ ಮಾಡಿಸಿದರು. ಆದ್ದರಿಂದ ನಾನು ಈ ಮಾತನ್ನು ಏತಕ್ಕೆ ಹೇಳುತ್ತಿದ್ದೇನೆಂದರೆ, ಹಿಂದೂಗಳ ಈ ಮತೀಯ ಭಾವನೆಯ ಪಿತ್ತವನ್ನು ನೆತ್ತಿಗೇರಿಸಿ, ವೈಚಾರಿಕತೆಯನ್ನು ಕೊಲ್ಲುವುದು ಒಂದು ಉದ್ದೇಶ. ಓಟನ್ನು ಪಡೆಯುವುದು ಮತ್ತೊಂದು ಉದ್ದೇಶ. ಓಟನ್ನು ಪಡೆಯುವುದರಿಂದ ನನಗೆ ಹೆಚ್ಚು ನೋವು ಇಲ್ಲ. ಈ ರಾಷ್ಟ್ರದ ವೈಚಾರಿಕತೆಯ ಕ್ರಾಂತಿಗೆ ನೀರೆರೆಚುತ್ತಿದ್ದಾರೆ. ಇದು ಎಲ್ಲಾ ಯುಗ ಧರ್ಮಗಳಲ್ಲಿಯೂ ನಡೆದುಕೊಂಡು ಬರುತ್ತಿದೆ. ಇವತ್ತು ಅದು ನಡೆಯುತ್ತಿದೆ. ಆದ್ದರಿಂದ ಹಿಂದೂ ಧರ್ಮದ ಉದ್ಧಾರವನ್ನು ಮಾಡುತ್ತೇವೆ. ಹಿಂದು ರಾಷ್ಟ್ರದ ಪರಿಕಲ್ಪನೆಯನ್ನು ನಾವು ಇಟ್ಟುಕೊಂಡು ಕೆಲಸ ಮಾಡುತ್ತಿದ್ದೇವೆಂದು ಹೇಳುವುದು ರಾಜಕೀಯ ಉದ್ದೇಶವೇ ಹೊರತು ಧರ್ಮದ ಉದ್ಧಾರದ ಉದ್ದೇಶ ಅಲ್ಲ.

ಮೊನ್ನೆ ನಮ್ಮ ಹಿರಿಯರು ಹೇಳಿದ್ದಕ್ಕೆ ನಾನು ಅಭಿನಂದಿಸುತ್ತೇನೆ! ಅವರು ನಮ್ಮೆಲ್ಲರಿಗೂ ಮನಮೆಚ್ಚುವ ರೀತಿಯಲ್ಲಿ ಒಂದು ಮಾತನ್ನು ಹೇಳಿದ್ದಾರೆ. ಮೊಟ್ಟಮೊದಲು ನಮಗೆ ಈ ರಾಷ್ಟ್ರ, ಆಮೇಲೆ ಪಕ್ಷ. ದೇಶ ಇದ್ದರೆ ಚುನಾವಣೆಗಳು ನಡೆಯುತ್ತವೆ, ಒಂದು ಸಾರಿ ನೀವು ಮಂತ್ರಿಗಳಾಗುತ್ತೀರಿ, ಇನ್ನೊಂದು ಸಾರಿ ನಾವು ಮಂತ್ರಿಗಳಾಗುತ್ತೇವೆ. ದೇಶ ಇದ್ದರೆ ನಿಮ್ಮ ಮಗನಿಗೂ ಕೆಲಸ ಕೊಡಿಸಿಕೊಳ್ಳಬಹುದು, ನಮ್ಮ ಮಗನಿಗೂ ಕೆಲಸ ಕೊಡಿಸಬಹುದು. ದೇಶ ಉಳಿದುಕೊಂಡಿದ್ದರೆ ನೀವು ಆ ಫ್ಲಾಗ್‌ನ್ನು ಹಿಡಿಯಬಹುದು. ನಾವು ಈ ಫ್ಲಾಗ್ ಹಿಡಿಯಬಹುದು. ಆದರೆ ದೇಶವೇ ನಾಶವಾದರೆ ನಿಮ್ಮ ಪಕ್ಷ ಎಲ್ಲಿ ಉಳಿಯುತ್ತದೆ. ನೀವು ಎಲ್ಲಿ ಉಳಿಯುತ್ತೀರಿ. ಈ ದೃಷ್ಟಿಯಿಂದ ನಾನು ಒಂದು ಮಾತನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಈ ಕೃತ್ಯವನ್ನು ತಡೆಯಲಿಕ್ಕೆ ಕೇಂದ್ರಸರ್ಕಾರ ಏತಕ್ಕೆ ಪ್ರಯತ್ನ ಮಾಡಲಿಲ್ಲ? ಮೂಢನಂಬಿಕೆಯ ಮತಾಂಧರಿಂದ ನಡೆದಂತಹ ಕೃತ್ಯವನ್ನು ತಡೆಯುವುದರಲ್ಲಿ ಉತ್ತರ ಪ್ರದೇಶದ ಸರ್ಕಾರ ವಿಫಲವಾಗಿದೆ. ಆ ಸರ್ಕಾರವನ್ನು ನೀವು ವಜಾ ಮಾಡಿದ್ದೀರಿ. ಆಗ ಕೇಂದ್ರ ಸರ್ಕಾರ ಏನು ಮಾಡುತ್ತಿತ್ತು? ಮನುಕುಲಕ್ಕೆ ಮಸಿ ಬಳಿಯುವಂತಹ ಈ ಕೃತ್ಯ ನಡೆಯುವಂತಹ ಸಂದರ್ಭದಲ್ಲಿ ಕೇಂದ್ರಸರ್ಕಾರಕ್ಕೆ ಅದನ್ನು ತಡೆಯಲು ಕಾನೂನಿನ ಅವಕಾಶ ಇರಲಿಲ್ಲ. ಕಾನೂನಿನ ಅಡ್ಡಿ ಇತ್ತು ಎನ್ನುವಂತಹ ವಾದವನ್ನು ಒಪ್ಪಲಿಕ್ಕೆ ನಾನು ಸಿದ್ಧನಿಲ್ಲ. ಸಂವಿಧಾನದ ವಿಧಿ 355 :

"It shall be the duty of the Union to protect every State against the external aggression and internal disturbances and to ensure that the Government of every State is arried on in accordance with the provisions of this Constitution"

ಸಂವಿಧಾನದ ವಿಧಿ 355ಯಲ್ಲಿ ಸ್ಪಷ್ಟವಾಗಿ ನಿರ್ದಿಷ್ಟವಾಗಿ there is a specific provision in the Constitution to prevent the internal disturbances. I would like to know from the legal experts or anybody, any person who wants to say that there is a legal bar to prevent this offence, to prevent this destruction. ಆದುದರಿಂದ, ಕಾನೂನಿನ ಅಡ್ಡಿ ಇತ್ತು ಎನ್ನುವ ವಾದವನ್ನು ನಾನು ನಂಬುವುದಕ್ಕೆ ಸಾಧ್ಯವಿಲ್ಲ. ಮತ್ತೆ ಏಕೆ ಕೇಂದ್ರ ಸರ್ಕಾರ ಈ ಕೆಲಸ ಮಾಡಲಿಲ್ಲ? ಏಕೆ ಮೋಸ ಹೋಯಿತು? It looks childish, ಉತ್ತರ ಪ್ರದೇಶದ ಸರ್ಕಾರ, ಭಾರತೀಯ ಜನತಾ ಪಕ್ಷದ ಮಹಾ ನಾಯಕರುಗಳು ಕೇಂದ್ರ ಸರ್ಕಾರಕ್ಕೆ ನಂಬಿಸಿ ದ್ರೋಹ ಮಾಡಿದರು. ''ನಾವು ಕರಸೇವೆಯನ್ನು ಮಾಡುವುದಿಲ್ಲವೆಂದು, we will perform it in the form of Bhajans ಎಂದು ಹೇಳಿ ನಮಗೆ ದ್ರೋಹ ಮಾಡಿದ್ದಾರೆ. They have committed a breach of trust, breach of confidence. ಒಂದು ರಾಷ್ಟ್ರದ 70-80 ಕೋಟಿ ಜನರ ಜೀವ, ಆಸ್ತಿ

ಮಾನ-ಮರ್ಯಾದೆ ಇವುಗಳೆಲ್ಲವನ್ನೂ ಕಾಪಾಡಬೇಕಾಗಿರತಕ್ಕಂಥ ಈ ರಾಷ್ಟ್ರದಲ್ಲಿ, ಆಡಳಿತ ನಡೆಸುತ್ತಿರತಕ್ಕಂಥ ಸರ್ಕಾರ ಜವಾಬ್ದಾರಿಯಿಂದ ವರ್ತಿಸಲಿಲ್ಲ. ಈ ವಿಷಯದಲ್ಲಿ ಭಾರತೀಯ ಜನತಾ ಪಕ್ಷದವರು ಏನೋ ಮೋಸ ಮಾಡಿದ್ದಾರೆ ಎಂಬುದು ನನ್ನ ಭಾವನೆ. to the extent they are honest that they have said it in their manifesto ಅವರ ಚುನಾವಣಾ ಪ್ರಣಾಳಿಕೆಯಲ್ಲಿ ಅಲ್ಲಿರುವ ಮಸೀದಿಯನ್ನು ಒಡೆದು ರಾಮಮಂದಿರವನ್ನು ಕಟ್ಟುತ್ತೇವೆಂದು ಜನರಿಗೆ ವಾಗ್ದಾನವನ್ನು ಕೊಟ್ಟಿದ್ದಾರೆ. ಅಷ್ಟೇ ಅಲ್ಲ, ಡಿಸೆಂಬರ್ 2ನೇ ತಾರೀಖು ಅಡ್ವಾಣಿಯವರು "We will perform this kar-seva with bricks and shovels" ಇದನ್ನು ಬಹಿರಂಗವಾಗಿ ಡಿಕ್ಲೇರ್ ಮಾಡಿದ್ದಾರೆ. ಈ ಮಸೀದಿಯ ಕಟ್ಟಡವನ್ನು ಕೆಡವುದಕ್ಕೆ ಎಂತಹ ನೈಪುಣ್ಯತೆ ಬೇಕು, ಎಂತಹ ಆಯುಧಗಳು ಬೇಕು ಎನ್ನುವುದರ ಬಗ್ಗೆಯೂ ಸಾಕಷ್ಟು ತರಬೇತಿ ಗುಜರಾತ್‌ನಲ್ಲಿ ಕೊಟ್ಟಿದ್ದಾರೆ. ಅವರ ಚುನಾವಣಾ ಪ್ರಣಾಳಿಕೆಯಲ್ಲಿ ಇವೆಲ್ಲವನ್ನೂ ಮಾಡುತ್ತೇವೆಂದು ಹೇಳಿದ್ದಾರೆ. ಪಕ್ಷದ ಕಾರ್ಯಕರ್ತರುಗಳಿಗೆಲ್ಲಾ ತರಬೇತಿ ಕೊಡಿಸಿದ್ದಾರೆ. ಅದೇ ರೀತಿ ಅವರ ಪಕ್ಷದ ಎಲ್ಲಾ ನಾಯಕರುಗಳೂ ಸಹ ನಾವು ಇದನ್ನು ಮಾಡಿಯೇ ಮಾಡುತ್ತೇವೆಂದು ಡಿಕ್ಲೇರ್ ಮಾಡಿದ್ದಾರೆ. ಇಷ್ಟೆಲ್ಲಾ ಆದರೂ ಕೂಡ ಇದನ್ನು ಗಮನದಲ್ಲಿಟ್ಟುಕೊಂಡು ಆ ಒಂದು ಕಟ್ಟಡವನ್ನು ಸಂರಕ್ಷಣೆ ಮಾಡುವಂಥ ವ್ಯವಸ್ಥೆಯನ್ನು ಕೇಂದ್ರ ಸರ್ಕಾರ ಮಾಡಲಿಲ್ಲವೆಂದರೆ ನಾವು ಮೋಸ ಹೋಗಿದ್ದೇವೆ ಎಂದೇ ಅರ್ಥ.

They are putting the fear complex in the minds of the minority. ಭಾರತೀಯ ಜನತಾಪಕ್ಷದ ನಾಯಕರುಗಳು ಕಾಶ್ಮೀರಕ್ಕೆ ಬಾವುಟವನ್ನು ಹಾರಿಸಲು ಹೋದರೆ, ಅವರಿಗೆ ಕೇಂದ್ರಸರ್ಕಾರ ಸರ್ಕಾರದ ಖರ್ಚಿನಲ್ಲಿ ವಿಮಾನದಲ್ಲಿ ಸುರಕ್ಷಿತವಾಗಿ ಕರೆದುಕೊಂಡು ಹೋಗಿ ಬಾವುಟವನ್ನು ಹಾರಿಸಿ ಮತ್ತೆ ವಾಪಸ್ ಕರೆದುಕೊಂಡು ಬಿಡುತ್ತದೆ ಏಕೆ? Why? Can they extend the same facility to all? What does it mean? ಗಲಭೆಯಾದಂಥ ಸಂದರ್ಭದಲ್ಲಿ ಕರ್ನಾಟಕದಲ್ಲಿ 78 ಜನರು ಪ್ರಾಣವನ್ನು ನೀಗಿದ್ದಾರೆ. ಆದರೆ, ಚರಿತ್ರೆಯನ್ನು ಕೆಡಿಸಬೇಕಾದಂಥ ಅಕೃತ್ಯವು ನಡೆಯುವ ಸಂದರ್ಭದಲ್ಲಿ, ಮನುಜ ಕುಲಕ್ಕೆ ಮಸಿಯನ್ನು ಬಳಿಯುವ ಸಂದರ್ಭದಲ್ಲಿ, ಈ ಒಂದು ಅಪರಾಧ ನಡೆಯುವ ಸಂದರ್ಭದಲ್ಲಿ ಗಾಳಿಯಲ್ಲಿ ಒಂದು ಗುಂಡೂ ಸಹ ಹಾರಿಸಲಿಲ್ಲ. ಅಲ್ಲಿ ಜನಕ್ಕೆ ಗುಂಡನ್ನು ಹಾರಿಸುವುದು ಬೇಡ, ಕರಸೇವಕರನ್ನು ಕೊಲ್ಲುವ ಅವಶ್ಯಕತೆ ಇರಲಿಲ್ಲ. ಮತೀಯ ಭಾವನೆಯು ಮತ್ತೇರಿದ ಆ ಜನಸಂದಣಿಯ ಮೇಲೆ ಗುಂಡನ್ನು ಹಾರಿಸತಕ್ಕ ಅವಶ್ಯಕತೆ ಇರಲಿಲ್ಲ. ಆದರೆ ಗಾಳಿಯಲ್ಲಿ ಒಂದೇ ಒಂದು ಗುಂಡನ್ನು ಹಾರಿಸಲಿಲ್ಲ. what does it mean? ಅದು ಅಲ್ಲಿಗೇ ನಿಲ್ಲಲಿಲ್ಲ. ಅಲ್ಲಿ 2 ಸಾವಿರ ಜನ ಸೈನಿಕರಿದ್ದರಂತೆ. ಕರಸೇವಕರು ಅವರನ್ನೆಲ್ಲಾ ತಳ್ಳಿಕೊಂಡು, ನೂಕಿಕೊಂಡು ಹೋದರಂತೆ; ಇದನ್ನು ನಂಬಬಹುದೆ? Can we believe this? ಈ ಎರಡು ಸಾವಿರ ಜನ ಸೈನಿಕರು ಬರದಂತೆ ಕರಸೇವಕರು

ರಸ್ತೆಯಲ್ಲಿಯೇ ಅಡ್ಡಹಾಕಿದರಂತೆ, ಅವರೇನು ಹೋಮ್ ಗಾರ್ಡ್‌ಗಳೇ, ಎನ್.ಸಿ.ಸಿ.ಯವರೆ, ಎರಡು ಸಾವಿರ ಜನ ಸೈನಿಕರನ್ನು ಆ ಸ್ಥಳಕ್ಕೆ ಬರದಂತೆ ಕರಸೇವಕರು ತಡೆಯೊಡ್ಡಿದರೆಂದರೆ ಅದನ್ನು ನಂಬುವುದಕ್ಕೆ ಸಾಧ್ಯವೆ? ಆ ಘಟನೆಯನ್ನು ತಡೆಯಲು ಪ್ರಾಮಾಣಿಕವಾದ ಆಸೆ ಇದ್ದರೆ, ಹಂಬಲ ಇದ್ದರೆ ಕೊನೆಯ ಪಕ್ಷ ಗಾಳಿಯಲ್ಲಿ ಒಂದು ಗುಂಡನ್ನು ಹಾರಿಸಬಹುದಾಗಿತ್ತು. ಅಷ್ಟೇ ಅಲ್ಲ, ಇಲ್ಲಿ ಏನು ಪಿತೂರಿ ಇದೆಯೋ ಅಥವಾ ಯಾವ ಒಂದು ಸಂಚು ಇದೆಯೋ ನನಗೆ ಗೊತ್ತಿಲ್ಲ.

ಆದರೆ, ಅಲ್ಲಿ ಕರಸೇವಕರು ಮಸೀದಿಯನ್ನು ನಾಶ ಮಾಡುತ್ತಿದ್ದರೆ ಇಲ್ಲಿ ಪೊಲೀಸ್ ಅಧಿಕಾರಿಯೊಬ್ಬರು ತಮ್ಮ ಕಾಲಿನ ಶು ಅನ್ನು ಬಿಚ್ಚಿ ಆ ಪ್ರತಿಮೆಗೆ ನಮಸ್ಕಾರ ಮಾಡುತ್ತಿದ್ದಂಥ ಚಿತ್ರವನ್ನು ವೃತ್ತಪತ್ರಿಕೆಗಳಲ್ಲಿ ನೋಡಿದ್ದೇವೆ. When such a heinous crime is being committed, the Police Officer was saluting the stone God? Can I believe that this Government has got the honest approach to stop this destruction? ಅದಕ್ಕಾಗಿ ನಾನು ಹೇಳುತ್ತಿದ್ದೇನೆ, ಈ ಎಲ್ಲಾ ನಡವಳಿಕೆಗಳನ್ನು ನೋಡಿದಾಗ, Intelligence Bureau ದವರು ಏನು ಹೇಳಿದ್ದಾರೆ. ಇದೆಲ್ಲದಕ್ಕಿಂತ ಪ್ರಮುಖವಾದುದೆಂದರೆ ಭಾರತೀಯ ಜನತಾಪಕ್ಷದ ವತಿಯಿಂದ ರಚನೆಯಾಗಿರತಕ್ಕ ಉತ್ತರ ಪ್ರದೇಶದ ಸರ್ಕಾರವು ಇಂಥ ಅಕೃತ್ಯಗಳು ನಡೆಯುವಾಗ ಅದನ್ನು ತಡೆಯಲು ಪ್ರಯತ್ನ ಮಾಡಿತ್ತೇ ಅಥವಾ ಇಲ್ಲವೇ ಎನ್ನುವ ಅನುಮಾನ ಇದ್ದೇ ಇದೆ. There was a suspicion as to whether the State Government intend to stop this destruction.

ಆದರೆ ಉತ್ತರ ಪ್ರದೇಶದ ಸರ್ಕಾರ ನಂಬಿಕೆ ದ್ರೋಹ ಮಾಡುವುದಿಲ್ಲ ಎನ್ನತಕ್ಕ ನಂಬಿಕೆಯನ್ನು ಇಟ್ಟುಕೊಂಡಿದ್ದು ಬಹಳ ದೊಡ್ಡ ಘೋರ ಅಪರಾಧ. ಈ ವಿಫಲತೆಯಿಂದ ಇಡೀ ವಿಶ್ವದ ನಾಗರೀಕ ಸಮಾಜವೇ ತಲೆತಗ್ಗಿಸುವಂತಾಗಿದೆ. ಧರ್ಮಕ್ಕೆ ಮಾಡಿದಂಥ ಅಪಚಾರ, ಸಂವಿಧಾನಕ್ಕೆ, ಕಾನೂನಿಗೆ, ಎಲ್ಲಕ್ಕಿಂತ ಹೆಚ್ಚಾಗಿ ಈ ಮನುಕುಲಕ್ಕೇ ಮಾಡಿದಂಥ ಅಪಚಾರ. ಆದುದರಿಂದ ಈ ರಾಷ್ಟ್ರದ ಜನತೆಯಲ್ಲಿ ನನ್ನ ಪ್ರಾರ್ಥನೆಯಾದರೂ ಇಷ್ಟೆ. ಮತೀಯ ಭಾವನೆಗಳನ್ನು ಕೆರಳಿಸುವಂಥ ಅಥವಾ ಕೆರಳಿಸುವುದಕ್ಕೆ ಅವಕಾಶವನ್ನು ಮಾಡಿಕೊಡುವಂಥ, ಕುಮ್ಮಕ್ಕು ಕೊಡುವಂಥ, ಸಂಚು ಮಾಡುವಂಥ ಅಥವಾ ಇದರ ಜೊತೆಗೆ ಶಾಮೀಲಾಗಿರುವಂಥ ಯಾವುದೇ ಶಕ್ತಿ, ಯಾವುದೇ ಸಂಸ್ಥೆ, ಯಾವುದೇ ಸರ್ಕಾರವನ್ನು ಕಾನೂನು ಚೌಕಟ್ಟಿನಲ್ಲಿ ನೇಣು ಹಾಕುವ ಪತ್ರಯತ್ನಗಳು ಪ್ರಯೋಜನವಿಲ್ಲ. ಅಂಥ ಪಕ್ಷಗಳನ್ನು, ಅಂಥ ಶಕ್ತಿಗಳನ್ನು, ಅಂಥ ವ್ಯಕ್ತಿಗಳನ್ನು ಇಂಥ ನಂಬಿಕೆ ಉಳ್ಳವರನ್ನು ಬ್ಯಾಲೆಟ್ಸ್ ಮುಖಾಂತರ ಕೊಲ್ಲಬೇಕು. ಅಲ್ಲದಿದ್ದರೆ ಏನೂ ಪ್ರಯೋಜನ ವಾಗುವುದಿಲ್ಲ. ಯಾರೋ ಒಬ್ಬರು ರಾಜೀನಾಮೆ ಕೊಟ್ಟರೆ, ಅಥವಾ ಮಾನ್ಯ ಅಡ್ವಾನಿಯವರು ರಾಜೀನಾಮೆ ಕೊಟ್ಟರೆ, ಕಲ್ಯಾಣ್ ಸಿಂಗ್‌ರು ರಾಜೀನಾಮೆ ಕೊಟ್ಟರೆ ಅದರಿಂದ ಏನೂ ಪ್ರಯೋಜನವಾಗುವುದಿಲ್ಲ. ಯಾರು ಇಂಥ ಅವಿವೇಕದ ನಡವಳಿಕೆಗಳನ್ನು ನಡೆಸುತ್ತಾರೆ,

ಅಪಚಾರಗಳನ್ನು ನಡೆಸುತ್ತಾರೆ ಅಂಥವರನ್ನು ಚುನಾವಣೆಗಳಲ್ಲಿ ಸೋಲಿಸುವುದರ ಮುಖಾಂತರ ಅವರಿಗೆ ಬುದ್ಧಿ ಕಲಿಸಬೇಕು.

ಎಲ್ಲಕ್ಕಿಂತ ಮಿಗಿಲಾಗಿ ಸರ್ಕಾರಿ ಪಕ್ಷಗಳ ಜೊತೆಗೆ ನಮ್ಮ ಜನರ ಜವಾಬ್ದಾರಿ ಕೂಡ ಇದೆ. ಯಾವ ಉದ್ದೇಶಕ್ಕಾಗಿ ಹಿಂದೂ ರಾಷ್ಟ್ರದ ಪರಿಕಲ್ಪನೆಯುಳ್ಳ ಜನರು ಈ ಅಕೃತ್ಯವನ್ನು ನಡೆಸಿದರೋ ಆ ಉದ್ದೇಶವನ್ನು ವಿಫಲಗೊಳಿಸಬೇಕು. They should be killed by bullets. Their purpose should be killed, their object should be killed by what not by bullets but by ballots... ಅದನ್ನು ಮಾಡದಿದ್ದರೆ ಈ ರಾಷ್ಟ್ರದಲ್ಲಿ ಮತೀಯ ಗಲಭೆಗಳನ್ನು ನಿಲ್ಲಿಸುವುದಕ್ಕೆ ನಮ್ಮ ಕೈಯಲ್ಲಿ ಸಾಧ್ಯವಾಗುವುದಿಲ್ಲ. ಮತೀಯ ಭಾವನೆಗಳನ್ನು ಕೆರಳಿಸುವುದನ್ನು ತಡೆಯಲಿಕ್ಕೆ ಸಾಧ್ಯವಾಗುವುದು, The only way is to defeat their object by defeating them in the elections.

ನನ್ನ ಸ್ನೇಹಿತರು ನಿನ್ನೆ ಹೇಳುತ್ತಿದ್ದರು. 10 ವರ್ಷಗಳ ಹಿಂದೆ ಇಬ್ಬರು ಕುಳಿತುಕೊಂಡಿದ್ದರು. ಅಲ್ಲಿ ಹೊರುವುದಕ್ಕೆ 4 ಜನ ಇಲ್ಲವೆಂದು ಹೇಳುತ್ತಿದ್ದರು. ಅವತ್ತು ಹಾಸ್ಯ ಮಾಡುತ್ತಿದ್ದರು. ಇವತ್ತು ನಾವು 107 ಜನ ಇದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ನಾನು ಹೇಳುತ್ತಿದ್ದೇನೆ. 1987ರಲ್ಲಿ 18 ಜನ ಗೆದ್ದು ಬಂದಿದ್ದರು So it is a logic. They use to demand flush everyday... ಈ 18 ಜನ ಗೆದ್ದು ಬಂದಿದ್ದು ಹೆಗಡೆಯವರು ಸರ್ಕಾರ ರಚಿಸಿದಾಗ, ಹೀಗೆ ಮಾಡಬೇಕು, ಇದೇ ಮಾಡಬೇಕೆಂದು ಹೇಳುತ್ತಿದ್ದರು. ಅದೇ ಇವತ್ತು ಎಷ್ಟು ಜನ ಗೆದ್ದು ಬಂದಿದ್ದಾರೆ? ಚುನಾವಣೆಗಳನ್ನು ಗೆಲ್ಲುವುದಕ್ಕೆ, ಮನುಕುಲಕ್ಕೆ ಬೆಂಕಿ ಹಚ್ಚುವುದಷ್ಟೇ ಇದರ ಉದ್ದೇಶವೆಂದು ಯಾರಾದರೂ ತಿಳಿದಿದ್ದರೆ ಅದು ತಪ್ಪು ಎಂದು ನನ್ನ ಸ್ನೇಹಿತರಿಗೆ ಈ ಸದನದ ಮುಖಾಂತರ ಪ್ರಾರ್ಥನೆ ಮಾಡಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ.

ಇದೆಲ್ಲಾ ಆದ ಮೇಲೆ ಈ ಸಮಸ್ಯೆಗೆ ಪರಿಹಾರವಾಗಿ ಈಗಾಗಲೇ ನಮ್ಮ ಪ್ರಧಾನಮಂತ್ರಿಯವರು ಅಲ್ಲಿ ಮಸೀದಿಯನ್ನು ಕಟ್ಟಿಸುತ್ತೇವೆ ಎಂದು ಹೇಳಿಕೆ ಕೊಟ್ಟಿದ್ದಾರೆ. ಅದು ಅಷ್ಟಕ್ಕೇ ನಿಲ್ಲುವುದಿಲ್ಲ. ಈ ರಾಷ್ಟ್ರದಲ್ಲಿ ಎಷ್ಟು ಮಸೀದಿಗಳು ನಷ್ಟವಾಗಿದೆ ಅಷ್ಟೂ ಮಸೀದಿಗಳನ್ನು ನನ್ನ ಅಭಿಪ್ರಾಯದಲ್ಲಿ ಕಟ್ಟಬೇಕಾಗುತ್ತದೆ. ಇದರ ಬದಲು ಸಮಾಜದಲ್ಲಿರತಕ್ಕ ಜನರಿಗೆ ಅನ್ನ-ಬಟ್ಟೆ ಇಲ್ಲದಿರುವಾಗ, ಈ ದೇಶದ ಕೆರೆಯಲ್ಲಿರುವ ನೀರನ್ನು ಕಾಲುವೆ ಮಾಡಿಕೊಂಡು ಜಮೀನಿಗೆ ಬಿಟ್ಟುಕೊಳ್ಳಲಿಕ್ಕೂ ಹಣವಿಲ್ಲವೆಂದು ಹೇಳುವಂತಹ ಸಂದರ್ಭದಲ್ಲಿ, ಮಂದಿರ-ಮಸೀದಿಗಳನ್ನು ಕಟ್ಟಿಸಲಿಕ್ಕೆ ಹಣ ವೆಚ್ಚ ಮಾಡಬೇಡಿ. You destroy the whole thing... ಅದನ್ನು ಸಂಪೂರ್ಣವಾಗಿ ಹೊಡೆದು ಹಾಕಿ ವನ ಮಾಡಿ. ಇಲ್ಲವೇ ಕಾಡು ಮಾಡಿ. ಗಿಡ-ಮರಗಳಿಂದ ಒಳ್ಳೆ ಗಾಳಿ ಬಂದು ಜನರು ಉಸಿರಾಡುತ್ತಾರೆ. ಅದರ ಬದಲು ಕಲ್ಲಿನಿಂದ ಕಟ್ಟಿದಂತಹ ದೇವಸ್ಥಾನದಿಂದ ಯಾರಿಗೂ ಪುರುಷಾರ್ಥ ಸಿಗುವುದಿಲ್ಲ. Whether it is masjid or temple.

ಈ ಸದನದ ಮುಖಾಂತರ ಕೇಂದ್ರ ಸರಕಾರಕ್ಕೆ ವಿನಂತಿ ಮಾಡುತ್ತೇನೆ. ಅವರು ಒಂದು ಗಂಡು ನಿರ್ಧಾರವನ್ನು ತೆಗೆದುಕೊಳ್ಳಲಿ ಎಂದು. ಮಸೀದಿ- ಮಂದಿರ ಎರಡನ್ನೂ ನೆಲಸಮ ಮಾಡಿ ವನ ಮಾಡಿ ಅದಕ್ಕೆ ಬೇಕಾದರೆ ಒಂದು ಭಾಗಕ್ಕೆ ಮಸೀದಿ ಮತ್ತು ಮತ್ತೊಂದು ಭಾಗಕ್ಕೆ ದೇವಾಲಯವೆಂದು ಹೆಸರು ಇಡಿ. ಇದನ್ನು ಮಾಡುವುದರಿಂದ ಈ ಸಮಸ್ಯೆಗೆ ಪರಿಹಾರ ಸಾಧ್ಯವೇ ಹೊರತು, ಅಲ್ಲಿ ಮತ್ತೊಂದು ಮಸೀದಿಯನ್ನು ಕಟ್ಟುವುದು ಇದಕ್ಕೆ ಪರಿಹಾರ ಮಾರ್ಗ ಅಲ್ಲ. ಈ ರಾಷ್ಟ್ರದ ಅಲ್ಪಸಂಖ್ಯಾತ ಮುಸಲ್ಮಾನರಿಗೆ ಬೇಕಾಗಿರುವುದು ಈ ಜೀವ ಇಲ್ಲದ ಕಟ್ಟಡ ಅಲ್ಲ ಅವರಿಗೆ ಬೇಕಿರುವುದು ನೆಮ್ಮದಿಯ ಬದುಕು. Their life and property should be secured first. ಈ ರಾಷ್ಟ್ರದಲ್ಲಿ ಅವರ ಮಕ್ಕಳು ನೆಮ್ಮದಿಯಿಂದ ಬದುಕಬೇಕು, ಮರ್ಯಾದೆಯಿಂದ ಬದುಕಬೇಕು. They want that nothing more ..

ಆದ್ದರಿಂದ ಅಲ್ಪಸಂಖ್ಯಾತರಿಗೆ ಮಸೀದಿಯನ್ನು ಕಟ್ಟಿಸಿ ನಮಾಜು ಮಾಡಿಸಿ ಗೆಲ್ಲುವುದಾದರೆ ಹಾಕಿಸಿ. ಆದರೆ ಈ ರಾಷ್ಟ್ರದಲ್ಲಿ ಆಡಳಿತ ಮಾಡುವವರಿಗೆ ನಾನು ಪ್ರಾರ್ಥನೆ ಮಾಡುತ್ತೇನೆ. ಈ ರಾಷ್ಟ್ರದಲ್ಲಿ ಬದುಕಿರುವ ಅಲ್ಪಸಂಖ್ಯಾತರಿಗೆ ನೆಮ್ಮದಿಯಿಂದ ಬದುಕಲಿಕ್ಕೆ ವ್ಯವಸ್ಥೆ ಮಾಡಿಕೊಡಿ ಎಂದು. ನಿನ್ನೆ ಮಾತನಾಡುವಾಗ ಒಂದು ಲಘುವಾದ ಸಂಭಾಷಣೆ ನನ್ನ ಗಮನಕ್ಕೆ ಬಂತು. ಬಿ.ಜೆ.ಪಿ. ನಾಯಕರನ್ನು ಮಾನ್ಯ ಮುಖ್ಯಮಂತ್ರಿಗಳು ನಂಬಿಕೊಳ್ಳಬೇಕು. ನಿಮ್ಮ ಬಗ್ಗೆ ಅಪಾರವಾದ ನಂಬಿಕೆ ವಿಶ್ವಾಸವಿದೆ ಎಂದು ಪ್ರಸ್ತಾಪವಾಯಿತು. ಇಂತಹ ಮತಾಂಧತೆಯಲ್ಲಿ ನಂಬಿಕೆ ಉಳ್ಳಂತಹ ಜನರನ್ನು ನೀವೇನಾದರೂ ನಂಬಿದರೆ, ನರಸಿಂಹ ರಾಯರು ಹೇಗೆ ನಂಬಿ ಕೆಟ್ಟರೋ, ನೀವೂ ಹಾಗೇ ನಂಬಿ ಕೆಡುತ್ತೀರಿ. ಅದು 26ನೇಯ ತಾರೀಖು ಹುಬ್ಬಳ್ಳಿಯಲ್ಲಿ ಬಾವುಟ ಹಾರಿಸುವುದು ಇರಬಹುದು, 29ನೆಯ ತಾರೀಖು ಇನ್ನೊಂದು ಕಡೆ ಕವಾಯತು ಮಾಡುವುದು ಇರಬಹುದು. ಅದೇನೇ ಇರಲಿ, ಅವರು ಹೇಗೆ ನಂಬಿ ಕೆಟ್ಟರು, ಹಾಗೆ ನೀವು ಕೂಡ ನಂಬಿ ಕೆಡುವಂಥ ತಪ್ಪನ್ನು ಮಾಡಬೇಡಿ ಎಂದು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಸನ್ಮಾನ್ಯ ಅಧ್ಯಕ್ಷರೇ, ನಡೆದಂಥ ಘಟನೆಯಿಂದ ಯಾರಿಗೆ ಎಷ್ಟು ಲಾಭವಾಗಿದೆಯೋ ನನಗಂತೂ ಗೊತ್ತಿಲ್ಲ. ಅಲ್ಲಿನ ಮಸೀದಿಯನ್ನು ನಾಶ ಮಾಡಿದ್ದರಿಂದ, ಅಲ್ಲಿ ಒಂದು ಶ್ರೀರಾಮನ ವಿಗ್ರಹವನ್ನು ಇಟ್ಟಿದ್ದರಿಂದ ಯಾರಿಗೆ ಎಷ್ಟು ಲಾಭವಾಗಿದೆಯೋ ಗೊತ್ತಿಲ್ಲ. ಆದರೆ ರಾಷ್ಟ್ರಕ್ಕೆ ತನ್ನ ಜಾತ್ಯಾತೀತತೆಯ ಗುಣವನ್ನು ಕಳೆದುಕೊಳ್ಳುತ್ತಿರುವುದರಿಂದ ಅಪಾರ ನಷ್ಟವಾಗಿದೆ. ಇಡೀ ವಿಶ್ವದ ಜನ ಭಾರತ ದೇಶವನ್ನು ಅನುಮಾನ ದೃಷ್ಟಿಯಿಂದ ನೋಡುವಂಥ ಒಂದು ಸಂದರ್ಭ ಸೃಷ್ಟಿಯಾಗಿದೆ. ಎಲ್ಲದಕ್ಕಿಂತಲೂ ಹೆಚ್ಚಿಗೆ, ಅಲ್ಪಸಂಖ್ಯಾತರು ತಮಗೆ ನೆಮ್ಮದಿ ಇಲ್ಲವೇನೋ ಈ ದೇಶದಲ್ಲಿ ಬದುಕಲಿಕ್ಕೆ ಎನ್ನುವಂಥ ಭಯ ಸೃಷ್ಟಿಯಾಗಿದೆ. ನೀವು ಯಾರನ್ನು ಕೊಂದಿರಿ? ನಿಮಗೆ ಅನ್ಯಾಯ ಮಾಡಿದವರನ್ನು ನೀವು ಕೊಂದಿರೇನು? ಬಾಬರಿ ಮಸೀದಿಯನ್ನು ಒಡೆಯುವುದಕ್ಕೆ ಹೋಗಿದ್ದಂಥ ಯಾವ ಕರಸೇವಕನನ್ನು ಕೊಲ್ಲಲಿಲ್ಲ. ಅಲ್ಲಿ ಶ್ರೀರಾಮನ ದೇವಸ್ಥಾನವಿದೆ ಎಂದು

ವಾದ ಮಾಡುವಂಥ ಯಾವುದೇ ಅಲ್ಪಸಂಖ್ಯಾತರನ್ನು ಕೊಲೆ ಮಾಡಲಿಲ್ಲ. ತರಕಾರಿ ಅಂಗಡಿಗೆ ಹೋದಂಥ ಹೆಣ್ಣುಮಗಳು, ತನ್ನ ವಯಸ್ಕ ಮಗಳನ್ನು ಕರೆದುಕೊಂಡು ಹೋಗುತ್ತಿದ್ದಂಥ ಹಿರಿಯ, ಸಕಲೇಶಪುರದಿಂದ ಹಣ್ಣು ವ್ಯಾಪಾರ ಮಾಡುತ್ತಿದ್ದಂಥ ಒಬ್ಬ ಅಮಾಯಕ. ಇಂಥವರು ಬಲಿಯಾದರು. ಇದರಿಂದ ಯಾರಿಗೆ ಪ್ರಯೋಜನವಾಯಿತು? ಕೊಂದವರಿಗೇನಾದರೂ ಪ್ರಯೋಜನವಾಯಿತೆ? ಈ ಮತಾಂಧರಿಗೂ, ಸತ್ತವರಿಗೂ ಏನೂ ಸಂಬಂಧವಿಲ್ಲ. ಏತಕ್ಕೆಂದರೆ ಕೊಂದವರು ಯಾರೋ ಅಯೋಗ್ಯರು. ಊರಲ್ಲಿದ್ದ ಏನೂ ಕಾಣದಂಥ ಬಡಪಾಯಿಗಳು ನೂರಾರು ಜನ ಇವತ್ತು ಜೈಲಿನಲ್ಲಿ ಕೊಳೆಯುತ್ತಿದ್ದಾರೆ. ಹಬ್ಬಿದ ದಳ್ಳುರಿಯಲ್ಲಿ ಸತ್ತವರೆಷ್ಟೋ, ಬದುಕಿದ್ದು ಜೈಲಿನಲ್ಲಿ ಎಷ್ಟೋ ಜನರು ಸಾಯುತ್ತಿದ್ದಾರೆ. ಆದ್ದರಿಂದ ನನ್ನ ಪ್ರಾರ್ಥನೆ ಇಷ್ಟೇ. ಕಾನೂನಿನಿಂದ, ಸಂವಿಧಾನದಿಂದ ಇಂಥ ಕೃತ್ಯಗಳನ್ನು ತಡೆಯಲಿಕ್ಕೆ ಸಾಧ್ಯವಿಲ್ಲ. ಇಂಥ ನಂಬಿಕೆಗಳನ್ನು ನಾಶ ಮಾಡಲಿಕ್ಕೆ ಸಾಧ್ಯವಿಲ್ಲ. ನಾನು ಈಗಾಗಲೇ ಹೇಳಿದಂತೆ, ಇರುವಂಥ ಒಂದೇ ಒಂದು ಮಾರ್ಗ. ಈ ರಾಷ್ಟ್ರದ ಜನ, ಇಂಥ ಪ್ರವೃತ್ತಿ ಉಳ್ಳವರು ಪ್ರಬುದ್ಧಮಾನಕ್ಕೆ ಬರದಂಥ ರೀತಿಯಲ್ಲಿ ತಡೆಯತಕ್ಕ ಪ್ರಯತ್ನ ಮಾಡಬೇಕೆಂದು ಈ ಸದನದ ಮುಖಾಂತರ ಪ್ರಾರ್ಥನೆ ಮಾಡಿಕೊಂಡು, ನನಗೆ ಇಷ್ಟು ಮಾತನಾಡಲಿಕ್ಕೆ ಅವಕಾಶ ಮಾಡಿಕೊಟ್ಟಂಥ ತಮಗೆ ವಂದಿಸಿ, ನನ್ನ ಮಾತುಗಳನ್ನು ಮುಗಿಸುತ್ತೇನೆ.

O

**(31-12-1992)**

## ಕೃಷಿ ಉತ್ಪನ್ನಗಳ ಬೆಲೆ ಕುಸಿತದ ಬಗ್ಗೆ

ಮಾನ್ಯ ಉಪಾಧ್ಯಕ್ಷರೆ, ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕುಸಿದಿರುವುದರ ಬಗ್ಗೆ ಪರಿಹಾರವನ್ನು ಕಂಡುಕೊಳ್ಳುವುದುಕ್ಕೆ ನಮ್ಮ ವಿರೋಧಪಕ್ಷದ ನಾಯಕರು ಈ ವಿಚಾರವನ್ನು ಚರ್ಚೆಗೆ ತಂದು ಅತ್ಯಂತ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ಈ ವಿಚಾರದಲ್ಲಿ ಸಾಕಷ್ಟು ಚರ್ಚೆ ಈ ಹಿಂದೆ ಆಗಿದೆ. ಇತ್ತೀಚೆಗೆ ಕೃಷಿ ಉತ್ಪನ್ನಗಳ ಬೆಲೆ ಕುಸಿತಕ್ಕೆ ಕಾರಣಗಳನ್ನು, ಪರಿಹಾರವನ್ನು ಕಂಡುಹಿಡಿಯುವ ಪ್ರಯತ್ನ ನಡೆಯದೆಯೇ ಕೃಷಿ ಉದ್ಯಮಕ್ಕೆ ಹೊಂದಿಕೊಂಡಂತೆ ಇರುವ ಎಲ್ಲಾ ಮಜಲುಗಳನ್ನು ಜಾಲಿಸಿ ಆಡುವ ಪ್ರಯತ್ನ ಸದನದಲ್ಲಿ ನಡೆದಿದೆ. ಇದು ತಪ್ಪೇನಲ್ಲ. ನನ್ನ ಮಟ್ಟಿಗೆ ಕೃಷಿ ಉತ್ಪನ್ನಗಳ ಉತ್ಪತ್ತಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಹೊರತುಪಡಿಸಿ, ಕೃಷಿ ಉತ್ಪನ್ನಗಳು ಉತ್ಪಾದನೆಯಾದ ಮೇಲೆ ಮಾರುಕಟ್ಟೆಯ ಸಮಸ್ಯೆಗಳು, ಅಥವಾ ಆಡಳಿತ ವ್ಯವಸ್ಥೆಯಿಂದಾಗಿ ಕೃಷಿ ಉತ್ಪನ್ನಗಳ ಬೆಲೆ ಏಕೆ ಕಡಿಮೆಯಾಗುತ್ತಿದೆ, ಅದಕ್ಕೆ ಏನು ಪರಿಹಾರವನ್ನು ಕಂಡುಕೊಳ್ಳಬಹುದು ಎಂಬ ಬಗ್ಗೆ ಮಾತ್ರ ನಾನು ವಿಷಯವನ್ನು ಪ್ರಸ್ತಾಪ ಮಾಡುವ ಪ್ರಯತ್ನ ಮಾಡುತ್ತೇನೆ.

ಈ ರೀತಿ ಬೆಲೆ ಕುಸಿತಕ್ಕೆ ನನ್ನ ಪ್ರಕಾರ ಮೊದಲನೆಯ ಕಾರಣ : ಸಮೃದ್ಧಿಯಾದ ಬೆಳೆ. ಇದಕ್ಕೆ ತಕ್ಷಣದ ಪರಿಹಾರ, ಸಮೃದ್ಧಿಯಾಗಿ ಬೆಳೆಯುವುದನ್ನು ನಿಲ್ಲಿಸುವುದೇ? ಏಕೆಂದರೆ ಯಾವುದೇ ವಸ್ತುವಿನ ಬೆಲೆ ಯಾವಾಗಲೂ ಪೂರೈಕೆ ಮತ್ತು ಬೇಡಿಕೆಯ ಮೇಲೆ ಅವಲಂಬಿಸಿರುತ್ತೆ. ಈಗ ನಮ್ಮಲ್ಲಿ ಸಮೃದ್ಧಿಯಾಗಿ ಮಳೆಯಾಗಿರುವುದರಿಂದ ಉತ್ಪತ್ತಿ ಜಾಸ್ತಿಯಾಗಿದೆ. ಐದುನೂರು ರೂಪಾಯಿ ಇದ್ದಂಥ ರಾಗಿ ಏಕಾಏಕಿ 300 ರೂಪಾಯಿಗಳಿಗೆ ಇಳಿದಿದೆಯೆಂದರೆ, ಇದರ ಬಗ್ಗೆ ನಾವು ಆರ್ಥಿಕ ತಜ್ಞರ ಹತ್ತಿರ ಹೋಗುವ ಅವಶ್ಯಕತೆ ಇಲ್ಲ. ಉತ್ಪತ್ತಿ ಜಾಸ್ತಿಯಾಗಿದೆ. ಆದ್ದರಿಂದ ಬೆಲೆ ಕಡಿಮೆಯಾಗಿದೆ. ಉತ್ಪತ್ತಿಯನ್ನೇ ಕಡಿಮೆ ಮಾಡುವುದು ಸರಿಯೇ? ಅದೂ ಆಗುವುದಿಲ್ಲ. ಏಕೆಂದರೆ ಈ ದೇಶದಲ್ಲಿ ಸಂಪತ್ತಿನ ಸೃಷ್ಟಿಯಾಗಿದೆ. ಕೃಷಿ ಉತ್ಪನ್ನಗಳ ಉತ್ಪತ್ತಿ ರಾಷ್ಟ್ರಕ್ಕೆ ಎಷ್ಟು ಬೇಕೋ ಅಷ್ಟು ಆಗಿದೆ. ಅದಕ್ಕಾಗಿ ರಾಷ್ಟ್ರದ ತಜ್ಞರನ್ನು, ಕೃಷಿ ವಿಜ್ಞಾನಿಗಳನ್ನು ನಾನು ಅಭಿನಂದಿಸುತ್ತೇನೆ. ಬೆಲೆಯನ್ನು ಜಾಸ್ತಿ ಮಾಡಲು ನಾವು ಮಾಡಬೇಕಾಗಿರುವ ಸಣ್ಣ ಕೆಲಸವೇನೆಂದರೆ ಉತ್ಪತ್ತಿಯನ್ನು ಕಡಿಮೆ ಮಾಡುವುದು. ಆದರೆ ಇದು ಸಾಧ್ಯವಿಲ್ಲ. ಏಕೆಂದರೆ ಆರ್ಥಿಕ ತಜ್ಞರಾದ ಶ್ರೀ ಎಸ್. ಶೇಷಾದ್ರಿಯವರ ಪ್ರಕಾರ ಈ ದೇಶದಲ್ಲಿ ಸಂಪತ್ತಿನ ಉತ್ಪತ್ತಿಯಾಗಿದೆ. ಆದರೆ ಅದರ ವಿತರಣೆ ಸಮವಾಗಿ ಆಗಿಲ್ಲ. ಪಂಜಾಬ್‌ನಲ್ಲಿ ಗೋಧಿಯನ್ನು ಯತೇಚ್ಛವಾಗಿ ಬೆಳೆದು, ತುಂಬಲು ಸಾಧ್ಯವಾಗದೆ ರಾಶಿ ರಾಶಿಯಾಗಿ ಬಿದ್ದಿದೆ. ಆದರೆ ಬೆಂಗಳೂರಿನ ಬಸ್ ಸ್ಟಾಂಡ್‌ನಲ್ಲಿ ತಿನ್ನಲು

ಅನ್ನವಿಲ್ಲದೆ ಮಲಗಿಕೊಂಡಿರುವವರು ನೂರಾರು ಜನರು ಇದ್ದಾರೆ. ಅದರ ಅರ್ಥವೇನೆಂದರೆ ನಮ್ಮಲ್ಲಿ ಉತ್ಪಾದನೆ ಜಾಸ್ತಿಯಾಗಿದ್ದರೂ ಕೊಂಡುಕೊಳ್ಳುವ ಶಕ್ತಿಯನ್ನು ಸಾಮಾನ್ಯ ವ್ಯಕ್ತಿಯಲ್ಲಿ ವೃದ್ಧಿಸುವಲ್ಲಿ ನಮ್ಮ ಆಡಳಿತ ವಿಫಲವಾಗಿದೆ. It is true there is an increase in the agricultural produce, but at the same time, the distribution of the increase is not evenly done.

ಉತ್ಪತ್ತಿ ಜಾಸ್ತಿಯಾಗಿರುವುದರಿಮದ ಬೆಲೆ ಕಡಿಮೆಯಾಗಿದೆ, ಬೆಲೆಯನ್ನು ಇಳಿಸ ಬೇಕು ಎನ್ನುವುದು ಬುದ್ಧಿವಂತಿಕೆಯ ಲಕ್ಷಣವಲ್ಲ. ಈ ಬೆಲೆ ಹೆಚ್ಚಳಕ್ಕೆ ಯಾರು ಕಾರಣ? ರಾಜ್ಯಸರ್ಕಾರ ಅಥವಾ ಕೇಂದ್ರ ಸರ್ಕಾರ ಕಾರಣವೇ ಎಂಬ ಬಗ್ಗೆ ಮುಗುಮ್ಮಾಗಿ ನಮ್ಮ ಸ್ನೇಹಿತರು ನೇರವಾಗಿ ಪ್ರಸ್ತಾಪ ಮಾಡದೆ ಹೇಳಿದ್ದಾರೆ. ಆದರೆ ನಾನು ವಿಷಯಕ್ಕೆ ನೇರವಾಗಿ ಬರಲು ಇಷ್ಟಪಡುತ್ತೇನೆ. ನಮ್ಮ ಹಳ್ಳಿಗಾಡಿನಲ್ಲಿ ಒಂದು ಕತೆ ಇದೆ. ಒಬ್ಬನಿಗೆ ಇಬ್ಬರು ಹೆಂಡತಿಯರು ಇದ್ದರು. ಅವರಲ್ಲಿ ಒಬ್ಬಳಿಗೆ ವಯಸ್ಸಾಗಿತ್ತು. ಮತ್ತೊಬ್ಬಳು ಬಹಳ ಚಿಕ್ಕ ವಯಸ್ಸಿನವಳು. ವಯಸ್ಸಾದವಳಿಗೆ ನನ್ನ ಗಂಡ ವಯಸ್ಸಾದವನಂತೆ ಕಾಣಬೇಕು ಎಂಬ ಆಸೆ, ಆದ್ದರಿಂದ ಅವಳು ಗಂಡನ ಕಪ್ಪು ಕೂದಲುಗಳನ್ನೆಲ್ಲ ಕಿತ್ತು ಹಾಕುತ್ತಿದ್ದಳು. ಹುಡುಗಿಯಾಗಿದ್ದವಳಿಗೆ ನನ್ನ ಗಂಡ ಹುಡುಗನಂತೆ ಕಾಣಬೇಕೆಂಬ ಆಸೆ. ಆದ್ದರಿಂದ ಅವಳು ಗಂಡನ ತಲೆಯ ಬಿಳಿ ಕೂದಲುಗಳನ್ನೆಲ್ಲ ಕಿತ್ತುಹಾಕುತ್ತಿದ್ದಳು. ಹೀಗೆ ಮಾಡಿ ಅವನ ತಲೆಯ ಕೂದಲೆಲ್ಲ ಹೋಗಿ ನುಣ್ಣಗೆ ಆಗಿಬಿಟ್ಟಿತು. ನಮ್ಮ ಪರಿಸ್ಥಿತಿ ಅದೇ ಸ್ಥಿತಿಗೆ ಬಂದಿದೆ. ಈ ಬೆಲೆ ಕುಸಿತ ಪರಿಣಾಮದಿಂದ ಕೃಷಿ ಉತ್ಪನ್ನದಲ್ಲಿ ಜೀವನ ಮಾಡಬೇಕಾಗಿರುವ ವ್ಯಕ್ತಿಯ ಬದುಕು ಬಹಳ ಕೆಳಮಟ್ಟವನ್ನು ತಲುಪಿದೆ. ಇದು ಯಾವ ಸರ್ಕಾರದಿಂದ ಆಗಿದೆ ಎಂಬುದಕ್ಕಿಂತ, ಇದಕ್ಕೆ ಇರುವ ನಿಜವಾದ ಕಾರಣಗಳೇನು, ಕಂಡುಕೊಳ್ಳಬೇಕಾದ ಪರಿಹಾರವೇನು ಎಂಬ ಬಗ್ಗೆ ಹುಡುಕಬೇಕಾದುದು ನಮ್ಮೆಲ್ಲರ ಕರ್ತವ್ಯ. ನನಗೂ ಕೆಲವು ದೇಶಗಳನ್ನು ನೋಡುವಂಥ ಅವಕಾಶ ಸಿಕ್ಕಿದ್ದರಿಂದ ಕೃಷಿ ವಿಷಯದಲ್ಲಿ ಎಲ್ಲಾ ದೇಶಗಳಲ್ಲಿ, ಎಲ್ಲಾ ಕಾಲಕ್ಕೂ ಕೃಷಿಕ ಬದುಕೇ ನಿಕೃಷ್ಟವಾಗಿದೆ ಎಂಬ ತೀರ್ಮಾನಕ್ಕೆ ನಾನು ಬಂದಿದ್ದೇನೆ. ಅದು ಭಾರತ ದೇಶಕ್ಕೆ, ಅಮೆರಿಕಾ ದೇಶಕ್ಕೆ, ಕರ್ನಾಟಕಕ್ಕೆ ಸೀಮಿತವಾದದ್ದಲ್ಲ. **ಎಲ್ಲಾ ರಾಷ್ಟ್ರಗಳಲ್ಲಿ, ರಾಜ್ಯಗಳಲ್ಲಿ ಎಲ್ಲಾ ಕಾಲಕ್ಕೆ ಅತ್ಯಂತ ನಿಕೃಷ್ಟವಾದಂಥ ಬದುಕು ರೈತನ ಬದುಕು.** ಇದಕ್ಕೆ ಈ ದೇಶದ ವ್ಯವಸ್ಥೆ ಮಾತ್ರ ಕಾರಣವಲ್ಲ. ಇಡೀ ವಿಶ್ವದಲ್ಲಿ ಇರುವ ವ್ಯವಸ್ಥೆಯೇ ಕಾರಣವೆಂದು ನನಗನ್ನಿಸುತ್ತದೆ. ನನ್ನ ಸ್ನೇಹಿತರು ತಂದಿರುವ ವಿಚಾರದಲ್ಲಿ ನನ್ನದೊಂದು ಸಣ್ಣ ತಿದ್ದುಪಡಿ. ಕೇವಲ ಬೆಲೆ ಕುಸಿತ ನಮ್ಮ ಸಮಸ್ಯೆಯಲ್ಲ. ನಮ್ಮ ಮುಖ್ಯವಾದ ಸಮಸ್ಯೆ ಕೃಷಿ ಉತ್ಪನ್ನಗಳ ಬೆಲೆಗಳಲ್ಲಿನ ಅನಿಶ್ಚಿತತೆ, ಏರಿಳಿತ. ಟೊಮ್ಯಾಟೋವನ್ನು ಒಂದು ದಿವಸ 25 ರೂ.ಗಳಿಗೆ ಮಾರಿದ್ದೂ ಇದೆ, ಒಂದು ದಿವಸ 25 ಪೈಸೆಗೂ ಕೇಳುವವರು ಇಲ್ಲದೆ, ಚರಂಡಿಗೆ ಹಾಕಿ ಬಂದಿರುವುದೂ ಇದೆ. ಕೃಷಿಕರಾದ ನಾವು ತೀರಾ ದಡ್ಡರೇನಲ್ಲ. May be, we have been exploited, but we are not so muh of a fool.

ನಾವು ಸ್ವಲ್ಪ ಬುದ್ಧಿವಂತರಾಗಿದ್ದೇವೆ. ಯಾವ ಬೆಳೆಗೆ ಹೆಚ್ಚು ಬೆಲೆ ಸಿಗುತ್ತದೋ ಅದನ್ನು ಬೆಳೆಯುವ ಚತುರತೆ ನಮಗೂ ಇದೆ. ಮಾಗಡಿ, ಆನೇಕಲ್, ಕುಣಿಗಲ್, ಹುಲಿಯೂರುದುರ್ಗ ಈ ಭಾಗದಲ್ಲಿ ಮೈಸೂರು ರೇಷ್ಮೆ ಬಿತ್ತನೆಗೂಡಿನ ಬೆಳೆಯೊಂದನ್ನು ಬಿಟ್ಟರೆ ಮತ್ತೆ ಯಾವುದೇ ಬೆಳೆಯನ್ನು ಬೆಳೆಯಲು ಸಾಧ್ಯವಿಲ್ಲ. ಇಲ್ಲಿನ ರೈತರಿಗೆ ಇದೊಂದೇ ಕಂಪಲ್ಷನ್ ಇರುವುದು. ನೀವು ಎಷ್ಟಕ್ಕಾದರೂ ಕೊಂಡುಕೊಳ್ಳಿ ಅದನ್ನೇ ಬೆಳೆಯಬೇಕು. ಇಲ್ಲಿ ರೈತರು ಬಲವಂತವಾಗಿ ಆ ಬೆಳೆಯನ್ನು ಬೆಳೆಯಬೇಕಾಗಿದೆ. ರೇಷ್ಮೆ ಸಚಿವರು ಇದನ್ನು ಅರ್ಥ ಮಾಡಿಕೊಂಡಿದ್ದಾರೆಂದು ನಾನು ಭಾವಿಸುತ್ತೇನೆ. ನಮ್ಮ ಮುಖ್ಯವಾದ ಪ್ರಶ್ನೆ ಎಂದರೆ, ಕೃಷಿ ಉತ್ಪನ್ನಗಳ ಬೆಲೆಯಲ್ಲಿನ ಅನಿಶ್ಚಿತತೆ. ತೆಂಗಿನಕಾಯಿಯ ಬೆಲೆ ಒಂದು ಸಲ ಹತ್ತು ರೂಪಾಯಿಗಳಾದರೆ, ಮತ್ತೊಂದು ಸಲ ಎರಡು ರೂಪಾಯಿಗಳಿಗೆ ಬರುತ್ತದೆ. ಆಲೂಗಡ್ಡೆಯ ಬೆಲೆಯೂ ಹಾಗೆಯೇ ಆಗುತ್ತದೆ. ಕೃಷಿ ಉತ್ಪನ್ನಗಳ ಬೆಲೆಯ ಕುಸಿತವಾಗುವುದರ ಜೊತೆಗೆ ಇದರ ಬೆಲೆಯಲ್ಲಿ ಆಗುವಂಥ ಅನಿಶ್ಚಿತತೆ ಸಹ ಬಹಳ ಮುಖ್ಯವಾದ ಸಮಸ್ಯೆಯೆಂದು ನಾನು ಭಾವಿಸಿದ್ದೇನೆ.

ಈ ಅನಿಶ್ಚಿತತೆ ಹಾಗೂ ಬೆಲೆ ಕುಸಿತದ ಪರಿಣಾಮವನ್ನು ನಿಭಾಯಿಸುವುದಕ್ಕೆ ಏನು ಮಾಡಬೇಕೆಂಬ ವಿಶ್ಲೇಷಣೆಯನ್ನು ನಾನು ಮಾಡಬಯಸುತ್ತೇನೆ. ಕೃಷಿ ಕ್ಷೇತ್ರದಲ್ಲಿ ಬೆಳೆ ಮತ್ತು ಬೆಲೆ ಎರಡೂ ಬಹಳ ಪ್ರಾಮುಖ್ಯವಾದುದು. ನಮ್ಮ ಬೆಳೆಗಳಿಗೆ ಉತ್ತಮವಾದಂಥ ಬೆಲೆ ಸಿಗಬೇಕು ಹಾಗೂ ನಮಗೆ ಉತ್ತಮವಾದಂಥ ಬೆಳೆಯೂ ಆಗಬೇಕು. ಉತ್ತಮವಾದಂಥ ಬೆಳೆ ಬೆಳೆಯಲು ಗೊಬ್ಬರ ಕೊಡುವುದು, ಔಷಧಿಗಳನ್ನು ಕೊಡುವುದು ಮುಂತಾದ ವಿಷಯಗಳನ್ನು ನಾನು ಬೇಸಾಯ ಇಲಾಖೆಗೆ ಸೀಮಿತವಾಗಿ ನಾನು ಬಿಟ್ಟುಬಿಡುತ್ತೇನೆ. ಇವೊತ್ತಿನ ಸಮಸ್ಯೆ ಇರುವುದು ಬೇಸಾಯ ಇಲಾಖೆಯಲ್ಲಲ್ಲ. ಮಾರುಕಟ್ಟೆ ಇಲಾಖೆಯಲ್ಲಿದೆ. ಮಾರುಕಟ್ಟೆಯ ವಿಚಾರದಲ್ಲಿರುವ ಸಮಸ್ಯೆಗಳನ್ನು ತಮ್ಮ ಮೂಲಕ ಸದನಕ್ಕೆ, ಸದನದ ಮೂಲಕ ರಾಜ್ಯದ ಜನತೆಗೆ ನನ್ನ ಅಭಿಪ್ರಾಯಗಳನ್ನು ನಿವೇದನೆ ಮಾಡಿಕೊಳ್ಳಲು ಸನ್ಮಾನ್ಯ ಅಧ್ಯಕ್ಷರು ದಯವಿಟ್ಟು ನಾಳೆಗೆ ಅವಕಾಶ ಮಾಡಿಕೊಡಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ.

○

**(9-11-2000)**

# ರಾಷ್ಟ್ರೀಯ ಸಮಸ್ಯೆಗಳು

ಅಧ್ಯಕ್ಷರೆ, ನಿನ್ನೆ ನಾನು ಮಾತನಾಡುತ್ತ ಈ ರಾಜ್ಯದ ಆಡಳಿತದಲ್ಲಿ ತರಬೇಕಾಗಿರುವ ಬದಲಾವಣೆ, ಸುಧಾರಣೆಗಳು, ಪಾರದರ್ಶಕವಾದ ಆಡಳಿತ ಕುರಿತು ಪ್ರಸ್ತಾಪಿಸಿದ್ದೆ. ರಾಜ್ಯಪಾಲರ ಭಾಷಣದಲ್ಲಿ ನಾನು ಪ್ರಮುಖವಾಗಿ ಕಂಡ ಮೂರು ರಾಷ್ಟ್ರೀಯ ಸಮಸ್ಯೆಗಳನ್ನು ಇಂದು ಸದನದ ಗಮನಕ್ಕೆ ತರಲು ಇಷ್ಟಪಡುತ್ತೇನೆ; **ಮೊದಲನೆಯದು; ಪ್ರಾಥಮಿಕ ಶಿಕ್ಷಣ, ಎರಡನೆಯದು; ಪರಿಸರ, ಮೂರನೆಯದು; ಜನಸಂಖ್ಯಾ ನಿಯಂತ್ರಣ.** ಪ್ರಾಥಮಿಕ ಶಿಕ್ಷಣದ ಬಗ್ಗೆ ಪ್ಯಾರ 23, 24, 25ರಲ್ಲಿ ಕರ್ನಾಟಕ ರಾಜ್ಯದಲ್ಲಿ ಜನಸಾಮಾನ್ಯರನ್ನು ವಿದ್ಯಾವಂತರನ್ನಾಗಿ ಮಾಡಲು ತೆಗೆದುಕೊಂಡ ಕ್ರಮಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಅಧ್ಯಕ್ಷರೇ, ಇದು ನನ್ನ ಮಾತಲ್ಲ. ಮೆಕೆ ಅವರು ಒಂದು ಕಡೆ ಹೇಳುತ್ತಾರೆ : A vigilant citizen is a prize of democracy. ಇಂತಹ ಎಚ್ಚೆತ್ತ ಒಬ್ಬ ಪ್ರಜೆ ಪ್ರಜಾಪ್ರಭುತ್ವಕ್ಕೆ ಬೇಕೇಬೇಕು, ಅವಶ್ಯಕ, ಅನಿವಾರ್ಯ ಎಂಬುದನ್ನು ನಾವು ಅರಿತುಕೊಂಡರೆ, ವಿದ್ಯೆ ಇಲ್ಲದೆ ಒಬ್ಬ ಪ್ರಜ್ಞಾವಂತ ಪ್ರಜೆ ಆಗಲು ಸಾಧ್ಯವಿಲ್ಲ. ಇದನ್ನು ಕೇವಲ ರಾಜ್ಯಕ್ಕೆ, ಪ್ರಾಂತ್ಯಕ್ಕೆ, ದೇಶಕ್ಕೆ ಸೀಮಿತವಾಗಿ ನಾನು ಹೇಳುತ್ತಿಲ್ಲ. ಭಾರತದಲ್ಲಿ ಸರ್ವರಿಗೂ ವಿದ್ಯೆ ಕೊಡುವುದರಲ್ಲಿ ನಾವು ಸಫಲರಾಗಿಲ್ಲವೆಂಬುದನ್ನು ಅಂಕಿ- ಅಂಶಗಳು ತೋರಿಸುತ್ತವೆ. ದೇಶಕ್ಕೆ ಸ್ವಾತಂತ್ರ ಬಂದ ಮೇಲೆ ಕರ್ನಾಟಕದಲ್ಲಿ ಅನಕ್ಷರತೆ ತೊಡೆದು ಹಾಕಲು ಸುಮಾರು 34 ಯೋಜನೆಗಳನ್ನು ಕಾರ್ಯರೂಪಕ್ಕೆ ತರಲಾಗಿದೆಯೆಂದು ಇಲಾಖೆಯವರ ಮೂಲಕ ನನಗೆ ತಿಳಿದುಬಂದಿತು. ಸಾಕ್ಷರತಾ, ವಯಸ್ಕರ ಶಿಕ್ಷಣ, ವಾಹನಗಳ ಮೇಲೆ ಶಾಲೆ ನಡೆಸುವುದು, ಹೀಗೆ 34 ಯೋಜನೆಗಳನ್ನು ಕಾರ್ಯಗತಗೊಳಿಸಿದ ಮೇಲೂ ಕರ್ನಾಟಕದಲ್ಲಿ ಶೇಕಡ 44ರಷ್ಟು ಅವಿದ್ಯಾವಂತರಿದ್ದಾರೆಂಬುದು ಅಂಕಿ ಅಂಶಗಳಿಂದ ಗೊತ್ತಾಗುತ್ತದೆ. ಪ್ರಜ್ಞಾವಂತ ಪ್ರಜೆ ಪ್ರಜಾಪ್ರಭುತ್ವಕ್ಕೆ ಅನಿವಾರ್ಯ, ಅಗತ್ಯ ಎಂಬ ಅರಿವು ನಮಗಿರುವಾಗ ಈ 44 ಅವಿದ್ಯಾವಂತರನ್ನಿಟ್ಟುಕೊಂಡು ಪ್ರಜಾಪ್ರಭುತ್ವವನ್ನು ಯಶಸ್ವಿ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಒಟ್ಟಾರೆ ನಾವೆಲ್ಲ ಪ್ರಯತ್ನ ಮಾಡಿ, ಪಿ.ಜಿಗಳ ಶಿಕ್ಷಣ, ತಾಂತ್ರಿಕ ಶಿಕ್ಷಣ ಇವುಗಳಿಗಿಂತ ಹೆಚ್ಚಿನ ಗಮನವನ್ನು ಪ್ರಾಥಮಿಕ ಶಿಕ್ಷಣಕ್ಕೆ ಕೊಟ್ಟು ಎಲ್ಲರನ್ನೂ ಸಾಕ್ಷರರನ್ನಾಗಿ ಮಾಡುವ ಕಾರ್ಯಕ್ರಮ ಕೈಗೊಂಡು ಈ ರಾಷ್ಟ್ರೀಯ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ.

ಇನ್ನು ಎರಡನೇ ರಾಷ್ಟ್ರೀಯ ಕಾರ್ಯಕ್ರಮದ ಬಗ್ಗೆ ರಾಜ್ಯಪಾಲರ ಪ್ಯಾರ 21, 22ರಲ್ಲಿ ಅರಣ್ಯದ ಬಗ್ಗೆ ಹೇಳಿದ್ದಾರೆ. ಅಧ್ಯಕ್ಷರೇ, ಬದುಕಿನ ಎಲ್ಲ ಕ್ಷೇತ್ರದಲ್ಲಿ ಮಾಲಿನ್ಯತೆ ಕಾಣುವುದೇ ನಮ್ಮ ದುರ್ದೈವವಾಗಿದೆ. ಅದು ಸಾಮಾಜಿಕ ಮಾಲಿನ್ಯ ಇರಬಹುದು, ಪರಿಸರ ಮಾಲಿನ್ಯ ಇರಬಹು,

ಧರ್ಮದ ಹೆಸರಿನಲ್ಲಿ ಮಾಲಿನ್ಯವಿರಬಹುದು, ದೇವಸ್ಥಾನಗಳಲ್ಲಿ ಮಾಲಿನ್ಯ ಇರಬಹುದು. ಇವನ್ನೆಲ್ಲ ಹಾಲಿ ನಾನು ಬದಿಗಿಟ್ಟು ಪರಿಸರ ಮಾಲಿನ್ಯ ಕುರಿತು ಎರಡು ಮಾತು ಹೇಳಲಿಷ್ಟಪಡುತ್ತೇನೆ; ಪರಿಸರ ಮಾಲಿನ್ಯ ಯಾವ ಮಟ್ಟಕ್ಕೆ ತಲುಪಿದೆಯೆಂದರೆ, ಗಂಗಾನದಿ ನೀರಿನ ಮಾಲಿನ್ಯತೆ ಬಗ್ಗೆ ಹೇಳುವಾಗ, ಒಂದು ಕಾಲದಲ್ಲಿ ಗಂಗೆಯಲ್ಲಿ ಮಿಂದುಬಂದರೆ ಮಾಡಿದ್ದ ಎಲ್ಲ ಪಾಪಗಳೂ ಪರಿಹಾರ, ಕಾಶಿಗೆ ಹೋಗಿಬನ್ನಿ ಎಂದು ಹಿರಿಯರು ಎಲ್ಲರನ್ನೂ ಕಳಿಸುತ್ತಿದ್ದರು. ಇವತ್ತು ನಾವೆಲ್ಲ ಬೆಚ್ಚಿಬೀಳುವಂತಹ ಪರಿಸ್ಥಿತಿ ಏನಪ್ಪ ಅಂದರೆ, ಆ ಗಂಗೆಯ ನೀರು ಕಲುಷಿತವಾಗಿದೆ. ಎಷ್ಟು ಕಲುಷಿತ ಎಂದರೆ ಅಮೆರಿಕಾದಿಂದ 5 ಸಾವಿರ ಕೋಟಿ ಡಾಲರ್ ಪಡೆದು ಸ್ವಚ್ಛಗೊಳಿಸುವ ಕಾರ್ಯ ಕೈಗೊಳ್ಳುತ್ತಿದ್ದೇವೆ. ಮೂರು ತಿಂಗಳ ಹಿಂದೆ ನೀವೆಲ್ಲ ಪತ್ರಿಕೆಯಲ್ಲಿ ನೋಡಿರಬೇಕು; ವಾರಣಾಸಿಯಲ್ಲಿ ಅಮೆರಿಕದ ಕಾರ್ಯದರ್ಶಿ ಬಂದು ಸಭೆ ಮಾಡಿದ್ದಾರೆ. ಉದ್ದೇಶವೇನಪ್ಪ ಅಂದರೆ, ಅವರ ನೆರವಿನಿಂದ ಗಂಗಾನದಿಯನ್ನು ಸ್ವಚ್ಛಗೊಳಿಸುವುದು. ಇದೊಂದು ಉದಾಹರಣೆ ಸಾಕು, ಜಲಮಾಲಿನ್ಯ ನಮ್ಮ ರಾಷ್ಟ್ರದಲ್ಲಿ ಯಾವ ಹಂತ ತಲುಪಿದೆ ಎನ್ನುವುದಕ್ಕೆ.

ಅಧ್ಯಕ್ಷರೇ, ಇನ್ನು ಗಾಳಿಯ ಮಾಲಿನ್ಯ. ಈಗಾಗಲೇ ದೊಡ್ಡ ಪಟ್ಟಣಗಳಲ್ಲಿ ಮೂಗಿಗೊಂದು ಯಂತ್ರ ಕಟ್ಟಿಕೊಂಡು ತಿರುಗಾಡುತ್ತಿದ್ದೇವೆ. ಇನ್ನು ಸ್ವಲ್ಪ ದಿನದಲ್ಲೇ ನಮ್ಮ ಜೇಬಿನಲ್ಲಿ ಮಿನಿ ಸಿಲಿಂಡರ್ ಇಟ್ಟುಕೊಂಡು ಅದರಿಂದ ಆಮ್ಲಜನಕ ಉಸಿರಾಡುವ ಪರಿಸ್ಥಿತಿ ಬರುವುದರಲ್ಲಿ ಯಾವ ಅನುಮಾನವೂ ಇಲ್ಲ. ಇವತ್ತು ನೀರು ಕಲುಷಿತವಾಗಿರುವುದಷ್ಟೇ ಅಲ್ಲ, ಅದರ ಲಭ್ಯತೆಯೂ ಕಡಿಮೆಯಾಗಿದೆ. ಎಷ್ಟು ಕಡಿಮೆ ಆಗಿದೆ ಎಂದರೆ; ಮಾನ್ಯ ಮುಖ್ಯಮಂತ್ರಿಗಳು ಸ್ವಲ್ಪ ದಿವಸದ ಹಿಂದೆ ಸಭಾಂಗಣದಲ್ಲಿ ಭಾಷಣ ಮಾಡುತ್ತ ಹೇಳಿದರು; ಅವರು ದಾವಾಸನದಲ್ಲಿ ನಡೆದ ಪ್ರಾಪಂಚ ಸಮ್ಮೆಳನವೊಂದರಲ್ಲಿ ಪಾಲ್ಗೊಂಡಿದ್ದರು, ಅಲ್ಲಿನ ಚರ್ಚೆಯ ವಿಷಯ ಏನಪ್ಪ ಅಂದರೆ, ಪ್ರಪಂಚದಲ್ಲಿ ಕುಡಿಯುವ ನೀರಿನ ಸಮಸ್ಯೆ. ಆ ಸಮ್ಮೇಳನದಲ್ಲಿ ಪ್ರಜ್ಞಾವಂತರೊಬ್ಬರು ಪ್ರತಿಪಾದಿಸಿದ್ದು; there will be war between the nations and fight between the individuals for drinking water in future ಇದನ್ನು ಕೇಳಿ ನಮಗೆ ಭಯವಾಗುತ್ತದೆ. ಬಹುಶಃ ಇದು ಅತಿಶಯೋಕ್ತಿ ಅಲ್ಲವೆನಿಸುತ್ತದೆ. 50 ವರ್ಷಗಳ ಹಿಂದೆ ಮಳೆ ಹೊಯ್ದು ಶೀತ ಹೆಚ್ಚಾಗಿ ಗ್ರಾಮೀಣ ಪ್ರದೇಶದ ಮನೆಗಳು ಕುಸಿದು ಬೀಳುತ್ತಿದ್ದವು. ಆದರೆ ಇಂದು 600 ಅಡಿ ಆಳದಲ್ಲಿ ಬೋರ್‌ವೆಲ್ಲ ಕೊರೆದರೂ ನೀರಿಲ್ಲ, ಬರೀ ಧೂಳು ಏಳುತ್ತದೆ. ಈ ಪರಿಸ್ಥಿತಿಯನ್ನು ಗಮನಿಸಿದಾಗ ನಮ್ಮಲ್ಲಿ ನೀರಿನ ಲಭ್ಯತೆ, ಬೇಸಾಯಕ್ಕೆ ಹಾಗೂ ಕುಡಿಯುವುದಕ್ಕೆ ಎಷ್ಟು ಕಡಿಮೆಯಾಗಿದೆ ಎಂದು ತಿಳಿಯುತ್ತೆ. ಇವತ್ತು ಏರ್‌ಪೋರ್ಟ್‌ನಲ್ಲಿ ಒಂದು ಲೀಟರ್ ನೀರಿನ ಬೆಲೆ 38 ರೂ. ನಾನಂತೂ ತೀರ್ಮಾನ ಮಾಡಿದ್ದೇನೆ. ಸತ್ತರೂ ಈ ನೀರನ್ನು ಕೊಳ್ಳುವುದಿಲ್ಲ ಅಂತ. ಅದಕ್ಕೇ ಕಾರ್‌ನಲ್ಲಿ ನಾನು ನಾಲ್ಕು ಬಾಟಲ್ ನೀರನ್ನು ಇಟ್ಟುಕೊಂಡು ಹೋಗುತ್ತೇನೆ. ಒಂದು ಹಳ್ಳಿಗೆ ಹೋದಾಗ 14 ರೂ. ಕೊಟ್ಟು ಒಂದು ಲೀಟರ್ ನೀರು ಕುಡಿಯುವಂತಾದರೆ, ಇವತ್ತು ಹುಟ್ಟಿದ ಮಗು 60 ವರ್ಷ

ವಯಸ್ಸಿಗೆ ಕಾಲಿಡುವ ಹೊತ್ತಿಗೆ ಈ ದೇಶದ ಪರಿಸ್ಥಿತಿ ಏನಾಗುತ್ತದೆ? ಮುಂದಿನ ಜನಾಂಗಕ್ಕೆ ಕುಡಿಯಲು ನೀರೂ ಉಳಿಸದ ಪಾಪದ ಪರಿಸ್ಥಿತಿ ಸೃಷ್ಟಿಸಿದ ಜನಾಂಗಕ್ಕೆ ನಾವು ಸೇರಬೇಕಾಗುತ್ತದೆ. ಆದರೆ ಹಾಲಿನ ಬೆಲೆ ಏಳು ರೂ. ಎಮ್ಮೆ ತಂದು ಹುಲ್ಲು ಹಾಕಿ, ನೀರು ಕುಡಿಸಿ ಮೈ ತಿಕ್ಕಿ, ಹಾಲು ಕರೆದು ಮಾರಿದರೆ ಒಂದು ಲೀಟರ್ ಹಾಲಿನ ಬೆಲೆ ಅಮ್ಮಮ್ಮ ಅಂದರೆ 10 ರೂ. ಆದರೆ ಕುಡಿಯುವ ನೀರಿನ ಬೆಲೆ ಹಳ್ಳಿಯಲ್ಲಿ 14 ರೂ., ಏರ್‌ಪೋರ್ಟ್‌ನಲ್ಲಿ 38 ರೂ. ಇದನ್ನು ಗಮನಿಸಿದಾಗ ದರ್ಬಾಸ್‌ನಲ್ಲಿ ಯಾರೋ ಪುಣ್ಯಾತ್ಮ ಹೇಳಿದನಲ್ಲ there will be war between the nations and fight between the individuals for drinking water ಎಂಬುದು ನಿಜವಾಗಬಹುದೇನೋ. ಆದ್ದರಿಂದ ನಾವಿವತ್ತು ಎಚ್ಚೆತ್ತುಕೊಳ್ಳುವ ಅವಶ್ಯಕತೆ ಇದೆ. ಇದನ್ನು ತಪ್ಪಿಸಲು ಯಾವ ಎಚ್ಚರ ವಹಿಸಬೇಕು ಅಂದರೆ ರಾಜ್ಯಪಾಲರು ತಮ್ಮ ಭಾಷಣದ ಪ್ಯಾರ 21,22ರಲ್ಲಿ ಹೇಳಿರುವ ತರಹ ಅರಣ್ಯ ಸಂಪತ್ತನ್ನು ವೃದ್ಧಿಮಾಡುವುದು ನಮಗೆ ಇಂದು ಅನಿವಾರ್ಯ. ಗಿಡಮರಗಳನ್ನು ಬೆಳೆಸದೆ ಇದ್ದರೆ ಬಹುಶಃ ಮಳೆ ಬರುವುದಿಲ್ಲ, ಪರ್ಜನ್ಯ ಜಪ ಮಾಡಿದರೆ ಮಳೆ ಬರುವುದಿಲ್ಲ. ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲ.

ಮಳೆ ಬರಬೇಕಾದರೆ, ಮುಂದಿನ ಜನಾಂಗಕ್ಕೆ ನೀರಿಲ್ಲದ ಪಾಪದ ಪರಿಸರವನ್ನು ಸೃಷ್ಟಿಸಿದ ಜನಾಂಗಕ್ಕೆ ನಾವು ಸೇರುವುದಿಲ್ಲ ಎನ್ನುವ ಪ್ರತಿಜ್ಞೆಯನ್ನು ನಾವು ಮಾಡಬೇಕಾದರೆ, ಈ ನಾಡಿನ ಅರಣ್ಯ ಸಂಪತ್ತನ್ನು ಹೆಚ್ಚಿಸುವದು ಅತ್ಯಂತ ಅನಿವಾರ್ಯ. ಮಾನ್ಯ ಅಧ್ಯಕ್ಷರೇ, ನನ್ನ ಸ್ನೇಹಿತರು ಏನು ಹೇಳುತ್ತಾರೆ ಎನ್ನುವುದು ನನಗೆ ಗೊತ್ತಿದೆ. ಜನರನ್ನೇ ದೇವರು ಎಂದು ತಿಳಿದುಕೊಂಡು ನಾನು ಬದುಕುವಂಥವನು. ಪೂಜಿಸುವಂಥವನು. ಆರಾಧನೆ ಮಾಡುವಂಥ ವನು. ಯಾವ ಜನವೂ ರಾಮಯ್ಯನನ್ನು ಅಲ್ಲಾಡಿಸುವುದಕ್ಕೆ ಆಗುವುದಿಲ್ಲ. ಅದರ ಬಗ್ಗೆ ಚಿಂತೆ ಬೇಡ. ನನ್ನ ಸ್ನೇಹಿತರ ಆಶೀರ್ವಾದ ಒಂದು ಇರಲಿ ಸಾಕು. ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇನೆಂದರೆ, ನೀರಿನ ಲಭ್ಯತೆ ಇವತ್ತು ನಮ್ಮ ಕರ್ನಾಟಕದ ಪ್ರಶ್ನೆಯಲ್ಲ, ಭಾರತದ ಪ್ರಶ್ನೆಯಲ್ಲ, ಇದು ವಿಶ್ವದ ಪ್ರಶ್ನೆ. ಆದ್ದರಿಂದ ನಮ್ಮ ಗಿಡಮರಗಳನ್ನು, ಅರಣ್ಯದ ಸಂಪತ್ತನ್ನು ಹೆಚ್ಚು ಮಾಡಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಇರುವ ಅರಣ್ಯವನ್ನು ಕಾಪಾಡಬೇಕು, ಇಲ್ಲದಿರುವಂಥ ಅರಣ್ಯವನ್ನು ಬೆಳೆಸಬೇಕು. ನನಗೆ ಅನಿಸುತ್ತದೆ, ಅದು ಶರಾವತಿ ಟೇಲ್ ಇರಬಹುದು, ಕೈಗಾ ಇರಬಹುದು, ನಮ್ಮ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲೇ ಬೇಕಾದಂಥ ಅವಶ್ಯಕತೆ ನಮಗೆ ಇರುವುದರಿಂದ ಅರಣ್ಯಗಳನ್ನು ರಕ್ಷಿಸುವುದು ಇವತ್ತಿನ ಪರಿಸ್ಥಿತಿಯಲ್ಲಿ ತುಂಬಾ ಕಷ್ಟದ ಕೆಲಸ. ಇರುವ ಅರಣ್ಯಗಳನ್ನು ರಕ್ಷಿಸುವುದಕ್ಕೆ ಸಾಧ್ಯತೆ ಇಲ್ಲ ಎಂದಮೇಲೆ ನಮಗೆ ಇರುವುದು ಒಂದೇ ಒಂದು ದಾರಿ. ಅದ್ಯಾವುದೆಂದರೆ ನಾಡನ್ನೇ ಕಾಡನ್ನಾಗಿ ಪರಿವರ್ತನೆ ಮಾಡುವುದು, ಇದು ಅತ್ಯಂತ ಅವಶ್ಯಕ. ನಮ್ಮ ಸ್ಮಶಾನಗಳು, ನಮ್ಮ ಶಾಲೆಗಳು, ನಮ್ಮ ವಿಧಾನಸೌಧದ ಸುತ್ತಮುತ್ತ ಇರುವ ಖಾಲಿ ಜಾಗ, ನಮ್ಮ ಮನೆಯ ಮೇಲೆ ಇರುವ ಖಾಲಿ ಜಾಗ, ರಸ್ತೆಯಲ್ಲಿರುವ ಖಾಲಿ ಜಾಗ, ಮೈದಾನಗಳು, ಎಲ್ಲೆಲ್ಲಿ ನಾಡಿನಲ್ಲಿ ಖಾಲಿ ಜಾಗಗಳು

ಇದೆಯೋ ಅದೆಲ್ಲಾ ಕಡೆ ಅರಣ್ಯವನ್ನು ಬೆಳೆಸಿ ಸೋಷಿಯಲ್ ಫಾರೆಸ್ಟ್ರಿ ಎಂದು ಏನು ಕಾರ್ಯಕ್ರಮವನ್ನು ನಾವು ಹಾಕಿಕೊಂಡಿದ್ದೆವೋ ಆ ಕಾರ್ಯಕ್ರಮವನ್ನು ನಾವು ಯಥೇಚ್ಛವಾಗಿ ಕಾರ್ಯರೂಪಕ್ಕೆ ತರದಿದ್ದರೆ, ವನಸಂಪತ್ತನ್ನು ಹೆಚ್ಚಿಸದಿದ್ದರೆ ಮಳೆ ಬರುವುದಿಲ್ಲ. ಮಳೆ ಬರದಿದ್ದರೆ ಜಲಕ್ಷಾಮ ಒಂದೇ ಅಲ್ಲ, ಪರಿಸರವನ್ನು ಕೂಡ ನಾವು ಸ್ವಚ್ಛವಾಗಿ ಇಟ್ಟುಕೊಳ್ಳುವುದಕ್ಕೆ ಸಾಧ್ಯತೆ ಇಲ್ಲ. ಅದಕ್ಕಾಗಿ ನಮ್ಮ ಸರ್ಕಾರ ಮಾನ್ಯ ರಾಜ್ಯಪಾಲರು ಹೇಳಿರುವ ಪ್ರಕಾರ ಈ ಪರಿಸರ ರಕ್ಷಣೆಗೆ ಆದ್ಯತೆ ನೀಡಬೇಕು. ನನ್ನ ಪ್ರಕಾರ ಇದು ರಾಷ್ಟ್ರೀಯ ಕಾರ್ಯಕ್ರಮ. ಅರಣ್ಯವನ್ನು ಹೆಚ್ಚಾಗಿ ಬೆಳೆಸುವುದರ ಮೂಲಕ ಉತ್ತಮವಾದಂಥ ಗಾಳಿ ಮತ್ತು ನೀರನ್ನು ಹೊಂದಲಿಕ್ಕೆ ಪ್ರಯತ್ನವನ್ನು ಮಾಡಬೇಕು.

ಇನ್ನು ಮೂರನೇಯ ರಾಷ್ಟ್ರೀಯ ಕಾರ್ಯಕ್ರಮ ನನ್ನ ಪ್ರಕಾರ ಎಂದರೆ, ಜನಸಂಖ್ಯೆಯ ನಿಯಂತ್ರಣ. ಜನಸಂಖ್ಯೆಯ ನಿಯಂತ್ರಣವನ್ನು ನಾವು ಮಾಡದಿದ್ದರೆ ಬಹುಶಃ **'ಆನೆಯ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ'** ಎನ್ನುವ ಗಾದೆ ಏನಿದೆಯೋ ನಾವು ಮಾಡಿದ ಅಭಿವೃದ್ಧಿ ಕೆಲಸಗಳು ಈ ಜನಸಂಖ್ಯೆಯ ಹೆಚ್ಚಳದಿಂದಾಗಿ ಯಾವ ಪ್ರಯೋಜನಕ್ಕೂ ಬಾರದೇ ಇರತಕ್ಕ ಪರಿಸ್ಥಿತಿಯನ್ನು ನಾವು ಕಾಣುತ್ತೇವೆ. ಈ ಒಂದು ದೃಷ್ಟಿಯಿಂದ ನಿರ್ವಿವಾದವಾಗಿ ಜನ ಸಂಖ್ಯೆಯನ್ನು ನಿಯಂತ್ರಣ ಮಾಡುವ ಅವಶ್ಯಕತೆ ನಮಗೆ ಇದೆ. ಸ್ವಲ್ಪ ಮಟ್ಟಿಗೆ ನಾವು ಯಶಸ್ವಿ ಕೂಡ ಆಗಿದ್ದೇವೆ. ನನ್ನ ಸ್ನೇಹಿತರ ಅನುಭವ ಏನೋ ಗೊತ್ತಿಲ್ಲ. ನನ್ನ ಕ್ಷೇತ್ರದಲ್ಲಿ ಯಾವ ಊರಿನಲ್ಲೂ ಪ್ರೈಮರಿ ಸ್ಕೂಲಿನ ಕಟ್ಟಡ ಕೇಳುವ ಜನಗಳೇ ಮುಂದೆ ಬರುತ್ತಿಲ್ಲ. ಪ್ರೈವೇಟ್ ಸ್ಕೂಲ್ ಕಟ್ಟಡ ಬೇಕು ಎಂದು ಯಾರೂ ಕೇಳುತ್ತಲೇ ಇಲ್ಲ. ಬಹಳ ಜನರಿಗೆ ಇದು ಅನುಭವ ವಾಗಿರಬಹುದು. ನಮ್ಮ ಊರಿನಲ್ಲಿ ಸ್ಕೂಲಿನ ರೂಮುಗಳು ಖಾಲಿಯಾಗುತ್ತಾ ಇವೆ. ಇದರ ಕಾರಣವೇನೆಂದರೆ ಕರ್ನಾಟಕ ಕೇರಳದಂಥ ಅನೇಕ ರಾಜ್ಯಗಳಲ್ಲಿ they have successfully implemented the Family Planning programs. I congratulate the Government and the officials for this achievement.

ಅತ್ಯಂತ ಹೃದಯಪೂರ್ವಕವಾಗಿ ಆ ಕೆಲಸವನ್ನು ಮಾಡಿದಂಥ ಅಧಿಕಾರಿಗಳನ್ನು ಮತ್ತು ಸರ್ಕಾರವನ್ನು ಅದು ಯಾವ ಪಕ್ಷದ ಸರ್ಕಾರವೋ, ಯಾರು ಮುಖ್ಯಮಂತ್ರಿ ಯಾಗಿದ್ದರೋ, ಯಾರು ಡಿಹೆಚ್ಓ ಆಗಿದ್ದರೋ, ಯಾರು ಡೈರೆಕ್ಟರ್ ಆಗಿದ್ದರೋ ನನಗೆ ಅದು ಬೇಕಾಗಿಲ್ಲ. ಜನಸಂಖ್ಯೆಯ ನಿಯಂತ್ರಣ ಕಾರ್ಯವನ್ನು ಯಶಸ್ವಿಯಾಗಿ ಮಾಡಿ ಈ ರಾಜ್ಯದಲ್ಲಿ ಕಾರ್ಯರೂಪಕ್ಕೆ ತಂದಂಥ ಎಲ್ಲರನ್ನೂ ಕೂಡ ನಾನು ಅಭಿನಂದಿಸುತ್ತೇನೆ. ಅದಕ್ಕಾಗಿ ಸನ್ಮಾನ್ಯ ರಾಜ್ಯಪಾಲರು 56ನೇ ಪ್ಯಾರಾದಲ್ಲಿ ಈ ಜನಸಂಖ್ಯೆಯ ಕಾರ್ಯಕ್ರಮಗಳ ನಿಯಂತ್ರಣವನ್ನು ಇನ್ನೂ ಹೆಚ್ಚಿನ ರೂಪದಲ್ಲಿ ನಾವು ಕಾರ್ಯರೂಪಕ್ಕೆ ತರುತ್ತೇನೆ ಎನ್ನುವಂಥ ಯಶಸ್ವಿ ಕಾರ್ಯಕ್ರಮಗಳ ಬಗ್ಗೆ ಅವರು ಪ್ರಸ್ತಾಪವನ್ನು ಮಾಡಿದ್ದಾರೆ. ಅದಕ್ಕೆ ನಾನು ಹೇಳಿದ್ದು ಏಕೆ ನಾನು

ರಾಷ್ಟ್ರೀಯ ಕಾರ್ಯಕ್ರಮ ಎಂದು ಹೇಳಿದ್ದು ಎಂದರೆ, ಈ ಒಂದು ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದಂಥ ಕೇರಳ ಮತ್ತು ಕರ್ನಾಟಕಕ್ಕೆ ಕೇಂದ್ರ ಸರ್ಕಾರ ಶಿಕ್ಷೆಯನ್ನು ಕೊಡಲಿಕ್ಕೆ ಹೊರಟಿದೆ. ನಾನು ಮತ್ತೆ ಹೇಳುತ್ತಿದ್ದೇನೆ, ಇದು ಪಕ್ಷಾತೀತವಾಗಿ, ಪ್ರಾಂತ್ಯಾತೀತವಾಗಿ ಇರುವಂಥ ಪರಿಸ್ಥಿತಿಯನ್ನು ಗಮನಕ್ಕೆ ತರುತ್ತಿದ್ದೇನೆ. ಯಾವ ದೃಷ್ಟಿಯಿಂದ ಎಂದರೆ, ಕೇಂದ್ರದ ಅನೇಕ ಯೋಜನೆಗಳಿಗೆ ಹಣವನ್ನು ನಿಗದಿ ಮಾಡುವ ಸಂದರ್ಭದಲ್ಲಿ, ಜನಸಂಖ್ಯೆಯ ಆಧಾರದ ಮೇಲೆ ನಿಗದಿ ಮಾಡಬೇಕಾಗುತ್ತದೆ ಎನ್ನುವ ಒಂದು ಪ್ರಸ್ತಾವನೆ ಕೇಂದ್ರ ಸರ್ಕಾರದ ಮುಂದೆ ಬರುತ್ತಾ ಇದೆ. ಇದು ಒಳ್ಳೆಯದಲ್ಲ. ಜನಸಂಖ್ಯೆಯ ನಿಯಂತ್ರಣದ ಕಾರ್ಯಕ್ರಮವನ್ನು ಯಶಸ್ವಿಯಾಗಿ ಮಾಡಿದಂಥ ನಮ್ಮ ಸರ್ಕಾರಗಳಿಗೆ ನೀವು ಶಹಭಾಷ್‌ಗಿರಿಯನ್ನು ಕೊಡಬೇಕೇ ಹೊರತು, ಹಣವನ್ನು ಜಾಸ್ತಿ ಮಾಡಿ ಜನಸಂಖ್ಯೆಯ ಆಧಾರದ ಮೇಲೆ ಹಣವನ್ನು ಒದಗಿಸುವ ಮೂಲಕ ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ ರಾಜ್ಯಗಳಿಗೆ ಶಿಕ್ಷೆ ಕೊಡುವುದನ್ನು ತಪ್ಪಿಸಬೇಕು ಎನ್ನುತ್ತಾ, ಈ ಸದನದ ಮೂಲಕ, ತಮ್ಮೂಲಕ, ನಾನು ಕೇಂದ್ರ ಸರ್ಕಾರಕ್ಕೆ ಪ್ರಾರ್ಥನೆ ಮಾಡಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಈ ಮೂರು ರಾಷ್ಟ್ರೀಯ ಕಾರ್ಯಕ್ರಮಗಳನ್ನು ರಾಜ್ಯದಲ್ಲಿ ಯಶಸ್ವಿಯಾಗಿ ಮಾಡುವುದಕ್ಕೆ ರಾಜ್ಯಪಾಲರು ಪ್ರಸ್ತಾವನೆಯನ್ನು ಮಾಡಿದ್ದಾರೆ. ನನ್ನ ಸ್ನೇಹಿತರನ್ನು ಎಲ್ಲರನ್ನೂ ನನ್ನ ಕಾನ್‌ಫಿಡೆನ್ಸ್‌ಗೆ ತೆಗೆದುಕೊಂಡು ನಾನು ಒಂದು ವಿಷಯವನ್ನು ಹೇಳುವುದಕ್ಕೆ ಇಷ್ಟಪಡುತ್ತಿದ್ದೇನೆ. ಮೂರು ವಿಷಯಗಳಲ್ಲಿ ರಾಷ್ಟ್ರೀಯ ಒಮ್ಮತ, ರಾಷ್ಟ್ರೀಯ ಸಮ್ಮತ, ರಾಷ್ಟ್ರೀಯ ಒಪ್ಪಿಗೆ ಮೂಡಿ ಬರಬೇಕಾಯಿತು. On three issues, national consensus should emerge.

ಅವು ಯಾವುವು ಎಂದರೆ ಮೊದಲನೆಯದಾಗಿ, **ಯೋಜನಾ ವೆಚ್ಚದ ನಿಯಂತ್ರಣ**, ಎರಡನೆಯದು, **ಜನಪ್ರಿಯ ಕಾರ್ಯಕ್ರಮಗಳನ್ನು ಮುಂದುವರಿಸುವ ಬಗ್ಗೆ ಚಿಂತನೆ**, ಮೂರನೆಯದು, ಏನು ನಾವೆಲ್ಲರೂ ಆವತ್ತಿನಿಂದ ಒಂದೇ ಸಮನೆ ಮಾತನಾಡುತ್ತಿದ್ದೇವೋ **ಡಬ್ಲ್ಯು.ಟಿ.ಓ. ಅಂತರಾಷ್ಟ್ರೀಯ ಕೃಷಿ ಮಾರುಕಟ್ಟೆ ಸಂಸ್ಥೆಯ ಆಗುಹೋಗುಗಳು**. ಈ ಮೂರು ವಿಷಯಗಳ ಬಗ್ಗೆ ನನಗೆ ಪ್ರಾಮಾಣಿಕವಾಗಿ ಅನಿಸುತ್ತದೆ, ಪಕ್ಷ, ಪ್ರಾಂತ್ಯ, ಇದೆಲ್ಲವನ್ನೂ ಬಿಟ್ಟು ಒಂದು ರಾಷ್ಟ್ರೀಯ ಒಮ್ಮತ, ರಾಷ್ಟ್ರೀಯ ಸಮ್ಮತ, ರಾಷ್ಟ್ರೀಯ ಒಪ್ಪಿಗೆ ಮೂಡಿ ಬರಬೇಕಾಗುತ್ತದೆ ಎನ್ನುವುದು ನನ್ನ ಬಲವಾದ ಅನಿಸಿಕೆ. ಮೊದಲನೆಯದು ಜನಪ್ರಿಯ ಕಾರ್ಯಕ್ರಮಗಳು, ನಾನು ಈ ಒಂದು ಸಭೆಯಲ್ಲಿ 10-15 ವರ್ಷದ ಹಿಂದೆ ಆಗತಾನೆ ನಾನು 83-84ರಲ್ಲಿ ವಿಧಾನಸಭೆಗೆ ಬಂದಿದ್ದೆ. ನಾನು ಅವತ್ತು ಒಂದು ಮಾತನ್ನು ಹೇಳಿದ್ದೆ. ಇವತ್ತು ಕೂಡ ಹೇಳುವುದಕ್ಕೆ ಇಷ್ಟಪಡುತ್ತೇನೆ. cry as per the Populist programs, if you really want to take the country to a permenent development.

ಈ ಜನಪ್ರಿಯ ಕಾರ್ಯಕ್ರಮಗಳಿಂದ ಅಶಾಶ್ವತವಾದ, ತಾತ್ಕಾಲಿಕವಾದ ಪರಿಹಾರವನ್ನು ನಾವು ಕಾಣುವುದಕ್ಕೆ ಸಾಧ್ಯತೆ ಆಗಬಹುದು. ಆದರೆ ಈ ಜನಪ್ರಿಯ

ಕಾರ್ಯಕ್ರಮಗಳಿಂದ ಗರಿಷ್ಟ ಪ್ರಮಾಣದಲ್ಲಿ ಅಭಿವೃದ್ಧಿಯನ್ನು ಕಾಣುವುದಕ್ಕೆ ಸಾಧ್ಯತೆ ಆಗುವುದಿಲ್ಲ. ಅದಕ್ಕಾಗಿ ಈ ದೇಶದಲ್ಲಿ ಇವತ್ತು ಏನಾಗಿದೆ, ಒಬ್ಬರ ಮೇಲೆ ಒಬ್ಬರು ಕಾಂಪಿಟಿಷೇನ್. ಒಬ್ಬರು **ತಾಳಿ** ಕೊಡುತ್ತೇವೆಂದರೆ, ಇನ್ನೊಬ್ಬರು **ಕುಂಕುಮವನ್ನು** ಕೊಡುತ್ತೇವೆಂದು ಹೇಳುತ್ತಾರೆ. ಒಬ್ಬರು **ಪಂಚೆ** ಕೊಡುತ್ತೇವೆಂದರೆ, ಇನ್ನೊಂದು ರಾಜ್ಯದಲ್ಲಿ **ಧೋತಿಯನ್ನು** ಕೊಡುತ್ತೇವೆಂದು ಹೇಳುತ್ತಾರೆ. ಈ ಒಂದು ಜನರನ್ನು ಮೆಚ್ಚಿಸುವಂಥ ಕಾರ್ಯಕ್ರಮಗಳೇನು ಇದ್ದಾವೋ, ವೋಟಿನ ಭೇಟೆಗಾಗಿಯೇ ಕಾರ್ಯಕ್ರಮ ತರುತ್ತಿರತಕ್ಕ ಕಾರ್ಯಕ್ರಮಗಳು ಏನಿವೆಯೋ, ಈ ಕಾರ್ಯಕ್ರಮಗಳಿಗೆ ಒಂದು ಕಡಿವಾಣವನ್ನು ಹಾಕುವಂಥ ಕೆಲಸವನ್ನು ಇವತ್ತು ಯಾವ ರಾಜ್ಯ ಸರ್ಕಾರವೂ ಮಾಡುವುದಕ್ಕೆ ಧೈರ್ಯ ಇಲ್ಲ. because you have already given to them, you cannot snatch it. ಅದಕ್ಕಾಗಿಯೇ ನಾನು ಹೇಳುತ್ತಿದ್ದೇನೆ, ರಾಷ್ಟ್ರಮಟ್ಟದಲ್ಲಿ ಇದರ ಬಗ್ಗೆ ಚಿಂತನೆಯನ್ನು ಮಾಡಬೇಕಾಗುತ್ತದೆ, ಒಮ್ಮತದ ಒಂದು ಅಭಿಪ್ರಾಯ ಮೂಡಿಬರಬೇಕಾಗುತ್ತದೆ. ನನ್ನಸ್ನೇಹಿತರು ಹೇಳುತ್ತಿದ್ದರು, Our Government itself is a begger. Yes, it seems to be true, if you see the present developments.

ಇವತ್ತು ನಮ್ಮ ಎಲ್ಲಾ ಅಭಿವೃದ್ಧಿ ಕಾರ್ಯಗಳಿಗೂ ನಾವು ಹುಡ್ಕೋ ಮುಂದೆ ಕೈಚಾಚಬೇಕು. ವಿಶ್ವಬ್ಯಾಂಕಿನ ಮುಂದೆ ಹೋಗಿ ಕೈ ಚಾಚಬೇಕು. ಆಮೇಲೆ ಏಷ್ಯನ್ ಡೆವಲಪ್‌ಮೆಂಟ್ ಬ್ಯಾಂಕ್ ಮುಂದೆ ಹೋಗಿ ಕೈ ಚಾಚಬೇಕು. ಈ ಪರಿಸ್ಥಿತಿ ಏಕೆ ಬಂದಿದೆ? ಈ ದೇಶದಲ್ಲಿ ಇವತ್ತು ತುಮಕೂರು ಜಿಲ್ಲಾ ಪರಿಷತ್ತಿನ ಬಜೆಟ್‌ನಲ್ಲಿ 70 ಕೋಟಿ ರೂಪಾಯಿಗಳ ಕೆಲಸವನ್ನು ಮಾಡುವುದಕ್ಕೆ 314 ಕೋಟಿ ರೂಪಾಯಿಗಳನ್ನು ನಾವು ಖರ್ಚು ಮಾಡುತ್ತಿದ್ದೇವೆ. ಏನು ಇದು? ನಮ್ಮ ಜನಗಳಿಗೆ ಏನಾದರೂ ಗೊತ್ತಾದರೆ ಹಳ್ಳಿಗಳ ಕಡೆ ನಮ್ಮನ್ನು ಬಿಡುತ್ತಾರಾ? ಚರ್ಮ ಸುಲಿದುಹಾಕಿಬಿಡುತ್ತಾರೆ. 70 ಕೋಟಿ ರೂಪಾಯಿಗಳ ಕೆಲಸ ಮಾಡುವುದಕ್ಕೆ ತುಮಕೂರು ಜಿಲ್ಲೆಯಲ್ಲಿ ನಾವು ಕೊಡುತ್ತಿರುವ ಕೂಲಿ 314 ಕೋಟಿ ರೂಪಾಯಿಗಳು. ಮಡಿಕೇರಿ ಜಿಲ್ಲೆಗೆ ಹೋಗಿ ನಾನು ನೋಡಿದ್ದೇನೆ. 20 ಕೋಟಿ ರೂಪಾಯಿಗಳ ಕೆಲಸವನ್ನು ಮಾಡಿಸಲಿಕ್ಕೆ ಕೂಲಿ ಕೊಡುತ್ತಿರುವುದು 70 ಕೋಟಿ ರೂಪಾಯಿಗಳು. ಸ್ವಲ್ಪ ಹೆಚ್ಚುಕಡಿಮೆ The non-plan expenditure of all the States including the Central Government is 65% and only 35% is available for plan expenditure. ಯೋಜನೇತರ ವೆಚ್ಚಗಳು 65 ಆದರೆ ನಮ್ಮ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲಿಕ್ಕೆ ಇರತಕ್ಕ ಹಣ ಕೇವಲ ಶೇಕಡ 35 ಪರ್ಸೆಂಟ್. ಈ 35 ಪರ್ಸೆಂಟೂ ಕೂಡ ಪೂರ್ತಿ ಅಭಿವೃದ್ದಿಗೆ ಸಿಗುವುದಿಲ್ಲ. ಈ 35ರಲ್ಲೂ ಕೂಡ there is salary portion again.

ಇದನ್ನಾದರೂ ಕೊಡಿ, ನಮ್ಮ ಕೆರೆಕಟ್ಟೆಗಳು, ಕಾಲುವೆಗಳೆಲ್ಲಾ ಒಡೆದುಹೋಗಿವೆ. ರಸ್ತೆಗಳೆಲ್ಲಾ ಗುಂಡಿ ಬಿದ್ದಿವೆ ಎಂದರೆ, ಇಲ್ಲಾ ಸ್ವಾಮಿ ಅದರಲ್ಲೂ ಸ್ಯಾಲರಿ ಪೋರ್ಷನ್ ಇದೆ,

ಅದ್ಯಾವುದೆಂದರೆ ಈ ಹೊಸ ಯೋಜನೆಗಳು ಬರುತ್ತವಲ್ಲಾ, ಆ ಹೊಸ ಯೋಜನೆಗಳೇ ಇಷ್ಟು ವರ್ಷ. ಅದರಿಂದಲೇ ಸಂಬಳವನ್ನು ಕೊಡಬೇಕೆನ್ನುವ ಒಂದು ನಿಯಮ ಇದೆ ಎನ್ನುತ್ತಾರೆ. ಆ ಒಂದು ದೃಷ್ಟಿಯಿಂದ ಈ ಸಂಬಳದ ಪೋರ್ಷನ್, ಈ ಯೋಜನೇತರ ಮತ್ತು ಯೋಜನಾ ವೆಚ್ಚದಲ್ಲೂ ಕೂಡ ಸೇರಿಕೊಂಡಿದೆ.

ಆದ್ದರಿಂದ 65 ಭಾಗವನ್ನು ಸಂಬಳಕ್ಕೆ, ಸಾರಿಗೆಗೆ, ಸವಲತ್ತಿಗೆ, ನಮ್ಮದನ್ನೂ ಸೇರಿಸಿಕೊಂಡು ಹೋಗುತ್ತಿದೆ. ನಾನು ಬರೀ ಅಧಿಕಾರಿಗಳದ್ದು ಹೇಳುತ್ತಿಲ್ಲ. ನಮ್ಮದೂ ಸೇರಿಸಿಕೊಂಡು ಇಂತಹ ಯೋಜನೇತರ ವೆಚ್ಚಗಳಿಗೆ 65 ಪರ್ಸೆಂಟನ್ನು ಖರ್ಚು ಮಾಡಿ, ಕೇವಲ 35 ಪರ್ಸೆಂಟಿನ ಯೋಜನೆಗಳ ವೆಚ್ಚಕ್ಕೆ ಇಟ್ಟುಕೊಂಡಿರುವ ಪರಿಸ್ಥಿತಿಯಲ್ಲಿ, ಸಾಲ ಮಾಡುವುದು ಸರ್ಕಾರಕ್ಕೆ ಅನಿವಾರ್ಯವಾಗಿದೆ. ಇದನ್ನು ತಪ್ಪಿಸಲಿಕ್ಕೆ ಒಂದು ರಾಜ್ಯದ ಮುಖ್ಯ ಮಂತ್ರಿಗಳಿಂದ ಸಾಧ್ಯವಾಗುವುದಿಲ್ಲ. ಒಂದು ರಾಜ್ಯದ ಯಾವುದೇ ಪಕ್ಷದ ಸರ್ಕಾರದಿಂದ ಸಾಧ್ಯವಾಗುವುದಿಲ್ಲ. That is why, I beg, I plead with my friends all over the nation to emerge and find out a remedy for this problem.

ಇದು ರಾಷ್ಟ್ರೀಯ ಒಮ್ಮತವಾಗಿ ಬರಬೇಕು. ರಾಷ್ಟ್ರೀಯ ಸಮ್ಮತವಾಗಿ ಮೂಡಿ ಬರಬೇಕು. ಆ ಕಾರಣಕ್ಕಾಗಿಯೇ ನಾನು ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇನೆ. ನಾವು ಎಲ್ಲವನ್ನೂ ಚಿಂತನೆ ಮಾಡುತ್ತಿದ್ದೇವೆ. ನಾನು ನಿನ್ನೆ ಒಂದು ಮಾತನ್ನು ಹೇಳಿದ್ದೆ. ಶಾಸಕರಿಗೆಲ್ಲಾ ಹೊಣೆಗಾರಿಕೆ ಇದೆ, ಮಂತ್ರಿಗಳಿಗೆ ಹೊಣೆಗಾರಿಕೆ ಇದೆ. ಅಧಿಕಾರಿಗಳಿಗೆ ಹೊಣೆಗಾರಿಕೆ ಇದೆ. ನಮಗೆಲ್ಲರಿಗೂ ಅಕೌಂಟಬಿಲಿಟಿ ಇದೆ. ಈ ರಾಷ್ಟ್ರದ ಜನರಿಗೆ ಅಕೌಂಟಬಿಲಿಟಿ ಇಲ್ಲವೇನು? ಅವರಿಗೂ ಕೂಡ ಹೊಣೆಗಾರಿಕೆಯನ್ನು ತರಬೇಕಾಗುತ್ತದೆ. ಅವರ ಹೊಣೆಗಾರಿಕೆ ಏನು? ಅವರು ಉರಿಸುವಂಥ ದೀಪಕ್ಕೆ ಎಲೆಕ್ಟ್ರಿಸಿಟಿ ಛಾರ್ಜನ್ನು ಕಟ್ಟಬೇಕಾಗುತ್ತದೆ. ಅವರು ಉಪಯೋಗಿಸುವಂತಹ ನೀರಿಗೆ; ವಾಟರ್ ಛಾರ್ಜಸ್ ಕಟ್ಟಬೇಕಾಗುತ್ತದೆ. ಅವರು ಮಾರುವಂತಹ ನೆಲಕ್ಕೆ ಕಂದಾಯವನ್ನು ಕಟ್ಟಬೇಕಾಗುತ್ತದೆ. ಹೊಣೆಗಾರಿಕೆ ಕೇವಲ ಒಬ್ಬರಿಗೇ ಅಂತಲ್ಲ. We are conscious of our rights, but we are not conscious of our duties.

ಆದ್ದರಿಂದ ಈ ದಿಸೆಯಲ್ಲಿ ಪ್ರತಿ ಒಂದು ರಾಜ್ಯದಲ್ಲಿ, ಪ್ರತಿ ಒಂದು ರಾಷ್ಟ್ರದಲ್ಲಿ ಸಂಪತ್ತಿನ ಕ್ರೋಢೀಕರಣದ ಕಡೆಗೆ ಗಮನವನ್ನು ನಾವು ಹರಿಸಬೇಕು. Mobilisation of resources ಅದನ್ನು ನಾವು ಮರೆತೇ ಬಿಟ್ಟಿದ್ದೇವೆ. ಅದಕ್ಕೇ ನಾನು ಸ್ನೇಹಿತರಿಗೆ ಬೆಳಿಗ್ಗೆ ಹೇಳುತ್ತಿದ್ದುದು The Government itself is a beggar.

ಹೌದು, ಈ ಪರಿಸ್ಥಿತಿಯನ್ನು ತಂದವರು ಯಾರು? ಇವತ್ತು ಒಂದೂವರೆ ವರ್ಷದ ಹಿಂದೆ ಈಚೆಗೆ ಸನ್ಮಾನ್ಯ ಕೃಷ್ಣ ಅವರು ಈ ರಾಜ್ಯದ ಆಡಳಿತ ಸೂತ್ರವನ್ನು ಹಿಡಿದ ಮೇಲೆ ಈ ಪರಿಸ್ಥಿತಿ

ಸೃಷ್ಟಿ ಆಗಲಿಲ್ಲ. ಇದಕ್ಕೂ ಈ ಪಾಪ್ಯುಲಿಸ್ಟ್ ಪ್ರೋಗ್ರಾಂಗೂ ಸಂಬಂಧ ಇದೆ. ಎಂದಿನ ವರೆಗೆ ಯೋಜನೇತರ ವೆಚ್ಚಗಳನ್ನು ಕಟ್ ಮಾಡಲಿಕ್ಕೆ ಸಾಧ್ಯ ಆಗುವುದಿಲ್ಲವೋ, ಅಂದಿನವರೆಗೆ ಬೇರೆಯವರ ಮುಂದೆ ಭಿಕ್ಷೆಯನ್ನು ಬೇಡುವುದನ್ನು ತಪ್ಪಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಇದು ನಂಬರ್ ಒನ್. ಎರಡನೆಯದು, ಎಂದಿನವರೆಗೆ ನೀವು ಪಾಪ್ಯುಲಿಸ್ಟ್ ಪ್ರೋಗ್ರಾಂನ್ನು ನಡೆಸುತ್ತೀರೋ, ಜನಮೆಚ್ಚಿಗೆ ಕಾರ್ಯಕ್ರಮಗಳಿಗೆ ಕಡಿವಾಣ ಹಾಕುವುದಿಲ್ಲವೋ, ನಿಮ್ಮ ಯೋಜನೇತರ ವೆಚ್ಚಗ್ಗಳಿಗೆ ಕಡಿವಾಣ ಹಾಕುವುದರ ಜೊತೆಗೆ, ನಮ್ಮ ಮೊಬಿಲೈಸೇಷನ್ ಮಾಡುವುದಕ್ಕೆ ನಾವು ಪ್ರಯತ್ನ ಮಾಡದೇ ಇದ್ದರೆ ಇದನ್ನು ನಿಭಾಯಿಸುವದಕ್ಕೆ ಸಾಧ್ಯವಾಗುವುದಿಲ್ಲ. ಆ ಒಂದು ದೃಷ್ಟಿಯಿಂದ ನಾನು ಮೊದಲನೆಯದಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇನೆ. ಯೋಜನೇತರ ವೆಚ್ಚಗಳಿಗೆ ಕಡಿವಾಣ ಹಾಕುವುದು ಮತ್ತು ಜನಪ್ರಿಯ ಕಾರ್ಯಕ್ರಮಗಳನ್ನು ನಿಲ್ಲಿಸಲಿಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಸಹಮತ ಮೂಡಿ ಬರಬೇಕು. ಈ ವಿಷಯದಲ್ಲಿ ರಾಷ್ಟ್ರೀಯ ಚಿಂತನೆ ನಡೆಯಬೇಕು. ಒಮ್ಮತ ಮೂಡಿ ಬರಬೇಕು, ಎಂದು ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕೆ ಇಷ್ಟಪಡುತ್ತಿದ್ದೇನೆ.

○

**(13-3-2001)**

# ರೈತರಿಗೆ ಶಾಶ್ವತ ಪರಿಹಾರ

ಬೆಲೆ ಕಡಿಮೆಯಾಗುವುದಕ್ಕೆ ಏನು ಕಾರಣ? ಕರ್ನಾಟಕ ರಾಜ್ಯದಲ್ಲಿ ರೈತರ ದುಸ್ಥಿತಿಗೆ, ಅವನು ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ, ರೈತ ಬೆಳೆದ ಕೃಷಿ ಉತ್ಪನ್ನದ ಬೆಲೆ ಕುಸಿದಿರುವುದು ಒಂದು ಕಾರಣ. ಈ ಬೆಲೆ ಕುಸಿತಕ್ಕೆ ಏನು ಕಾರಣ? ಈ ಬಗ್ಗೆ ಬೇಕಾದರೆ ಗಂಟೆಗಟ್ಟಲೆ ಚರ್ಚೆ ಮಾಡೋಣ. ಕೇಂದ್ರ ಸರ್ಕಾರಗಳು ಕೃಷಿ ಉತ್ಪನ್ನವನ್ನು ಆಮದು ಮಾಡಿಕೊಂಡಿದ್ದು, ಈ ದೇಶದ ಕೃಷಿ ಉತ್ಪನ್ನಗಳ ಬೆಲೆ ಕುಸಿಯಲು ಪ್ರಮುಖ ಕಾರಣವೆಂದು ನಾನು ಹೇಳುತ್ತೇನೆ. ಇದನ್ನು ಇವತ್ತು ಅಥವಾ ನೆನ್ನೆ ಮಾಡಿದರೆ ಎನ್ನುವ ಬಗ್ಗೆ ಇವತ್ತೆಲ್ಲಾ ಬೇಕಾದರೆ ಚರ್ಚೆ ಮಾಡಿ ಎಂದರೆ ಮಾತನಾಡುತ್ತೇನೆ ಆದರೆ ಸಮಯವಿಲ್ಲ. ನ್ಯಾಷನಲೈಸೇಷನ್, ಗ್ಲೋಬಲೈಸೇಷನ್, ಲಿಬರಲೈಸೇಷನ್, ಡಬ್ಲ್ಯು.ಟಿ.ಓ., ಗ್ಯಾಟ್ ಇವೆಲ್ಲವು ವಾಜಪೇಯಿಯವರು ಅಧಿಕಾರಕ್ಕೆ ಬಂದ ತಕ್ಷಣ ಬಂದವುಗಳೆಂದು ಹೇಳುವಷ್ಟು ದಡ್ಡನಲ್ಲ ಅಥವಾ ಅವಿವೇಕಿಯೂ ಅಲ್ಲ. Yes, it was introduced in 1970, seriously considered in 1990 and started implementing in 1991. -- ಆದರೆ ಕಾಂಗ್ರೆಸ್ ಸರ್ಕಾರ 1991ರಲ್ಲಿ ಏನು ಮಾಡಿದರೆಂದರೆ they brought liberalisation. ಕೆಲವು ವಸ್ತುಗಳನ್ನು ಈ ರಾಷ್ಟ್ರಕ್ಕೆ ತರಿಸಲಿಕ್ಕೆ ಒಂದು ಅವಕಾಶವನ್ನು ಮಾಡಿಕೊಟ್ಟರು. ಅದರೊಳಗೆ ಏನು ಮಾಡಿದರು ಎಂದರೆ major agricultural produce except silk were included in the negative list.

ಲಿಬರಲೈಸೇಷನ್, ಗ್ಲೋಬಲೈಸೇಷನ್ ಇವೆಲ್ಲ ಆದ ಮೇಲೆ ಸಂಪೂರ್ಣವಾಗಿ ಯಾವ ವಸ್ತುವನ್ನಾದರೂ ಎಷ್ಟು ಬೇಕಾದರೂ ಈ ದೇಶಕ್ಕೆ ತರುವಂಥ ಸ್ವಾತಂತ್ರ್ಯ ಯಾರಿಗೂ ಇರಲಿಲ್ಲ. ಆದರೆ ಆ ನೆಗಟೀವ್ ಲಿಸ್ಟ್‌ನ್ನು ತೆಗೆದು 740 ವಸ್ತುಗಳ ಪಟ್ಟಿಯನ್ನು ಲಿಬರಲೈಸ್ ಮಾಡಿ, ಆಮದು ಮಾಡುವುದಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಅಲ್ಪ ಸ್ವಲ್ಪ ಜೀವ ಇದ್ದಂಥ ರೈತರ ಜೀವನವನ್ನು ನಾಶ ಮಾಡಿದ್ದು ಈ ವಾಜಪೇಯಿಯವರ ಸರ್ಕಾರವಾಗಿದೆ. ನಮ್ಮ ದೇಶದಲ್ಲಿ ಉತ್ಪಾದನೆಯಾಗುವ ಸಾವಿರಾರು ಕೋಟಿ ರೂಪಾಯಿಗಳ ವೆಚ್ಚದ ಸಕ್ಕರೆ ಇಲ್ಲಿ ಕೊಳೆಯುತ್ತಾ ಇದೆ. ಆದರೂ ಹೊರದೇಶದಿಂದ ಸಕ್ಕರೆಯನ್ನು ಆಮದು ಮಾಡಿಕೊಳ್ಳುತ್ತಾರೆ. ನಾವು ಬೆಳೆಯುತ್ತಿರುವ ರೇಷ್ಮೆಗೆ ಸರಿಯಾದ ಮಾರುಕಟ್ಟೆ ವ್ಯವಸ್ಥೆಯಿಲ್ಲ. ಆದರೂ ಚೈನಾ ದೇಶದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಾರೆ. ನಮ್ಮಲ್ಲಿ ಬೆಳೆಯುವಂಥ ಟಮಟೊ ಹಣ್ಣಿಗೆ ಕೆ.ಜಿ. ಒಂದಕ್ಕೆ 25 ರೂಪಾಯಿಗಳ ಖರ್ಚು. ಆದರೆ ಅದನ್ನು 25 ಪೈಸೆಗೆ ಮಾರುವಂಥ ಪರಿಸ್ಥಿತಿ ಇರುವಾಗ ಇದನ್ನು ಸಹ ಹೊರದೇಶದಿಂದ ಆಮದು ಮಾಡಿಕೊಳ್ಳುತ್ತಾರೆ. ಆದ್ದರಿಂದ ಇವತ್ತು ಬೆಳೆ ಕೆಡುವುದಕ್ಕೆ ಮತ್ತು ಬೆಲೆ

ಇಳಿದಿರುವುದಕ್ಕೆ ಎರಡು ಕಾರಣಗಳನ್ನು ವಿಶ್ಲೇಷಣೆ ಮಾಡಿದಾಗ, ಆಗುವಂಥ ಬೆಳೆಗೆ ಬೆಲೆ ಕಡಿಮೆಯಾಗಿ ರೈತರು ಈ ದುಸ್ಥಿತಿಗೆ ಬರಲಿಕ್ಕೆ ಮುಖ್ಯ ಕಾರಣ ಕೇಂದ್ರ ಸರ್ಕಾರದ ಆಮದು ನೀತಿಯೇ ಮುಖ್ಯ ಕಾರಣ ಎನ್ನುವಂಥ ಮಾತನ್ನು ನಾನು ಬಹಳ ಹಿಂದಿನಿಂದಲೇ ಹೇಳಿದ್ದೇನೆ. ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ಕೇಂದ್ರದಲ್ಲಿ ವಾಣಿಜ್ಯ ಸಚಿವರಾಗಿದ್ದಾಗ ಅವತ್ತೇ ನಾನು "ಭಾರತ ವ್ಯವಸಾಯ ಕ್ಷೇತ್ರವನ್ನು ನೀವು ನಾಶ ಮಾಡುತ್ತಿದ್ದೀರಿ" ಎಂದು ಕಾಗದ ಬರೆದಿದ್ದೆ. ಆದ್ದರಿಂದ ಇವತ್ತು ರಾಮಯ್ಯನವರು ಪಕ್ಷಾಂತರ ಮಾಡಿ ಮಂತ್ರಿ ಆಗಲಿಕ್ಕೆ ಆ ಮಾತು ಹೇಳುತ್ತಾ ಇಲ್ಲ. ಮಾನ್ಯ ಅಧ್ಯಕ್ಷರೇ, ಈ ಮಾತನ್ನು ತಮಗೆ ಮತ್ತು ತಮ್ಮ ಮುಖಾಂತರ ನಮ್ಮ ಸ್ನೇಹಿತರಿಗೆ ಹೇಳುತ್ತಿದ್ದೇನೆ. ಈ ಅನುದಾನ ಕೊಡುವುದು, ಬಡ್ಡಿ ಮನ್ನಾ ಮಾಡುವುದು ಇವು ತಾತ್ಕಾಲಿಕ ಪರಿಹಾರವಷ್ಟೇ. ಈ ಬಡ್ಡಿ ಮನ್ನಾ ಮಾಡುವ ವಿಷಯದಲ್ಲಿ ನಮ್ಮ ಹಿರಿಯ ಸದಸ್ಯರಾದಂಥ ಶ್ರೀ ಎಸ್.ಎಸ್. ಪಾಟೀಲರು ಬಹಳ ಪ್ರತಿಪಾದನೆ ಮಾಡುತ್ತಾರೆ. ಅದನ್ನು ನಾನು ತಪ್ಪು ಎಂದು ಹೇಳುವುದಿಲ್ಲ. ಆದರೆ ಅದಕ್ಕೆ ತಾತ್ವಿಕವಾಗಿ ನಾನು ವಿರೋಧಿ. ನಾನು ಹೇಳುವುದೇನೆಂದರೆ, ನೀವು ಬಡ್ಡಿ ಮನ್ನಾ ಮಾಡಬೇಡಿ, ನಿಮ್ಮ ಅನುದಾನ ಬೇಡ, ನಿಮ್ಮ ಅನುಕಂಪ ಬೇಡ, ನಮ್ಮ ರೈತರಿಗೆ ನಿಮ್ಮ ಭಿಕ್ಷೆ ಕೂಡ ಬೇಡ. ಆದರೆ ರೈತ ಬೆಳೆಯುವ ಬೆಳೆಗೆ ಸರಿಯಾದ ಬೆಲೆಯನ್ನು ನೀವು ಕೊಡಿ, ಸಾಕು. ಈ ವಿಚಾರದಲ್ಲಿ ಹಲವಾರು ಸಲ ಈ ಸದನದಲ್ಲಿ ನಾನು ಮಾತನಾಡಿದ್ದೇನೆ.
Fix floor price and also ceiling price, if necessary, ಆದರೆ ನೀವು ಮಾಡಲಿಲ್ಲ.

ಮಾಲಿಕ್ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರಮಟ್ಟದಲ್ಲಿ ಕಮಿಟಿಯನ್ನು ಮಾಡಿದರು. ರಾಜ್ಯಮಟ್ಟದಲ್ಲಿ ಚರ್ಚೆಯಾಯಿತು. ಕೃಷಿ ಉತ್ಪನ್ನಗಳಿಗೆ ಕನಿಷ್ಠ ಬೆಲೆಯನ್ನು ನಿಗದಿ ಮಾಡುವಂಥ ಪ್ರಾಮಾಣಿಕವಾದ ಪ್ರಯತ್ನ ಈ ರಾಷ್ಟ್ರದಲ್ಲಿ ಎಲ್ಲೂ ನಡೆಯಲಿಲ್ಲ. ಕೇಂದ್ರದಲ್ಲಿ ಬಿ.ಜೆ.ಪಿ. ಸರ್ಕಾರ ಇದ್ದಾಗಲೂ ನಡೆಯಲಿಲ್ಲ, ಕಾಂಗ್ರೆಸ್ ಸರ್ಕಾರ ಇದ್ದಾಗಲೂ ನಡೆಯಲಿಲ್ಲ, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಸರ್ಕಾರ ಇದ್ದಾಗಲೂ ಕನಿಷ್ಟ ಬೆಲೆಯನ್ನು ನಿಗದಿ ಮಾಡುವಂಥ ಪ್ರಯತ್ನ ನಡೆಯಲಿಲ್ಲ.

ಸುಮ್ಮನೆ ಏನೋ ಲಘುವಾಗಿ ಮಾತನಾಡುವುದರಿಂದ ಈ ಸಮಸ್ಯೆ ಪರಿಹಾರ ವಾಗುವುದಿಲ್ಲ. You fix the floor price. You establish a mechanism which can automatically take care of market forces.

ಈ ದೇಶದಲ್ಲಿ ಯಾವ ಯಾವುದಕ್ಕೋ ಸಾವಿರ ಕೋಟಿ ರೂಪಾಯಿಗಳ ಲೆಕ್ಕ ಹೇಳುವುದಾದರೆ, ಆವರ್ತ ನಿಧಿ ಎಂದು ಕೇವಲ 75 ಕೋಟಿ ರೂಪಾಯಿ ಇದಕ್ಕೆ ಏಕೆ? ಬೇಡವೇ ಬೇಡ. ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ ಹೀಗೆ ಎಲ್ಲರೂ ಸೇರಿ ಭಾರತ ದೇಶದಲ್ಲಿ ಸಾವಿರಾರು ಕೋಟಿ ರೂಪಾಯಿಗಳ ಒಂದು ನಿಧಿಯನ್ನು ಸ್ಥಾಪನೆ ಮಾಡಲಿ.

ರೈತರ ಕಷ್ಟಕಾರ್ಪಣ್ಯಗಳ ಬಗ್ಗೆ ಮತ್ತು ಗ್ರಾಮೀಣ ಜನರ ಬದುಕಿನ ಬಗ್ಗೆ ಮತ್ತು ಅವರ ದುಃಖ ದುಮ್ಮಾನಗಳ ಬಗ್ಗೆ ಅಲ್ಲಿಂದ ಬಂದ ನಮಗೆ ಗೊತ್ತಿರುತ್ತದೆ. ಆದರೆ ಇದು ಮುಂದಿನ ಜನಾಂಗದವರಿಗೆ ಗೊತ್ತಿಲ್ಲ. ಇದು ನಿಜವಾಗಿಯೂ ನಮ್ಮ ನಡವಳಿಕೆಗಳ ಮೇಲೆ ಪರಿಣಾಮ ಬೀರುತ್ತದೆ. ಇವತ್ತಿನ ದಿವಸ ಯಾವುದೊಂದು ಆಡಳಿತ ಪಕ್ಷದಲ್ಲಿದ್ದೇವೆ ಎನ್ನತಕ್ಕಂಥ ಕಾರಣಗಳಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಒಂದು ಪರಿಸ್ಥಿತಿಯನ್ನು ನಾವು ಮೆಚ್ಚುಕೊಳ್ಳುವುದಾಗಲಿ ಅಥವಾ ಪ್ರತಿಪಾದನೆ ಮಾಡುವುದಾಗಲಿ ಅಥವಾ ಇದರಿಂದ ಖುಷಿ ಪಡುವ ಕೆಟ್ಟ ಮನಸ್ಥಿತಿ ನಮ್ಮದಲ್ಲ. ಆತ್ಮಹತ್ಯೆ ಸಂದರ್ಭದಲ್ಲಿ ಜನರ ನಾನಾ ವಿಧವಾದ, ವಿಚಿತ್ರ ಸ್ವಭಾವಗಳನ್ನು ಕಂಡಂಥ ನನಗೆ ಒಂದು ಅನುಮಾನ ಬರುತ್ತದೆ. ಅದೇನೆಂದರೆ, ಮನುಷ್ಯ ಎಷ್ಟು ಕೆಡಬಾರದಾಗಿತ್ತೋ ಅದಕ್ಕಿಂತ ಹೆಚ್ಚಿಗೆ ಕೆಟ್ಟಿದ್ದಾನೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಇನ್ನು ಏನು ಮಾಡುವುದಕ್ಕೆ ಆಗುವುದಿಲ್ಲ. ರೈತ ಸತ್ತೆಸಾಯುತ್ತಾನೆ ಎನ್ನುವ ಪರಿಸ್ಥಿತಿ ಇದ್ದಾಗ ಆತನ ಬಾಯಿಗೆ ವಿಷ ತುರುಕಿ, ವಿಷ ಕುಡಿದು ಸತ್ತನೆಂದು ಸರ್ಟಿಫಿಕೇಟ್ ಪಡೆದುಕೊಂಡು, ಹಣ ಪಡೆದುಕೊಂಡಿರುವ ಸ್ನೇಹಿತರು ನಮ್ಮಲ್ಲಿ ಇದ್ದಾರೆ. ಇವತ್ತಿನ ದಿವಸ ಹಣಕ್ಕಾಗಿ ಮತ್ತು ಬದುಕಿಗಾಗಿ ಜನರು ಅನುಸರಿಸುವ ವಿಧಿವಿಧಾನಗಳನ್ನು ನೋಡಿದಾಗ ಈ ರೀತಿಯ ಘಟನೆಗಳು ಆಗುವುದಿಲ್ಲವೆಂದು ನಾವು ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಸರ್ಕಾರ ಇದರ ಬಗ್ಗೆ ಒಂದು ನಿಲುವನ್ನು ತೆಗೆದುಕೊಂಡಿದೆ. ಯಾರೋ ಒಬ್ಬ ವಿಷ ಕುಡಿದು ಸತ್ತಾಗ, ವಿಚಾರಣೆ ಮಾಡದೇ ಅಥವಾ ಆತ ನಿಜವಾಗಿಯೂ ಬೆಲೆ ಕಡಿಮೆ ಆಗಿರುವುದರಿಂದಲೇ ಸತ್ತನೆಂದು ಪುರಾವೆ ಇಲ್ಲದೆ ಆತನಿಗೆ ಪರಿಹಾರ ಕೊಡುವಂಥ ಪದ್ಧತಿ ಸರಿಯಲ್ಲ. ಆತನಿಗೆ ಪರಿಹಾರ ಕೊಡುವುದಕ್ಕಿಂತ ಮೊದಲು ವಿಚಾರಣೆ ಮಾಡಿ ಕೊಡಬೇಕೆಂದು ಸರ್ಕಾರ ನಿಲುವನ್ನು ತೆಗೆದುಕೊಂಡಿದೆ. ನಾನು ಈಗಾಗಲೇ ಹೇಳಿದ ಪ್ರಕಾರ ರೈತರ ದುಸ್ಥಿತಿ ಮತ್ತು ಕೆಟ್ಟ ಪರಿಸ್ಥಿತಿಗೆ ಬೆಲೆ ಇಳಿಕೆಯೇ ಮುಖ್ಯ ಕಾರಣ. ಇದಕ್ಕೆ ಬೇರೆ ಯಾವ ಅನುಮಾನವೇ ಇಲ್ಲ. ಇವತ್ತಿನ ದಿವಸ 5 ಸಾವಿರ ತೆಂಗಿನಕಾಯಿ ಮಾರಿದರೆ ಕೇವಲ 7.5 ಸಾವಿರ ರೂಪಾಯಿ ಮಾತ್ರ ಕೈಗೆ ಸಿಗತಕ್ಕಂಥ ಪರಿಸ್ಥಿತಿ ಬಂದಿದೆ.

ಒಂದೇ ಸಾರಿ ಫ್ರೀ ಟ್ರೇಡ್ ನಮ್ಮ ದೇಶದಲ್ಲಿ ಪ್ರಾರಂಭವಾಗಲಿಲ್ಲ. ಲಿಬರಲೈಸೇಷನ್, ಗ್ಲೋಬಲೈಸೇಷನ್ ಮತ್ತು ಗ್ಯಾಟ್ ಇವೆಲ್ಲವೂ ಇದ್ದರೂ ಯಾವುದೇ ಒಂದು ದೇಶದಿಂದ ಯಾವ ವಸ್ತುವನ್ನು ಎಷ್ಟು ಬೇಕಾದರೂ ನಮ್ಮ ದೇಶಕ್ಕೆ ತರಿಸಿಕೊಳ್ಳುವುದಕ್ಕೆ ಸ್ವಾತಂತ್ರ ಇರಲಿಲ್ಲ. I agree for the sake of arguments. It is true that the Congress Government has taken decision to liberalise trade in 1991. ಆದರೆ, ಈಗ ಬಂದಂಥ ಕೇಂದ್ರ ಸರ್ಕಾರ ಇದನ್ನು ಸಂಪೂರ್ಣವಾಗಿ ತೆಗೆದು ಹಾಕಿ, ಯಾವ ವಸ್ತುವನ್ನಾದರೂ ಯಾವುದೇ ರಾಷ್ಟ್ರದಿಂದ ತರಿಸಿಕೊಳ್ಳುವಂಥ ನೀತಿಯಿಂದ ಭಾರತ ದೇಶದ ಕೃಷಿ ಉದ್ಯಮಗಳು ಮತ್ತು ಕೈಗಾರಿಕೆಗಳ ಮೇಲೆ ಅತ್ಯಂತ ಕೆಟ್ಟ ಪರಿಣಾಮ ಬೀರಿದೆ. ಕೃಷಿ ಉದ್ಯಮದಲ್ಲಿ ತೊಡಗಿರುವ ರೈತರಿಗೆ

ನಷ್ಟವಾಗುತ್ತಿದೆ. ನಿಮ್ಮ ಸರ್ಕಾರ ಇದ್ದ ಸಂದರ್ಭದಲ್ಲಿ ಇದು ಆಗಿರುವುದರಿಂದ ಇಷ್ಟೆಲ್ಲಾ ತೊಂದರೆಗಳಾಗಿವೆ ಎಂದು ಸದನದಲ್ಲಿ ಸುಮಾರು 99 ಬಾರಿ ಅನೇಕ ಸದಸ್ಯರು ಪ್ರಸ್ತಾಪ ಮಾಡಿರಬಹುದು. But all the successive governments since 1991, are non-Congress Governments headed by different individuals. ನಾನು ಹೇಳಿರುವ ವಾಕ್ಯದಲ್ಲಿ ಏನಾದರು ತಪ್ಪು ಇದ್ದರೆ, ಅದರ ಬಗ್ಗೆ ಯಾರು ಬೇಕಾದರೂ ಪ್ರಶ್ನೆ ಮಾಡಬಹುದು. 1991ರಿಂದ ಇಲ್ಲಿಯವರೆಗೆ ಅಂದರೆ ಒಂದು ದಶಕದವರೆಗೆ ಈ ರಾಷ್ಟ್ರದಲ್ಲಿ ಅಧಿಕಾರ ಮಾಡಿದವರು ಯಾರು? ಕಾಂಗ್ರೆಸ್ ಸರ್ಕಾರದವರು ಅಧಿಕಾರ ಮಾಡಿದ್ದಾರೆಯೆ? ಇದರಿಂದ ಏನು ಪ್ರಯೋಜನವಾಗುವುದಿಲ್ಲವೆಂದು ನಾನು ಪ್ರಾರಂಭದಲ್ಲಿಯೇ ಪ್ರಸ್ತಾಪ ಮಾಡಿದ್ದೆನು. who prevented you people removing the bad decisions that had been taken by the Congress Government?

ಇದಕ್ಕೆ ಕುವೆಂಪುರವರು ಹೇಳುತ್ತಾರೆ, **ಪಂಚಮರ ಶಿಶು ಒಂದು ನೀರಿನಲ್ಲಿ ಮುಳುಗುತಿರೆ ಅದನ್ನು ಮುಟ್ಟಿದರೆ ಧರ್ಮಕ್ಕೆ ವಿರೋಧ ಎನ್ನುವುದಾದರೆ, ಅವರು ಮುಂದಕ್ಕೆ ಹೇಳುತ್ತಾರೆ. ಮನು ಇದನ್ನು ಹೇಳಿರಲಾರನೊ ಅಯ್ಯಯ್ಯೊ. ಅಕಸ್ಮಾತ್ ಇದನ್ನು ಹೇಳಿದ್ದರೆ, ಆ ಮನುಧರ್ಮ ಶಾಸನ ಸುಟ್ಟುಬಿಸಾಡಿ.** ಡಾ. ಮನಮೋಹನ್ ಸಿಂಗ್‌ರವರು ಕೆಟ್ಟಪದ್ಧತಿಯನ್ನು ಅನುಸರಿಸಿದ್ದರೆ, ಅವರು ಕೆಟ್ಟ ತೀರ್ಮಾನವನ್ನು ತೆಗೆದುಕೊಂಡಿದ್ದರೆ, ಈ 10 ವರ್ಷ ಆಡಳಿತವನ್ನು ಮಾಡಿದಂಥ ಕಾಂಗ್ರೆಸ್ಸೇತರ ಸರ್ಕಾರಗಳು ಆ ತೀರ್ಮಾನವನ್ನು ಸುಟ್ಟು ಯಮುನಾ ನದಿಗೆ ಬಿಸಾಕಲು ಯಾರು ಅಡ್ಡಿ ಬಂದಿದ್ದರು? ನಿಮ್ಮ ಸರ್ಕಾರವೆ ಹೊಣೆ, ರೈತರು ಆತ್ಮಹತ್ಯೆ ಮಾಡಿಕೊಳ್ಳಲು ಡಾ. ಮನಮೋಹನ್ ಸಿಂಗ್‌ರವರು ತೆಗೆದುಕೊಂಡಿರುವ ತೀರ್ಮಾನದಿಂದ ಎನ್ನುವ ಆರೋಪವನ್ನು ಮಾಡುವುದನ್ನು ಬಿಟ್ಟು, ಇದಕ್ಕೆ ಏನು ಪರಿಹಾರವನ್ನು ಕಂಡುಕೊಳ್ಳಬೇಕು ಎನ್ನುವುದರ ಬಗ್ಗೆ ಚರ್ಚೆ ಮಾಡುವುದು ಉತ್ತಮವೆಂದು ನಮ್ಮ ಸ್ನೇಹಿತರಲ್ಲಿ ಹೇಳುವುದಕ್ಕೆ ನಾನು ಇಚ್ಛೆ ಪಡುತ್ತೇನೆ. ಬೆಳಿಗ್ಗೆ ಒಂದು ಮಾತನ್ನು ಹೇಳಿದರು, ಇದು ರಾಜಕೀಯದ ಒಂದು ಚದುರಂಗದಾಟ, ಯಾವುದು ರಾಜಕೀಯದ ಚದುರಂಗದಾಟ? ನಾನು ಒತ್ತಿ ಒತ್ತಿ ಹೇಳಬೇಕಾಗುತ್ತದೆ. ರೈತರಿಗೆ ಬಡ್ಡಿ ಮನ್ನಾ ಮಾಡುವುದು ಬೇಡ, ನಿಮ್ಮ ಅನುದಾನ ಬೇಡ. ಮಾನ್ಯ ಎಸ್.ಎಸ್. ಪಾಟೀಲರೊಬ್ಬರಾದರು ಇದನ್ನು ಒಪ್ಪಿಕೊಳ್ಳುತ್ತಾರೆ. ನಿಮ್ಮ ಭಿಕ್ಷೆ ನಮ್ಮ ರೈತರಿಗೆ ಬೇಡ, ನಾವು ನಿಮ್ಮನ್ನು ಏನೂ ಕೇಳುವುದಿಲ್ಲ. ನಾವು ಬೆಳೆದಂಥ ರೇಷ್ಮೆಗೆ ಒಳ್ಳೆಯ ಬೆಲೆಯನ್ನು ಕೊಡಿ, ನಮ್ಮ ಟೊಮೊಟೊಗೆ ನ್ಯಾಯವಾದ ಬೆಲೆಯನ್ನು ಕೊಡಿ ಎಂದು ನಾವು ಕೇಳುತ್ತೇವೆ. ಅದನ್ನು ಕೊಟ್ಟರೆ ನಮಗೆ ನೀವು ಇನ್ನು ಏನನ್ನೂ ಕೊಡಬೇಡಿ. ರಾಜಕೀಯದ ಚದುರಂಗದಾಟವನ್ನು ಆಡಬೇಡಿ ಎಂದು ನಮ್ಮ ಸ್ನೇಹಿತರು ಹೇಳಿದರು. ಆಮದನ್ನು ನಿಲ್ಲಿಸುವುದಕ್ಕೆ ಆಗುತ್ತದೋ ಇಲ್ಲವೋ ಎನ್ನುವುದನ್ನು ಆಮೇಲೆ ನೋಡೋಣ. ಮಾನ್ಯ ವಿರೋಧ ಪಕ್ಷದ ನಾಯಕರಿಗೆ ಹಾಗೂ ಅವರ ಉಪ ನಾಯಕರಿಗೆ ನಾನು

ಹೋದ ಸಲ ಮಾತನಾಡುತ್ತಾ ಇರುವ ಸಂದರ್ಭದಲ್ಲಿ ಅದನ್ನು ಕಳುಹಿಸಿಕೊಟ್ಟಿದ್ದೇನೆ. ಮ್ಯಾಕ್ಸಿಮಮ್ ಇಂಪೋರ್ಟ್ ಡ್ಯೂಟಿ ಅದನ್ನು ಇವರು ಮಾಡುತ್ತಿಲ್ಲ. ನಾವು ಅನುದಾನವನ್ನು ಕೊಟ್ಟಿದ್ದೇವೆ, ನೀವು ಏನೂ ಕೊಡದೆ, ನಿಮ್ಮ ಅನುದಾನವನ್ನು ನಿಲ್ಲಿಸಿಬಿಡಿ. 300 ಪರ್ಸೆಂಟ್ ಆಯಿಲ್ ಸೀಡ್ಸ್ ಮೇಲೆ ತೆರಿಗೆ ಹಾಕುವುದು, ಕೊನೆಯ ಪಕ್ಷ ಇದನ್ನಾದರೂ ಮಾಡಿಸಿ. ನಾನು ಇದನ್ನು ಯಾವ ಪಕ್ಷದ ಮೇಲೆ ದೂಷಣೆ ಮಾಡುವುದಕ್ಕೋ ಅಥವಾ ನಿಮ್ಮ ಮೇಲಿನ ಆಕ್ರೋಶಕ್ಕೊ, ಹೊಟ್ಟೆ ಕಿಚ್ಚಿಗೋ ಅಥವಾ ಉದ್ವೇಗಕ್ಕೋ ಇಲ್ಲಿ ಹೇಳುತ್ತಿಲ್ಲ. ಪರಿಸ್ಥಿತಿಯನ್ನು ಸುಧಾರಿಸ ಬೇಕಾದರೆ ಬೇಕಾದ ಮಾರ್ಗಗಳನ್ನು ನಾವು ಕಂಡುಹಿಡಿಯಬೇಕು. ಒಂದು ಉತ್ತಮವಾದ ಮಾರ್ಗ ಯಾವುದೆಂದರೆ, the Central Government can levy maximum import duty to control and to contain import of the agricultural produce liberally.

ಅಷ್ಟು ಮಾಡಿಸಿ ನೀವು ಪುಣ್ಯವನ್ನು ಕಟ್ಟಿಕೊಳ್ಳಿ. ನೀವು ನಮ್ಮನ್ನು, ನಾವು ನಿಮ್ಮನ್ನು ತೆಗಳುವುದು ಬೇಡ. ನಮ್ಮಿಬ್ಬರ ಕಿತ್ತಾಟದಲ್ಲಿ ಕೂಸು ಬಡವಾಗುವುದು ಬೇಡ. ನಾನು ಅದಕ್ಕಾಗಿ ನಮ್ಮ ಸ್ನೇಹಿತರಲ್ಲಿ ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತೇನೆ. ನಿಮ್ಮ ಕೇಂದ್ರ ಸರ್ಕಾರದ ವತಿಯಿಂದ ರಾಜ್ಯದ ನಾಡಿನ ರೈತರಿಗೆ ಉತ್ತಮವಾಗಬೇಕೆನ್ನುವ ಅನಿಸಿಕೆ ನಿಮಗೆ ಇದ್ದರೆ, ಮಾಕ್ಸಿಮಮ್ ಇಂಪೋರ್ಟ್ ಡ್ಯೂಟಿ ಏನಿದೆ, ಅದನ್ನು ಹಾಕಿಸುವುದಕ್ಕೆ ಅವರು ಮಾಡಿಕೊಡಬೇಕೆಂದು ನಾನು ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಬರಗಾಲ ಪರಿಸ್ಥಿತಿಯನ್ನು ನಿಭಾಯಿಸಲು ಸರ್ಕಾರ ವಿಫಲವಾಗಿದೆ. ನಾನು ಇದರ ಬಗ್ಗೆ ಆಗಲೇ ಹೇಳಿದ್ದೇನೆ. ಬರದ ಛಾಯೆ ಈಗ ತಾನೆ ಆರಂಭವಾಗಿದೆ. ಜಿಲ್ಲಾಧಿಕಾರಿಗಳು ಸಭೆ ಕರೆದಿಲ್ಲ, ಜಿಲ್ಲಾ ಉಸ್ತುವಾರಿ ಮಂತ್ರಿಗಳು ಜಿಲ್ಲೆಗೆ ಹೋಗಿ ಸಭೆ ಮಾಡಿಲ್ಲ. ನಾವು ಯಾರನ್ನು ದೂಷಿಸುವುದು. **ದೇಶದಲ್ಲಿ ಇವತ್ತು ರೈತ ಕುಟುಂಬಕ್ಕೆ ಕರೆಯುವ ಹಸು, ಸಮಾಜಕ್ಕೆ ದುಡಿಯುವ ಎತ್ತು,** ರೈತನ ಬಗ್ಗೆ ನಾನು ಬೆಳಿಗ್ಗೆ ಹೇಳಿದೆ. ಒಂದು ನಾಟಕವನ್ನು ಬರೆಸಿ, ಸ್ಪರ್ಧೆ ಏರ್ಪಾಡು ಮಾಡಬೇಕಾಗುತ್ತದೆ. ರೈತರ ಹಿತವನ್ನು ಕಾಪಾಡುವುದಕ್ಕೆ ಒಂದು ನಾಟಕವನ್ನು ಬರೆಸಬೇಕು. ದುಡಿಯುವ ಎತ್ತು, ಅವನ ಕುಟುಂಬಕ್ಕೆ ಒಂದು ಕರೆಯುವ ಹಸು ಎಂದಿನವರೆಗೆ ಹಾಲು ಕರೆಯುತ್ತದೆ ಅಲ್ಲಿಯವರೆಗೆ ಅನ್ನವನ್ನು ಹಾಕುತ್ತಾರೆ. ನಂತರ ಆಚೆಗೆ ಓಡಿಸುತ್ತಾರೆ. ಎಲ್ಲಿಯವರೆಗೆ ರೈತನು ಬೆಳೆ ಬೆಳೆದು ದೇಶಕ್ಕೆ ಆಹಾರವನ್ನು ಕೊಡುತ್ತಾನೋ ಅಲ್ಲಿಯವರೆಗೆ ಎತ್ತಿಗೆ ಹುಲ್ಲು ಹಾಕುತ್ತಾರೆ, ನಂತರ ಅದನ್ನು ತೆಗೆದುಕೊಂಡು ಹೋಗಿ ಕಸಾಯಿಖಾನೆಗೆ ಕೊಡುತ್ತಾರೆ. ಆದ್ದರಿಂದ ಈ ದುಡಿಯುವ ಎತ್ತನ್ನು, ಕರೆಯುವ ಹಸುವನ್ನು ನಮ್ಮ ರಾಜಕೀಯ ಸ್ನೇಹಿತರ ಭಾಷೆಯಲ್ಲಿಯೇ ನಾನು ಹೇಳಿಬಿಡುತ್ತೇನೆ. ಚದುರಂಗದಾಟದ ಗೊಂಬೆಯನ್ನಾಗಿ ಮಾಡಿಕೊಳ್ಳದೆ ಅವನಿಗೆ ನಿಜವಾಗಿ ಸಲ್ಲಬೇಕಾದ ಪರಿಹಾರವನ್ನು ಕಂಡುಹಿಡಿಯಲಿಕ್ಕೆ ಪ್ರಯತ್ನವನ್ನು ಮಾಡೋಣ. ಕೊನೆಯದಾಗಿ ಒಂದು ಮಾತನ್ನು ಹೇಳುತ್ತೇನೆ. ಈ ಚರ್ಚೆ ಯಿಂದ, ಈ ಅನುದಾನಗಳಿಂದ ಬಡ್ಡಿ ಮನ್ನಾ ಮಾಡುವುದರಿಂದ ಯಾವ

ಪರಿಹಾರವನ್ನೂ ನಾವು ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ. ಶಾಶ್ವತ ಪರಿಹಾರವನ್ನು ನಾವು ಕೊಡಬೇಕಾದರೆ ರೈತರಿಗೆ ಮೂಲಭೂತವಾಗಿ ನೀರು ಬೇಕು. ನೀರು ಬೇಕಾದರೆ ಮಳೆ ಬರಬೇಕಾಗುತ್ತದೆ. ಕೃಷಿ ಪ್ರಧಾನವಾದಂಥ ಈ ರಾಷ್ಟ್ರದಲ್ಲಿ, ಒಂದೊಂದು ತೊಟ್ಟು, ಮಳೆ ನೀರನ್ನು ಶೇಖರಿಸಿ ಇಟ್ಟುಕೊಳ್ಳುವಂಥ ಶಾಶ್ವತವಾದ ಪರಿಹಾರ ಬೇಕಾಗುತ್ತದೆ. ಭೂಮಿಯ ಮೇಲಿರುವ ಒಂದು ಕಣ ಮಣ್ಣನ್ನು ಅಲುಗದಂತೆ, ಒಂದು ಕಾರ್ಯಕ್ರಮವನ್ನು ಹಾಕಿಕೊಂಡು, ಶಾಶ್ವತವಾದ ಪರಿಹಾರವನ್ನು ರೈತನಿಗೆ ಒದಗಿಸಿಕೊಡುವುದಕ್ಕೆ ಕ್ರಮ ಕೈಗೊಳ್ಳುವ ದಿಸೆಯಲ್ಲಿ ನಾವು ಕೆಲಸವನ್ನು ಮಾಡೋಣವೆಂದು ಹೇಳಿ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

○

**(17-7-2001)**

# ಕೃಷಿಕನ ಕಣ್ಣೀರಿನ ಕಥೆ

ಸನ್ಮಾನ್ಯ ಅಧ್ಯಕ್ಷರೇ, ರಾಜ್ಯದಲ್ಲಿ ಮಳೆ ಹೆಚ್ಚಾಗಿ ತುಂಬಾ ಹಾನಿಯಾಗಿದೆ. ಈ ಪ್ರಕೃತಿ ಕೋಪದಿಂದ ಬೆಳೆ ನಷ್ಟವಾಗಿ ಪ್ರಾಣಹಾನಿ ಆಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ರೈತನ ಭೂಮಿಗೆ ನೀರು ಒದಗಿಸುವಂತಹ ಕೆರೆಕಟ್ಟೆಗಳು ಕೆಲವು ಒಡೆದು ಹೋಗಿವೆ. ಕೆಲವು ಹಾನಿಗೊಂಡಿವೆ. ತಿರುಗಾಡುವ ರಸ್ತೆಗಳು ಕೂಡ ಸಾಕಷ್ಟು ಕೆಟ್ಟು ಹೋಗಿವೆ. ಎಲ್ಲಾ ಸ್ನೇಹಿತರು ಒಂದು ಒಪ್ಪಂದಕ್ಕೆ ಬರಬೇಕಾಗುತ್ತದೆ. ಇದು ಮಾನವ ನಿರ್ಮಿತವಾದಂಥ ಅಥವಾ ಆಡಳಿತದ ನಿರ್ಲಕ್ಷ್ಯದಿಂದ ಆದಂತಹ ಹಾನಿಯಲ್ಲ. ಇದು ಪ್ರಕೃತಿ ವಿಕೋಪದಿಂದ ಆದಂತಹ ಹಾನಿ ಎನ್ನುವುದನ್ನು ಎಲ್ಲರೂ ಒಪ್ಪಿಕೊಂಡರೂ ಇರುವಂತಹ ತಕರಾರು ಏನೆಂದರೆ, ಈ ಹಾನಿಯನ್ನು ಸರಿ ಮಾಡುವುದರಲ್ಲಿ ಸರ್ಕಾರ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಣೆ ಮಾಡಿಲ್ಲ. ಬಹಳ ದೊಡ್ಡ ಅಪವಾದ ಎಂದರೆ, ನಮ್ಮ ಕಂದಾಯಮಂತ್ರಿಗಳು ಮಾಹಿತಿಯನ್ನು ಸಕಾಲದಲ್ಲಿ ತರಿಸುವುದರಲ್ಲಿ ವಿಫಲರಾಗಿದ್ದಾರೆನ್ನುವುದು . ನಾನು ಇಲ್ಲಿ ಕುಳಿತುಕೊಂಡು ಎಲ್ಲರೂ ಮಳೆ ಹಾನಿಯ ಬಗ್ಗೆ ಮಾತನಾಡುವಾಗ ನೋಟ್ ಮಾಡಿಕೊಂಡಿದ್ದೇನೆ. ಎಲ್ಲರ ವಾದ ಏನೆಂದರೆ , ಕಂದಾಯ ಮಂತ್ರಿಗಳು ಮೂರು ದಿವಸಗಳಲ್ಲಿ ಮಾಹಿತಿಯನ್ನು ತರಿಸಿಕೊಳ್ಳಲಿಲ್ಲ. ಇದು ವಿಫಲತೆ ಎನ್ನುವಂತಹ ಅಪವಾದವನ್ನು ಸರ್ಕಾರದ ಮೇಲೆ ಮಾಡಿದ್ದಾರೆ. ಈ ಹಾನಿಗೆ, ಈ ನಷ್ಟಕ್ಕೆ ಪ್ರಕೃತಿಯ ವಿಕೋಪವೇ ಕಾರಣ ಹೊರತು ಮನುಷ್ಯನಿಂದ ಅಲ್ಲ ಅಥವಾ ಸರ್ಕಾರದ ಆಡಳಿತ ಯಂತ್ರದ ಕಾರ್ಯವೈಖರಿಯ ವಿಫಲತೆಯಿಂದ ಅಲ್ಲ ಎನ್ನುವಂತಹ ವಿಷಯವನ್ನು ಎಲ್ಲಾ ನನ್ನ ಸ್ನೇಹಿತರು ಒಪ್ಪಿಕೊಳ್ಳುತ್ತಾರೆ.

ವಿರೋಧಪಕ್ಷದ ನಾಯಕರು ಮತ್ತು ವಿರೋಧಪಕ್ಷದ ನನ್ನ ಸ್ನೇಹಿತರು ಮಾತನಾಡುತ್ತಾ, ಈವೊಂದು ಪ್ರಕೃತಿ ವಿಕೋಪ ಆದಮೇಲೆ ಅಧಿಕಾರಿಗಳು ಸ್ಥಳಕ್ಕೆ ಹೋಗಿಲ್ಲ. ಮಂತ್ರಿಗಳು ಯಾರೂ ಸ್ಥಳಕ್ಕೆ ಹೋಗಿಲ್ಲವೆನ್ನುವಂತಹ ಮಾತನ್ನು ಹೇಳಿದ್ದಾರೆ. ಇದನ್ನು ನಾನು ಸಂಪೂರ್ಣವಾಗಿ ಅಲ್ಲಗಳೆಯುವುದಕ್ಕೆ ಇಷ್ಟಪಡುತ್ತೇನೆ. ತಮಗೆ ಒಂದು ಉದಾಹರಣೆಯನ್ನು ಹೇಳಬೇಕಾದರೆ, ನನ್ನ ಕ್ಷೇತ್ರದಲ್ಲಿ 60 ವರ್ಷಗಳ ಹಿಂದೆ ಕಟ್ಟಿದಂತಹ ಮಾರ್ಕೋನಹಳ್ಳಿ ಅಣೆಕಟ್ಟು ಇದೆ. ಈ ಅಣೆಕಟ್ಟಿನ ಗೇಟುಗಳನ್ನು 60 ವರ್ಷಗಳಿಂದ ಬದಲಾವಣೆ ಮಾಡದೆ ಆ ಗೇಟುಗಳು ತುಕ್ಕು ಹಿಡಿದು ನೀರು ಹೊರಗಡೆ ಬಾರದೆ ಇರುವಂತಹ ಪರಿಸ್ಥಿತಿ ಇತ್ತು. ನಮ್ಮ ಮುಂದೆ ಇದ್ದಂತಹ ಪ್ರಶ್ನೆ, ಅಣೆಕಟ್ಟನ್ನು ಉಳಿಸಿಕೊಳ್ಳಬೇಕೇ ಅಥವಾ ನೀರನ್ನು ಉಳಿಸಿಕೊಳ್ಳಬೇಕೇ ಎನ್ನುವ ಪ್ರಶ್ನೆ ಇದ್ದಾಗ , ರಾತ್ರಿ ಒಂದೂವರೆ ಗಂಟೆಯಲ್ಲಿ ರಾಜ್ಯದ ಮುಖ್ಯಮಂತ್ರಿಗಳು ಆ ಕೆಲಸಕ್ಕೆ ಸ್ಪಂದಿಸಿದ್ದಾರೆ. ನಾನು ಹೋಗಿ ಅವರ ಮನೆಯ ಬಾಗಿಲನ್ನು ತಟ್ಟಲ್ಲ. ದೂರವಾಣಿ ಮಾಡಿದ್ದಕ್ಕೆ ರಾತ್ರಿ ಒಂದೂವರೆ ಗಂಟೆಯಲ್ಲಿ ಎದ್ದು ಅಧಿಕಾರಿಗಳಿಗೆ ನಿರ್ದೇಶನವನ್ನು ಕೊಟ್ಟಿದ್ದಾರೆ. ಮಂಡ್ಯ

ಜಿಲ್ಲೆಯ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆಯ ಪೋಲಿಸ್ ವರಿಷ್ಠಾಧಿಕಾರಿಗಳು ರಾತ್ರಿ 12-30 ಗಂಟೆಯಲ್ಲಿ ಸ್ಥಳಕ್ಕೆ ಬಂದಿದ್ದಾರೆ. ತುಮಕೂರು ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲೆಯ ಪೋಲಿಸ್ ವರಿಷ್ಠಾಧಿಕಾರಿಗಳು ಗಾತ್ರಿ ಮೂರು ಗಂಟೆಯ ಹೊತ್ತಿಗೆ ಸ್ಥಳವನ್ನು ತಲುಪಿದ್ದಾರೆ. ರಾಜ್ಯದ ನಾಲ್ಕು ಜನ ಮುಖ್ಯ ಇಂಜಿನಿಯರುಗಳು ಸ್ಥಳವನ್ನು ತಲುಪಿ ಮಾರ್ಕೋನಹಳ್ಳಿ ಅಣೇಕಟ್ಟನ್ನು ಉಳಿಸಿಕೊಳ್ಳುವುದಕ್ಕೆ, ಏನೇನು ಕೆಲಸಗಳನ್ನು ಮಾಡಬೇಕಾಗಿತ್ತೋ ಆ ಎಲ್ಲಾ ಕೆಲಸಗಳನ್ನು ಮಾಡಿದ್ದಾರೆ. ನಮ್ಮ ಕಂದಾಯ ಮಂತ್ರಿಗಳು ಸ್ಥಳಕ್ಕೆ ಬಂದು ಮಾಡಬೇಕಾದ ಕೆಲಸ ಮಾಡಿದ್ದಾರೆಂದು ಹೇಳುವ ಭ್ರಮೆ ನನಗೆ ಇಲ್ಲ. ಯಾರೂ ಹೋಗಿಲ್ಲ, ಯಾರೂ ಕೆಲಸ ಮಾಡಿಲ್ಲವೆಂದು ಸಾರ್ವತ್ರಿಕವಾದ ಆಪಾದನೆ ಸಲ್ಲದು ಎನ್ನುವುದಕ್ಕೆ ಈ ಉದಾಹರಣೆ ಹೇಳಿದ್ದೇನೆ.

ಪಕೃತಿ ವಿಕೋಪಕ್ಕೆ , ಇಂತಹ ಹಾನಿಗೆ ಕಾರಣ ಏನೆಂದರೆ , ಅದಕ್ಕೆ ಉದಾಹಣೆ ಹೇಳ ಬೇಕಾದರೆ, ಮಾರ್ಕೋನಹಳ್ಳಿ ಅಣೆಕಟ್ಟನ್ನು ಕಟ್ಟಿ 60 ವರ್ಷಗಳಾಗಿದೆ. ಕಳೆದ 20 ವರ್ಷಗಳಿಂದ ಅಣೆಕಟ್ಟೆಯ ಗೇಟುಗಳನ್ನು ಬದಲಾವಣೆ ಮಾಡಿಲ್ಲ. ಗೇಟುಗಳು ತುಕ್ಕು ಹಿಡಿದು ಹೋಗಿದೆ. ಇದು 380 ದಿವಸಗಳಲ್ಲಿ ಆದ ಅನಾಹುತ ಅಲ್ಲ. ನನ್ನ ಸ್ನೇಹಿತರಲ್ಲಿ ಪ್ರಾರ್ಥನೆ ಏನೆಂದರೆ, ಒಳ್ಳೆಯ ಕೆಲಸವನ್ನು ಮಾಡಿದಂತಹ ಅಧಿಕಾರಿಗಳನ್ನು ದೂಷಿಸುವುದು ಬೇಡ. ರಾತ್ರಿ ಅನ್ನ-ನೀರು ಇಲ್ಲದೆ, ಸ್ನಾನ ಮಾಡದೆ, ಗಡ್ಡಾ ಬೋಳಿಸದೆ ನಾಲ್ಕಾರು ದಿವಸ ಸ್ಥಳದಲ್ಲಿಯೇ ಇದ್ದು ಸಾಕಾಷ್ಟು ಶ್ರಮವನ್ನು ಪಟ್ಟಿದ್ದಾರೆ. ಈ ಸದನದ ಮೂಲಕ ಆ ಎಲ್ಲ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ನಾನು ಅಭಿನಂದಿಸುತ್ತೇನೆ.

ಆಮೇಲೆ ನನ್ನ ಸ್ನೇಹಿತರು ಒಂದು ಮಾತನ್ನು ಹೇಳಿದರು. ಈ ಅಧಿಕಾರಿಗಳ ಮೇಲೆ ನಿಮ್ಮ ಹಿಡಿತವಿಲ್ಲ. ಅಧಿಕಾರಿಗಳು ಈ ಕಡೆ ಗಮನಹರಿಸುತ್ತಿಲ್ಲವೆಂದು ಹೇಳುವುದು ಸತ್ಯಕ್ಕೆ ದೂರವಾದುದು. ಈ ಎಲ್ಲ ಅಧಿಕಾರಿಗಳು 380 ದಿವಸದೊಳಗೆ ಈ ರಾಜ್ಯಕ್ಕೆ ಬಂದವರಲ್ಲ . ಅಧಿಕಾರಿಗಳು ಕೆಲಸ ಮಾಡುತ್ತಿಲ್ಲವೆನ್ನುವ ಮಾತು ಸಲ್ಲದ ನುಡಿಯಾಗುತ್ತದೆ. ಈ ವಿಚಾರವನ್ನು ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. 1997-98ರಲ್ಲಿ 9 ಕೋಟಿ ರೂಪಾಯಿಗಳ ಔಷಧಿ, 1998-99ರಲ್ಲಿ 16 ಕೋಟಿ ರೂಪಾಯಿಗಳ ಔಷಧಿ, 1999-2000ದಲ್ಲಿ 4 ಕೋಟಿ ರೂಪಾಯಿಗಳ ಔಷಧಿಯನ್ನು ಕೊಂಡು ಹಳ್ಳಿಗಾಡಿನಲ್ಲರತಕ್ಕ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿತ್ತು, ಅದನ್ನು ಮಾಡಲಿಲ್ಲ. ಆ ಮೂರು ವರ್ಷಗಳಲ್ಲಿ 30 ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳ್ಳಿಗಾಡಿನ ಆಸ್ಪತ್ರೆಗಳಿಗೆ ಕಳುಹಿಸದೆ ದೊಡ್ಡ ದ್ರೋಹವನ್ನು ಮಾಡಿದ್ದಾರೆ. ಯಾಕೆ ಅಧಿಕಾರಿಗಳ ಮೇಲೆ ನಿಮ್ಮ ಹಿಡಿತ ಇರಲಿಲ್ಲವೇ? ಅದೇ ಸಾಲಿನಲ್ಲಿ ಕೊಂಡಂತಹ ಔಷಧಿ ಸರ್ಕಾರಿ ಗೋದಾಮಿನಲ್ಲಿ ಕೊಳೆಯುತ್ತಿದೆ. ಈ ಮಾತನ್ನು ನಿಮ್ಮ ವಾದಕ್ಕೆ ನಾನು ಹೇಳುತ್ತಿದ್ದೇನೆ. ಇಂತಹ ಹತ್ತಾರು ಉದಾಹರಣೆಗಳನ್ನು ನಾನು ಕೊಡಬಲ್ಲೆ. ನಾನು ನನ್ನ ವಾದವನ್ನು ಏಕೆ ಹೇಳಿದೆ ಅಂದರೆ, ಅಧಿಕಾರಿಗಳು ಕೆಲಸ ಮಾಡುವುದು, ಕೆಲಸ ಮಾಡದಿರುವುದು, ಅವರ ಕಾರ್ಯವೈಖರಿ,

ಅವರ ನಿಷ್ಕ್ರಿಯತೆ , ದುಷ್ಟತನ, ಅವರ ಭ್ರಷ್ಟತನ ಇವೆಲ್ಲವೂ ಈ ದಿವಸಗಳಲ್ಲಿ ಮಾತ್ರ ಮೂಡಿ ಬಂದಂತಹವುಗಳಲ್ಲ. ನಮ್ಮ ಜೊತೆ ಜೊತೆಯಲ್ಲಿಯೇ ಬಂದಂತಹ ವಿದ್ಯಮಾನಗಳು. 1997ರಿಂದ 2000ದ ಇಸವಿಯಲ್ಲಿ 30 ಕೋಟಿ ರೂಪಾಯಿ ಔಷಧಿಗಳನ್ನು ಕೊಂಡು ಗ್ರಾಮಾಂತರಪ್ರದೇಶಗಳ ಆಸ್ಪತ್ರೆಗಳಿಗೆ ಕಳಹಿಸಬೇಕಾಗಿತ್ತು. ಅಲ್ಲಿ ಹಾವು ಕಡಿದರೆ ಔಷಧಿಯಿಲ್ಲ. ಗಾಯಕ್ಕೆ ಹಾಕುವ ಟಿಂಚರ್ ಇಲ್ಲ.

ಹಾಗಿದ್ದ ಮೇಲೆ ನನ್ನ ಪ್ರಶ್ನೆ ಇಷ್ಟೇ. ನಿಮ್ಮ ಅಧಿಕಾರಿಗಳು ನಿಮ್ಮ ಹಿಡಿತದಲ್ಲಿ ಇಲ್ಲ. ನಿಮ್ಮ ಅಧಿಕಾರಿಗಳು ನಿಮ್ಮ ಮಾತು ಕೇಳುತ್ತಿಲ್ಲ. ಆಡಳಿತವನ್ನು ಸರಿಯಾಗಿ ಮಾಡುತ್ತಿಲ್ಲ, ಎನ್ನುವ ಆಪಾದನೆ ಆ ಕಡೆಯಿಂದ ಬಂದಿದೆ. ಅದಕ್ಕಾಗಿ ನಾನು ಹೇಳುವುದೇನೆಂದರೆ, ಮೂರು ವರ್ಷಗಳಲ್ಲಿ 30 ಕೋಟಿ ರೂಪಾಯಿಗಳ ಔಷಧಿ ಖರೀದಿ ಮಾಡಿದ್ದಾರೆ. ತಾವು ಕಡತ ತೆಗೆದು ನೋಡಿ. ಇಂಥಾದ್ದು ಇನ್ನೂ ಎಷ್ಟೋ ಇವೆ. ಅವುಗಳ ಬಗ್ಗೆ ಕಾಲ ಬಂದಾಗ ನಾನು ಹೇಳುತ್ತೇನೆ. ಇದು ಒಂದು ಉದಾಹರಣೆಯನ್ನು ಮಾತ್ರ ನಾನು ಕೊಡುತ್ತಿದ್ದೇನೆ. 30 ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳ್ಳಿಗಳ ಆಸ್ಪತ್ರೆಗಳಿಗೆ ಕಳಿಸದೇ ಇದ್ದಂಥ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುವದಕ್ಕೆ ನಿಮಗೆ ಅವಕಾಶ ಇರಲಿಲ್ಲವೇನು? ನಿಮಗೆ ಅವರ ಮೇಲೆ ಹಿಡಿತ ಇರಲಿಲ್ಲವೇನು? ನನ್ನಸ್ನೇಹಿತರು ಆಧಾರ ಕೇಳುತ್ತಿದ್ದಾರೆ. ಅದಕ್ಕೆ ಆಧಾರ ಇದೆ. ನಾವು ಸಮಿತಿಯು ಕೊಟ್ಟ ವಿವರಗಳನ್ನು ತರಿಸಿದ್ದೇವೆ. 1997-98ರಲ್ಲಿ 4ಕೋಟಿ, 1998-99ರಲ್ಲಿ 16ಕೋಟಿ ಮತ್ತು 1999-2000ದಲ್ಲಿ 4 ಕೋಟಿಯಷ್ಟು ಖರೀದಿ ಮಾಡಿದ್ದಾರೆ. ತಾವು ಬೇಕಾದರೆ ಇದನ್ನು ಪರಿಶೈ ಮಾಡಿ. ಇಷ್ಟೇ ಅಲ್ಲ, ನಾನು ಮಾನ್ಯ ಸದಸ್ಯರ ಗಮನಕ್ಕೆ ತರುವುದಕ್ಕೆ ಇಷ್ಟಪಡುವುದೇನೆಂದರೆ 7 ಕೋಟಿ ರೂಪಾಯಿಗಳಷ್ಟು ಔಷಧಿಗಳು ಇವತ್ತು ಗೋದಾಮಿನಲ್ಲಿ ಕೊಳೆಯುತ್ತಿವೆ. ಏಕೆ ಸ್ವಾಮಿ, ಆಗ ನಿಮಗೆ ಅಧಿಕಾರಿಗಳ ಮೇಲೆ ಹಿಡಿತ ಇರಲಿಲ್ಲವೆ?.

ಸನ್ಮಾನ್ಯ ಅಧ್ಯಕ್ಷರೇ, **ಕೃಷಿಕನ ಕಣ್ಣೀರಿನ ಕತೆ** ಎನ್ನುವ ಪದವನ್ನು ಆ ಕಡೆ ಕುಳಿತಿರುವ ನನ್ನ ಸ್ನೇಹಿತರು ಉಪಯೋಗಿಸಿದ್ದರಿಂದ ನಾನು ಅದನ್ನು ಕ್ಯಾಪ್‌ಶನ್ ಮಾಡಿಕೊಳ್ಳುತ್ತೇನೆ. ಕೃಷಿಕನ ಕಣ್ಣೀರಿನ ಕತೆಯ ಮೊದಲನೇ ಅಧ್ಯಾಯವನ್ನು ಈಚಿನ ದಿವಸಗಳಿಂದ ಮಾನ್ಯ ಕೃಷ್ಣರವರ ನೇತೃತ್ವದ ಸಂಪಾದಕತ್ವದಲ್ಲಿ ಮೊದಲನೇ ಸಲ ನಾವು ಬರೆಯುವುದಕ್ಕೆ ಪ್ರಾರಂಭ ಮಾಡಿಲ್ಲ.

ಕೃಷಿಕನ ಕಣ್ಣೀರಿನ ಕತೆ ಸಮಾಜದ ಜತೆಜತೆಯಲ್ಲೇ ಬಂದಿರುವಂಥಾದ್ದು. ಇದು ಎಲ್ಲಿಂದ ಬಂತು ಎಂದರೆ, ನಾವು ಬೆಳೆದ ವಸ್ತುಗಳನ್ನು ನೀವು ತಿನ್ನಬೇಡಿ ಎಂದು ಕೃಷಿಕರಿಗೆ ಹೇಳಿದಿರಲ್ಲ, ಆವತ್ತು ಶುರುವಾಯಿತು ಅವನ ಕಣ್ಣೀರಿನ ಕತೆ. ನೀವು ಸಾಕಿದ ಹಸು , ಎಮ್ಮೆ ಹಾಲು, ತುಪ್ಪವನ್ನು ನೀವು ಹೋಮಕ್ಕೆ ಸುರಿದು ಬರೀ ಮಜ್ಜಿಗೆ ಕುಡಿಯಿರಿ ಎಂದು ಹೇಳಿದಿರಲ್ಲ ಅಲ್ಲಿಂದ ಶುರುವಾಯಿತು ಈ ಕೃಷಿಕನ ಕಣ್ಣೀರಿನ ಕತೆಯನ್ನು ಬರೆಯುವುದಕ್ಕೆ. ನಾವು ಶುರು ಮಾಡಿಲ್ಲ.

ನಾವು ಉತ್ತಿದ ಜಮೀನನ್ನು ನಮಗೇ ಕೊಡಿ ಎಂದು ಹೇಳಿದ ಕಾಗೋಡು ತಿಮ್ಮಪ್ಪನವರು ಇಲ್ಲಿ ಜೀವಂತವಾಗಿ ಕುಳಿತಿದ್ದಾರೆ. ತಾವು ಕೃಷಿ ಮಾಡಿದಂಥ ಜಮೀನನ್ನು ತಮಗೇ ಪಡೆದು ಕೊಳ್ಳುವುದಕ್ಕೆ ಕಾಗೋಡಿನಲ್ಲಿ ಸತ್ಯಾಗ್ರಹ ನಡೆಯಿತಲ್ಲ, ಅವತ್ತು ಶುರುವಾಯಿತು ಕೃಷಿಕ ಕಣ್ಣೀರಿನ ಕತೆ. ಇವತ್ತು ಹೊಸದಾಗಿ ಕಣ್ಣೀರಿನ ಕತೆ ಪ್ರಾರಂಭವಾಗಿಲ್ಲ, ಅಥವಾ ನಾವು ಪ್ರಾರಂಭ ಮಾಡಿಲ್ಲ. ನವಲಗುಂದದಲ್ಲಿ ನಡೆದ ರೈತರ ಕಣ್ಣೀರ ಕತೆಯನ್ನು ಹೇಳುತ್ತೇವೆ. ರೇಷ್ಮೆ ಬೆಳೆದ ರೈತನಿಗೆ ಬೆಲೆ ಕಡಿಮೆಯಾಗಿದೆ ಎಂದು ಹೇಳಿದಾಗ ಆತ ಕಣ್ಣೀರು ಹಾಕಿದಾಗ ಏನಾಯಿತು ಸ್ವಾಮಿ? ವಿಜಯಪುರದ ರೈತನಿಗೆ ಬೆನ್ನಮೇಲೆ ಪೋಲಿಸರಿಂದ ಬಾರಿಸಿದಿರಲ್ಲ ಅವತ್ತು ಶುರುವಾಯಿತು ರೇಷ್ಮೆ ಬೆಳೆಗಾರನ ಕಣ್ಣೀರಿನ ಕತೆ. ಯಾವುದೋ ಕತ್ತಲಿನ ಕೋಣೆಯಲ್ಲಿ ಸಿ. ನಾರಾಯಣಸ್ವಾಮಿ, ನನ್ನನ್ನು ಮತ್ತು ಆತ್ಮಾನಂದ ಅವರನ್ನು ಹಿಡಿದುಕೊಂಡುಹೋಗಿ ಪೊಲೀಸ್ ಸ್ಟೇಷನ್‌ನಲ್ಲಿ ಹಾಕಿಸಿದಿರಲ್ಲ ಅವತ್ತು ಶುರುವಾಯಿತು ಕೃಷಿಕನ ಕಣ್ಣೀರಿನ ಕತೆ. ಇದು ಇವತ್ತು ಶುರುವಾಗಿಲ್ಲ. ತಾವು ಅದಕ್ಕೆ ಜೀವಂತ ಸಾಕ್ಷಿ. ನಾವು ಯಾರ ಮನೆಯನ್ನೂ ಹಾಳು ಮಾಡುವುದಕ್ಕೆ ಹೋಗಲಿಲ್ಲ. ಕಲ್ಲು ಹೊಡೆಯುವುದಕ್ಕೆ ಹೋಗಿರಲಿಲ್ಲ ಅಥವಾ ಧಿಕ್ಕಾರ ಕೂಡ ಕೂಗಿರಲಿಲ್ಲ. ಈ ರಾಜ್ಯದಲ್ಲಿರುವ ಲಕ್ಷಾಂತರ ಕುಟುಂಬಗಳ ಅನ್ನ ಮಣ್ಣಾಗುತ್ತಿದೆ. ಇವತ್ತು ರೇಷ್ಮೆ ಬೆಲೆ ಏನು ಕಡಿಮೆಯಾಗುತ್ತಿದೆ ಅದು ಹೊರದೇಶದಿಂದ ರೇಷ್ಮೆ ಬರುತ್ತಿದೆ. ಹೊರದೇಶದಿಂದ ಕೃಷಿ ವಸ್ತುಗಳನ್ನು ಆಮದು ಮಾಡಿಕೊಳ್ಳತ್ತ ಇರುವುದರಿಂದ ಆಗುವ ಹಾನಿಬಗ್ಗೆ ಮಾತನಾಡಲು ಅವಕಾಶ ಕೊಡಬೇಕು ಅಂತ ಕೇಳಿದಾಗ ಅವತ್ತು ನನ್ನ ಬೆನ್ನಿಗೆ ಬಾರಿಸಿದ್ದೀರಲ್ಲ ಆವತ್ತು ನಮ್ಮ ಕಣ್ಣೀರಿನ ಕತೆ ಶುರುವಾಯಿತು.

ಸನ್ಮಾನ್ಯ ಅಧ್ಯಕ್ಷರೇ, ಶಿರಾದಲ್ಲಿ ರೈತರು ಯಾರೂ ಯಾರ ಮನೆಯನ್ನೂ ಹಾಳು ಮಾಡುವುದಕ್ಕೆ ಹೋಗಿರಲಿಲ್ಲ. ತಮ್ಮ ಕಡಲೆಕಾಯಿಗೆ ಬೆಲೆ ಕಡಿಮೆಯಾಗಿದೆ ಎಂದು ಕೇಳಿದರು. ಅದಕ್ಕೆ ರೈತರ ಮೇಲೆ ಎರಡು ದಿವಸ ಗುಂಡು ಹೊಡೆದಿರಿ. ಇವತ್ತು ಶುರುವಾಯಿತೇನು ಕಣ್ಣೀರಿನ ಕತೆ. ಅದಕ್ಕೇ ನಾನು ಹೇಳಿದ್ದು. ಕೃಷಿಕನ ಕಣ್ಣೀರಿನ ಕತೆಯ ಅಧ್ಯಾಯ ಕೃಷ್ಣರವರ ಸಂಪಾದಕತ್ವದಲ್ಲಿ ಈಚಿನ ದಿವಸಗಳಿಂದ ಮಾತ್ರ ಆರಂಭವಾಗಿಲ್ಲ. ಈ ಕಣ್ಣೀರಿನ ಕತೆ ಪ್ರಾರಂಭವಾದದ್ದು ಯಾವತ್ತು ಈ ಸಮಾಜವನ್ನು ಅವನು ಮಾಡುವಂಥ ವೃತ್ತಿಯ ಆಧಾರದ ಮೇಲೆ ವಿಂಗಡನೆ ಮಾಡಿ ಅಸಮಾನತೆಯನ್ನು ತಂದರೋ ಆವತ್ತಿನಿಂದ ಈ ಕಣ್ಣೀರಿನ ಕತೆ ಶುರುವಾಯಿತು. ಈ ಕಣ್ಣೀರನ್ನು ಒರೆಸತಕ್ಕಂಥ ಪ್ರಾಮಾಣಿಕ ಪ್ರಯತ್ನವನ್ನು ಮಾಡದೆ, ಆಡಳಿತವನ್ನು ಮಾಡಿದಂಥ ನೀವು, ರೈತರ ಬಗ್ಗೆ ಕೇವಲ ಮೊಸಳೆ ಕಣ್ಣೀರನ್ನು ಸುರಿಸುತ್ತಿದ್ದೀರಿ. ಅವರು ಅಷ್ಟೇ ಮಾತನಾಡಿದ್ದರೆ ನಾನು ಅಷ್ಟಕ್ಕೇ ನಿಲ್ಲಿಸುತ್ತಿದ್ದೆ. ಈ ಕಣ್ಣೀರಿನ ಕತೆ ಕೇವಲ ಈ ಸರ್ಕಾರದಿಂದಲೇ ಶುರುವಾಯಿತೇನು? 13 ಲಕ್ಷ ಎಕರೆಗೆ ಆಗುವಂಥ ನೀರು ಇವತ್ತು ಕರ್ನಾಟಕ ರಾಜ್ಯದ ನಮ್ಮ ಆಣೆಕಟ್ಟುಗಳಲ್ಲಿ ತುಂಬಿ ತುಳುಕುತ್ತಿದೆ. ಈ 13ಲಕ್ಷ ಎಕರೆ ಭೂಮಿಗೆ ನೀರನ್ನು ಬಿಟ್ಟುಕೊಳ್ಳಲಿಕ್ಕೆ

ಸಾಧ್ಯತೆ ಇಲ್ಲದೇ ಇರುವ ಪರಿಸ್ಥಿತಿಯನ್ನು ನಾವೆಲ್ಲರೂ ಸೃಷ್ಟಿಮಾಡಿದ್ದೇವೆ. ಆವತ್ತು ಶುರುವಾಯಿತು ಈ ಕಣ್ಣೀರಿನ ಕತೆ. ಇದು ಒಂದಾ, ಎರಡಾ ? ಮೊನ್ನೆ ನಮ್ಮ ಸಚಿವರು ಒಂದು ಮಾತನ್ನು ಹೇಳಿದ್ದಾರೆ. ಈ ದೇಶದಲ್ಲಿ ಬೆಳೆದಂಥ ಕಬ್ಬು ಬೆಳೆಗಾರರಿಂದ ಬಂದಂಥ ಸಕ್ಕರೆಯನ್ನು ತುಂಬುವುದಕ್ಕೆ ಗೋದಾಮು ಇಲ್ಲದೆ ಅದು ಗೊಬ್ಬರವಾಗುತ್ತಿದೆ. ಕೋಲಾರದಲ್ಲಿ ಬೆಳೆದಂಥ ಆಲೂಗಡ್ಡೆಯನ್ನು ಅಲ್ಲಿ ಬೀದಿಗೆ ಸುರಿಯುತ್ತಿದ್ದಾರೆ. ನಾನು ಇಷ್ಟೆಲ್ಲ ವಾದ ಮಾಡುವಂಥಾದ್ದು ಕಾಲ ವ್ಯಯ ಮಾಡಬೇಕೆಂಬ ಆಸೆಯಿಂದ ಅಲ್ಲ. ನನ್ನ ಅನಿಸಿಕೆ ಇಷ್ಟೇ. ಈ ಕೃಷಿಕನ ಕಣ್ಣೀರಿನ ಕತೆ ಅಂದಿನಿಂದ ನಮ್ಮ ಸಮಾಜದಲ್ಲಿ ಬೆಳೆದುಬಂದಿದೆ. ನಾವೆಲ್ಲರೂ ಕೂಡ ಇದನ್ನು ಪ್ರಾಮಾಣಿಕವಾಗಿ ಬಗೆಹರಿಸುವುದಕ್ಕೆ ಪ್ರಯತ್ನ ಮಾಡಲೇಬೇಕೆಂಬ ಉದ್ದೇಶದಿಂದ ಈ ಮಾತನ್ನು ನನ್ನ ಸ್ನೇಹಿತರ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತಿದ್ದೇನೆ.

ಸನ್ಮಾನ್ಯ ಅಧ್ಯಕ್ಷರೇ, ಅವರು ನನ್ನ ಹಳೆಯ ಸ್ನೇಹಿತರು. ಬಹಳ ಸ್ವಾರಸ್ಯಕರವಾದ ಮಾತು ಏನೆಂದರೆ, ಆಗ ಇದೇ ರೀತಿ ಮಾನ್ಯ ಮುಖ್ಯಮಂತ್ರಿಗಳ ಮನೆಮುಂದೆ ಹೋಗಿ ಇದೇ ರೈತರ ಕಣ್ಣೀರನ್ನು ಒರೆಸಿ ಎಂದ ಹೇಳಿ ಧರಣಿ ಕುಳಿತುಕೊಂಡೆ. ನನಗೆ ಸಿಕ್ಕಿದ್ದು ಏನು? ಹದಿಮೂರು ದಿವಸಗಳ ಜೈಲುವಾಸ.

O

(31-10-2002)



# ಆತ್ಮಕಥೆ : ಕೆಲವು ಟಿಪ್ಪಣಿಗಳು



# ಆತ್ಮಕಥೆ : ಕೆಲವು ಟಿಪ್ಪಣಿಗಳು

**ವೈಕೆ ರಾಮಯ್ಯ**

ನಾನು ತುಂಬಾ ಅದೃಷ್ಟಶಾಲಿ. ಏಕೆಂದರೆ ಬಂಗಲೆ, ಕಾರು, ಆಸ್ತಿ, ಅಧಿಕಾರ, ವಿದ್ಯೆ, ಅಂತಸ್ತು ಮತ್ತು ಸವಲತ್ತುಗಳನ್ನು ಪಡೆದುಕೊಂಡ ಕಾರಣಕ್ಕಾಗಿ ಅಲ್ಲ. ಹಸಿದಾಗ ಅನ್ನವಿಲ್ಲದೆ ಬಳಲಿದ ಅನುಭವ, ಅಂತೆಯೇ ಭಕ್ಷ್ಯ ಭೋಜನಗಳು ರಾಶಿರಾಶಿಯಾಗಿ ಲಭ್ಯವಾದ ಅನುಭವ ನನ್ನದು. ಕಾಡುಹಳ್ಳಿ ಒಂದರಲ್ಲಿ ದನಕುರಿಗಳನ್ನು ಮೇಯಿಸಿ, ದೊಣೆಯ ನೀರು ಕುಡಿದು, ಜಡಿ ಮಳೆಯಲ್ಲಿ ನೆನೆದು, ಹಿಪ್ಪುನೇರಳೆ ಸೊಪ್ಪು ಕಿತ್ತು, ಹುಳು ಸಾಕಿದ ಅನುಭವ ಒಂದು ಕಡೆಯಾದರೆ, ಅತ್ಯಾಧುನಿಕ ಸಮಾಜವನ್ನು ನೋಡಿದ ಅನುಭವ ಮತ್ತೊಂದು ಕಡೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಇಷ್ಟೊಂದು ವಿಭಿನ್ನ ಅನುಭವ ಪಡೆದುಕೊಂಡ ತಲೆಮಾರಿಗೆ ಸೇರಿದವನು ನಾನು ಎನ್ನುವುದೇ ನಾನು ಅದೃಷ್ಟಶಾಲಿ ಎನ್ನುವುದಕ್ಕೆ ಕಾರಣ.

ತುಮಕೂರು-ಮದ್ದೂರು ರಸ್ತೆಯಿಂದ ಪೂರ್ವಕ್ಕೆ ಎಂಟು ಕಿ.ಮಿ. ದೂರದಲ್ಲಿರುವ ಎಲೆಕಡಕಲು ನನ್ನ ಊರು. ರಾಮನಗರ, ಚನ್ನಪಟ್ಟಣ, ಮಾಗಡಿ, ಮದ್ದೂರು ಹಾಗೂ ಕುಣಿಗಲ್ ತಾಲ್ಲೂಕುಗಳಿಗೆ ಹೊಂದಿಕೊಂಡಂತಿರುವ ತುಮಕೂರು ಜಿಲ್ಲೆಯ ಕೊನೆಯ ಗ್ರಾಮ. ಒಂದು ಕಾಲಕ್ಕೆ ಎತ್ತಿನ ಗಾಡಿಯೂ ಹೋಗಲು ಸಾಧ್ಯವಾಗದಿದ್ದ, ಸುತ್ತಲೂ ಕಾಡಿನಿಂದ ಕೂಡಿದ್ದ ಈ ಹಳ್ಳಿ ಈಗ ಸ್ವಲ್ಪಮಟ್ಟಿಗೆ ಎಲ್ಲಾ ಆಧುನಿಕ ಸೌಲಭ್ಯಗಳನ್ನು ಹೊಂದಿದ ಗ್ರಾಮವಾಗಿದೆ. ಗ್ರಾಮದಲ್ಲಿ ವಾಸಿಸುವ 128 ಕುಟುಂಬಗಳ ಕಸುಬು ಕೃಷಿ. ಈ ಜನರು ಉಳುಮೆ ಮಾಡುತ್ತಿರುವ ಭೂಮಿಯ ವಿಸ್ತೀರ್ಣ 370 ಎಕರೆಗಳು. ವಾಸ ಮಾಡುವ 128 ಕುಟುಂಬಗಳಲ್ಲಿ 120 ಕುಟುಂಬಗಳು ರೇಷ್ಮೆ ಕೃಷಿಯನ್ನು ಅವಲಂಬಿಸಿವೆ. ಅಂದರೆ ಶೇಕಡಾ 99.10ರಷ್ಟು ಕುಟುಂಬಗಳು ರೇಷ್ಮೆ ಕೃಷಿಕಯಿಂದಲೇ ಜೀವಿಸುತ್ತಿರುವುದು. ಈ ಊರಿನಲ್ಲಿ ನನ್ನ ಕುಟುಂಬ ಒಂದನ್ನು ಬಿಟ್ಟರೆ, ಉಳಿದ ಯಾರಿಗೂ ಒಂದು ಗುಂಟೆಯಾದರೂ 'ತರಿ' (ಗದ್ದೆ) ಜಮೀನು ಇಲ್ಲ. ಉಳಿದ ಎಲ್ಲರೂ ಖುಷ್ಕಿ (ಹೊಲ) ಜಮೀನಿನಲ್ಲಿ ಒಂದಿಷ್ಟು ರಾಗಿ ಬೆಳೆದುಕೊಳ್ಳುತ್ತಾರೆ. ಆರ್ಥಿಕ ಬೆಳೆಯೆಂದರೆ ರೇಷ್ಮೆ ಕೃಷಿ ಒಂದೇ.

ನನ್ನ ತಾತ, ಮುತ್ತಾತಂದಿರ ಕಾಲದಿಂದಲೂ ಈ ಕಸುಬು ನಮ್ಮ ಮನೆತನದ ಆರ್ಥಿಕ ಕಸುಬಾಗಿ ಬಂದಿದೆ. ನಾನು ಚಿಕ್ಕವನಿದ್ದಾಗ ನಮ್ಮ 'ಹಳೆಯ ಹೊಲ' ಎನ್ನುವಲ್ಲಿ ಹಿಪ್ಪುನೇರಳೆ ತೋಟ ಇತ್ತು. ಈ ತೋಟಕ್ಕೆ ಹಳ್ಳದಿಂದ ನೀರು ಒದಗಿಸಲು 'ಕಪಿಲೆ' ವ್ಯವಸ್ಥೆ ಮಾಡಲು ನನ್ನ ಅಣ್ಣಂದಿರು ಪಟ್ಟಪ್ರಯತ್ನ ಸಫಲವಾಗಲಿಲ್ಲವೆಂದು ನನಗೆ ಇನ್ನೂ ಜ್ಞಾಪಕವಿದೆ. ಆ ತೋಟದಿಂದಲೇ ಆಗ

ಹಿಪ್ಪುನೇರಳೆ ಬೆಳೆ ಬೆಳೆಯುತ್ತಿದ್ದರು. ಆ ಜಮೀನು ಈಗ ತೆಂಗಿನ ತೋಟವಾಗಿದೆ. ಇದರ ಹತ್ತಿರದಲ್ಲಿ ನಮ್ಮ ಅಣ್ಣಂದಿರು ಬಾವಿ ನೀರಿನಿಂದ ನೀರಾವರಿ ತೋಟ ಮಾಡಿಕೊಂಡಿದ್ದಾರೆ. ಆಗ ನಮ್ಮಲ್ಲಿ ಮನೆಯಲ್ಲಿಯೇ ರೇಷ್ಮೆ ಮೊಟ್ಟೆಗಳನ್ನು ಮಾಡಿ ಕೊಳ್ಳುತ್ತಿದ್ದರು. ನನಗೆ ತಿಳಿದಮಟ್ಟಿಗೆ ಅಂದು ಎಲ್ಲಾ ಕಡೆಯಲ್ಲಿಯೂ ಪ್ರಚಲಿತವಿದ್ದ ಒಂದೇ ಒಂದು ತಳಿ ಎಂದರೆ, ಮೈಸೂರು ತಳಿ ಮಾತ್ರ. ಆಗ 'ಬೂದುಗಡ್ಡಿ' ಅಥವಾ 'ಎಣ್ಣೆರಂಗಿನ ಕಡ್ಡಿ' ಎಂಬ ಹಿಪ್ಪು ನೇರಳೆ ಕಡ್ಡಿ ಬೆಳೆಯುತ್ತಿದ್ದರು.

ಈಗಿರುವಂತೆ ಅತ್ಯಾಧುನಿಕ ಸವಲತ್ತುಗಳಾಗಲಿ, ವ್ಯವಸ್ಥಿತ ಮಾರುಕಟ್ಟೆಯಾಗಲಿ ಆಗ ಇರಲಿಲ್ಲ. ಬೆಳೆದ ಗೂಡನ್ನು ರಾಮನಗರದಿಂದ ಬರುವ 'ಗೂಡಿನ ಸಾಬರಿಗೆ' ಮಾರುತ್ತಿದ್ದರು. ನನ್ನ ಊರು ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿಗೆ ಸೇರಿದ್ದಾದರೂ, ನಮ್ಮ ಜನರ ಹೆಚ್ಚಿನ ವ್ಯವಹಾರ ಹಾಗೂ ಸಂಬಂಧ ಹತ್ತಿರದ ಚನ್ನಪಟ್ಟಣ ತಾಲ್ಲೂಕಿನಲ್ಲೇ ಇರುತ್ತಿತ್ತು. ನನಗೆ ಈಗಲೂ ಜ್ಞಾಪಕವಿದೆ, ಗಡ್ಡ ಬಿಟ್ಟ ವಯಸ್ಸಾದ ಮಹದೀಯ ವ್ಯಕ್ತಿಯೊಬ್ಬರು ನಮ್ಮ ಮನೆಗೆ ಬಂದು ಗೂಡನ್ನು ತೆಗೆದುಕೊಂಡು ಹೋಗುತ್ತಿದ್ದರು. ಒಂದು ದೊಣ್ಣೆಗೆ ದಾರ ಕಟ್ಟಿ ಗೂಡನ್ನು ತೂಗುವ ವ್ಯವಸ್ಥೆ ಇತ್ತು. ಆದಾದ ಮೇಲೆ ಸ್ಪ್ರಿಂಗ್ ಆಕಾರದ 'ಪೌಂಡ್' ಎನ್ನುವ ತೂಕದ ಸಲಕರಣೆ ಬಂತು. ಗೂಡಿನ ಬೆಳೆ, ಬೆಲೆ ಮತ್ತು ಒಟ್ಟು ಆದಾಯದ ಬಗೆಗೆ ಮನೆಯಲ್ಲಿ ಯಜಮಾನರಿಗೆ ಆಸಕ್ತಿಯಾದರೆ ಮನೆಯ ಹೆಂಗಸರುಗಳಿಗೆ ಮತ್ತು ನಮಗೆ 'ಆಕಳಿ' ಗೂಡಿನ ಬಗ್ಗೆಯೇ ಹೆಚ್ಚು ಆಸಕ್ತಿ. ಸರಿಯಾಗಿ ಕಟ್ಟದ, ಬನಿಯಿಲ್ಲದಿರುವ, ಉತ್ತಮ ಗುಣಮಟ್ಟದಲ್ಲದ ಗೂಡನ್ನು ಆಕಳಿ ಗೂಡು ಎಂದು ನಾವು ಕರೆಯುತ್ತಿದ್ದೆವು. ಆ ಗೂಡುಗಳನ್ನು ಕೊಂಡು ಕೊಳ್ಳುವುದಕ್ಕಾಗಿಯೇ ಬೇರೆಯವರು ಬರುತ್ತಿದ್ದರು. ಅವರನ್ನು 'ಆಕಳಿ ಗೂಡಿನ ಸಾಬರು' ಎಂದು ಕರೆಯುವುದು ರೂಢಿಯಲ್ಲಿತ್ತು. ಇದರಿಂದ ಬರುವ ಹಣ ಮನೆಯ ಹೆಂಗಸರು ಮತ್ತು ಮಕ್ಕಳದು.

ಅಂದಿನ ಹುಳು ಸಾಕುವುದು, ವ್ಯಾಪಾರ ವ್ಯವಸ್ಥೆ, ತೋಟಗಳು ಮತ್ತ ಗೂಡಿನ ಗುಣಮಟ್ಟ ಜ್ಞಾಪಿಸಿಕೊಂಡರೆ ಹೀಗಿನ ಪರಿಸ್ಥಿತಿಗೂ, ಅಂದಿನ ಪರಿಸ್ಥಿತಿಗೂ ಹೋಲಿಕೆ ಮಾಡುವುದು ಸಾಧ್ಯವಾಗುವುದಿಲ್ಲ. ನೂರಕ್ಕೆ ನೂರರಷ್ಟು ಕುಟುಂಬಗಳು ಮಾಡುವ ರೇಷ್ಮೆ ಕಸುಬಿನ ಜನರ ಮಧ್ಯದಲ್ಲಿ ಹುಟ್ಟಿದ ನನಗೆ, ನನ್ನ ಮತ್ತು ನನ್ನ ಕುಟುಂಬದ ಎಲ್ಲಾ ಪ್ರಗತಿಗೆ ಒತ್ತಾಯಿಸೆಯಾದ ರೇಷ್ಮೆ ಕಸುಬಿನ ಬಗೆಗೆ ಕುತೂಹಲ ಹಾಗೂ ಆಸಕ್ತಿ ಇದ್ದುದು ಆಶ್ಚರ್ಯವೇನಲ್ಲ. ಆಶ್ಚರ್ಯವೆಂದರೆ ನಮ್ಮ ಮನೆತನದ ಕಸುಬನ್ನು ಈಗಲೂ ನಾನು ಬಹಳ ನಿಷ್ಠೆ, ಆಸೆ ಮತ್ತು ಆಸಕ್ತಿಗಳಿಂದ ಮಾಡುತ್ತಿರುವುದು. ಇದರಿಂದ ಬರುವ ಆದಾಯದಿಂದ ಸಾರ್ವಜನಿಕ ಜೀವನದಲ್ಲಿ ಸ್ವಲ್ಪ ಮಟ್ಟಿಗೆ ಸ್ವಚ್ಛ ಬದುಕನ್ನು ಬದುಕಲು ಸಾಧ್ಯವಾಗಿದೆ ಎಂದು ಹೇಳಿದರೆ ಆಶ್ಚರ್ಯಪಡಬೇಕಾಗಿಲ್ಲ. ಈ ಕಸುಬು ಇಲ್ಲದಿದ್ದರೆ ನಮ್ಮ ಮನೆಯವರು ನನ್ನನ್ನು ವ್ಯಾಸಂಗ ಮಾಡಿಸಲು ಸಮರ್ಥವಾಗುತ್ತಿರ ಲಿಲ್ಲವೇನೋ ಎನ್ನುವುದು ನನ್ನ ನಂಬಿಕೆ. ತೋಟ ಅಗೆಯುವುದು, ಚಾಕಿ ಕಟ್ಟುವುದು, ಸೊಪ್ಪು

ಕೀಳುವುದು, ಹುಳು ಸಾಕುವುದು, ಹಣ್ಣುಹುಳು ಆಯುವುದು, ಚಂದ್ರಿಕೆಗಳಲ್ಲಿ ಬಿಡುವುದು, ಗೂಡು ಎಡೆಯುವುದು ಹೀಗೆ ಈ ಕಸುಬಿನ ಎಲ್ಲಾ ಚಟುವಟಿಕೆಗಳು ನನಗೆ ಕುತೂಹಲ ಕೆರಳಿಸಿತ್ತು.

ಈ ಉದ್ದಿಮೆಯು ಬದಲಾಣೆಯಾದ ಮೇಲೆ ಮಿಶ್ರ ತಳಿಯ ಬೆಳೆ ಬೆಳೆಯಲು ನಮ್ಮ ಊರಿನವರು ಮೊದಲು ಮಾಡಿದರು. ಚನ್ನಪಟ್ಟಣದ ಬಿತ್ತನೆ ಮಾರುಕಟ್ಟೆಗೆ ಕಳುಹಿಸುವುದು ಮೊದಲಾಯಿತು. ಚಾಕಿ ಕಟ್ಟಿದಾಗ ಹುಳುಗಳ ಮೇಲೆ ಊಟದ ತಟ್ಟೆಯನ್ನು ಮುಟ್ಟುತ್ತಿದ್ದರು. ಹೀಗೆ ಮಾಡುವುದರಿಂದ ಚಾಕಿ ಸರಿಯುವುದಿಲ್ಲ ಎನ್ನುತ್ತಿದ್ದರು. ಆದರೆ ಈ ರೀತಿ ಚಾಕಿ ಹುಳುಗಳನ್ನು ಸಾಕುವುದು ವೈಜ್ಞಾನಿಕ ಅಲ್ಲವೆಂದು ಆಗಿನ ಕಾಲದ ಇಲಾಖೆಯ ಸಿಬ್ಬಂದಿಯವರ ನಂಬಿಕೆ ಆಗಿತ್ತು. ಆದರೆ ಇತ್ತೀಚಿ ದಿವಸಗಳಲ್ಲಿ ಆಧುನಿಕ ಚೌಕಿ ಸಾಕಾಣಿಕೆ ಕೇಂದ್ರದಲ್ಲಿ 'ಪ್ಯಾರಾಫಿನ್' ಪೇಪರ್, ಫೋಂ' ರಬ್ಬರ್ ಬಳಸಿ ಚೌಕಿಯನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ. ಅಂದರೆ ಎಷ್ಟೋ ದಿವಸಗಳ ಹಿಂದೆ ನಮ್ಮ ಹಿರಿಯರು ಕಂಡ ಸತ್ಯವನ್ನು ಇವರು ವೈಜ್ಞಾನಿಕ ತಳಹದಿಯ ಮೇಲೆ ಸುಧಾರಿಸಿ ಅಳವಡಿಸಿಕೊಂಡಿದ್ದಾರೆಂದರೆ ತಪ್ಪಾಗ ಲಾರದು.

ನಮ್ಮ ಮನೆಯಲ್ಲಿ ಹುಳು ಸಾಕುತ್ತಿದ್ದಾಗಿನ ಚಟುವಟಿಕೆಗಳು ಇಂದಿಗೂ ನನಗೆ ಜ್ಞಾಪಕವಿದೆ. ಪ್ರತಿಯೊಂದು ಹಂತದಲ್ಲಿಯೂ ಹುಳುಗಳ ಬೆಳವಣಿಗೆ ಹಾಗೂ ಜ್ವರಕ್ಕೆ ಸರಿಯಾಗಿ ಹೋಗುತ್ತಿವೆಯೆ, ಒಂದೇ ಸಮನಾಗಿ ಜ್ವರಕ್ಕೆ ಬೀಳುತ್ತಿವೆಯೇ ಎಂದು ಗಮನಿಸಿ ಎಂತಹ ಬೆಳೆ ಆಗಬಹುದು ಎಂಬ ತಾತ್ಕಾಲಿಕ ನಿರ್ಧಾರಕ್ಕೆ ನನ್ನ ಹಿರಿಯರು ಬರುತ್ತಿದ್ದರು. ಅಂದಿನಿಂದ ಇಂದಿನರೆಗೂ ನಮ್ಮ ರೈತರಿಗೆ ಬೆಳೆ ಆಗುವುದು ಅಥವಾ ಹೋಗುವುದು ಒಂದು ಯಕ್ಷ ಪ್ರಶ್ನೆಯಾಗಿದೆ. ಇದರ ಜೊತೆಗೆ ತಲತಲಾಂತರದಿಂದ ಬಂದ ಅವರ ಅನುಭವ, ಮೂಢನಂಬಿಕೆ ಮತ್ತು ಅನಿಸಿಕೆಗಳಿಗೆ ಈಗಲೂ ನನಗೆ ಸಮರ್ಥವಾದ ಮನ ಒಪ್ಪುವ ಉತ್ತರ ಸಿಕ್ಕುತ್ತಿಲ್ಲ. ರೇಷ್ಮೆ ಹುಳು ಸಾಕುವುದು ಇಸ್ಪೀಟ್ ಆಡಿದಂತೆ ಎನ್ನುವುದನ್ನು ನಾನು ಕೇಳುತ್ತಿದ್ದೆ. ದನ, ಕೋಳಿ, ಮೇಕೆ, ಮನುಷ್ಯರು ಎಲ್ಲರೂ ವಾಸ ಮಾಡುವ ಆ ಪುಟ್ಟ ಮನೆಯಲ್ಲಿಯೇ ಸ್ವಲ್ಪ ಭಾಗವನ್ನು ಚೊಕ್ಕ ಮಾಡಿ ಹುಳು ಸಾಕುವ 'ದಡೆಯ'ವನ್ನು (Rearing stand) ಇಡುತ್ತಿದ್ದರು. ಹೊರಗಡೆಯಾದ ಹೆಣ್ಣು ಮಕ್ಕಳು, ಹುಳುವಿನ ಮನೆಗೆ ಹೋಗುವಂತಿರಲಿಲ್ಲ. ಮೆಣಸಿನಕಾಯಿ ಹುರಿಯುವುದು, ರೊಟ್ಟಿ ಸುಡುವುದಾಗಲಿ ಮಾಡುತ್ತಿರಲಿಲ್ಲ. ಬಹುಶಃ ಇದಕ್ಕೆ ವೈಜ್ಞಾನಿಕ ಕಾರಣಗಳಿರಲಿಲ್ಲ. ಉತ್ತಮ ಬೆಳೆಯಾದರೆ ದೇವರಿಗೆ 'ಲಂಚ' ಕೊಡುತ್ತೇವೆಂದು ಹರಕೆ ಮಾಡಿಕೊಳ್ಳುತ್ತಿದ್ದ ಪದ್ಧತಿಯೂ ನಮ್ಮಲ್ಲಿ ಇತ್ತು. ನನಗೆ ಈಗಲೂ ಜ್ಞಾಪಕವಿದೆ. ನಮ್ಮ ಚಿಕ್ಕ ತಂದೆ ಹೊನ್ನೇಗೌಡ ಎನ್ನುವವರು ಉತ್ತಮ ಬೆಳೆ ಪಡೆದ ಹರಕೆ ತೀರಿಸಲು ತಿರುಪತಿ ತಿಮ್ಮಪ್ಪನಿಗೆ ಒಂದು ಗಡಿಗೆ 'ಹೆಂಡ' ತರಿಸಿ ಪಾಣಿ (ಪಾನಿ) ಸೇವೆ ಮಾಡಿಸಿ ಹರಕೆ ತೀರಿಸುತ್ತಿದ್ದುದು. ಈಗಲೂ ಕಣ್ಣಿಗೆ ಕಟ್ಟಿದಂತಿದೆ.

ನನ್ನ ಹುಟ್ಟೂರಿನಲ್ಲಿ ರೇಷ್ಮೆ ಕಸುಬು ಬದುಕಿನೊಡನೆ ಬೆರೆತು ಹೋಗಿದ್ದರೆ, ಕೇವಲ ನಾಲ್ಕೈದು ಮೈಲಿ ದೂರದಲ್ಲಿ ಇರುವ ನನ್ನ ತಾಯಿಯ ಮನೆ ನಿಡಸಾಲೆಯವರಿಗೆ ಈ ಕಸುಬು

ತಿಳಿದಿರಲಿಲ್ಲ. ಅವರು ನಮ್ಮ ಮನೆಯಲ್ಲಿ ಈ ರೇಷ್ಮೆ ಹುಳುಗಳನ್ನು ದೂರದಿಂದಲೇ ನೋಡುತ್ತಿದ್ದರು. ಆದರೆ ಈಗ ಈ ಊರಿನ ಜನ ಅತ್ಯಂತ ಪ್ರಗತಿಪರ ರೇಷ್ಮೆ ಬೆಳೆಗಾರರಾಗಿ ದ್ದಾರೆನ್ನುವುದು ಆಶ್ಚರ್ಯದ ಸಂಗತಿ. ಈ ಉದ್ಯಮ ಕೇವಲ ಒಂದು ಹಣ ಒದಗಿಸುವ ಕಸುಬಾಗಿರಲಿಲ್ಲ. ನಮ್ಮ ರೈತರ ದೃಷ್ಟಿಯಲ್ಲಿ ಹುಳು ಸಾಕುವುದು, ದೇವರ ಪೂಜೆಮಾಡುವಷ್ಟು ಶ್ರದ್ಧಾಪೂರ್ಣ ಕಾರ್ಯವೆಂದು ನಂಬಿದ್ದರು. ತಟ್ಟೆಯಲ್ಲಿ ಇರುವ ಹುಳುಗಳನ್ನು ದೇವರಿಗೆ ಸಮನಾಗಿ ಕಾಣುವ ನಮ್ಮ ಮನೆಯವರಿಗೆ ನನ್ನ ಅಕ್ಕನ ಮಗ ತಟ್ಟೆಗೆ ' ಉಚ್ಚೆ' ಹುಯ್ದಿದು ಓಡಿ ಹೋದಾಗ ಬಹಶಃ ಮಗುವಿನ ಮೇಲಿನ ವ್ಯಾಮೋಹ ಅವನಿಗೆ ಶಿಕ್ಷೆಯನ್ನು ತಪ್ಪಿಸಿತ್ತು ಎಂದು ನನ್ನ ಭಾವನೆ. ನಾನು ಈಗಾಗಲೇ ತಿಳಿಸಿರುವಂತೆ ಈ ಬೆಳೆ ಇಸ್ಪೀಟ್ ಆಟ ಆಡಿದ ಹಾಗೆ. ಬೆಳೆ ಚೆನ್ನಾಗಿ ಬಂದರೆ ಮನೆಯಲ್ಲಿ ಹಬ್ಬದ ಸಡಗರ. ಆದೇ ಬೆಳೆ ಹಾಳಾದರೆ ಸ್ಮಶಾನ ಮೌನ. 25-30 ದಿವಸಗಳ ಮನೆಯವರೆಲ್ಲರ ದುಡಿತ, ಶ್ರಮ, ಬಹಳವಾಗಿ ನಂಬಿಕೊಂಡಿದ್ದ ವರಮಾನಕ್ಕೆ ಸೊನ್ನೆ. ಕೊಂಡು ಸೊಪ್ಪು ತಂದಿದ್ದರಂತೂ ಅವರ ಕಷ್ಟ ವರ್ಣಾನಾತೀತ. ಇದು ನನ್ನ ಊರಿನ ರೇಷ್ಮೆ ಬೆಳೆಯುವವರ ಬಗ್ಗೆ ನಾನು ಗಮನಿಸಿದ್ದು.



ನನ್ನ ಊರಿನ ಪ್ರಮುಖ ಕಸುವಾದ ರೇಷ್ಮೆ ಉದ್ಯಮ ಕರ್ನಾಟಕದಲ್ಲಿ ಅತ್ಯಂತ ಪ್ರಮುಖ ಆರ್ಥಿಕ ಬೆಳೆಗಳಲ್ಲಿ ಒಂದು. ರಾಷ್ಟ್ರದ ರೇಷ್ಮೆ ಉತ್ಪತ್ತಿಯಲ್ಲಿ ಬಹುತೇಕ ಅಂದರೆ ಸುಮಾರು ಶೇಕಡಾ 80 ಭಾಗ ರೇಷ್ಮೆ ಉತ್ಪತ್ತಿಯಾಗುವುದು ಕರ್ನಾಟಕದಲ್ಲಿ. ಈ ಉದ್ಯಮದ ಆಧಾರಸ್ಥಂಭವೆಂದರೆ ರೇಷ್ಮೆ ವಸ್ತ್ರಗಳನ್ನು ಬಳಸುವ ಬಳಕೆದಾರರು. ರೇಷ್ಮೆ ಉತ್ತಮವಾದ ಒಂದು ಶ್ರೇಷ್ಠ ವಸ್ತ್ರ. ಇದರ ಮೋಹಕತೆಗೆ ಮರಳಾಗದವರಿಲ್ಲ. ಆದರಲ್ಲೂ ನಮ್ಮ ಹೆಣ್ಣು ಮಕ್ಕಳಿಗಿರುವ ರೇಷ್ಮೆ ಸೀರೆಗಳ ವ್ಯಾಮೋಹ ಎಲ್ಲಾ ಗಂಡಸರಿಗೂ ಆಗಿರುವ ಅನುಭವ. ಎಂತಹ ಬಡವನಾದರೂ ರೇಷ್ಮೆ ವಸ್ತ್ರಗಳಿಲ್ಲದೆ ಕೆಲವು ಶುಭ ಕಾರ್ಯಗಳನ್ನು ಮಾಡುವಂತಿಲ್ಲ. ಈ ಕಾರಣಕ್ಕಾಗಿಯೇ ಏನೋ ರೇಷ್ಮೆಯನ್ನು 'ವಸ್ತ್ರಗಳ ರಾಣಿ' ಎಂದು ಕರೆಯುತ್ತಾರೆ. ಬಹಳ ಹಿಂದಿನಿಂದಲೂ ಅಂದರೆ 1880ರಲ್ಲಿ ' ಕೃತಕ ರೇಷ್ಮೆ' ಅಂದರೆ ರೇಯಾನ್ ಅನ್ನು ಪ್ಯಾರಿಸ್‌ನಲ್ಲಿ ಪ್ರಥಮ ಬಾರಿಗೆ ಪ್ರದರ್ಶಿಸಿದಾಗ ಇನ್ನೇನು ರೇಷ್ಮೆಗೆ ಉಳಿಗಾಲವಿಲ್ಲ ಎನ್ನುವಂತಾಯಿತು. ಇದಾದ ಮೇಲೆ ಇತ್ತೀಚಿನ ವರ್ಷಗಳಲ್ಲಿ ನಾನಾ ವಿಧವಾದ ರೇಷ್ಮೆಯನ್ನು ಹೋಲುವ ಕೃತಕ ದಾರಗಳು ಬಳಕೆಗೆ ಬಂದಿದ್ದರೂ, ಅಪ್ಪಟ ರೇಷ್ಮೆಯ ಮೇಲಿನ ನಮ್ಮ ಜನರ ಮೋಹಕತೆಯ ಸೆಳೆತ ಕಡಿಮೆಯಾಗಿಲ್ಲ. ವರ್ಷದಿಂದ ವರ್ಷಕ್ಕೆ ಪ್ರಪಂಚದಲ್ಲಿ ಇದರ ಬೇಡಿಕೆ ಜಾಸ್ತಿಯಾಗುತ್ತಿದೆ.

ಈ ಹಂತದಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸುವುದು ಉಚಿತವೆಂದು ನನಗೆ ಅನ್ನಿಸುತ್ತದೆ. ಏಕೆಂದರೆ ಈ ಉದ್ಯಮದ ಬಗೆಗೆ ನಾನು ವ್ಯಕ್ತಮಾಡುತ್ತಿರುವ ಅನಿಸಿಕೆಗಳು ನೂರಕ್ಕೆ ನೂರರಷ್ಟು ನನ್ನವು. ನಾನು ಹುಟ್ಟಿನಿಂದ ರೈತನಾದರೂ ವೃತ್ತಿಯಿಂದ ಒಬ್ಬ ವಕೀಲ. ಆಕಸ್ಮಿಕವಾಗಿ ಅರಸಿ ಬಂದದ್ದು ರಾಜಕೀಯ ಕ್ಷೇತ್ರದ ಸಾರ್ವಜನಿಕ ಕೆಲಸ. ನಾನು ವಿಜ್ಞಾನಿಯೂ ಅಲ್ಲ, ವಿಜ್ಞಾನದ

ಅರಿವು ನನಗಿಲ್ಲ. ಆದಾಗ್ಯೂ ಈ ಉದ್ಯಮದ ಕೆಲವು ಕ್ಲಿಷ್ಟ ವಿಷಯಗಳ ಬಗ್ಗೆ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಮಾಡುತ್ತಿದ್ದೇನೆ. ಇದಕ್ಕೆ ಕಾರಣ ಈ ಉದ್ಯಮದಲ್ಲಿ ನನಗೆ ಒದಗಿದ ಅನುಭವ. ಈ ಅನುಭವವೇ ನನ್ನ ಅಭಿಪ್ರಾಯಗಳು ಅಥವಾ ಅನಿಸಿಕೆಗಳಿಗೆ ಅಧಾರ.

ರೇಷ್ಮೆ ಇತಿಹಾಸ ಪುರಾತನವಾದುದು. ಅಷ್ಟೇ ಅಲ್ಲ, ಅತ್ಯಂತ ರೋಮಾಂಚನ ಕಾರಿಯಾದುದು. ಕ್ರಿ.ಪೂ. 2600 ವರ್ಷಗಳ ಹಿಂದೆ ಚೀನಾ ದೇಶದ ರಾಣಿ ಒಬ್ಬಳು ಆಕಸ್ಮಿಕವಾಗಿ 'ಟೀ' ಬಟ್ಟಲಿನಲ್ಲಿ ಬಿದ್ದ ರೇಷ್ಮೆಗೂಡಿನಿಂದ ಎಳೆ ತೆಗೆದು ರೇಷ್ಮೆ ಉದ್ಯಮಕ್ಕೆ ನಾಂದಿ ಹಾಡಿದಳು ಎಂದು ಹೇಳುತ್ತಾರೆ. ಬಹಳ ಶತಮಾನಗಳವರೆಗೆ ರೇಷ್ಮೆ ಉದ್ಯಮವನ್ನು ಚೀನಾ ದೇಶವು ಅತ್ಯಂತ ನಿಗೂಢವಾಗಿ ಕಾಪಾಡಿಕೊಂಡು ಬಂತು. ಒಂದು ಕಾಲದಲ್ಲಿ ರೇಷ್ಮೆ ವಸ್ತ್ರಗಳು ರಾಜ-ರಾಣಿಯರಿಗೆ ಮಾತ್ರ ಸೀಮಿತವಾಗಿದ್ದ ವಸ್ತ್ರಗಳಾಗಿದ್ದುವು. ಕಾಲಕ್ರಮೇಣ ಈ ಉದ್ಯಮ ಚೀನಾದಿಂದ ಕೋರಿಯಾ, ಜಪಾನ್ ಮತ್ತು ಭಾರತಕ್ಕೆ ಬಂದಿತೆಂದು ಒಂದು ಪ್ರತೀತಿ. ಆದರೆ ಮತ್ತೊಂದು ಅಭಿಪ್ರಾಯದ ಪ್ರಕಾರ ಭಾರತವು ರೇಷ್ಮೆಗೆ ಜನ್ಮಭೂಮಿ ಎನ್ನುವುದೂ ಇದೆ. ಏಕೆಂದರೆ ರೇಷ್ಮೆ ಬಟ್ಟೆಗಳ ಉಪಯೋಗ ವೇದಗಳ ಕಾಲದಿಂದಲೂ ಇತ್ತೆಂದು ಹೇಳಬಹುದು. ಋಗ್ವೇದ, ಮನುಸ್ಮೃತಿ, ರಾಮಾಯಣ ಮತ್ತು ಮಹಾಭಾರತ ಮುಂತಾದ ಕೃತಿಗಳಲ್ಲಿ ರೇಷ್ಮೆ ವಸ್ತ್ರದ ಉಪಯೋಗದ ಬಗೆಗೆ, ರಾಜ -ರಾಣಿಯರು ಧರಿಸುತ್ತಿದ್ದ ಉಡುಪಿನ ವರ್ಣನೆಯಿಂದ ನಾವು ಕಾಣಬಹುದಾಗಿದೆ.

ರೇಷ್ಮೆ ಕಸುಬು ಒಂದು ಕೈಗಾರಿಕೆಯೇ ಅಥವಾ ಬೇಸಾಯವೇ ಎನ್ನುವುದರ ಬಗೆಗೆ ಕೂಡಾ ಚರ್ಚಿಸುವವರು ಇದ್ದಾರೆ. ಆದರೆ ನನ್ನಪ್ರಕಾರ ಚಾಕಿ ಕಟ್ಟುವುದರಿಂದ ಮೊದಲು ಮಾಡಿ, ರೇಷ್ಮೆ ದಾರ ತೆಗೆದು ಬಟ್ಟೆ ಮಾಡುವವರೆಗಿನ ಈ ಉದ್ಯಮದ ಚಟುವಟಿಕೆಗಳನ್ನು ಗಮನಿಸಿದರೆ, ಇದೊಂದು ಉತ್ತಮ ಕಲೆ ಎನ್ನುವುದು ಭಾಸವಾಗುತ್ತದೆ. ಹಿಂದಿನ ದಿನಗಳಲ್ಲಿ ರೇಷ್ಮೆ ವಸ್ತ್ರ ಬಹಳ ಬೆಲೆ ಬಾಳುವ ವಸ್ತ್ರವಾದುದರಿಂದ ಬಡವನ ಬೆಲೆಗೆ ಎಟಕುವ ವಸ್ತ್ರವಾಗಿರಲಿಲ್ಲ.

ಈ ಉದ್ಯಮದ ಬಗೆಗೆ ಇತ್ತೀಚಿನ ದಿವಸಗಳಲ್ಲಿ ನನ್ನ ಶ್ರದ್ಧೆಯನ್ನು ಹೆಚ್ಚಿಸಿದ ಅಂಶವೆಂದರೆ, ನಾವು ಸಾರ್ವಜನಿಕ ವೇದಿಕೆಯ ಮೇಲೆ ಭಾಷಣ ಮಾಡುವ ಸಮಾಜವಾದ, ಘೋಷಣೆ ಈ ಉದ್ಯಮದಲ್ಲಿ ಸದ್ದಿಲ್ಲದೆ ಕಾರ್ಯರೂಪಕ್ಕೆ ಬರುತ್ತಿರುವುದು. ಈ ಕಸುಬನ್ನು ಅವಲಂಬಿಸಿರುವ ಬೆಳೆಗಾರರು, ನೂಲು ಬಿಚ್ಚುವವರು, ನೇಯ್ಗೆ ಮಾಡುವವರು ಅತ್ಯಂತ ಬಡವರು. ಆದರೆ ಇವರ ದುಡಿಮೆಯಿಂದ ಉತ್ಪತ್ತಿಯಾಗುವ ರೇಷ್ಮೆ ಬಟ್ಟೆಯನ್ನು ಕೊಂಡುಕೊಂಡು ಉಪಯೋಗಿಸುವ ಧನಿಕನಿಂದ ಸಂಪತ್ತಿನ ವರ್ಗಾವಣೆ ಇಲ್ಲಿ ನಮಗೆ ಗೋಚರವಾಗುವ ಅಂಶ. ಅದಕ್ಕಾಗಿಯೇ ನಾನು ಹೇಳಿದ್ದು ಸಮಾಜವಾದದ ತತ್ವ ಈ ಉದ್ಯಮದಲ್ಲಿ ಸದ್ದಿಲ್ಲದೆ ಕಾರ್ಯರೂಪಕ್ಕೆ ಬರುತ್ತಿದೆಯೆಂದುದು.

ಈ ರಾಷ್ಟ್ರದ ರೇಷ್ಮೆ ಇತಿಹಾಸವನ್ನು ಅವಲೋಕಿಸಿದಾಗ ಕ್ರಿ. ಪೂ ಕ್ಕೂ ಮೊದಲು ಹಲವು ಶತಮಾನಗಳಿಗೂ ಹಿಂದೆಯೇ, ರೇಷ್ಮೆ ಕೃಷಿ ನಮ್ಮ ದೇಶದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಎನ್ನುವುದು ನಮಗೆ ತಿಳಿಯುತ್ತದೆ. ಅಷ್ಟೇ ಅಲ್ಲ, ಕ್ರಿ. ಪೂ. 2ನೇ ಶತಮಾನದಲ್ಲಿ ಐರೋಪ್ಯ ದೇಶಗಳಿಗೆ ರೇಷ್ಮೆ ರಫ್ತು ಮಾಡಿದ್ದೂ ಉಂಟು. ಆದರೆ ರೇಷ್ಮೆ ಕೃಷಿ ಬಹಳ ಏರುಪೇರುಗಳಿಗೆ ಒಳಗಾಗಿ ಮತ್ತೆ ಮೊಗಲರ ಕಾಲದಲ್ಲಿ ಉತ್ತಮ ಸ್ಥಿತಿಯಲ್ಲಿತ್ತೆಂದು ತಿಳಿದುಬರುತ್ತದೆ. ನಮಗೆ ಲಭ್ಯವಿರುವ ಮಾಹಿತಿಗಳ ಆಧಾರದ ಮೇಲೆ ಹೇಳಬೇಕೆಂದರೆ, 1795-1867ರ ಬ್ರಿಟಿಷರ ಆಳ್ವಿಕೆಯಲ್ಲಿ ಬಂಗಾಳದಿಂದ ವರ್ಷ ಒಂದಕ್ಕೆ ಸುಮಾರು 2.5 ಲಕ್ಷ ಕಿಲೋ ಗ್ರಾಂ. ರೇಷ್ಮೆ ನೂಲನ್ನು ಇಂಗ್ಲೆಂಡಿಗೆ ರಫ್ತು ಮಾಡಲಾಗುತ್ತಿತ್ತು. 1860ರಲ್ಲಿ 'ಪೆಬ್ರಿನ್' ರೋಗದಿಂದ ಫ್ರಾನ್ಸ್ ಮತ್ತು ಇಟಲಿ ದೇಶಗಳಲ್ಲಿ ರೇಷ್ಮೆ ವ್ಯವಸಾಯ ಸಂಪೂರ್ಣವಾಗಿ ನಾಶವಾದಾಗ, ಸುಮಾರು 25,000 ಕ್ರೌನ್ ಗುಣಮಟ್ಟದ ಮೊಟ್ಟೆಗಳನ್ನು ಐರೋಪ್ಯ ದೇಶಗಳಿಗೆ ಭಾರತ ಕಳುಹಿಸಿ ಕೊಡುವ ಸಾಮರ್ಥ್ಯ ಪಡೆದಿತ್ತು ಎನ್ನುವುದು ಆಶ್ಚರ್ಯಕರವಾದ ಸಂಗತಿ. ಇಂತಹ ಉತ್ತಮ ಸ್ಥಿತಿಯಲ್ಲಿದ್ದ ಉದ್ಯಮ ಮತ್ತೆ 1875ರಿಂದ ಹಿಂದೆ ಬಿತ್ತು. ವಿಶ್ವದ ಉಳಿದ ರೇಷ್ಮೆ ಉತ್ಪನ್ನ ಮಾಡುವ ದೇಶಗಳಾದ ಚೀನಾ, ಜಪಾನ್ ದೇಶಗಳು ವೈಜ್ಞಾನಿಕವಾಗಿ ಮತ್ತು ತಾಂತ್ರಿಕವಾಗಿ ಕ್ರಾಂತಿಕಾರಕ ಬದಲಾವಣೆಗಳನ್ನು ಹೊಂದುತ್ತಿರುವ ಸಮಯದಲ್ಲಿ ನಮ್ಮಲ್ಲಿ ಈ ಉದ್ಯಮದ ಅಭಿವೃದ್ಧಿ ತೆವಳುತ್ತಿತ್ತು. ಇದಕ್ಕೆ ಪ್ರಮುಖ ಕಾರಣ ಬ್ರಿಟಿಷ್ ಆಳ್ವಿಕೆ. ಈ ಉದ್ಯಮದ ಬಗೆಗೆ ತೋರಿದ ಉದಾಸೀನ ಭಾವನೆ ಮತ್ತು ಇಂದಿಗೂ ನಮ್ಮ ಈ ಉದ್ಯಮಕ್ಕೆ ಮಾರಕವಾಗಿರುವುದು ರೇಷ್ಮೆ ಆಮದು ನೀತಿ.

ಹದಿನೆಂಟನೇ ಶತಮಾನದಲ್ಲಿ ದೊರೆಗಳಾಗಿದ್ದ ಟಿಪ್ಪು ಸುಲ್ತಾನ್ ಮತ್ತು ಹೈದರಾಲಿ ಮೈಸೂರು ಪ್ರಾಂತ್ಯದಲ್ಲಿ ರೇಷ್ಮೆ ವ್ಯವಸಾಯ ಪ್ರಾರಂಭಿಸಿದರೆಂದು ತಿಳಿದುಬರುತ್ತದೆ. ಇದಕ್ಕಾಗಿಯೇ ಏನೋ ನಮ್ಮ ಮೂಲ ತಳಿಯನ್ನು ''ಮೈಸೂರು ತಳಿ'' ಎಂದು ಈಗಲೂ ಕರೆಯುತ್ತೇವೆ. ಜಾತಿಯಲ್ಲಿ ಮಹಮದೀಯರಾಗಿದ್ದು, ವಾಸ್ತವದಲ್ಲಿ ಸರ್ವಾಧಿಕಾರಿಗಳಾಗಿದ್ದರೂ ಈ ಉದ್ಯಮದ ಬಗ್ಗೆ ಆಗಿನ ದೊರೆಗಳು ಎಷ್ಟು ಕಾಳಜಿ ಹೊಂದಿದ್ದರು ಎಂದರೆ, ದಕ್ಷಿಣ ಚೀನಾಕ್ಕೆ ನಿಯೋಗ ಒಂದನ್ನು ಕಳುಹಿಸಿ ರೇಷ್ಮೆ ಮೊಟ್ಟೆ ತರಿಸುವುದರ ಮೂಲಕ ರೇಷ್ಮೆ ವ್ಯವಸಾಯಕ್ಕೆ ಅಂದಿನ ಮೈಸೂರು ಅರಸರು ನಾಂದಿ ಹಾಡಿದರೆಂದು ಹೇಳಬೇಕು. ಅಂದು ತಂದ ಮತ್ತು ನಾವು ಇಂದಿಗೂ ರೇಷ್ಮೆ ಬಿತ್ತನೆ ವಲಯದಲ್ಲಿ ಸಾಕುತ್ತಿರುವ ಬಹುತಳಿಯ ಸಂತತಿಯೇ ''ಮೈಸೂರು ತಳಿ''. ಚೀನಾದಿಂದ ಬಂದ ತಳಿ ಇದೇ ಇರಬಹುದೆಂದು ಊಹಿಸಬಹುದಾಗಿದೆ. ಚೀನಾದಲ್ಲಿ ಈಗಲೂ ಬಹುಸಂತತಿ ತಳಿಗಳನ್ನು ಕೆಲವು ಪ್ರಾಂತ್ಯಗಳಲ್ಲಿ ಸಾಕುತ್ತಿದ್ದಾರೆ. ಅಷ್ಟೇ ಅಲ್ಲ, ಬೆಳೆಗಾರರ ಒಲವು ಈ ತಳಿಗಳ ಕಡೆಗೆ ಹೆಚ್ಚು ವಾಲುತ್ತಿದೆ ಎನ್ನುವ ವಿಷಯವನ್ನು ನನ್ನ ಪ್ರವಾಸ ಕಥನದಲ್ಲಿ ತಜ್ಞರ ಅಭಿಪ್ರಾಯ ಆಧರಿಸಿ ಪ್ರಸ್ತಾಪಿಸಿದ್ದೇನೆ. ಆಶ್ಚರ್ಯದ ವಿಷಯವೆಂದರೆ, ಈಗಲೂ ಈ ಮೈಸೂರು ತಳಿಯನ್ನು ಮೀರಿಸುವ ಮತ್ತೊಂದು ಬಹುಸಂತತಿಯ ತಳಿಯನ್ನು ರೂಪಿಸಿ ವ್ಯಾಪಕವಾಗಿ

ಹರಡಲು ನಮ್ಮ ಕೇಂದ್ರ ರೇಷ್ಮೆ ಸಂಶೋಧನಾ ಮತ್ತು ಶಿಕ್ಷಣ ಸಂಸ್ಥೆವರಾಗಲಿ ಅಥವಾ ವಿಶ್ವವಿದ್ಯಾನಿಲಯದವರಾಗಲಿ ಸಫಲ ರಾಗದೇ ಇರುವುದು. ಈ ದಿಸೆಯಲ್ಲಿ ಪ್ರಯತ್ನಗಳು ನಡೆಯುತ್ತಿವೆ, ಆದರೆ ಇಂದಿಗೂ ಇವರ ಪ್ರಯತ್ನ ಯಶಸ್ವಿಯಾಗಿಲ್ಲ.

ರೇಷ್ಮೆ ಹುಳು ಸಾಕಾಣಿಕೆಯನ್ನು ಕೆಲವು ಹಳ್ಳಿಗಳಲ್ಲಿ ಕೆಲವರು ಮಾತ್ರ ಮಾಡುತ್ತಿದ್ದರು. ಈ ಬೇಸಾಯ ಲಾಭದಾಯಕವಾಗಿದ್ದರೂ, ರೈತರು ರೇಷ್ಮೆ ವ್ಯವಸಾಯವನ್ನು ಮಾಡುತ್ತಿಲ್ಲವೇಕೆಂಬ ಪ್ರಶ್ನೆ ಆಗಾಗ ನನ್ನನ್ನು ಕಾಡುತ್ತಿತ್ತು. ಬಹುಶಃ ರೇಷ್ಮೆ ಹುಳು ಸಾಕುವುದಕ್ಕೆ ಬೇಕಾದ ಶ್ರದ್ಧೆ, ಶ್ರಮ, ಜೊತೆಗೆ ರೇಷ್ಮೆ ಬೆಳೆಗಳ ಅನಿಶ್ಚಿತತೆ ಕಾರಣ ಇರಬಹುದು. ಸಾಕಷ್ಟು ಜಮೀನಿರುವ ಮಧ್ಯಮ ವರ್ಗದ ರೈತರು ಮಾತ್ರ ರೇಷ್ಮೆ ಕಸುಬನ್ನು ಉಪ ಕಸುಬಾಗಿ ಮಾಡುತ್ತಿದ್ದರು. ಹಿಪ್ಪುನೇರಳೆ ಸೊಪ್ಪನ್ನು ಕೆಳದರ್ಜೆಯ ಮಳೆ ಆಧಾರದ ಜಮೀನಿನಲ್ಲಿ ಬೆಳೆಯುತ್ತಿದ್ದರು. ಉತ್ತಮ ಜಮೀನಿನಲ್ಲಿ ಆಹಾರಧಾನ್ಯ ಬೆಳೆಯುತ್ತಿದ್ದರು. ಮೈಸೂರು ತಳಿ ಬೆಳೆಯುವ, ಕುಣಿಗಲ್ ತಾಲ್ಲೂಕಿನ ಹಳ್ಳಿಗಳಲ್ಲಿ ಕೇವಲ 10-20 ಗುಂಟೆಗಳಲ್ಲಿ ಮಾತ್ರ ಸೊಪ್ಪು ಬೆಳೆದು, ಬೆಳೆ ಒಂದಕ್ಕೆ 50-100 ಮೊಟ್ಟೆಗಳನ್ನು ಸಾಕಿ 10-50 ಕಿಲೋ ಗ್ರಾಂ. ಗೂಡು ಬೆಳೆದು ಮಾರಿ, ಬಂದ ಹಣದಿಂದ ಸಂತೃಪ್ತರಾಗುತ್ತಿದ್ದರು. ಮೂಲತಃ ಒಂದೇ ತಳಿಯನ್ನು ಬೆಳೆಯುತ್ತಿದ್ದ ಕರ್ನಾಟಕದ ರೇಷ್ಮೆ ಉದ್ಯಮಕ್ಕೆ, ಇಂದಿಗೂ ಮೈಸೂರು ಜಿಲ್ಲೆಯಲ್ಲಿ ಪ್ರಚಲಿತವಾಗಿರುವ ಸಿನಿಚಿ ತಳಿಯ ಗಂಡು ಮತ್ತು ಮೈಸೂರು ಮೂಲ ತಳಿಯ ಹೆಣ್ಣು ಚಿಟ್ಟೆಗಳ ಸಂಯೋಗದಿಂದ ಅಭಿವೃದ್ಧಿ ಪಡಿಸಿದ ''ಮಿಶ್ರತಳಿ'' ಈ ರಾಜ್ಯದ ಏಕೆ, ಈ ರಾಷ್ಟ್ರದ ರೇಷ್ಮೆ ಉತ್ಪತ್ತಿಯಲ್ಲಿ ಒಂದು ಹೊಸ ತಿರುವನ್ನೇ ತಂದಿತು.

ಮಿಶ್ರ ತಳಿಯ ಬೆಳೆ ಮೊದಲಾದ ಮೇಲೆ, ಮೈಸೂರು ತಳಿ '' ಬಿತ್ತನೆ ತಳಿ'' ಆಯಿತು. ಸೀನಿಚಿ ಮತ್ತು ಮೈಸೂರು ತಳಿಯ ಮಿಶ್ರ ತಳಿಯನ್ನಾಗಲಿ ಅಥವಾ ಮೂಲ ತಳಿಯನ್ನಾಗಲಿ ಬೆಳೆಯುವುದಕ್ಕೆ ರೈತರು ಸಂಪೂರ್ಣವಾಗಿ ಸ್ವತಂತ್ರರಾಗಿದ್ದರು. ಆದರೆ ಕುಣಿಗಲ್ ತಾಲ್ಲೂಕಿನ ಅನೇಕ ಹಳ್ಳಿಗಳಲ್ಲಿ ಮೈಸೂರು ತಳಿಯನ್ನು ಮೇಯಿಸುತ್ತಿದ್ದರು. ಈ ತಳಿಯನ್ನು ಮೇಯಿಸುವವರಿಗೆ ಸರ್ಕಾರವು ಕೆಲವು ಸೌಕರ್ಯಗಳನ್ನು ಒದಗಿಸುತ್ತಿತ್ತು. ಮುಫತ್ತಾಗಿ ಮೊಟ್ಟೆ ಒದಗಿಸುವುದು, ಹುಳುಗಳನ್ನು ಪ್ರತಿ ಹಂತದಲ್ಲಿ ಪರೀಕ್ಷಿಸಿ, ತಾಂತ್ರಿಕ ನೆರವು ಮತ್ತು ಸಲಹೆಗಳನ್ನು ಕೊಡುತ್ತಿದ್ದರು. ಹುಳು ಸಾಕುವ ಮನೆಗಳಿಗೆ ಕ್ರಿಮಿನಾಶಕ ಸಿಂಪಡಿಸುವ ಪದ್ಧತಿ ಇತ್ತು. ಬೆಳೆದ ಗೂಡನ್ನು ಬಿತ್ತನೆಗೆ ಸರಬರಾಜು ಮಾಡವಲ್ಲಿ ನೆರವು ಕೊಡುತ್ತಿದ್ದರು. ಇದರ ಜೊತೆಗೆ ಮೈಸೂರು ತಳಿ ಬೆಳೆಯುವುದರಲ್ಲಿ ಮಾನಸಿಕವಾಗಿ ಹೊಂದಿಕೊಂಡಿದ್ದ ರೈತ ಕುಟುಂಬದವರು ಮಿಶ್ರ ಜಾತಿ ಸಾಕುವುದು ಕಷ್ಟ ಎಂದು, ಅದು ತಮಗೆ '' ಆಗಿಬರುವುದಿಲ್ಲ'' ಎಂದು ತಿಳಿದು ನಿರಾಸಕ್ತಿ ಮನೋಭಾವ ತಳೆದಿದ್ದರು. ಹೀಗೆ ಮಿಶ್ರ ತಳಿಯ ಗೂಡುಗಳನ್ನು ಮತ್ತು ಮೈಸೂರು ತಳಿಯ ಗೂಡುಗಳನ್ನು ಬೆಳೆಯುವ ಪದ್ಧತಿ ರೂಢಿಯಲ್ಲಿತ್ತು.

ಹೀಗಿರುವಲ್ಲಿ 1954ರಲ್ಲಿ ರೇಷ್ಮೆ ಬಿತ್ತನೆ ಮತ್ತು ಗೂಡುಗಳ ಉತ್ಪಾದನೆಯನ್ನು ನಿಯಂತ್ರಿಸಲು ಕಾನೂನನ್ನು ಮೊದಲನೆ ಸಲ ಮೈಸೂರು ಬಿತ್ತನೆ ವಲಯದಲ್ಲಿ ತರಲಾಯಿತು. ಕರ್ನಾಟಕದ ರೇಷ್ಮೆ ಉದ್ಯಮದ ಚಟುವಟಿಕೆಗಳನ್ನು ಕಾನೂನಿನ ಚೌಕಟ್ಟಿನಲ್ಲಿ ತರುವ ಮೊದಲ ಪ್ರಯತ್ನ ಇದು ಎಂದು ನನ್ನ ಭಾವನೆ. ಈ ಕಾನೂನಿನ ಪ್ರಮುಖ ಅಂಶವೆಂದರೆ, ಪ್ರಕಟಿತ ಪ್ರದೇಶದಲ್ಲಿ ಅಂದರೆ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಹೆಬ್ಬೂರು ಪ್ರದೇಶ ಮತ್ತು ಮಾಗಡಿ ತಾಲ್ಲೂಕಿನ ಎಲ್ಲಾ ಹಳ್ಳಿಗರು, ರಾಮಗರ ಮತ್ತು ದೊಡ್ಡಬಳ್ಳಾಪುರ ಕೆಲವು ಭಾಗಗಳಲ್ಲಿ ಮೈಸೂರು ತಳಿಯ ಗೂಡುಗಳಲ್ಲದೆ ಬೇರೆ ತಳಿಯ ಗೂಡುಗಳನ್ನು ಬೆಳೆಯುವುದನ್ನು ನಿಷೇಧಿಸಲಾಯಿತು. ಇರುವ ವ್ಯವಸ್ಥೆಯ ಬದಲಾವಣೆ, ಅದು ಒಳ್ಳೆಯದಕ್ಕಾಗಲಿ, ಕೆಟ್ಟದಕ್ಕಾಗಲಿ, ಯಾವುದೇ ಕ್ಷೇತ್ರದಲ್ಲಿ ಕಷ್ಟದ ಕೆಲಸ ಎನ್ನುವುದು ನಮಗೆ ತಿಳಿದ ವಿಷಯ. ಈ ಸಮಸ್ಯೆ ಇಲ್ಲೂ ತಲೆದೋರದೆ ಬಿಡಲಿಲ್ಲ. ಸ್ವೇಚ್ಛೆಯಾಗಿ ತಮಗೆ ಬೇಕಾದ ತಳಿಯನ್ನು ಬೇಕಾದ ರೀತಿಯಲ್ಲಿ ಬೆಳೆಯುತ್ತಿದ್ದ ರೈತರಿಗೆ ಸರ್ಕಾರ ತಂದ ಈ ಕಾನೂನಿನ ಕಡಿವಾಣ ಸ್ವಲ್ಪ ಮಟ್ಟಿಗೆ ಮುಜುಗರ ಉಂಟುಮಾಡಿತಲ್ಲದೆ ಪ್ರತಿಭಟನೆಗೆ ಅವಕಾಶವಾಯಿತು. ಮಿಶ್ರಜಾತಿಯ ಮೊಟ್ಟೆ ಸಾಕುವುದರಿಂದ ಇಳುವರಿ ಹೆಚ್ಚು, ಆದಾಯವು ಹೆಚ್ಚು, ಹೀಗಿರುವಾಗ ಹೆಚ್ಚು ಲಾಭದಾಯಕ ವಾದ ಮೊಟ್ಟೆಸಾಕುವವರು ಯಾರೂ ಕಡಿಮೆ ಇಳುವರಿಯ ಹಾಗೂ ಕಡಿಮೆ ಆದಾಯ ಬರುವ ಮೈಸೂರು ತಳಿ ಸಾಕಲು ಇಚ್ಛಿಸುತ್ತಿರಲಿಲ್ಲ. ಇದರಿಂದಾಗಿ ನಾನಾಗಲೇ ತಿಳಿಸಿದಂತೆ, ಮಿಶ್ರ ತಳಿಯನ್ನು ಸಾಕಬೇಕೆಂದು ಮಾಡಿದ ಕಾನೂನನ್ನು ಪ್ರತಿಭಟಿಸಿದರು.

ನನಗೆ ತಿಳಿದಿರುವಂತೆ ಈ ಸಂದರ್ಭದಲ್ಲಿ ಮಾಧ್ಯಮಿಕ ಶಾಲೆಯಲ್ಲಿ ನಾನು ಓದುತ್ತಿದ್ದೆ. ಪ್ರತಿಭಟನೆಯ ಫಲವಾಗಿ ಸರ್ಕಾರದ ತೀರ್ಮಾನದಂತೆ ನನ್ನ ಊರು ಬಿತ್ತನೆ ವಲಯದಿಂದ ಬೇರ್ಪಟ್ಟು, ಮಿಶ್ರತಳಿಯ ಚನ್ನಪಟ್ಟಣದ ವಲಯಕ್ಕೆ ಅಂದು ಸೇರಿತು. ಕಾನೂನ್ನು ಮುರಿದು ಮಿಶ್ರ ತಳಿಯನ್ನು ಬೆಳೆಯಲು ರೈತರು ಹಿಂಜರಿಯಲಿಲ್ಲ. ಈ ಸಂದರ್ಭಗಳೂ ಉಂಟು. ಬಿತ್ತನೆ ವಲಯದಿಂದ ತಮ್ಮನ್ನು ಬಿಡುಗಡೆ ಮಾಡಬೇಕು ಎನ್ನುವ ಬೇಡಿಕೆ ಅಂದೂ ಇತ್ತು ಇತ್ತೀಚಿನವರೆಗೂ ಇತ್ತು. ಈ ಬೇಡಿಕೆಗೆ ಸ್ಪಂದಿಸಿದ ಸರ್ಕಾರ ರಾಮನಗರ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಹಳ್ಳಿಗಳನ್ನು ಬಿತ್ತನೆ ವಯಲದಿಂದ ಬಿಡುಗಡೆ ಮಾಡಿತು. ಹೀಗೆ ಅಗಾಗ್ಗೆ ಬಿಡುಗಡೆ ಆಗಿ ಕೊನೆಯಲ್ಲಿ ಕುಣಿಗಲ್ ತಾಲ್ಲೂಕಿನ ಎಲ್ಲಾ ಹಳ್ಳಿಗಳೂ, ತುಮಕೂರು ತಾಲ್ಲೂಕಿನ ಹೆಬ್ಬೂರು ಹೋಬಳಿಯ ಹಳ್ಳಿಗಳು ಮತ್ತು ಮಾಗಡಿ ತಾಲ್ಲೂಕಿನ ಎಲ್ಲಾ ಹಳ್ಳಿಗಳು ಅಂತಿಮವಾಗಿ ಮೈಸೂರು ಬಿತ್ತನೆ ವಲಯದಲ್ಲಿ ಉಳಿದುಕೊಂಡವು. ಅಂದರೆ ಮಿಶ್ರ ತಳಿಯ ವ್ಯಾಪಕ ಬೆಳೆ ಮೊದಲಾದ ಮೇಲೆ ಬಿತ್ತನೆ ತಳಿಯ ವಲಯ ಅಸ್ತಿತ್ವಕ್ಕೆ ಬಂದಿತೆಂದು ಹೇಳಬಹುದು. ಸೀನಿಚಿ ತಳಿ ಗಂಡು ಗೂಡು ಇದು, ಬೆಳ್ಳಗೆ ಬುಡುಬುಡುಕೆ ಆಕಾರ ದಲ್ಲಿರುತ್ತದೆ. ಈ ತಳಿ ಎಲ್ಲಿಂದ ಯಾವಾಗ ಈ ದೇಶಕ್ಕೆ ಬಂದಿತೆಂದು ನಮಗೆ ಇಂದಿಗೂ ನಿರ್ದಿಷ್ಟ ಮಾಹಿತಿ ದೊರೆತಿಲ್ಲವಾದರೂ, ಸುಮಾರು 1930ನೇ

ಇಸವಿಯಲ್ಲಿ ಜಪಾನಿನ ರೇಷ್ಮೆ ತಜ್ಞರೊಬ್ಬರು ಭಾರತಕ್ಕೆ ತಂದರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅಂತೂ ಸುಮಾರು 1930ನೇ ಇಸವಿಯಿಂದಲೂ ಈ ತಳಿಯ ಗೂಡನ್ನು ಬೆಳೆಯುತ್ತಿದ್ದುದು ನಿಜ. ಸೀನಿಚಿ ತಳಿಯ ಗಂಡು ಗೂಡು ಮತ್ತು ಮೈಸೂರು ತಳಿಯ ಅಭಿವೃದ್ಧಿ ಕರ್ನಾಟಕ ರಾಜ್ಯದ ರೇಷ್ಮೆ ಉದ್ಯಮಕ್ಕೆ ಒಂದು ಹೊಸ ತಿರುವು ಕೊಟ್ಟಿತು. ಇದರ ಫಲವಾಗಿ, ಬಿತ್ತನೆ ವಲಯ ನಿರ್ಮಾಣವಾಯಿತು. ಈ ಬಿತ್ತನೆ ಬೆಳೆಯಲು ರೈತರನ್ನು ಸುಮಾರು 1954ರಲ್ಲಿ ಮೊದಲ ಬಾರಿಗೆ ಕಾನೂನಿನ ಚೌಕಟ್ಟಿಗೆ ತರಲಾಯಿತು. ಕೌತುಕದ ವಿಷಯವೆಂದರೆ, ಈ ಸೀನಿಚಿ ತಳಿ ಮೈಸೂರು ತಳಿಯಷ್ಟೇ ಗಟ್ಟಿಯಾದ ತಳಿ.

ಅನೇಕ ವರ್ಷಗಳಿಂದ ಈ ತಳಿಗಳು ಚಾಲ್ತಿಯಲ್ಲಿ ಇದ್ದರೂ ಇಂದಿಗೂ ಇವುಗಳ ಗಟ್ಟಿತನ ಕಡಿಮೆಯಾಗಿಲ್ಲ. ಸೀನಿಚಿ ತಳಿಯನ್ನು ಉಪಯೋಗಿಸಬಾರದೆಂದು ಸುಮಾರು ವರ್ಷಗಳ ಹಿಂದೆಯೇ ಸರ್ಕಾರ ನಿರ್ಬಂಧಿಸಿದ್ದರೂ, ಮೈಸೂರು ಜಿಲ್ಲೆಯ ಅದರಲ್ಲಿಯೂ ಚಾಮರಾಜನಗರದ ಬೆಳೆಗಾರರು ಇಂದಿಗೂ ಮೈಸೂರು ಮಿಶ್ರ ತಳಿಯನ್ನೇ ವ್ಯಾಪಕವಾಗಿ ಬೆಳೆಯುತ್ತಿದ್ದಾರೆ. ಕಾನೂನು ಮಾಡಿದವರೆಲ್ಲಾ ಕಣ್ಣು ಮುಚ್ಚಿ ಕುಳಿತ್ತಿದ್ದೇವೆ. ಆದರೆ ರೈತನಿಗೆ ಯಾವುದು ಉತ್ತಮ ಬೆಳೆ ಮತ್ತು ಬೆಲೆ ಕೊಡುತ್ತೋ ಅದನ್ನು ಬೆಳೆಯುತ್ತಿದ್ದಾರೆ. ಓಬಿರಾಯನ ಕಾಲದ ತಳಿಯನ್ನು ತ್ಯಜಿಸಿ, ಹೊಸ ತಳಿಗಳಿಂದ ಇಂದಿಗೂ ಸಫಲವಾಗಿಲ್ಲ. ಇಲಾಖೆಯ ಹಿರಿಯ ಅಧಿಕಾರಿ ಶ್ರೀ ಮಹದೇವಪ್ಪನವರ ಅಣ್ಣಂದಿರಾದ ಶ್ರೀ ಬಸವಣ್ಣನವರು ನನ್ನ ಹಿರಿಯ ಮಿತ್ರರಾದ ಕರುಬೂರಿನ ಗುರುಮಲ್ಲದೇವರು ಈಗಲೂ ಆ ತಳಿಯೇ ನಮಗೆ ಉತ್ತಮ ಬೆಳೆ ಕೊಡುತ್ತವೆಂದು ವಾದಿಸುತ್ತಾರೆ. ಇವರ ತೋಟಗಳು ಈಗಲೂ ನಾಟಿ ಕಡ್ಡಿ ತೋಟಗಳಾಗಿವೆ. ನಮ್ಮ ರಾಗಿ ಹೊಲಗಳಿಗೆ ಇವರ ಹಿಪ್ಪುನೇರಳೆ ತೋಟಗಳನ್ನು ಹೋಲಿಸ ಬಹುದು. ಈ ದೃಷ್ಟಿಯಿಂದ ಇವರ ವಾದದಲ್ಲಿ ತಿರುಳಿಲಿಲ್ಲದಿಲ್ಲ ಎಂದೆನಿಸುತ್ತದೆ. ಅಂತೂ ನಾಟಿ ಕಡ್ಡಿ, ಸೀನಿಚಿ ತಳಿ ಈಗಲೂ ಉಳಿದಿದೆ. ಸುಮಾರು 60ರ ದಶಕದಲ್ಲಿ ನಮ್ಮ ಮನೆಯಲ್ಲಿಯೂ ಈ ಬುಡುಬುಡುಕೆ ಗೂಡು ಮತ್ತು ಮೈಸೂರು ತಳಿಯಗೂಡಿನ ಮಿಶ್ರತಳಿಯ ಮೊಟ್ಟೆ ಮಾಡುವುದು, ಈ ಮೊಟ್ಟೆಯಿಂದ ಮಿಶ್ರತಳಿಯ ಗೂಡು ಬೆಳೆಯುವುದು ರೂಢಿಯಲ್ಲಿತ್ತು.

1950ರ ದಶಕದಲ್ಲಿ ನನ್ನ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ದಿನಗಳಲ್ಲಿ ರೇಷ್ಮೆ ಕಸುಬಿನಲ್ಲಿ ನನ್ನನ್ನು ನಾನು ಪೂರ್ಣವಾಗಿ ತೊಡಗಿಸಿಕೊಂಡಿದ್ದೆ. ತೋಟ ಹಾಕುವುದು, ಹಣ್ಣುಹುಳು ಹಾಯುವುದು, ಚಂದ್ರಿಕೆಗೆ ಬಿಡುವುದು, ಗೂಡುಕಟ್ಟಿದ ಮೇಲೆ ಚಂದ್ರಿಕೆಯಿಂದ ಎಡೆದು ಬುಟ್ಟಿಗೆ ತುಂಬುವುದು, ಆಮೇಲೆ ಆಕಳಿ ಗೂಡಿಗಾಗಿ ಕಾದು ಕೂರುವುದು. ಹೀಗೆ ಎಲ್ಲವನ್ನೂ ನಾನೇ ಸ್ವತಃ ಮಾಡುತ್ತಿದ್ದೆ. ಚಾಕಿ ಸೊಪ್ಪು ಕೊಯ್ಯುವುದು ಸುಲಭದ ಕೆಲಸವಲ್ಲ. ಸೊಪ್ಪನ್ನು (ಎಲೆಗಳನ್ನು) ಜೋಡಿಸಿ, ಕೊಯ್ಯುವಾಗ ಸ್ವಲ್ಪ ಎಚ್ಚರ ತಪ್ಪಿ ಹಿಡಿತ ಕಳೆದುಕೊಂಡರೆ ಕೈಗೆ ಚೂರಿ ಬೀಳುತ್ತೆ. ಇಲ್ಲವೇ ಹಿಡಿಯಲ್ಲಿದ್ದ ಸೊಪ್ಪು ನೆಲಕ್ಕೆ ಬೀಳುತ್ತೆ. ಚಾಕಿ ಸೊಪ್ಪು ಕೊಯ್ಯಲು ನಾವು ಚೂರಿಯನ್ನು

ಮಸೆಯುತ್ತಿದ್ದುದು ಕರಿಯ ನಾಡ ಹೆಂಚಿನ ಮೇಲೆ. ಕೊಯ್ಯಲು ಉಪಯೋಗಿಸುತ್ತಿದ್ದ ಮರದ ತುಂಡು ನನಗೆ ಜ್ಞಾಪಕವಿರುವಂತೆ ಪಾರಿವಾಳ ಮರದ್ದು. ಇದನ್ನು 'ಸೊಪ್ಪಿನ ಮಣೆ' ಎಂದೇ ಕರಯುತ್ತಿದ್ದೆವು. ಒಂದು ಹೊತ್ತಿನಲ್ಲಿ ಎದ್ದು ಸೀಮೆ ಎಣ್ಣೆ ದೀಪದ ಮಂದ ಬೆಳಕಿನಲ್ಲಿ ಸರೊತ್ತಿನ (ಮಧ್ಯರಾತ್ರಿ) ಸೊಪ್ಪು ಹಾಕುತ್ತಿದ್ದುದು, ಹುಳ ಬದಲಾಯಿಸಿ ಅದರ ಹಕ್ಕಿ ಕಸವನ್ನು ಬೇರೆ ಮಾಡಿ, ಕಸಗಳನ್ನು ಎತ್ತುಗಳಿಗೆ ಹಾಕುವುದು; ಈ ಕಸಗಳು ತಿಂದ ಎತ್ತುಗಳು ಸಂಕ್ರಾಂತಿ ಕಾಲದ ಸೊನೆ ಅವರೇ ಸೊಪ್ಪು ತಿಂದ ಎತ್ತುಗಳಂತೆಯೇ ತಯಾರಾಗುತ್ತಿದ್ದುವು. ಆ ವಯಸ್ಸಿನಲ್ಲಿ ನಮಗೆ ವಹಿಸುತ್ತಿದ್ದ ಮತ್ತೊಂದು ಕೆಲಸ ಚಂದ್ರಿಕೆ ಕಾಯುವುದು. ಇದೇನೂ ಸುಲಭವಾದ ಕೆಲಸವಾಗಿರಲಿಲ್ಲ. ಎಲ್ಲರ ಮನೆಯಲ್ಲಿಯೂ ಕೋಳಿ ಸಾಕುತ್ತಿದ್ದರು. ಹುಳು ಬಿಟ್ಟ ಚಂದಿಕೆಗಳನ್ನು ಮಗುಚಿ, ಎಳೆ ಬಿಸಿಲಿಗೆ ಕೋಲು ಕೊಟ್ಟು ನಿಲ್ಲಿಸಿದಾಗ, ಇಟ್ಟಾಗ ಸ್ವಲ್ಪ ಬಿಸಿಲೇರಿದ ಮೇಲೆ 'ಉಚ್ಚೆ' ತಡೆಯಲು ಚಂದ್ರಿಕೆಗಳನ್ನು ಮಗುಚಿ, ಕೋಲುಕೊಟ್ಟು ನಿಲ್ಲಿಸಿದಾಗ, ಈ ಕೋಳಿಗಳು ಬಂದು ಹುಳುವನ್ನು ತಿಂದುಬಿಡುತ್ತಿದ್ದವು. ನಾವೇನು ಪುಕಸಟ್ಟೆ ಚಂದ್ರಿಕೆ ಕಾಯಿತ್ತಿರಲಿಲ್ಲ. ಅದಕ್ಕಾಗಿ ನಮಗೆ ಬೆಲ್ಲ, ಕಡಲೆಕಾಯಿ ಮುಂತಾದ ತಿನಿಸುಗಳನ್ನು ಕೊಡುತ್ತಿದ್ದರು. ಇದಕ್ಕಿಂತ ಹೆಚ್ಚಾಗಿ ಆಕಳಿ ಗೂಡಿನ ಕಾಸಿನ ಆಸೆ ಈ ಕೆಲಸಕ್ಕೆ ನಮ್ಮನ್ನು ಪ್ರೋತ್ಸಾಹಿಸುತ್ತಿತ್ತು. ಎಷ್ಟೇ ಎಚ್ಚರವಹಿಸಿದರೂ ಕೆಲವು ಸಾರಿ ಕೋಳಿಗಳು ಹುಳ ತಿಂದು ನಮಗೆ ಏಟು ತಿನ್ನಿಸುತ್ತಿದ್ದವು. ಕೋಳಿ ಕಾಟ ತಪ್ಪಿಸಿಕೊಂಡು ಸಂಜೆ ಚಂದ್ರಿಕೆಗಳನ್ನು ಒಪ್ಪಾರಿನಲ್ಲಿ ಇಟ್ಟರೆ, ಅಲ್ಲಿ ಇಲಿಗಳ ಕಾಟ. ಚಾಕಿಗೆ ಇರುವೆ, ಹಣ್ಣು ಹುಳುಗಳಿಗೆ ಕೋಳಿ, ಕಾಗೆ ಕಾಟ. ಗೂಡುಗಳಿಗೆ ಇಲಿಗಳ ಕಾಟ. ಮಾರುಕಟ್ಟೆಯಲ್ಲಿ ದಲ್ಲಾಳಿಗಳ ಕಾಟ. ಸಾಕೇ ಈ ಬೆಳೆಗಾರರ ಪಾಡು ! ಅಂದಿನ ದಿನಗಳಲ್ಲಿ ನನ್ನ ಕುಟುಂಬದ ಬೇಸಾಯದ ಕಸುಬಿನ ಎಲ್ಲಾ ಕೆಲಸಗಳನ್ನು ನಾನು ಮಾಡುತ್ತಿದ್ದೆ.

1959ರಿಂದ 1962ರವರೆಗಿನ ನನ್ನ ಕಾಲೇಜು ಓದಿನ ಸಮಯದಲ್ಲಿ ಪದವಿ ಪಡೆಯುವವರೆಗೆ ನನ್ನ ಮತ್ತು ರೇಷ್ಮೆ ಕಸುಬಿನ ಸಂಬಂಧ ನಿಕಟವಲ್ಲದಿದ್ದರೂ ಪೂರ್ಣ ಕಡಿದುಹೋಗಿರಲಿಲ್ಲ. ನಾನು ಮತ್ತು ನನ್ನ ಕೆಲವು ಸಮಕಾಲೀನ ಸ್ನೇಹಿತರು ಓದಿ ವಿದ್ಯಾವಂತರಾಗಿದ್ದು ಒಂದು ಆಕಸ್ಮಿಕವೇ ಹೊರತು ಓದಲೇಬೇಕೆಂಬ ಒತ್ತಾಯದಿಂದಲ್ಲ : ''ನೀನು ಈ ದಿನ ಶಾಲೆಗೆ ಹೋಗದಿದ್ದರೆ ಕಂಚಿ ಗೋಪುರವ ಹದ್ದು ಹೊತ್ತುಕೊಂಡು ಹೋಗುವುದಿಲ್ಲ ಬಿಡು'' ಎಂದು ನನ್ನ ಎರಡನೇ ಅಣ್ಣ ರಾಗಿ ಬಿತ್ತುವ ದಿನ, ಕೊಯ್ಯುವ ದಿನ, ಗದ್ದೆ ನಾಟಿ ಹಾಗೂ ಹುಳು ಹಣ್ಣಾದ ದಿನಗಳಲ್ಲಿ ಹೇಳುತ್ತಿದ್ದರು. ಆದ್ದರಿಂದ ಪದವಿ ಕಾಲೇಜಿನಲ್ಲಿದ್ದಾಗಲೂ ಊರಿಗೆ ಬಂದ ಸಂದರ್ಭಗಳಲ್ಲಿ ಮತ್ತು ರಜಾ ದಿನಗಳಲ್ಲಿ ನಾನು ರೇಷ್ಮೆ ಕಸುಬಿನೊಡನೆ ಬೆರೆಯುತ್ತಿದ್ದೆ.

1962ನೇ ಇಸವಿ ಮಾರ್ಚಿನಲ್ಲಿ ನನ್ನ ಪ್ರೀತಿಯ ಅಕ್ಕ ಶ್ರೀಮತಿ ಚೆನ್ನಮ್ಮನವರ ಅಕಾಲಿಕ ಸಾವಿನ ನೋವಿನಲ್ಲಿಯೂ ನನ್ನ ಪದವಿ ಪರೀಕ್ಷೆ ಮುಗಿಸಿ, ಊರಿಗೆ ಬಂದೆ. ಕಬ್ಬಿನ

ಆಲೆಮನೆ ಒಂದು ಕಡೆ, ದಡೇವು ತುಂಬಾ ರೇಷ್ಮೆ ಹುಳ ಮತ್ತೊಂದು ಕಡೆ. ಆಲೆಮನೆಯಲ್ಲಿ ಅಣ್ಣಂದಿರು, ರೇಷ್ಮೆ ಹುಳುಗಳ ಜೊತೆ ನಾನು ಮತ್ತು ಮನೆ ಹೆಂಗಸರುಗಳು. ಎಲ್ಲದರಲ್ಲಿಯೂ ಉತ್ತಮ ಫಲಿತಾಂಶ. ಹುಳು ಹಣ್ಣಾದವು, ಒಳ್ಳೆಯ ಬೆಳೆ ಎಂದ ಮೇಲೆ ಒಳ್ಳೆ ಬೆಳೆ ಕೂಡ ಸಿಕ್ಕಿತು. ಆಲೆಮನೆ ಮುಗಿದು ಬೆಲ್ಲ ಮಾಡಿದ ಹಣವೂ ಬಂತು. ಪರೀಕ್ಷೆಯಲ್ಲಿ ನಾನು ಪಾಸಾದೆ. ನಾನು ಪಾಸಾದದ್ದು ಕಂಡು ತುಮಕೂರು ಒಕ್ಕಲಿಗರ ಹಾಸ್ಟೆಲ್ ವಾರ್ಡನ್ ಹನುಮಯ್ಯನವರಿಂದ ಹಿಡಿದು ಎಲ್ಲಾ ನನ್ನ ಸ್ನೇಹಿತರಿಗೂ ಆಶ್ಚರ್ಯ. ಏಕೆಂದರೆ ಯಾವತ್ತಿಗೂ ಗಂಭೀರವಾಗಿ ಕುಳಿತು ಓದಿದವನಲ್ಲ ನಾನು. ಇಡೀ ಊರಿಗೆ ನಾನೇ ಮೊದಲನೇ ಪದವೀಧರ. ಅಂದಮೇಲೆ ಪ್ರಜಾಪ್ರಭುತ್ವ ಬಂದು ಸ್ಥಳೀಯ ಸಂಸ್ಥೆಗಳ ಆಡಳಿತ ಪದ್ಧತಿ ಬಂದಾಗಿನಿಂದಲೂ, ಪಂಚಾಯತಿ ಅಧ್ಯಕ್ಷರಾಗಿದ್ದು ಈಗಲೂ ಮಂಡಲ್ ಪಂಚಾಯತಿ ಅಧ್ಯಕ್ಷರಾಗಿರುವ ನನ್ನ ಅಣ್ಣ ಕಂಬೇಗೌಡರು ಎಲ್ಲರನ್ನೂ ಕರೆದು 'ಮರಿ ಊಟ' ಹಾಕಿಸಿದರು.

ಬಿ.ಎ. ಪದವೀಧರನಾದ ನಾನು ಮುಂದೇನು ಮಾಡುವುದು? ದಯಮಾಡಿ ಕ್ಷಮಿಸಿ. ಇದು ನನ್ನ ಆತ್ಮಕಥೆಯಲ್ಲ ಎಂಬ ಅರಿವಿದ್ದರೂ ರೇಷ್ಮೆ ಮತ್ತು ನನಗೆ ಹೊರತಾದ ಆದರೆ ಇದಕ್ಕೆ ಪೂರಕವಾದ ಕೆಲವು ವಿಷಯಗಳನ್ನು ಪ್ರಸ್ತಾಪಿಸಿದ್ದೇನೆ. ಆ ದಿನಗಳಲ್ಲಿ ನನ್ನಲ್ಲಿ ಆದ ಮಾನಸಿಕ ಸ್ಥಿತಿಯಿಂದ ಸೆಟೆದು ನಿಂತ ''ಛಲ'' ನನ್ನ ಇಂದಿನ ಈ ಸ್ಥಿತಿಯ ಬದುಕಿಗೆ ಬುನಾದಿಯಾಯಿತು. ಛಲವನ್ನು ಮನದಲ್ಲಿ ಹೊತ್ತು, ಕಂಕುಳಲ್ಲಿ ನನ್ನ ತಾಯಿ ಕಟ್ಟಿಕೊಟ್ಟ ರೊಟ್ಟಿ ಬುತ್ತಿ ಹಿಡಿದು, ಅಣ್ಣ ಕೊಟ್ಟ ಅಲ್ಪ ಹಣದೊಡನೆ, 1962ನೇ ಇಸವಿ ಆದಿಭಾಗದಲ್ಲಿ ಧಾರವಾಡ ದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸೇರಿದೆ. ಇದಾದ ಮೇಲೆ 1966ನೇ ಇಸವಿಯಲ್ಲಿ ಇದ್ದ ಒಂದು ಪದವಿ ಜೊತೆಗೆ ಇನ್ನೂ ಎರಡು ಪದವಿ. (ಎಂ.ಎ., ಎಲ್.ಎಲ್.ಬಿ ಗಳನ್ನು ಹೊತ್ತು ಊರಿಗೆ ಬಂದೆ. ಈ ನಾಲ್ಕು ವರ್ಷಗಳಲ್ಲಿನ ನನ್ನ ವಿದ್ಯೆಗಾಗಿ ನಡೆಸಿದ ಹೋರಾಟದ ಅಧ್ಯಾಯವೇ ಒಂದು ಪುಸ್ತಕ ಆಗಬಹುದು. ಆದರೆ ಅದರ ಅವಶ್ಯಕತೆ ಇಲ್ಲಿಲ್ಲ. ಈ ದಿನಗಳಲ್ಲಿ ಎಲ್ಲರಿಂದ, ಎಲ್ಲದರಿಂದ ದೂರವಿದ್ದ ನಾನು ರೇಷ್ಮೆಯಿಂದಲೂ ದೂರವಿದ್ದೆ. ಒಂದು ವಿಧವಾದ ಅಜ್ಞಾತವಾಸದಲ್ಲಿ ಇದ್ದುಕೊಂಡು ಮುಂದಿನ ಬದುಕಿಗಾಗಿ ''ಕಮ್ಮಟದಲ್ಲಿ ಸಾಧನೆ'' ಮಾಡಿದ ದಿನಗಳವು.

1967ನೇ ಇಸವಿ ಆಗಸ್ಟ್ ತಿಂಗಳಲ್ಲಿ ತುಮಕೂರಿನಲ್ಲಿ ವಕೀಲಿ ಮೊದಲುಮಾಡಿದೆ. ವಕೀಲಿ ವೃತ್ತಿಯಲ್ಲಿ ಪರಿಣತಿ ಪಡೆಯುವ ಹಂಬಲ ಮತ್ತು ಹಠ. ಇಲ್ಲಿಯ ವಕೀಲರುಗಳ ಜೊತೆ ಕೋರ್ಟುಗಳು, ಕೇಸುಗಳು ಪಾಂಡಿತ್ಯ ಪಡೆಯುವ ಉತ್ಕಟ ಆಕಾಂಕ್ಷೆ ಮತ್ತು ಹಣ ಮಾಡುವ ಆಸೆಗಳಲ್ಲಿ ತೊಡಗಿದ್ದ ನನ್ನ ಹತ್ತಿರ ರೇಷ್ಮೆ ಸುಳಿಯಲಿಲ್ಲ.

1970ನೇ ಇಸವಿಯಲ್ಲಿ ತುಮಕೂರಿನಿಂದ ಕುಣಿಗಲ್‌ಗೆ ಬಂದು ವಕೀಲಿ ಮೊದಲು ಮಾಡಿದೆ. ಅನೇಕ ನನ್ನ ಸ್ನೇಹಿತರು ನಾನು ತುಮಕೂರಿನಲ್ಲಿಯೇ ವಕೀಲಿ ಮುಂದುವರಿಸ

ಬೇಕೆಂದು, ಅದು ನನ್ನ ಭವಿಷ್ಯತ್ತಿಗೆ ಅನುಕೂಲವೆಂದು ಬುದ್ಧಿಮಾತುಗಳನ್ನಾಡಿದರು. ಆದರೆ ಆ ಹೊತ್ತಿಗೆ ನನಗೆ ವಕೀಲಿಗಿರಿ ಮತ್ತು ಅದರಿಂದ ಹಣ ಸಂಪಾದನೆ ಮಾಡುವುದಷ್ಟೆ ನನ್ನ ಜೀವನದ ಗುರಿ ಆಗಿರಲಿಲ್ಲ. ಒಬ್ಬ ಸಾಮಾನ್ಯ ರೈತನ ಮಗನಾಗಿ, ನನಗಿರಬೇಕಾದ ಸಾಮಾಜಿಕ ಹೊಣೆಗಾರಿಕೆಯ ಬಗ್ಗೆ ನನಗೆ ಅರಿವಿತ್ತು. ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆಂಬ ಹಂಬಲ ಅಂತರ್ಯದಲ್ಲಿ ಅಡಗಿತ್ತು. ಆದರೆ ಎದೆಯಲ್ಲಿನ ಈ ಹಂಬಲ ದನಿಯಾಗಿರಲಿಲ್ಲ. ಕುಣಿಗಲ್‌ನಲ್ಲಿಯೂ ನನ್ನ ವಕೀಲಿ ಕಸುಬು ಚೆನ್ನಾಗಿಯೇ ನಡೆಯುತ್ತಿತ್ತು ನಿಜವಾಗಿಯೂ ನಾನು ಸುಪ್ರಸಿದ್ಧ ವಕೀಲನಾಗಿದ್ದೆ. ಕೈತುಂಬಾ ಕೆಲಸ, ಜೇಬಿನ ತುಂಬಾ ಹಣ, ಬಂಗಲೆ ಕಟ್ಟಿಸಿದೆ. ಕಾರು ಕೊಂಡುಕೊಂಡೆ. ಒಂದಲ್ಲ, ಎರಡಲ್ಲ ಮೂವತ್ತಮೂರು ಎಕರೆ ಜಮೀನು ಕೊಂಡು, ನನ್ನ ಬದುಕಿನ ಸಾಧನೆ ಎಂದು ನಾನು ಹೆಮ್ಮೆಪಡುವ ವನಸಿರಿಯಂತಿರುವ ತೋಟವನ್ನೂ ಮಾಡಿದೆ.

ರೋಟರಿ ಕ್ಲಬ್ಬಿನ ಅಧ್ಯಕ್ಷಪದವಿ, ವಕೀಲರ ಸಂಘದ ಅಧ್ಯಕ್ಷತೆ, ಕುಣಿಗಲ್ ತಾಲ್ಲೂಕು ಸ್ಕೌಟು ಮತ್ತು ಗೈಡ್ಸ್‌ನ ಅಧ್ಯಕ್ಷತೆ ಹೀಗೆ ಹತ್ತು ಹಲವು ರೀತಿ ಸಾಮಾಜಿಕ ಚಟುವಟಿಕೆಗಳಲ್ಲಿ ನಾನಾಗಲೇ ಗುರುತಿಸಿಕೊಂಡಿದ್ದೆ. ರಾಜಕೀಯ ಕ್ಷೇತ್ರದಲ್ಲಿ ಒಂದು ಪಕ್ಷದ ಅಭಿಮನ್ಯುವಾಗಿದ್ದೆ. (ಈ ರೀತಿ ಹೇಳುತ್ತಿದ್ದವರು ಶ್ರೀ ಸಾಗರನಹಳ್ಳಿ ರೇವಣ್ಣನವರು).

ಅದೊಂದು ದಿನ, 1972ನೇ ಇಸವಿಯ ಒಂದು ಸಂಜೆ ನನ್ನ ಬದುಕಿನಲ್ಲಿ ಬಹಳ ಪ್ರಮುಖವಾದ ದಿನ. ನನ್ನ ಸಾಮಾಜಿಕ ಪ್ರಜ್ಞೆಗೆ ಕಿಚ್ಚು ಹಚ್ಚಿದ ದಿನ. ನನ್ನಲ್ಲಿದ್ದ ಸಾಮಾಜಿಕ ಜೀವನದ ಆಕರ್ಷಣೆಗೆ ತೀವ್ರತೆಯನ್ನು ತಂದ ದಿನ. ಹಣ ಸಂಪಾದನೆ ಮಾಡುವ ಯಂತ್ರವಾಗಿದ್ದ ನನಗೆ ಜೀವ ಕೊಟ್ಟ, ವಿದ್ಯೆ ಕೊಟ್ಟ, ಹಣ, ಆಸ್ತಿ ಅಧಿಕಾರ ಕೊಟ್ಟ ಜನರ ಬಗ್ಗೆ ನನಗಿರಬೇಕಾದ ಸಾಮಾಜಿಕ ಹೊಣೆಗಾರಿಕೆಯ ಕುರಿತು ಜ್ಞಾನೋದಯವಾದ ದಿನ ಅಂದು. ಸಂಜೆ ಸುಮಾರು ಆರು ಗಂಟೆ ಸಮಯ. ಕಚೇರಿಯ ಗುಮಾಸ್ತರು ಮತ್ತು ನನ್ನ ಕಿರಿಯ ವಕೀಲರುಗಳು ಅವರವರ ಕೆಲಸದಲ್ಲಿ ಮಗ್ನರಾಗಿದ್ದರು. ಕೆಲವು ಜನ ಕಕ್ಷಿದಾರರು ಕುಳಿತಿದ್ದರು. ಆಗ ಕಪ್ಪನೆ ಬಣ್ಣದ ಹಳ್ಳಿಯ ಒಂದು ಹೆಂಗಸು ಮತ್ತು ಗಂಡಸು ನನ್ನ ಆಫೀಸಿಗೆ ಬಂದು ನನ್ನಿಂದ ಬಹುದೂರದಲ್ಲೇ ನಿಂತು ಕೈಮುಗಿದರು. ಯಾವುದೋ ಕಟ್ಟಳೆಯ ಕಟ್ಟಿನಲ್ಲಿ ಮಗ್ನನಾಗಿದ್ದ ನಾನು ಕತ್ತೆತ್ತಿ ನೋಡಿದೆ. ಆ ಎರಡು ಜೀವಗಳು ಮಿಕಿ ಮಿಕಿ ನನ್ನನ್ನು ನೋಡುತ್ತಿದ್ದುವು. ಕೋಪ ಅನ್ನುವುದು ಸದ್ಗುಣವೋ, ದುರ್ಗುಣವೋ ನನಗೆ ಗೊತ್ತಿಲ್ಲ. ಆದರೆ ಕೋಪ ನನ್ನ ಬದುಕಿನಲ್ಲಿ ಬೇರೂರಿದ ಗುಣ. ಈ ಕೋಪದ ಕೈಗೆ ಬುದ್ಧಿಕೊಟ್ಟು ಅದಕ್ಕೆ ಸಾಕಷ್ಟು ಬೆಲೆ ತೆತ್ತಿದ್ದೇನೆ. ಈ ಕೋಪಕ್ಕೆ ಹೆದರಿ, ಅನೇಕ ಜನ ನನ್ನ ಕಕ್ಷಿಗಾರರು ನನ್ನೊಡನೆ ಅತ್ಯಂತ ಭಯದಿಂದ ಇರುತ್ತಿದ್ದರು. ಅದಕ್ಕಾಗಿಯೇ ಏನೋ 'ಏನು ಹೇಳಿ' ನಾನು ಎಂದು ನಾನು ಪ್ರಶ್ನಿಸಿದರೂ ಈ ಕುಳಗಳು ಬಾಯಿ ಬಿಡಲಿಲ್ಲ. ಕೂರಲು ಹೇಳಿದೆ.

ನಾನು ಕಡತವನ್ನು ನೋಡಿ ಮುಗಿಸಿದ ಮೇಲೆ, ನಿಧಾನವಾಗಿ ಒಂದು ಸಿಗರೇಟು ಸೇದಿ ಅವರ ಬಗ್ಗೆ ಮತ್ತೆ ಕೇಳಿದೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಕಂಡುಂಡ ಅನುಭವ, ನಡೆದ ಘಟನೆಗಳು,

ಜನರ ಕಾರ್ಯವೈಖರಿ ಮೇಲೆ ಎಂತಹ ಪ್ರಭಾವ ಬೀರಬಲ್ಲದು ಎಂದು ಹೇಳುವುದಷ್ಟೇ ನನ್ನ ಅಭಿಲಾಷೆ. ಬಂದಿದ್ದ ಆ ಗಂಡಸು, ಕುಣಿಗಲ್ ತಾಲ್ಲೂಕಿನ ಹುಲಿಯೂರು ದುರ್ಗ ಹೋಬಳಿಯ ಹಳೇವೂರು ಗ್ರಾಮದ ಶ್ರೀ ಕರಿಮದ್ದ. ಅವನ ಜೊತೆಯಲ್ಲಿದ್ದ ಹೆಂಗಸು ಅವನ ತಂಗಿ. ದಾಖಲೆಯಲ್ಲಿ ತಿಮ್ಮಮ್ಮ. ಕರೆಯುವುದು ತಿಮ್ಮಿ. ಅದಕ್ಕಾಗಿಯೇ ನಾನು ಇದನ್ನು ಕರಿಮದ್ದನ ತಂಗಿಯ ಕಥೆ ಎನ್ನಲು ಇಚ್ಛಿಸುತ್ತೇನೆ. ಕಥೆಯೆಂದರೆ ಇದು ಕಟ್ಟುಕಥೆಯಲ್ಲ. ನಿಜ ಜೀವನದಲ್ಲಿ ನಡೆದ ಒಂದು ಸಾಮಾನ್ಯವಾದ, ಆದರೆ ಸತ್ಯವಾದ ಘಟನೆ. ನನ್ನ ಲೇಖನಿಯಿಂದ ಒಂದು ಘಟನೆಯಾಗುವ ಈ ವಸ್ತು , ಕಥೆ ಬರೆಯುವ ನನ್ನ ಗೆಳೆಯರಿಗೆ ಒಂದು ಉತ್ತಮ ಕಥಾವಸ್ತುವಾಗುತ್ತಿತ್ತೆಂದು ಕಾಣುತ್ತದೆ.

ಹಳೇವೂರಿನ ಕರಿಮದ್ದನ ತಂಗಿ ತಿಮ್ಮಮ್ಮನನ್ನು 60 ವರ್ಷ ವಯಸ್ಸಿನ ಬೋರಯ್ಯನಿಗೆ, ಅವನ ಮೊದಲನೆ ಹೆಂಡತಿ ಬದುಕಿರುವಾಗಲೇ ಎರಡನೇ ಹೆಂಡತಿಯಾಗಿ ಮದುವೆ ಮಾಡಿಕೊಟ್ಟರು. ಎರಡು ಮಕ್ಕಳೂ ಆದವು. ಕಾಲಕ್ರಮೇಣ ಅವನಿಗೆ ಇಬ್ಬರು ಹೆಂಡಿರ ಕಾಟ ಶುರುವಾಯಿತು. ಬೋರಯ್ಯನಿಗೆ ಕೆಲವು ತಿಳಿದವರು ಹೇಳಿದರು. ಮೊದಲ ಹೆಂಡತಿ ಬದುಕಿರುವಾಗಲೇ ಎರಡನೇ ಹೆಂಡತಿಯನ್ನು ಮದುವೆಯಾಗಿ ಎರಡು ಮಕ್ಕಳನ್ನು ಹೆತ್ತ ಈ ಹೆಣ್ಣು ಏನು ಮಾಡಬೇಕು ಈಗ? ಹಾಲಗೆರೆ ಗುಂಡೇಗೌಡರು, ಕೊರಟಿ ಹನುಮಂತಯ್ಯ, ಅಮೃತೂರಿನ ರಾಮಣ್ಣಗೌಡರು ನ್ಯಾಯ ಮಾಡಿ ಒಂದು ನಿವೇಶನ, 2 ಗುಂಟೆ ಹೊಲ, 10 ಗುಂಟೆ ಗದ್ದೆಯನ್ನು ಬೋರಯ್ಯನ ಎರಡನೆ ಹೆಂಡತಿ ತಿಮ್ಮಮ್ಮನಿಗೆ ಬರೆದುಕೊಡುವಂತೆ ತೀರ್ಮಾನಿಸಿದರು. ಈ ತೀರ್ಮಾನದಂತೆ ತಿಮ್ಮಮ್ಮ, ಬೋರಯ್ಯ ಮತ್ತು ಇತರರು ಕುಣಿಗಲ್ ಬಂದು ತಿಮ್ಮಮ್ಮನಿಗೆ ಕೊಡುವ ಭಾಗದ ಆಸ್ತಿಯ ಪತ್ರ ಬರೆಸಿದರು. ಪತ್ರ ಬರೆದವರು, ಜಿನ್ನಾಗರದ ಶ್ರೀ ಗುಂಡಯ್ಯನವರು. ಈ ಪತ್ರ ಸಬ್ ರಿಜಿಸ್ಟ್ರಾರ್ ಅವರ ರೂಬು ರೂಬು ರಿಜಿಸ್ಟ್ರಾಯಿತು. ತುಂಬಾ ಸಂತೋಷದಿಂದ ತಿಮ್ಮಮ್ಮ ಮನೆಗೆ ಹೋದಳು. ಮೂರು ದಿನಗಳಾದ ಮೇಲೆ ಕುಣಿಗಲ್‌ಗೆ ಬಂದು ರಿಜಿಸ್ಟ್ರಾರ್ ಆಫೀಸಿನಲ್ಲಿ ಪತ್ರ ತೆಗೆದುಕೊಂಡು ಮನೆಗೆ ಬಂದು, ಮನೆದೇವರು ಹಳೇವೂರಮ್ಮನ ಹೆಸರು ಹೇಳಿ ಪೂಜಿಸಿ ತನ್ನ ಹಳೆಯ ಟ್ರಂಕಿನಲ್ಲಿ ಇಟ್ಟಳು.

ಮುಂಗಾರು ಮಳೆ ಬಿದ್ದು ಭೂತಾಯಿ ತಂಪಾದಳು. ಬೋರಯ್ಯನವರು ತಾನು ತಿಮ್ಮಮ್ಮನವರಿಗೆ ಬರೆದುಕೊಟ್ಟಿದ್ದ ಜಮೀನಿಗೆ ಹೇರು ಕಟ್ಟಿಕೊಂಡು ಉಳಲು ಬಂದರು. ''ನನಗೆ ಮತ್ತು ನನ್ನ ಮಕ್ಕಳಿಗೆ ಬರೆದುಕೊಟ್ಟಿರುವ ಜಮೀನನ್ನು ಏಕೆ ಉಳುತ್ತೀಯ?'' ಎಂದು ತಿಮ್ಮಮ್ಮ ಕೇಳಿದರೆ, ಯಾರೇ ಹೇಳಿದೋರು ನಿನಗೆ? ನಾನೆಲ್ಲಿ ನಿನಗೆ ಆಸ್ತಿ ಬರೆದುಕೊಟ್ಟಿದ್ದೇನೆ ? ನೀನೇ ನನ್ನ ಆಸ್ತಿಯಲ್ಲಿರುವ ನಿನ್ನ ಭಾಗವನ್ನು ನನಗೆ ಬರೆದುಕೊಟ್ಟಿದ್ದೀಯ ಎಂದ ಬೋರಯ್ಯ. ಅವಳಿಗೆ ಆಘಾತವಾಯಿತು. ಈ ಹೆಣ್ಣು ಮಗಳು ತೌರೂರು ಹಳೇವೂರಿಗೆ ಓಡಿದಳು. ಈ ಊರು, ನಮ್ಮ ಕತೆಗಾರ ಡಾ. ಕರೀಗೌಡ ಬೀಚನಹಳ್ಳಿ ಅವರ ಊರಿಗೆ ಅತಿ ಸಮೀಪದ್ದು ನಡೆದ ವಿಷಯವನ್ನು

ತಮ್ಮನಿಗೆ ತಿಳಿಸಿದಳು. ಅವನನ್ನು ಕರೆದುತಂದು ದುಬಾರಿ ಫೀಸಿನ ಕಡುಕೋಪಿಯಾದ ಸುಪ್ರಸಿದ್ಧ ವಕೀಲನಾದ ನನ್ನ ಮುಂದೆ ದೈನ್ಯವಾಗಿ ನಿಂತಿದ್ದಾಳೆ. ಕಥೆಯೆಲ್ಲಾ ಕೇಳಿ ಪತ್ರವನ್ನು ಓದಿದೆ. ಆ ವಿವರವನ್ನೆಲ್ಲಾ ಇಲ್ಲಿ ಬರೆದರೆ ಅದೇ ದೊಡ್ಡದಾಗುತ್ತೆ. ನಾನು ಆ ವೇಳೆಗೆ ಮಾಡಿದ ಅಪರಾಧವನ್ನು ಇಲ್ಲವೆಂದು ವಾದಿಸುವುದರಲ್ಲಿ, ಕಕ್ಷಿಗಾರನು ಸೃಷ್ಟಿಸಿದ ದಾಖಲೆಗಳ ಆಧಾರದ ಮೇಲೆ ಸುಳ್ಳು ಕೇಸುಗಳನ್ನು ಅತ್ಯಂತ ಶ್ರದ್ಧೆಯಿಂದ ವಾದಿಸುವ ಚತುರನಾಗಿದ್ದೆ. ಈ ಕಥೆ ಕೇಳಿ ಪತ್ರ ಓದಿದ ಮೇಲೆ ನನ್ನ ಶರೀರದಲ್ಲಿ ವಿದ್ಯುತ್ ಸಂಚರಿಸಿದಂತಾಯಿತು. ಮೂಕನಾದೆ. ಅವೇಳೆಯಾದರೂ, ಹೋಟೆಲಿನ ಗಬ್ಬು ಟೀ ತರಿಸಿ ಕುಡಿದು, ಒಂದಾದ ಮೇಲೆ ಒಂದರಂತೆ ಸಿಗರೇಟು ಸೇದಿದೆ. ಎಂತಹ ಜನ? ಶೋಷಣೆಗೆ, ಮೋಸಕ್ಕೆ, ಅನ್ಯಾಯಕ್ಕೆ ಒಂದು ಮಿತಿ ಬೇಡವೇ? ಸುಪ್ತವಾಗಿದ್ದ ನನ್ನ ಚೇತನ ಎಚ್ಚರಗೊಂಡಿತು. ನಡೆದಿದ್ದು ಇಷ್ಟೆ: ಬೋರಯ್ಯನು ಈ ತಿಮ್ಮಮ್ಮನಿಗೆ ಬರದುಕೊಟ್ಟ ಆಸ್ತಿಗೆ ಸಂಬಂಧಪಟ್ಟ ಪತ್ರ ಬರೆದ ಮೇಲೆ ಅದು ರಿಜಿಸ್ಟರ್ಡ್ ಆಗುವ ಮೊದಲು ತಿಮ್ಮಮ್ಮನೇ ಬೋರಯ್ಯನಿಗೆ ಬರೆದುಕೊಟ್ಟ ಪತ್ರವಾಗಿ ಬದಲಾವಣೆಯಾಗಿ ರಿಜಿಸ್ಟರ್ಡ್ ಆಗಿದೆ ! ನೀವು ನಂಬುತ್ತೀರ ? ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಇದು ಸೂರ್ಯ - ಚಂದ್ರರ ಬೆಳಕಿನಷ್ಟೇ ಸತ್ಯ. ಈ ಪತ್ರ ಈಗಲೂ ಇದೆ. ಬರೆದವರು, ಸಾಕ್ಷಿ ಹಾಕಿದವರು ಇದ್ದಾರೆ. ಇದು ಹೇಗೆ ಸಾಧ್ಯವೆಂದೂ ನಿಮಗೆ ಕುತೂಹಲವಿರಬಹುದು. ತುಂಬಾ ಸುಲಭವಾಗಿ ಸಹಜವಾಗಿ ಮಾಡಿದ್ದಾರೆ ಈ ಕೆಲಸವನ್ನು. ಪತ್ರದಲ್ಲಿ ''ನನಗೆ'' ಎನ್ನುವ ಕಡೆ ''ನಿನಗೆ'', ''ನೀನು'' ಎನ್ನುವ ಕಡೆ ''ನಾನು'', ''ನಿನ್ನದು'' ಎನ್ನುವ ಕಡೆ ''ನನ್ನದು'' ಎಂದು ತಿದ್ದಿ ರಿಜಿಸ್ಟರ್ಡ್ ಮಾಡಿಸಿದ್ದಾರೆ. ಎಂತಹ ವಂಚಕರು? ಮುದಿಗೂಬೆಯನ್ನು ಮದುವೆಯಾಗಿ ಅವನಿಂದ ಎರಡು ಮಕ್ಕಳನ್ನು ಹೆತ್ತು-ಹೊತ್ತು ಸಾಕುವ ಸಂಕಟ ಒಂದು ಕಡೆ. ಆದರೆ ಈ ವಂಚಕರ ಘೋರ ಕೃತ್ಯ ಇನ್ನೊಂದು ಕಡೆ.

ಒಂದು ಕ್ಷಣ ನಾನೇ ತುಸು ಬೆವರಿದೆ ಹಾಗೂ ಬೆಚ್ಚಿದೆ. ಕಾರಣ, ಸಂಪೂರ್ಣ ಅವಿದ್ಯಾವಂತರಾದ ನನ್ನ ನಾಲ್ಕು ಜನ ಅಕ್ಕಂದಿರು ನನ್ನ ಕಣ್ಣಮುಂದೆ ಬಂದರು. ಇವರಿಗೆ ಯಾರಿಗಾದರೂ ಇಂತಹ ವಂಚನೆ, ಅನ್ಯಾಯ ಆದರೆ? ನಮ್ಮ ಮಧ್ಯೆ ಇಂತಹ ವಂಚನೆಗೆ ಗುರಿಯಾದ ಅದೆಷ್ಟು ಜನ ಅಕ್ಕ-ತಂಗಿಯರಿದ್ದಾರೋ ಅನ್ನಿಸಿತು. ಮೊಟ್ಟಮೊದಲಿಗೆ ಕಕ್ಷಿದಾರನನ್ನು ನಾನು ನೋಡುವ ದೃಷ್ಟಿಯಲ್ಲಿ, ನಾನು ಅವರನ್ನು ಮಾತನಾಡಿಸವ ಶೈಲಿಯಲ್ಲಿ ಬದಲಾವಣೆ ಆದುದನ್ನು ಅ ದಿನ ಕಛೇರಿಯಲ್ಲಿದ್ದ ನನ್ನ ಕಿರಿಯ ಮಿತ್ರ ವಕೀಲರು ಗಮನಿಸಿರಬಹುದು. ಭಾರವಾದ ಹೃದಯದಿಂದ, ಕಸಿವಿಸಿಗೊಂಡ ಚಿಂತನೆಗಳ ನಡುವೆ ''ನೀವು ಬೆಳಿಗ್ಗೆ ಬನ್ನಿ'' ಎಂದು ಹೇಳಿ ಅವರನ್ನು ಕಳುಹಿಸಿದೆ. ಭಾರವಾದ ಹೃದಯದಲ್ಲಿ ಎಂತಹುದೋ ಯೋಚನೆ. ಇಂಥ ಸನ್ನಿವೇಶದಲ್ಲಿ ಆಗ ಮೈಸೂರು ರೇಷ್ಮೆ ಬಿತ್ತನೆ ವಲಯದ ಸಹನಿರ್ದೇಶಕರಾಗಿದ್ದ ಶ್ರೀ ಕೆ. ವೀರಯ್ಯನವರು ಮತ್ತು ಅವರ ಸಹೋದ್ಯೋಗಿಗಳು ನನ್ನ ಕಛೇರಿಗೆ ಬಂದರು. ಅವರು ಇಲಾಖೆ ಬಗ್ಗೆ, ಕರ್ನಾಟಕ ರೇಷ್ಮೆ ಸಂಘದ ಬಗ್ಗೆ ಏನೇನೋ ಹೇಳಿದರು. ಆದರೆ ನನಗೆ ಆ ದಿನ

ಯಾವುದರ ಬಗ್ಗೆಯೂ ಆಸಕ್ತಿ ಉಳಿದಿರಲಿಲ್ಲ. ನನ್ನ ತಲೆಯ ತುಂಬಾ ಕರಿಮುದ್ದನ ತಂಗಿಯ ಬದುಕಿನ ಬವಣೆಯೇ ತುಂಬಿತ್ತು. ತುಂಬಾ ಯಾಂತ್ರಿಕವಾಗಿ ನಿಮಗೆ ''ಏನಾಗಬೇಕು'' ಎಂದು ಕೇಳಿದೆ: ''ಕರ್ನಾಟಕ ರೇಷ್ಮೆ ಸಂಘದ ಸದಸ್ಯರಾಗಬೇಕು. ಅದರ ಶುಲ್ಕ 10-00 ರುಪಾಯಿ'' ಎಂದರು. ನನಗೆ ಇವರಿಂದ ಬಿಡುಗಡೆ ಬೇಕಾಗಿತ್ತು. 10-00 ರೂಪಾಯಿ ಕೊಟ್ಟು ರಸೀದಿ ಪಡೆದು ಇದರಿಂದ ಬಿಡಗಡೆ ಹೊಂದಿದೆ. ನಾನು ಆ ದಿನ ಕರ್ನಾಟಕ ರೇಷ್ಮೆ ಸಂಘದ ಸದಸ್ಯನಾದೆ. ನನಗೆ ಅರಿವಿಲ್ಲದಂತೆ ಅತ್ಯಂತ ಸ್ವಾಭಾವಿಕವಾಗಿ, ಆದರೆ ಮುಂದೆ ಬಹಳ ಪ್ರಮುಖ ಬೆಳವಣಿಗೆಗಳಿಗೆ ನಾಂದಿ ಹಾಡಿದ ಘಟನೆ ನಡೆದುಹೋಗಿತ್ತು.

ಆ ದಿನದ ನನ್ನ ಮನಸ್ಥಿತಿಯಲ್ಲಿ ಈ ರೇಷ್ಮೆ ಇಲಾಖೆಯವರನ್ನು ಮಾತನಾಡಿಸಲು ನನಗೆ ಸಹನೆಯಾಗಲಿ, ಆಸಕ್ತಿಯಾಗಲಿ ಇರಲಿಲ್ಲ. ಆದರೆ ಶ್ರೀ ಕೆ. ವೀರಯ್ಯ ಅವರ ಬಗೆಗೆ ನನಗೆ ಗೌರವ ತರುವ ಒಂದು ಸಂದರ್ಭ ಜ್ಞಾಪಕಕ್ಕೆ ಬಂದು ಇವರೊಡನೆ ಸಹನೆಯಿಂದ ನಡೆದುಕೊಳ್ಳಬೇಕಾಯಿತು.

1968-69 ಇರಬಹುದು, ಆಗ ತಾನೆ ನಾನು ಮದುವೆಯಾಗಿದ್ದೆ. ಆಗಿನ ರೇಷ್ಮೆ ಇಲಾಖೆಯ ಉಪಸಚಿವರಾಗಿದ್ದ ಶ್ರೀ ಜಿ. ತಮ್ಮಣ್ಣಗೌಡರು ''ಎಲ್ಲಯ್ಯ ಹೊಸ ಮದುವೆಗಂಡು ಸಿಗರೇಟು ಕೊಡು'' ಎಂದು ನಿಡಸಾಲೆ ಕೆರೆಯ ಟಿ.ಬಿ.ಯಲ್ಲಿ ತಮಾಷೆ ಮಾಡಿದರು. ನಿಡಸಾಲೆಯ ಪ್ರೌಢಶಾಲೆಯ ಉದ್ಘಟನಾ ಸಮಾರಂಭ, ಅಲ್ಲಿಂದ ಅರಮನೆ ಹೊನ್ನಮಾಚನ ಹಳ್ಳಿಯ ಮದರಾಸು ಸ್ವಾಮಿಗಳ ಮಠದ ಕಾರ್ಯಕ್ರಮ ಮುಗಿಸಿ ಈ ರೇಷ್ಮೆ ಖಾತೆ ಮಂತ್ರಿ ಗಳೊಡನೆ ಕುಣಿಗಲ್‌ಗೆ ಹಿಂದಿರುಗಿದಾಗ ಸುಮಾರು ಹತ್ತು-ಹನ್ನೊಂದು ಗಂಟೆ. ಆಗ ನಾನು ತುಮಕೂರಿನಲ್ಲೇ ವಾಸವಾಗಿದ್ದೆ. ಆ ವೇಳೆಗೆ ನಾನು ತಾಲ್ಲೂಕು ಅಭಿವೃದ್ಧಿ ಸಮಿತಿಯ ಸದಸ್ಯನೂ ಆಗಿದ್ದೆ. ಆ ವೇಳೆಯಲ್ಲಿ ಕುಣಿಗಲ್‌ನಲ್ಲಿ ಮಲಗಲು ಪ್ರವಾಸಿ ಮಂದಿರದಲ್ಲಿ ಸ್ಥಳವಿರಲಿಲ್ಲ. ತುಮಕೂರಿಗೆ ಹೋಗಲು ಬಸ್ಸಿಲ್ಲ. ಆಗ ಇಡೀ ರೇಷ್ಮೆ ಬಿತ್ತನೆ ವಲಯ, ಮೊಳಕಾಲ್ಮೂರಿನಿಂದ, ರಾಮನಗರ, ದೊಡ್ಡಬಳ್ಳಾಪುರ ಮತ್ತು ಕುಣಿಗಲ್‌ವರೆಗೆ ಇದ್ದರೂ ಅದರ ಮುಖ್ಯಸ್ಥ ಒಬ್ಬನೇ ಒಬ್ಬ ಎ.ಡಿ.ಎಸ್ ಮಾತ್ರ. ಇಡೀ ವಲಯಕ್ಕೆ ಒಂದೇ ವಾಹನ. ಒಂದು ಸ್ಟೇಷನ್ ವ್ಯಾಗನ್. ಬಿತ್ತನೆ ವಲಯದ ಏಕೈಕ ಅಧಿಕಾರಿಗಳಾಗಿದ್ದ ಶ್ರೀ ವೀರಯ್ಯನವರು ಸ್ಟೇಷನ್ ವ್ಯಾಗನ್‌ನಲ್ಲಿ ಪ್ರವಾಸಿ ಮಂದಿರಕ್ಕೆ ಹೋಗಿ ಅಲ್ಲಿ ಸ್ಥಳವಿಲ್ಲವೆಂದು ತಿಳಿದಮೇಲೆ, ವಿಧಿಯಿಲ್ಲದೆ ಅವರ ವಸತಿ ಗೃಹಕ್ಕೆ ನನ್ನನ್ನು ಕರೆದೊಯ್ದರು. ಅಂದು ಅವರ ಮನೆಯಲ್ಲಿ ನಾನು ನೋಡಿದ ಕಾಗದದ ರಟ್ಟಿನ ಮೇಲೆ ಹಿಪ್ಪುನೇರಳೆ ಎಲೆ ತಿನ್ನುತ್ತಿದ್ದ ಹುಳುವಿನ ಚಿತ್ರದ ದೃಶ್ಯ ಇಂದಿಗೂ ಅಚ್ಚಳಿಯದೆ ಉಳಿದಿದೆ. ನನ್ನ ಜ್ಞಾಪಕದಲ್ಲಿ ಇನ್ನೂ ಉಳಿದಿರುವ ಮತ್ತೊಂದು ವಸ್ತು ಅವರ ಹಳೇ ರೇಡಿಯೋ.

ಅಂದು ಅವರ ಮನೆಯಲ್ಲಿ ಮಲಗಿದ್ದು, ಬೆಳಗ್ಗೆ ಅಲ್ಲಿಂದ ಬಸ್ ನಿಲ್ದಾಣಕ್ಕೆ ಸೈಕಲ್‌ನಲ್ಲಿ ನನ್ನನ್ನು ಡ್ರಾಪ್ ಮಾಡಿಸಿದರು. ಅವರ ಈ ನಡೆವಳಿಕೆ ಅವರ ಮೇಲೆ ನನಗೆ ಗೌರವ

ಮೂಡಿಸಿತು. ಅಂದು ಹೀಗೆ ಅನಿರೀಕ್ಷಿತವಾಗಿ ಆದ ಪರಿಚಯ ಮುಂದೆ ಸ್ನೇಹವಾಗಿ, ಇಂದಿಗೂ ಅವರು ನನ್ನ ಹಿತೈಷಿಯಾಗಿ, ಮಾರ್ಗದರ್ಶಕರಾಗಿದ್ದಾರೆ. ಹೀಗೆ ಅಂದು ನಾನು ಕರ್ನಾಟಕ ರೇಷ್ಮೆ ಸಹಕಾರ ಸಂಘದ ಸದಸ್ಯನಾದೆ.



ನಾನು ಇಡೀ ರಾಜ್ಯದಲ್ಲಿ ಪ್ರವಾಸ ಮಾಡಿದಾಗ ಎಲ್ಲಾ ಕಡೆಯಲ್ಲಿಯೂ ರಾಮನಗರ ಮಾರುಕಟ್ಟೆಯ ಬಗ್ಗೆ ಬೆಳೆಗಾರರು ದೂರುತ್ತಿದ್ದರು. ತೂಕದಲ್ಲಿ ವಂಚನೆ, ಹರಾಜಾದ ಮೇಲೆ ಗೂಡನ್ನು ಆರಿಸಿ ಬಿಸಾಡುವುದುಮ, ತಡೆದರೆ ದಬ್ಬಾಳಿಕೆ ಮಾತು, ಆಕಳಿ ಗೂಡಿನವರ ಕಿರುಕುಳ, ಕೂಲಿಗಳ ಹೆಸರಿನಲ್ಲಿ ಬರುವ ಗೂಂಡಾಗಳು, ಕೆಲವು ಸಾರಿ ಬೆಳೆಗಾರರಿಗೆ ಹೊಡೆಯುವುದೂ ಉಂಟು ಎಂದು ಹೇಳಿದರಲ್ಲದೆ, ಹೇಗಾದರೂ ಮಾಡಿ ಇದನ್ನು ಅಧಿಕಾರಿಗಳ ಮುಖಾಂತರ ಚರ್ಚಿಸಿ ನಿಲ್ಲಿಸಬೇಕೆಂದು ಹೋದೆಡೆಯಲ್ಲೆಲ್ಲಾ ಹೇಳುತ್ತಿದ್ದರು. ಇದರ ಜೊತೆಗೆ ರಾಮನಗರದಿಂದ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿರುವ ಶ್ರೀ ಶೇಷಗಿರಿರಾವ್ ಅವರು ಯಾವಾಗಲೂ ರಾಮನಗರ ಮಾರುಕಟ್ಟೆಯಲ್ಲಿ ಬೆಳೆಗಾರರ ಬಗೆಗೆ ನಡೆಯುವ ದಬ್ಬಾಳಿಕೆ ಹಾಗೂ ಮೋಸದ ಬಗೆಗೆ ತಿಳಿಸುತ್ತಿದ್ದರು. ಇದನ್ನು ತಡೆಯಲು ಅವರು ಪ್ರಯತ್ನಿಸಿ [illegible]ರಾಗಿದ್ದರು. 29.11.1982ರಂದು ನನಗೆ ದೀರ್ಘವಾಗಿ ಪತ್ರ ಬರೆದು ರೈತನ ಕಷ್ಟವನ್ನು ಮನ ಕರಗುವಂತೆ ವರ್ಣಿಸಿ ನಾನು ಮತ್ತು ಸದಸ್ಯರು ಮಾರುಕಟ್ಟೆಗೆ ಭೇಟಿ ಕೊಡಬೇಕೆಂದು ಆಗ್ರಹಪಡಿಸಿದರು. ಇದಾಗದಿದ್ದರೆ ಕಾರ್ಯಕಾರಿ ಸಮಿತಿಗೆ ರಾಜೀನಾಮೆ ಕೊಡುವುದಾಗಿ ಅಂತಿಮ ಎಚ್ಚರಿಕೆ ಕೊಟ್ಟಿದ್ದರು.

ಈ ಮನುಷ್ಯನಿಗೆ ಬೆಳೆಗಾರರ ಬಗ್ಗೆ ಇದ್ದ ಕಳಕಳಿ ಅಪಾರ. ರಾಮನಗರದ ಮಾರುಕಟ್ಟೆ ಇಡೀ ಭಾರತ ದೇಶದಲ್ಲಿಯೇ ಅತಿ ದೊಡ್ಡ ಮಾರುಕಟ್ಟೆ ಎಂದು ಕಾಣುತ್ತದೆ. ಮಧ್ಯವರ್ತಿಗಳಿಂದ, ದಲ್ಲಾಳಿಗಳ ಕಾಟದಿಂದ ಬೆಳೆಗಾರರನ್ನು ವಿಮುಕ್ತಿಗೊಳಿಸಲು ಈ ಮಾರುಕಟ್ಟೆಗಳು ಸ್ಥಾಪಿತವಾಗಿದ್ದರೂ, ಇಲ್ಲಿ ರೈತನ ಗೋಳು ತಪ್ಪಲಿಲ್ಲವೆಂದು ಯೋಚಿಸಿ, ಈ ಮಾರುಕಟ್ಟೆ ಪರಿಸ್ಥಿತಿಯನ್ನು ಸ್ವತಃ ನೋಡಿ ತಿಳಿದುಕೊಳ್ಳಲು ನಿರ್ಧರಿಸಿದೆ.

ಬ್ಯಾಗಿನಲ್ಲಿ ಒಂದು ಹಳೆ ಷರಟು, ಟವೆಲ್ ಮತ್ತು ಪಂಚೆ ತುರುಕಿಕೊಂಡು ನೇರವಾಗಿ ರಾಮನಗರಕ್ಕೆ ಹೋದವನು ಈಗಿನ ಹೊಸ ಬಸ್ಸು ನಿಲ್ದಾಣದಿಂದ ಹಳೆಯ ಬಸ್ಸು ನಿಲ್ದಾಣಕ್ಕೆ ಹೋಗುವ ದಾರಿಯ ಬಲಗಡೆಗೆ ಇದ್ದ ಒಂದು ಹೋಟೆಲಿನ ರೂಮಿನಲ್ಲಿ ಬಟ್ಟೆ ಬದಲಿಸಿದೆ ಹಳೆ ಷರಟು, ಪಂಚೆ ತೊಟ್ಟು , ತಲೆಗೆ ಚೌಕ ಸುತ್ತಿ , 1982ನೇ ಅಕ್ಟೋಬರ್ 28 ಮತ್ತು 29ನೇ ತಾರೀಖಿನಂದು ರಾಮನಗರದ ನದಿಯ ದಡದಲ್ಲಿದ್ದ ಆಗಿನ ಹಳೆಯ ಮಾರುಕಟ್ಟೆಯಲ್ಲಿ ಇಡೀ ದಿನ ಕುಳಿತೆ, ನಿಂತೆ, ನೋಡಿದೆ. ರಾಜ್ಯದ ಬೆಳೆಗಾರರು ಈ ಮಾರುಕಟ್ಟೆಯ ಬಗ್ಗೆ ಹೇಳುತ್ತಾ ಇದ್ದದ್ದು

ಸುಳ್ಳಲ್ಲ, ಉತ್ಪ್ರೇಕ್ಷೆಯಲ್ಲ ಎನಿಸಿತು. ನನಗೆ ಅಲ್ಲಿ ನೋವು ತಂದ ಸಂಗತಿ ಎಂದರೆ ಬೆಳೆಗಾರನನ್ನು ಮತ್ತು ಅವನು ಬೆಳೆದು ತಂದ ಬೆಳೆಯನ್ನು ಕಾಲಿನ ಕಸದಂತೆ ಕಾಣುತ್ತಿದ್ದುದು. ತೂಕ ಮಾಡುವಾಗ, ಮಾರುಕಟ್ಟೆ ಅಧಿಕಾರಿಯಾಗಲಿ, ಕೊಂಡುಕೊಳ್ಳುವವನಾಗಲಿ ಬೆಳೆಗಾರ ನನ್ನು ಗಮನಿಸುತ್ತಲೇ ಇರಲಿಲ್ಲ. ಹರಾಜು ಕೂಗುವಾಗ, ತೂಕ ಮಾಡುವಾಗ, ಅವಿದ್ಯಾವಂತನೂ, ಮುಗ್ಧನೂ ಆದ ಈ ಹಳ್ಳಿಯ ಮುಕ್ಕನಿಗೆ ಅವರು ಸಂಪೂರ್ಣವಾಗಿ ಗೊಂದಲದಲ್ಲಿ ಕೆಡವುತ್ತಿದ್ದರು. ಅಯ್ಯೋ ಎನಿಸಿತು. ರೈತ ಮತ್ತು ಅವನು ಬೆಳೆದ ಬೆಳೆಗೆ ಇಷ್ಟೊಂದು ಅಸಡ್ಡೆಯೇ? ನಿಕೃಷ್ಟತೆಯೆ? ಎನಿಸಿತು. ಹಸಿವಿನಿಂದ ಒಂದು ಕಡೆ ಬಳಲಿಕೆಯಾದರೆ ರೈತನ ಬದುಕಿನ ಬವಣೆಯನ್ನು ಕಂಡು ಕಂಗಾಲಾದೆ. ಏಕಾದರೂ ಈ ಸಮಾಜದಲ್ಲಿ ಹುಟ್ಟಿದೆನೋ ಎನಿಸಿತು. ಅಲ್ಲಿಯೇ ಯಾರನ್ನೋ ವಿಚಾರಿಸಿಕೊಂಡು ಭಾರವಾದ ಮನಸ್ಸಿನಿಂದ ಕಾಲುಗಳನ್ನು ಎಳೆದುಕೊಂಡು ಅಲ್ಲಿ ಹತ್ತಿರದಲ್ಲಿದ್ದ ನಮ್ಮ ಶ್ರೀ ಕೆ.ಎಲ್. ಶೇಷಗಿರಿರಾವ್ ಅವರ ಮನೆಗೆ ಹೋದೆ. ಮೊದಲಿಗೆ ನಾನಿದ್ದ ಅವತಾರದಲ್ಲಿ ಅವರು ನನ್ನನ್ನು ಗುರುತು ಹಿಡಿಯದಿದ್ದರೂ ಆಮೇಲೆ ಗುರ್ತಿಸಿ ನನ್ನ ಅವತಾರದ ಬಗ್ಗೆ ಆಶ್ಚರ್ಯದಿಂದ ವಿಚಾರಿಸಿದರು. ಅವರ ತಾಯಿ ಇರಬಹುದು ಆ ವೇಳೆಯಲ್ಲಿಯೂ ಹಸಿದ ಹೊಟ್ಟೆಗೆ ಮಜ್ಜಿಗೆ ಅನ್ನ ಕೊಟ್ಟು ಸಂತೈಸಿದರು. ಎಲ್ಲವನ್ನೂ ಹೇಳಿ ಅವರಿಂದ ಬೀಳ್ಕೊಂಡು ಹೋಟೆಲಿಗೆ ಬಂದು ಬಟ್ಟೆ ಬದಲಿಸಿದೆ. ಆ ಊರಿನಲ್ಲಿಯೇ ಇದ್ದ ನನ್ನ ರೋಟರಿ ಗೆಳೆಯ ಸೇನಾಪತಿ ವಿಟ್ಲೆ ಕಂಪನಿಯ ಮುಖ್ಯಸ್ಥರಾದ ರೋ. ಗೋವಿಂದರಾಜು ಅವರಿಗೆ ಫೋನು ಮಾಡಿ ಅವರ ಕಾರು ತರಿಸಿಕೊಂಡೆ. ಅವರ ಕಾರ್ಖಾನೆಯ ಅತಿಥಿ ಗೃಹಕ್ಕೆ ಹೋಗಿ ಸ್ನಾನ ಮಾಡಿ, ಊಟ ಮಾಡಿ, ನನ್ನ ಮತ್ತೊಬ್ಬರು ಅಭಿಮಾನಿಗಳಾದ ರೊ. ರಾಮಕೃಷ್ಣ ಮತ್ತು ರೊ. ಗೋವಿಂದರಾಜು ಅವರೊಡನೆ ಅಲ್ಲಿಯೇ ತಂಗಿದ್ದೆ. ಮಾರನೆಯ ದಿನ ಊರಿಗೆ ಬಂದು, ಆಗಿನ ಇಲಾಖೆಯ ನಿರ್ದೇಶಕರಾದ ಶ್ರೀ ಮೀನಾಕ್ಷಿಸುಂದರಂ ಅವರಿಗೆ 26.11.1982ರಂದು ಈ ಮಾರುಕಟ್ಟೆಯ ಬಗ್ಗೆ ದೀರ್ಘವಾಗಿ ಕಾಗದ ಬರೆಉ ಸುಧಾರಿಸಲು ಕೋರಿದೆ. ಅ ಕಾಗದದ ನಕಲು ಇಂದಿಗೂ ನನ್ನಲ್ಲಿದೆ. ಆದರೆ ಮಾರುಕಟ್ಟೆಯಲ್ಲಿ ಪರಿಸ್ಥಿತಿ ಸ್ವಲ್ಪ ಹೆಚ್ಚು-ಕಡಿಮೆ ಈಗಲೂ ಹಾಗೆಯೇ ಇದೆ.

1983ರ ಜುಲೈ ತಿಂಗಳ ಮೊದಲನೆಯ ವಾರ ನನ್ನ ವೃತ್ತಿಗುರುಗಳಾದ, ಸಿಡುಕುತ್ತಲೇ ನನಗೆ ಒಳಿತು ಬಯಸುವ, ತುಮಕೂರಿನ ಹಿರಿಯ ವಕೀಲರಾದ ಶ್ರೀ ಹೆಚ್.ಎಸ್. ಶೇಷಾದ್ರಿಯವರು ಪ್ರಿನ್ಸಿಪಾಲರಾಗಿರುವ ವಿದ್ಯೋದಯ ಲಾ ಕಾಲೇಜಿನಲ್ಲಿ ನಾನು ಶಾಸಕನಾದುದಕ್ಕೆ ಮತ್ತು ಮತ್ತೊಬ್ಬ ಅವರ ಶಿಷ್ಯ, ನನ್ನ ಗೆಳೆಯ ಶ್ರೀ ಎಚ್. ಎನ್. ನಾರಾಯಣ ಅವರು ಜಿಲ್ಲಾ ನ್ಯಾಯಾಧೀಶರಾಗಿ ನೇಮಕವಾದುದಕ್ಕೆ ಸಂತೋಷ ಕೂಟ ಏರ್ಪಡಿಸಿದ್ದರು. ಊಟ ಮಾಡಿದೆವು. ಆಗ ಅಲ್ಲಿ ವಕೀಲರಾಗಿದ್ದು ಈಗ ನ್ಯಾಯಾಧೀಶರಾಗಿರುವ ನಮ್ಮ ಶ್ರೀ ದೇವೇಂದ್ರಯ್ಯನವರನ್ನು ಕೂರಿಸಿಕೊಂಡು ಹರಟೆ ಹೊಡೆಯುತ್ತಿದ್ದೆವು. ಆಗ ನನ್ನ ಕ್ಷೇತ್ರದ ಗೊಟ್ಟಿಕೆರೆ ಗ್ರಾಮದ ಕಿರಿಯ ಗೆಳೆಯ ಶ್ರೀ ಗಂಗಾಧರಯ್ಯ ನನ್ನನ್ನು ಕರ್ನಾಟಕ ಗೃಹ ಮಂಡಲಿಯ

**ಅಧ್ಯಕ್ಷ**ನನ್ನಾಗಿ ನೇಮಿಸಿರುವ ವಿಷಯ ಈಗ ತಾನೇ ರೇಡಿಯೋದಲ್ಲಿ ಬಿತ್ತರಿಸಲಾಯಿತೆಂದು ತಿಳಿಸಿದರು. ಶ್ರೀ ದೇವೆಂದ್ರಯ್ಯ ಮಾಮೂಲಿಸ್ಟೈಲಿನಲ್ಲಿ ''ತಗೊಳ್ಳಲೇ ನನ್ನ ಮಗನ ಅದೃಷ್ಟಾನಾ'' ಎಂದು ''ಸಾರ್, ಈಗ ನೀವು ಮತ್ತೆ ಊಟ ಹಾಕಿಂಬೇಕಲ್ಲ'' ಎಂದು ಶೇಷಾದ್ರಿ ಯವರನ್ನು ಕುರಿತು ಹಾಸ್ಯ ಮಾಡಿದ. ಯಾವ ಗುರುವಿಗೆ ತಾನೆ ತನ್ನ ಶಿಷ್ಯನ ಶ್ರೇಯಸ್ಸು ಸಂತಸ ಉಂಟುಮಾಡುವುದಿಲ್ಲ ? ನನ್ನ ಗುರುಗಳು ಹಿಗ್ಗಿ ಹೀರೇಕಾಯಾದರು.



ಶ್ರೀ ಲಕ್ಕಪ್ಪನವರ ನಿಧನದಿಂದ ಕುಣಿಗಲ್‌ನಲ್ಲಿ ಉಪಚುನಾವಣೆ ಒದಗಿಬಂತು. ಚುನಾವಣೆಯ ಪ್ರಚಾರಕ್ಕಾಗಿ ಯಾವ ಹಳ್ಳಿಗೆ ಹೋದರು ಮೊಟ್ಟೆ ಸಿಕ್ಕುವುದಿಲ್ಲ, ಲಂಚ ಕೊಟ್ಟು ತಂದರೂ ಬೆಳೆ ಆಗುವುದಿಲ್ಲ , ಬೆಳೆ ಆದರೂ ಗಂಟು ರೋಗದಿಂದ ಮಾರುಕಟ್ಟೆಯಲ್ಲಿ ತಿರಸ್ಕರಿಸುತ್ತಾರೆ. ಮೊಟ್ಟೆ ತರುವುದರಿಂದ ಹಿಡಿದು ಗೂಡು ಮಾರುವವರೆಗೆ ಲಂಚ ಕೊಡಬೇಕು ಎನ್ನುವುದು ರೈತರ ಕೂಗಾಗಿತ್ತು. ಇವೆಲ್ಲ ಕಷ್ಟಗಳಿಗೆ ನಾವು ನಿಮ್ಮನ್ನು ಸೋಲಿಸಿದ್ದೇ ಕಾರಣ ಎನ್ನುವ ಪಶ್ಚಾತ್ತಾಪದ ಮಾತುಗಳೂ ಕೇಳಿ ಬರುತ್ತಿದ್ದವು.

ಒಂದೇ ಮಾತಿನಲ್ಲಿ ಹೇಳಬೇಕಾದರೆ ಆಡಳಿತದಲ್ಲಿನ ಭ್ರಷ್ಟತನ ಈ ಉದ್ಯಮವನ್ನೇ ನಾಶದ ಅಂಚಿಗೆ ತಂದಿತ್ತು. ಈ ಚುನಾವಣೆಯ ಬಗ್ಗೆ ಇಲ್ಲಿ ನಾನು ಪ್ರಸ್ತಾಪ ಮಾಡುವ ಪ್ರಯತ್ನ ಮಾಡುತ್ತಿಲ್ಲ. ಏಕೆಂದರೆ ಅದೇ ಒಂದು ದೊಡ್ಡ ಪುಸ್ತಕವಾಗುತ್ತದೆ. ಒಂದು ಕಡೆ ಇಡೀ ಸರ್ಕಾರದ ಆಡಳಿತ ಯಂತ್ರ. ಅಧಿಕಾರಿಗಳ ದಂಡು, ಶಾಸಕರ ಪಡೆ, ಮಂತ್ರಿ - ಮಹೋದಯರ ಮೊಕ್ಕಾಂ. ಕೋಟ್ಯಂತರ ರೂಪಾಯಿಗಳ ಹಣದ ಹೊಳೆ, ಲಕ್ಷಾಂತರ ರೂಪಾಯಿಗಳ ಹೆಂಡದ ವಿತರಣೆ. ಇಷ್ಟು ಸಾಲದೆಂದು ಆಡಳಿತ ಪಕ್ಷದವರ ಗೂಂಡಾ ನಡೆವಳಿಕೆ ಈ ಎಲ್ಲಾ ಶಕ್ತಿಯ ಎದುರುಗಡೆ ಹೋರಾಡಬೇಕಾಗಿದ್ದನನಗೆ ಶ್ರೀಯುತ ದೇವೇಗೌಡರನ್ನು ಹೊರತುಪಡಿಸಿ ವಿರೋಧಪಕ್ಷಗಳೇ ವಿರೋಧ ಮಾಡುವ, ಅಪಪ್ರಚಾರ ಮಾಡುವ ಪರಿಸ್ಥಿತಿ ಇತ್ತು. ಇಂಥ ಸಂದರ್ಭದಲ್ಲಿ ಏಕಾಂಗಿಯಾಗಿ ಹೋರಾಡಬೇಕಾಯಿತು. ಆಳುವ ಪಕ್ಷದವರ ಅಬ್ಬರದ ವಿರುದ್ಧ ವಿರೋಧ ಮಾಡುವ ಪರಿಸ್ಥಿತಿ ಇತ್ತು. ಇಂಥ ಸಂದರ್ಭದಲ್ಲಿ ಏಕಾಂಗಿಯಾಗಿ ಹೋರಾಡಬೇಕಾಯಿತು. ಆಳುವ ಪಕ್ಷದವರ ಅಬ್ಬರದ ವಿರೋಧ ಹಾಗೂ ವಿರೋಧ ಪಕ್ಷದವರ ಅಪಪ್ರಚಾರವಿದ್ದಾಗ್ಯೂ ಈ ಚುನಾವಣೆಯಲ್ಲಿ ನಾನು ಆರಿಸಿಬಂದೆ. ಈ ವಿಜಯಕ್ಕೆ ನನ್ನಸ್ನೇಹಿತರ ಮತ್ತು ಅಭಿಮಾನಿಗಳ ಪ್ರತ್ಯಕ್ಷ ಮತ್ತು ಪರೋಕ್ಷವಾದ ಸಹಾಯ, ಸಹಕಾರ ಮತ್ತು ನನ್ನ ಕ್ಷೇತ್ರದ ಜನ ನನ್ನಲ್ಲಿ ತೋರಿದ ಅಪ್ರತಿಮ ನಂಬಿಕೆ ಮತ್ತು ವಿಶ್ವಾಸ ಕಾರಣವೆಂದು ನಾನು ಭಾವಿಸಿದ್ದೇನೆ. ಅದಕ್ಕಾಗಿಯೇ ಇದು ''ನನ್ನ **ಜನಗಳ ವಿಜಯ**'' ಎಂದು ಹೇಳಿದ್ದು.

ಇಲ್ಲಿ ಅನವಶ್ಯಕವಾದರೂ ಅನಿವಾರ್ಯವಾಗಿ ಕೆಲವು ವಿಷಯಗಳನ್ನು ನಾನು ಹೇಳಲೇಬೇಕಾಗುತ್ತದೆ. 'ಒಬ್ಬ ಜನಪ್ರತಿನಿಧಿ ಸರ್ವಗುಣ ಸಂಪನ್ನನಲ್ಲ. ಸರ್ವ ಸಮಸ್ಯೆಗಳ

ಸಂಜೀವಿನಿಯೂ ಅಲ್ಲ, ಎಂಬ ಅರಿವು ಉಳ್ಳವನು ನಾನು. ನಮ್ಮ ಎಲ್ಲಾ ಪ್ರಯತ್ನ ಹಾಗೂ ಶ್ರಮದಿಂದ, ಹಸಿದ ಎಲ್ಲಾ ಹೊಟ್ಟೆಗಳಿಗೂ ಅನ್ನ ಕೊಡುವುದಾಗಲಿ, ನೊಂದ ಎಲ್ಲಾ ಜೀವಿಗಳನ್ನು ಸಂತೈಸುವುದಾಗಲಿ ನಮ್ಮಿಂದ ಸಾಧ್ಯವಿಲ್ಲ ಎಂಬ ನಗ್ನಸತ್ಯ ನನಗೆ ತಿಳಿಯದ ವಿಷಯವಲ್ಲ. ಆದರೂ ಜನರಿಂದ ಸರ್ವಸ್ವವನ್ನು ಪಡೆದ ನಾವು, ಆ ಜನರಿಗೆ ಏನಾದರೂ ಕಿಂಚಿತ್ ಕೆಲಸ ಮಾಡಿ ಋಣ ತೀರಿಸಿಕೊಳ್ಳಬೇಕೆನ್ನುವುದು ನನ್ನ ಅಭಿಲಾಷೆ, ''ಕರ್ತೃ ನಿರ್ಣಯ ಬಾಹ್ಯ ಲಾಭ-ನಷ್ಟಗಳಿಗಲ್ಲ, ಲೋಕಕ್ಕೆ ಆತ್ಮ ಋಣವದೊ ಮಂಕುತಿಮ್ಮ'' ಎಂದಿರುವ ಡಿ.ವಿ.ಜಿ.ಯವರ ವಾಣಿಯನ್ನು ಪರಿಪೂರ್ಣವಾಗಿ ಅಳವಡಿಸಿಕೊಂಡು ಬದುಕಲು ಪ್ರಯತ್ನಪಟ್ಟವನು ನಾನು.

ಕೃಷಿಗೆ ನೀರು ಆಧಾರ. ಉತ್ತಮ ಬೀಜ , ಉತ್ಕೃಷ್ಟ ಭೂಮಿ, ಆಧುನಿಕ, ತಂತ್ರಜ್ಞಾನ, ವೈಜ್ಞಾನಿಕ ನೆರವು ಹಾಗೂ ರೈತನ ಕಟಿಬದ್ಧ ಶ್ರಮ ಪರಿಣಿತಿಗಳಿದ್ದಾಗ್ಯೂ, ನಮ್ಮ ರೈತರು, ಅದರಲ್ಲಿಯೂ ಮಳೆಯ ನೀರನ್ನು ಅವಲಂಬಿಸಿರುವ ರೈತರು ಸಕಾಲದಲ್ಲಿ ಮಳೆಬಾರದೆ ಬೆಳೆ ಕಳೆದುಕೊಳ್ಳುವ ಪರಿಸ್ಥಿತಿ, ಸಾರ್ವಜನಿಕ ಜೀವನದ ನನ್ನ ಕಾರ್ಯಶೈಲಿಯ ಮೇಲೆ ಪ್ರಭಾವ ಬೀರಿ, ನನ್ನ ಸಾಮಾಜಿಕ ಪ್ರಜ್ಞೆ ಎಚ್ಚರಗೊಳ್ಳಲು ಪ್ರಮುಖ ಕಾರಣಗಳಲ್ಲಿ ಒಂದು. ಈ ಹಿನ್ನೆಲೆಯಲ್ಲಿ ನಾನು ಸಾರ್ವಜನಿಕ ಜೀವನದಲ್ಲಿ ಸಕ್ರಿಯವಾಗಿ ಕೆಲಸ ಮಾಡುವ ಕಾಲಕ್ಕೆ, ತುಮಕೂರು ಜಿಲ್ಲೆಯ ಸುಮಾರು ಆರುಲಕ್ಷ ಎಕರೆ ಬರ ಪೀಡಿತ ಪ್ರದೇಶದ ಒಣಭೂಮಿಗೆ ನೀರು ಒದಗಿಸಲು ಕಾರ್ಯಗತವಾಗಬೇಕಾಗಿದ್ದ, ಹೇಮಾವತಿ ನೀರಾವರಿ ಯೋಜನೆಯ ಅನುಷ್ಠಾನ, ಒಂದು ವಿಧದಲ್ಲಿ ಹೇಳುವವರು ಮತ್ತು ಕೇಳುವವರಿಲ್ಲದೆ ಅನಾಥ ಶಿಶುವಾಗಿತ್ತು. ಕರ್ನಾಟಕದ ನೀರಾವರಿ ಕ್ಷೇತ್ರದಲ್ಲಿ ಅನ್ಯಾಯದ ಪರಂಪರೆ ನಡೆದು ಬಂದಿದೆ ಎಂದು ಅಂಕಿ ಅಂಶಗಳ ಸಮೇತ ಎತ್ತರದ ಧ್ವನಿಯಲ್ಲಿ ಸ್ಪಷ್ಟಪಡಿಸಿದ್ದೇನೆ. ಈ ಎಲ್ಲಾ ನನ್ನ ಮನಸ್ಥಿತಿಯಿಂದಾಗಿ ನನ್ನ ಜೀವಿತ ಕಾಲದಲ್ಲಿ ಹೇಮಾವತಿ ನದಿ ಪಾತ್ರದ ಗೊರೂರು ಅಣೆಕಟ್ಟೆಯಿಂದ ಶಿಂಷಾನದಿ ಪಾತ್ರಕ್ಕೆ ನೀರು ಬರುವ ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲ ಪೂರ್ಣವಾಗಿ ತೊಡಗಿಸಿಕೊಂಡವನು ನಾನು.

1992ರ ಉಪ ಚುನಾವಣೆಯ ನಂತರ ನಾನು ವಿರೋಧ ಪಕ್ಷದ ಶಾಸಕನಾದೆ. ಅಂದಿನ ಆಡಳಿತ ಪಕ್ಷದ ಸರ್ಕಾರ ನನಗೆ ನೀಡಿದ ಒತ್ತಾಸೆ ಹಾಗೂ ಅಂದು ಕೆಲಸ ಮಾಡುತ್ತಿದ್ದ ಅಧಿಕಾರಿಗಳ ಸಹಕಾರದಿಂದ ಪೂರ್ಣವಾಗಿ ನಾನು ಆ ಯೋಜನೆಯ ಅನುಷ್ಠಾನದ ಪ್ರಗತಿಯಲ್ಲಿ ತೊಡಗಿಸಿಕೊಂಡ ಕಾರಣದಿಂದ, ರೇಷ್ಮೆ ಉದ್ಯಮದ ಬಗ್ಗೆ ನಿಗಾ ಮಾಡಲು ನಾನು ಪ್ರಯತ್ನ ಮಾಡಲಿಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ನನ್ನ ನಿರ್ಲಕ್ಷ ನಡವಳಿಕೆಯಿಂದ ಉದ್ಯಮಕ್ಕೆ ಒಳಿತಾಯಿತೊ, ಕೆಡುಕಾಯಿತೊ ಗೊತ್ತಿಲ್ಲ. ಆದರೆ ಅನೇಕ ಜನರ ದುಡಿಮೆ, ಶ್ರಮ, ಆಸಕ್ತಿ, ಅಭಿಲಾಷೆಗಳ ಫಲವಾಗಿ ಎರಡು ದಶಕಗಳಿಗೂ ಹೆಚ್ಚು ಕಾಲದ ನನ್ನ ಬದುಕಿನ ಆಸೆ ನೆರವೇರಿತು. 1994ರಲ್ಲಿ ಹೇಮಾವತಿ ನೀರು ಜಿಲ್ಲೆಗೆ ಹರಿದು ಬರುವಂತಾಯಿತು. ಗೊರೂರಿನಿಂದ ಹೇಮಾವತಿ

ನೀರು ತುಮಕೂರು ಜಿಲ್ಲೆಗೆ ಹರಿದು ಬರುವಂತಾಗಲು ನಡೆದ ಘಟನೆಗಳು, ಬಂದ ಸಮಸ್ಯೆಗಳು, ಅಷ್ಟೇ ಏಕೆ? ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಆದಂತಹ ಅಡ್ಡಿ ಆತಂಕಗಳು, ಪಟ್ಟಶ್ರಮ, ಕುಟಿಲತೆ, ಕಾರಸ್ಥಾನಗಳನ್ನು ಕುರಿತು ಬರೆಯುವ ಹಂಬಲವನ್ನು ಹೊತ್ತು ಬದುಕುತ್ತಿದ್ದೇನೆ. ಎಲ್ಲಾ ಸರಿಹೋದರೆ ಮುಂದಿನ ಮುಂಗಾರಿಗೆ ಹೇಮಾವತಿ ನೀರು ಯೋಜನೆಯ ಕೊನೆ ಹಂತವಾದ ಕುಣಿಗಲ್ ಕೆರೆಗೆ ತಲುಪುವ ಪೂರ್ಣ ನಂಬಿಕೆ ನನಗಿದೆ. ಅದಾದ ಮೇಲೆ ಈ ಯೋಜನೆಯ ಬಗ್ಗೆ ಸಮಗ್ರ ಬರವಣಿಗೆಯನ್ನು ನಾಡಿನ ಜನತೆಯ ಮುಂದೆ ತರಲು ಪ್ರಯತ್ನಿಸುತ್ತೇನೆ.



ಈ ವಿಷಯದಲ್ಲಿ ವಿಚಿತ್ರವಲ್ಲದಿದ್ದರೂ ವಿಸ್ಮಯಕಾರಿಯಾದ ಮತ್ತೊಂದು ವಿಷಯ ವನ್ನು ನಾನು ದಾಖಲಿಸಲೇಬೇಕಾಗಿದೆ. ನನ್ನ ಮತ್ತು ಈ ರಾಷ್ಟ್ರದ ಪ್ರಧಾನಿಯಾಗಿದ್ದ ಶ್ರೀ ಹೆಚ್.ಡಿ. ದೇವೇಗೌಡರ ಎರಡು ದಶಕಗಳಿಗೂ ಮೀರಿದ ಮಧುರ ಬಾಂಧವ್ಯ ಮತ್ತು ಇತ್ತೀಚಿನ ದಿನಗಳಲ್ಲಿ ನಮ್ಮಿಬ್ಬರ ರಾಜಕೀಯ ವಿರಸ, ಈ ನಾಡಿನ ಜನರಿಗೆ ಗೊತ್ತಿರುವ ವಿಷಯ. ನನಗೆ ತಿಳಿದಿರುವಂತೆ ರೇಷ್ಮೆ ಉದ್ಯಮದ ಬಗ್ಗೆ ದೇವೇಗೌಡರಿಗೆ ಯಾವಾಗಲೂ ಆಳವಾದ ಅರಿವಾಗಲಿ, ಅದಮ್ಯ ಆಸಕ್ತಿಯಾಗಲಿ ಇರಲಿಲ್ಲ ಎನ್ನುವುದು ನನ್ನ ಭಾವನೆ. ಅವರ ಚುನಾವಣಾ ಕ್ಷೇತ್ರದಲ್ಲಿ ಈ ಬೆಳೆ ಇಲ್ಲದೆ ಇರುವುದು ಇದಕ್ಕೆ ಕಾರಣ ಇರಬಹುದು. ಆದರೂ ಎಲ್ಲರ ಜೊತೆಗೆ ದೇವೇಗೌಡರು ಕೇಂದ್ರ ಸರ್ಕಾರದ ವಾಣಿಜ್ಯ ಸಚಿವರ ರೇಷ್ಮೆ ಆಮದು ನೀತಿಯನ್ನು ವಿರೋಧಿಸಿ ಪ್ರಧಾನ ಮಂತ್ರಿಗಳಿಗೆ ಪತ್ರ ಬರೆಯುವ ಮೂಲಕ ವಿರೋಧವನ್ನು ವ್ಯಕ್ತಪಡಿಸಿದರು. ದೇವೇಗೌಡರು ಈ ನೀತಿಯನ್ನು ವಿರೋಧ ಮಾಡಿದ್ದು ಕೇಂದ್ರದಲ್ಲಿ ರಾಮಕೃಷ್ಣ ಹೆಗಡೆಯವರು ವಾಣಿಜ್ಯ ಸಚಿವರಾಗಿರುವ ಕಾರಣದಿಂದಲೇ ಹೊರತು ಉದ್ಯಮದ ಒಳಿತಿನ ಕಾರಣದಿಂದಲ್ಲ ಎಂದು ಅಭಿಪ್ರಾಯಪಟ್ಟರೂ ಉಂಟು. ಅದೇನೆ ಇರಲಿ, ಕೊನೆ ಪಕ್ಷ ಈ ವಿಷಯದಲ್ಲಾದರೂ ಮಾನ್ಯ ದೇವೇಗೌಡರು ನನ್ನ ಅಚಲ ನಿಲುವಿಗೆ ಬೆಂಬಲವಾಗಿ ನಿಂತರು. ರಾಜ್ಯದ ಉದ್ಯಮ ಆಸಕ್ತರು ಹಾಗೂ ಹೆಗಡೆಯವರ ಹಿತೈಷಿಗಳು ಕರ್ನಾಟಕದಲ್ಲಿ, ಅದರಲ್ಲಿಯೂ ಹಳೇ ಮೈಸೂರು ಪ್ರದೇಶಗಳಲ್ಲಿ, ಈ ಆಜ್ಞೆಯಿಂದ ಅವರ ರಾಜಕೀಯ ಹಿತಕ್ಕೆ ಆಗಬಹುದಾದ ಕೆಟ್ಟ ಪರಿಣಾಮವನ್ನು ಮನವರಿಕೆ ಮಾಡಿಕೊಟ್ಟರು.



ನಾನು ಬೆಳೆದಂತಹ ಪರಿಸರ, ದೊಡ್ಡ ವ್ಯಕ್ತಿಗಳು ಬೆಳೆದಂತಹ ಪರಿಸರ ಅಲ್ಲ. ನನ್ನ ಮೇಲೆ ಪ್ರಭಾವ ಬೀರಿದವರು ಅಂದ್ರೆ, ನನ್ನ ಕುಟುಂಬದ ಸದಸ್ಯರ ಹೊರತಾಗಿ ಬೇರೆ ಯಾರೂ ಅಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಅಣ್ಣ ಕಂಬೇಗೌಡರ ಪ್ರಭಾವವೇ ನನ್ನ ಮೇಲೆ ಹೆಚ್ಚಾಗಿದೆ. ಅವರಲ್ಲಿದ್ದ ಆದರ್ಶ, ಪ್ರಾಮಾಣಿಕತೆ, ಸಾಮಾಜಿಕ ಕಾಳಜಿಗಳು, ಹುಚ್ಚುತನ ಇವೆಲ್ಲವೂ ನನಗೂ ಬಂದು

ಬಿಟ್ಟವು. ಸ್ವಾತಂತ್ರ್ಯ ಬಂದ ದಿನದಿಂದ ಸುಮಾರು ಮುವತ್ತೈದು ವರ್ಷಗಳಷ್ಟು ಸುದೀರ್ಘ ಕಾಲ ಛೇರ್ಮನ್ನರಾಗಿದ್ದರು. ಹಣವನ್ನಾಗಲಿ, ಆಸ್ತಿಯನ್ನಾಗಲಿ ಮಾಡಿಕೊಂಡಂತಹ ವ್ಯಕ್ತಿಯಲ್ಲ. ಹೀಗಾಗಿ ನನಗಿರುವ ಆದರ್ಶ, ಪ್ರಾಮಾಣಿಕತೆಗಳೆಲ್ಲ ಅವರಿಂದ ಬಂದ ಬಳುವಳಿ. ಪ್ರಾಮಾಣಿಕತೆಯ ವಿಷಯದಲ್ಲಿ ನನ್ನನ್ನು ಮೀರಿಸುವಂತಹ, ಕೆಟ್ಟದನ್ನು ಕಂಡಾಗ ನನಗಿಂತ ಹೆಚ್ಚು ವಿರೋಧಿಸುತ್ತಿದ್ದ ನನ್ನಣ್ಣನೇ ನನಗೆ ಆದರ್ಶಪುರುಷ. ಜೊತೆಗೆ ಅತ್ಯಂತ ಪ್ರೀತಿಯಿಂದ ಸಾಕಿ ಬೆಳೆಸಿದ ನನ್ನ ತಾಯಿ.

ವಿದ್ಯಾಭ್ಯಾಸದಲ್ಲಿ ನನ್ನ ಬದುಕಿಗೆ ತಿರುವು ಕೊಟ್ಟೋರು ನನ್ನ ಭಾವ ದಾಸೇಗೌಡರು. 1959ರಲ್ಲಿ ಹುಲಿಯೂರು ದುರ್ಗದಲ್ಲಿ ಮೇಸ್ಟ್ರಾಗಿ, ನನ್ನ ಊರಿಗೆ ಬರದೆ ಇದ್ದರೆ, ಬಹುಶಃ ನಾನು ಎಸ್.ಎಸ್.ಎಲ್.ಸಿ ಕೂಡ ಪಾಸ್ ಮಾಡುತ್ತಿರಲಿಲ್ಲ. ನಾನೊಬ್ಬನೆ ಯಾಕೆ ವೈ.ಡಿ. ತಿಮ್ಮಯ್ಯ, ನಾಗಭೂಷಣ ಶರ್ಮ, ನಾವ್ಯಾರು ಪಾಸು ಮಾಡುತ್ತಿರಲಿಲ್ಲ! ಆಗ ನಾನು ಎಸ್.ಎಸ್.ಎಲ್.ಸಿ ಯಲ್ಲಿ ಫೇಲಾಗಿದ್ರೆ ನನ್ನ ಭವಿಷ್ಯ ಅಲ್ಲಿಗೆ ನಿಂತು ಹೋಗುತ್ತಿತ್ತು.

ಆಮೇಲೆ ಕಾಲೇಜು ದಿನಗಳಲ್ಲಿ ಸ್ಥೈರ್ಯ ತುಂಬಿದವರು. ಕೆ.ಎಸ್. ನಂಜುಂಡಯ್ಯ ನವರು. ಎಸ್.ವಿ. ರಂಗಣ್ಣನವರ ಅಳಿಯಂದಿರು, ನಾನು ತುಮಕೂರಿನಲ್ಲಿ ಓದುತ್ತಿರುವಾಗ ಎಕನಾಮಿಕ್ಸ್ ಉಪಾನ್ಯಾಸಕರಾಗಿದ್ದರು. ಪಿ.ಯು.ಸಿಯಲ್ಲಿ ಅವರು ಬೋಧಿಸುತ್ತಿದ್ದ ವಿಷಯದಲ್ಲಿ ನನಗೆ ಹೆಚ್ಚಿಗೆ ಮಾರ್ಕ್ಸ್ ಬಂದಿತ್ತು. ಹೋಗೋ-ಬಾರೋ ಅಂತ ಮಾತನಾಡಿಸೋರು ಬ್ರಾಹ್ಮಣರಾಗಿದ್ದರೂ ಅವರಲ್ಲಿ ಬ್ರಾಹ್ಮಣತ್ವ ಇರಲಿಲ್ಲ. ಬರೀ ಮಾನವತ್ವ ಮಾತ್ರ ಇರೋದು. ಮುಂದೆ ಅವರು ಪ್ರಿನ್ಸಿಪಾಲ್ ಆಗಿ ಮಂಡ್ಯಕ್ಕೆ ಹೋದರು.

ಒಂದು ಸಲ ನಾನು ಮತ್ತು ಎ.ಬಿ. ರಾಮಣ್ಣ ಮಾರ್ನೋಮಿ ಹಬ್ಬಕ್ಕೆಂದು ಬೆಸಗರಹಳ್ಳಿ ಪಕ್ಕ ಇರೋ ಕೆರೇಮೇಗಳದೊಡ್ಡಿಗೆ ಹೋದೆವು. ಸ್ನಾನ ಮಾಡಿರದ, ಕೊಳಕು ಬಟ್ಟೆಯ ಹುಡುಗರು ನಾವು. ನನಗಾಗ ಸಕ್ಕರೆ ಫ್ಯಾಕ್ಟರಿ ನೋಡಬೇಕೂಂತ ಆಸೆ ಆಯಿತು. ಅದಕ್ಕೋಸ್ಕರ ಮಂಡ್ಯಕ್ಕೆ ಹೋದೆವು. ಅಲ್ಲಿ ನಂಜುಂಡಯ್ಯನವರ ಜ್ಞಾಪಕ ಬಂತು. ಸ್ನಾನ ಮಾಡಿರಲಿಲ್ಲ, ಬಟ್ಟೆ ಒಗೆದಿರಲಿಲ್ಲ. ಹಾಗೆಯೇ ಅವರ ಮನೆಗೆ ಹೋದೆವು.

ನಾವು ಅವರ ಮನೆಗೆ ಹೋದಕೂಡಲೆ, ಅವರ ಹೆಂಡತಿ ಸೀತಮ್ಮ ಅಂತ. ಎಸ್.ವಿ.ರಂಗಣ್ಣನವರ ಮಗಳು. ನಮ್ಮನ್ನು ಚೆನ್ನಾಗಿ ಆದರಿಸಿದರು. ನಮ್ಮಿಬ್ಬರನ್ನೂ ತಮ್ಮ ಅಡಿಗೆ ಮನೆಗೇ ಕರೆದುಕೊಂಡು ಹೋಗಿ, ನಂಜುಂಡಯ್ಯನವರ ಜೊತೆಯಲ್ಲೇ ಊಟಕ್ಕೆ ಇಟ್ಟರು. ಆವೊತ್ತು ನಾನು ಏನೂ ಆಗಿರಲಿಲ್ಲ. ಅವರು ನನ್ನ ಮೇಲೆ ತೋರಿದ ಪ್ರೀತಿ ಇವತ್ತಿಗೂ ನೆನಪಾಗುತ್ತದೆ. ನಾನು ಹೇಮಾವತಿ ಹೋರಾಟದಲ್ಲಿ ಜೈಲಿನಲ್ಲಿದ್ದಾಗ ನಂಜುಂಡಯ್ಯನವರು ನನಗೆ ಕಾಗದ ಬರೆದಿದ್ರು.



1971-72ರಲ್ಲಿ ನಾನು ತಾಲ್ಲೂಕು ಬೋರ್ಡ್ ಸದಸ್ಯನಾಗಿದ್ದೆ. ಒಂದು ಮೀಟಿಂಗ್‌ನಲ್ಲಿ ಕುಣಿಗಲ್ ತಾಲ್ಲೂಕಿಗೂ ಹೇಮಾವತಿ ನೀರು ಬಿಡಬೇಕು ಅಂತ ರೆಸಲ್ಯೂಷನ್ ಮಾಡಿದೆವು. ವಾಸ್ತವವಾಗಿ ಆಗ ನನಗೆ ಹೇಮಾವತಿ ಎಲ್ಲಿದೆ? ಅದರ ತಲೆ-ಬುಡ ಏನು ಅಂತ ಗೊತ್ತಿರಲಿಲ್ಲ. ಕಾಲುವೆ ಹೇಗೆ ಬರುತ್ತೆ? ನೀರು ಹೇಗೆ ಹರಿಯುತ್ತೆ ಅಂತಾನೂ ಗೊತ್ತಿರಲಿಲ್ಲ!

ನಾನು ಶಾಸಕನಾಗುವವರೆಗೂ, ಹೇಮಾವತಿ ಅಂತ ಇದೆಯಂತೆ, ತುಮಕೂರಿಗೆ ನೀರು ಹರಿಯುತ್ತದಂತೆ ಅನ್ನುವ ಊಹಾಪೋಹಗಳು ಹರಿಯುತ್ತಿದ್ದವು. 1983ರಲ್ಲಿ ನಾನು ಶಾಸಕನಾದ ಮೇಲೆ, ಬಲವಾದ ತೀರ್ಮಾನಕ್ಕೆ ಬಂದೆ. ಬೇರೆ ಯಾವ ಕೆಲಸ ಮಾಡ್ತೀನೋ ಇಲ್ಲವೋ, ಆದರೆ ಹೇಮಾವತಿ ನೀರಿಗಾಗಿ ನನ್ನ ಜೀವಮಾನವನ್ನೇ ಮುಡಿಪಾಗಿಡಬೇಕು ಅಂತ ನಿರ್ಧರಿಸಿಬಿಟ್ಟೆ. ಆ ದಿಸೆಯಲ್ಲಿ ನಾನು ಅನೇಕ ಅಡಚಣೆಗಳನ್ನು ಎದುರಿಸಿದೆ. ಜೈಲುವಾಸ ಅನುಭವಿಸಿದೆ. ಅದರಂತೆ 1994ರಲ್ಲಿ ತುಮಕೂರಿಗೆ ಹೇಮಾವತಿ ಹರಿಯಿತು. ಈಗ 2002ರ ಜುಲೈ ಕೊನೇ ವಾರದಲ್ಲಿ ಹೇಮಾವತಿ ಕುಣಿಗಲ್ ಕೆರೆಗೂ ಬರುತ್ತೆ. ಇದೇ ನನಗೆ ಸಮಾಧಾನ. ಇದೆಲ್ಲ ಅಭಿವೃದ್ಧಿ ಕಾರ್ಯವೇ ಹೊರತು; ಮುಂದಿನ ಚುನಾವಣೆಗೆ ಇಡುಗಂಟಲ್ಲ.

**ನನ್ನ ಅನುಭವದಲ್ಲಿ, ಅಭಿವೃದ್ಧಿ ಕಾರ್ಯಗಳಿಗೂ, ಚುನಾವಣಾ ಫಲಿತಾಂಶಕ್ಕೂ ಸಂಬಂಧವಿಲ್ಲ! ಅಭಿವೃದ್ಧಿ ಕಾರ್ಯಗಳು ಮುಂದಿನ ಚುನಾವಣೆಯ ಬಂಡವಾಳ ಅಲ್ಲ. ಈ ದೇಶದಲ್ಲಿ ಚುನಾವಣಾ ಫಲಿತಾಂಶವನ್ನು ಹೆಂಡ-ಜಾತಿ-ಧರ್ಮ-ಹಣ ಮುಂತಾದ ಭಾವನಾತ್ಮಕವಾದ ವಿಚಾರಗಳು ನಿರ್ಧರಿಸುತ್ತವೆ.**



ನನ್ನ ಮತ್ತು ದೇವೇಗೌಡರ ಸ್ನೇಹ ಸುಮಾರು ಇಪ್ಪತ್ತು ವರ್ಷದ್ದು. ದೇವೇಗೌಡರು ನನ್ನನ್ನು ಪ್ರೀತಿಯಿಂದ 'ವೈಕೆ' ಅಂತ ಕರೆಯೋರು. ನಾನು ನಂಬಿದ್ದಂತಹ, ಆರಾಧಿಸಿದಂತಹ ದೇವೇಗೌಡರು 1984ರ ಹಿಂದೆ ಇದ್ದರು. 1985ರ ನಂತರ ಆ ದೇವೇಗೌಡರು ಇರಲಿಲ್ಲ.

1984ರ ಹಿಂದಿನ ದೇವೇಗೌಡರಿಗೆ ಜನಕ್ಕಾಗಿ ಏನಾದರೂ ಮಾಡಬೇಕೆನ್ನುವ ಬದ್ಧತೆ ಇತ್ತು. ಪ್ರಾಮಾಣಿಕವಾಗಿ ಬದುಕಬೇಕೆನ್ನುವ ಛಲ ನನಗೆ ಹೇಗಿದಿಯೋ, ಆದಕ್ಕಿಂತ ಹೆಚ್ಚಾದ ಛಲ ಅವರಿಗೂ ಇತ್ತು. ನನಗೆ ಚೆನ್ನಾಗಿ ಗೊತ್ತಿದೆ, ಕರ್ನಾಟಕದ ಚುನಾವಣೆಗಾಗಿ ಚಂದ್ರಶೇಖರ್ ಅವರು ಕಳುಹಿಸಿದಂತ ಹಣದಲ್ಲಿ, ಉಳಿದಂತಹ ಹಣವನ್ನು ವಾಪಸ್ ಚಂದ್ರಶೇಖರ್ ಅವರಿಗೆ ಹಿಂದಿರುಗಿಸಿದವರು ಇದೇ ದೇವೇಗೌಡರು. ವಿರೋಧ ಪಕ್ಷದ ನಾಯಕರಾಗಿ ಅವರು ನಡೆದುಕೊಳ್ಳುತ್ತಿದ್ದನ್ನು ಕಂಡ ಡಿ.ವಿ.ಜಿ.ಯವರು ಅವರನ್ನು ಮೆಚ್ಚಿಕೊಂಡಿದ್ದರು. ವಿರೋಧ ಪಕ್ಷದ ನಾಯಕರಿಗೆ ಇದ್ದಂತಹ ಎಲ್ಲಾ ಸವಲತ್ತುಗಳನ್ನು ಎಡಗಾಲಲ್ಲಿ ಒದ್ದು ಜನತೆಗಾಗಿ ದುಡಿದವರು ಅವರು.

ಆಗ ದೇವೇಗೌಡರಿಗೆ ಬೆಂಗಳೂರಿನಲ್ಲಿ ಇರಲು ಮನೆ ಇರಲಿಲ್ಲ! ಕಾರು ಕೂಡಾ ಇರಲಿಲ್ಲ. ಇದು ಜಂಭಕ್ಕೆ ಹೇಳೋ ಮಾತಲ್ಲ, ದೇವೇಗೌಡರಿಗಿಂತ ಮೊದಲೇ ನಾನು ಕಾರು ಕೊಂಡಿದ್ದೆ. ಗ್ರೋವರ್ ಕಮೀಷನ್ ಮುಂದೆ, ಭ್ರಷ್ಟಾಚಾರದ ಆರೋಪಗಳ ರಿಪೋರ್ಟ್ ಗಳನ್ನು ಹಾಜರು ಪಡಿಸಲು, ಶಾಸಕರ ಭವನದಲ್ಲಿದ್ದು ಸಿದ್ಧಪಡಿಸಿದೆವು. ನಮ್ಮ ಕಾರ್ಯಗಳಿಗೆ ತೊಂದರೆಯಾಗುತ್ತೆ ಅಂತ, ರೂಮಿಗೆ ಹೊರಗಡೆಯಿಂದ ಬೀಗಹಾಕಿಸಿ, ಕಿಟಕಿಯಿಂದ ದೋಸೆ ತರಿಸಿಕೊಂಡು ತಿಂದು ಕೂತು ಕೆಲಸ ಮಾಡಿದೆವು.

ರೈತರ ಬಗ್ಗೆ, ಜನಸಾಮಾನ್ಯರ ಬಗ್ಗೆ ಒಂದು ರೀತಿ ದೇವರು ಮೈಮೇಲೆ ಬಂದವರ ತರಹ ವರ್ತಿಸೋರು. ನೀರಾವರಿ ವಿಷಯದಲ್ಲಂತೂ ಬಿಡಿ, ಅವರಿಗೆ ಎರಡನೆಯವರು ಯಾರೂ ಇರಲಿಲ್ಲ. 1985ರ ಚುನಾವಣೆ ಆದ ಮೂರನೆ ದಿವಸಕ್ಕೆ ಜಯನಗರದ ಒಂದು ಛತ್ರದಲ್ಲಿ ಒಂದು ಸಭೆ ನಡೀತು. ಚುನಾವಣಾ ಫಲಿತಾಂಶ ಆಗತಾನೆ ಬಂದಿತ್ತು. ನಾವೆಲ್ಲ ಮಂತ್ರಿ ಆಗಿದ್ದೋ. ಆ ಸಭೆಯಲ್ಲಿ ದೇವೇಗೌಡರು ಒಂದು ಮಾತು ಹೇಳಿದರು. ಈ ಚುನಾವಣೆಯ ಫಲಿತಾಂಶದ ಯಶಸ್ಸು ಯಾರೋ ಒಬ್ಬ ವ್ಯಕ್ತಿಗೆ ಸಲ್ಲತಕ್ಕದ್ದಲ್ಲ. ಅದು ನಮ್ಮ ಪಕ್ಷದ ಸಾಮೂಹಿಕ ನಾಯಕತ್ವಕ್ಕೆ, ನಮ್ಮ ನೀತಿಗೆ ಸಲ್ಲುವ ಜಯ ಎಂದರು. ಅಂದಿನ ಪರಿಸ್ಥಿತಿ ಹೇಗಿತ್ತು ಅಂದರೆ, ಹೆಗಡೆಯವರ ನೇತೃತ್ವದಲ್ಲಿ ಪಕ್ಷ ಅಧಿಕಾರಕ್ಕೆ ಬಂದಿತು ಅನ್ನುವ ಮಾತು ಎಲ್ಲಕಡೆಯೂ ಪ್ರಚಲಿತದಲ್ಲಿತ್ತು. ಆ ಸಂದರ್ಭದಲ್ಲಿ ದೇವೇಗೌಡರು ಆಡಿದ ಮಾತಿನಿಂದ ನನಗೇಕೋ ಆತಂಕ ಶುರುವಾಯಿತು.

ನಾನೂ, ದೇವೇಗೌಡರು ಒಂದೇ ಕಾರಿನಲ್ಲಿ ವಾಪಸ್ ಬರುತ್ತಿದ್ವಿ. ಆಗ ನಾನು ಅವರಿಗೆ ಹೇಳಿದೆ, 'ನೀವು ಇವತ್ತಿನಿಂದ ಅಪನಂಬಿಕೆಯ ಬೀಜವನ್ನು ಬಿತ್ತಿದ್ದೀರಿ, ನಾಳೆ ಪತ್ರಿಕೇಲಿ ನೋಡಿ ಏನಾಗುತ್ತೆ' ಅಂದೆ. ಈ ಚುನಾವಣೆಯ ಯಶಸ್ಸಿಗೆ ಒಬ್ಬ ವ್ಯಕ್ತಿ ಕಾರಣನಲ್ಲ ಅಂತ, ಹೆಗಡೆಯಿಂದ ಗೆದ್ದು ಬಂದವರಲ್ಲ ಅಂತ ಅಪರೋಕ್ಷವಾಗಿ ಹೇಳಿದಿರಿ. ನಿಮ್ಮ ಮನಸ್ಸಿನಲ್ಲಿ ಕೂಡ ಅದು ಇತ್ತೋ ಇಲ್ಲವೋ, ಆದರೆ ಪತ್ರಿಕೇಲಿ ಬರುತ್ತೆ ಅಂದೆ. ಅದೇ ರೀತಿಲಿ ಪತ್ರಿಕೆಯಲ್ಲಿ ಪ್ರಕಟವಾಯಿತು. ಅಲ್ಲಿಂದೀಚೆಗೆ ದೇವೇಗೌಡ ಮತ್ತು ಹೆಗಡೆಯವರ ನಡುವೆ ವಿರೋಧ, ವೈಮನಸ್ಸು ಆರಂಭವಾಯಿತು. ಅಂದಿನಿಂದ ಹೆಗಡೆಯವರ ಪ್ರತಿಸ್ಪರ್ಧಿಯಾಗಿ, ತಾನೂ ಮುಖ್ಯಮಂತ್ರಿ ಆಗಬೇಕು ಅಂತ ದೇವೇಗೌಡರ ಮನಸ್ಸಿನಲ್ಲೂ ಆಸೆಯ ಬೀಜ ಮೊಳೆಯಲಾರಂಭಿಸಿತು. ಅವರು ಮುಖ್ಯಮಂತ್ರಿ ಆಗಬೇಕು ಅಂತ ಆಸೆಪಟ್ಟವರಲ್ಲಿ, ಶ್ರಮಿಸಿದವರಲ್ಲಿ ನಾನು ಯಾರಿಗೂ ಎರಡನೆಯವನಲ್ಲ.

ಆ ಒಂದು ಪಿತ್ತ ಎಷ್ಟರಮಟ್ಟಿಗೆ ನನ್ನ ನೆತ್ತಿಗೇರಿತು ಅಂದರೆ; ಅಲ್ಲಿ ಶಾಸಕಾಂಗದ ಸಭೆ ನಡೆಯುತ್ತಿರಬೇಕಾದರೆ, ನಾನೂ ನನ್ನ ಹೆಂಡತಿ ಜೊತೆಯಲ್ಲಿ ಹೋಗಿ ದೇವೇಗೌಡರು ಮುಖ್ಯಮಂತ್ರಿ ಆಗಲಿ ಎಂದು ದೇವರಿಗೆ ಪೂಜೆ ಮಾಡಿಸಿಕೊಂಡು ಬಂದೆವು.

ಮುಖ್ಯಮಂತ್ರಿ ಆಗೋಕೆ ಹಣ ಬೇಕೇಬೇಕು ಅನ್ನೋ ಆಸೆ ಅವರಲ್ಲಿ ಬೆಳೆಯಿತು. ಅಧಿಕಾರಕ್ಕಾಗಿ ಹಣ ಸಂಪಾದನೆ ಮಾಡುವುದೇ ಅವರ ಗುರಿಯಾಯಿತು. ಈ ದಾರಿಯಲ್ಲಿ ರಾಮಯ್ಯನಿಂದ ಏನೂ ಪ್ರಯೋಜನ ಇಲ್ಲ! ಇವನು ಹುಚ್ಚ, ಇವನು ಎಂದೂ ರಾಜಿಯಾಗದವನು ಎಂದು ಅನ್ನಿಸಿತು. ಇದೆಲ್ಲ ಮೆಚ್ಚುವಂತ ಗುಣ ಆಗಿದ್ದರೂ ಕೂಡ, ಮುಖ್ಯಮಂತ್ರಿ ಹುದ್ದೆಯ ಗುರಿಯನ್ನು ಮುಟ್ಟೋದಕ್ಕೆ ಸರಿಯಾದ ಮಾರ್ಗ ಅಲ್ಲ ಅನ್ನೋ ತೀರ್ಮಾನಕ್ಕೆ ಅವರು ಬಂದರು.

ನನ್ನ ಮತ್ತು ದೇವೇಗೌಡರ ಬಾಂಧವ್ಯ ತೀರ ಕೆಟ್ಟಿತ್ತು. ಚರಿತ್ರೆಯ ಆಕಸ್ಮಿಕದಲ್ಲಿ 1990ರ ದಶಕದಲ್ಲಿ ಚಂದ್ರಶೇಖರ ಪ್ರಧಾನಿಯಾದರು. ಚಂದ್ರಶೇಖರ್ ಅವರು ನನ್ನನ್ನು ಮತ್ತು ದೇವೇಗೌಡರನ್ನು ಹತ್ತಿರದಿಂದ ಬಲ್ಲವರು. ನಮ್ಮಿಬ್ಬರ ಬಗ್ಗೆಯೂ ಸಮಾನವಾಗಿ ಪ್ರೀತಿ ಇಟ್ಟುಕೊಂಡಿದ್ದರು. ನಮ್ಮಿಬ್ಬರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಎರಡು ಸಲ ಪ್ರಯತ್ನಿಸಿದರು. 'ನೀವ್ಯಾಕೆ ಬೆಕ್ಕು ಮತ್ತು ಇಲಿ ತರಹ ಕಿತ್ತಾಡ್ತೀರಿ, ಇದೆಲ್ಲಾ ಬಿಟ್ಟು ಒಂದಾಗಿ' ಅಂತ ಹೇಳಿದರು. ಆಗ ನಾನು ಹೇಳಿದೆ, ''ದೇವೇಗೌಡರು ನನಗೆ ಮಾಡಿರುವ ಕೆಟ್ಟದ್ದನ್ನು ಒಂದು ನೂರನ್ನು ಪಟ್ಟಿಮಾಡಿ ನಿಮಗೆ ಕೊಡ್ತೀನಿ. ನಾನು ಅವರಿಗಿಂತ 10-12 ವರ್ಷ ಚಿಕ್ಕವನು. ನನ್ನ ತಪ್ಪಿದ್ದರೆ, ಅವರ ಕಾಲಿಗೆ ಬಿದ್ದು ಕ್ಷಮಾಪಣೆ ಕೇಳುತ್ತೇನೆ'' ಎಂದೆ. ಈ ನಡುವೆ ಚಂದ್ರಶೇಖರ್ ಅವರು ದೇವೇಗೌಡರಿಗೆ ಎರಡು ಸಲ ಭೇಟಿಯಾಗಲು ತಿಳಿಸಿದರು. ನಾನೂ ಚಂದ್ರಶೇಖರ್ ಅವರ ಬಳಿಯೇ ಇದ್ದು ಅವರಿಗಾಗಿ ಕಾದೆ. ಆದರೆ ಆ ಎರಡು ಸಲವೂ ದೇವೇಗೌಡರು ಬರಲಿಲ್ಲ.

ಆನಂತರ ಮುಂದೊಮ್ಮೆ ಚಂದ್ರಶೇಖರ್ ಅವರನ್ನು ಅವರ ತೋಟದಲ್ಲೇ ಭೇಟಿಯಾದೆ. ಅವರೊಂದಿಗೆ ವಾಕಿಂಗ್ ಹೋಗುವಾಗ ದೇವೇಗೌಡರು ಯಾಕೆ ಬರಲಿಲ್ಲ? ಎಂದು ಕೇಳಿದೆ. ಆ ಕೂಡಲೇ ಅವರು ನನ್ನ ಕಡೆ ತಿರುಗಿ 'ನಿಮ್ಮ ಒಳ್ಳೆಯ ಗುಣಗಳೇ ನಿಮಗೆ ಶತ್ರುಗಳಾಗಿವೆ' ಎಂದು ಹೇಳಿದರು. ಅಂದಿನಿಂದ ನಾನು ಸುಮ್ಮನಾದೆ.



1968ರಲ್ಲಿ ಕೆಂಗಲ್ಲರನ್ನು ಹೂವಿನ ಪಲ್ಲಕ್ಕಿಯಲ್ಲಿ ಮೆರವಣಿಗೆಯಲ್ಲಿ ಕರೆತರುವುದನ್ನು ನೋಡಿ ಹೃದಯ ತುಂಬಿ ಬಂದಿತ್ತು. ಈ ದಿನ ಅಂತಹುದೇ ಹೂವಿನ ಪಲ್ಲಕ್ಕಿಯಲ್ಲಿ ಅವರ ಕಳೇಬರದ ಮೆರವಣಿಗೆಯನ್ನು ನೋಡಿದಾಗ ದುಃಖ ಒತ್ತರಿಸಿ ಬಂತು. ರಾಜಕೀಯವಾಗಿ ಅನೇಕ ಸಲ ಅವರ ನಿಲುವನ್ನು ವಿರೋಧಿಸಿದ್ದ ನನಗೆ - ಅವರ ಬಗ್ಗೆ ಎಂತಹುದೋ ಒಂದು ಅವ್ಯಕ್ತ ಪ್ರೀತಿ, ಅಭಿಮಾನ. 1968ರಿಂದ ಆರಂಭಿಸಿ ಈ ಹನ್ನೆರಡು ವರ್ಷಗಳಲ್ಲಿ ಅನೇಕ ಸಲ ಅವರೊಡನೆ ಚರ್ಚಿಸಿದ್ದೇನೆ.

ದೇಶದಲ್ಲಿ ತುರ್ತು ಪರಿಸ್ಥಿತಿ ಕೊನೆಗೊಂಡು ಚುನಾವಣೆ ಘೋಷಿಸಿದಾಗ, ಬೆಂಗಳೂರಿನಿಂದ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್‌ನಿಂದ ಸ್ಪರ್ಧಿಸಬೇಡಿ ಎಂದು ಕೇಳಿಕೊಳ್ಳಲು ಒಮ್ಮೆ ಅವರ ಮನೆಗೆ ಹೋಗಿದ್ದೆ. ಕೆಂಗಲ್ಲರು ಬೆಳಗಿನ ತಮ್ಮ ತಿರುಗಾಟ ಮುಗಿಸಿಕೊಂಡು ಬಂದು ಕುಳಿತಿದ್ದರು. ಆಗ ನಾನು ನನ್ನ ಮನಸ್ಸಿನಲ್ಲಿದ್ದುದ್ದನ್ನು ಹೇಳಿ, ನೀವು ಚುನಾವಣೆಯಲ್ಲಿಸ್ಪರ್ಧಿಸಿದರೆ ನಮಗೆ ಧರ್ಮಸಂಕಟವಾಗುತ್ತದೆ ಎಂದು ಹೇಳಿದೆ. ನನ್ನ ಮಾತನ್ನು ಸಂಪೂರ್ಣ ಕೇಳಿದ ಹನುಮಂತಯ್ಯನವರು, ಒಂದು ಕ್ಷಣ ಕಣ್ಣುಮುಚ್ಚಿಕುಳಿತರು. 'ಇನ್ನು ಮೂರು ದಿನದಲ್ಲಿ ನನ್ನ ತೀರ್ಮಾನ ತಿಳಿಸುತ್ತೇನೆ ರಾಮಯ್ಯ' ಎಂದು ನನ್ನನ್ನು ಬೀಳ್ಕೊಟ್ಟರು. ಮೂರು ದಿನಗಳ ನಂತರ ಕೆಂಗಲ್ ಹನುಮಂತ್ಯನವರು ಇಂದಿರಾ ಕಾಂಗ್ರೆಸ್‌ನಿಂದ ಚುನಾವಣೆಯಲ್ಲಿ ಸ್ಪರ್ಧಿಸುವುದಾಗಿ ಘೋಷಿಸಿದರು. ಸ್ಪರ್ಧಿಸಿ ಸೋತರು.

ಐತಿಹಾಸಿಕವಾದ ಚಿಕ್ಕಮಗಳೂರು ಚುನಾವಣೆ. ಅಂದು ಸಂಜೆ ಶ್ರೀರಂಗಪಟ್ಟಣದ ಗೆಳೆಯ ಶ್ರೀನಿವಾಸರೊಡನೆ ಹಾಗು ಮಂಡ್ಯದ ಕೆಲವು ಗೆಳೆಯರೊಡನೆ ಮೂಡಿಗೆರೆ ಪ್ರವಾಸಿ ಮಂದಿರದಲ್ಲಿ ಕುಳಿತಿದ್ದೆ. ಆಗ ಹನುಮಂತಯ್ಯನವರು ಇಂದಿರಾಗಾಂಧಿಯವರ ಪರವಾಗಿ ಚುನಾವಣಾ ಪ್ರಚಾರ ಮಾಡಲು ಮೂಡಿಗೆರೆಗೆ ಬಂದಿದ್ದರು. ನಾವೆಲ್ಲ ಇಂದಿರಾಗಾಂಧಿಯವರ ವಿರುದ್ಧ ಮಲೆನಾಡಿನಲ್ಲೆಲ್ಲಾ ಚುನಾವಣಾ ಪ್ರಚಾರ ಮಾಡುತ್ತಿದ್ದೆವು. ಅಲ್ಲಿಗೆ ಬಂದ ಕೆಂಗಲ್ಲರನ್ನು ನೋಡಿದೆ. ಅದೇ ಶುಭ್ರವಾದ ಪೇಟ, ಕ್ಲೋಸ್ ಕಾಲರ್ ಕೋಟ್, ನೇರ ನಡಿಗೆ. ಪ್ರವಾಸಿ ಮಂದಿರದಲ್ಲಿ ಕುಳಿತಿದ್ದ ನನಗೆ ಮತ್ತು ಶ್ರೀನಿವಾಸ್‌ಗೆ, ಅಲ್ಲಿದ್ದ ಕೆಲವು ಗೆಳೆಯರು 'ಹನುಮಂತ್ಯನವರಿಗೆ ನೀವು ಯಾರೂ ಎದ್ದು ನಮಸ್ಕರಿಸಬೇಡಿ' ಎಂದು ಕಟ್ಟುನಿಟ್ಟಾಗಿ ಹೇಳಿದರು. ನಾವೆಲ್ಲಾ ಎತ್ತಲೋ ನೋಡುತ್ತಾ ಕುಳಿತಿದ್ದೆವು. ನಮ್ಮ ನಡುವೆ ಇದ್ದ ಬಿಸಿರಕ್ತದ ಯುವಕನೊಬ್ಬ ನೆನಪಿನಿಂದ ಹೇಳುವುದಾದರೆ, ಎ.ಟಿ. ಸಾಗರಾಜ ಎಂದಿರಬಹುದು ''ಬಂತು ನೋಡಿ, ಮುದಿ ಕೋತಿ'' ಎಂದೇ ಬಿಟ್ಟ. ಅದನ್ನು ಕೇಳಿಸಿಕೊಂಡ ಹನುಮಂತಯ್ಯನವರು, ನೇರವಾಗಿ ತಮ್ಮ ಕೊಠಡಿಗೆ ಹೋದರು.

ಸುಮಾರು ಸಾಲ್ಕು-ಐದು ನಿಮಿಷಗಳ ನಂತರ, ಅವರ ಆಳು ನಾವು ಕುಳಿತ್ತಿದ್ದಲ್ಲಿಗೆ ಬಂದು; ಇಲ್ಲಿ ಕುಣಿಗಲ್‌ನವರು ಯಾರು? ಸಾಹೇಬರು ಕರೆಯುತ್ತಿದ್ದಾರೆ ಒಳಗೆ ಬರಬೇಕಂತೆ' ಎಂದು ಹೇಳಿ ನಿಂತ. ಆಗ ನಾನು ಮೇಲೆದ್ದು, ಸ್ನೇಹಿತರ ಬೇಕು-ಬೇಡಗಳನ್ನು ಕೇಳದೆ, ನೇರವಾಗಿ ಕೆಂಗಲ್ಲರ ರೂಮಿಗೆ ಹೋದೆ. ಒಳಗಡೆ ಹನುಮಂತಯ್ಯನವರು ಪೇಟ ತೆಗೆದಿಟ್ಟು ಹಾಲಿನ ಜೊತೆ ಯಾವುದೋ ಗುಳಿಗೆ ನುಂಗುತ್ತಿದ್ದರು. ನನ್ನನ್ನು ನೋಡಿ ಕುಳಿತುಕೊಳ್ಳಿ ಎಂದರು. ಇಂದಿರಾಗಾಂಧಿಯವರ ಪರ ಪ್ರಚಾರಕ್ಕೆ ಬಂದದ್ದರ ಬಗ್ಗೆ ನನ್ನ ಅಸಮಾಧಾನವನ್ನು ನೇರವಾಗಿ ಹೇಳಿದೆ. ಅವರು ಆಡಿದ ಮಾತು, ರೀತಿ-ನೀತಿಗಳನ್ನು ನೋಡಿದಾಗ; ಅವರಿಗೆ

ಇಂದಿರಾಗಾಂಧಿಯವರ ಮೇಲಿನ ಪ್ರೇಮಕ್ಕಿಂತ, ವಿರೇಂದ್ರ ಪಾಟೀಲರ ಮೇಲಿನ ಅಸಮಾಧಾನವೇ ಮುಖ್ಯ ಕಾರಣ ಎಂದು ತಿಳಿಯಿತು.

ಅದೇ ದಿನ ಮಂಡ್ಯ ಜಿಲ್ಲೆಯ ಕೆಲವು ಯುವಕರು, ಮಾದೇಗೌಡರು ಹೇಳಿಕೊಟ್ಟಂತೆ 'ಕೆಂಗಲ್‌ರೇ, ನಿಮಗೆ ಪೇಟ ಹಾಕಿಸಿದವರು ಮಂಡ್ಯದವರು. ಈಗ ಆ ಪೇಟ ವಾಪಸ್ ಕೊಡಿ' ಎಂದು ಗೇಲಿ ಮಾಡಿದರು. ಆನಂತರದಲ್ಲಿ ಮಾದೇಗೌಡರೇ ಇಂದಿರಾ ಕಾಂಗ್ರೆಸ್ ಸೇರಿದರು. ಆ ಮಾತು ಇಲ್ಲಿ ಬೇಡ.

1978ರ ಚುನಾವಣೆಯಲ್ಲಿ ಒಳ್ಳೆಯದಕ್ಕೋ - ಕೆಟ್ಟದ್ದಕ್ಕೋ ನಾನು ಅಭ್ಯರ್ಥಿಯಾಗಿ ರಲಿಲ್ಲ. ಚುನಾವಣಾ ಸಂಬಂಧದಲ್ಲಿ ದೇವೇಗೌಡರನ್ನು ಕಾಣಲು ತುಮಕೂರು ಪ್ರವಾಸಿ ಮಂದಿರದ ಹೊರಗೆ ನಿಂತಿದ್ದೆ. ಅಲ್ಲಿಗೆ ಕೆಂಗಲ್‌ರು ಒಬ್ಬರೇ ಬಂದು ಕಾರಿನಿಂದ ಇಳಿದರು. ಅಂದು ಸ್ವರಾಜ್ಯಪಕ್ಷ ಕಟ್ಟಿ, ಚುನಾವಣೆ ಗೆಲ್ಲಲು ಹೋರಾಟ ಮಾಡುತ್ತಿದ್ದರು. ನನ್ನನ್ನು ಕಂಡು ಇಲ್ಲಿ ಬನ್ನಿ ಅಂದರು. ನಾನು ಅವರನ್ನು ಹಿಂಬಾಲಿಸಿ ಅವರ ಕೊಠಡಿಗೆ ಹೋದೆ. 'ನಾನು ನಿಮ್ಮ ಅಭಿಮಾನಿ. ಆದರೆ ರಾಜಕೀಯದಲ್ಲಿ ನಿಮ್ಮ ವಿರೋಧಿ' ಎಂದು ಹೇಳಿದೆ. 'ಅದೇ ನಿಮ್ಮ ಅಭಿಪ್ರಾಯವಾಗಿದ್ದರೆ, ನಾನೇನೂ ಮಾಡಲಾರೆ' ಅಂದರು. ಇತ್ತೀಚಿನ ಅವರ ರಾಜಕೀಯ ನಿಲುವು, ಅದರಲ್ಲಿಯೂ ತುರ್ತು ಪರಿಸ್ಥಿತಿಯಿಂದ ಈಚಿನದು, ನನ್ನನ್ನು ಅವರಿಂದ ದೂರ ಮಾಡಿತು......

1968ರಲ್ಲಿ ನಾವೆಲ್ಲಾ ಸೇರಿ ಕೆಂಗಲ್‌ರ ಅರವತ್ತನೇ ಹುಟ್ಟುಹಬ್ಬವನ್ನು ಸಾರ್ವಜನಿಕವಾಗಿ ಆಚರಿಸಿದೆವು. ಆಗ ಅವರು ಪ್ರವಾಸಿ ಮಂದಿರದಲ್ಲಿ ನಮ್ಮೊಂದಿಗೆ ಊಟ ಮಾಡಿ ಕುಳಿತು **'ರಾಜಕೀಯಕ್ಕಾಗಿ ಜನರನ್ನು ಕಟ್ಟುವ ಅಭ್ಯಾಸ ಬೇಡ. ಅದು ವ್ಯಾಪಾರವಾಗುತ್ತದೆ. ಸಾಂಸ್ಕೃತಿಕ ಕಾರ್ಯಕ್ರಮ, ಸಾರ್ವಜನಿಕ ಸೇವೆ, ಇವುಗಳ ಮೂಲಕ ಜನರನ್ನು ಸಂಘಟಿಸುವ ಅಭ್ಯಾಸ ಬೆಳೆಸಿಕೊಳ್ಳಿ ಸಾರ್ವಜನಿಕ ಜೀವನದಲ್ಲಿ ಸ್ವಚ್ಛತೆ ಎಲ್ಲಕ್ಕಿಂತ ಮುಖ್ಯ.'** ಎಂದು ಹೇಳಿದರು. ನಾನು ಇದುವರೆಗೂ ಅದರಂತೆಯೇ ನಡೆದಿದ್ದೇನೆ ಎನ್ನುವ ನಂಬಿಕೆ ನನಗಿದೆ.

○

## ಬದುಕಿನ ಘಟ್ಟಗಳು

| | |
|---|---|
| 1939 | ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಹುಲಿಯೂರುದುರ್ಗ ಹೋಬಳಿಯ ಎಲೆಕಡಕಲು ಗ್ರಾಮದ ರೈತರ ಕೂಡುಕುಟುಂಬದಲ್ಲಿ 5-8-1939ರಲ್ಲಿ ಜನನ |
| | ತಾಯಿ : ಚೆನ್ನಮ್ಮ; ತಂದೆ : ಕಂಬೇಗೌಡ |
| | ಅಣ್ಣ-ಅಕ್ಕಂದಿರು : ಕಂಬೇಗೌಡ, ಹುಚ್ಚೇಗೌಡ, ತಿಮ್ಮಮ್ಮ, ಕರಿಯಮ್ಮ, ಕೆಂಪಮ್ಮ, ಚೆನ್ನಮ್ಮ. |
| 1950ವರೆಗೆ | ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ, ಎಲೆಕಡಕಲು ಮತ್ತು ಉಜ್ಜನಿ ಗ್ರಾಮದಲ್ಲಿ. |
| 1958-59 | ಹುಲಿಯೂರುದುರ್ಗ ಪ್ರೌಢಶಾಲೆಯಲ್ಲಿ ವ್ಯಾಸಂಗ. ಎಸ್.ಎಸ್.ಎಲ್.ಸಿ ಉತ್ತೀರ್ಣ. |
| 1962 | ತುಮಕೂರು ಸರ್ಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಬಿ.ಎ. ಪದವಿ. |
| 1964 | ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರ ಎಂ.ಎ. ಪದವಿ. |
| 1966 | ಧಾರವಾಡದ ಜೆ.ಎಸ್.ಎಸ್ ಕಾನೂನು ಕಾಲೇಜಿನಲ್ಲಿ ಎಲ್.ಎಲ್.ಬಿ ಪದವಿ. |
| 1967 | ತುಮಕೂರಿನಲ್ಲಿ ಹಿರಿಯ ವಕೀಲರಾದ ಎಚ್.ಎಸ್. ಶೇಷಾದ್ರಿಯವರ ಬಳಿ ವಕೀಲಿ ವೃತ್ತಿ ಆರಂಭ. |
| | ವಿಧಾನಸಭೆಗೆ ಮೊದಲ ಸಲ ಪಕ್ಷೇತರ ಅಭ್ಯರ್ಥಿಯಾಗಿ ಸಿಂಹದ ಗುರುತಿನಿಂದ ಸ್ಪರ್ಧೆ, ಸೋಲು. |
| | ತಾಲ್ಲೂಕು ಬೋರ್ಡ್ ಚುನಾವಣೆಗೆ ಎಲೆ ಗುರುತಿನಿಂದ ಸ್ಪರ್ಧೆ. ಗೆಲುವು. |
| 1968 | ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಬೆಸಗರಹಳ್ಳಿಯ ಅನುಸೂಯಾ ಅವರೊಂದಿಗೆ 5-6-1968ರಂದು ಮದುವೆ |
| | ಮಕ್ಕಳು : ರಮೇಶ್ (10-6-1969), ಚೇತನಾ (20-9-1970), ರಾಜೀವ್‌ಬಾಬು (21-4-1972), ರವಿಕಿರಣ್ (31-3-1974) |

| | |
|---|---|
| 1969 | ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಇಬ್ಭಾಗ (ಓ) ಕಾಂಗ್ರೆಸ್‌ನಲ್ಲಿ ಉಳಿದುಕೊಂಡಿದ್ದು. |
| 1970 | ಕುಣಿಗಲ್‌ನಲ್ಲಿ ನ್ಯಾಯಾಲಯ ಸ್ಥಾಪನೆ. ಕುಣಿಗಲ್‌ನಲ್ಲಿ ಸ್ವತಂತ್ರವಾಗಿ ವಕೀಲಿ ವೃತ್ತಿ ಆರಂಭ. ಸಾರ್ವಜನಿಕ ಜೀವನಕ್ಕೆ ಪ್ರವೇಶ. |
| 1970-85 | ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧ್ಯಕ್ಷರು. (1985ರ ತನಕ) |
| 1970 | ಕುಣಿಗಲ್ ವಕೀಲರ ಸಂಘದ ಅಧ್ಯಕ್ಷ. (1984ರ ತನಕ) |
| | ಕುಣಿಗಲ್ ರೋಟರಿ ಕ್ಲಬ್ ಅಧ್ಯಕ್ಷ. ರೋಟರಿಯ ವಿವಿಧ ಸ್ಥಾನಗಳಲ್ಲಿ ಸಕ್ರಿಯ ಕಾರ್ಯನಿರ್ವಹಣೆ. |
| 1974 | ರಾಜ್ಯ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷ. ರೇಷ್ಮೆ ಬೆಳೆಗಾರರಿಗೆ ಬೋನಸ್‌ಗಾಗಿ ಪ್ರಯತ್ನಿಸಿ ಸಫಲರಾಗಿದ್ದು. (1985ರ ತನಕ) |
| 1975 | ರಾಷ್ಟ್ರಮಟ್ಟದಲ್ಲಿ ಜೆ.ಪಿ ಅವರ ಕರೆಯಂತೆ ಕಾಂಗ್ರೆಸ್ಸೇತರ ಪಕ್ಷಗಳ ವಿಲೀನದಿಂದ ಜನತಾಪಕ್ಷ ಸ್ಥಾಪನೆ. (ಓ) ಕಾಂಗ್ರೆಸ್ ಜನತಾಪಕ್ಷದಲ್ಲಿ ವಿಲೀನ. ಜನತಾಪಕ್ಷದ ಸಕ್ರಿಯ ಸದಸ್ಯರಾಗಿದ್ದು. |
| 1979 | 'ರೇಷ್ಮೆ ಕೃಷಿ' ಮಾಸಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯ. (1985ರ ತನಕ) |
| 1983 | ಕುಣಿಗಲ್ ಕ್ಷೇತ್ರದಿಂದ ವಿಧಾನಸಭೆಗೆ ಜನತಾಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧೆ. 12,000 ಅಧಿಕ ಮತಗಳಿಂದ ಗೆಲುವು. |
| | ಕರ್ನಾಟಕ ಗೃಹ ಮಂಡಳಿ ಅಧ್ಯಕ್ಷರಾಗಿ ನೇಮಕ. |
| 1984 | ಜನತಾಪಕ್ಷದ ಅಭ್ಯರ್ಥಿಯಾಗಿ ಲೋಕಸಭಾ ಚುನಾವಣೆಗೆ ತುಮಕೂರಿನಿಂದ ಸ್ಪರ್ಧೆ. 30,000 ಮತಗಳ ಅಂತರದಲ್ಲಿ ಸೋಲು. |
| 1985 | ಕುಣಿಗಲ್ ಕ್ಷೇತ್ರದಿಂದ ಜನತಾಪಕ್ಷದ ಅಭ್ಯರ್ಥಿಯಾಗಿ ವಿಧಾನಸಭಾ ಚುನಾವಣೆಗೆ ಸ್ಪರ್ಧೆ. 25,000 ಮತಗಳಿಂದ ಗೆಲುವು. ಎರಡನೆ ಬಾರಿಗೆ ವಿಧಾನಸಭೆ ಪ್ರವೇಶ. |
| | ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಮಂತ್ರಿ ಮಂಡಲದಲ್ಲಿ ರೇಷ್ಮೆ ಸಚಿವರಾಗಿ ನೇಮಕ. |

| | |
|---|---|
| 1986 | ರೇಷ್ಮೆ ಕುರಿತ ಅಧ್ಯಯನಕ್ಕಾಗಿ ಜಪಾನ್ ಮತ್ತು ಕೊರಿಯಾ ದೇಶಗಳಲ್ಲಿ ಪ್ರವಾಸ. |
| | ತುಮಕೂರಿನಿಂದ ಬೆಂಗಳೂರು ಗಡಿವರೆಗೆ (80 ಕಿ.ಮೀ) ಪಾದಯಾತ್ರೆ. ಸಸಿ ನೆಡುವ ಕಾರ್ಯಕ್ರಮ |
| 1987 | ಕುಣಿಗಲ್‌ನಿಂದ ಮದ್ದೂರು ವರೆಗೆ (75 ಕಿ.ಮಿ.) ಪಾದಯಾತ್ರೆ ಸಸಿ ನೆಡುವ ಕಾರ್ಯಕ್ರಮ. |
| 1988 | ರಾಮಕೃಷ್ಣ ಹೆಗಡೆ ಮಂತ್ರಿಮಂಡಲದಲ್ಲಿ ತೋಟಗಾರಿಕಾ ಮಂತ್ರಿಯಾಗಿ ನೇಮಕ. |
| | ಕುಣಿಗಲ್‌ನಿಂದ ಅಮೃತೂರು ಮಾರ್ಗವಾಗಿ ಹುಲಿಯೂರುದುರ್ಗಕ್ಕೆ ಪಾದಯಾತ್ರೆ ಸಸಿ ನೆಡುವ ಕಾರ್ಯಕ್ರಮ. |
| | ಮುಖ್ಯಮಂತ್ರಿ ರಾಮಕೃಷ್ಣಹೆಗಡೆ ಮಂತ್ರಿಮಂಡಲಕ್ಕೆ ರಾಜೀನಾಮೆ ಸಲ್ಲಿಸಿದ್ದು. |
| 1992 | **'ನಾನು ಮತ್ತು ರೇಷ್ಮೆ'** ಕೃತಿ ಪ್ರಕಟಣೆ. |
| 1992 | ಕುಣಿಗಲ್ ಕ್ಷೇತ್ರದಲ್ಲಿ ವಿಧಾನಸಭೆಗೆ ನಡೆದ ಉಪ ಚುನಾವಣೆಯಲ್ಲಿ ಸ್ಪರ್ಧೆ. 10,000 ಮತಗಳಿಂದ ಐತಿಹಾಸಿಕ ಗೆಲುವು. |
| | ವಿಧಾನಸಭೆಯಲ್ಲಿ ಅತ್ಯುತ್ತಮ ಸಂಸದೀಯ ಪಟುವಾಗಿ ರೂಪಗೊಂಡಿದ್ದು. |
| | ಹೇಮಾವತಿ ಹೋರಾಟದ ತಾರಕ ದಿನಗಳು. ಜೈಲುವಾಸ. |
| | ಮುಲಾಯಂಸಿಂಗ್ ಯಾದವ್ ನೇತೃತ್ವದ ಸಮಾಜವಾದಿ ಜನತಾಪಕ್ಷಕ್ಕೆ ಸೇರ್ಪಡೆ. ಸಮಾಜವಾದಿ ಜನತಾಪಕ್ಷದ ರಾಜ್ಯಾಧ್ಯಕ್ಷರಾಗಿ ನೇಮಕ. |
| | ತಾತ್ವಿಕ ಕಾರಣಗಳಿಂದಾಗಿ ಸಮಾಜವಾದಿ ಜನತಾಪಕ್ಷ ತೂರೆದಿದ್ದು. |
| 1994 | ನಿರಂತರ ಹೋರಾಟದ ಫಲವಾಗಿ ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಹರಿದು ಬಂದಿತು. |
| 1995 | ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಹರಿಸಲು ಮುಖ್ಯಮಂತ್ರಿ ಎಚ್.ಡಿ. ದೇವೇಗೌಡ ಅವರ ಸರ್ಕಾರದೊಂದಿಗೆ ತೀವ್ರ ಸಂಘರ್ಷ. ಸರ್ಕಾರದಿಂದ ಬಂಧನಕ್ಕೊಳಗಾಗಿ ಜೈಲುವಾಸ. ಜೈಲಿನಲ್ಲೇ ಯುಗಾದಿ ಹಬ್ಬ ಆಚರಣೆ. |

1997-98 ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆ. ಸೀತಾರಾಂ ಕೇಸರಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಅವಧಿ.

1998-99 ಹುಲಿಯೂರುದುರ್ಗ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ವಿಧಾನಸಭಾ ಚುನಾವಣೆಗೆ ಸ್ಪರ್ಧೆ. 21,565 ಮತಗಳಿಂದ ಗೆಲುವು. ನಾಲ್ಕನೆ ಬಾರಿಗೆ ವಿಧಾನಸಭೆಗೆ ಪ್ರವೇಶ.

O

# ವೈ.ಕೆ.ಆರ್ ಆಸ್ತಿ ವಿವರ

ಕುಣಿಗಲ್‌ನ ಮಾಜಿ ಶಾಸಕರಾದ ವೈ.ಕೆ. ರಾಮಯ್ಯನವರು ಈ ಮೊದಲೇ ತಿಳಿಸಿದ್ದಂತೆ ಅಧಿಕಾರಕ್ಕೆ ಮುಂಚೆ ಮತ್ತು ಅಧಿಕಾರಾವಧಿಯಲ್ಲಿ ಸಂಪಾದಿಸಿರುವ ಆಸ್ತಿ ವಿವರಗಳನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿರುತ್ತಾರೆ. ವಿವರ ಇಂತಿದೆ.

1979ರಲ್ಲಿ ಕುಣಿಗಲ್ ತಾಲ್ಲೂಕಿನ ಹೊಸಹಳ್ಳಿಯಲ್ಲಿ ಸ್ವಯಾರ್ಜಿತ ತೋಟದ ಭೂಮಿ. ಒಂದು ಕೊಳವೆ ಬಾವಿ. 800 ಮಾವಿನ ಮರ. 200 ತೆಂಗಿನ ಮರ, ರೇಷ್ಮೆ ತೋಟ ಮತ್ತು ಇತರೆ ಮರಗಳು. ಇದರ ಜೊತೆಗೆ ಮತ್ತೊಂದು ಕೊಳವೆ ಬಾವಿ, ರೇಷ್ಮೆ ಹುಳು ಸಾಕಾಣಿಕೆ ಮನೆ, ನೀರಿನ ಕೊಳ ಮತ್ತು ಇನ್ನು 800 ತೆಂಗಿನ ಸಸಿಗಳನ್ನು ನೆಡಲಾಗಿದೆ.

ಎಲೆಕಡಕಲುವಿನಲ್ಲಿ ಪಿತ್ರಾರ್ಜಿತ ಆಸ್ತಿ 4 ಎಕರೆ ಒಂದು ಗುಂಟೆ. ಖುಷ್ಕಿ ತರಿ ಜಮೀನು 23.5 ಗುಂಟೆ. ಹೆಂಡತಿಯ ಹೆಸರಿನಲ್ಲಿರುವ ಸ್ವಯಾರ್ಜಿತ ಆಸ್ತಿ 30 ಗುಂಟೆ ತರಿಜಮೀನು ಮಂಡ್ಯ ಜಿಲ್ಲೆ ಬೆಸಗರಹಳ್ಳೀಲಿ. ಶ್ರೀಮತಿ ಅನುಸೂಯರಾಮಯ್ಯ ಹೆಸರಿನಲ್ಲಿ ಕುಣಿಗಲ್‌ನಲ್ಲಿ 1973ರಲ್ಲಿ ಕಟ್ಟಲಾಗಿರುವ 59 x 99 ವಿಸ್ತೀರ್ಣದ ಆರ್.ಸಿ.ಸಿ ಮನೆ. 1975 ರಲ್ಲಿ ಕೊಂಡ ಅಂಬಾಸಿಡರ್ ಕಾರು 1986ರಲ್ಲಿ ಮಾರಲಾಗಿದೆ. 81ರಲ್ಲಿ ಟೂ-ಇನ್-ಒನ್ ರೇಡಿಯೋ ಕೊಳ್ಳಲಾಗಿದ್ದು, 1,43,000 ರೂ.ಗಳ ಬೆಲೆಯ ಮಾಸ್ಸಿಫೆರ್ಗೂಸನ್ ಟ್ರಾಕ್ಟರ್ ಅನ್ನು 1988ರಲ್ಲಿ ಟ್ರೈಲರ್ ಸಮೇತ ಕೊಳ್ಳಲಾಗಿದೆ.

15 ಸಹಸ್ರ ರೂ. ಬೆಲೆಯ ಒಂದು ಜೊತೆ ಎತ್ತುಗಳು, ಎತ್ತಿನಗಾಡಿ, 4 ಸಹಸ್ರ ರೂ.ನ ವ್ಯವಸಾಯ ಉಪಕರಣಗಳು. 6 ಸಹಸ್ರ ರೂ. ಬೆಲೆಯ ಮನೆ ಹಾಗೂ ಗೃಹ ಕಛೇರಿಯ ಪೀಠೋಪಕರಣ, 4 ಸಹಸ್ರ ರೂ. ಬೆಲೆಯ ಅಲ್‌ಮೇರಾ. 15 ಸಹಸ್ರ ರೂ.ಗಳ ಪುಸ್ತಕಗಳು, 1987ರಲ್ಲಿ ಕೊಂಡ ಲೂನಾ. ಶೀಥಲಯಂತ್ರ, 11 ಸಹಸ್ರ ರೂ.ನ ಟಿ.ವಿ. 1986ರಲ್ಲಿ ಕೊಂಡ 12 ಸಹಸ್ರ ರೂ.ಗಳ 3 ಹಸು. ವಿವಿಧ ಬ್ಯಾಂಕುಗಳಲ್ಲಿ 70,014.79 ರೂ. ನಗದು ಹಣ. 1969 ಮತ್ತು 1974 ರಲ್ಲಿ ಮಾಡಿಸಿರುವ 45 ಸಹಸ್ರ ರೂ.ಗಳ ಜೀವವಿಮಾ ಪಾಲಿಸಿ.

ಆಭರಣಗಳು : 40 ಗ್ರಾಂ. ಚಿನ್ನದ ಒಂದು ನೆಕ್ಲೇಸ್, 10 ಗ್ರಾಂ. ಚಿನ್ನದ ಎರಡು ಬೆರಳುಂಗುರ, 45 ಗ್ರಾಂ. ಚಿನ್ನದ ಚೈನು, 15 ಗ್ರಾಂ. ಚಿನ್ನದ ಎರಡು ಜೊತೆ ಕಿವಿ ರಿಂಗುಗಳು, 45 ಗ್ರಾಂ. ಚಿನ್ನದ ಎರಡು ಜೊತೆ ಬಳೆ, 8 ಗ್ರಾಂ. ಚಿನ್ನದ ಜೊತೆ ಜುಮುಕಿ.

1989ರ ಏಪ್ರಿಲ್‌ನಲ್ಲಿದ್ದಂತೆ ಜವಾಬ್ದಾರಿ ಹೀಗಿದೆ : 1981-82ರಲ್ಲಿ ತೆಗೆದು ಕೊಂಡಿದ್ದ

ನೀರಾವರಿ ಯಂತ್ರದ ಸಾಲ, ಭೂ ಅಭಿವೃದ್ಧಿ ಬ್ಯಾಂಕ್ ಕುಣಿಗಲ್ ಸಾಲ 5 ಸಹಸ್ರ ರೂ.ಗಳನ್ನು ತೀರಿಸಲಾಗಿದ್ದು, ಟ್ರಾಕ್ಟರ್ ಕೊಳ್ಳಲು ಭೂ ಅಭಿವೃದ್ಧಿ ಬ್ಯಾಂಕಿನಿಂದ 1,39,000 ರೂ. ಸಾಲ ಪಡೆಯಲಾಗಿದೆ.

ತಾವು ಈಗ ಘೋಷಿಸಿ ಕೊಂಡಿರುವ ಆಸ್ತಿಗಳಲ್ಲದೆ ಬೇರೆ ಏನಾದರೂ ಕಂಡು ಬಂದಲ್ಲಿ ಸರ್ಕಾರ ಸ್ವಾಧೀನ ಪಡಿಸಿಕೊಳ್ಳಬಹುದೆಂದು ತಿಳಿಸಿರುತ್ತಾರಲ್ಲದೆ ಇದೇ ರೀತಿ ಮಾಜಿ ಸಚಿವರುಗಳು, ಶಾಸಕರುಗಳು ಆಸ್ತಿಗಳನ್ನು ಘೋಷಿಸಿಕೊಳ್ಳುವರೆಂದು ನಂಬಿರುವುದಾಗಿ ತಿಳಿಸಿದ್ದಾರೆ.

○

**ಪ್ರಜಾ ಪ್ರಗತಿ** (5-5-1989)

## ಕಗ್ಗತ್ತಲೆಯಲ್ಲಿ ಮಿಣುಕು ಹುಳ

ಮಾನ್ಯರೆ,

ವೈ.ಕೆ. ರಾಮಯ್ಯನವರು ತಮ್ಮ ಆಸ್ತಿಯನ್ನು ಘೋಷಿಸಿಕೊಂಡಿರುವುದನ್ನು ಓದಿ (ಪ್ರಜಾವಾಣಿ 4-5-1989) ತುಂಬ ಸಂತಸವಾಯಿತು. ತಮ್ಮ ಹಾಗೂ ತಮ್ಮ ಕುಟುಂಬ ದಲ್ಲಿರುವ ಸದಸ್ಯರ ಹೆಸರಲ್ಲಿ ಯಾವ ಯಾವ ಆಸ್ತಿ ಇದೆ ಎಂದು ಸ್ಪಷ್ಟ ಪಡಿಸಿ, ಇದಕ್ಕಿಂತ ಹೆಚ್ಚಿಗೆ ಏನಾದರೂ ಇದ್ದಲ್ಲಿ ಸರ್ಕಾರ ವಶಪಡಿಸಿಕೊಳ್ಳಬೇಕೆಂದು ಅವರು ಆಹ್ವಾನಿಸಿದ್ದಾರೆ. ಇದು ಬಹು ಮೆಚ್ಚಬೇಕಾದ ಸವಾಲು.

ವೈ.ಕೆ. ರಾಮಯ್ಯನವರು ಸಾಕಷ್ಟು ಅಧಿಕಾರದಲ್ಲಿದ್ದವರು. ಇವರ ನಿಲುವನ್ನು ಮೌಲ್ಯಾಧಾರಿತ ರಾಜಕೀಯ ಮಾಡುತ್ತಿದ್ದೇವೆಂದು ಇನ್ನೂ ಪಿಸುಗುಡುತ್ತಿರುವ ರಾಮಕೃಷ್ಣ ಹೆಗಡೆಯವರು ಹಾಗೂ ಅವರ ಶಿಷ್ಯವೃಂದವೇಕೆ ಅನುಸರಿಸಬಾರದು? ಇರುವ ತೊಂದರೆ ಗಳೇನು? ಕಾಗದದ ಹಾಗೂ ಶಾಯಿಯ ಅಭಾವವಿದ್ದರೆ ಕರ್ನಾಟಕದ ಜನತೆ ಒದಗಿಸಿಕೊಡಲು ಸಿದ್ಧವಾಗಿದೆ.

○

**– ಬೆಸಗರಹಳ್ಳಿ ರಾಮಣ್ಣ**
**(ಪ್ರಜಾವಾಣಿ 11-5-1989)**

# ಆದರ್ಶ ನಾಯಕತ್ವ

ಕರ್ನಾಟಕದಲ್ಲಿ ಎಲ್ಲ ಕಡೆ ಕಗ್ಗತ್ತಲೆ ಕವಿದು ಶೂನ್ಯತೆ ತನ್ನ ರಾಜ್ಯಭಾರವನ್ನು ಮಾಡುತ್ತಿರುವ ಅತ್ಯಂತ ನಿರಾಶದಾಯಕ ಪರಿಸ್ಥಿತಿಯಲ್ಲೊಂದು ಆಶಾದಾಯಕವಾದ ಘಟನೆ ನಡೆದಿದೆ. ಅದೆಂದರೆ, ಮಾಜಿ ಮಂತ್ರಿ ವೈ. ಕೆ. ರಾಮಯ್ಯನವರು ತಮ್ಮ ಹಾಗೂ ತಮ್ಮ ಹೆಂಡತಿಯ ಹೆಸರಿನಲ್ಲಿರುವ ಆಸ್ತಿಯ ವಿವರಗಳನ್ನು ಸಂಪೂರ್ಣವಾಗಿ ನೀಡಿದ್ದಾರೆ. ಇದಕ್ಕೂ ಮೀರಿ ಆಸ್ತಿಪಾಸ್ತಿ ಇರುವುದು ಕಂಡು ಬಂದಲ್ಲಿ. ಸರ್ಕಾರ ಅದನ್ನು ವಶಪಡಿಸಿಕೊಳ್ಳಬಹುದೆಂದು ಘೋಷಿಸಿದ್ದಾರೆ.

ಸ್ವಾತಂತ್ರ್ಯ ಬಂದ ಮೇಲೂ ಪ್ರತಿಷ್ಠಿತ ಮನೆತನದವರ ಗುತ್ತಿಗೆಯಾಗಿ ರಾಜಕೀಯ ಅಧಿಕಾರ ಉಳಿದುಕೊಂಡು ಬಂದಿದೆ. ಅಲ್ಲೊಬ್ಬರು - ಇಲ್ಲೊಬ್ಬರು ಆಸ್ತಿ ಬಂದರೂ ಹಣ-ಆಸ್ತಿ, ಗತ್ತುಗ್ಗಳೆಂಬ ರೋಗಗಳಿಗೆ ಬಲಿಯಾಗಿ ನಮ್ಮನ್ನು ಬಿಟ್ಟರಿಲ್ಲ ಎಂದು, ಬೆಳೆಸಿ ಕೊಂಡಿರುತ್ತಾರೆ. ಇವರಿಂದ ಕೊಂಚ ಬದಲಾವಣೆಯನ್ನು ನಿರೀಕ್ಷಿಸಬಹುದೆಂದು ಆಸೆಯಿಟ್ಟು ಕೊಂಡಿದ್ದ ಬಡ ಯುವಜನಾಂಗವನ್ನು ದಿಗ್ಭ್ರಮೆಗೊಳಿಸುವಷ್ಟು ಸರ್ವಾಧಿಕಾರಿ ಗಳಾಗಿ ಮೆರೆದು ನಂತರ ಇತಿಹಾಸದ ಪುಟಗಳಲ್ಲಿ ಭೂಗತರಾಗಿ ಹೋಗಿದ್ದಾರೆ.

ಕೆಲವರಿಗಂತೂ ತತ್ವನಿಷ್ಠೆ ಎಂಬುದೇ ಇಲ್ಲ. ಇವರು ತುಳಿದದ್ದೆ ದಾರಿ. ನಡೆದದ್ದೆ ತತ್ವ. ಬಾಯಿಂದ ಬಂದ ಮಾತುಗಳೆಲ್ಲ ಮಾಣಿಕ್ಯ. ಇವನ್ನೆ ವೇದವಾಕ್ಯವೆಂದು ಬೆರಗಾಗಿ ಹಿಂಬಾಲಿಸುವ ಜನ- ಇಂಥ ಅನಿಷ್ಟ ವಾತಾವರಣದಲ್ಲಿ ವೈ. ಕೆ. ರಾಮಯ್ಯನವರ ಈ ದಿಟ್ಟತನ ಪ್ರಶಂಸಾರ್ಹ.

ಆರು ವರ್ಷಗಳಲ್ಲಿ ರಾಮಯ್ಯನವರು ತಮ್ಮ ಕುಣಿಗಲ್ ಕ್ಷೇತ್ರದಲ್ಲಿ ಮಾಡಿರುವ ಸಾರ್ವಜನಿಕ ಕಾರ್ಯಗಳನ್ನು ಹಿಂದೆ ಮೂವತ್ತೈದು ವರ್ಷಗಳ ಕಾಲದಲ್ಲಿ ಯಾರು ಮಾಡಿರಲಿಲ್ಲ ಗಾಂಧೀಜಿಯವರ ತತ್ವದ ಮೇಲೆ ಪೂರ್ಣ ಭರವಸೆ ಹೊಂದಿರುವ ಇವರು, ಹಳ್ಳಿಯ ಜನರನ್ನು ಕಟ್ಟಿಕೊಂಡು ನೂರಾರು ಮೈಲಿ ಪಾದಯಾತ್ರೆ ಮಾಡಿ ಸಾವಿರಾರು ಗಿಡಗಳನ್ನು ನೆಟ್ಟರು, ಬೆಳೆಸಿದರು.

ಶಾಸನಸಭಾ ಸದಸ್ಯನೆಂದರೆ ಬೆಂಗಳೂರಿನಲ್ಲಿ ಕೂತು ಶೋಕಿ ಮಾಡುವುದು, ಮಂತ್ರಿ ಗಿರಿ ಎಂದರೆ, ಮಜಾ ಮಾಡುವುದು ಎಂಬುದನ್ನು ಸುಳ್ಳಾಗಿಸಿ ಜನಸಂಪರ್ಕ ಇಟ್ಟುಕೊಂಡು ಜನತೆಗೆ ಒಂದು ಹೊಸ ರಾಜಕೀಯ ಬದುಕಿನ ಪರಿಚಯ ಮಾಡಿಸಿದರು.

**ಮೌಲ್ಯಾಧಾರಿತ ರಾಜಕೀಯ ಧುರೀಣನ ನೆರಳಡಿಯಲ್ಲಿ ಇದ್ದವರೆಲ್ಲ ಮಂತ್ರಿಗಳಾಗಲು ರಂಪ ಮಾಡಿದ್ದಾಗ, ರಾಮಯ್ಯ, ಮುಖ್ಯಮಂತ್ರಿಯವರಿಗೆ ಪತ್ರ ಬರೆದು ನನಗೆ ಮಂತ್ರಿಗಿರಿ ಬೇಡ**

ಎಂದರು. ಕಗ್ಗತ್ತಲೆಯಲ್ಲಿ ಮಿಣಮಿಣ ಮಿಂಚುವ ಇಂಥ ಮಿಣುಕುಹುಳುಗಳು ಭಾರತದ ಇಂದಿನ ಪರಿಸ್ಥಿತಿಯಲ್ಲಿ, ಅದರಲ್ಲೂ ಕರ್ನಾಟಕ್ಕೆ ತುಂಬು ಅಗತ್ಯ. ಕರ್ನಾಟಕದ ಯುವಬಳಗ ಇಂಥ ನಾಯಕತ್ವವನ್ನು ಬೆಳೆಸಿ ಉಳಿಸಿಕೊಳ್ಳಲು ಯತ್ನಿಸಬೇಕು. ಇದು ಇತಿಹಾಸದ ಅಗತ್ಯ ○

- ರಾಜಲಕ್ಷ್ಮಿ ನಂದಿಹಳ್ಳಿ

(ತುಮಕೂರು ವಾರ್ತೆ : 31-5-1989)

## ಎನ್. ತಮ್ಮಣ್ಣ ಸಂಸ್ಮರಣಾ ಸಮಿತಿ, ಮಂಡ್ಯ

### ಎನ್. ತಮ್ಮಣ್ಣ ಜನಪರ ರಾಜಕಾರಣಿ ಪ್ರಶಸ್ತಿ - 2000

ಶ್ರೀ ವೈ.ಕೆ.ರಾಮಯ್ಯ ಅವರು ಜನಪರ ರಾಜಕಾರಣಿಯಾಗಿ ಸಲ್ಲಿಸಿರುವ ಸೇವೆಯನ್ನು ಪರಿಗಣಿಸಿ 2000ನೇ ಸಾಲಿನ ಎನ್. ತಮ್ಮಣ್ಣ ಜನಪರ ರಾಜಕಾರಣಿ ಪ್ರಶಸ್ತಿಯನ್ನಿತ್ತು ಗೌರವಿಸಲಾಗಿದೆ.

ಮಂಡ್ಯ
27-2-2000

ಎನ್. ತಮ್ಮಣ್ಣಗೌಡ ಸಂಸ್ಮರಣಾ ಸಮಿತಿ
ಮಂಡ್ಯ

# ಅಭಿನಂದನಾ ಪತ್ರ

**"ಜನಪರ ರಾಜಕಾರಣಿ"** ಪ್ರಶಸ್ತಿ ಪಡೆದ ಜನನಾಯಕ ಶ್ರೀ ವೈ.ಕೆ. ರಾಮಯ್ಯ ಅವರಿಗೆ, ಮೈಸೂರಿನಲ್ಲಿ ಜರುಗಿದ ಅಭಿನಂದನಾ ಸಮಾರಂಭದಂದು (27-5-2001)ರಂದು ಮಹಾಜನತೆಯ ಸಮ್ಮುಖದಲ್ಲಿ ನೀಡಿದ ಅಭಿನಂದನಾ ಪತ್ರ

**"ಜನತಾ ಜನಾರ್ಧನ"** ಎಂಬ ಅಭಿದಾನಕ್ಕೆ ಪಾತ್ರವಾದ **"ಜನಪರ"** ಪ್ರಶಸ್ತಿಗೆ ಪಾತ್ರರಾದ ಅಭಿಜಾತ ರಾಜಕಾರಣಿಗಳಾದ ಸನ್ಮಾನ್ಯ ಶ್ರೀ ವೈ.ಕೆ. ರಾಮಯ್ಯನವರೇ,

ನೀವು ನಮಗೆ ಮಾದರಿ, ನೀವು ಪ್ರಜಾಭಿಪ್ರಾಯಗಳ ರೂವಾರಿ; ನಿಮ್ಮದು ಮಣ್ಣಿನ ಮಕ್ಕಳಪರ ನಿರಂತರ ನಡೆಸಿದ ಹೋರಾಟದ ದಾರಿ! ನಿಮ್ಮಂಥ ಅತ್ಯುನ್ನತ ಮೌಲ್ಯಗಳ ಪ್ರತಿಪಾದಕರು ಹಗಲಿರುಳು ಜನತೆಯ ಸೇವೆಗಾಗಿ ಸಕ್ರಿಯವಾಗಿರುವುದರಿಂದ ಜೀವಂತವಾಗಿದೆ. ನಮ್ಮ ನಲ್ಮೆಯ ತುಮಕೂರು ಜಿಲ್ಲೆ ಹಸಿರಾಗಿದೆ. ಕುಣಿಗಲ್ಲು ತಾಲ್ಲೂಕು ಆರೋಗ್ಯ ಕರವಾಗಿದೆ. ನಮ್ಮ ಪ್ರೀತಿಯ ಹುಲಿಯೂರುದುರ್ಗದ ರಾಜಕಾರಣ ನಿಮ್ಮಂಥ ಇತ್ಯಾತ್ಮಕ ವ್ಯಕ್ತಿಗಳ ಇರುವಿಕೆಯಿಂದ ಎಲೆಕಡಕಲು ಗ್ರಾಮಕ್ಕೆ ಒಂದು ಚಿರಂತನ ಹೆಸರು. ಸದಾ ಹೀಗೇ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲಿ ಆ ದೇವರು.

ನಿರಂತರ ಅಧ್ಯಯನಶೀಲರಾದ ನಮ್ಮ ಅಕ್ಕರೆಯ ವೈ.ಕೆ.ಆರ್ ಅವರೇ, ನಿಮ್ಮ ಶ್ರಮ ಅಪಾರ; ಸಾಧನೆ ಉತ್ತುಂಗ; ನೀವು ಜನತೆಯೊಡನೆ ಸ್ಪಂದಿಸಿದ್ದು ಇಡೀ ರಾಜ್ಯಕ್ಕೆ ಗೊತ್ತು. ಮುಕ್ಕಾಗದ ಮುಕ್ತಕೀರ್ತಿಯ ಧವಳ ರಾಜಕೀಯಜೀವನ ನಿಮ್ಮದು.

ಬಡವರ ಬಂಧುವಾದ ನಮ್ಮ ನಲ್ಮೆಯ ವೈ.ಕೆ.ಆರ್ ಅವರೇ, ಅಸಹಾಯಕರಿಗೆ ನೀವು ನಿತ್ಯ ವರದ ಹಸ್ತ ಚಾಚಿದ ಅನನ್ಯ ಚೈತನ್ಯ ನಿಮ್ಮದು. ಅಬಲೆಯರಿಗೆ ಸಬಲವಾದ ನ್ಯಾಯ ಒದಗಿಸಿದ ಅಪೂರ್ವ ಶ್ರಮ ನಿಮ್ಮದು.

ಈ ಮಣ್ಣಿಗೆ ಮಹತ್ವವಿದೆ. ಮಣ್ಣಿನ ಮಕ್ಕಳ ಜೀವನ ಎಂದೂ ಸುಲಭವಾದದ್ದಲ್ಲ. ಶ್ರಮಸಾಧ್ಯವಾದದ್ದು. ಬೆವರಿನ ಬೆಲೆ ಕಾಣಲಾಗದೆ ಕಂಗಾಲಾದ ರೈತಾಪಿಗಳಿಗೆ ನೀವು ಒಂದು ಹಿರಿಯ ರಾಜಕೀಯ ಆಸರೆ.

ಹೊಲದಲ್ಲಿ ನೇರವಾಗಿ ದುಡಿದ ಕೃಷಿಕರು ನೀವು. ಈ ನೆಲದ ಸೈಜ ಮಗನಾಗಿ ಯಾವುದೇ ಬೂಟಾಟಿಕೆಗೆ ಬಲಿಯಾಗದೆ ಆದರ್ಶ ಹಾದಿಯಲ್ಲಿ ಕಾಯಕದ ವ್ಯಕ್ತಿಯಾಗಿ ಸಾಗಿದ

ನೀವು ಗಳಿಸಿದ ಅಪಾರ ಜನ ಸಂಪರ್ಕ; ಜನರ ಅಪೂರ್ವ ಪ್ರೀತಿ; ಜನಮನದ ಹೃದಯ ತುಂಬಿದ ಅಂತಃಕರಣದ ಅಕ್ಕರೆಯ ಮೆಚ್ಚುಗೆ. ನಿಮ್ಮ ಸಂಘಟನಾ ಶಕ್ತಿಗೆ ಕನ್ನಡ ಜನರ ಉಕ್ಕಿನ ಶಕ್ತಿ ಇದೆ. ವಜ್ರಬಾಹುಗಳ ಸತ್ವ ಇದೆ; ಮಾಣಿಕ್ಯ ಉಜ್ವಲ ಪ್ರಕಾಶದ ಕೀರ್ತಿ ಇದೆ.

ನಿಮ್ಮಿಂದ ಬಡ ಬೆಳೆಗಾರರಿಗೆ ಬದುಕು ಸಹನೀಯವಾಗಿದೆ; ನಿಮ್ಮ ಶ್ರಮದಿಂದ ದೀನ-ದಲಿತ, ಶ್ರಮಿಕರಿಗೆ ಬೋನಸ್ ದೊರೆತು ಚೈತನ್ಯದ ದಾತಾರ ನೀವಾಗಿರುವಿರಿ. ನಿಮ್ಮಿಂದ ಹೇಮಾವತಿ ಹೋರಾಟಕ್ಕೆ ಒಂದು ಅರ್ಥಪೂರ್ಣ ಆಯಾಮ ಪ್ರಾಪ್ತಿ. ನಿಮ್ಮ ಕಲ್ಪನೆ ಯಾವತ್ತೂ ವಿಶಾಲ ವ್ಯಾಪ್ತಿ. ತುಮಕೂರು ಜಿಲ್ಲೆಗೆ ಹರಿಸಿದರಿ ನೀವು ಭಾವ ಭಾಗೀರಥಿ.

ಪ್ರಿಯ ವೈ.ಕೆ.ಆರ್ ಅವರೇ, ನಿಮ್ಮಿಂದ ಆದ ಸಾಹಸ ಕಾರ್ಯಗಳು ಒಂದೇ, ಎರಡೇ! ನೀವು ಎಂದೆಂದೂ ಜನಪರ; ನಿಮ್ಮ ದುಡಿಮೆ ಜನಹಿತ; ನಿಮ್ಮ ರಾಜಕೀಯ ಧವಳಕೀರ್ತಿ ಶಾಶ್ವತ.

ಎಲ್ಲಿ ವೈ.ಕೆ.ಆರ್ ಅಲ್ಲಿ ಕ್ರಿಯಾಶಿಲತೆ, ಎಲ್ಲೆಲ್ಲಿ ವೈ.ಕೆ.ಆರ್ ಚಿಂತನೆ - ನವಯುಗದ, ನವಜಗದ, ನವ ಮನ್ವಂತರದ ತೆರೆದ ನವನವೀನ ಹರಿಕಾರರೇ, ರೇಷ್ಮೆಯ ಅರಸರೇ, ಸಾಲುಮರ ನೆಡಿಸಿದ ಈ ವಸುಮತಿಯ ಪ್ರೀತಿಯ ಪುತ್ರರೇ, ನಿಮಗಿದೋ ನಮ್ಮ ನಮನ. ಈ ಘಳಿಗೆಯಿಂದ ನಿಮಗೆ "**ಜನಪರ ರಾಜಕಾರಣಿ**" ಯೆಂಬ ಹೃದಯವಂತ ಜನಕೊಟ್ಟ ... ನೂತನ ಬಿರುದಿನ ಅಭಿದಾನ. ನಿಮ್ಮಿಂದಾಗಲಿ ಜನತೆಯ ಕಲ್ಯಾಣ. ನಿಮ್ಮ ನಿಷ್ಠೆ, ತ್ಯಾಗ, ಶ್ರಮ ಎಲ್ಲದರಿಂದ ಕರ್ನಾಟಕದ ಐದು ಕೋಟಿ ಜನಮನಕ್ಕೆ ದೊರೆಯಲಿ ನಿಮ್ಮ ಶುಭ ಚಿಂತನದ ಸೇವಾ ಪ್ರತಿಫಲನ.

**- ಶ್ರೀ ವೈ.ಕೆ. ರಾಮಯ್ಯ ಅಭಿನಂದನಾ ಸಮಿತಿ**

**ಮೈಸೂರು**

## ಆಯ್ಕೆಯಾದರೆ ನನ್ನ ಆದ್ಯತೆಗಳು : ವೈ. ಕೆ. ಆರ್

* ತುಮಕೂರು ಜಿಲ್ಲೆಯ ಲಕ್ಷಾಂತರ ಎಕರೆ ಜಮೀನಿಗೆ ಹರಿದು ಬರಬೇಕಾಗಿರುವ ಹೇಮಾವತಿ ನೀರನ್ನು ಪಡೆದುಕೊಳ್ಳಲು ಅಧಿಕಾರವೆಂಬ ಆಯುಧದ ನೆರವಿನಿಂದ ಹೋರಾಟವನ್ನು ತೀವ್ರಗೊಳಿಸಿ, ಯೋಜನೆಯನ್ನು ಪೂರ್ಣ ಗೊಳಿಸಲು ಶ್ರಮಿಸುವುದು.

* ತಿಪಟೂರು ಪಟ್ಟಣಕ್ಕೆ ಹೇಮಾವತಿ ನೀರು ಬಂದಿದ್ದರೂ ಕುಡಿಯುವ ನೀರು ಮಾತ್ರ ಜನತೆಗೆ ತಲುಪಿಲ್ಲ. ಇದಕ್ಕಾಗಿ ರೂಪಿಸಿರುವ 7 ಕೋಟಿ ರೂ.ಗಳ ಯೋಜನೆಯನ್ನು ಕಾರ್ಯಗತಗೊಳಿಸುವುದು.

* ತುಮಕೂರಿನ 25 ಕೋಟಿ ರೂ.ಗಳ ಕುಡಿಯುವ ನೀರಿನ ಯೋಜನೆ ದಿಕ್ಕು ದಿಸೆಯಿಲ್ಲದೆ ನೆನೆಗುದಿಗೆ ಬಿದ್ದಿದೆ. ಇದನ್ನು ಶೀಘ್ರ ಕಾರ್ಯಗತಗೊಳಿಸಿ ನೀರು ಒದಗಿಸಲು ಪ್ರಯತ್ನಿಸುವುದು.

* ಹೇಮಾವತಿ ಯೋಜನೆಯ ವ್ಯಾಪ್ತಿಯಲ್ಲಿ ಬರುವ ಉಳಿದ ಎಲ್ಲಾ ಪಟ್ಟಣಗಳಿಗೂ ಕುಡಿಯುವ ನೀರು ಒದಗಿಸುವ ಯೋಜನೆಯನ್ನು ರೂಪಿಸಿ ಕಾರ್ಯಗತಗೊಳಿಸಲು ಪ್ರಯತ್ನಿಸುವುದು.

* ಚಿಕ್ಕನಾಯಕನಹಳ್ಳಿ ಪಟ್ಟಣಕ್ಕೆ ನೀರು ಹರಿಯುವುದಿಲ್ಲವಾದ್ದರಿಂದ, ಏತ ನೀರಾವರಿ ಮೂಲಕ ಕುಡಿಯುವ ನೀರನ್ನು ಒದಗಿಸಲು ಯೋಜನೆಯನ್ನು ರೂಪಿಸಿ ಕಾರ್ಯಗತಗೊಳಿಸಲು ಪ್ರಯತ್ನಿಸುವುದು.

* ಲಭ್ಯವಿರುವ ವಿದ್ಯುತ್ ಶಕ್ತಿಯ ವ್ಯವಸ್ಥಿತ ಸರಬರಾಜಿಗೆ ಪ್ರಾಮಾಣಿಕ ಪ್ರಯತ್ನ ಮಾಡುವುದು.

* ರೇಷ್ಮೆ ಬೆಳೆಗಾರರಿಗೆ ಬೆಳೆ ಹಾಳಾಗದಂತೆ, ಬೆಲೆ ಕಡಿಮೆಯಾಗದಂತೆ ನೋಡಿಕೊಳ್ಳುವುದು.

* ಬೆಳೆದ ಕಬ್ಬಿಗೆ ಬೇಡಿಕೆಯಿಲ್ಲದೆ ಈಗಾಗಲೇ ಅತೀವ ಬವಣೆಯಲ್ಲಿ ರೈತರು ಬಳಲುತ್ತಿದ್ದಾರೆ. ಹೇಮಾವತಿ ನೀರು ಹರಿದು ಬರುವ ಸಮಯಕ್ಕೆ ಈ ಪ್ರದೇಶದಲ್ಲಿ ಬೆಳೆಯುವ ಕಬ್ಬಿನ ಬೇಡಿಕೆಯನ್ನು ಪೂರೈಸಲು, ಈ ಪ್ರದೇಶಕ್ಕೆ ಅಗತ್ಯವೆನಿಸಿರುವ ಸಕ್ಕರೆ ಕಾರ್ಖಾನೆ ಯೊಂದನ್ನು ಸ್ಥಾಪಿಸಲು ಪ್ರಯತ್ನಿಸುವುದು.

* ಇಡೀ ಜಿಲ್ಲೆಯಲ್ಲಿ ನಿಷ್ಕ್ರಿಯಗೊಂಡಿರುವ ಆಡಳಿತವನ್ನು, ಮಂದಗತಿಯಲ್ಲಿರುವ ಜನಪರ ಅಭಿವೃದ್ಧಿ ಕಾರ್ಯಗಳನ್ನು ಚುರುಕುಗೊಳಿಸಲು ಗಮನಹರಿಸುವುದು.

* ಜಿಲ್ಲೆಯಲ್ಲಿ ಆಗಾಗ್ಗೆ ಉಂಟಾಗುತ್ತಿರುವ ಕೋಮುಗಲಭೆಗಳು ಮರುಕಳಿಸದಂತೆ ಕಟ್ಟೆಚ್ಚರ ವಹಿಸಿ ಕೋಮುಸೌಹಾರ್ದತೆಗಾಗಿ ಶ್ರಮಿಸುವುದು.

* ರಾಜ್ಯದ ಹಿತ ಕಾಪಾಡುವಲ್ಲಿ ಸಂಸತ್ತಿನಲ್ಲಿ ಎದ್ದು ಕಾಣುತ್ತಿರುವ ಕೊರತೆಯನ್ನು ತುಂಬಲು ಪ್ರಾಮಾಣಿಕ ಪ್ರಯತ್ನ ಮಾಡುವುದು.

* ಕ್ರಿಯಾಶೀಲರಾದ ಸರಕಾರಿ ಅಧಿಕಾರಿಗಳಿಗೆ ಭದ್ರತೆ ಹಾಗೂ ಗೌರವ ದೊರೆಯುವಂತೆ ನೋಡಿಕೊಳ್ಳುವುದು. ಸೋಗಲಾಡಿ ಪ್ರವೃತ್ತಿಯುಳ್ಳವರನ್ನು ಅವರ ಕರ್ತವ್ಯ ಹಾಗು ಹೊಣೆಗಾರಿಕೆ ಬಗ್ಗೆ ಎಚ್ಚರಿಸಬೇಕಾದ ಅವಶ್ಯಕತೆಯನ್ನು ಅರಿತು ಕಾರ್ಯಪ್ರವೃತ್ತರಾಗುವುದು.

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ತಾರೀಖು : 28-4-1996
ತುಮಕೂರು

## ಕುಣಿಗಲ್ ಕ್ಷೇತ್ರದ ಮಾಜಿ ಶಾಸಕರು ಹಾಗು ಮಾಜಿ ಸಚಿವರಾದ ವೈ.ಕೆ. ರಾಮಯ್ಯನವರ ಕಾಲ್ನಡಿಗೆ ಪ್ರವಾಸ

ಮಾನ್ಯರೆ,

ನಮ್ಮನ್ನು ಕಾಡಿಸುತ್ತಿರುವ ಭೀಕರ ಬರಗಾಲ, ಅರಣ್ಯ ನಾಶದಿಂದ ಮಳೆ ಆಗದಿರುವುದು ಇದರ ಪರಿಣಾಮವಾಗಿ ಜಲ ಸಂಪನ್ಮೂಲದ ಕೊರತೆ, ವಾಯು ಮಾಲಿನ್ಯ, ಇದರ ತಡೆಗೆ ಮರ ಬೆಳೆಸುವುದೊಂದೇ ದಾರಿ. ಮರದಿಂದ ಮಳೆ, ಮಳೆಯಿಂದ ಬೆಳೆ, ಬೆಳೆಯಿಂದ ಬಾಳು. ಈ ಸತ್ಯದೆಡೆಗೆ ಗಮನ ನೀಡಬೇಕಾಗಿದೆ. ಅಲ್ಲದೆ ಸ್ವಾತಂತ್ರ್ಯ ಬಂದ ನಲವತ್ತೊಂದು ವರ್ಷ ಗಳಾದರೂ, ತುತ್ತು ಅನ್ನ, ಬಟ್ಟೆ, ವಸತಿಗೆ ಕಾಡುತ್ತಿರುವ ಬಡತನಕ್ಕೆ ಮಿತಿಮೀರಿದ ಸಂತಾನ ಕಾರಣ ವಾಗಿದೆ. ಈ ಸಮಾಜದಲ್ಲಿ ಶಿಸ್ತು , ವೈಜ್ಞಾನಿಕ ಮನೋಭಾವ, ಹಕ್ಕು ಮತ್ತು ಕರ್ತವ್ಯ ಪ್ರಜ್ಞೆ ಇಲ್ಲದಿರುವುದಕ್ಕೆ ಅನಕ್ಷರತೆ ಬಹುಮಟ್ಟಿಗೆ ಕಾರಣವೆಂದು ನನ್ನ ನಂಬಿಕೆ. ಇದರ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಪಾದಯಾತ್ರೆ ಕಾರ್ಯಕ್ರಮ ಹಾಕಿಕೊಂಡಿದ್ದು ತಮಗೀಗಾಗಲೆ ತಿಳಿದಿರು ವಂತೆ, ಕಳೆದ 1986-87ನೇ ಸಾಲಿನಲ್ಲಿ ತುಮಕೂರಿನಿಂದ ಬೆಂಗಳೂರು ಜಿಲ್ಲೆಯ ಗಡಿಯವರೆಗೆ ಸುಮಾರು 80 ಕಿ.ಮೀ. ನಷ್ಟು, 1987-88ನೇ ಸಾಲಿನಲ್ಲಿ ಕುಣಿಗಲ್‌ನಿಂದ ಮದ್ದೂರಿನವರೆಗೆ ಸುಮಾರು 75 ಕಿ.ಮೀ. ದೂರದಷ್ಟು ಕಾಲ್ನಡಿಗೆ ಪ್ರವಾಸ ಮಾಡಿ ಜನರಲ್ಲಿ ಬೆರೆತು ಈ ಕಾರ್ಯಕ್ರಮ ಮಾಡಿರುತ್ತೇನೆ. ಈ ವರ್ಷವೂ ಕುಣಿಗಲ್‌ನಿಂದ ಅಮೃತೂರು ಮಾರ್ಗವಾಗಿ ಹುಲಿಯೂರು ದುರ್ಗಕ್ಕೆ ಮೇಲ್ಕಂಡ ಕಾರ್ಯಕ್ರಮವನ್ನು ದಿನಾಂಕ 1-9-1988 ಮತ್ತು ದಿನಾಂಕ 2-9-1988 ರಂದು ಹಾಕಿ ಕೊಂಡಿರುತ್ತೆ. ಈ ಕಾರ್ಯಕ್ರಮವನ್ನು ಆಶೀರ್ವದಿಸಲು ಆದಿಚುಂಚನಗಿರಿ ಮಠಾಧ್ಯಕ್ಷರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು, ಲೋಕೋಪ ಯೋಗಿ ಮತ್ತು ನೀರಾವರಿ ಸಚಿವರಾದ ಸನ್ಮಾನ್ಯ ಶ್ರೀ ಎಚ್. ಡಿ. ದೇವೇಗೌಡರು ಮತ್ತು ಸಮಾಜಕಲ್ಯಾಣ ಸಚಿವರಾದ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು, ಕರ್ನಾಟಕ ರಾಜ್ಯ ಕೃಷಿ ಮತ್ತು ಅರಣ್ಯ ಖಾತೆ ಸಚಿವರಾದ ಸನ್ಮಾನ್ಯ ಶ್ರೀ ಬಿ. ರಾಚಯ್ಯನವರು ಮತ್ತು ಹುಲಿಯೂರುದುರ್ಗ ಕ್ಷೇತ್ರದ ಶಾಸಕರಾದ ಶ್ರೀ ಡಿ. ನಾಗರಾಜಯ್ಯನವರು ಭಾಗವಹಿಸುವರು.

1-9-1988 ಬೆಳಿಗ್ಗೆ 10-00 ಶ್ರೀ ಆಂಜನೇಯಸ್ವಾಮಿ ದೇವಸ್ಥಾನದಿಂದ ಪಾದಯಾತ್ರೆ ಪ್ರಾರಂಭ. ಹಳೇಪೇಟೆ ಬೀದಿಯಲ್ಲಿ ಸರ್ಕಾರಿ ಪೇಟೆ, ಹಿರಿಯ ಪ್ರಾಥಮಿಕ ಶಾಲಾ ನಿವೇಶನದ ದಾನ ಸ್ವೀಕಾರ ಮತ್ತು ಶಾಲಾ ಕಟ್ಟಡದ ಶಂಕುಸ್ಥಾಪನೆ. ಶಿಕ್ಷಕರಭವನದ ಆವರಣದಲ್ಲಿ ಸಸಿ ನೆಡುವ ಕಾರ್ಯಕ್ರಮದ ಉದ್ಘಾಟನೆ, ಕೈಗಾರಿಕಾ ಇಲಾಖೆಯಿಂದ ಉಚಿತ ಇಸ್ತ್ರಿಪೆಟ್ಟಿಗೆ ವಿತರಣೆ ಸಮಾರಂಭ, ಕುಟುಂಬ ಕಲ್ಯಾಣ ಕಾರ್ಯಕ್ರಮದ ಶಸ್ತ್ರ ಚಿಕಿತ್ಸಾ ಶಿಬಿರದ ಉದ್ಘಾಟನೆ, ಸಾರ್ವಜನಿಕ ವಿದ್ಯಾರ್ಥಿನಿಯರ ಹಾಸ್ಟಲಿನ ಕಟ್ಟಡದ ಉದ್ಘಾಟನೆ.

**ಎಲ್ಲರೂ ಬನ್ನಿ. ಒಂದು ಸಸಿ ನೆಡಿ**

ಇತಿ ತಮ್ಮವ

**ವೈ.ಕೆ. ರಾಮಯ್ಯ, ಕುಣಿಗಲ್**

## ಹೇಮಾವತಿ ನೀರಿಗಾಗಿ ವೈ.ಕೆ. ರಾಮಯ್ಯನವರ "ಉಪವಾಸ ಸತ್ಯಾಗ್ರಹ"

**ತಾ|| 26-3-1995 ಸ್ಥಳ : ವಿಧಾನ ಸೌಧದ ಎದುರು**

ತಮ್ಮ ರಾಜಕೀಯ ಜೀವನದುದ್ದಕ್ಕೂ ನೀರಾವರಿಯ ಬಗ್ಗೆ ತಾವು ತಾಳಿದ ನಿಲುವು ಹಾಗೂ ಮಾಡಿದ ಪ್ರತಿಪಾದನೆಗಳನ್ನು ಮರೆತು, ರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಹೆಚ್.ಡಿ. ದೇವೇಗೌಡರು ತುಮಕೂರು ಜಿಲ್ಲೆಯಲ್ಲಿ ಅನುಷ್ಠಾನಗೊಳ್ಳುತ್ತಿದ್ದ ಶೇಕಡಾ 80 ಭಾಗ ಹೇಮಾವತಿ ನಾಲೆಯ ಕೆಲಸವನ್ನು ನಿಲ್ಲಿಸಿದ್ದಾರೆ. ಆಗಿರುವ ಕೆಲಸಗಳಿಗೆ ಗುತ್ತಿಗೆದಾರರಿಗೆ ಕೊಡಬೇಕಾಗಿರುವ ಸುಮಾರು 25 ಕೋಟಿ ರೂ. ಹಣ ಬಿಡುಗಡೆ ಮಾಡಿರುವುದಿಲ್ಲ. ಅವರೂ ಸೇರಿದಂತೆ ಅನೇಕ ಜನರ ಶ್ರಮದಿಂದಾಗಿ ಶಿಂಷಾ ನದಿಪಾತ್ರದಲ್ಲಿರುವ ಗಂಗನಘಟ್ಟ, ಮಲ್ಲಾಘಟ್ಟ, ನೊಣವಿನ ಕೆರೆ, ತುರುವೇಕೆರೆ ಹಾಗೂ ಮಾರ್ಕೋನಹಳ್ಳಿಯ ಜಲಾಶಯಕ್ಕೆ ಹರಿದು ಬರುತ್ತಿದ್ದ ನೀರನ್ನು ಅಣೆಕಟ್ಟೆಯಲ್ಲಿ ನೀರು ಇದ್ದಾಗ್ಯೂ ನಿಲ್ಲಿಸಲಾಗಿದೆ.

ಮಳೆ ಇಲ್ಲದೆ ಒಣಗಿದ ಭೂಮಿ, ಉರಿಯುವ ಬಿಸಿಲು, ವಿದ್ಯುಚ್ಛಕ್ತಿಯ ಅಭಾವದಿಂದ ಒಣಗಿನಿಂತಿರುವ ಬೆಳೆಗಳು ಹಾಗೂ ಕುಡಿಯುವ ನೀರಿಗಾಗಿ ಬವಣೆ, ಇದು ಮಣ್ಣಿನ ಮಕ್ಕಳಿಗೆ ಒದಗಿರುವ ಪರಿಸ್ಥಿತಿ. ಹೇಮಾವತಿಯಲ್ಲಿ ತುಂಬಿರುವ ನೀರನ್ನು ಶಿಂಷಾ ನದಿ ಪಾತ್ರಕ್ಕೆ ಬಿಟ್ಟರೆ ಸ್ವಲ್ಪವಾದರೂ ಪರಿಸ್ಥಿತಿ ಸುಧಾರಿಸುತ್ತದೆ.

ಈ ವಿಷಯಗಳಲ್ಲಿ ಕ್ರಮ ತೆಗೆದುಕೊಂಡು ತುಮಕೂರು ಜಿಲ್ಲೆಯ ಜನರಿಗೆ ಪರಿಹಾರ ಒದಗಿಸಲು ಬೇಡಿಕೊಂಡು ನಾನು ಪತ್ರ ಬರೆದರೆ, ಪರಿಹಾರ ಕೊಡುವುದು ಬೇಡ. "ಮಣ್ಣಿನ ಮಕ್ಕಳ ಸಮಸ್ಯೆ"ಗೆ ಪರಿಹಾರ ಕೋರಿ ಬರೆದ ಪತ್ರಕ್ಕೆ "ಮಣ್ಣಿನ ಮಗ"ನೆಂದು ಹೇಳಿಕೊಂಡು ಅಧಿಕಾರಕ್ಕೆ ಬಂದ ಮಾನ್ಯ ಮುಖ್ಯಮಂತ್ರಿಗಳು ಉತ್ತರ ಬರೆಯುವ ಸೌಜನ್ಯವನ್ನು ತೋರಲಿಲ್ಲ.

1. **ತುಮಕೂರು ಹಾಗೂ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕುಗಳಿಗೆ ನೀರು ಒದಗಿಸಲು ಮಾಡುತ್ತಿದ್ದ ಕೆಲಸಗಳನ್ನು ನಿಲ್ಲಿಸಿರುವುದನ್ನು ಮತ್ತೆ ಶುರು ಮಾಡಬೇಕು.**

2. **ಕೆಲಸಗಳು ಪ್ರಗತಿ ಆಗಬೇಕಾದರೆ ಗುತ್ತಿಗೆದಾರರಿಗೆ ಬರಬೇಕಾಗಿರುವ ಸುಮಾರು 25 ಕೋಟಿ ರೂ. ಉಳಿದಿರುವ ಹಣ ಬಿಡುಗಡೆ ಆಗಬೇಕು.**

3. **ಬರದ ದವಡೆಯಲ್ಲಿ ತತ್ತರಿಸುತ್ತಿರುವ ತುಮಕೂರು ಜಿಲ್ಲೆಯ ಜನರಿಗೆ ಸ್ವಲ್ಪವಾದರೂ ಪರಿಹಾರ ಒದಗಿಸುವ ದಿಸೆಯಲ್ಲಿ, ಶಿಂಷಾ ನದಿಯ ಪಾತ್ರಕ್ಕೆ ಹೇಮಾವತಿ ಅಣೆಕಟ್ಟಿನಿಂದ ಹರಿದು ಬರುತ್ತಿದ್ದ ನೀರನ್ನು ನಿಲ್ಲಿಸದೆ ಮುಂದುವರಿಯಬೇಕು.**

ಈ ಬೇಡಿಕೆಗಳಿಗೆ ಸರಕಾರ ತಾರೀಖು 25-3-1995ರೊಳಗೆ ಈಡೇರಿಸದಿದ್ದರೆ, ತಾರೀಖು

26-3-1995ನೇ ಭಾನುವಾರ ಬೆಳಿಗ್ಗೆ 9-00 ಗಂಟೆಯಿಂದ ನಾನು ಮತ್ತು ನನ್ನ ಅಭಿಮಾನಿಗಳು, ಬೆಂಗಳೂರಿನ ವಿಧಾನಸೌಧದ ಮುಂದೆ ''ಉಪವಾಸ ಸ್ತ್ಯಾಗ್ರಹ'' ಮಾಡಲು ತೀರ್ಮಾನಿಸಿದ್ದೇವೆ. ಈ ಬೇಡಿಕೆಗಳು ನ್ಯಾಯ ಸಮ್ಮತವಾದವು ಹಾಗು ಈಡೇರಿಸಲು ಸಾಧ್ಯವಾಗುವಂತಹವುಗಳು ಎಂದು ತಮಗೆ ಅನಿಸಿದರೆ ದಯಮಾಡಿ ಎಲ್ಲರೂ ಸಹಕರಿಸಲು ಕೋರಿಕೆ.

ಇಂತಿ ನಮಸ್ಕಾರಗಳು
**ವೈ.ಕೆ. ರಾಮಯ್ಯ**
ಅಧ್ಯಕ್ಷರು, ಸಮಾಜವಾದಿ ಪಕ್ಷ, ಕರ್ನಾಟಕ

## ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ (ರಿ)

ತುಮಕೂರು

ದಿನಾಂಕ : 21.7.1998

ಮಾನ್ಯರೆ,

ಅನೇಕ ಜನರ ಶ್ರಮ, ದುಡಿಮೆ ಹಾಗೂ ಆಸಕ್ತಿಯ ಫಲವಾಗಿ ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಹರಿದುಬಂದು, ಪೂರ್ಣವಾಗಿ ಅಲ್ಲದಿದ್ದರೂ, ಜಿಲ್ಲೆಯ ಕೆಲವು ಪ್ರದೇಶದಲ್ಲಾದರು ಹಸಿದ ಹೊಟ್ಟೆಗೆ ಅನ್ನ ಬೆಳೆದುಕೊಳ್ಳಲು, ಬಾಯಾರಿದ ಬಾಯನ್ನು ತಣಿಸಿಕೊಳ್ಳಲು ಸಾಧ್ಯವಾಯಿತು. ಈಗ್ಗೆ ಮೂರು ತಿಂಗಳ ಹಿಂದೆ ಹಾಸನ ಜಿಲ್ಲೆಯಲ್ಲಿ ''ಹೇಮಾವತಿ''ಯನ್ನು ಬಿಡಿಸಿಕೊಂಡು ಬರಲು ಈ ಜಿಲ್ಲೆಯ ಜನರು ಭಗೀರಥ ಪ್ರಯತ್ನವನ್ನೇ ಮಾಡಬೇಕಾಯಿತು. ತುಮಕೂರಿನ ಜಿಲ್ಲೆಯಾದ್ಯಂತ ನೀರಿಗಾಗಿ ಆರು ದಿನಗಳ ಕಾಲ ನಡೆದ ಹೋರಾಟ ಚರಿತ್ರಾರ್ಹವಾದ ಒಂದು ಘಟನೆಯಾಗಿತ್ತು.

ಹೇಮಾವತಿ ನೀರು ಜಿಲ್ಲೆಯ ಪ್ರತಿಯೊಬ್ಬರ ಅವಶ್ಯಕತೆ ಎಂಬ ಸತ್ಯವನ್ನು ಮನವರಿಕೆ ಮಾಡಿಕೊಂಡ ಜನರು, ಬಡವ-ಬಲ್ಲಿದ, ರೈತರು-ವರ್ತಕರು, ಕಾರ್ಮಿಕರು-ಅಧಿಕಾರಿಗಳು, ಸಮಾಜ ಸೇವಕರು-ರಾಜಕಾರಣಿಗಳು, ಯುವಜನರು-ವಿದ್ಯಾರ್ಥಿಗಳು, ಮಹಿಳೆಯರು-ವೃದ್ಧರೂ ಎಲ್ಲರೂ ಈ ಹೋರಾಟದಲ್ಲಿ ಸ್ವಯಂ ಪ್ರೇರಿತವಾಗಿ ಭಾಗವಹಿಸಿ ಈ ಹೋರಾಟವನ್ನು ಯಶಸ್ವಿಗೊಳಿಸಿದ್ದಾರೆ. ಅಲ್ಲದೇ ಸರ್ಕಾರಕ್ಕೆ ಜಿಲ್ಲೆಯ ಜನರ ಒಗ್ಗಟ್ಟಿನ ಸಂದೇಶವನ್ನು ಸಾರಿದ್ದಾರೆ.

ನೀರಿಗಾಗಿ ನಡೆದ ಈ ಹೋರಾಟದ ಹಾದಿಯಲ್ಲಿ ಪಕ್ಷ, ಜಾತಿ, ವರ್ಗ, ಪ್ರದೇಶ ಯಾವುದೂ ಅಡ್ಡಿಯಾಗಬಾರದು. ವೈಯಕ್ತಿಕ ಭಿನ್ನಾಭಿಪ್ರಾಯಗಳು ಇದಾವುದರಿಂದಲೂ ಇಂತಹ ಹೋರಾಟ ಹಿನ್ನಡೆ ಪಡೆಯಬಾರದು ಎಂಬುದೆ ನನ್ನ ಹೃದಯಾಂತರಾಳದ ಅಪೇಕ್ಷೆ. ಈ ಜಿಲ್ಲೆಯ ಎಲ್ಲಾ ಪಕ್ಷದ ನನ್ನ ಸ್ನೇಹಿತರು, ಎಲ್ಲಾ ವರ್ಗದ ಜನರು ಇದನ್ನು ಸಾಬೀತು ಪಡಿಸುವ ರೀತಿಯಲ್ಲಿ ನಡೆದುಕೊಂಡಿರುವುದು ಜಿಲ್ಲೆಯ ಸಮಗ್ರ ಅಭಿವೃದ್ಧಿ ದೃಷ್ಟಿಯಿಂದ ಒಂದು ಶುಭ ಸೂಚನೆಯಾಗಿದೆ.

ಹಾಸನ ಜಿಲ್ಲೆ ಚನ್ನರಾಯಪಟ್ಟಣದ ವಡ್ಡರ ಹಳ್ಳಿ ಗೇಟಿನ ಬಳಿ ಸುಮಾರು 96 ದಿನಗಳ ಕಾಲ ಹಾಸನ ಜಿಲ್ಲೆಯ ಕೆಲವರು ತುಮಕೂರು ಜಿಲ್ಲೆಗೆ ನೀರು ಹರಿಯಬೇಕಾದ ಕಾಲುವೆಗೆ ಮಣ್ಣು ತುಂಬಿ ಕುಳಿತಾಗ, ಜಗತ್ತಿನಲ್ಲಿ ಎಲ್ಲೂ ನಡೆಯದ ಈ ಅನ್ಯಾಯವನ್ನು ಸರ್ಕಾರ ಕಂಡೂ ಕಾಣದಂತೆ ಕಣ್ಣುಮುಚ್ಚಿ ಕುಳಿತಿದ್ದರಿಂದ ನಾವು ಅನಿವಾರ್ಯವಾಗಿ ಸಂಘರ್ಷದ ಮಾರ್ಗಕ್ಕೆ ಇಳಿಯಲೇಬೇಕಾಯಿತು.

ತುಮಕೂರು ಕಾಲುವೆಯಿಂದ ನಾಲ್ಕು ಹೆಜ್ಜೆ ದೂರದಲ್ಲಿರುವ ಹಾಸನ - ಮಂಡ್ಯ - ಮೈಸೂರು ಜಿಲ್ಲೆಗೆ ನೀರು ಹರಿದುಹೋಗುವ ಕಾಲುವೆಗಳನ್ನು ಏಕೆ ಮುಚ್ಚಲಿಲ್ಲ? ಎಂದು ಅನೇಕ ಬಾರಿ ಕೇಳಿದ ನೋವು ತುಂಬಿದ ನನ್ನ ಪ್ರಶ್ನೆಗೆ ಯಾರಿಂದಲೂ ಈವರೆಗೆ ಉತ್ತರ ಇಲ್ಲದೆಯಿರುವುದು, ಪರಿಹಾರಕ್ಕಾಗಿ ರೈತರು ನಡೆಸಿದ ಹೋರಾಟ ಎನ್ನುವುದರ ಬಗ್ಗೆ ಈ ಜಿಲ್ಲೆಯ ಜನ ಸಂಶಯ ಪಡುವುದು ಸಹಜವಾಗಿದೆ. ಹಾಸನ ಜಿಲ್ಲೆಯ ಗೊರೂರಿನಿಂದ ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಕರೆದು ತರುವ ದಾರಿಯಲ್ಲಿ ಅಡ್ಡಿ ಬಂದ ದುಷ್ಟ ಶಕ್ತಿಗಳು, ಈ ನಿಟ್ಟಿನಲ್ಲಿ ನಡೆದ ಕುಯುಕ್ತಿ ಕುತಂತ್ರಗಳನ್ನು ಎರಡು ದಶಕಗಳಿಗೂ ಹೆಚ್ಚು ಕಾಲ ಅನುಭವಿಸಿದ ಹಾಗು ಅವಲೋಕಿಸಿದ ನನಗೆ, ತುಮಕೂರು ಜಿಲ್ಲೆ ಒಂದಕ್ಕೇ ಏಕೆ ಈ ರೀತಿಯ ನಿರಂತರ ಅನ್ಯಾಯ ವಾಗುತ್ತಿದೆ? ಎನ್ನುವ ಅರಿವು ನನಗಿದೆ. ಈ ಪ್ರಶ್ನೆಗೆ ಉತ್ತರ ಹುಡುಕುವ ಮೂಲಕವೇ ಈ ಜಿಲ್ಲೆಯ ಎಲ್ಲ ಪಕ್ಷದ ರಾಜಕಾರಣಿಗಳು, ಎಲ್ಲ ವರ್ಗದ ಜನರು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ಇಲ್ಲಿನ ಸ್ವಾಭಿಮಾನ ಶೂನ್ಯ, ಜಡಗೊಂಡ ಜನಸಮೂಹ, ಯಾವುದೇ ವಿಷಯದ ಬಗ್ಗೆ ನಿರ್ದಿಷ್ಟ ನಿಲುವಿಲ್ಲದ, ಪ್ರಬಲ ಇಚ್ಛಾಶಕ್ತಿಯುಳ್ಳ ನಾಯಕತ್ವದ ಕೊರತೆ, ಕಾರಣವೆಂಬ ಅಪವಾದವಿದೆ. ಆದರೆ ಈಗ ನಡೆದ ಹೊರಾಟದಲ್ಲಿ ಎಲ್ಲಾ ವರ್ಗದ ಜನರು ತೋರಿದ ಅಭೂತಪೂರ್ವ ಪ್ರತಿಕ್ರಿಯೆ ಹಾಗೂ ಅಸಾಮಾನ್ಯ ಇಚ್ಛಾಶಕ್ತಿ ಈ ಆರೋಪವನ್ನು ಶಾಶ್ವತವಾಗಿ ತೊಡೆದುಹಾಕಿದೆ. ಈ ಯಶಸ್ವಿ ಹೋರಾಟ ಕೇವಲ ನೀರಿನದ್ದಾಗದೆ, ಜಿಲ್ಲೆಯ ಜನರ ಸ್ವಾಭಿಮಾನವನ್ನು ಜಾಗೃತಿಗೊಳಿಸಿದ ಹೋರಾಟ ಎಂದರೆ ಅತಿಶಯೋಕ್ತಿಯಾಗಲಾರದು.

ಇಂತಹ ಚಳುವಳಿ, ಪ್ರತಿಭಟನೆ, ಬಂದ್‌ಗಳು ನಡೆಯುವಾಗ ಸಂಯಮ ಮೊದಲ ಅವಶ್ಯಕತೆ. ಸರ್ಕಾರದ ಆಸ್ತಿಕೂಡ ನಮ್ಮ ಬೆವರಿನ ಫಲ. ನಮ್ಮ ಈ ಹೋರಾಟ, ಒಗ್ಗಟ್ಟಿನ ಬಲಪ್ರದರ್ಶನ ಮಾಡುವುದರ ಮೂಲಕ ಅಧಿಕಾರದ ಗದ್ದುಗೆಯಲ್ಲಿ ನಿಷ್ಕ್ರಿಯರಾಗಿ ಕುಳಿತಿರುವವರ ವಿರುದ್ಧವೇ ಹೊರತು, ಯಾವುದೇ ಜನರ ವಿರುದ್ಧವಲ್ಲ. ಜಿಲ್ಲೆಯಾದ್ಯಂತ ಸುಮಾರು ಒಂದು ವಾರಗಳ ಕಾಲ ನಡೆದ ರಸ್ತೆತಡೆ ಹಾಗೂ ಬಂದ್‌ನ ಸಂದರ್ಭದಲ್ಲಿ ಮೇಲೆ ನಾನು ತಿಳಿಸಿದ ವಿಷಯವನ್ನು ಸಂಪೂರ್ಣವಾಗಿ ಅರಿತು ಯಾವುದೇ ಅಹಿತಕರ ಘಟನೆ ನಡೆಯಲು ಅವಕಾಶ ಕೊಡದೆ, ಹೋರಾಟವನ್ನು ಯಶಸ್ವಿಗೊಳಿಸಿದ್ದು ಈ ಜಿಲ್ಲೆಯ ಜನರ ಪ್ರೌಢಿಮೆ.

ಈ ಪ್ರತಿಭಟನೆಯ ಸಂದರ್ಭದಲ್ಲಿ ಸಾರ್ವಜನಿಕರಿಗೆ ಆದ ಅನಾನುಕೂಲಕ್ಕಾಗಿ ನಾನು ವಿಷಾದಿಸುತ್ತೇನೆ. ಸಮಸ್ಯೆಗಳ ಪರಿಹಾರಕ್ಕೆ ಸಂಧಾನವೇ ಸೂಕ್ತಮಾರ್ಗ ಎನ್ನುವ ಅರಿವು ನಮಗಿದೆ. ಆದರೆ ಆಳುವವರಿಗೆ ಈ ಅರಿವು ಇಲ್ಲದೇ ಹೋದಾಗ ಸಂಘರ್ಷ ಅನಿವಾರ್ಯ.

ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಪಡೆದುಕೊಳ್ಳುವಲ್ಲಿ "**ತುಮಕೂರು ಜಿಲ್ಲೆ ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ**" ತನ್ನದೇ ಆದ ರೀತಿಯಲ್ಲಿ ಕೆಲಸಮಾಡಿಕೊಂಡು ಬಂದಿದೆ. ಕಾಲುವೆಗೆ ಮಣ್ಣು ಸುರಿದು ನೀರು ತಡೆದಾಗ ನಾವು ಪ್ರಾರಂಭಿಸಿದ ಪ್ರತಿಭಟನಾ ಕಾರ್ಯಕ್ರಮಕ್ಕೆ ಬೆಂಬಲವಿತ್ತು, ಯಶಸ್ವಿಗೊಳಿಸಲು ಸಹಕರಿಸಿದ ಎಲ್ಲಾ ಬಾಂಧವರಿಗೂ ನಮ್ಮ ವಂದನೆಗಳು.

ತಮ್ಮ ವಿಶ್ವಾಸಿ
**ವೈ.ಕೆ. ರಾಮಯ್ಯ**

ಕುಣಿಗಲ್ ಕ್ಷೇತ್ರದ ಮಾಜಿ ಶಾಸಕರು ಹಾಗು ಮಾಜಿ ಸಚಿವರಾದ

## ವೈ.ಕೆ. ರಾಮಯ್ಯನವರ ಕಾಲ್ನಡಿಗೆ ಪ್ರವಾಸ

ಮಾನ್ಯರೆ,

ನಮ್ಮನ್ನು ಕಾಡಿಸುತ್ತಿರುವ ಭೀಕರ ಬರಗಾಲ, ಅರಣ್ಯ ನಾಶದಿಂದ ಮಳೆ ಆಗದಿರುವುದು, ಪರಿಣಾಮವಾಗಿ ಜಲ ಸಂಪನ್ಮೂಲದ ಕೊರತೆ, ವಾಯುಮಾಲಿನ್ಯ, ಇದರ ತಡೆಗೆ ಮರ ಬೆಳೆಸುವುದೊಂದೇ ದಾರಿ. ಮರದಿಂದ ಮಳೆ, ಮಳೆಯಿಂದ ಬೆಳೆ, ಬೆಳೆಯಿಂದ ಬಾಳು. ಈ ಸತ್ಯದೆಡೆಗೆ ಗಮನ ನೀಡಬೇಕಾಗಿದೆ. ಅಲ್ಲದೆ ಸ್ವಾತಂತ್ರ್ಯ ಬಂದ ನಲವತ್ತೊಂದು ವರ್ಷಗಳಾದರೂ ತುತ್ತು ಅನ್ನ, ಬಟ್ಟೆ - ವಸತಿಗೆ ಕಾಡುತ್ತಿರುವ ಬಡತನಕ್ಕೆ, ಮಿತಿಮೀರಿದ ಸಂತಾನ ಕಾರಣವಾಗಿದೆ. ಈ ಸಮಾಜದಲ್ಲಿ ಶಿಸ್ತು, ವೈಜ್ಞಾನಿಕ ಮನೋಭಾವ, ಹಕ್ಕು ಮತ್ತು ಕರ್ತವ್ಯ ಪ್ರಜ್ಞೆ ಇಲ್ಲದಿರುವುದಕ್ಕೆ ಅನಕ್ಷರತೆ ಬಹುಮಟ್ಟಿಗೆ ಕಾರಣವೆಂದು ನನ್ನ ನಂಬಿಕೆ. ಇದರ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಪಾದಯಾತ್ರೆ ಕಾರ್ಯಕ್ರಮ ಹಾಕಿಕೊಂಡಿದ್ದು ತಮಗೀಗಾಗಲೆ ತಿಳಿದಿರುವಂತೆ ಕಳೆದ 1986-87ನೇ ಸಾಲಿನಲ್ಲಿ ತುಮಕೂರಿನಿಂದ ಬೆಂಗಳೂರು ಜಿಲ್ಲೆಯ ಗಡಿಯವರೆಗೆ ಸುಮಾರು 80 ಕಿ.ಮೀ. ನಷ್ಟು , 1987-88ನೇ ಸಾಲಿನಲ್ಲಿ ಕುಣಿಗಲ್‌ನಿಂದ ಮದ್ದೂರಿನವರೆಗೆ ಸುಮಾರು 75 ಕಿ.ಮೀ. ನಷ್ಟು ಮತ್ತು 1988-89ನೇ ಸಾಲಿನಲ್ಲಿ ಕುಣಿಗಲ್‌ನಿಂದ ಅಮೃತೂರು ಮಾರ್ಗವಾಗಿ ಹುಲಿಯೂರುದುರ್ಗದವರೆಗೆ 50 ಕಿ.ಮೀ. ದೂರದಷ್ಟು ಕಾಲ್ನಡಿಗೆ ಪ್ರವಾಸ ಮಾಡಿ, ಜನರಲ್ಲಿ ಬೆರೆತು ಈ ಕಾರ್ಯಕ್ರಮ ಮಾಡಿರುತ್ತೆ. ಈ ವರ್ಷ ದಿನಾಂಕ 2-10-1989ರಂದು ಭಕ್ತರಹಳ್ಳಿಯಿಂದ ಗಿಡದಪಾಳ್ಯದವರೆಗೆ ಹಾಗೂ ದಿನಾಂಕ 3-10-1989ರಿಂದ 4-10-1989 ರವರೆಗೆ ನಿಡಸಾಲೆಯಿಂದ, ಉಜ್ಜನಿ ಮಾರ್ಗವಾಗಿ ಚನ್ನಪಟ್ಟಣದ ವರೆಗೆ ಪಾದಯಾತ್ರೆ ಕಾರ್ಯಕ್ರಮ ಹಾಕಿಕೊಂಡಿರುತ್ತೆ.

**ಸರ್ವರೂ ಭಾಗವಹಿಸಲು ತಿಳಿಸಿದೆ**



## ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ ಧರಣಿ ಸತ್ಯಾಗ್ರಹ

ದಿನಾಂಕ : 28-9-1995ನೇ ಗುರುವಾರ                    ಬೆಳಿಗ್ಗೆ 11 ಘಂಟೆಗೆ

ಸ್ಥಳ : ತುಮಕೂರು - ಕುಣಿಗಲ್ ರಸ್ತೆಯಲ್ಲಿರುವ ಹೇಮಾವತಿ ವಲಯದ ಮುಖ್ಯ
ಇಂಜಿನಿಯರ್‌ರವರ ಕಛೇರಿ ಆವರಣದಲ್ಲಿ

ಮಾನ್ಯರೆ,

ತುಮಕೂರು ಜಿಲ್ಲೆಯಲ್ಲಿ ಆಗಬೇಕಾಗಿರುವ ಹೇಮಾವತಿ ಮುಖ್ಯ ಕಾಲುವೆಯ ಕೆಲಸಗಳನ್ನು ಈ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ನಿಲ್ಲಿಸಿದ್ದದು ಸರಿಯಷ್ಟೆ. ಅಚ್ಚುಕಟ್ಟುದಾರರ ವೇದಿಕೆ ಮತ್ತು ಇತರರ ಸತತ ಒತ್ತಾಯದಿಂದಾಗಿ ಸರ್ಕಾರವು ತಿಪಟೂರು ತಾಲ್ಲೂಕಿನ ಶಿವಪುರ, ಅರಳಗುಪ್ಪೆಯಿಂದ ತುಮಕೂರುವರೆಗೆ ಆಗದೆ ಉಳಿದಿರುವ ಕಾಲುವೆ ಕೆಲಸಗಳನ್ನು, ಇತ್ತೀಚೆಗೆ ಪ್ರಾರಂಭ ಮಾಡಿದೆ. ಆದರೆ ಕಳೆದ ತಿಂಗಳು, ತುಮಕೂರಿನಲ್ಲಿ ರಾಜ್ಯದ ಮುಖ್ಯ ಮಂತ್ರಿಗಳು ತುಮಕೂರಿನಿಂದ ಕುಣಿಗಲ್‌ವರೆವಿಗೆ ಆಗಬೇಕಾದ ಮುಖ್ಯ ಕಾಲುವೆಯ ನಿಲ್ಲಿಸಿರುವ ಕೆಲಸಗಳನ್ನು ಪ್ರಾರಂಭಿಸಲು ಸಾಧ್ಯವಿಲ್ಲವೆಂದು ಹೇಳಿರುತ್ತಾರೆ. ತುಮಕೂರು, ಗುಬ್ಬಿ ಹಾಗೂ ಕುಣಿಗಲ್ ತಾಲ್ಲೂಕಿನ ಸುಮಾರು 2 ಲಕ್ಷ ಎಕರೆಗೂ ಮೀರಿದ ಜಮೀನುಗಳಿಗೆ ತುಮಕೂರು - ಕುಣಿಗಲ್‌ವರೆಗೆ ಆಗಬೇಕಾಗಿರುವ ಕಾಲುವೆಯ ಮುಖಾಂತರವೇ ನೀರು ಬರಬೇಕಾಗಿದೆ.

ಈಗಾಗಲೇ ಈ ಕಾಲುವೆಯ ಕೆಲಸಗಳು ಈ ಹಿಂದೆ ಪ್ರಾರಂಭವಾಗಿ ಅನೇಕ ಹಂತದಲ್ಲಿ ನಿಂತಿವೆ. ಈ ಕಾಲುವೆಯ ಕೆಲಸವನ್ನು ನಿಲ್ಲಿಸುವುದಕ್ಕೆ ಯಾವುದೇ ಸಕಾರಣವಿಲ್ಲ. ಆದ್ದರಿಂದ ಕೆಲಸಗಳನ್ನು ಪ್ರಾರಂಭಿಸಲು ಸರ್ಕಾರದ ಮೇಲೆ ಒತ್ತಡ ತರಲು ವೇದಿಕೆಯ ಅಧ್ಯಕ್ಷರು ಮತ್ತು ಮಾಜಿ ಸಚಿವರಾದ

**ಶ್ರೀ ವೈ.ಕೆ. ರಾಮಯ್ಯನವರ ಮುಂದಾಳುತ್ವದಲ್ಲಿ**

**ಧರಣಿ ಸತ್ಯಾಗ್ರಹ ಕಾರ್ಯಕ್ರಮವನ್ನು** ಹಮ್ಮಿಕೊಳ್ಳಲಾಗಿದೆ. ಆದ್ದರಿಂದ ರೈತ ಬಾಂಧವರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲು ಕೋರಿದೆ.

ಇಂತಿ
ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ

ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ

**ಹೆಬ್ಬೂರು ಬಂದ್**

ದಿನಾಂಕ : 4-4-1995 ನೇ ಮಂಗಳವಾರ

ತುಮಕೂರು ಜಿಲ್ಲೆಗೆ ಹೇಮಾವತಿ ನಾಲಾ ಕೆಲಸವನ್ನು ನಿಲ್ಲಿಸಿರುವ ಧೋರಣೆ ಬಗ್ಗೆ
ವಿರೋಧಿಸಿ ಸಮಾಜವಾದಿ ಪಕ್ಷದ ಅಧ್ಯಕ್ಷರಾದ

**ಶ್ರೀಮಾನ್ ವೈ.ಕೆ. ರಾಮಯ್ಯನವರು**

ಮತ್ತು ಅವರ ಬೆಂಬಲಿಗರು ಮುಖ್ಯಮಂತ್ರಿಗಳ ನಿವಾಸದ ಎದುರು ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದವರನ್ನು ನಿರ್ಲಕ್ಷ ಕಾರಣದಿಂದ ಬಂಧಿಸಿ, ಜೈಲಿಗೆ ಕಳಿಸಿರುವುದರ ವಿರುದ್ಧ ಹೆಬ್ಬೂರು ಪಟ್ಟಣವನ್ನು ಬಂದ್ ಮಾಡಲು ಕರೆನೀಡಲಾಗಿದೆ ಮತ್ತು ರಸ್ತೆ ತಡೆ ಚಳುವಳಿಯನ್ನು ಹಮ್ಮಿಕೊಳ್ಳಲಾಗಿದೆ.

ಸಾರ್ವಜನಿಕರು ಹೆಚ್ಚಿನ ಸಂಖ್ಯೆಯಲ್ಲಿ ಪಕ್ಷಭೇದವಿಲ್ಲದೆ ಭಾಗವಹಿಸಿ, ಹೇಮಾವತಿ ನಾಲಾ ಹೋರಾಟ ಸಮಿತಿಗೆ ಸಹಕಾರ ನೀಡಬೇಕಾಗಿ ವಿನಂತಿ.

ಇಂತಿ

**ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ**

## ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ (ರಿ.)
## ತುಮಕೂರು ಜಿಲ್ಲೆ, ತುಮಕೂರು

**ಹೇಮಾವತಿ ಪೂಜೆ**

ತಾ.21-10-1994

ಎರಡು ದಶಕಗಳ ನಮ್ಮೆಲ್ಲರ ಹೋರಾಟದ ಫಲದಿಂದ ತಾಯಿ ಹೇಮಾವತಿ ತುಮಕೂರು ಜಿಲ್ಲೆಗೆ ಪಾದಾರ್ಪಣೆ ಮಾಡಿರುವುದರಿಂದ ನಮ್ಮ ಕನಸು ನನಸಾಗಿದೆ. ಗೊರೂರು ಅಣೆಕಟ್ಟೆಯಿಂದ ರಾಮದೇವರ ಕಟ್ಟೆಯ ಮೇಲುಗಾಲುವೆ ಹಾಗು ಬಾಗೂರು-ನವಿಲೆ ಸುರಂಗದ ಮೂಲಕ ಹೇಮಾವತಿ ನದಿ ಶಿಂಷಾನದಿ ಪಾತ್ರಕ್ಕೆ ಹರಿದು ಜಿಲ್ಲೆಯ ಜನರ ಜೀವನಾಡಿ ಯಾಗುತ್ತಿದ್ದಾಳೆ.

ಪ್ರಸ್ತುತ ನೊಣವಿನಕೆರೆಯ ಕೆರೆಗೆ, ಮಲ್ಲಾಘಟ್ಟದ ಕೆರೆಗೆ, ಅಲ್ಲಿಂದ ತುರುವೇಕೆರೆ, ಮಾರ್ಕೋನಹಳ್ಳಿ ಅಣೆಕಟ್ಟೆಯನ್ನು ದಾಟಿ, ಮದ್ದೂರು ತಾಲ್ಲೂಕಿನ ತಗ್ಗಳ್ಳಿ ಅಣೆಯ ಅಚ್ಚುಕಟ್ಟುದಾರರನ್ನು ತಣಿಸಿ, ಮತ್ತೆ ಮುಂದುವರಿದು ಕಾವೇರಿ ಮಾತೆಯೊಡನೆ ಜೊತೆ ಯಾಗುತ್ತಾಳೆ.

**ಹೇಮಾವತಿ ಹರಿಯುತ್ತಾ ಬರುವ ದಾರಿಯಲ್ಲಿ ಭೂಮಿಯನ್ನು ತಣಿಸುವ ಎಲ್ಲಾ ಅಚ್ಚುಕಟ್ಟುದಾರರ ಭಾಗ್ಯದ ಬಾಗಿಲನ್ನು ತೆರೆಯುವ ಈ ಶುಭ ಸಂದರ್ಭದಲ್ಲಿ ತಾ.21-10-1994ರ ಶುಕ್ರವಾರ ಬೆಳಿಗ್ಗೆ 10 ಘಂಟೆಗೆ ನೊಣವಿನಕೆರೆಯ ಕೆರೆಕೋಡಿಯಲ್ಲಿ ತಾಯಿ ಹೇಮಾವತಿಯನ್ನು ಸ್ವಾಗತಿಸಿ ಪೂಜಿಸೋಣ ಬನ್ನಿ.**

ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಹರಿಸಲು ಶ್ರಮಿಸಿದ, ಶ್ರದ್ಧೆ ವಹಿಸಿ ಹೋರಾಡಿದ, ಸಹಕರಿಸಿ ಸಹಾಯ ಮಾಡಿದವರನ್ನು ಹಾಗೂ ದುಡಿದು ಮಡಿದವರನ್ನು ಸ್ಮರಿಸೋಣ ಬನ್ನಿ. ಈ ಚರಿತ್ರಾರ್ಹ ಸಂದರ್ಭದಲ್ಲಿ ನಮ್ಮನ್ನು ಹರಸಿ, ಆಶೀರ್ವದಿಸಲು ಶ್ರೀ ಆದಿಚುಂಚನಗಿರಿ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀಶ್ರೀಶ್ರೀ ಡಾ. ಶಿವಕುಮಾರ ಮಹಾಸ್ವಾಮಿಗಳು, ಶ್ರೀ ನೀಲಗುಂದ ಮಠದ ಶ್ರೀಶ್ರೀಶ್ರೀ ವೀರಮಹಾಂತೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು, ಬಿಜಾಪುರ ಜಿಲ್ಲೆ. ಇವರು ಆಗಮಿಸಲಿದ್ದಾರೆ. ಹೇಮಾವತಿ ತಾಯಿಗಾಗಿ ಎರಡು ದಶಕಗಳ ನಮ್ಮ ಹೋರಾಟವನ್ನು ಸ್ಮರಿಸುತ್ತಾ ನನಸಾದ ನಮ್ಮ ಕನಸನ್ನು ನೆನೆಯೋಣ ಬನ್ನಿ. ಆಗಬೇಕಾಗಿರುವ ಕೆಲಸಗಳಿಗಾಗಿ ಹೋರಾಡಲು ಒಂದಾಗೋಣ ಬನ್ನಿ.

ಇತಿ

**ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿ ಸದಸ್ಯರು**
**ಹೇಮಾವತಿ ಅಚ್ಚುಕಟ್ಟುದಾರರ ವೇದಿಕೆ (ರಿ)**
**ತುಮಕೂರು ಜಿಲ್ಲೆ**

## ತುಮಕೂರು ಲೋಕಸಭಾ ಚುನಾವಣೆ 1996
## ಚುನಾವಣಾ ಪ್ರಚಾರ

ಮಾನ್ಯ ಮತದಾರ ಬಂಧುಗಳೇ,

ದಿನಾಂಕ 23-4-1996ನೇ ಮಂಗಳವಾರ ಹುಲಿಯೂರುದುರ್ಗ ಕ್ಷೇತ್ರದ ಈ ಕೆಳಕಂಡ ಸ್ಥಳಗಳಿಗೆ ತುಮಕೂರು ಲೋಕಸಭಾ ಕ್ಷೇತ್ರದ ಅಭ್ಯರ್ಥಿಯಾದ :

### ಶ್ರೀಮಾನ್ ವೈ.ಕೆ. ರಾಮಯ್ಯನವರು

ಚುನಾವಣಾ ಪ್ರಚಾರದ ಅಂಗವಾಗಿ ಭೇಟಿ ನೀಡುವರು, ಸಾರ್ವಜನಿಕರು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕಾಗಿ ಕೊರುತ್ತೇವೆ.

| ಸ್ಥಳ | ಸಮಯ |
|---|---|
| ಬಿಳೀ ದೇವಾಲಯ | ಬೆಳಿಗ್ಗೆ 8-30 |
| ನಡೆಮಾವಿನಪುರ | 9-00 |
| ಕಗ್ಗೆರೆ | 9-15 |
| ನಾಗಸಂದ್ರ | 10-00 |
| ಕೊಪ್ಪ | 10-30 |
| ಯಡಿಯೂರು | 11-00 |
| ಮಾರ್ಕೋನಹಳ್ಳಿ | 11-30 |
| ಕೊಡಗಿಹಳ್ಳಿ | 12-00 |
| ಅಮ್ಮತೂರು | 12-30 |
| ಜಿನ್ನಾಗರ | ಮಧ್ಯಾಹ್ನ 1-00 |
| ಪಡುವಗೆರೆ | 1-30 |
| ಯಡವಾಣಿ | 2-00 |
| ಕೆ. ಹೊನ್ನಮಾಚನಹಳ್ಳಿ | 2-30 |
| ಹಳೇವೂರು | 3-00 |
| ಕೊಡವತ್ತಿ | 3-30 |
| ಹುಲಿಯೂರು ದುರ್ಗ | 4-00 |
| ಪಿ. ಹೊನ್ನಮಾಚನಹಳ್ಳಿ | 4-30 |
| ನಿಡಸಾಲೆ | ಸಂಜೆ 5-00 |
| ಉಜ್ಜನಿ | 5-30 |
| ಚೌಡನಕುಪ್ಪೆ | 6-00 |
| ತಾವರೇಕೆರೆ | 6-15 |
| ಡಿ. ಹೊಸಹಳ್ಳಿ | 6-45 |
| ಸಂತೆಮಾವತ್ತೂರು | ರಾತ್ರಿ 7-00 |
| ಟಿ. ಹೊಸಹಳ್ಳಿ | 7-30 |
| ಕಿತ್ತಿನಾಗಮಂಗಲ | 8-00 |
| ಹೇರೂರು | 8-30 |
| ಬೇಗೂರು | 9-00 |

ಇವರಿಗೆ ತಮ್ಮ ಅಮೂಲ್ಯವಾದ ಮತವನ್ನು ಕೊಟ್ಟು ಜಯಶಿಲರನ್ನಾಗಿ ಮಾಡಬೇಕಾಗಿ ಕೋರುತ್ತೇವೆ.

ಪ್ರಕಟಣೆ
ಬಿ.ಎಂ. ಹುಚ್ಚೇಗೌಡ
ತಾಲ್ಲೂಕು ಪಂಚಾಯಿತಿ ಸದಸ್ಯರು

**"ಈ ಬಾರಿ ನಿಮ್ಮ ಆಯ್ಕೆ ವೈ.ಕೆ.ಆರ್."**

## ಕುಣಿಗಲ್ ಕ್ಷೇತ್ರದ ಮತದಾರರಲ್ಲಿ ಜನನಾಯಕ **ಶ್ರೀ ವೈ.ಕೆ. ರಾಮಯ್ಯ**, ಎಂ.ಎ., ಎಲ್.ಎಲ್.ಬಿ., ಅವರ ಪರವಾಗಿ ಒಂದು ಮನವಿ

ಯಲೇಕಡಕಲಿನಂತಹ ಗ್ರಾಮದ ಸಾಮಾನ್ಯ ರೈತಾಪಿ ಕುಟುಂಬವೊಂದರಲ್ಲಿ ಹುಟ್ಟಿ, ಗ್ರಾಮೀಣ ಸೊಗಡನ್ನು ಮೈದುಂಬಿಕೊಂಡು ಬೆಳೆದು, ಸಾರ್ವಜನಿಕ ಜೀವನದಲ್ಲಿ ಸ್ಫಟಿಕದಷ್ಟು ಸ್ವಚ್ಛವಾಗಿ ತಮ್ಮ ನಡೆ-ನುಡಿ ಹಾಗೂ ನಿರ್ಭೀತಿಗೆ ಹೆಸರಾದವರು ಶ್ರೀ ವೈ.ಕೆ. ರಾಮಯ್ಯ. ಕುಣಿಗಲ್ ಸೀಮೆಯ ಸಮರ್ಥ ಜನನಾಯಕರಾಗಿ, ದಕ್ಷ ಆಡಳಿತಗಾರರಾಗಿ ಹಿಂದಿನ ಜನತಾ ಸರ್ಕಾರದ ಅವಧಿಯಲ್ಲಿ ಕೆಲಸ ಮಾಡಿರುವುದಕ್ಕೆ ಹತ್ತು ಹಲವು ನಿದರ್ಶನಗಳಿವೆ. ಅಧಿಕಾರದಲ್ಲಿರಲಿ, ಇಲ್ಲದಿರಲಿ ಕುಣಿಗಲ್ ಮತಕ್ಷೇತ್ರ ಹಾಗೂ ರಾಜ್ಯದ ರೈತಾಪಿ ಜನರ ಪರವಾಗಿ ನಿರಂತರವಾಗಿ ಶ್ರಮಿಸುತ್ತಾ ಬಂದಿದ್ದಾರೆ. ವಿಶೇಷವಾಗಿ ರೇಷ್ಮೆ ಬೆಳೆಗಾರರ, ದೀನದಲಿತರ ಹಾಗೂ ಕಾರ್ಮಿಕರ ದುಃಖ ದುಮ್ಮಾನಗಳಿಗೆ ದನಿಯಾಗುತ್ತಾ ಬಂದಿರುವ ದಿಟ್ಟ ಹಳ್ಳಿಗ. ತುಳಿತಕ್ಕೊಳಗಾದವರ, ನಿರ್ಲಕ್ಷ್ಯಕ್ಕೆ ತುತ್ತಾದವರ ಹಾಗೂ ಅನ್ಯಾಯಕ್ಕೆ ಸಿಲುಕಿದವರ ಪರವಾಗಿ ಕೆಲಸ ಮಾಡುತ್ತಾ, ಇಡೀ ಕ್ಷೇತ್ರದ ಸರ್ವತೋಮುಖ ಬೆಳವಣಿಗೆಗೆ ಅವಿಶ್ರಾಂತವಾಗಿ ದುಡಿಯುತ್ತಿರುವ ಕುಣಿಗಲ್ ನೆಲದ ಗಂಡುಗಲಿ.

ಮೌಲ್ಯಗಳು ನಶಿಸುತ್ತಿರುವ ಇವತ್ತಿನ ರಾಜಕಾರಣದ ನಡುವೆ ಅರ್ಥಪೂರ್ಣವಾಗಿ ಕಂಡುಬರುವ ಗ್ರಾಮೀಣ ಸೊಗಡಿನ ನಿರ್ದಾಕ್ಷಿಣ್ಯ ಗುಣದ ದಿಟ್ಟ ಮಾನವತಾವಾದಿ. ಭ್ರಷ್ಟರಿಗೆ ಸಿಂಹಸ್ವಪ್ನವಾಗಿರುವ ಪ್ರಾಮಾಣಿಕ ಶಕ್ತಿ. ಕುಣಿಗಲ್ ಕ್ಷೇತ್ರವನ್ನು ಸಮರ್ಥವಾಗಿ ಪ್ರತಿನಿಧಿಸಿ ಜನಸಾಮಾನ್ಯರ ಸಮಸ್ಯೆಗಳನ್ನು, ನಿದ್ರಾವಸ್ಥೆಯಲ್ಲಿರುವ ಆಡಳಿತಾರೂಢರ ಗಮನಕ್ಕೆ ತಂದು, ಸೂಕ್ತ ಪರಿಹಾರ ಕಂಡುಹಿಡಿಯುವ ಛಲಗಾರ. ಜನಸಾಮಾನ್ಯರ ನಡುವೆ ವಕೀಲರಾಗಿ, ರೈತರಾಗಿ, ಜನಾನುರಾಗಿಯಾಗಿ ದುಡಿಯುತ್ತಿರುವ ಹಿತಚಿಂತಕ. ಜನರ ಆದರ, ಪ್ರೀತಿ, ಗೌರವ ಗಳಿಗೆ ಪಾತ್ರರಾಗಿ ಅನ್ಯಾಯ, ದೌರ್ಜನ್ಯ ಹಾಗೂ ಪಕ್ಷಪಾತಗಳ ವಿರುದ್ಧ ಕ್ಷಣಾರ್ಧದಲ್ಲಿ ಸಿಟ್ಟಿಗೇಳುವ ಧೀಮಂತ.

ಭೌಗೋಳಿಕವಾಗಿ ಕುಣಿಗಲ್ ಕ್ಷೇತ್ರ ಅತ್ಯಂತ ವಿಶಿಷ್ಟವಾದ ಸ್ಥಳ. ಇದು ರಾಷ್ಟ್ರ ಮಟ್ಟದಲ್ಲಿಯೇ ರೇಷ್ಮೆ ಹಾಗೂ ಕುದುರೆ ಸಾಕಾಣಿಕೆಗೆ ತುಂಬಾ ಪ್ರಸಿದ್ಧಿ ಪಡೆದ ಊರು. ಹಾಗಾಗಿ ಈ ನೆಲದ ರೇಷ್ಮೆಯ ಸೂಕ್ಷ್ಮತೆ ಮತ್ತು ಅಶ್ವದ ಬಲಿಷ್ಠತೆ ರಾಮಯ್ಯನವರ ವ್ಯಕ್ತಿತ್ವದಲ್ಲಿ ಲೀನವಾಗಿದೆ. ಇಂತಹ ವಿಶಿಷ್ಟ ನೆಲದಲ್ಲಿ ಜನ್ಮವೆತ್ತ ಅವರು ಇಲ್ಲಿನ ಅಜ್ಞಾನ, ಬಡತನ, ಅನಕ್ಷರತೆ ವಿರುದ್ಧ ತಮ್ಮನ್ನು ತೊಡಗಿಸಿಕೊಂಡು, ಸದಾ ಸಮರ ಸಾರುತ್ತಿರುವ ಯೋಧ. ಪರಿಸರದ ಮೇಲೆ ಎರಗುತ್ತಿರುವ ದುಷ್ಟ ಶಕ್ತಿಗಳ ವಿರುದ್ಧ ಸೆಣೆಸುತ್ತಾ, ಅದರ ಸಂರಕ್ಷಣೆಗಾಗಿ ಕುಣಿಗಲ್ ತಾಲ್ಲುಕಿನಾದ್ಯಾಂತ ರಸ್ತೆಯ

ಇಕ್ಕೆಲಗಳಲ್ಲಿ ಸಾಲುಮರಗಳನ್ನು ನೆಟ್ಟು ಚಿಗುರೊಡೆಸುತ್ತಿರುವ ಕನಸುಗಾರ. ರೇಷ್ಮೆ, ಹೈನುಗಾರಿಕೆ, ನೀರಾವರಿ, ಕೆರೆ, ಕಾಲುವೆ, ಬಾವಿ, ರಸ್ತೆ, ವಿದ್ಯುಚ್ಛಕ್ತಿ, ಅರಣ್ಯ, ಕೈಗಾರಿಕೆ, ವ್ಯವಸಾಯ, ಶಿಕ್ಷಣ ಮುಂತಾದ ತಾಲ್ಲೂಕಿನ ಹಲವಾರು ಕ್ಷೇತ್ರಗಳಲ್ಲಿ ಕುಂಠಿತಗೊಂಡಿರುವ ವಿವಿಧ ಅಭಿವೃದ್ಧಿ ಯೋಜನೆಗಳ ಪುನಶ್ಚೇತನಕ್ಕಾಗಿ ಇಂದು ಅವರ ನಾಯಕತ್ವ ಅನಿವಾರ್ಯವಾಗಿದೆ.

ಸಾಹಿತ್ಯ, ಸಂಸ್ಕೃತಿ, ಕಲೆ, ಪತ್ರಿಕೋದ್ಯಮ ಇತ್ಯಾದಿ ಹಲವಾರು ಸಾಂಸ್ಕೃತಿಕ ಕ್ಷೇತ್ರಗಳ ಬಗ್ಗೆ ಅಪಾರ ಶ್ರದ್ಧೆಯನ್ನು ಹೊಂದಿರುವ ಅಪರೂಪದ ಸಾಂಸ್ಕೃತಿಕ ಜೀವಿ. ಕುಣಿಗಲ್ ತಾಲ್ಲೂಕಿನ ಇತಿಹಾಸದ ಪುಟಗಳಲ್ಲಿ ಆಗಿಹೋಗಿರುವ ನಾಯಕರುಗಳ ಪಂಕ್ತಿಯಲ್ಲಿ ಎದ್ದು ಕಾಣುವ ಮುತ್ಸದ್ದಿ. ಪ್ರಾಮಾಣಿಕತೆ, ನಿಷ್ಠುರತೆ ಹಾಗೂ ನಿರ್ಭೀತಿಯ ಕೊರತೆಯಿಂದ ಕ್ರಿಯಾಶೂನ್ಯವಾಗಿರುವ ವಿಧಾನಸಭೆಗೆ ಗಾಂಭೀರ್ಯ ತುಂಬುವುದಕ್ಕಾಗಿ ಅವರ ಪ್ರವೇಶ ಇಂದು ಅತ್ಯಗತ್ಯವಾಗಿದೆ.

**ಇಂತಹ ಬಹುಮುಖೀ ವ್ಯಕ್ತಿತ್ವವನ್ನು ಹೊಂದಿರುವ ಶ್ರೀ ವೈ.ಕೆ. ರಾಮಯ್ಯನವರನ್ನು ಕುಣಿಗಲ್ ಕ್ಷೇತ್ರ ತನ್ನ ಜನನಾಯಕರನ್ನಾಗಿ ಮತ್ತೆ ಆರಿಸಿಕೊಳ್ಳುವ ಸಮಯ ಇಂದು ರಾಜಕೀಯ ಸವಾಲಾಗಿ ಬಂದಿದೆ. ಕ್ಷೇತ್ರದ ಜನತೆ ಈ ಉಪಚುನಾವಣೆಯಲ್ಲಿ ಅವರನ್ನು ತಮ್ಮ ಅಮೂಲ್ಯ ಮತಗಳಿಂದ ಜಯಶೀಲರನ್ನಾಗಿ ಮಾಡಬೇಕಾದದ್ದು ತಮ್ಮ ಆದ್ಯಕರ್ತವ್ಯ ಹಾಗೂ ಜವಾಬ್ದಾರಿ ಎಂದು ಈಗ ತಿಳಿಯಬೇಕಾಗಿದೆ. ಕುಣಿಗಲ್ ಕ್ಷೇತ್ರದ ಜನತೆಗೆ ಇದು ತುಂಬಾ ಆತ್ಮಗೌರವ ಹಾಗು ಹೆಮ್ಮೆ ತರುವ ಸಂಗತಿಯಾಗಲಿದೆ.**



ಕುಣಿಗಲ್ ಕ್ಷೇತ್ರದ ಜನತೆ ಶ್ರೀ ವೈ.ಕೆ. ಆರ್ ಅವರನ್ನು 8-6-1992ರಂದು ನಡೆಯಲಿರುವ ಉಪಚುನಾವಣೆಯಲ್ಲಿ ಆರಿಸಿ ಕರ್ನಾಟಕ ವಿಧಾನಸಭೆಗೆ ಕಳುಹಿಸಿ ಕೊಡುವುದರ ಮೂಲಕ ಕರ್ನಾಟಕದ ರಾಜಕಾರಣಕ್ಕೆ ಘನತೆ ತಂದುಕೊಡುವ ಶ್ರೇಯಸ್ಸಿಗೆ ಪಾತ್ರರಾಗುವುದರಲ್ಲಿ ಅನುಮಾನವಿಲ್ಲ. ಈ ಆಯ್ಕೆಯ ಮೂಲಕ ತಮ್ಮ ಸ್ವಾರ್ಥಕ್ಕಾಗಿ ಅಧಿಕಾರ ಹಿಡಿಯುವ ಪಕ್ಷರಾಜಕಾರಣಿಗಳನ್ನು ಬಿಟ್ಟು, ಅಧಿಕಾರವನ್ನು ಜನಹಿತಕ್ಕಾಗಿ ಬಳಸುವ ತತ್ವಬದ್ಧ ವಿರಳ ವ್ಯಕ್ತಿಯನ್ನು ಬೆಂಬಲಿಸುವ ಅಪೂರ್ವ ಅವಕಾಶ ಮತ್ತು ಪ್ರತಿಷ್ಠೆ ಈಗ ಈ ಕ್ಷೇತ್ರದ ಮತದಾರರ ಮುಂದಿದೆ. ಇಂತಹ ಕೀರ್ತಿಗಾಗಿ ತಮ್ಮ ಅಮೂಲ್ಯ ಮತವನ್ನು ತಾವು ದಯಮಾಡಿ ಶ್ರೀ ವೈ.ಕೆ. ರಾಮಯ್ಯನವರಿಗೆ ಕಾದಿರಿಸಬೇಕೆಂದು ಈ ಮೂಲಕ ಕ್ಷೇತ್ರದ ಜನತೆಯಲ್ಲಿ ಅತ್ಯಂತ ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಶ್ರೀ ವೈ.ಕೆ. ರಾಮಯ್ಯನವರ ಚುನಾವಣೆ ಗುರುತು : **ಚಕ್ರದೊಳಗೆ ನೇಗಿಲು ಹೊತ್ತ ರೈತ**

ಇಂತಿ ತಮ್ಮ ವಿಶ್ವಾಸಿಗಳು
ನಾಗರಿಕ ಹಿತಚಿಂತಕರ ಕೂಟ, ಕುಣಿಗಲ್ ಕ್ಷೇತ್ರ



ಮೂರನೇ ಅಕ್ಕ ಕೆಂಪಮ್ಮ



ಎಲೆಕದಕಲಿನ ಹುಟ್ಟಿದ ಮನೆ



ಮಕ್ಕಳು ಮತ್ತು ಮೊಮ್ಮಕ್ಕಳೊಂದಿಗೆ ವೈ.ಕೆ.ಆರ್ ದಂಪತಿಗಳು



ಗೋಕುಲದ ತಮ್ಮ ತೋಟದಲ್ಲಿ ಬೋರಲಿಂಗಯ್ಯ ಅವರೊಂದಿಗೆ

ಜೆ.ಎಚ್. ಪಟೇಲ್ ದಂಪತಿಗಳೊಂದಿಗೆ




ಸುಬ್ರಹ್ಮಣ್ಯ ಸ್ವಾಮಿ ಹಾಗೂ ಹೆಚ್.ಡಿ. ದೇವೇಗೌಡ ಅವರೊಂದಿಗೆ



ಮಂಡ್ಯದಲ್ಲಿ ಜನಪರ ರಾಜಕಾರಣಿ ಪ್ರಶಸ್ತಿ ಸಮಾರಂಭದಲ್ಲಿ ಹೆಚ್.ಡಿ. ಚೌಡಯ್ಯ ಮತ್ತು ಚಂದ್ರಶೇಖರ ಪಾಟೀಲ್ ಅವರೊಂದಿಗೆ

ಪಾದಯಾತ್ರೆಯಲ್ಲಿ



ಹೇಮಾವತಿ ನೀರಿಗಾಗಿ ರಸ್ತೆ ತಡೆ ಚಳುವಳಿ



ಟೋಕಿಯೋದಲ್ಲಿ ಜಪಾನಿನ ರೇಷ್ಮೆ ತಜ್ಞರೊಡನೆ

ಬೆಂಗಳೂರಿನಲ್ಲಿ ಡಾ. ತೋಂಟದ ಸಿದ್ಧಲಿಂಗ ಸ್ವಾಮೀಜಿಯವರಿಂದ ಗೌರವಾರ್ಪಣೆ



ವನಸಂವರ್ಧನಾ ಕಾರ್ಯಕ್ರಮ ಉದ್ಘಾಟನಾ ಸಮಾರಂಭದಲ್ಲಿ
ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಮತ್ತು ಕುಮಾರ ಬಂಗಾರಪ್ಪ ಅವರೊಂದಿಗೆ



ಉದಯರವಿಯಲ್ಲಿ ಕುವೆಂಪು ಅವರೊಡನೆ



ರೋಟರಿ ಕ್ಲಬ್ ಅಧ್ಯಕ್ಷರಾಗಿ

ಕುಣಿಗಲ್ ವಕೀಲರ ಸಂಘದ ಅಧ್ಯಕ್ಷರಾಗಿ



1969ರಲ್ಲಿ ಕೆಂಗಲ್ ಹನುಮಂತಯ್ಯನವರ ಸನ್ಮಾನ ಸಮಾರಂಭದಲ್ಲಿ

1978ರಲ್ಲಿ ಅಂದಿನ ಕೇಂದ್ರ, ವಾಣಿಜ್ಯ ಮಂತ್ರಿ, ಜಾರ್ಜ್ ಫರ್ನಾಂಡಿಸ್
ಮತ್ತು ಹೆಚ್.ಡಿ. ದೇವೇಗೌಡ ಅವರೊಂದಿಗೆ



ಹೆಬ್ಬೂರಿನಲ್ಲಿ ಹೇಮಾವತಿ ಕಛೇರಿ ಉದ್ಘಾಟನಾ ಸಮಾರಂಭದಲ್ಲಿ

ರೈತರೊಂದಿಗೆ ಚಳುವಳಿಯಲ್ಲಿ



ತುಮಕೂರಿನಲ್ಲಿ ಕಾವೇರಿ ನೀರಿಗಾಗಿ ನಡೆದ ಹೋರಾಟದಲ್ಲಿ
ವಕೀಲರೊಂದಿಗೆ ಸತ್ಯಾಗ್ರಹಿಯಾಗಿ








ಮೈಸೂರಿನ ಸನ್ಮಾನ ಸಭೆಯಲ್ಲಿ ದೇಜಗೌ, ಆದಿಚುಂಚನಗಿರಿ ಸ್ವಾಮೀಜಿ ಮತ್ತು ಪ್ರೊ. ಕಾಳೇಗೌಡ ನಾಗವಾರ ಅವರೊಂದಿಗೆ ವೈ.ಕೆ.ಆರ್ ದಂಪತಿಗಳು

## ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ (ರಿ)
ತುಮಕೂರು

ಅಧ್ಯಕ್ಷರು
ವೈ.ಕೆ. ರಾಮಯ್ಯ
ಮಾಜಿ ಸಚಿವರು

ದಿನಾಂಕ : 19.7.1998
ಸ್ಥಳ : ತುಮಕೂರು

ಹಾಸನ ಜಿಲ್ಲೆಯಲ್ಲಿ ಬಂಧಿಯಾಗಿರುವ 'ಹೇಮಾವತಿ'ಯನ್ನು ಬಿಡಿಸಿಕೊಂಡು ಬರಲು ಪ್ರತಿಯೊಬ್ಬರು ಭಗೀರಥರಾಗಬೇಕಾದ ಕಾಲ ಸನ್ನಿಹಿತವಾಗಿದೆ. ತುಮಕೂರು ಜಿಲ್ಲೆಯಾದ್ಯಂತ ನೀರಿಗಾಗಿ ಕಳೆದ ಆರು ದಿನಗಳಿಂದ ನಡೆಯುತ್ತಿರುವ ಹೋರಾಟದ ಬಿಸಿ ಇನ್ನೂ ಸರ್ಕಾರವನ್ನು ತಟ್ಟಿದ ಹಾಗೆ ಕಾಣುತ್ತಿಲ್ಲ. ಆದುದರಿಂದ ಅನಿವಾರ್ಯವಾಗಿ ಈ ಹೋರಾಟವನ್ನು ಇನ್ನಷ್ಟು ಉಗ್ರಗೊಳಿಸಲು ಸೋಮವಾರ ಜಿಲ್ಲೆಯನ್ನು ಬಂದ್ ಮಾಡಲು ನಿರ್ಧರಿಸಲಾಗಿದೆ.

ಹೇಮಾವತಿ ನೀರು ಜಿಲ್ಲೆಯ ಪ್ರತಿಯೊಬ್ಬರ ಅವಶ್ಯಕತೆ. ಬಡವ-ಬಲ್ಲಿದ, ರೈತರು-ವರ್ತಕರು, ಕಾರ್ಮಿಕರು-ಅಧಿಕಾರಿಗಳು, ಸಮಾಜಸೇವಕರು-ರಾಜಕಾರಣಿಗಳು, ಯುವ ಜನರು-ವಿದ್ಯಾರ್ಥಿಗಳು, ಮಹಿಳೆಯರು-ವೃದ್ಧರು ಎಲ್ಲರೂ ಇದರಲ್ಲಿ ಸ್ವಯಂ ಪ್ರೇರಿತರಾಗಿ ಭಾಗವಹಿಸಿ, ಬಂದ್ ಯಶಸ್ವಿಗೊಳಿಸಿ ಸರ್ಕಾರಕ್ಕೆ ಜಿಲ್ಲೆಯ ಜನರ ಒಗ್ಗಟ್ಟಿನ ಸಂದೇಶ ತಲುಪಿಸಬೇಕಾಗಿದೆ.

ನೀರಿಗಾಗಿ ನಡೆಯುತ್ತಿರುವ ಈ ಹೋರಾಟದ ಹಾದಿಯಲ್ಲಿ ಪಕ್ಷ, ಜಾತಿ, ವರ್ಗ, ಪ್ರದೇಶ ಯಾವುದೂ ಅಡ್ಡಿಯಾಗಬಾರದು. ವೈಯಕ್ತಿಕ ಭಿನ್ನಾಭಿಪ್ರಾಯಗಳು, ಘಟನೆಗಳು ಯಾವುದರಿಂದಲೂ ಈ ಹೋರಾಟ ಹಿನ್ನಡೆ ಪಡೆಯಬಾರದು ಎಂಬುದೇ ನನ್ನ ಹೃದಯಾಂತರಾಳದ ಅಪೇಕ್ಷೆ.

ಚನ್ನರಾಯಪಟ್ಟಣದ ವಡ್ಡರಹಳ್ಳಿ ಗೇಟ್ ಬಳಿ ಕಳೆದ 96 ದಿನಗಳಿಂದ ಹಾಸನ ಜಿಲ್ಲೆಯ ಕೆಲವು ಭಾಗದ ರೈತರು, ತುಮಕೂರು ಜಿಲ್ಲೆಗೆ ನೀರು ಹರಿಯಬೇಕಾದ ಕಾಲುವೆಗೆ ಮಣ್ಣು ತುಂಬಿ ಕೂತಿದ್ದಾರೆ. ಜಗತ್ತಿನಲ್ಲಿ ಎಲ್ಲೂ ನಡೆಯದ ಈ ಅನ್ಯಾಯವನ್ನು ಸರ್ಕಾರ ಕಂಡೂ ಕಾಣದಂತೆ ಕಣ್ಣುಮುಚ್ಚಿ ಕೂತಿದೆ. ಆ ರೈತರ ಬೇಡಿಕೆ ನ್ಯಾಯಬದ್ಧ ಹೌದೋ? ಅಲ್ಲವೋ? ಎಂಬುದು ಸರ್ಕಾರ ತೀರ್ಮಾನಿಸಬೇಕಾದ ವಿಚಾರ. ಆದರೆ ಬಾಗೂರು-ನವಿಲೆ ರೈತರು ತಮಗಾದ ಅನ್ಯಾಯವನ್ನು ಪ್ರತಿಭಟಿಸಲು, ತುಮಕೂರು ಜಿಲ್ಲೆಯೊಂದನ್ನೇ ಬಲಿಗೊಡಲು ಯಾಕೆ ತೀರ್ಮಾನಿಸಿದರು, ಎಂಬುದೇ ನಾವು ಕೇಳುತ್ತಿರುವ ಪ್ರಶ್ನೆ.



ಅವಶ್ಯಕತೆ ಇಲ್ಲ. ಒಂದು ವೇಳೆ ಕೇಂದ್ರ ಸರ್ಕಾರವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ರಾಜ್ಯ ಸರ್ಕಾರದ ಮೇಲೆ ಒತ್ತಡ ತಂದಾಗ್ಯೂ ಅದನ್ನು ನಿಗ್ರಹಿಸಿ ರಾಜ್ಯದ ಹಿತವನ್ನು ಕಾಪಾಡಬೇಕೆಂದು ಒತ್ತಾಯಿಸುತ್ತೇವೆ.

ಇದೇ ರೀತಿ ಈಗಿನ ವಿಚಿತ್ರ ರಾಜಕೀಯ ಹಿನ್ನೆಲೆಯಲ್ಲಿ ಕಾವೇರಿ ನೀರಿನ ಬಗ್ಗೆ ಕೂಡ ರಾಜ್ಯ ಸರ್ಕಾರ ದೃಢ ನಿಲುವನ್ನು ತಾಳಿ, ಕಾವೇರಿ ಕೊಳ್ಳದ ಜನರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳಬೇಕೆಂದು ಒತ್ತಾಯಿಸುತ್ತೇವೆ. ಈ ನಾಡಿನ ಜನರ ಅದರಲ್ಲಿಯೂ ನೀರಾವರಿಯ ಹಿತವನ್ನು ಕಾಪಾಡುವ ವಿಷಯದಲ್ಲಿ ಈ ರಾಜ್ಯದ ಮುಖ್ಯಮಂತ್ರಿಗಳಿಗೆ ಮತ್ತು ಅವರ ಸರ್ಕಾರಕ್ಕೆ ''ಇಚ್ಛಾಶಕ್ತಿ'' ಇಲ್ಲ ಎಂಬುದು ನಮ್ಮ ಅಭಿಪ್ರಾಯವಲ್ಲ. ಆದರೆ, ರಾಷ್ಟ್ರದಲ್ಲಿ ಮತ್ತು ರಾಜ್ಯದಲ್ಲಿ ಈಗ ಇರುವ ವಿಚಿತ್ರ ರಾಜಕೀಯ ಪರಿಸ್ಥಿತಿಯಲ್ಲಿ, ಅಧಿಕಾರವನ್ನು ಉಳಿಸಿಕೊಳ್ಳಲು ಅದರಲ್ಲಿಯೂ ಅನೇಕರ ಹಂಗಿನಿಂದ ಕೇಂದ್ರದಲ್ಲಿ ನಡೆಸುತ್ತಿರುವ ಸರ್ಕಾರವನ್ನು ಉಳಿಸಿಕೊಳ್ಳಲು ತರುವ ಒತ್ತಡಗಳಿಗೆ ಮಣಿದು ರಾಜ್ಯದ ಹಿತವನ್ನು ಬಲಿ ಕೊಡದಿರಲಿ ಎಂಬುದು ನಮ್ಮ ಹಾರೈಕೆ.

ಕೃಷ್ಣಾ - ಕಾವೇರಿ ನದಿಗಳು ಕರ್ನಾಟಕ ಮಾತೆಯ ಎರಡು ಕಣ್ಣುಗಳಿದ್ದಂತೆ. ಈ ಕಣ್ಣುಗಳಿಂದ ಆನಂದಬಾಷ್ಪ ಸುರಿದು ಈ ನಾಡಿನ ಜನರ ಬದುಕು ಬೆಳಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ ದೃಢ ನಿಲುವನ್ನು ತಳೆದು ರಾಜ್ಯದ ಜನರ ಹಿತವನ್ನು ಕಾಪಾಡಲು ಕಟಿಬದ್ಧರಾಗಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತೇವೆ. ರಾಜ್ಯ ಸರ್ಕಾರದ ಈ ನಿಲುವಿನಿಂದ ಕೇಂದ್ರ ಸರ್ಕಾರದ ವರಿಷ್ಠರು, ಮುನಿದರೂ ನಾಡಿನ ಜನ ನಿಮ್ಮ ಜೊತೆ ಇರುತ್ತಾರೆ ಎಂಬುದನ್ನು ಸ್ಪಷ್ಟಪಡಿಸಲು ಇಚ್ಛೆಪಡುತ್ತೇವೆ.

**ವೈ.ಕೆ. ರಾಮಯ್ಯ**
ಸಂಚಾಲಕರು

**ಜಿ. ಮಾದೇಗೌಡ**
ಅಧ್ಯಕ್ಷರು

# ನಮ್ಮ ಜನಪ್ರನಿಧಿಗಳ ನಾಲಿಗೆ ಸತ್ತಿದೆಯೆ?

ಮಾನ್ಯರೆ,

ಇಡೀ ರಾಜಕೀಯ ಬದುಕಿನಲ್ಲಿ ರಾಜ್ಯದ ನೀರಾವರಿಯೋಜನೆಗಳ ಬಗ್ಗೆ ಅಪಾರ ಆಸಕ್ತಿ ಪ್ರದರ್ಶನ ಮಾಡುತ್ತಾ ''ಮಣ್ಣಿನ ಮಗ''ನೆಂದು ಅಧಿಕಾರಕ್ಕೆ ಬಂದ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಹೆಚ್.ಡಿ. ದೇವೆಗೌಡರು ಅಧಿಕಾರಕ್ಕೆ ಬಂದ ತಕ್ಷಣ ರಾಜ್ಯದಲ್ಲಿ ಅನುಷ್ಠಾನ ಗೊಳ್ಳುತ್ತಿದ್ದ ಎಲ್ಲಾ ನೀರಾವರಿ ಯೋಜನೆಗಳನ್ನು ಸ್ಥಗಿತಗೊಳಿಸಿದ್ದಾರೆ. ಇದು ಈ ರಾಜ್ಯದ ಮುಖ್ಯಮಂತ್ರಿಯಾದ ಮಣ್ಣಿನ ಮಗ, ಮಣ್ಣಿನ ಮಕ್ಕಳಿಗೆ ನೀಡಿದ ಮೊದಲ ಕೊಡುಗೆ, ಇದಕ್ಕೆ ಕಾರಣ, ಬೊಕ್ಕಸದಲ್ಲಿ ಹಣ ಇಲ್ಲದೆ ಇರುವುದು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ''ಶ್ರೀಯುತ ರಾಮಕೃಷ್ಣ ಹೆಗಡೆಯವರು ನೀರಾವರಿ ಯೋಜನೆಗಳಿಗೆ ಸಾಕಷ್ಟು ಹಣ ಒದಗಿಸಿ ಕೊಡಲಿಲ್ಲ'' ಎಂದು ಪ್ರತಿಭಟಿಸಿ, ಅಂದು ಶ್ರೀ ದೇವೇಗೌಡರು ಮಂತ್ರಿ ಪದವಿಗೆ ರಾಜೀನಾಮೆ ನೀಡಿದ್ದ ಸಂದರ್ಭವನ್ನು ಈ ರಾಜ್ಯದ ಜನ ಮರೆತಿಲ್ಲ. ಈಗ ನೀರಾವರಿ ಯೋಜನೆಗಳಿಗೆ ಸಾಕಷ್ಟು ಹಣ ಒದಗಿಸಲು ಸಾಧ್ಯ ಆಗದೆ ಇರುವ ಸಂದರ್ಭದಲ್ಲಿ ಶ್ರೀಯುತ ದೇವೇಗೌಡ ಅವರು ತಮ್ಮ ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ಕೊಡುವರೇ? ಇಡೀ ನಾಡಿನ ನೀರಾವರಿ ಯೋಜನೆ ಗಳನ್ನು ಮುಖ್ಯಮಂತ್ರಿಗಳು ಸ್ಥಗಿತಗೊಳಿಸಿದ್ದಾಗ್ಯೂ ಈ ರಾಜ್ಯದ ಜನ ಆರಿಸಿ ಕಳುಹಿಸಿರುವ 224 ಜನ ಪ್ರತಿನಿಧಿಗಳು ಗಂಭೀರವಾಗಿ ಪರಿಶೀಲಿಸಿ, ನಾಡಿನ ರೈತರಿಗೆ ಆಗಿರುವ ಈ ಅನ್ಯಾಯದ ಬಗ್ಗೆ ಶಾಸನ ಸಭೆಯ ಒಳಗೆ ಮತ್ತು ಹೊರಗೆ ಪ್ರಸ್ತಾಪ ಮಾಡದೇ ಇರುವುದು ಜನರಿಗೆ ಆಶ್ಚರ್ಯವನ್ನು ಉಂಟುಮಾಡಿದೆ. ಈ ನಮ್ಮ ಶಾಸಕರುಗಳ ನಡವಳಿಕೆಯನ್ನು ನೀರಿನ ಸವಲತ್ತಿನಿಂದ ವಂಚಿತರಾಗಿರುವ ಜನರು ಎಂದಿಗೂ ಕ್ಷಮಿಸಲಾರರು ಎಂಬುದನ್ನು ಈ ಜನ ಪ್ರತಿನಿಧಿಗಳು ಮರೆಯಲಾರರು.

ರಾಜ್ಯದ ನೀರಾವರಿ ಯೋಜನೆಗಳಲ್ಲಿ ಒಂದಾದ ಹೇಮಾವತಿ ಯೋಜನೆಯಿಂದ ತುಮಕೂರು ಜಿಲ್ಲೆ ಹಾಗೂ ಮಂಡ್ಯ ಜಿಲ್ಲೆಯ ಸುಮಾರು ನಾಲ್ಕು ಲಕ್ಷ ಎಕರೆ ಜಮೀನಿಗೆ ನೀರನ್ನು ಒದಗಿಸುವ ಕಾರ್ಯಕ್ರಮವಾಗಿದೆ. ಅನೇಕ ಜನರ ಶ್ರಮದಿಂದ ಈಗಾಗಲೆ ಈ ಯೋಜನೆಯ ಬಹು ಭಾಗ ಅನುಷ್ಠಾನಕ್ಕೆ ಬಂದಿದೆ. ಶಿಂಷಾನದಿ ಪಾತ್ರಕ್ಕೆ ನೀರು ಹರಿದು ಬಂದಿದೆ. ಕಳೆದ ವರ್ಷ ನಡೆದ ವೇಗದಲ್ಲಿಯೇ ಕೆಲಸ ನಡೆದಿದ್ದರೆ ಈ ವೇಳೆಗೆ ತುಮಕೂರು ನಗರಕ್ಕೆ ಕುಡಿಯುವ ನೀರು ಹರಿದು ಬರುತ್ತಿತ್ತು. ನೀರಾವರಿ ಇಲಾಖೆಯವರೇ ರೂಪಿಸಿರುವ ಕಾರ್ಯಕ್ರಮದ ಪ್ರಕಾರ ಸಾವಿರಾರು ಎಕರೆ ರೈತನ ಜಮೀನಿಗೆ ನೀರು ಹರಿದು ಬರುತ್ತಿತ್ತು.

ಮಣ್ಣಿನ ಮಗನೆಂದು ಹೇಳಿಕೊಳ್ಳುವ ವ್ಯಕ್ತಿಯ ನೇತೃತ್ವದಲ್ಲಿ ಅಧಿಕಾರ ಹಿಡಿದ ಜನತಾದಳ ಸರ್ಕಾರ ಹೇಮಾವತಿಯಿಂದ ತುಮಕೂರು ಜಿಲ್ಲೆಗೆ ಹರಿದು ಬರುತ್ತಿದ್ದ ನೀರನ್ನು

ನಿಲ್ಲಿಸಿದೆ. ನಡೆಯುತ್ತಿದ್ದ ಎಲ್ಲಾ ಕಾಲುವೆ ಕೆಲಸಗಳನ್ನು ಸ್ಥಗಿತಗೊಳಿಸಿದೆ. ಈಗಾಗಲೇ ನಡೆದಿರುವ, ಕೊಡಬೇಕಾಗಿರುವ ಕೋಟ್ಯಾಂತರ ರೂಪಾಯಿಗಳನ್ನು ಬಿಡುಗಡೆ ಮಾಡಿರುವುದಿಲ್ಲ. ಈ ಬೇಡಿಕೆಗಳನ್ನು ಪ್ರಸ್ತಾಪಿಸಿ ಸರ್ಕಾರಕ್ಕೆ ಪತ್ರ ಬರೆದರೆ, ಆ ಪತ್ರಕ್ಕೆ ಉತ್ತರ ಕೊಡುವ ಸೌಜನ್ಯವೂ ಈ ಸರ್ಕಾರಕ್ಕೆ ಇಲ್ಲವಾಗಿದೆ. ''ನಮ್ಮ ಭೂಮಿಗೆ ನೀರು ಕೊಡಿ'' ಎಂದು ಬೇಡಿಕೊಳ್ಳಲು ಮುಖ್ಯಮಂತ್ರಿಗಳ ಮುಂದೆ ಹೋದ ನಮ್ಮನ್ನು ಜೈಲಿಗೆ ಕಳುಹಿಸಿದ್ದಾರೆ. ಶಾಸಕರಾದ ಶ್ರೀ ಬಿ.ಪಿ. ಗಂಗಾಧರ್ ಮತ್ತು ಕರ್ನಾಟಕ ಸಮಾಜವಾದಿ ಪಕ್ಷದ ಅಧ್ಯಕ್ಷರಾದ ಶ್ರೀ ವೈ.ಕೆ. ರಾಮಯ್ಯ ಇವರುಗಳೂ ಸೇರಿದಂತೆ ಅನೇಕ ಜನ ಜಿಲ್ಲಾ ಪಂಚಾಯತಿ ಸದಸ್ಯರು, ತಾಲ್ಲೂಕು ಪಂಚಾಯತಿ ಸದಸ್ಯರು, ವಕೀಲರುಗಳು, ವೈದ್ಯರುಗಳು ಜೈಲಿನಲ್ಲಿ ಕೊಳೆಯುತ್ತಿದ್ದಾರೆ. ಇಷ್ಟಾದರೂ, ಯೋಜನೆಯ ಫಲಾನುಭವಿಗಳಿಂದ ಆರಿಸಿರುವ ತಿಪಟೂರು, ತುರುವೇಕೆರೆ, ಗುಬ್ಬಿ, ತುಮಕೂರು, ಕುಣಿಗಲ್, ಹುಲಿಯೂರುದುರ್ಗ, ನಾಗಮಂಗಲ ಮತ್ತು ಬೆಳ್ಳಾವಿ ಮತ ಕ್ಷೇತ್ರಗಳ ಶಾಸಕರುಗಳು ವಿಧಾನ ಸಭೆಯ ಒಳಗೆ ಮತ್ತು ಹೊರಗೆ ಚಕಾರ ಎತ್ತದೆ ನಿರ್ಲಿಪ್ತರಾಗಿರುವುದರ ಕಾರಣವೇನು...? ಇವರ ನಾಲಿಗೆ ಸತ್ತಿದೆಯೆ ? ಅಥವಾ ಅಧಿಕಾರದಲ್ಲಿರುವ ಹಂಗಿಗೆ ಸಿಕ್ಕಿಕೊಂಡು ಮೌನವಾಗಿದ್ದಾರೆಯೇ ? ಅದೇನೆ ಕಾರಣವಿರಲಿ, ಇವರುಗಳ ಈ ನೀಚ ನಡವಳಿಕೆ, ನಿರ್ಲಕ್ಷ್ಯ ಹಾಗೂ ನಿರ್ವೀರ್ಯ ಪ್ರವೃತ್ತಿಯನ್ನು ಜನ ಮೂಕರಾಗಿ ನೋಡುತ್ತಾ, ಇಂತಹವರುಗಳನ್ನು ಆರಿಸಿರುವುದಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದಾರೆ.

ನಮ್ಮನ್ನು ಆಳುವ ಜನ ನಮ್ಮ ನ್ಯಾಯವಾದ ಬೇಡಿಕೆಗಳನ್ನು ಈಡೇರಿಸದೆ ಇದ್ದಾಗ ನಾವು ಆರಿಸಿ ಕಳುಹಿಸಿದ ಪ್ರತಿನಿಧಿಗಳು ಅದನ್ನು ಪ್ರಶ್ನೆ ಮಾಡಲು ವಿಫಲರಾದಾಗ ಸಂಬಂಧ ಪಟ್ಟ ಜನ-ಸಾಮಾನ್ಯರು ನಿಸ್ಸಹಾಯಕರೆಂದು ಭಾವಿಸಿಕೊಳ್ಳದೆ, ಕಾನೂನಿನ ಚೌಕಟ್ಟಿನಲ್ಲಿ ಪಡೆಯಲು ಸಾಧ್ಯವಾಗದ ಪರಿಹಾರವನ್ನು ಕಾನೂನನ್ನು ಕೈಗೆತ್ತಿಕೊಂಡಾದರೂ ಪಡೆದು ಕೊಳ್ಳಬೇಕಾಗುತ್ತದೆ. ಆದ್ದರಿಂದ ಆಳುವ ಜನರ ಈ ಅನ್ಯಾಯ, ಪ್ರತಿನಿಧಿಸುವ ಜನರ ಈ ನಿರ್ವೀರ್ಯತೆಯ ವಿರುದ್ಧ ಜನ ಸಿಡಿದೆದ್ದು, ಪರಿಹಾರ ಪಡೆದುಕೊಳ್ಳಬೇಕೆಂದು ಕೋರುತ್ತೇವೆ.

ಇಂತಿ

**ಕುಣಿಗಲ್ ತಾಲ್ಲೂಕು ರೈತ ಬಾಂಧವರು**

## ಹೇಮಾವತಿಯಿಂದ ಕೆ.ಆರ್.ಎಸ್‌ಗೆ ನೀರು ಬಿಟ್ಟಿರುವುದರ ವಿರುದ್ಧ ಪ್ರತಿಭಟನೆ

ಮಾನ್ಯರೆ,

ಕಳೆದ ವರ್ಷ ಕೆ.ಆರ್.ಎಸ್ ಅಣೆಕಟ್ಟೆಯಿಂದ ತಮಿಳುನಾಡಿಗೆ ಕದ್ದು ನೀರು ಬಿಟ್ಟದ್ದರ ಪರಿಣಾಮವಾಗಿ, ಇಂದು ಕೆ.ಆರ್.ಎಸ್ ಅಚ್ಚುಕಟ್ಟು ಪ್ರದೇಶದಲ್ಲಿ ನೀರು ಇಲ್ಲದೆ ಬೆಳೆಗಳು ಒಣಗುತ್ತಿವೆ. ಯಾರನ್ನೂ ವಿಶ್ವಾಸಕ್ಕೆ ತೆಗೆದುಕೊಳ್ಳದೆ ಕೆ.ಆರ್.ಎಸ್ ನಿಂದ ತಮಿಳುನಾಡಿಗೆ ರಾತ್ರೋರಾತ್ರಿ ತಮ್ಮ ಸ್ವಾರ್ಥ ರಾಜಕೀಯ ಲಾಭಕ್ಕಾಗಿ ನೀರು ಬಿಟ್ಟ ಮುಖ್ಯ ಮಂತ್ರಿಗಳು, ಈಗ ತುಮಕೂರು ಜಿಲ್ಲೆಗೆ ನ್ಯಾಯವಾಗಿ ಒದಗಿಸಬೇಕಾದ ಹೇಮಾವತಿ ಅಣೆಕಟ್ಟೆಯ ನೀರನ್ನು ಕೆ.ಆರ್.ಎಸ್ ಮುಖಾಂತರ ಮತ್ತೆ ತಮಿಳುನಾಡಿಗೆ ಬಿಡಲು ತೀರ್ಮಾನಿಸಿ ನೀರು ಬಿಟ್ಟಿದ್ದಾರೆ.

ತುಮಕೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಕುಡಿಯುವ ನೀರಿಗೂ ಬವಣೆ ಪಡುತ್ತಿರುವ ಈ ಪರಿಸ್ಥಿತಿಯಲ್ಲಿ, ತಮ್ಮ ರಾಷ್ಟ್ರೀಯ ರಾಜಕಾರಣದ ತೆವಲು ತೀರಿಸಿಕೊಳ್ಳಲು ತಮಿಳುನಾಡಿ ಮುಖ್ಯಮಂತ್ರಿ ಕರುಣಾನಿಧಿಯರನ್ನು ಓಲೈಸುವ ಸಲುವಾಗಿ, ಕರ್ನಾಟಕದ ಮುಖ್ಯಮಂತ್ರಿಗಳು, ಈ ರೈತ ವಿರೋಧಿ ತೀರ್ಮಾನ ತೆಗೆದುಕೊಂಡು ತಮ್ಮ ನೀಚತನವನ್ನು ಪ್ರದರ್ಶಿಸಿದ್ದಾರೆ. ತಮಿಳುನಾಡಿಗೆ ಕಳೆದ ವರ್ಷ ನೀರು ಬಿಡದಿದ್ದಲ್ಲಿ ಕೆ.ಆರ್.ಎಸ್ ಅಚ್ಚುಕಟ್ಟು ಪ್ರದೇಶದಲ್ಲಿ ಬೆಳೆ ಒಣಗುವ ಪ್ರಮೇಯವೇ ಬರುತ್ತಿರಲಿಲ್ಲ ಮತ್ತು ಈಗ ಹೇಮಾವತಿಯಿಂದ ಕೆ.ಆರ್.ಎಸ್‌ಗೆ ನೀರು ಬಿಡುವ ಅಗತ್ಯವೂ ಬರುತ್ತಿರಲಿಲ್ಲ.

ರಾಷ್ಟ್ರ ರಾಜಕಾರಣದ ಅಮಲಿನಲ್ಲಿ ರಾಜ್ಯದ ರೈತರ ಹಿತವನ್ನು ಬಲಿಕೊಡುತ್ತಿರುವ ರಾಜ್ಯಸರ್ಕಾರದ ಈ ತೀರ್ಮಾನದ ವಿರುದ್ಧ, ಹೇಮಾವತಿ ನೀರಿಗಾಗಿ ಕಾದು ಕುಳಿತಿರುವ ತುಮಕೂರು ಜಿಲ್ಲೆಯ ಜನತೆ ಪ್ರತಿಭಟಿಸುವುದು ಅವಶ್ಯಕವಾಗಿದೆ. ಈ ದಿಸೆಯಲ್ಲಿ ತುಮಕೂರು ನಗರದಲ್ಲಿ ತಾ।। 27-5-1996ನೇ ಸೋಮವಾರ ಬೆಳಿಗ್ಗೆ 11 ಗಂಟೆಯಿಂದ **ಪ್ರತಿಭಟನೆ ಹಾಗೂ ರಸ್ತೆ ತಡೆ ಕಾರ್ಯಕ್ರಮ ಹಮ್ಮಿಕೊಂಡಿದ್ದು** ಕಾರ್ಯಕ್ರಮದಲ್ಲಿ ಎಲ್ಲ ಪಕ್ಷದ ಮುಖಂಡರು, ಕಾರ್ಯಕರ್ತರು,ನಾಗರೀಕ ಬಂಧುಗಳು, ಹೆಚ್ಚಿನದಾಗಿ ಹೇಮಾವತಿ ನೀರಿನ ಫಲಾನುಭವಿಗಳಾದ ರೈತರು ಭಾಗವಹಿಸಿ ಕಾರ್ಯಕ್ರಮ ಯಶಸ್ವಿಗೊಳಿಸಬೇಕೆಂದು ಕೋರಿಕೆ.

ವಂದನೆಗಳೊಂದಿಗೆ

ಇಂತಿ

**ಹೇಮಾವತಿ ನಾಲಾ ಅಚ್ಚುಕಟ್ಟುದಾರರವೇದಿಕೆ, ತುಮಕೂರು**

## ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ, ತುಮಕೂರು

ಮಾನ್ಯ ರೈತ ಬಾಂಧವರೆ,

ಕರ್ನಾಟಕ ರಾಜ್ಯದ ಎರಡು ಪ್ರಮುಖ ನೀರಾವರಿ ಯೋಜನೆಗಳಾದ ಕೃಷ್ಣ ಮತ್ತು ಕಾವೇರಿ ನೀರಾವರಿ ಯೋಜನೆಗಳ ನೀರನ್ನು ಬಳಸಿಕೊಳ್ಳುವುದರಲ್ಲಿ ವಿಶೇಷ ಪರಿಸ್ಥಿತಿ ಸೃಷ್ಟಿಯಾಗಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ಸರ್ಕಾರ ಯಾವುದೇ ವಿಶೇಷ ಕಾರ್ಯಕ್ರಮವನ್ನು ರೂಪಿಸಿಕೊಳ್ಳದಿರುವುದು ದುರಾದೃಷ್ಟಕರ ಸಂಗತಿ. ಈ ಯೋಜನೆಗಳ, ಅದರಲ್ಲಿಯೂ ಹೇಮಾವತಿ ಯೋಜನೆಯ ಅನುಷ್ಠಾನವನ್ನು ತ್ವರಿತಗೊಳಿಸಲು ಅವಶ್ಯಕವಾಗಿ ಬೇಕಾಗಿರುವ ಹಣ ಒದಗಿಸದೆ ಇರುವುದರಿಂದ, ಮೊದಲಿಗೆ ಚುರುಕಾಗಿ ಪ್ರಾರಂಭವಾದ ಕೆಲಸಗಳು ಸ್ಥಗಿತಗೊಂಡಿವೆ. ಆದ್ದರಿಂದ ಈ ಕೆಲಸಗಳ ಪ್ರಗತಿಯನ್ನು ತ್ವರಿತಗೊಳಿಸಲು ಪಕ್ಷಾತೀತವಾಗಿ ಎಲ್ಲರೂ ಹೋರಾಡುವುದು ಅವಶ್ಯಕವಾಗಿದೆ.

ಆದ್ದರಿಂದ ತಾ॥ 18-10-1993ನೇ ಸೋಮವಾರ ಬೆಳಿಗ್ಗೆ 10 ಗಂಟೆಗೆ ಗುಬ್ಬಿ ಪಟ್ಟಣದ ಜೂನಿಯರ್ ಕಾಲೇಜ್ ಮೈದಾನದಲ್ಲಿ, ತುಮಕೂರು ಜಿಲ್ಲೆ ಮತ್ತು ನಾಗಮಂಗಲ ತಾಲ್ಲೂಕಿನ ಹೇಮಾವತಿ ನಾಲಾ ಅಚ್ಚುಕಟ್ಟು ಪ್ರದೇಶದ ರೈತರ ಸಮಾವೇಶವನ್ನು ಕರೆಯಲಾಗಿದೆ. ಈ ಅಪೂರ್ವ ಸಮಾವೇಶಕ್ಕೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಶ್ರೀಶ್ರೀಶ್ರೀ ಪರಮಪೂಜ್ಯ ಡಾ. ಶಿವಕುಮಾರ ಸ್ವಾಮೀಜಿಗಳವರನ್ನು ಮತ್ತು ಆದಿಚುಂಚನಗಿರಿ ಕ್ಷೇತ್ರಾಧ್ಯಕ್ಷರಾದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮೀಜಿಯವರುಗಳನ್ನು ಮತ್ತು ರಾಜ್ಯದ ಮಾನ್ಯ ಮುಖ್ಯಮಂತ್ರಿಗಳು, ನೀರಾವರಿ ಮಂತ್ರಿಗಳು, ಅಚ್ಚುಕಟ್ಟು ಪ್ರದೇಶದ ಮಂತ್ರಿಗಳನ್ನು, ಸಂಸತ್ ಸದಸ್ಯರುಗಳನ್ನು ಹಾಗೂ ಎಲ್ಲಾ ರಾಜಕೀಯ ಪಕ್ಷಗಳ ಮುಖಂಡರುಗಳನ್ನು ಆಹ್ವಾನಿಸಲಾಗುವುದು.

ರೈತ ಬಾಂಧವರುಗಳು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಈ ಅಪೂರ್ವ ಸಮಾವೇಶವನ್ನು ಯಶಸ್ವಿಗೊಳಿಸಬೇಕಾಗಿ ಕೋರುತ್ತೇವೆ.

**ಹೆಚ್. ನಿಂಗಯ್ಯ** **ಬಿ.ಎಸ್. ಸಿದ್ದಲಿಂಗೇಗೌಡ** **ವೈ.ಕೆ ರಾಮಯ್ಯ**

ಅಧ್ಯಕ್ಷರು ಹಾಗೂ ಶಾಸಕರು

ಸಂಚಾಲಕರು, ಸಹಸಂಚಾಲಕರು ಮತ್ತು ಕಾರ್ಯಕಾರಿ ಸಮಿತಿ ಸದಸ್ಯರು

# ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ

## ರೈತರ ಸಭೆ

ತಾ. 23-6-1998 ನೇ ಮಂಗಳವಾರ, ಬೆಳಿಗ್ಗೆ 10-00 ಗಂಟೆಗೆ

ಸ್ಥಳ: ವುಡ್‌ಲ್ಯಾಂಡ್ಸ್ ಹೋಟೆಲ್ ಸಭಾಂಗಣ, ಕೆ.ಎಸ್.ಆರ್.ಟಿ.ಸಿ ಬಸ್ ಸ್ಟಾಂಡ್ ಎದುರು

ಮಾನ್ಯರೆ,

ಹಾಸನ ಜಿಲ್ಲೆಯ ರೈತರು ತಮಗೆ ಬರಬೇಕಾದ ಪರಿಹಾರ ಪಡೆದುಕೊಳ್ಳಲು ಸರ್ಕಾರವನ್ನು ಒತ್ತಾಯಿಸುವ, ತುಮಕೂರು ಜಿಲ್ಲೆಗೆ ಹರಿದು ಬರುವ ಹೇಮಾವತಿ ಕಾಲುವೆಗೆ ಮಣ್ಣು ಸುರಿದು ನೀರು ಹರಿದು ಬರದಂತೆ ಎರಡು ತಿಂಗಳುಗಳಿಂದ ಅಡ್ಡಿ ಮಾಡಿರುತ್ತಾರೆ. ಇದರಿಂದಾಗಿ ತಿಪಟೂರು ಮತ್ತು ತುಮಕೂರು ಪಟ್ಟಣಗಳ ಕುಡಿಯುವ ನೀರಿಗೆ ತೊಂದರೆ ಆಗಿದೆ. ಅಲ್ಲದೆ, ಜಿಲ್ಲೆಯ ಅನೇಕ ಕೆರೆಗಳ ಮೂಲಕ ಬೇಸಾಯಕ್ಕೆ ಬರಬೇಕಾದ ನೀರೂ ಕೂಡಾ ಲಭ್ಯವಿಲ್ಲದಾಗಿದೆ. ಮಂಡ್ಯ ಜಿಲ್ಲೆಯ ರೈತರು ಹಾಗೂ ಜನಪ್ರತಿನಿಧಿಗಳು, ಕೃಷ್ಣರಾಜಸಾಗರ ಅಣೆಕಟ್ಟಿನ ಅಚ್ಚುಕಟ್ಟು ಪ್ರದೇಶಕ್ಕೆ, ಹೇಮಾವತಿ ನೀರನ್ನು ಬಿಡಬೇಕೆಂದು ಒತ್ತಾಯಿಸುತ್ತಿದ್ದಾರೆ. ಆದರೆ ತುಮಕೂರು ಜಿಲ್ಲೆಯಲ್ಲಿ ಮುಂಗಾರು ಸಂಪೂರ್ಣವಾಗಿ ವಿಫಲವಾಗಿದ್ದು, ನೀರಿಗಾಗಿ ಜನರು ಆಹಾಕಾರಪಡುತ್ತಿದ್ದರೂ, ನಮ್ಮ ಜಿಲ್ಲೆಯ ಜನಪ್ರತಿನಿಧಿಗಳು ಮೌನವಾಗಿದ್ದಾರೆ.

ಅಡ್ಡಗಟ್ಟಿರುವ ಕಾಲುವೆಯನ್ನು ತೆರವು ಪಡಿಸಿ ಈ ಮುಂಗಾರಿನಲ್ಲಿ ಹೇಮಾವತಿ ನೀರು ಜಿಲ್ಲೆಗೆ ಹರಿದು ಬರಲು ಅವಕಾಶ ಮಾಡದಿದ್ದರೆ ಇಡೀ ವರ್ಷ ತುಮಕೂರು ಜಿಲ್ಲೆಯ ರೈತರು ಹೇಮಾವತಿ ನೀರಿನಿಂದ ವಂಚಿತರಾಗಬೇಕಾಗುತ್ತದೆ. ಕಾಲುವೆಯ ಮಣ್ಣು ತೆಗೆಯಿಸಿ ತುಮಕೂರು ಜಿಲ್ಲೆಗೆ ನೀರು ಹರಿದು ಬಿಡುವಂತೆ ಕೋರಿ ಈಗಾಗಲೇ ಸರ್ಕಾರಕ್ಕೆ ಪತ್ರ ಬರೆಯಲಾಗಿದೆ. ಆದರೂ ಏನೂ ಪ್ರಯೋಜನವಾಗಿರುವುದಿಲ್ಲ.

ಆದ್ದರಿಂದ ಈ ವಿಷಯದಲ್ಲಿ ಚರ್ಚೆ ಮಾಡಿ ಸೂಕ್ತ ತೀರ್ಮಾನ ತೆಗೆದುಕೊಳ್ಳಲು ಜಿಲ್ಲೆಯ, ಅದರಲ್ಲಿಯೂ ಹೇಮಾವತಿ ಅಚ್ಚುಕಟ್ಟು ಪ್ರದೇಶದ ಪ್ರಮುಖ ರೈತರ ಸಭೆಯನ್ನು ತಾ.23-6-1998ನೇ ಮಂಗಳವಾರ ಬೆಳಿಗ್ಗೆ 11-00 ಗಂಟೆಗೆ ತುಮಕೂರು ಬಸ್ ನಿಲ್ದಾಣದ ಎದುರಿನ ವುಡ್‌ಲ್ಯಾಂಡ್ಸ್ ಹೋಟೆಲ್ ಸಭಾಂಗಣದಲ್ಲಿ ಕರೆಯಲಾಗಿದೆ . ಈ ಸಭೆಗೆ ಜಿಲ್ಲೆಯ ಎಲ್ಲಾ ಪಕ್ಷಗಳ ಮಾನ್ಯ ಲೋಕಸಭಾ ಸದಸ್ಯರುಗಳು, ಶಾಸಕರುಗಳು ಹಾಗೂ ಪ್ರಮುಖರನ್ನು ಆಹ್ವಾನಿಸಲಾಗಿದೆ. ಆದ್ದರಿಂದ ದಯಮಾಡಿ ರೈತ ಬಂಧುಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಸಭೆಯಲ್ಲಿ ಭಾಗವಹಿಸಿ, ತಮ್ಮ ಅಮೂಲ್ಯ ಸಲಹೆ, ಸೂಚನೆ ನೀಡಲು ಕೋರುತ್ತೇನೆ.

ತಮ್ಮ ವಿಶ್ವಾಸಿ

**ವೈ.ಕೆ.ರಾಮಯ್ಯ, ಅಧ್ಯಕ್ಷರು**

**ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ (ರಿ), ತುಮಕೂರು ಜಿಲ್ಲೆ**

## ‘ಹೇಮಾವತಿ ನೀರು ಬಿಡುಗಡೆಗೆ ಒತ್ತಾಯಿಸಿ ತುಮಕೂರು ಜಿಲ್ಲಾ ಬಂದ್’

ದಿನಾಂಕ 20-7-1998ನೇ ಸೋಮವಾರ

ಸಮಸ್ತ ನಾಗರೀಕ ಬಂಧುಗಳೇ,

ಬಾಗೂರು-ನವಿಲೆ ಸುರಂಗ ಕಾಲುವೆಯಲ್ಲಿ ಮಣ್ಣು ತುಂಬಿ, ಹಾಸನ ಜಿಲ್ಲೆಯ ಜನ ತುಮಕೂರು ಜಿಲ್ಲೆಗೆ ಹರಿದು ಬರಬೇಕಾಗಿರುವ ಹೇಮಾವತಿ ನೀರನ್ನು ತಡೆ ಹಿಡಿದಿರುವ ಹಿನ್ನೆಲೆಯಲ್ಲಿ **ತುಮಕೂರು ಜಿಲ್ಲಾ ಬಂದ್** ಮತ್ತು **ರಸ್ತೆ ತಡೆ ಕಾರ್ಯಕ್ರಮವನ್ನು ತಾ.20-7-1998ರಂದು ಆಚರಿಸಬೇಕೆಂದು** ಸಮಸ್ತ ಜಿಲ್ಲೆಯ ನಾಗರೀಕರು ಮತ್ತು ರೈತರಲ್ಲಿ ಮನವಿ ಮಾಡುತ್ತೇವೆ. ಜಿಲ್ಲೆಯ ಬಂದ್ ಮತ್ತು ರಸ್ತೆ ತಡೆಯಿಂದ ಸಾರ್ವಜನಿಕರಿಗಾಗುವ ಆಸಾನುಕೂಲಕ್ಕಾಗಿ ಕ್ಷಮೆ ಕೋರುತ್ತೇವೆ. ಆದರೆ ಜಿಲ್ಲೆಯ ಹಿತದೃಷ್ಟಿಯಿಂದ ಈ ಹೋರಾಟ ಅನಿವಾರ್ಯವಾಗಿದ್ದು ನಾಗರೀಕರು, ಜಿಲ್ಲೆಯಾದ್ಯಂತ ಎಲ್ಲಾ ಶಾಲೆ, ಕಾಲೇಜ್, ಬ್ಯಾಂಕ್‌ಗಳು, ಸಂಘ-ಸಂಸ್ಥೆಗಳು, ಅಂಗಡಿ ಮುಗ್ಗಟ್ಟುಗಳು, ಚಿತ್ರಮಂದಿರಗಳು, ಸರ್ಕಾರಿ ಕಛೇರಿಗಳನ್ನು ಮುಚ್ಚುವುದರೊಂದಿಗೆ ಎಲ್ಲಾ ವಾಹನ ಸಂಚಾರವನ್ನು ಸ್ಥಗಿತಗೊಳಿಸುವುದರೊಂದಿಗೆ, ಸಮಸ್ತರೂ ಸಹಕರಿಸಿ ಅಂದು ಜಿಲ್ಲೆಯಾದ್ಯಂತ ಬಂದ್ ಆಚರಿಸಿ ಸಹಕರಿಸಬೇಕೆಂದು ಈ ಮೂಲಕ ವಿನಂತಿ ಮಾಡಿಕೊಳ್ಳುತ್ತೇವೆ.

ವಂದನೆಗಳೊಂದಿಗೆ,

**ರಸ್ತೆ ತಡೆಯಲ್ಲಿ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ನೀರು ಬಿಡುವವರೆಗೂ ದಾರಿ ದಾರಿಬಿಡುವುದಿಲ್ಲ ಎಂದು ಘೋಷಿಸಿ**

**ಹೇಮಾವತಿ ನಾಲಾ ಅಚ್ಚುಕಟ್ಟುದಾರರ ವೇದಿಕೆ ( ರಿ)**
**ತುಮಕೂರು**

# ಮೈಸೂರು ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಮಾವೇಶ

ಮಾನ್ಯರೆ,

ರಾಷ್ಟ್ರದ ರೇಷ್ಮೆ ಉತ್ಪಾದನೆಯಲ್ಲಿ ಕರ್ನಾಟಕ ರಾಜ್ಯದ್ದು ಸಿಂಹಪಾಲು. ಕರ್ನಾಟಕದ ಈ ಹೆಮ್ಮೆಯ ಸಾಧನೆಗೆ ಮೈಸೂರು ಬಿತ್ತನೆ ವಲಯದ ರೈತರ ಕಟಿಬದ್ಧವಾದ ಶ್ರಮದಿಂದ ಬೆಳೆಯುವ ಬಿತ್ತನೆಗೂಡು ಪ್ರಮುಖ ಕೊಡುಗೆ.

ಹಿಂದೆ ಇದ್ದ ಅನೇಕ ಪ್ರದೇಶಗಳನ್ನು ಕೈಬಿಟ್ಟು, ಕುಣಿಗಲ್, ಮಾಗಡಿ ತಾಲ್ಲೂಕು ಮತ್ತು ತುಮಕೂರು ತಾಲ್ಲೂಕಿನ ಹೆಬ್ಬೂರು ಹೋಬಳಿ ಪ್ರದೇಶವನ್ನು, ಮೈಸೂರು ಬಿತ್ತನೆ ವಲಯವೆಂದು ಸರ್ಕಾರ ನಿಗದಿ ಮಾಡಿದೆ. ಈ ಪ್ರದೇಶದ ರೈತರು ಸರ್ಕಾರ ನಿಗದಿಮಾಡಿರುವ ಮೈಸೂರು ಬಿತ್ತನೆ ತಳಿಯ ಗೂಡನ್ನು ಮಾತ್ರ ಬೆಳೆಯಬೇಕೆಂಬ ನಿರ್ಬಂಧವಿದೆ. ಬೇರೆ ತಳಿಯನ್ನು ಬೆಳೆಯುವುದು ಇಲ್ಲಿ ಅಪರಾಧವಾಗುತ್ತದೆ. ಹೀಗೆ ಸರ್ಕಾರ ನಿಗದಿಪಡಿಸಿದ ನಿರ್ದಿಷ್ಟ ತಳಿಯನ್ನೇ ಬೆಳೆದ ರೈತರು ತಮ್ಮ ಗೂಡನ್ನು ಸರ್ಕಾರಿ ಗೂಡು ಮಾರು ಕಟ್ಟೆಯಲ್ಲಿಯೇ ಮಾರಾಟ ಮಾಡಬೇಕೆಂಬುದು ಮತ್ತೊಂದು ನಿರ್ಭಂದ.

ಇಂತಹುದೇ ತಳಿಯನ್ನು ಬೆಳೆಯಬೇಕೆಂದು, ಇಂತಹ ಮಾರುಕಟ್ಟೆಯಲ್ಲೇ ಇಂತಿಷ್ಟೇ ಬೆಲೆಗೆ ಮಾರಬೇಕೆಂಬ ಕಾನೂನಿನಿಂದಾಗಿ, ಅನಾದಿಕಾಲದಿಂದಲೂ ಈ ಪ್ರದೇಶದ ರೈತರು ತಮ್ಮ ಬೆಳೆಗೆ ಸರಿಯಾದ ಬೆಲೆ ಸಿಗದೆ ತೊಂದರೆ ಪಡಬೇಕಾಯಿತು. ಈ ಪ್ರದೇಶದ ಬೆಳೆಗಾರರಿಗೆ ಆಗಿರುವ ಈ ಅನ್ಯಾಯವನ್ನು ಸರಿಪಡಿಸಲು 1980ರ ದಶಕದಲ್ಲಿ ಅನೇಕ ಜನರ ಹೋರಾಟದ ಫಲವಾಗಿ ರಾಷ್ಟ್ರದಲ್ಲಿಯೇ ಮೊದಲನೇ ಬಾರಿಗೆ, ವ್ಯವಸಾಯದ ಉತ್ಪನ್ನಗಳಲ್ಲಿ ಒಂದಾದ ಮೈಸೂರು ಬಿತ್ತನೆ ತಳಿ ರೇಷ್ಮೆ ಗೂಡನ್ನು ಬಿತ್ತನೆ ತೆಗೆದುಕೊಳ್ಳದೇ ಇದ್ದಾಗ **ಬೋನಸ್** ಕೊಡುವ ಪದ್ಧತಿಯನ್ನು ಜಾರಿಗೆ ತರಲಾಯಿತು. ಅಂದಿನಿಂದ ವಿವಿಧ ಸರ್ಕಾರಗಳು ಬೋನಸ್ ದರವನ್ನು ಪರಿಷ್ಕರಿಸುತ್ತಾ ಬಂದು, ಈಗ ಒಂದು ಕೆ.ಜಿ. ಗೂಡಿಗೆ 25 ರೂ. ಬೋನಸ್ ಕೊಡುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಎಲಾ ಕ್ಷೇತ್ರಗಳಲ್ಲಿ ಬೆಲೆ ಏರಿಕೆ ಉಂಟಾಗಿದೆ. ಆದರೆ ಈಗ ರಾಜ್ಯದಲ್ಲಿ ಅಧಿಕಾರದಲ್ಲಿರುವ ಜನತಾದಳ ಸರ್ಕಾರ ಎಷ್ಟು ಒತ್ತಾಯಿಸಿದರೂ ರೇಷ್ಮೆ ಬೆಳೆಗಾರರಿಗೆ **ಬೋನಸ್ ಹೆಚ್ಚಿಸಲು ನಿರಾಕರಿಸಿದೆ.** ಅದೇ ರೀತಿ ರೇಷ್ಮೆ ಬಿತ್ತನೆ ಗೂಡಿನ ಕನಿಷ್ಠ ಬೆಲೆಯನ್ನು 150 ರೂ ನಿಂದ ಹೆಚ್ಚಿಗೆ ಮಾಡಲು ನಿರಾಕರಿಸಿದೆ. ಸರ್ಕಾರದ ಈ ರೈತ ವಿರೋಧಿ ಧೋರಣೆಯಿಂದಾಗಿ 'ದೇಶದಲ್ಲಿ ಒಂದು ಕೆ.ಜಿ. ಈರುಳ್ಳಿಯ ಬೆಲೆ 50 ರೂ. ಇರುವಾಗ ಒಂದು ಕೆಜಿ ಬಿತ್ತನೆ ರೇಷ್ಮೆ ಗೂಡನ್ನು ರೈತ 30 ರೂ.ಗೆ ಮಾರಾಟ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ.

ಈ ರಾಷ್ಟ್ರ ರೇಷ್ಮೆದ ಆಮದು ನೀತಿಯಿಂದಾಗಿ ರೇಷ್ಮೆ ಉತ್ಪಾದಕರಿಗೆ ನ್ಯಾಯಬೆಲೆ ಸಿಗುತ್ತಿಲ್ಲ. ಆದ್ದರಿಂದ ಹೊರ ದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುವುದು ನಿಲ್ಲಿಸಬೇಕೆಂದು,

ಕೇಂದ್ರ ಸರ್ಕಾರಕ್ಕೆ ಅನೇಕ ಸಲ ಕೋರಿಕೊಂಡಿದ್ದಾಗ್ಯೂ ಕೇಂದ್ರಸರ್ಕಾರ ರೇಷ್ಮೆ ವ್ಯಾಪಾರಿಗಳ ಹಿತ ರಕ್ಷಿಸಲು ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಿಲ್ಲ.

ಬೋನಸ್ ದರ ಹೆಚ್ಚಿಸಲು, ರೇಷ್ಮೆ ಉತ್ಪಾದಕರಿಗೆ ನ್ಯಾಯಬೆಲೆ ಪರಿಷ್ಕರಿಸಲು, ಅನಿಷ್ಟ ರೇಷ್ಮೆ ಆಮದು ಪದ್ಧತಿಯನ್ನು ರದ್ದು ಮಾಡುವಂತೆ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳನ್ನು ಒತ್ತಾಯಿಸುವುದು ರೇಷ್ಮೆ ಬೆಳೆಗಾರರಿಗೆ ಈಗ ಅನಿವಾರ್ಯವಾಗಿದೆ.

ಆದ್ದರಿಂದ ಈ ವಿಷಯಗಳೂ ಸೇರಿದಂತೆ, ಬೆಳೆಗಾರರಿಗೆ ಸಂಬಂಧಿಸಿದ ಎಲ್ಲಾ ಸಮಸ್ಯೆಗಳ ಬಗ್ಗೆ ಚರ್ಚಿಸಿ, ಬೇಡಿಕೆಗಳನ್ನು ಈಡೇರಿಸುವಂತೆ ಸರ್ಕಾರವನ್ನು ಒತ್ತಾಯಿಸಲು, ದಿನಾಂಕ 18-11-1998ನೇ ಬುಧವಾರದಂದು ಬೆಳಿಗ್ಗೆ 10 ಗಂಟೆಗೆ ಕುಣಿಗಲ್‌ನ ಕೃಷಿ ಉತ್ಪನ್ನ ಮಾರುಕಟ್ಟೆ ಆವರಣದಲ್ಲಿ, ಮೈಸೂರು ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಭೆ ಕರೆಯಲಾಗಿದೆ.

ಈ ಸಭೆಯಲ್ಲಿ ಭಾಗವಹಿಸಿ ಬೆಳೆಗಾರರಿಗೆ ಶಕ್ತಿ ತುಂಬಲು ವಿರೋಧ ಪಕ್ಷದ ಅನೇಕ ನಾಯಕರನ್ನು ಆಹ್ವಾನಿಸಲಾಗಿದೆ. ಈ ಕೆಳಕಂಡ ಬೇಡಿಕೆಗಳನ್ನು ಈಡೇರಿಸುವಂತೆ ಸರ್ಕಾರಗಳನ್ನು ಒತ್ತಾಯಿಸಲು **ಮಾಗಡಿ,ಕುಣಿಗಲ್ ಮತ್ತು ಹೆಬ್ಬೂರು ಪ್ರಾಂತ್ಯದ** ರೇಷ್ಮೆ ಬೆಳೆಗಾರರು ಹಾಗೂ ಹಿತೈಷಿಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಸಭೆಯಲ್ಲಿ ಭಾಗವಹಿಸಿ ಯಶಸ್ವಿಗೊಳಿಸಬೇಕೆಂದು ಕೋರಿಕೆ.

**ಬೇಡಿಕೆಗಳು**

1. ರೇಷ್ಮೆ ಬಿತ್ತನೆ ಗೂಡಿನ 'ಬೋನಸ್' ದರವನ್ನು ರೂ. 25ರಿಂದ 50 ರೂ.ಗೆ ಹೆಚ್ಚಿಸುವುದು.
2. ಬಿತ್ತನೆಗೂಡಿನ ಕನಿಷ್ಠ ಬೆಲೆಯನ್ನು ರೂ. 150ರಿಂದ 250 ರೂ.ಗಳಿಗೆ ನಿಗಧಿಗೊಳಿಸುವುದು.
3. ರೈತರ ಬೆಳೆಗಳು ಕೆಡುವುದನ್ನು ತಪ್ಪಿಸಲು, ಇಲಾಖೆಯವರು ರೋಗರಹಿತ ಮೊಟ್ಟೆ ಒದಗಿಸುವಂತೆ ಒತ್ತಾಯಿಸುವುದು.
4. ರಾಷ್ಟ್ರದ ರೇಷ್ಮೆ ಉತ್ಪಾದಕರಿಗೆ ಮಾರಕವಾಗಿರುವ ರೇಷ್ಮೆ ಆಮದು ಪದ್ಧತಿಯನ್ನು ರದ್ದು ಪಡಿಸುವಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸುವುದು

ತಮ್ಮ ವಿಶ್ವಾಸಿ

**ವೈ.ಕೆ. ರಾಮಯ್ಯ**
ಮಾಜಿ ಸಚಿವರು

## ಮಾನ್ಯ ಶ್ರೀ ವೈ.ಕೆ ರಾಮಯ್ಯ ತೋಟಗಾರಿಕೆ ಸಚಿವರು, ಇವರ ಕಾಲ್ನಡಿಗೆ ಪ್ರವಾಸ

ಮಾನ್ಯರೇ,

ರಾಷ್ಟ್ರದ ಸಮಗ್ರ ಅಭಿವೃದ್ಧಿ ಆಗಬೇಕಾಗಿದ್ದರೆ ಜರೂರಾಗಿ ಜಲ ಮತ್ತು ವಾಯು ಮಾಲಿನ್ಯ ತಡೆಗಟ್ಟಲು ಆದಷ್ಟು ಗಿಡಮರಗಳನ್ನು ನೆಡುವುದು. ಮಿತಿಮೀರಿದ ಜನಸಂಖ್ಯೆಯನ್ನು ಹತೋಟಿಯಲ್ಲಿಡುವುದು. ಪ್ರಜಾಪ್ರಭುತ್ವದ ಪ್ರಜೆಯ ಕರ್ತವ್ಯ ಪ್ರಜ್ಞೆ ಮೂಡಿಸಲು, ಈ ರಾಷ್ಟ್ರದ ಜನಸಾಮಾನ್ಯರನ್ನು ವಿದ್ಯಾವಂತರನ್ನಾಗಿ ಮಾಡುವುದು. ಈ ಮೂರು ಕಾರ್ಯಕ್ರಮಗಳು ಅತಿ ಜರೂರಾಗಿ ಆಗಬೇಕು ಎನ್ನುವುದು ನನ್ನ ನಂಬಿಕೆ. ಇವುಗಳನ್ನು ಕಾರ್ಯರೂಪಕ್ಕೆ ತರುವ ಇಚ್ಛೆಯಿಂದ, ನನ್ನ ಕ್ಷೇತ್ರದಲ್ಲಿ ಗಿಡಮರಗಳನ್ನು ನೆಡುವುದು, ಕುಟುಂಬಕಲ್ಯಾಣ ಯೋಜನೆಯ ಕಾರ್ಯಕ್ರಮಗಳನ್ನು ಕಳೆದ ವರ್ಷದಿಂದ ಹಾಕಿಕೊಂಡಿದ್ದೇವೆ. ಇದರ ಅಂಗವಾಗಿ ನನ್ನ ಕ್ಷೇತ್ರದ **ತುಮಕೂರಿನಿಂದ ಬೆಂಗಳೂರು ಜಿಲ್ಲೆ ಗಡಿಯವರೆಗೆ ಕಳೆದ ವರ್ಷ ಸುಮಾರು 80.ಕಿ.ಮಿ. ದೂರದಷ್ಟು ಕಾಲ್ನಡಿಗೆಯಲ್ಲಿ ಪ್ರವಾಸ ಮಾಡಿ,** ನಾನು ಮತ್ತು ನನ್ನ ಸ್ನೇಹಿತರು ಈ ಕಾರ್ಯ ಕ್ರಮಗಳ ಬಗ್ಗೆ ಜನರಿಗೆ ಮನವರಿಕೆ ಮಾಡಿದ್ದೇವೆ. ಈ ಕಾರ್ಯಕ್ರಮವನ್ನು ಈ ವರ್ಷವೂ ಮುಂದುವರಿಸಬೇಕೆಂಬ ಇಚ್ಛೆಯಿಂದ **ಕುಣಿಗಲ್‌ನಿಂದ ಮದ್ದೂರುವರೆಗಿನ ರಾಜ್ಯ ಹೆದ್ದಾರಿಯನ್ನು ಕಾಲ್ನಡಿಗೆಯಲ್ಲಿ ಪ್ರವಾಸ ಮಾಡಿ, ದಾರಿಯ ಉದ್ದಕ್ಕೂ ಗಿಡಮರಗಳನ್ನು ನೆಡುವುದು, ಕುಟುಂಬ ಕಲ್ಯಾಣ ಯೋಜನೆಯ ಕಾರ್ಯಕ್ರಮಗಳನ್ನು ನಿರೂಪಿಸುವುದು ಮತ್ತು ವಿದ್ಯಾಭ್ಯಾಸದ ಬಗ್ಗೆ ತಿಳುವಳಿಕೆ ನೀಡಲು ಆಗಸ್ಟ್ ತಿಂಗಳು** 11,12, ಮತ್ತು 13ರಂದು ನಾನು ಮತ್ತು ನನ್ನ ಅಭಿಮಾನಿಗಳು ಈ ಕೆಳಕಂಡಂತೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದೇವೆ. ಈ ಕಾರ್ಯಕ್ರಮದಲ್ಲಿ ಕರ್ನಾಟಕ ರಾಜ್ಯದ ಅರಣ್ಯ ಇಲಾಖೆ ಸಚಿವರಾದ ಶ್ರೀ ಬಿ.ಎಸ್. ಬಾಗಲಕೋಟ್‌ರವರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಖಾತೆ ಸಚಿವರಾದ ಶ್ರೀ ಬಿ. ರಾಚಯ್ಯನವರು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಜಿ. ಸೋಮಶೇಖರ್‌ರವರು, ಹುಲಿಯೂರುದುರ್ಗ ಕ್ಷೇತ್ರದ ಶಾಸಕರಾದ ಶ್ರೀ ಡಿ. ನಾಗರಾಜಯ್ಯನವರು ಹಾಗೂ ಮದ್ದೂರು ಕ್ಷೇತ್ರದ ಶಾಸಕರಾದ ಶ್ರೀ ಅಪ್ಪಾಜಿ ಗೌಡರು ಭಾಗವಹಿಸಲಿದ್ದಾರೆ.

ಇಂತಿ ತಮ್ಮವ
**ವೈ.ಕೆ. ರಾಮಯ್ಯ**
ಸಚಿವರು, ತೋಟಗಾರಿಕೆ ಇಲಾಖೆ

## ಲೇಖಕರ ವಿಳಾಸ

**ಶ್ರೀ ಎಚ್. ವಿಶ್ವನಾಥ್**
ಸಹಕಾರ ಸಚಿವರು
ವಿಧಾನ ಸೌಧ, ಬೆಂಗಳೂರು - 560 001

**ಶ್ರೀ ಎಂ. ಆಂಜನೇಯ**
ನಿವೃತ್ತ ಉಪನ್ಯಾಸಕರು
ಕೋತಿತೋಪು
ತುಮಕೂರು - 572 101

**ಪ್ರೊ. ಜಯಪ್ರಕಾಶ್ ಗೌಡ**
ಕನ್ನಡ ಪ್ರಾಧ್ಯಾಪಕರು
ಪಿ.ಇ.ಎಸ್. ಕಾಲೇಜು
ಮಂಡ್ಯ

**ಡಾ. ದೇ.ಜವರೇ ಗೌಡ**
ವಿಶ್ರಾಂತ ಕುಲಪತಿಗಳು
ಕುವೆಂಪು ಟ್ರಸ್ಟ್
ಜಯಲಕ್ಷ್ಮೀ ಪುರಂ
ಮೈಸೂರು - 570 012

**ಶ್ರೀ ಸರಜೂ ಕಾಟ್ಕರ್**
ವರದಿಗಾರರು, ಇಂಡಿಯನ್ ಎಕ್ಸ್‌ಪ್ರೆಸ್
ಹೌಸಿಂಗ್ ಬೋರ್ಡ್ ಕಾಲೋನಿ,
ಬೆಳಗಾವಿ

**ಶ್ರೀ ಆ.ನಂ. ಎಲ್ಲಪ್ಪರೆಡ್ಡಿ**
9ಸಿ, 5ನೇ ಬ್ಲಾಕ್, ಐ.ಎ.ಎಸ್ ಕಾಲೋನಿ
ಹೆಚ್.ಎಸ್.ಆರ್ ಬಡಾವಣೆ 6ನೇ ಸೆಕ್ಟರ್
ಬೆಂಗಳೂರು - 560 034.

**ಶ್ರೀ ಬಿ.ಜಿ. ಬಣಕಾರ್**
ವಿಧಾನಸಭೆಯ ಮಾಜಿ ಅಧ್ಯಕ್ಷರು
ಹಿರೇಕೇರೂರು, ಹಾವೇರಿ ಜಿಲ್ಲೆ.

**ಶ್ರೀ ಗಂಗಾಧರ ಮೊದಲಿಯಾರ್**
ಹಿರಿಯ ಸಹ-ಸಂಪಾದಕರು
ಪ್ರಜಾವಾಣಿ,
75, ಮಹಾತ್ಮಗಾಂಧಿ ರಸ್ತೆ,
ಬೆಂಗಳೂರು - 560 001

**ಶ್ರೀ ಶಿವಾಜಿ ಗಣೇಶನ್**
ಹಿರಿಯ ಸಹ ಸಂಪಾದಕರು
ಪ್ರಜಾವಾಣಿ
75, ಮಹಾತ್ಮ ಗಾಂಧಿ ರಸ್ತೆ,
ಬೆಂಗಳೂರು - 560 001

**ಶ್ರೀ ಉದಯಶಂಕರ ಭಟ್**
ವರದಿಗಾರರು, ಪ್ರಜಾವಾಣಿ
3ನೇ ಕ್ರಾಸ್, 2ನೇ ಲಿಂಕ್ ರಸ್ತೆ
ಅಶೋಕ ನಗರ
ತುಮಕೂರು - 572 102

**ಡಾ. ಸಿದ್ಧಲಿಂಗಯ್ಯ**
ನಿರ್ದೇಶಕರು
ಕನ್ನಡ ಅಧ್ಯಯನ ಸಂಸ್ಥೆ
ಜ್ಞಾನಭಾರತಿ, ಬೆಂಗಳೂರು.

**ಪ್ರೊ. ಚಂದ್ರಶೇಖರ ಪಾಟೀಲ**
2750, 17 'ಎ' ಕ್ರಾಸ್, 6ನೇ ಮೇನ್
ಬನಶಂಕರಿ 2ನೇ ಹಂತ
ಬೆಂಗಳೂರು - 560 070

**ಶ್ರೀ ಎಂ.ವಿ. ವೆಂಕಟಪ್ಪ**
ವಿಧಾನಸಭಾ ಅಧ್ಯಕ್ಷರು
ವಿಧಾನ ಸೌಧ, ಬೆಂಗಳೂರು - 560 001

**ಶ್ರೀ ಕುಮಾರ್ ಬಂಗಾರಪ್ಪ**
ಸಣ್ಣ ನೀರಾವರಿ ರಾಜ್ಯ ಸಚಿವರು
ವಿಧಾನ ಸೌಧ, ಬೆಂಗಳೂರು - 560 001

**ಡಾ. ಶ್ರೀ ಶಿವಕುಮಾರ ಸ್ವಾಮೀಜಿ**
ಸಿದ್ಧಗಂಗಾ ಕ್ಷೇತ್ರ, ತುಮಕೂರು - 572 104

**ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ**
ಆದಿ ಚುಂಚನಗಿರಿ ಮಠ
ವಿಜಯನಗರ, ಬೆಂಗಳೂರು - 10

**ಶ್ರೀ ತೋಂಟದಾರ್ಯ ಸಿದ್ಧಲಿಂಗ ಸ್ವಾಮೀಜಿ**
ತೋಂಟದಾರ್ಯ ಸಂಸ್ಥಾನ ಮಠ
ಡಂಬಳ, ಗದಗ - 582 101

**ಶ್ರೀ ಹೆಚ್.ಸಿ. ಶ್ರೀಕಂಠಯ್ಯ**
ಕಂದಾಯ ಸಚಿವರು
ಕರ್ನಾಟಕ ಸರ್ಕಾರ
ವಿಧಾನ ಸೌಧ, ಬೆಂಗಳೂರು - 560 001

**ಡಾ. ಕರಿಗೌಡ ಬಿಚನಹಳ್ಳಿ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ - 583 221

**ಪ್ರೊ. ಹಿ.ಚಿ. ಬೋರಲಿಂಗಯ್ಯ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ - 583 221

**ಶ್ರೀ ಎಸ್. ಷಫಿ ಅಹಮದ್**
ವಿಧಾನಸಭೆಯ ಮಾಜಿ ಸದಸ್ಯರು
ಬಾರ್ ಲೈನ್, ತುಮಕೂರು - 572 101

**ಬಾ.ಹ. ರಮಾಕುಮಾರಿ, ಲೇಖಕಿ**
24ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ
ತುಮಕೂರು - 572 102

**ಶ್ರೀ ಬಿ.ಎಲ್. ಶಂಕರ್**
ವಿಧಾನ ಪರಿಷತ್ ಅಧ್ಯಕ್ಷರು
ವಿಧಾನ ಸೌಧ, ಬೆಂಗಳೂರು - 560 001

**ಶ್ರೀ ಎಚ್.ಎಸ್. ರಾಮಣ್ಣ**
ಸಂಪಾದಕರು
ತುಮಕೂರು ವಾರ್ತೆ
ಎಸ್.ಐ.ಟಿ. ಬಡಾವಣೆ,
ತುಮಕೂರು - 572 102

**ಶ್ರೀ ಕವಿತಾ ಕೃಷ್ಣ**
ನಂ.5, ಕಾವೇರಿ ರಸ್ತೆ
ಚಂದ್ರಮೌಳಿ ಬಡಾವಣೆ
ಕ್ಯಾತಸಂದ್ರ - 572 104,
ತುಮಕೂರು

**ಶ್ರೀ ಜಿ. ಇಂದ್ರಕುಮಾರ್**
ಪತ್ರಕರ್ತರು, 'ಗಂಗಾವಾಹಿನಿ'
ಪತ್ರಿಕಾ ಕಾರ್ಯಾಲಯ
ಕೋತಿತೋಪು, ತುಮಕೂರು - 572 101

**ಶ್ರೀವೈ.ಎಚ್. ಹುಚ್ಚಯ್ಯ**
ಜಿಲ್ಲಾ ಪಂಚಾಯತ್ ಸದಸ್ಯರು
ಕುಣಿಗಲ್, (ತುಮಕೂರು ಜಿಲ್ಲೆ)

**ಶ್ರೀ ಕೆ.ಎಚ್. ವೆಂಕಟೇಶ್**
ಹೊಸಪೆ
ಕುವೆಂಪು ನಗರ, ಕುಣಿಗಲ್ - 572 130

**ಶ್ರೀ ಕೆ. ಜೈರಾಜ್**
ಮ್ಯಾನೇಜಿಂಗ್ ಡೈರೆಕ್ಟರ್
ಕೆ.ಎಸ್.ಆರ್.ಟಿ.ಸಿ.
ಕೆಂಗಲ್ ಹನುಮಂತಯ್ಯ ರಸ್ತೆ
ಬೆಂಗಳೂರು.

**ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ**
ಸುತ್ತೂರು ಮಹಾ ಸಂಸ್ಥಾನ
ಚಾಮುಂಡಿ ಬೆಟ್ಟದ ತಪ್ಪಲು
ಮೈಸೂರು.

**ಶ್ರೀ ಆರ್. ಹಿತೇಂದ್ರ, ಐ.ಪಿ.ಎಸ್.**
ಜಿಲ್ಲಾ ಪೊಲೀಸ್ ಮುಖ್ಯಾಧಿಕಾರಿಗಳು
ತುಮಕೂರು ಜಿಲ್ಲೆ - 572 101

**ಶ್ರೀ ವಿ.ಎನ್. ಸುಬ್ಬರಾವ್**
ಕಾರ್ಯನಿರ್ವಾಹಕ ಸಂಪಾದಕ
ನಂ.2, ರೆಸಿಡೆನ್ಸಿ ರೋಡ್
ಸಂಯುಕ್ತ ಕರ್ನಾಟಕ, ಬೆಂಗಳೂರು - 560 025

**ಶ್ರೀ ಕೆ. ಎಸ್. ಕುಮಾರಸ್ವಾಮಿ**
2222/1, ರೈಲುನಿಲ್ದಾಣ ರಸ್ತೆ
ಗಾಂಧಿನಗರ, ತುಮಕೂರು - 572102

**ಪ್ರೊ. ಕಾಳೇಗೌಡ ನಾಗವಾರ**
ಪ್ರಾಧ್ಯಾಪಕರ ನಿವಾಸ ಪಿ-6
ಮಾನಸ ಗಂಗೊತ್ರಿ, ಮೈಸೂರು - 570 006

**ಶ್ರೀ ಎಸ್. ಕೃಷ್ಣಯ್ಯ**
ಪ್ರಾಂಶುಪಾಲರು,
'ಅರಿವು' 2ನೇ ಕ್ರಾಸ್,
ಅಶೋಕ ನಗರ, ತುಮಕೂರು - 570 102

**ಡಾ. ಡಿ.ಕೆ. ರಾಜೇಂದ್ರ,**
ನಂ.48, 'ವಂದನ'
ಮಾರುತಿ ದೇವಸ್ಥಾನ ರಸ್ತೆ
ಸರಸ್ವತಿಪುರಂ, ಮೈಸೂರು - 9

**ಎಸ್. ಷಡಕ್ಷರಯ್ಯ**
ನಿವೃತ್ತ ರೇಷ್ಮೆ ಕೃಷಿ ಉಪನಿರ್ದೇಶಕರು
ನೆಲಮಂಗಲ, ಬೆಂಗಳೂರು ಗ್ರಾ.ಜಿಲ್ಲೆ

**ಶ್ರೀ ಎನ್. ಕೃಷ್ಣಪ್ಪ**
ಕೋಡಿಪಾಳ್ಯ, ಮಾಗಡಿ ತಾಲ್ಲೂಕು
ಬೆಂಗಳೂರು ಗ್ರಾ. ಜಿಲ್ಲೆ

**ಅಮೃತೂರು ರಾಮಚಂದ್ರ**
ಅಮೃತೂರು, ಕುಣಿಗಲ್ ತಾಲ್ಲೂಕು
ತುಮಕೂರು ಜಿಲ್ಲೆ

**ಶ್ರೀ ಎಚ್. ನಿಂಗಯ್ಯ**
ಮಾರುತಿ ನಿಲಯ
ಹನುಮಂತಪುರ ಬೆಳಗುಂಬ ರಸ್ತೆ
ತುಮಕೂರು - 572 103

**ಶ್ರೀ ಟಿ.ಎಚ್. ಗುರುಚರಣ್ ಸಿಂಗ್**
ಪತ್ರಕರ್ತರು
ಕುಣಿಗಲ್, ತುಮಕೂರು ಜಿಲ್ಲೆ

**ಶ್ರೀ ಕೆ. ಸತ್ಯನಾರಾಯಣ**
ಕನ್ನಡಪ್ರಭ
ಕ್ವೀನ್ಸ್ ರಸ್ತೆ, ಬೆಂಗಳೂರು-560 001

**ಡೇವಿಡ್ ಸಿಮೆಯೋನ್**
ಕರ್ನಾಟಕ ವಿಧಾನ ಪರಿಷತ್ತು
ವಿಧಾನಸೌಧ, ಬೆಂಗಳೂರು - 560001

**ಶ್ರೀ ಎಸ್.ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ
ವಿಧಾನಸೌಧ, ಬೆಂಗಳೂರು - 560001

**ಶ್ರೀ ಆರ್.ವಿ. ದೇಶಪಾಂಡೆ**
ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು
ಕರ್ನಾಟಕ ಸರ್ಕಾರ
ವಿಧಾನಸೌಧ, ಬೆಂಗಳೂರು - 560001

**ಪ್ರೊ. ಜಿ.ವಿ. ಆನಂದಮೂರ್ತಿ**
'ಅಕ್ಕರೆ' ವಾಟರ್ ಟ್ಯಾಂಕ್ ಪೂರ್ವಭಾಗ
ವಿದ್ಯಾನಗರ, ತುಮಕೂರು - 572103

**ಶ್ರೀ ಬಿ. ಚಂದ್ರೇಗೌಡ**
ಸಾರ್ವಜನಿಕ ಗ್ರಂಥಾಲಯ
ಹಳೇ ತೀರ್ಥಹಳ್ಳಿ ರಸ್ತೆ, ಶಿವಮೊಗ್ಗ

**ಶ್ರೀ ಎ.ಕೆ. ಹಂಪಣ್ಣ**
ಕನ್ನಡ ಅಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಪಂಚನಹಳ್ಳಿ, ಅರಸೀಕೆರೆ ತಾ.

**ಶ್ರೀ ಎಚ್.ಆರ್. ದಾಸೇಗೌಡ**
681, 'ಅನುರಾಧ'
12ನೇ ಕ್ರಾಸ್, 4ನೇ ಮೇನ್ ರಸ್ತೆ
ಎಂ.ಸಿ.ಆರ್ ಬಡಾವಣೆ, ಬೆಂಗಳೂರು -40

**ಶ್ರೀ ಟಿ.ಕೆ. ಕಂಬಯ್ಯ**
ನಿವೃತ್ತ ವಿಶೇಷಾಧಿಕಾರಿ,
ತೋಟಗಾರಿಕಾ ಇಲಾಖೆ
ನಂ.169, 18ನೇ ಕ್ರಾಸ್, ವಿಜಯನಗರ
ಬೆಂಗಳೂರು - 560 040

**ಶ್ರೀ ತಿಮ್ಮಪ್ಪ ಎಸ್. ಗೌಡ**
ಹೊನ್ನಾವರ, ಉತ್ತರಕನ್ನಡ

**ಶ್ರೀ ಅಬ್ಬೂರು ರಾಜಶೇಖರ**
ಹಿರಿಯ ಉಪಸಂಪಾದಕ
ಪ್ರಜಾವಾಣಿ, 75, ಮಹಾತ್ಮಾಗಾಂಧಿ ರಸ್ತೆ
ಬೆಂಗಳೂರು - 560 001

**ಶ್ರೀ ಎಂ. ಆರ್. ಸುರೇಶ್**
ವಲಯ ಅಧಿಕಾರಿಗಳು
437, 8ನೇ ಕ್ರಾಸ್, 85ನೇ ಮೇನ್
ಡಾಲರ್ಸ್ ಕಾಲೋನಿ
(ಆರ್.ಎಂ.ವಿ. ಎರಡನೇ ಹಂತ)
ಬೆಂಗಳೂರು - 560 094

ಸಂಪಾದಕ



**ಪ್ರೊ. ಜಿ ವಿ ಆನಂದಮೂರ್ತಿ**

ತುಮಕೂರು ಜಿಲ್ಲೆಯ ತಿಗಳರ ಗೊಲ್ಲಹಳ್ಳಿಯವರಾದ ಜಿ. ವಿ. ಆನಂದಮೂರ್ತಿ ಅವರ ವಿದ್ಯಾಭ್ಯಾಸ ತುಮಕೂರು ಮತ್ತು ಬೆಂಗಳೂರಿನಲ್ಲಿ ನಡೆಯಿತು. ಬೆಂಗಳೂರು ವಿಶ್ವವಿದ್ಯಾಲಯದಿಂದ ಚಿನ್ನದ ಪದಕದೊಂದಿಗೆ ಕನ್ನಡ ಎಂ.ಎ ಪದವಿ. ರಾಜ್ಯಾದ್ಯಂತ ಕ್ಷೇತ್ರಕಾರ್ಯ ಮಾಡಿ ಮೌಖಿಕ ಪರಂಪರೆಯಲ್ಲಿದ್ದ ಅನೇಕ ಅನುಭಾವಿ ಕವಿಗಳ ತತ್ತ್ವಪದಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಸಂವೇದನಾಶೀಲರೂ, ಸದಭಿರುಚಿಯ ಲೇಖಕರೂ ಆಗಿರುವ ಇವರು ಹೊಸ ಸಾಂಸ್ಕೃತಿಕ ಸಮಾಜದ ಕನಸುಗಳನ್ನು ಕಾಣುತ್ತಾ, ಆ ದಿಕ್ಕಿನಲ್ಲಿ ಅಪರೂಪದ ಶ್ರದ್ಧೆ ಮತ್ತು ಪ್ರಾಮಾಣಿಕತೆಯಿಂದ ದುಡಿಯುತ್ತಿದ್ದಾರೆ; ಆ ಮೂಲಕ ನಾಡಿನ ಸೂಕ್ಷ್ಮಜ್ಞರೆಲ್ಲರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ತುಮಕೂರಿನ ಎಲ್ಲ ಬಗೆಯ ಪ್ರಗತಿಪರ ಸಾಂಸ್ಕೃತಿಕ ಸಂಘಟನೆಗಳೊಂದಿಗೆ ಕ್ರಿಯಾಶೀಲರಾಗಿ ಬೆಳೆದು ಬಂದ ಆನಂದಮೂರ್ತಿ ಪ್ರಸ್ತುತ ತುಮಕೂರು ಎಂಪ್ರೆಸ್ ಬಾಲಕಿಯರ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

ಸೃಜನಶೀಲ ಸಾಹಿತ್ಯ ಮತ್ತು ಜಾನಪದ ಕ್ಷೇತ್ರಕಾರ್ಯದೊಂದಿಗೆ ಪರಿಸರ ಕುರಿತಾದ ಅಧ್ಯಯನಕ್ಕೂ ತಮ್ಮ ಆಸಕ್ತಿಯನ್ನು ಆನಂದಮೂರ್ತಿ ಅವರು ವಿಸ್ತರಿಸಿಕೊಂಡಿದ್ದಾರೆ. ಇವರು ರೂಪಾಂತರಿಸಿದ **ದ್ಯಾವನೂರು, ದೇವರುಗಳ ರಾಜ್ಯದಲ್ಲಿ** ಮತ್ತು ಕರ್ನಾಟಕ ಇತಿಹಾಸ ಮತ್ತು ಸಾಹಿತ್ಯಕ ಪರಂಪರೆಯನ್ನು ಕುರಿತಾದ **ಸಂಪದ** ರಂಗರೂಪಕವನ್ನು ಖ್ಯಾತ ರಂಗನಿರ್ದೇಶಕರುಗಳು ಪ್ರಯೋಗಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ **ಮುತ್ತಿನಹಾರ** ಪುಸ್ತಕಮಾಲೆಯ ಸಂಚಾಲಕರಾಗಿ ಕಾರ್ಯನಿರ್ವಹಿಸಿರುವ ಆನಂದಮೂರ್ತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಪ್ರಕಟಣೆಯಾದ **ಜಾನಪದ ಸಮಾಚಾರ** ಪತ್ರಿಕೆಯ ಸಂಪಾದಕರಾಗಿ ವೈವಿಧ್ಯಮಯ ಸಂಚಿಕೆಗಳನ್ನು ರೂಪಿಸಿದ್ದಾರೆ.

ಪ್ರಕಟಿತ ಕೃತಿಗಳು : **ಬುದ್ಧ ತೋರಿದ ದಾರಿ, ತತ್ವಪದಕಾರರು** (ಆಯ್ಕೆ), ಸಂಪಾದಿತ ಕೃತಿಗಳು : **ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ, ಮೂರು ದಲಿತ ಕಮ್ಮಟಗಳು, ಮಹಾಯಾನ** (ವೀಚಿಯವರ ಆಯ್ದ ಕವಿತೆಗಳು), **ಜೀವನದಿ** ಮತ್ತು **ಕ್ರಿಯಾಶೀಲ ಸಂಗಾತಿ** (ವೈ.ಕೆ. ರಾಮಯ್ಯ ಅಭಿನಂದನಾ ಸಂಪುಟಗಳು) ಸಂಪಾದಿತ ಜಾನಪದ ಕೃತಿಗಳು : **ಗಂಧರ್ವಲೋಕದ ಗೆಣೆಗಾರರು, ಕರಾವಳಿ ಯಕ್ಷಗಾನ, ಜಾನಪದದ ತುಂಬುಹೊಳೆ, ಹಲವು ತೋಟದ ಹೂಗಳು, ಸಾಲುಸಂಪಿಗೆ ನೆರಳು, ಕಲಾವಿದರ ಒಡನಾಟ, ಗರಿಗೆದರಿದ ನವಿಲು** ಹಾಗೂ ನವಸಾಕ್ಷರರಿಗಾಗಿ ಬರೆದಿರುವ ಹಲವಾರು ಪುಸ್ತಕಗಳನ್ನು ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು ಇವರು ಪ್ರಕಟಿಸಿದ್ದಾರೆ.

ಗ್ರಾಮೀಣ ಭಾಗದ ಅಜ್ಞಾತ ಜನಪದ ಕಲಾವಿದರನ್ನು ಕುರಿತು ಇವರು ಬರೆದಿರುವ ಲೇಖನಗಳು ನಾಡಿನ ಅನೇಕ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ. 1998ರಿಂದ 2001ರವರೆಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯರಾಗಿ ಹೊಣೆಗಾರಿಕೆಯನ್ನು ನಿರ್ವಹಿಸಿದ್ದಾರೆ. ೦

'ಅಕ್ಕರೆ' ವಾಟರ್ ಟ್ಯಾಂಕ್ ಪೂರ್ವಭಾಗ, ವಿದ್ಯಾನಗರ, ತುಮಕೂರು - 572103

# ನೆರವಾದವರು

ಜಿ.ಎಲ್. ಶಂಕರ್, ಡಾ. ಜಿ. ಪರಮೇಶ್ವರ, ಎಸ್. ಷಫಿ ಅಹಮದ್, ಮಲ್ಲಿಕಾರ್ಜುನ ಖರ್ಗೆ, ಧರ್ಮಸಿಂಗ್, ಆ.ನಂ. ಎಲ್ಲಪ್ಪ ರೆಡ್ಡಿ, ಪ್ರೊ. ಚಂದ್ರಶೇಖರ ಪಾಟೀಲ್, ಶಿವಾಜಿ ಗಣೇಶನ್, ಗಂಗಾಧರ ಮೊದಲಿಯಾರ್, ರಮೇಶ್ ಕುಮಾರ್, ಜಿ.ಜಿ. ಬಣಕಾರ್, ಪ್ರೊ. ಕಾಳೇಗೌಡ ನಾಗವಾರ, ಉದಯಶಂಕರ ಭಟ್, ಜಿ. ಇಂದ್ರಕುಮಾರ್, ಕೆ.ಎಚ್. ವೆಂಕಟೇಶ್, ಶ್ರೀಸಿದ್ದಲಿಂಗ ತೋಂಟದಾರ್ಯ ಸ್ವಾಮೀಜಿ, ಡಾ. ಕರೀಗೌಡ ಬೀಚನಹಳ್ಳಿ, ಡಾ. ಕೆ.ಸಿ. ಶಿವಾರೆಡ್ಡಿ, ಎಚ್. ನಿಂಗಯ್ಯ, ಆರ್. ಜಿತೇಂದ್ರ, ವೈ.ಎಚ್. ಹುಚ್ಚಯ್ಯ, ಕೆ.ಜಿ. ಸಿದ್ದಯ್ಯ, ಪ್ರೊ. ಸಿ. ವಿಶ್ವನಾಥ್, ಪ್ರೊ. ಎಸ್. ಕೃಷ್ಣಯ್ಯ, ಜಿ.ಎಚ್. ಮಹಾದೇವಪ್ಪ, ಎಚ್.ಎಸ್. ರಾಮಣ್ಣ, ಎನ್.ಆರ್. ರಂಗಯ್ಯ, ಯು.ಟಿ. ಸುರೇಶ್, ಎನ್. ಶಿವಾನಂದ್, ತುಂಬಾಡಿ ರಾಮಯ್ಯ, ಸಿ. ಚೌಡಪ್ಪ, ಎಚ್.ಎಂ. ಸಿದ್ದಲಿಂಗಯ್ಯ, ಡಾ. ಬಾನಂದೂರು ಕೆಂಪಯ್ಯ, ವೇಮಗಲ್ ಡಿ. ನಾರಾಯಣಸ್ವಾಮಿ, ಕೆಂಪೇಗೌಡ, ಅಪ್ಪಾಜಿ, ಟಿ.ಆರ್. ಕೃಷ್ಣಮೂರ್ತಿ, ಡಾ. ವೈ.ಬಿ. ತಿಮ್ಮಯ್ಯ, ಬಾ.ಹ. ರಮಾಕುಮಾರಿ, ಎಚ್.ಸಿ. ಶ್ರೀಕಂಠಯ್ಯ, ಡಾ. ಪಿ.ಜಿ. ಬೋರಲಿಂಗಯ್ಯ, ಕವಿತಾಕೃಷ್ಣ, ಕೆ. ಸತ್ಯನಾರಾಯಣ, ವಿ.ಎಸ್. ಸುಬ್ಬರಾವ್, ಕೋಟೆಕುಮಾರ್, ಜಾಣಗೆರೆ ವೆಂಕಟರಾಮಯ್ಯ, ಟಿ.ಎಸ್. ವಿವೇಕ್, ಬಿ. ಚಂದ್ರೇಗೌಡ, ಡಾ. ನಟರಾಜ್ ಹುಳಿಯಾರ್, ಕೆ. ದೊರೈರಾಜು, ನಾಗರಾಜ್, ಎ.ಕೆ. ಹಂಪಣ್ಣ, ಸಿ.ಎನ್. ವಿಕೇಶ್ವರ, ಎಂ.ಆರ್. ಸುರೇಶ್, ಶಿವಗುರು, ಬಿ.ಆರ್. ಜಯರಾಮರಾಜ್ ಅರಸ್, ಗಾ.ನಂ. ಶ್ರೀಕಂಠಯ್ಯ, ಆರ್. ಕಾಮರಾಜ್, ಕುಮಾರಸ್ವಾಮಿ, ವೆಂಕಟರಮಣ, ದಿನೇಶ್ ಅಮೀನ್ ಮಟ್ಟು, ಸಂಜೀವಪ್ಪ, ಚಿತ್ತಲಪುರ ಬೋರಲಿಂಗಯ್ಯ, ಲಿಂಗಯ್ಯ ಹೆಬ್ಬೂರು, ರಾಮಲಿಂಗೇಗೌಡ, ಕೆ. ವಿಶ್ವನಾಥ್, ನರಸಿಂಹಸ್ವಾಮಿ, ಬಾಳೇಗೌಡ, ಕೃಷ್ಣಯ್ಯ, ಗುರುಚರಣ್ ಸಿಂಗ್, ಡಿ.ಎಸ್. ಕುಮಾರ್, ಟಿ.ಕೆ. ಕಂಬಯ್ಯ, ಲ್ಯಾನ್ಸಿ ಹೆಚ್. ಪಾಯ್ಸ್, ಕೆಂಪಮ್ಮ ಚಿತ್ತಲಪುರ, ಕರಿಯಮ್ಮ ನಿಡಸಾಲೆ, ಎಚ್.ಎಸ್. ಶೇಷಾದ್ರಿ, ಪ್ರೊ. ಎಚ್.ಆರ್. ದಾಸೇಗೌಡ, ವೈ.ಆರ್. ರಮೇಶ್‌ಗೌಡ, ಚೇತನಾ, ರಾಜೀವ್‌ಬಾಬು, ರವಿಕಿರಣ್, ಶ್ರೀಮತಿ ಅನುಸೂಯ, ಬಿ.ಆರ್. ರವಿಕಾಂತೇಗೌಡ, ಲಂಕೇಶ್ ಪತ್ರಿಕಾ ಬಳಗ, ಪ್ರಜಾವಾಣಿ ಪತ್ರಿಕಾ ಬಳಗ, ಮಹಮದ್ ದಸ್ತಗೀರ್, ವೀರಕುಮಾರ್ ಎ. ಪಾಟೀಲ್, ಕುಮಾರ್ ಬಂಗಾರಪ್ಪ, ಪ್ರೊ. ದೇಜಗೌ, ಎಚ್. ವಿಶ್ವನಾಥ್, ಪಿ.ಎಂ. ಚಿಕ್ಕಬೋರಯ್ಯ, ಎಚ್. ಗಂಗಾಧರನ್, ಪಿ. ರಾಮಯ್ಯ, ಶ್ರೀಧರ ಆಚಾರ್, ಡಾ. ಸಿದ್ದಲಿಂಗಯ್ಯ, ಡಾ. ಸರಜೂ ಕಾಟ್ಕರ್, ಡಾ. ಎನ್.ಎಸ್. ರಾಮೇಗೌಡ, ಡಾ. ಡಿ.ಕೆ. ರಾಜೇಂದ್ರ, ಕೋಟೆ ನಾಗಭೂಷಣ, ಗಟ್ಟಿ, ಎಸ್.ಎಸ್. ಪಾಟೀಲ್, ಎ. ಸುರೇಶ, ಅಲಿಬಾಬ, ಕೆ.ಎಲ್. ರಾಜಶೇಖರ, ಪ್ರಜಾಪ್ರಗತಿ ಪತ್ರಿಕಾ ಬಳಗ, ಸೊಗಡು ಪತ್ರಿಕಾ ಬಳಗ, ಕನ್ನಡಪ್ರಭ ಪತ್ರಿಕಾ ಬಳಗ, ತುಮಕೂರು ವಾರ್ತೆ ಪತ್ರಿಕಾ ಬಳಗ, ಸಂಯುಕ್ತ ಕರ್ನಾಟಕ ಪತ್ರಿಕಾ ಬಳಗ, ಎಸ್. ಷಡಕ್ಷರಯ್ಯ, ಅಬ್ಬೂರು ರಾಜಶೇಖರ, ಆರ್.ವಿ. ದೇಶಪಾಂಡೆ, ರಾಠೋಡ್, ಜಯಪ್ರಕಾಶ ಗೌಡ, ಕೃಷ್ಣಮೂರ್ತಿ, ನಗುವನಹಳ್ಳಿ ವಿಜಕುಮಾರ್, ಎಂ. ರಾಮಚಂದ್ರಗೌಡ, ಕೆ.ಪಿ. ಮೃತ್ಯುಂಜಯ.



ಕರ್ನಾಟಕದ ರಾಜಕಾರಣದಲ್ಲಿ ಶ್ರೀ ವೈ ಕೆ ರಾಮಯ್ಯ ಒಂದು ಅಪರೂಪದ ಹೆಸರು. ಹಳ್ಳಿಗಾಡಿನ ಬದುಕು ಸಂಪೂರ್ಣವಾಗಿ ಹಸನಾಗಬೇಕೆಂಬ ನಿರಂತರ ಆಶಯವನ್ನು ಇಟ್ಟುಕೊಂಡು ಅಂತರಂಗ ಶುದ್ಧಿಯಿಂದ, ಕಳೆದ ಮೂರು ದಶಕಗಳಿಂದಲೂ ಇವರು ಶ್ರಮಿಸುತ್ತಿದ್ದಾರೆ. ತಮ್ಮ ತತ್ತ್ವನಿಷ್ಠೆ, ನಿಷ್ಠುರ ನಡೆ-ನುಡಿ ಹಾಗೂ ನಿರ್ಭೀತಿಯ ರಾಜಕಾರಣಕ್ಕೆ ಮತ್ತೊಂದು ಹೆಸರೇ ಆಗಿರುವ ಎಲೆಕಡಕಲು ಕಂಬೇಗೌಡ ರಾಮಯ್ಯನವರು ಕಡುಬಡವರ, ಶ್ರಮಜೀವಿಗಳ, ರೈತರ ಹಾಗೂ ಅವಕಾಶವಿಹೀನರೆಲ್ಲರ ನೇರ ಪ್ರತಿನಿಧಿಯಾಗಿದ್ದಾರೆ.

ವೈ ಕೆ ರಾಮಯ್ಯ ಅವರ ವ್ಯಕ್ತಿತ್ವ ಮತ್ತು ಸಾಧನೆಯ ನಾನಾ ಮುಖಗಳನ್ನು ಕುರಿತು ಬದುಕಿನ ವಿವಿಧ ರಂಗಗಳ ಗಣ್ಯರು, ಪತ್ರಕರ್ತರು ಮತ್ತು ಸಂವೇದನಾಶೀಲ ಬರಹಗಾರರ ಲೇಖನಗಳು *ಜೀವನದಿ* ಅಭಿನಂದನಾ ಗ್ರಂಥದ ಪ್ರಮುಖ ಭಾಗವಾಗಿವೆ. ಜೊತೆಗೆ ವೈಕೆಆರ್ ಅವರ ಸಂದರ್ಶನಗಳು, ಪತ್ರಗಳು, ಭಾಷಣಗಳು.... ಈ ಹೊತ್ತಗೆಯಲ್ಲಿ ಸೇರಿವೆ.

*ಪ್ರೊ. ಕಾಳೇಗೌಡ ನಾಗವಾರ*